# ನ್ಯಾಯಸಿದ್ಧಾಂತಮುಕ್ತಾವಳೀ

## ಕನ್ನಡ ವ್ಯಾಖ್ಯಾನ

# ಪ್ರಭಾ

ವಿದ್ವಾನ್. ಜಿ. ವಿಷ್ಣುಮೂರ್ತಿಭಟ್ಟ
ಅಲಂಕಾರ ಶಾಸ್ತ್ರ ಪ್ರಾಧ್ಯಾಪಕ,
ಮಹಾರಾಜ ಸಂಸ್ಕೃತ ಕಾಲೇಜು, ಮೈಸೂರು

೪-೧೦-೧೯೭೨

# ನ್ಯಾಯಸಿದ್ಧಾಂತಮುಕ್ತಾವಳೀ

## ಕನ್ನಡ ವ್ಯಾಖ್ಯಾನ

# ಪ್ರಭಾ

ವಿದ್ವಾನ್. ಜಿ. ವಿಷ್ಣುಮೂರ್ತಿಭಟ್ಟ
ಅಲಂಕಾರ ಶಾಸ್ತ್ರ ಪ್ರಾಧ್ಯಾಪಕ,
ಮಹಾರಾಜ ಸಂಸ್ಕೃತ ಕಾಲೇಜು, ಮೈಸೂರು.

೧೯೭೨

*Karikavali* and *Muktavali* of Viswanatha Nyayapanchanana Bhatta with the kannada commentary *Prabha* by G. Vishnu Murthi Bhatta; professor of Alankara; Maharaja's Samskrita College, Mysore. First Edition 1972, Published by M. V. Balaganapathi Mysore— Price : Ordinary Rs. 15-00; Calico Rs. 18-00



ಬೆಲೆ

ಪ್ರತ್ಯಕ್ಷಖಂಡ—೮-೦೦
ಅನುಮಾನಾದಿ ೨ನೇ ಭಾಗ—೭-೫೦
ಉತ್ತಮ ಪ್ರತಿ ೧೮-೦೦

ಮುದ್ರಕರು

ಮಂಗಳೂರು ಪ್ರಿಂಟರ್ಸ್
ಶ್ರೀರಾಮಪೇಟೆ, ಮೈಸೂರು-೧

# ಮುನ್ನುಡಿ

"ಕಾಣಾದಂ ಪಾಣಿನೀಯಂ ಚ ಸರ್ವಶಾಸ್ತ್ರೋಪಕಾರಕಮ್"

ಎಂದು ಅನುಭವಸಿದ್ಧವಾದ ಅರ್ಥವನ್ನು ಬೋಧಿಸುವ ವಚನವು ಲೋಕಪ್ರಸಿದ್ಧವಾಗಿದೆ. ಪಾಣಿನಿಯ ಪದಶಾಸ್ತ್ರವು ಪದಜ್ಞಾನವನ್ನು ತಿಳಿಸುವುದರ ಮೂಲಕ ಶಾಸ್ತ್ರಪ್ರವೇಶವನ್ನು ಬಯಸುವ ಬಾಲಕರಿಗೆ ಉಪಕಾರವನ್ನು ಮಾಡುತ್ತಲಿದೆ. ಕಾಣಾದಪದದಿಂದ ವಿವಕ್ಷಿತವಾದ ನ್ಯಾಯಶಾಸ್ತ್ರವೂ ಕೂಡಾ ಪದಾರ್ಥವಾಕ್ಯಾನುಮಾನತತ್ವಗಳನ್ನು ತಿಳಿಸುವುದರ ಮೂಲಕ ಸರ್ವಶಾಸ್ತ್ರೋಪಕಾರಕವಾದುದಲ್ಲದೆ, ಸರ್ವವಿದ್ಯಾಪ್ರದೀಪಕವಾಗಿಯೂ, ಸರ್ವಕರ್ಮಗಳಿಗೆ ಉಪಾಯವಾಗಿಯೂ, ಸರ್ವಧರ್ಮಕ್ಕೆ ಆಶ್ರಯವಾಗಿಯೂ ಆನ್ವೀಕ್ಷಕೀವಿದ್ಯಾ ಎಂಬ ಹೆಸರಿನಿಂದ ಲೋಕೋಪಕಾರಕವಾಗಿದೆ. ನ್ಯಾಯಶಾಸ್ತ್ರದ ಪರಿಚಯವಿಲ್ಲದವನು ಇತರ ಶಾಸ್ತ್ರಾರ್ಥಗಳನ್ನು ತಿಳಿಯಲು ಸಮರ್ಥನಾಗಲಾರನೆಂದು ಮನುಸ್ಮೃತಿಯಲ್ಲಿ ಸ್ಪಷ್ಟವಾಗಿ ಹೇಳಿದೆ.

ಆರ್ಷಂ ಧರ್ಮೋಪದೇಶಂ ಚ ವೇದಶಾಸ್ತ್ರಾವಿರೋಧಿನಾ ||
ಯಸ್ತರ್ಕೇಣಾನುಸಂಧತ್ತೇ ಸ ಧರ್ಮಂ ವೇದ ನೇತರಃ || ೧೨-೧೦೬ ||

ಆತ್ಯಂತಿಕ ದುಃಖನಿವೃತ್ತಿಯಲ್ಲಿ ಆತ್ಮಸಾಕ್ಷಾತ್ಕಾರವೊಂದೇ ಸಾಧನವೆಂದು 'ಆತ್ಮಾ ವಾಽರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಎಂಬಿವೇ ಮುಂತಾದ ಶ್ರುತಿವಾಕ್ಯಗಳು ಉದ್ಘೋಷಿಸುತ್ತವೆ. ಈ ಆತ್ಮಸಾಕ್ಷಾತ್ಕಾರಕ್ಕೆ ವಿಹಿತವಾದ ಶ್ರವಣ, ಮನನ ನಿದಿಧ್ಯಾಸನಗಳಲ್ಲಿ ಮನನವೇ ಉತ್ತಮವೆಂದು ಶಾಸ್ತ್ರ ನಿರ್ಣೀತವಾದ ವಿಷಯ. ಯುಕ್ತಿಯಿಂದ ಚಿಂತನವೇ ಮನನ. ಸಪರಿಕರಹೇತುಗಳಿಂದ ಅನುಮಾನವೇ ಮನನವೆಂದು ಪರ್ಯವಸಾನ ಹೊಂದುತ್ತದೆ. ನ್ಯಾಯಶಾಸ್ತ್ರಾರ್ಥಜ್ಞಾನದಿಂದ ಪರಿಪಕ್ವ ಬುದ್ಧಿಯುಳ್ಳ ವಿಚಕ್ಷಣನಿಗೆ ಸಮಾಲೋಚನೆ ಮಾಡಲಸಾಧ್ಯವಾದ ಶಾಸ್ತ್ರಗಳು ಯಾವುದೂ ಇಲ್ಲ. ಆದುದರಿಂದಲೇ 'ಪ್ರಮಾಣೈರರ್ಥಪರೀಕ್ಷಣಂ' ಪ್ರತ್ಯಕ್ಷಾನುಮಾನಾದಿಪ್ರಮಾಣಗಳಿಂದ ವಸ್ತುತತ್ವ ವಿವೇಚನೆಯೇ ನ್ಯಾಯವೆಂದೂ, 'ದೃಶ್ಯತೇ ಅನೇನ ಇತಿ ದರ್ಶನಂ' ಇದರಿಂದ ಅದು ತೋರಿಸಲ್ಪಡುತ್ತದೆ ಎಂಬಂರ್ಥದಲ್ಲಿ 'ದರ್ಶನ' ಪದವೂ ಇದ್ದು 'ನ್ಯಾಯದರ್ಶನಂ' ಎಂಬುದು ನ್ಯಾಯಶಾಸ್ತ್ರದ ಸ್ವರೂಪವನ್ನು ಸ್ಪಷ್ಟಪಡಿಸುತ್ತದೆ. ಶಾಸ್ತ್ರವೇ ದರ್ಶನವಾಗುತ್ತದೆ. ಪ್ರತ್ಯಕ್ಷಾಗಮಗಳನ್ನಾಶ್ರಯಿಸಿರುವ ಅನುಮಾನವೇ ನ್ಯಾಯವೆಂದು ವಾತ್ಸ್ಯಾಯನರು ಹೇಳುತ್ತಾರೆ. ಅನುಮಾನದಿಂದ ತಿಳಿಯಲ್ಪಟ್ಟ ಅರ್ಥವು ಪ್ರತ್ಯಕ್ಷ, ಆಗಮಗಳಿಂದ ಅನುಸಂಧಾನ ಮಾಡಲ್ಪಟ್ಟು ಸ್ಪಷ್ಟವಾಗಿ ತಿಳಿಯುತ್ತದೆ. ವಿಷ್ಣುಪುರಾಣದಲ್ಲಿ—"ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ | ಧರ್ಮಶಾಸ್ತ್ರಂ ಪುರಾಣಂ ಚ ವಿದ್ಯಾ ಹ್ಯೇತಾಶ್ಚತುರ್ದಶ" ಎಂದು ಹೇಳಿರುವ ಹದಿನಾಲ್ಕು ವಿದ್ಯೆಗಳಲ್ಲಿ

ಈ ನ್ಯಾಯಶಾಸ್ತ್ರವು ಇತರ ಸಂರಕ್ಷಕವಾದುದರಿಂದ ಪ್ರಾಧಾನ್ಯವನ್ನು ಹೊಂದಿರುತ್ತದೆ. ಮೋಕ್ಷಧರ್ಮದಲ್ಲಿಯೂ 'ತತ್ರೋಪನಿಷದಂ ತಾತ ಪರಿಶೇಷಂ ತು ಪಾರ್ಥಿವ । ಮಥ್ನಾಮಿ ಮನಸಾ ತಾತ ಇಷ್ಟ್ವಾ ಚಾನ್ವೀಕ್ಷಕೀಂ ಪರಾಮ್ ॥" ಎಂದು ಹೇಳಿರುವುದರಿಂದ ಮನನವು ಆನ್ವೀಕ್ಷಕೀಸಹಾಯದಿಂದಲೇ ಸಾಧ್ಯವೆಂದು ಹೇಳಿದೆ.

ನ್ಯಾಯ, ವೈಶೇಷಿಕಭೇದದಿಂದ ಗಂಗಾ ಯಮುನೆಯರಂತೆ ಈ ತರ್ಕಶಾಸ್ತ್ರವು ಕೆಲವು ಪ್ರಮೇಯದಲ್ಲಿ ವಿಭಿನ್ನವಾಗಿ ತೋರಿದರೂ ಉದ್ದೇಶದಿಂದ ಒಂದೇ ಆಗಿರುತ್ತವೆ. ಪ್ರಾಚೀನರಾದ ಗೌತಮ, ಕಣಾದ ಮಹರ್ಷಿಗಳು ಈ ಶಾಸ್ತ್ರವನ್ನು ರಚಿಸಿದ ಮೂಲ ಪುರುಷರು. ಇವರೇ ಸೂತ್ರಕಾರರು. ವಾತ್ಸ್ಯಾಯನ, ವಾಚಸ್ಪತಿಮಿಶ್ರ, ಉದಯನಾಚಾರ್ಯ ಮುಂತಾದ ಋಷಿಸಮಾನರಾದ ಮಹಾವಿದ್ವಾಂಸರಿಂದ ಇದು ವಿಸ್ತೃತವಾಗಿ ಮಹಾಸಾಗರದಂತಾದುದರಿಂದ ನ್ಯಾಯಶಾಸ್ತ್ರದಲ್ಲಿ ಪ್ರವೇಶವನ್ನು ಬಯಸುವ ಸ್ಥೂಲ ಬುದ್ಧಿಯುಳ್ಳವರಿಗೆ ಪ್ರವೇಶಯೋಗ್ಯತೆಯನ್ನು ಸಂಪಾದಿಸಿಕೊಡಲು ವಿಶ್ವನಾಥಪಂಚಾನನನೆಂಬ ಮಹಾಪಂಡಿತನು ಈ ಗ್ರಂಥವನ್ನು ರಚಿಸಿರುತ್ತಾನೆ. ನ್ಯಾಯವೈಶೇಷಿಕಸಾರವನ್ನೇ ವಿವರಿಸುವ 'ಭಾಷಾಪರಿಚ್ಛೇದ' ಎಂಬ ನಾಮಾಂತರವುಳ್ಳ ಕಾರಿಕಾವಳೀ ಎಂಬ ಗ್ರಂಥವನ್ನು ಸಂಕ್ಷಿಪ್ತವಾದರೂ ವಿಸ್ತೃತಾರ್ಥಕೊಡುವಂತೆ ರಚಿಸಿರುತ್ತಾನೆ. ಇದು ಸೂತ್ರರೂಪವಾಯಿತೆಂದೂ, ಶಿಷ್ಯನಾದ ರಾಜೀವನ ಮೇಲಿನ ವಾತ್ಸಲ್ಯದಿಂದ ತನಗಭಿಮತವಾದ ಸಕಲಾರ್ಥವನ್ನು ವಿಶದವಾಗಿ ತಿಳಿಸಲು ಅದಕ್ಕೆ ಭಾಷ್ಯರೂಪವಾಗಿ 'ಮುಕ್ತಾವಳೀ' ಎಂಬ ವ್ಯಾಖ್ಯಾನಗ್ರಂಥವನ್ನೂ ಬರೆದಿರುತ್ತಾನೆ. 'ಯತ್ಕರೋಷಿ—' ಎಂಬ ಗೀತಾವಚನದಂತೆ ಕಾರಿಕಾವಳೀ ಸೂತ್ರದಿಂದ ರಚಿತವಾದ ಈ ಮುಕ್ತಾವಳೀ (ಮುತ್ತಿನಹಾರ)ವನ್ನು ವಿಷ್ಣುವಿನ ಕಂಠದಲ್ಲಿ ಅರ್ಪಿಸಿ ಕೃತಕೃತ್ಯನಾಗಿದ್ದಾನೆ.

ಈ ಗ್ರಂಥವು ನವೀನತಾರ್ಕಿಕರಿಂದ ಆದೃತವಾದುದಲ್ಲದೆ ನವೀನವಿಚಾರ ಸರಣಿಯಿಂದ ಪದಾರ್ಥಪ್ರತಿಪಾದನೆ ಮಾಡಿರುವುದರಿಂದ ಸರ್ವೋತ್ಕರ್ಷ ಹೊಂದಿದೆ. ಇದಕ್ಕೆ ದಿನಕರಮುಂತಾದ ಅನೇಕ ತಾರ್ಕಿಕ ವಿದ್ವಾಂಸರು ಸಂಸ್ಕೃತದಲ್ಲಿ ವ್ಯಾಖ್ಯಾನವನ್ನು ರಚಿಸಿ ಸರ್ವತೋಮುಖವಾಗಿ ಪ್ರಸಿದ್ಧಿಗೊಳಿಸಿರುತ್ತಾರೆ. ಕನ್ನಡದಲ್ಲಿ ತರ್ಕಗ್ರಂಥಗಳು ಇದುವರೆಗೆ ಪ್ರಚುರವಾಗಿಲ್ಲ. ಪ್ರಕೃತ ನಾನು ಗುರುಕೃಪೆಯಿಂದ ತರ್ಕಪ್ರವೇಶಕ್ಕೆ ಯೋಗ್ಯವಾದ ತರ್ಕಸಂಗ್ರಹವನ್ನು ಕನ್ನಡದಲ್ಲಿ ಅನುವಾದ ಮಾಡಿದ ಮೇಲೆ, ಸಕಲತಾರ್ಕಿಕ ಸಿದ್ಧಾಂತವನ್ನು ಬೋಧಿಸುವ ಈ 'ನ್ಯಾಯಸಿದ್ಧಾಂತ ಮುಕ್ತಾವಳೀ' ಗ್ರಂಥಕ್ಕೆ 'ಪ್ರಭಾ—' ಎಂಬ ಹೆಸರಿನಿಂದ ಕನ್ನಡ ವ್ಯಾಖ್ಯಾನವನ್ನು ರಚಿಸಿರುತ್ತೇನೆ. ಪ್ರತಿಯೊಂದು ಶಾಸ್ತ್ರದಲ್ಲಿಯೂ ಪಾರಿಭಾಷಿಕಶಬ್ದವನ್ನು ತಿಳಿಯುವುದು ಕಷ್ಟ. ಅದರಲ್ಲಿಯೂ ತರ್ಕಶಾಸ್ತ್ರದ ಪಾರಿಭಾಷಿಕ ಪದವನ್ನು ಕನ್ನಡದಲ್ಲಿ ಅನುವಾದ ಮಾಡಲು ಸಾಧ್ಯವೇ ಇಲ್ಲ. ಪುನಃ ಪುನಃ ಅರ್ಥವತ್ತಾದ ಅಧ್ಯಯನದಿಂದಲೇ ತರ್ಕಶಾಸ್ತ್ರವು ಹೃದ್ಗತವಾಗಬೇಕು. ಈ ಶಾಸ್ತ್ರವು ಸಕಲಶಾಸ್ತ್ರಮರ್ಮವನ್ನು ತಿಳಿಯಲೂ, ಮತ್ತು ಬುದ್ಧಿಚಾತುರ್ಯಾಭಿವೃದ್ಧಿಗೂ ಮಹೋಪಕಾರವಾಗಿದೆ.

ಶ್ರೀಮನ್ಮಹಾರಾಜರವರ ಪ್ರೇರಣೆಯಿಂದ ಈ ಗ್ರಂಥಕ್ಕೆ ವ್ಯಾಖ್ಯಾನವನ್ನು ೬೦ನೇ ಇಸವಿಯಲ್ಲೇ ಬರೆದೆನು. ಅವರ ಅಮೃತಹಸ್ತದಿಂದಲೇ ಪ್ರಕಾಶನವಾಗಬೇಕಾದದ್ದು ನನ್ನ ದೌರ್ಭಾಗ್ಯದಿಂದ ಆಗಲಿಲ್ಲ. ಭಾರತದಲ್ಲಿ ಸಂಸ್ಕೃತೋದ್ಧಾರಕ್ಕಾಗಿ ಢೆಲ್ಲಿಯಲ್ಲಿರುವ ಸ್ಪೆಶಲ್ ಸಂಸ್ಕೃತ ಆಫೀಸಿಗೆ ಪ್ರಾರ್ಥಿಸಿಕೊಂಡಾಗ ಅಲ್ಲಿಂದ ಹಣಸಹಾಯವಿಲ್ಲವೆಂದು ಬಂದುದರಿಂದ ಉತ್ಸಾಹ ಕುಂಠಿತವಾಯಿತು. ಹೀಗೆಯೇ ಹಲವು ವಿದ್ಯಾಸಂಸ್ಥೆಗಳನ್ನೂ, ಕೆಲವು ಮಠಾಧಿಪತಿಗಳನ್ನೂ ಪ್ರಾರ್ಥಿಸಿ ವಿಫಲನಾದಾಗ ಇದರ ಪ್ರಕಾಶನ ನನ್ನಿಂದ ಸಾಧ್ಯವಿಲ್ಲವೆಂದು ನಿರಾಶನಾಗಿ ಹಸ್ತಪ್ರತಿಯನ್ನು ಕಟ್ಟಿಡಬೇಕಾಯಿತು. (ಸಿದ್ಧಾಂತ ಕೌಮುದೀ ಮುಂತಾದವುಗಳ ವ್ಯಾಖ್ಯಾನವೂ ಸಹಾಯವಿಲ್ಲದೆ ಇದೇ ಅವಸ್ಥೆಯಲ್ಲಿವೆ) ಕಳೆದವರ್ಷ ಮೈಸೂರಿನ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆಗೆ ಸಹಾಯಕ್ಕಾಗಿ ಪ್ರಾರ್ಥಿಸಿಕೊಂಡಾಗ ಅಲ್ಲಿನ ಡೆಪ್ಯುಟಿಡೈರೆಕ್ಟರವರಾದ ಶ್ರೀ ಡಾ॥ N.S. ಅನಂತರಂಗಾಚಾರ್ಯರು ಒಂದುನೂರು ಪುಸ್ತಕಗಳನ್ನು ಕೊಡಬೇಕೆಂಬ ಶರತ್ತಿನಿಂದ ೧೫೦೦ರೂ ಸಹಾಯವನ್ನು ಮಂಜೂರುಮಾಡಿಸಿ ಮುದ್ರಣ ಪ್ರಾರಂಭಿಸಲು ಉತ್ತೇಜನವಿತ್ತಿರುತ್ತಾರೆ. ಇದರಿಂದ ಆ ಸಂಸ್ಥೆಗೂ ಮಾನ್ಯರಾದ ಡಾ॥ N. S. ಅನಂತರಂಗಾಚಾರ್ಯರಿಗೂ ಕೃತಜ್ಞನಾಗಿ ಹಾರ್ದಿಕ ಅಭಿನಂದನೆಗಳನ್ನು ಸಮರ್ಪಿಸುತ್ತೇನೆ.

ಇದರ ಸಂಪೂರ್ಣಮುದ್ರಣಕ್ಕೆ ಹಣ ಒದಗಿಸುವ ಭಾರಮಹತ್ತಾಗಿದೆ. ಈ ಮಹಾಕಾರ್ಯದಲ್ಲಿ ಸಹಾಯಮಾಡುತ್ತಿರುವ ವಿದ್ವಾನ್. S. M. ಗಂಗಾಧರಶಾಸ್ತ್ರಿಗಳಿಗೂ ವಿದ್ವಾನ್ H. G. ಶಿತಿಕಂಠಶರ್ಮರಿಗೂ, ಹೀಗೆಯೇ ಅನೇಕ ಮಿತ್ರರಿಗೂ ಚಿರಋಣಿಯಾಗಿರುತ್ತೇನೆ. ಅಮೂ ಅಲ್ಲದೆ ನನ್ನ ಶಿಷ್ಯವೃಂದವು ಅಡ್ವಾನ್ಸಾಗಿ ಪುಸ್ತಕದ ಬೆಲೆಯನ್ನು ಕೊಟ್ಟು ತುಂಬಾ ಉಪಕಾರಮಾಡಿರುತ್ತಾರೆ. ಅವರೆಲ್ಲರಿಗೂ ಶ್ರೇಯಸ್ಸುಂಟಾಗಲೆಂದು ಹಾರೈಸುತ್ತೇನೆ. ಹೀಗೆ ಜನತೆಯ ಸಹಾಯದಿಂದಲೇ ಈ ಗ್ರಂಥದ ಪೂರ್ಣಮುದ್ರಣವಾಗಬಹುದೆಂದು ಆಶಿಸಿದ್ದೇನೆ ಕೊನೆಯದಾಗಿ ಮುದ್ರಕರಾದ ಶ್ರೀಮಾನ್ ಮಾ. ಶ್ರೀಪತಿರಾಯರ ನೆರವಿನವಿಷಯದಲ್ಲಿ ಎಷ್ಟು ಕೃತಜ್ಞತೆ ಅರ್ಪಿಸಿದರೂ ಅದು ಅಲ್ಪವಾಗುತ್ತದೆ. ಮೊದಲಿನಿಂದಲೂ ಅವರು ನನಗೆ ಉದಾರಭಾವನೆಯಿಂದ ಸಹಾಯಮಾಡುತ್ತಿರುವುದಲ್ಲದೆ ಈಗ ಈ ಗ್ರಂಥವನ್ನು ಅಂದವಾಗಿ ಶೀಘ್ರವಾಗಿ ಮುದ್ರಿಸಿ ಕೊಟ್ಟಿರುತ್ತಾರೆ. ಇದಕ್ಕೆ ಕೃತಜ್ಞನಾಗಿ ಅವರಿಗೆ ಹಾರ್ದಿಕಾಭಿನಂದನೆಗಳನ್ನು ಸಮರ್ಪಿಸುತ್ತೇನೆ. ಈ ಗ್ರಂಥವು ಸರ್ವತೋಮುಖವಾಗಿ ಪ್ರಕಾಶಿತವಾಗಿ, ಸಂಸ್ಕೃತಾಭಿಮಾನಿಗಳಾದ ಕರ್ಣಾಟ ಬಂಧುಗಳ ಆದರಕ್ಕೆ ಪಾತ್ರವಾಗಲೆಂದು ಪರಮಾತ್ಮನನ್ನು ಪ್ರಾರ್ಥಿಸುತ್ತೇನೆ.

೧–೩–೧೯೬೨
ಮೈಸೂರು

ಸಜ್ಜನವಿಧೇಯ
ಜಿ. ವಿಷ್ಣುಮೂರ್ತಿಭಟ್ಟ

# ವಿಷಯಸೂಚೀ

# ನ್ಯಾಯಸಿದ್ಧಾಂತ ಮುಕ್ತಾವಳೀ ಸಾರ

ಲೀಲಾವತ್ಯಾದಿಪ್ರಾಚೀನಗ್ರಂಥಗಳಿದ್ದರೂ ಸುಕುಮಾರಮತಿಗಳಾದ ಬಾಲಕರಿಗೋಸ್ಕರ, ಈ ನ್ಯಾಯಸಿದ್ಧಾಂತಮುಕ್ತಾವಳೀ ಗ್ರಂಥವು ರಚಿತವಾಗಿದೆಯೆಂದೂ ಅದರಲ್ಲಿಯೂ ಶಿಷ್ಯನಾದ ರಾಜೀವನೆಂಬವನಲ್ಲಿರುವ ವಾತ್ಸಲ್ಯವು ಗ್ರಂಥನಿರ್ಮಾಣದಲ್ಲಿ ಪ್ರಯೋಜಕವೆಂದೂ ಗ್ರಂಥಕಾರನೇ ಆದಿಯಲ್ಲಿ ಹೇಳುತ್ತಾನೆ. ದ್ರವ್ಯಾದಿಪದಾರ್ಥ ನಿರೂಪಣವೇ ಗ್ರಂಥದ ವಿಷಯ. ಪದಾರ್ಥತತ್ತ್ವಾವಧಾರಣದ ಮೂಲಕ ಮೋಕ್ಷವೇ ಪರಮಪ್ರಯೋಜನ. ಪದಾರ್ಥತತ್ತ್ವಾರ್ಥಜಿಜ್ಞಾಸುವೇ ಇಲ್ಲಿ ಅಧಿಕಾರಿ. ಗ್ರಂಥ ವಿಷಯಾದಿಗಳಿಗೆ ಪ್ರತಿಪಾದ್ಯಪ್ರತಿಪಾದಕಾದಿ ಸಂಬಂಧವನ್ನು ಊಹಿಸಿ ತಿಳಿಯಬೇಕು. ಸಾಮಾನ್ಯವಾಗಿ ಶಾಸ್ತ್ರಗ್ರಂಥಗಳಲ್ಲಿ ವಿಷಯಪ್ರಯೋಜನಗಳನ್ನು ಮಾತ್ರ ನಿರ್ದೇಶಿಸುತ್ತಾರೆ ನಮಸ್ಕಾರಾತ್ಮಕವಾದ ಮಂಗಲವು ಈ ಗ್ರಂಥದಲ್ಲಿ ಮಾಡಿದೆ.

## ಮಂಗಳವಾದ

ಶಿಷ್ಟಾಚಾರವನ್ನನುಸರಿಸಿ ಪ್ರತಿಯೊಬ್ಬ ಸನಾತನಿಯೂ ಕಾರ್ಯಾರಂಭದಲ್ಲಿ ಮಂಗಳವನ್ನು ಮಾಡುವುದು ಪದ್ಧತಿ. ಈ ಮಂಗಳಕ್ಕೆ ಫಲವಿಷಯದಲ್ಲಿ ಮತಭೇದವಿದೆ. ಪ್ರಾಚೀನರು ವಿಘ್ನಧ್ವಂಸದ (ನಾಶವಾಗುವುದರ) ಮೂಲಕ ಸಮಾಪ್ತಿಯೇ ಫಲವೆನ್ನುತ್ತಾರೆ. ನಾಸ್ತಿಕರು ಈ ಜನ್ಮದಲ್ಲಿ ಮಂಗಲಮಾಡದಿದ್ದರೂ ಹಿಂದಿನಜನ್ಮದಲ್ಲಿ ಮಾಡಿರುವುದರಿಂದ ಈ ಜನ್ಮದಲ್ಲಿಯೂ ಗ್ರಂಥಸಮಾಪ್ತಿ ಹೊಂದುವುದರಿಂದ ಯಾವ ದೋಷವೂ ಇಲ್ಲ. ಆಸ್ತಿಕರಲ್ಲಿ ಕೆಲವರು ಮಂಗಲಮಾಡಿ ಗ್ರಂಥವನ್ನಾರಂಭಿಸಿದರೂ ಸಮಾಪ್ತಿ ಹೊಂದುವುದಿಲ್ಲ. ಆಗ ಅಲ್ಲಿ ಸಮಾಪ್ತಿಗೆ ಪ್ರತಿಬಂಧಕವಾಗಿ ಅಧಿಕವಿಘ್ನವಿರುವುದರಿಂದ ಅವನು ಮಾಡಿರುವ ಮಂಗಳದಿಂದ ಸಂಪೂರ್ಣವಿಘ್ನಧ್ವಂಸವಾಗಿಲ್ಲವೆಂದೂ ಹೇಳುತ್ತಾರೆ. ನವೀನರು ಮಂಗಳಕ್ಕೆ ವಿಘ್ನಧ್ವಂಸವೇ ಫಲವೆಂದೂ ಸಮಾಪ್ತಿಯು ಅವರವರ ಬುದ್ಧಿ ಪ್ರತಿಭಾದಿಗಳಿಂದಲೇ ಆಗುತ್ತದೆಂದು ಹೇಳುತ್ತಾರೆ. ವಿಘ್ನಗಳಿವೆಯೆಂಬ ಸಂಶಯದಿಂದ ಮಂಗಲವನ್ನಾಚರಿಸಿದವನಲ್ಲಿ ವಾಸ್ತವವಾಗಿ ವಿಘ್ನವಿಲ್ಲದಿದ್ದರೂ ತೊಂದರೆ ಇಲ್ಲ. ವಿಘ್ನವಿದ್ದಾಗ ಮಂಗಲವನ್ನಾಚರಿಸಿದರೆ ಅಲ್ಲಿ ವಿಘ್ನನಾಶವಾಗುತ್ತದೆಂದು ವೇದವು ಬೋಧಿಸುತ್ತದೆ. ಪ್ರತಿಬಂಧಕದ ಅತ್ಯಂತಾಭಾವವು (ಇಲ್ಲದಿರುವುದು) ಕಾರ್ಯಸಾಮಾನ್ಯಕ್ಕೆ ಕಾರಣವಾಗುವುದರಿಂದ ಕೆಲವು ಕಡೆ ವಿಘ್ನದ ಅತ್ಯಂತಾಭಾವವೂ, ಇನ್ನು ಕೆಲವು ಕಡೆ ವಿಘ್ನಧ್ವಂಸವೂ ಸಮಾಪ್ತಿಗೆ ಕಾರಣವೆನ್ನುವುದರಿಂದ ನಾಸ್ತಿಕರಗ್ರಂಥದಲ್ಲಿ ಯಾವ ದೋಷಕ್ಕೂ ಅವಕಾಶವಿಲ್ಲ. ನಾಸ್ತಿಕನು ಗ್ರಂಥಸಮಾಪ್ತಿ ಹೊಂದಿದ್ದರೆ ಅವನಲ್ಲಿ ವಿಘ್ನಾತ್ಯಂತಾಭಾವವು ಅಥವಾ ಪೂರ್ವಜನ್ಮದಲ್ಲಿ ಮಾಡಿದ ಮಂಗಲದಲ್ಲಿ

ಉಂಟಾದ ವಿಘ್ನಧ್ವಂಸವು ಇರುವುದರಿಂದ ಕಾರ್ಯಕಾರಣಭಾವಕ್ಕೆ ಎಲ್ಲಿಯೂ ದೋಷ ಬರುವುದಿಲ್ಲ.

## ಈಶ್ವರ

'ಸಂಸಾರಮಹೀರುಹಸ್ಯ ಬೀಜಾಯ' ಎಂಬುದರಿಂದ ಈಶ್ವರನವಿಷಯದಲ್ಲಿ ತಾರ್ಕಿಕರ ಸಿದ್ಧಾಂತವು ಪ್ರಕಾಶಿತವಾಗಿದೆ. ಇವರು ಈಶ್ವರನನ್ನು ಪ್ರಪಂಚಕ್ಕೆ ನಿಮಿತ್ತಕಾರಣನೆಂದು ಹೇಳುತ್ತಾರೆ. ಉತ್ಪತ್ತಿ ಇರುವುದೆಲ್ಲಾ ಕಾರ್ಯವಾದುದರಿಂದ ಘಟರೂಪಕಾರ್ಯಕ್ಕೆ ಕುಂಬಾರನೊಬ್ಬ ನಿಮಿತ್ತಕಾರಣನಿರುವಂತೆ ಪ್ರಪಂಚವೂ ಹುಟ್ಟಿದುದರಿಂದ ಅದಕ್ಕೊ ಒಬ್ಬ ಕರ್ತೃ ಬೇಕು. ಆ ಕರ್ತೃವಿಗೆ ಪ್ರಪಂಚವನ್ನು ನಿರ್ಮಿಸುವುದಕ್ಕೆ ತಕ್ಕಂತೆ ಶಕ್ತಿ, ಜ್ಞಾನ, ಇಚ್ಛೆಗಳೆಲ್ಲವೂ ಇರಬೇಕು. ಅಲ್ಪಜ್ಞರಾದ ನಮ್ಮಂತಹರಿಗೆ ಈ ಪ್ರಪಂಚವನ್ನು ನಿರ್ಮಿಸುವ ಶಕ್ತಿ ಇಲ್ಲ. ಆದುದರಿಂದ ಸರ್ವಶಕ್ತನಾದ ಒಬ್ಬನೇ ಶಾಶ್ವತನಾದ ಈಶ್ವರನು ಪ್ರಪಂಚಕರ್ತೃವೆಂದು ಸಿದ್ಧನಾಗುತ್ತಾನೆ. ಇವನು ನಮಗೆ ತಂದೆಯಂತೆ ಪರಮಾಪ್ತನು. ಲೌಕಿಕರು ಇವನನ್ನು ಒಂದು ಪದಾರ್ಥವೆಂದು ಅಂಗೀಕರಿಸಿರುತ್ತಾರೆ. ಇವನ ಸ್ವರೂಪವನ್ನು ಜ್ಞಾನವೆಂಬ ಬುದ್ಧಿರೂಪಧರ್ಮದಿಂದಲೇ ನಿರೂಪಿಸಲು ಸಾಧ್ಯ. ನಿರೀಶ್ವರವಾದಿ ಮೀಮಾಂಸಕರನ್ನೂ ಇವರು ಖಂಡಿಸಿರುತ್ತಾರೆ. ಜೀವಾತ್ಮ, ಜನ್ಮಾಂತರ, ಪುಣ್ಯಪಾಪ, ಸ್ವರ್ಗನರಕಾದಿಗಳನ್ನು ಅಂಗೀಕರಿಸಿ ಈಶ್ವರನನ್ನು ಮಾತ್ರ ಅಂಗೀಕರಿಸದಿರುವುದು ಹೇಗೆ? ಕಾರ್ಯಾದಿಗಳಿಂದಲೇ ಈಶ್ವರನು ಸಿದ್ಧಿಸುತ್ತಾನೆಂದು ಉದಯನಾಚಾರ್ಯರು ಕುಸುಮಾಂಜಲಿಯಲ್ಲಿ ಹೀಗೆ ಹೇಳಿರುತ್ತಾರೆ.

**ಕಾರ್ಯಾಯೋಜನಧೃತ್ಯಾದೇಃ ಪದಾತ್ಪ್ರತ್ಯಯತಃ ಶ್ರುತೇಃ ||**
**ವಾಕ್ಯಾತ್ ಸಂಖ್ಯಾವಿಶೇಷಾಚ್ಚ ಸಾಧ್ಯೋ ವಿಶ್ವವಿದವ್ಯಯಃ ||**

ಅವಯವಗಳಿಂದ ಕೂಡಿರುವುದಕ್ಕೆಲ್ಲಾ ಉತ್ಪತ್ತಿ ಸಿದ್ಧವಾದುದರಿಂದ ಪ್ರಪಂಚವೂ ಅವಯವಸಹಿತವಾದುದರಿಂದ ಅದು ಉತ್ಪನ್ನವಾಗಿ ಕಾರ್ಯವಾಗುತ್ತದೆ. ಪ್ರಪಂಚರೂಪ ಕಾರ್ಯಕ್ಕೆ ಈಶ್ವರನನ್ನು ಬಿಟ್ಟರೆ ಇನ್ಯಾರೂ ಕರ್ತೃ ಆಗಲಾರರು. ಆಯೋಜನವೆಂದರೆ ಸೇರಿಸುವುದು. ಪ್ರಳಯದಲ್ಲಿ ಪರಮಾಣುಗಳು ಸ್ವತಂತ್ರವಾಗಿ ಬೇರೆ ಬೇರೆಯಾಗಿರುವುವು. ಸೃಷ್ಟಿಪ್ರಾರಂಭವಾದರೆ ಅವುಗಳು ಎರಡು ಮೂರು ಸೇರಿ ವಸ್ತುಗಳಾಗಬೇಕು. ಆಗ ಯಾವ ಪ್ರಾಣಿಯೂ ಇಲ್ಲದಿರುವುದರಿಂದ ಅವುಗಳನ್ನು ಸೇರಿಸುವ ಪುರುಷನೇ ಈಶ್ವರನೆಂದು ಸಿದ್ಧವಾಗುತ್ತದೆ. ಧೃತಿಯೆಂದರೆ ಧಾರಣೆ. ಪ್ರತಿಯೊಂದು ವಸ್ತುವೂ ಒಂದೊಂದರಿಂದ ಧರಿಸಲ್ಪಟ್ಟಿರುವುದರಿಂದ ಪ್ರಪಂಚವನ್ನು ಧರಿಸಿದವನು ಈಶ್ವರನೆಂದು ಸಿದ್ಧವಾಗುತ್ತದೆ. ಪದವೆಂದರೆ ಅರ್ಥಬೋಧಕವಾದ ವೃದ್ಧವ್ಯವಹಾರ ಅಂದರೆ ಭಾಷೆ-ಇದು ಈಶ್ವರನ ಸಂಕೇತ ಮೂಲಕವಾಗಿಯೇ ಬಂದಿದೆ. ಪ್ರತ್ಯಯವೆಂದರೆ ನಂಬಿಕೆ. ಇದೂ ಪ್ರಾಮಾಣಿಕಪುರುಷಮೂಲಕವಾಗಿ ಬಂದುದರಿಂದ ಆ ಪುರುಷನೇ

ಈಶ್ವರ. ಶ್ರುತಿಯೆಂದರೆ ವೇದ. ಲೋಕದಲ್ಲಿ ಅರ್ಥವನ್ನು ತಿಳಿದವರು ಆ ವಾಕ್ಯವನ್ನು ಪ್ರಯೋಗಿಸುತ್ತಾರೆ. ವೇದವಾಕ್ಯಗಳ ಅರ್ಥಗಳನ್ನು ತಿಳಿದಿರಬೇಕಾದರೆ ಸರ್ವಜ್ಞನೊಬ್ಬನು ಬೇಕು. ಅವನೇ ಈಶ್ವರ. ವಾಕ್ಯವೆಂದರೆ ಸಾರ್ಥಕಪದಗಳ ಸಮುದಾಯ. ವೇದವಾಕ್ಯಗಳನ್ನು ಜೋಡಿಸಬೇಕಾದರೆ ಪಂಡಿತಶ್ರೇಷ್ಠನೊಬ್ಬನು ಬೇಕು. ಅವನೇ ಈಶ್ವರ. ಹೀಗೆ ಆದಿಯಲ್ಲಿ ಸಂಖ್ಯಾವ್ಯವಹಾರಮಾಡಿದವನೇ ಈಶ್ವರನೆಂದೂ ಸಿದ್ಧವಾಗುತ್ತದೆ.

ಇಲ್ಲಿಯೂ ಕಾರ್ಯವೆಂದಮೇಲೆ ಅದು ಶರೀರವಿರುವ ಒಬ್ಬ ಕರ್ತೃವಿನಿಂದ ಉಂಟಾದುದರಿಂದ ಈಶ್ವರನಿಗೆ ಶರೀರವಿಲ್ಲದಿರುವುದರಿಂದ ಅವನು ಪ್ರಪಂಚಕರ್ತನೆಂದು ನಿರ್ಣಯಿಸುವುದು ಹೇಗೆ ? ಎಂದು ನಾಸ್ತಿಕರು ಶಂಕಿಸುತ್ತಾರೆ. ಆದರೆ ಕಾರ್ಯವೆಲ್ಲಾ ಶರೀರಿಯಿಂದಲೇ ಆಗಿದೆಯೆಂಬುದರಲ್ಲಿ ಸಾಕಷ್ಟು ಪ್ರಮಾಣವಿಲ್ಲ. ಆಕಾಶಾದಿಗಳು ಅಜನ್ಯವಾದುದರಿಂದಲೇ (ಹುಟ್ಟದಿರುವುದರಿಂದ) ಕರ್ತೃಜನ್ಯವಾಗಿಲ್ಲ. ಅಜನ್ಯವಾದುದರಿಂದಲೇ ಕರ್ತೃಜನ್ಯವಲ್ಲವೆಂದು ಹೇಳಬೇಕೇ ವಿನಾ ಶರೀರಾಜನ್ಯವಾದುದರಿಂದ ಕರ್ತೃಜನ್ಯವಲ್ಲವೆಂದು ಹೇಳಬಾರದು. ಶರೀರಾಜನ್ಯತ್ವವಿದ್ದಲ್ಲಿ ಕರ್ತೃಜನ್ಯತ್ವವೂ ಇಲ್ಲವೆಂಬುದರಲ್ಲಿ ಒಂದು ಕಡೆ ಕಾರ್ಯಕಾರಣಭಾವ ತೋರಿಸಿ ಪ್ರಕೃತಪ್ರಪಂಚದಲ್ಲಿ ಅದಿಲ್ಲವೆಂದು ತೋರಿಸಬೇಕು. ಅಂತಹ ಒಂದು ದೃಷ್ಟಾಂತವೇ ಪ್ರಸಿದ್ಧವಾಗಿಲ್ಲ. ಆಕಾಶಾದಿಗಳಲ್ಲಿ ಹೇಳೋಣವೆಂದರೆ ಅಲ್ಲಿ ಶರೀರಪದವಿಲ್ಲದೇ ವ್ಯಾಪ್ತಿ ಹೇಳುವುದರಿಂದ ಅದೂ ಆಗಲಾರದು. ಹೀಗೆ ಸರ್ವಜ್ಞ, ಸರ್ವಶಕ್ತ, ನಿತ್ಯ, ಒಬ್ಬನಾದ ಈಶ್ವರನು ಸಿದ್ಧವಾದ ಮೇಲೆ ಅವನು ಪರಮಾಪ್ತನಾದುದರಿಂದ ಅವನಿಂದ ಹೇಳಿದ ವೇದಾದಿಗಳಿಗೂ ಪ್ರಾಮಾಣ್ಯವಿರುವುದರಿಂದ ವೇದಾದಿಗಳಿಂದಲೂ ಪ್ರಪಂಚಕ್ಕೆ ಈಶ್ವರನು ಕಾರಣನೆಂದು ಪ್ರಸಿದ್ಧವಾಗುತ್ತದೆ.

ಸಾಂಖ್ಯರು ಮೂಲಪ್ರಕೃತಿಯೇ ಪ್ರಪಂಚಕ್ಕೆ ಕಾರಣವೆಂದೂ, ವೇದಾಂತಿಗಳು ಈಶ್ವರನನ್ನು ಪ್ರಪಂಚಕ್ಕೆ ಅಭಿನ್ನ ನಿಮಿತ್ತೋಪಾದಾನಕಾರಣನೆಂದೂ ಹೇಳುತ್ತಾರೆ.

## ಪದಾರ್ಥವಿಭಾಗ

ದ್ರವ್ಯ, ಗುಣ, ಕರ್ಮ, ಸಾಮಾನ್ಯವಿಶೇಷ ಸಮವಾಯ, ಅಭಾವಗಳೆಂದು ತಾರ್ಕಿಕರು ಏಳು ಪದಾರ್ಥಗಳನ್ನು ಅಂಗೀಕರಿಸಿರುತ್ತಾರೆ. ನ್ಯಾಯಸೂತ್ರದಲ್ಲಿ ಹದಿನಾರು ಪದಾರ್ಥಗಳೆಂದು ಹೇಳಿದರೂ ಅವೆಲ್ಲವೂ ಈ ಏಳರಲ್ಲಿಯೇ ಅಂತರ್ಭಾವ ಹೊಂದುತ್ತವೆಂದು ನಿರ್ಣಯಿಸಿರುತ್ತಾರೆ. (ದ್ರವ್ಯಾದಿ ಆರು ಪದಾರ್ಥಗಳಿಗೆ ಭಾವಪದಾರ್ಥಗಳೆಂದೂ ಪ್ರಸಿದ್ಧಿ ಇದೆ.) ಮೀಮಾಂಸಕರೂ. ಆಲಂಕಾರಿಕರೂ ಶಕ್ತಿ, ಸಾದೃಶ್ಯಗಳೆರಡನ್ನೂ ಅತಿರಿಕ್ತಪದಾರ್ಥವೆಂದು ಅಂಗೀಕರಿಸಿದರೂ ಅವೂ ಈ ಏಳಕ್ಕಿಂತ ಬೇರೆಯಾಗುವುದಿಲ್ಲವೆಂದು ತಾರ್ಕಿಕರ ಸಿದ್ಧಾಂತ. ಶಕ್ತಿಯು ಸಹಕಾರಿಕಾರಣಗಳಲ್ಲದೆ ಬೇರೆ ಪದಾರ್ಥವಲ್ಲ. ಅದು ಅಭಾವಾದಿಗಳಲ್ಲಿಯೂ, ಸಾದೃಶ್ಯವು ಜಾತ್ಯಾದಿಗಳ

ಲ್ಲಿಯೂ, ಸೇರುತ್ತದೆಂದು ನಿರೂಪಿಸಿರುತ್ತಾರೆ. ಈ ವಿಷಯದಲ್ಲಿ ನವೀನರಲ್ಲಿ ಮತಭೇದ ಇದೆ. ತತ್ವಜ್ಞಾನದಲ್ಲಿ ಸಾಕ್ಷಾತ್ತಾಗಲೀ, ಪರಂಪರೆಯಿಂದಾಗಲಿ, ಯಾವ ಪದಾರ್ಥಗಳ ಉಪಯೋಗವಿದೆಯೋ ಅವು ಏಳು ಎಂಬ ಅಭಿಪ್ರಾಯದಿಂದ ಸಾದೃಶ್ಯಾದಿಗಳು ಬೇರೆ ಪದಾರ್ಥಗಳೆಂದು ಒಪ್ಪಿದ್ದರೂ ಬಾಧಕವಿಲ್ಲನೆಂದು ಅವರ ಅಭಿಪ್ರಾಯ.

## ದ್ರವ್ಯ

ಸಮವಾಯಸಂಬಂಧದಿಂದ ಗುಣಕ್ಕೆ ಅಥವಾ ಕ್ರಿಯೆಗೆ ಆಶ್ರಯವಾಗಿರುವುದೇ ದ್ರವ್ಯ. ಇದು ಯಾವುದಕ್ಕಾದರೂ ಸಮವಾಯಿಕಾರಣ (ಉಪಾದಾನಕಾರಣ) ವಾಗಿಯೇ ಇರುತ್ತದೆ. ದ್ರವ್ಯ ೩ ಎಂಬ ಅನುಗತ ಪ್ರತೀತಿಯಿಂದ ದ್ರವ್ಯತ್ವವೆಂಬ ಜಾತಿ ಪ್ರಸಿದ್ಧವಾಗಿರುತ್ತದೆ. ಪೃಥಿವಿ, ಅಪ್, ತೇಜಸ್ಸು, ವಾಯು, ಆಕಾಶ, ಕಾಲ, ದಿಕ್, ಆತ್ಮಾ, ಮನಸ್ಸು, ಎಂದು ದ್ರವ್ಯವು ಒಂಬತ್ತುವಿಧವಾಗಿದೆ. ಕತ್ತಲೆಯೆಂಬ ಹತ್ತನೆಯ ದ್ರವ್ಯವೂ ಇದೆಯೆಂದು ಮೀಮಾಂಸಕರು ಹೇಳುತ್ತಾರೆ. ಗುಣಕ್ರಿಯೆಗಳಿಗೆ ಆಶ್ರಯ ವಾದದ್ದು ದ್ರವ್ಯವೆಂದುದರಿಂದ ಕತ್ತಲೆಯು ನೀಲರೂಪಕ್ಕೆ ಆಶ್ರಯವಾಗಿ ಚಲನಾದಿಕ್ರಿಯೆ ಯಿಂದ ಕೂಡಿರುತ್ತದೆ. ಆದುದರಿಂದ ದ್ರವ್ಯವೆಂದು ಅವರ ಸಿದ್ಧಾಂತ. ಆದರೆ ತಾರ್ಕಿ ಕರು ಅದನ್ನು ಒಪ್ಪುವುದಿಲ್ಲ. ಉಷ್ಣಸ್ಪರ್ಶಕ್ಕೆ ಆಶ್ರಯವಾಗಿರುವ ತೇಜಸ್ಸು ಲೋಕ ಪ್ರಸಿದ್ಧವಾಗಿದೆ. ಈ ತೇಜೋಭಾವವೇ ಕತ್ತಲೆಯಾಗುವುದರಿಂದ ಅದು ಅಭಾವ ಪದಾರ್ಥದಲ್ಲಿ ಸೇರುವುದರಿಂದ ಬೇರೆ ದ್ರವ್ಯವಾಗುವುದಿಲ್ಲವೆಂದು ಅವರ ಸಿದ್ಧಾಂತ. ಅದು ಬೇರೆಪದಾರ್ಥವೆಂದು ಅಂಗೀಕರಿಸಿದರೆ ಅದರ ಅನಂತಾವಯವಗಳನ್ನು ಕಲ್ಪಿಸ ಬೇಕಾದುದರಿಂದ ಗೌರವ ಬರುತ್ತದೆ. ಹೀಗೆ ಸುವರ್ಣವೂ ಬೇರೆ ಪದಾರ್ಥವೆನ್ನುವವರ ವಾದ ಸರಿಯಲ್ಲ. ಅದು ತೇಜಸ್ಸಿನಲ್ಲಿ ಸೇರುತ್ತದೆಂದು ತೇಜೋನಿರೂಪಣಸಂದರ್ಭದಲ್ಲಿ ವಿವರಿಸುತ್ತಾನೆ. ಕತ್ತಲೆ ಕಪ್ಪು, ಅದು ಚಲಿಸುತ್ತದೆಂಬುದು ಭ್ರಮೆಯೆಂದು ತಾರ್ಕಿಕರ ಮತ.

## ಗುಣಗಳು

ರೂಪ, ರಸ, ಗಂಧ, ಸ್ಪರ್ಶ, ಸಂಖ್ಯಾ, ಪರಿಮಾಣ, ಪೃಥಕ್ತ್ವ, ಸಂಯೋಗ, ವಿಭಾಗ ಪರತ್ವ, ಅಪರತ್ವ, ಬುದ್ಧಿ, ಸುಖ, ದುಃಖ, ಇಚ್ಛಾ, ದ್ವೇಷ, ಯತ್ನ, ಗುರುತ್ವ, ದ್ರವತ್ವ, ಸ್ನೇಹ, ಸಂಸ್ಕಾರ, ಅದೃಷ್ಟ, (ಧರ್ಮ—ಅಧರ್ಮ) ಶಬ್ದಗಳೆಂದು ಇಪ್ಪತ್ತ ನಾಲ್ಕು ಗುಣಗಳು ಹೇಳಿವೆ. ಗುಣವಿಲ್ಲದೆ, ಕ್ರಿಯಾ ಇಲ್ಲದೆ (ಗುಣಕ್ರಿಯಾರಹಿತವಾಗಿ) ದ್ರವ್ಯವನ್ನಾಶ್ರಯಿಸಿರುವುದು ಗುಣ ಗುಣಕಾರಣತಾವಚ್ಛೇದಕರೂಪವಾಗಿ ಗುಣತ್ವಜಾತಿ ಸಿದ್ಧಿಸುವುದೆಂದು ಮುಂದೆ ಹೇಳುತ್ತಾನೆ.

## ಕರ್ಮ

ಅನುಗತಪ್ರತೀತಿಯಿಂದ ಕರ್ಮತ್ವಜಾತಿ ಪ್ರಸಿದ್ಧವಾಗಿದೆ. ಸಂಯೋಗಕ್ಕಿಂತ

ಬೇರೆಯಾಗಿ ಸಂಯೋಗಕ್ಕೆ ಕಾರಣವಿಶೇಷವಾಗಿರುವುದೇ ಕರ್ಮ. ಇದು ಐದುವಿಧ. ಉತ್ಕ್ಷೇಪಣ, ಅಪಕ್ಷೇಪಣ, ಆಕುಂಚನ, ಪ್ರಸಾರಣ, ಗಮನವೆಂದು ಅವುಗಳ ಹೆಸರು. ಉತ್ಕ್ಷೇಪಣ—ಮೇಲಕ್ಕೆ ಹೋಗುವುದು. ಇವೆಲ್ಲವೂ ಗಮನದ ವಿಶೇಷವಾದರೂ ಪೂರ್ವಋಷಿಗಳು ಐದೆಂದುದರಿಂದ ಇಲ್ಲಿಯೂ ಹಾಗೆ ಹೇಳಿದೆ. ಭ್ರಮಣಾದಿಗಳು ಗಮನದಲ್ಲಿಯೇ ಸೇರುತ್ತವೆ.

## ಸಾಮಾನ್ಯ

'ಇದು ಹಸು, ಇದು ಹಸು' ಇತ್ಯಾದಿ ಅನುಗತವಾದ ಪ್ರತೀತಿಗೆ ಕಾರಣವಾಗಿರುವ ಧರ್ಮವಿಶೇಷಕ್ಕೆ (ಗೋತ್ವಾದಿ) ಜಾತಿಯೆಂದು ಹೆಸರು. ಇದೇ ಸಾಮಾನ್ಯ. ನಿತ್ಯವಾಗಿದ್ದು ಅನೇಕ ವ್ಯಕ್ತಿಗಳಲ್ಲಿ ಸಮವಾಯವೆಂಬ ಸಂಬಂಧವಿಶೇಷದಿಂದ ಇರುವುದೇ ಇದರ ಸ್ವರೂಪ. ಅನುಗತಪ್ರತೀತಿ ಮುಂತಾದವುಗಳು ಇಲ್ಲದೆ ನಿರ್ವಚನಮಾಡಲು ಬಾರದಿರುವ ಧರ್ಮಕ್ಕೆ ಅಖಂಡೋಪಾಧಿಯೆನ್ನುತ್ತಾರೆ. ದ್ರವ್ಯ, ಗುಣ, ಕರ್ಮಗಳಲ್ಲಿರುವ ಸತ್ತಾ ಎಂಬ ಜಾತಿಗೆ ಪರಜಾತಿಯೆಂದೂ ದ್ರವ್ಯಾದಿಗಳಲ್ಲಿರುವ ದ್ರವ್ಯತ್ವಾದಿ ಜಾತಿಗಳಿಗೆ ಅಪರಜಾತಿಯೆಂದೂ ಕರೆಯುತ್ತಾರೆ. ಕೆಲವು ಧರ್ಮಗಳು ಜಾತಿಯಂತೆ ತೋರಿದರೂ ಅವು ಜಾತಿಯೆಂದು ಅಂಗೀಕರಿಸಲು ಕೆಲವು ಬಾಧಕಗಳಿವೆ. ೧. ಒಂದೇ ವ್ಯಕ್ತಿಯಲ್ಲಿರುವ —ಆಕಾಶತ್ವ ಮುಂತಾದ ಧರ್ಮಗಳು ಜಾತಿಯಾಗುವುದಿಲ್ಲ. ೨) ಒಂದು ಪ್ರಸಿದ್ಧವಾದ ಧರ್ಮವಿರುವ ವ್ಯಕ್ತಿಗಳಲ್ಲಿ ಅನ್ಯೂನಾನತಿರಿಕ್ತವಾಗಿ ಇನ್ನೊಂದು ಧರ್ಮವಿರುವುದಾದರೆ ಆಗ ಅದೂ ಜಾತಿಯಾಗುವುದಿಲ್ಲ. ಘಟತ್ವವಿರುವ ಎಲ್ಲಾ ಕಡೆಯಲ್ಲಿಯೂ ಕಲಶತ್ವವೆಂಬ ಧರ್ಮವಿದ್ದರೂ ಕಲಶತ್ವ ಜಾತಿಯಾಗುವುದಿಲ್ಲ. ೩) ಬೇರೆಬೇರೆಕಡೆಯಲ್ಲಿ ಪ್ರಸಿದ್ಧವಾದ ಎರಡುಧರ್ಮಗಳು ಇದ್ದು ಅವು ಎರಡೂ ಒಂದೆಡೆ ಸೇರಿದರೆ ಆಗ ಅವೆರಡೂ ಜಾತಿಯಾಗುವುದಿಲ್ಲ. ಭೂತತ್ವಧರ್ಮ ಪೃಥಿವ್ಯಾದಿಪಂಚಕಗಳಲ್ಲಿರುತ್ತದೆ. ಮೂರ್ತತ್ವಧರ್ಮ ಪೃಥಿವೀ, ಅಪ್, ತೇಜೋವಾಯು ಮನಸ್ಸುಗಳಲ್ಲಿರುತ್ತದೆ. ಆದರೆ ಭೂತತ್ವ ಮನಸ್ಸಿನಲ್ಲಿಲ್ಲ. ಮೂರ್ತತ್ವ ಆಕಾಶದಲ್ಲಿಲ್ಲ. ಇವೆರಡೂ ಪೃಥಿವ್ಯಾದಿನಾಲ್ಕರಲ್ಲಿ ಬರುವುದರಿಂದ ಇವೆರಡೂ ಜಾತಿಯಾಗುವುದಿಲ್ಲ. ಇದಕ್ಕೆ ಸಾಂಕರ್ಯವೆನ್ನುತ್ತಾರೆ. ನವೀನರು ಈ ರೀತಿ ಸಾಂಕರ್ಯವಿದ್ದರೂ ಜಾತಿಯೆಂದು ಅಂಗೀಕರಿಸುತ್ತಾರೆ. ೪) ಎಲ್ಲಿಯೂ ವಿಶ್ರಾಂತಿ ಇಲ್ಲದಿರುವ ಧರ್ಮವೂ ಜಾತಿಯಲ್ಲ. ಘಟದಲ್ಲಿ ಘಟತ್ವವೆಂಬಜಾತಿ ಇದೆ. ಘಟತ್ವದಲ್ಲಿರುವ ಘಟತ್ವತ್ವವು ಜಾತಿಯಾಗುವುದಿಲ್ಲ. ಅದೂ ಜಾತಿಯೆನ್ನುವುದಾದರೆ ಅದರಲ್ಲಿ ಒಂದು ಜಾತಿಯೆಂದು ಕಲ್ಪಿಸುತ್ತಾ ಹೋಗಿ ಎಲ್ಲಿಯೂ ವಿಶ್ರಾಂತಿ ಇಲ್ಲದೇ ಹೋಗಬೇಕಾಗುತ್ತದೆ. ೫)ವಿಶೇಷವೆಂಬ ಪದಾರ್ಥದಲ್ಲಿರುವ ವಿಶೇಷತ್ವಧರ್ಮವು ರೂಪಹಾನಿದೋಷದಿಂದ ಜಾತಿಯಾಗುವುದಿಲ್ಲ. ಜಾತ್ಯಾಶ್ರಯವಾದ ವ್ಯಕ್ತಿಗಳ ಭೇದವು ಅಂದರೆ ಘಟಪಟಾದಿಗಳ ಭೇದವು ಜಾತಿಯಿಂದಲೇ ನಿರ್ವಾಹವಾಗುತ್ತದೆ. ಘಟತ್ವಜಾತಿ ಇರುವುದರಿಂದ ಘಟವು ಪಟಕ್ಕಿಂತ ಬೇರೆಯಾಗಿದೆ.

ಪರಮಾಣುಗಳ ಭೇದಸಾಧನೆಗೋಸ್ಕರ ಅಂಗೀಕೃತವಾದ ಅನಂತ ವಿಶೇಷಪದಾರ್ಥಗಳಲ್ಲಿ ಪರಸ್ಪರಭೇದಸಾಧನೆಯು ತಮ್ಮತಮ್ಮ ಸ್ವರೂಪದಿಂದಲೇ ಆಗುತ್ತದೆ. ಆದುದರಿಂದ ಇವು ಸ್ವತೋವ್ಯಾವರ್ತಕಗಳು. ಇವುಗಳಲ್ಲಿಯೂ ಜಾತಿ ಇದೆಯೆಂದು ಒಪ್ಪುವುದಾದರೆ ಆಗ ಜಾತಿಯಿಂದಲೇ ಭೇದಸಾಧನೆಯಾಗಿ ಇವುಗಳ ಸ್ವತೋವ್ಯಾವರ್ತಕತ್ವರೂಪ ಸ್ವರೂಪಕ್ಕೆ (ಲಕ್ಷಣಕ್ಕೆ) ಹಾನಿ ಬರುತ್ತದೆ. ಆದುದರಿಂದ ವಿಶೇಷತ್ವ ಜಾತಿಯಾಗುವುದಿಲ್ಲ. ೬) ಜಾತಿಯು ಸಮವಾಯಸಂಬಂಧದಿಂದ ವ್ಯಕ್ತಿಯಲ್ಲಿರುವುದರಿಂದ ಸಮವಾಯ ಸಂಬಂಧದಲ್ಲಿರುವ ಸಮವಾಯತ್ವವು ಜಾತಿಯಾಗುವುದಿಲ್ಲ. ಅದೂ ಜಾತಿಯಾಗುವುದಾದರೆ ದ್ರವ್ಯತ್ವಾದಿಗಳು ದ್ರವ್ಯಾದಿಗಳಲ್ಲಿ ಸಮವಾಯದಿಂದ ಇರುವಂತೆ ಅದು ಸಮವಾಯದಲ್ಲಿ ಇರಲು ಇನ್ನೊಂದು ಸಮವಾಯವನ್ನು ಕಲ್ಪಿಸಬೇಕಾಗುತ್ತದೆ. ಆದುದರಿಂದ ಅದು ಜಾತಿಯಾಗುವುದಿಲ್ಲ. 'ದ್ರವ್ಯಂ ಸತ್' 'ಗುಣಃ ಸತ್' 'ಕರ್ಮಸತ್' ಎಂಬ ವ್ಯವಹಾರವೇ ಸತ್ತಾಜಾತಿ ಇದೆಯೆಂಬುದರಲ್ಲಿ ಪ್ರಮಾಣ. ದ್ರವ್ಯತ್ವಾದಿ ಜಾತಿಗಳು ಸತ್ತಾ ಜಾತಿಗಿಂತ ಕಡಿಮೆದೇಶದಲ್ಲಿರುವುದರಿಂದಲೂ, ಘಟತ್ವಾದಿಗಳಿಗಿಂತ ಅಧಿಕ ದೇಶದಲ್ಲಿರುವುದರಿಂದಲೂ ಪರಾಪರಜಾತಿಯೆಂದು ಹೇಳಲ್ಪಡುತ್ತವೆ. ಆಗ ಘಟತ್ವಾದಿಗಳು ಮಾತ್ರ ಕೇವಲ ಅಪರಜಾತಿಗಳಾಗುತ್ತವೆ.

## ವಿಶೇಷಗಳು

ವಿಶೇಷವೆಂಬ ಪದಾರ್ಥವನ್ನು ಯಾರೂ ಅಂಗೀಕರಿಸದೆ ಇವರು ಮಾತ್ರ ಅಂಗೀಕರಿಸಿರುವುದರಿಂದ ವೈಶೇಷಿಕರೆಂಬ ಹೆಸರು ಬಂದಿದೆಯೆಂದು ಕೆಲವರ ಅಭಿಪ್ರಾಯ. ಪರಮಾಣು; ಆಕಾಶಾದಿನಿತ್ಯಪದಾರ್ಥಗಳ ಭೇದಸಾಧನೆಗೋಸ್ಕರ ಈ ವಿಶೇಷವೆಂಬ ನೂತನಪದಾರ್ಥವನ್ನು ತಾರ್ಕಿಕರಮಾತ್ರ ಒಪ್ಪಿರುತ್ತಾರೆ. ಘಟಾದಿಗಳ ಪರಸ್ಪರಭೇದವು ಅವುಗಳ ಅವಯವಗಳಿಂದಲೇ ಸಾಧಿತವಾಗುವುದರಿಂದ ಪರಮಾಣ್ವಾದಿನಿತ್ಯಪದಾರ್ಥಗಳಿಗೆ ಅವಯವಗಳಿಲ್ಲದಿರುವುದರಿಂದ ಅವುಗಳಲ್ಲಿ ಪರಸ್ಪರಭೇದ ತಿಳಿಯುವುದು ಹೇಗೆ ? ವಿಶೇಷದಿಂದಲೇ ಇವುಗಳ ಭೇದಸಾಧನೆಯಾಗುತ್ತದೆ. ಈ ವಿಶೇಷಗಳು ಮಾತ್ರ ಸ್ವತೋವ್ಯಾವೃತ್ತಗಳಾದುದರಿಂದ ಇವುಗಳ ಭೇದಸಾಧನೆಗೆ ಇನ್ನೊಂದರ ಅಪೇಕ್ಷೆ ಇಲ್ಲವೆಂದು ಅವರ ಮತ.

## ಸಮವಾಯ

ಇದೊಂದು ನಿತ್ಯವಾದ ಸಂಬಂಧವಿಶೇಷ. ಇದನ್ನು ವೇದಾಂತಿಗಳು ಖಂಡಿಸಿರುತ್ತಾರೆ. ಇದರ ಸ್ಥಾನದಲ್ಲಿ ಅಭೇದವನ್ನೂ, ಭೇದಾಭೇದವನ್ನೂ ಇತರ ಶಾಸ್ತ್ರಕಾರರು ಒಪ್ಪಿರುತ್ತಾರೆ. ಅವಯವ ಮತ್ತು ಅವಯವಿಗಳಿಗೂ, ಜಾತಿ ಮತ್ತು ವ್ಯಕ್ತಿಗೂ, ಗುಣ ಮತ್ತು ಗುಣವುಳ್ಳದ್ದಕ್ಕೂ, ಕ್ರಿಯಾ ಮತ್ತು ಕ್ರಿಯಾವಿಶಿಷ್ಟಕ್ಕೂ ನಿತ್ಯದ್ರವ್ಯ

ಮತ್ತು ವಿಶೇಷಪದಾರ್ಥಗಳಿಗೂ ಇರುವ ಸಂಬಂಧವೇ ಸಮವಾಯವೆಂದು ತಾರ್ಕಿಕರ ಸಿದ್ಧಾಂತ. ಗುಣಗುಣಿ ಮುಂತಾದುವುಗಳಿಗೆ ಅಯುತಸಿದ್ಧಗಳೆಂದು ಹೆಸರು. ಪೃಥಕ್ ಸಿದ್ಧಿ ಇಲ್ಲದಿರುವವುಗಳು ಅಯುತಸಿದ್ಧಗಳು. ಇವುಗಳ ಸಂಬಂಧ ಸಮವಾಯ. ವಿಶಿಷ್ಟಬುದ್ಧಿಯಲ್ಲಿ ವಿಶೇಷ್ಯ, ವಿಶೇಷಣ, ಅವುಗಳ ಸಂಬಂಧ ನಿಯತವಾಗಿ ತೋರುತ್ತವೆ. 'ದಂಡೀ ಪುರುಷಃ' ಎಂಬಲ್ಲಿ ಪುರುಷ ವಿಶೇಷ್ಯ, ದಂಡವಿಶೇಷಣ, ಸಂಯೋಗಸಂಬಂಧ. ಹಾಗೆ 'ನೀಲೋ ಘಟಃ' ಎಂಬ ವಿಶಿಷ್ಟಬುದ್ಧಿಯಲ್ಲಿ ಘಟ, ವಿಶೇಷ್ಯ, ನೀಲರೂಪ ವಿಶೇಷಣ ಅವುಗಳಿಗೊಂದು ಸಂಬಂಧ ಹೇಳಬೇಕು. ದ್ರವ್ಯ ದ್ರವ್ಯಗಳಿಗೆ ಮಾತ್ರ ಸಂಯೋಗವೆಂಬ ನಿಯಮವಿರುವುದರಿಂದ ಸಂಯೋಗಾದಿಗಳಿಗೆ ಬಾಧಬರುವುದರಿಂದ ಗುಣಗುಣ್ಯಾದಿಗಳಸಂಬಂಧ ಸಮವಾಯವೇ ಆಗುತ್ತದೆಂದು ತಾರ್ಕಿಕರು ಸಾಧಿಸುತ್ತಾರೆ. ಸ್ವರೂಪಸಂಬಂಧವೆಂದರೆ ಗೌರವ ಬರುತ್ತದೆ. ಸಮವಾಯ ಒಂದಾದುದರಿಂದ ರೂಪಸಮವಾಯ, ಸ್ಪರ್ಶಸಮವಾಯಾದಿಗಳು ಒಂದಾಗಿ ರೂಪ ಸಮವಾಯ ವಾಯುವಿನಲ್ಲಿದ್ದರೂ ಅಲ್ಲಿ ರೂಪವಿಲ್ಲವಾದುದರಿಂದ ವಾಯುವು ರೂಪವುಳ್ಳದ್ದು ಎಂಬ ಜ್ಞಾನ ಬರುವುದಿಲ್ಲ. 'ಅಲ್ಲಿ ಘಟದ ಅಭಾವ ಇದೆ' ಯೆಂದರೆ ಆಗ ಏತತ್ಕಾಲವಿಶಿಷ್ಟಭೂತಲವೇ ಘಟಾಭಾವಕ್ಕೆ ಸಂಬಂಧವಾಗುವುದರಿಂದ ವೈಶಿಷ್ಟ್ಯಾದಿ ಅತಿರಿಕ್ತಸಂಬಂಧವನ್ನು ಕಲ್ಪಿಸಬೇಕಾಗಿಲ್ಲ.

## ಅಭಾವ

ಅಭಾವವೆಂದರೆ ಇಲ್ಲದಿರುವುದು. ಇದೊಂದು ಪದಾರ್ಥ ಹೇಗೆಂದು ಜಿಜ್ಞಾಸೆ ಬರುತ್ತದೆ. ತಾರ್ಕಿಕರು ವ್ಯವಸ್ಥಿತಸದಸತ್ಪದಾರ್ಥವಾದಿಗಳು. ಅಂದರೆ ಪದಾರ್ಥಗಳಿಗೆ ಸತ್ಸ್ವರೂಪವೂ ಇದೆ, ಅಸತ್ಸ್ವರೂಪವೂ ಇದೆ. ಈ ಅಸತ್ಸ್ವರೂಪವೇ ಅಭಾವ. ಘಟಪಟಾದಿ ಪದಾರ್ಥಗಳೂ ಇವೆ. ಅವುಗಳ ಅಭಾವಗಳೂ ಇರುತ್ತವೆಂದು ಪ್ರಸಿದ್ಧವೇ. ಭಾವವು ಎಂದೂ ಅಭಾವವಾಗುವುದಿಲ್ಲ. ಅಭಾವವು ಭಾವವಾಗುವುದಿಲ್ಲ. ಪ್ರಪಂಚದಲ್ಲಿರುವ ವಸ್ತುಗಳು ಭಾವ, ಅಭಾವವೆಂದು ಎರಡುವಿಧ. ಭಾವಗಳಾದ ಘಟಪಟಾದಿಗಳು ಹೇಗೆ ಪದಾರ್ಥಗಳೋ ಹಾಗೆ ಅವುಗಳ ಅಭಾವಗಳೂ ಪದಾರ್ಥಗಳಾಗುತ್ತವೆ. ಅಭಾವಗಳಿಗೂ ಕಾರ್ಯಕಾರಣಭಾವ ಸಂಗತವಾಗುತ್ತದೆ. ಪ್ರತಿಬಂಧಕದ ಅಭಾವವು ಕಾರ್ಯಸಾಮಾನ್ಯಕ್ಕೆ ಕಾರಣವಾಗುತ್ತದೆ. ಬೀಜವನ್ನು ಇಲಿ ಮೂಸಿದರೆ ಅದರಿಂದ ಅಂಕುರ ಹುಟ್ಟುವುದಿಲ್ಲ. ಅಂಕುರೋತ್ಪತ್ತಿಗೆ ಮೂಷಿಕಗಂಧಪ್ರತಿಬಂಧಕ. ಮೂಷಿಕಗಂಧಾಭಾವವು (ಪ್ರತಿಬಂಧಕಾಭಾವ) ಕಾರಣ. ಅದುದರಿಂದಲೇ ಶಕ್ತಿ ಎಂಬುದು ಬೇರೆ ಪದಾರ್ಥವಲ್ಲವೆಂದು ಇವರ ಸಿದ್ಧಾಂತ. ಸಹಕಾರಿಸಂಪತ್ತಿಯೇ ಶಕ್ತಿ. ಸಹಕಾರಿಕಾರಣಗಳು ಕೂಡಿದರೆ ಕಾರಣಕ್ಕೆ ಶಕ್ತಿ ಬರುವುದು. ಪ್ರತಿಬಂಧಕಾಭಾವವೂ ಸಹಕಾರಿಕಾರಣ. ಹೀಗೆ ಭಾವಭಿನ್ನವಾಗಿ ಅಭಾವವೆಂಬ ಪದಾರ್ಥವಿದೆಯೆಂದು ಅಂಗೀಕರಿಸಬೇಕು. ಇದು ನಾಲ್ಕು ವಿಧವಾಗಿದೆ. ನಾಶ

ವಸ್ತುವಾಗುವುದೆಂದಿದ್ದರೆ ಇಂದು ಆ ವಸ್ತುವಿನ ಅಭಾವವಿರುತ್ತದೆ. ಅದೇ ಪ್ರಾಗಭಾವ. ಇದು ಅನಾದಿ. ವಸ್ತು ಹುಟ್ಟಿದೊಡನೆ ಅದು ನಾಶವಾಗುವುದರಿಂದ ಸಾಂತ. 'ಘಟವು ನಷ್ಟವಾಯಿತು' ಎಂದರೆ ಆಗ ಅದರ ಅಭಾವವುಂಟಾಯಿತೆಂದರ್ಥ. ಅದಕ್ಕೆ ಧ್ವಂಸಾಭಾವವೆನ್ನುತ್ತಾರೆ. ಇದಕ್ಕೆ ಉತ್ಪತ್ತಿ ಇರುವುದರಿಂದ ಸಾದಿ. ಅನಂತ. ಇಲ್ಲಿ ಘಟವಿಲ್ಲವೆಂದರೂ ಅಭಾವ ತೋರುತ್ತದೆ. ಇದು ಅತ್ಯಂತಾಭಾವ. ಇದು ನಿತ್ಯ. ಅನ್ಯೋನ್ಯಾಭಾವವೇ ನಾಲ್ಕನೆಯ ಅಭಾವ. ಇದು ಪರಸ್ಪರವಸ್ತುಗಳ ಭೇದವನ್ನು ವಿಷಯೀಕರಿಸುತ್ತದೆ. ಘಟವು ಪಟವಲ್ಲವೆಂದರೆ ಇಲ್ಲಿ ಅನ್ಯೋನ್ಯಾಭಾವವೇ ತೋರುವುದು. ಅತ್ಯಂತಾಭಾವವು ನಿತ್ಯವೆಂದರೆ ಘಟಾತ್ಯಂತಾಭಾವ ಇದ್ದಲ್ಲಿ ಘಟತಂದಾಗ ಘಟಾತ್ಯಂತಾಭಾವಬುದ್ಧಿ ಏಕೆ ಬರುವುದಿಲ್ಲವೆಂದು ಕೇಳಬಹುದು. ಆದರೆ ತಾರ್ಕಿಕರು ತತ್ತತ್ಕಾಲವಿಶಿಷ್ಟಭೂತಲಾದಿಸಂಬಂಧವನ್ನು ಕಲ್ಪಿಸಿರುವುದರಿಂದ ತತ್ಕಾಲಸಂಬಂಧವಿಲ್ಲದಿರುವುದರಿಂದ (ಘಟವಿದ್ದಾಗ) ಘಟಾತ್ಯಂತಾಭಾವಬುದ್ಧಿ ಬರುವುದಿಲ್ಲವೆಂದು ಸಮಾಧಾನ ಹೇಳುತ್ತಾರೆ. ಇಂತಹ ಸ್ಥಳದಲ್ಲಿ ಉತ್ಪಾದವಿನಾಶಶಾಲಿಯಾದ ನಾಲ್ಕನೆಯ ಸಾಮಯಿಕಾಭಾವವೆಂಬ ಅಭಾವವನ್ನು ಕೆಲವರು ಅಂಗೀಕರಿಸುತ್ತಾರೆ. ಅಭಾವವೆಂಬುದು ಬೇರೆ ಪದಾರ್ಥವಲ್ಲ. ಭೂತಲದಲ್ಲಿ ಘಟಾಭಾವವೆಂದರೆ ಅದು ಭೂತಲಸ್ವರೂಪವಲ್ಲದೆ ಬೇರೆಯಲ್ಲ. ಆದುದರಿಂದ ಅಧಿಕರಣವೇ ಅಭಾವಸ್ವರೂಪವೆಂದು ಮೀಮಾಂಸಕರ ಮತ. ಆಯಾಯ ಅಧಿಕರಣವೇ ಅಭಾವವೆಂದರೆ ಅನಂತ ಅಧಿಕರಣಾತ್ಮಕಅಭಾವಗಳನ್ನು ಕಲ್ಪಿಸುವುದರಮೂಲಕ ಗೌರವದೋಷ ಬರುವುದರಿಂದ ಅತಿರಿಕ್ತಅಭಾವವನ್ನು ಅಂಗೀಕರಿಸುವುದೇ ಲಾಘವವೆಂದು ತಾರ್ಕಿಕರ ವಾದ. ಇದೊಂದು ಬೇರೆ ಪದಾರ್ಥವೆಂದು ಒಪ್ಪುವುದರಿಂದ, ಭೂತಲದಲ್ಲಿ ಘಟಾಭಾವವಿದೆಯೆಂದಾಗ ಆಧಾರಾಧೇಯಭಾವ ಸಮಂಜಸವಾಗಿ ಕೂಡುತ್ತದೆ. ಭೂತಲ ಅಧಿಕರಣ ಅಭಾವ ಆಧೇಯ. ಅಭಾವ ಅಧಿಕರಣಸ್ವರೂಪವೆಂದರೆ ಅದರ ಪ್ರತ್ಯಕ್ಷವಾಗಲಾರದು. ವಾಯುವಿನಲ್ಲಿ ಗಂಧಾಭಾವಪ್ರತ್ಯಕ್ಷ ಎಲ್ಲರಿಗೂ ಆಗುತ್ತದೆ. ಅಧಿಕರಣಸ್ವರೂಪವೆಂದರೆ ಆಗ ಗಂಧಾಭಾವವು ವಾಯುವಾಗುವುದರಿಂದ ಅದು ಪ್ರತ್ಯಕ್ಷವಾಗದಿರುವುದರಿಂದ ಗಂಧಾಭಾವವೂ ಪ್ರತ್ಯಕ್ಷವಾಗದೇ ಹೋಗಬೇಕಾಗುತ್ತದೆ. ಆದುದರಿಂದ ಜ್ಞಾನವಿಶೇಷಾದಿ ರೂಪವನ್ನು ಹೇಳುವವರಮತವೂ ಸಮಂಜಸವಲ್ಲ.

## ಪದಾರ್ಥಗಳ ಸಾಧರ್ಮ್ಯ

ಹೀಗೆ ಏಳು ಪದಾರ್ಥಗಳನ್ನು ವಿವರಿಸಿ ಅವುಗಳ ಸಾಧರ್ಮ್ಯ ವೈಧರ್ಮ್ಯವನ್ನು ತೋರಿಸುತ್ತಾನೆ. ದರ್ಶನಕಾರರೇ ಪ್ರಪಂಚದ ಎಲ್ಲಾ ವಸ್ತುಗಳನ್ನೂ ಸಂಗ್ರಹದಿಂದ ನಿರೂಪಿಸಿರುವಾಗ ಪ್ರತಿವಸ್ತುವಿನ ತತ್ತ್ವಜ್ಞಾನವು ಯಾರಿಂದಲೂ ಸಾಧ್ಯವಿಲ್ಲ. ಅವು ವಿವಕ್ಷಿತವಾದದ್ದೂ ಅಲ್ಲ. ಸಾಮಾನ್ಯವಾಗಿ ಪದಾರ್ಥಗಳ ಸಾಧರ್ಮ್ಯ ವೈಧರ್ಮ್ಯಗಳೇ ವಿವಕ್ಷಿತವಾದದ್ದು. ಇದರಿಂದ ಸಕಲವೂ ತಿಳಿದಂತೆಯೇ. ಯಾವ ವಸ್ತುಗಳ ಮಿಥ್ಯಾ

ಜ್ಞಾನವು ಸಂಸಾರಕ್ಕೆ ಕಾರಣವೋ ಅಂತಹ ವಸ್ತುಗಳನ್ನೇ ಸಂಗ್ರಹಿಸಿ ಕಣಾದ ಮುಂತಾದವರು ನಿರೂಪಿಸಿರುವುದರಿಂದ ಅವನ್ನೇ ಗ್ರಂಥಕಾರನು ಅನುಸರಿಸಿರುತ್ತಾನೆ.

ಜ್ಞಾನವಿಷಯತ್ವ, (ಜ್ಞೇಯತ್ವ) ಅಭಿಧಾವಿಷಯತ್ವ (ಅಭಿಧೇಯತ್ವ) ಪ್ರಮಾವಿ ವಿಷಯತ್ವ (ಪ್ರಮೇಯತ್ವ) ಕಾಲಸಂಬಂಧಿತ್ವ (ಅಸ್ತಿತ್ವ) ಮುಂತಾದುವುಗಳು ದ್ರವ್ಯಾದಿ ಏಳುಪದಾರ್ಥಗಳ ಸಾಧರ್ಮ್ಯ. (ಸಮಾನಧರ್ಮಗಳಾಗುತ್ತವೆ.) ಈಶ್ವರಜ್ಞಾನ ವಿಷಯತ್ವವು ಎಲ್ಲಾಪದಾರ್ಥಗಳಲ್ಲಿಯೂ ಇರುತ್ತದೆ.

ಭಾವತ್ವವೆಂಬುದು ದ್ರವ್ಯಾದಿ ಆರು ಪದಾರ್ಥಗಳ ಸಮಾನಧರ್ಮ. 'ಅನೇಕ ತ್ವೇಸತಿಭಾವತ್ವಂ, ಸಮವಾಯಸಂಬಂಧೇನ ಸಂಬಂಧಿತ್ವಂ' ದ್ರವ್ಯಾದಿ ಐದುಪದಾರ್ಥ ಗಳ ಸಾಧರ್ಮ್ಯ. ತಾರ್ಕಿಕರು ಒಂದು ಲಕ್ಷಣ ಹೇಳಿದಾಗ ಅದು ಕೆಲವು ಕಡೆ ಅವ್ಯಾಪ್ತವಾಗುತ್ತದೆಂದು ತಿಳಿದರೆ ಆಗ ಜಾತಿಘಟಿತಲಕ್ಷಣ ಹೇಳಿ ಆ ದೋಷವನ್ನು ದೂರ ಮಾಡುತ್ತಾರೆ. ಈಗ ಅನೇಕತ್ವಧರ್ಮ ಆಕಾಶಾದಿಗಳಲ್ಲಿ ಅಥವಾ ಏಕಘಟರೂಪ ದ್ರವ್ಯ ದಲ್ಲಿ ಬರುವುದಿಲ್ಲ ಆಗ ಅನೇಕಭಾವಗಳಲ್ಲಿರುವ ಯಾವ ಪದಾರ್ಥವಿಭಾಗಕ್ಕೆ ಸಾಧಕ ವಾದ ಧರ್ಮವಿದೆಯೋ ಅದು ಉಳ್ಳದ್ದೆಂದು ತಾತ್ಪರ್ಯ ಕಲ್ಪಿಸಿ, ಅನೇಕ ಘಟಪಟಾದಿ ಭಾವಗಳಲ್ಲಿರುವ ದ್ರವ್ಯತ್ವಧರ್ಮವನ್ನು ಸ್ವೀಕರಿಸಿ, ಅದು ಉಳ್ಳದ್ದು ಎಲ್ಲಾ ಆಕಾಶಾದಿ ಗಳೂ ಆಗುತ್ತವೆಂದು ಪರಿಷ್ಕರಿಸುತ್ತಾರೆ.

'ಸಮವೇತಸಮವೇತತ್ವಂ' ದ್ರವ್ಯಾದಿನಾಲ್ಕರ ಸಾಧರ್ಮ್ಯ. ಇಲ್ಲಿಯೂ ಜಾತಿ ಘಟಿತಲಕ್ಷಣ ಮಾಡಿದರೆ ಸಮವೇತವೆಂದರೆ ತನ್ನ ಕಾರಣವಾದ ಕಪಾಲಾದಿಗಳಲ್ಲಿ ಸಮವಾಯದಿಂದ ಇರುವುದು ಘಟಾದಿಗಳು ; ಅಲ್ಲಿ ಸಮವಾಯಸಂಬಂಧದಿಂದ ಇರುವ ಪದಾರ್ಥವಿಭಾಜಕೋಪಾಧಿ ಧರ್ಮಗಳು ಅಂದರೆ ಪದಾರ್ಥತ್ವದಿಂದ ಸಾಕ್ಷಾತ್ತಾಗಿ ವ್ಯಾಪ್ಯವಾದ ಜಾತಿ ಅಂದರೆ ದ್ರವ್ಯತ್ವಾದಿಧರ್ಮಗಳು ಅವುಗಳಿಂದ ಕೂಡಿರುವವು ಅಂದರೆ ಘಟಪಟಾದಿಗಳಾಗುತ್ತವೆ.

'ಸತ್ತಾವತ್ತ್ವಂ' ದ್ರವ್ಯಾದಿ ಮೂರರ ಸಾಧರ್ಮ್ಯ. ಸತ್ತಾ ಎಂಬ ಪರಜಾತಿ ಈ ಮೂರ ರಲ್ಲಿದೆಯೆಂದು ಹಿಂದೆ ಹೇಳಿದೆ.

'ನಿತ್ಯಾನಿತ್ಯವೃತ್ತಿಪದಾರ್ಥವಿಭಾಜಕೋಪಾಧಿಮತ್ವಂ' ದ್ರವ್ಯಗುಣಗಳ ಸಾಧರ್ಮ್ಯ. ದ್ರವ್ಯತ್ವ, ಗುಣತ್ವ ನಿತ್ಯವಸ್ತುಗಳಲ್ಲಿಯೂ ಇದೆ. ಕರ್ಮತ್ವಧರ್ಮ ಅನಿತ್ಯ ಮಾತ್ರದಲ್ಲಿಯೂ ವಿಶೇಷತ್ವಾದಿಗಳು ನಿತ್ಯಮಾತ್ರದಲ್ಲಿಯೂ ಇರುತ್ತವೆ—ಹೀಗೆ ಕೊನೆ ಯಿಂದ ಒಂದೊಂದನ್ನೇ ಬಿಟ್ಟು ಸಾಧರ್ಮ್ಯ ಹೇಳಿ ಆಮೇಲೆ ಆದಿಯಿಂದ ಒಂದೊಂದನ್ನು ಬಿಟ್ಟು ಸಾಧರ್ಮ್ಯ ತೋರಿಸುತ್ತಾನೆ. ದ್ರವ್ಯವನ್ನು ಬಿಟ್ಟು ಗುಣಾದಿ ಆರಕ್ಕೆ 'ಗುಣ ಶೂನ್ಯತ್ವ, ಕ್ರಿಯಾಶೂನ್ಯತ್ವಂ' ಎಂಬುದು ಸಮಾನಧರ್ಮ. ಗುಣಕ್ರಿಯೆಗಳು ದ್ರವ್ಯ ವೊಂದರಲ್ಲಿರುವುದಲ್ಲದೆ ಗುಣಾದಿಗಳಲ್ಲಿಲ್ಲ. ಇಲ್ಲಿಯೂ ಗುಣಶೂನ್ಯತ್ವವೆಂದರೆ 'ಗುಣ ವುಳ್ಳದ್ದರಲ್ಲಿ ಇಲ್ಲದಿರುವ ಧರ್ಮದಿಂದ ಕೂಡಿರುವುದು' ಎಂದು ಪರಿಷ್ಕರಿಸಿರುತ್ತಾರೆ. ಏಕೆಂದರೆ ತಾರ್ಕಿಕರ ಸಿದ್ಧಾಂತದಲ್ಲಿ ಹುಟ್ಟಿದ ವಸ್ತುವು ಮೊದಲನೆಯಕ್ಷಣದಲ್ಲಿ ಯಾವ

ಗುಣದಿಂದಲೂ, ಕ್ರಿಯೆಯಿಂದಲೂ ಕೂಡಿರುವುದಿಲ್ಲ ಆಗ ಗುಣಶೂನ್ಯತ್ವಧರ್ಮ ಆ ಮೊದಲಿನಕ್ಷಣದಲ್ಲಿರುವ ಘಟಾದಿದ್ರವ್ಯಗಳಲ್ಲಿ ಬರುವುದರಿಂದ ಅತಿವ್ಯಾಪ್ತವಾಗುತ್ತದೆ. ಪರಿಷ್ಕಾರದಿಂದ ಗುಣವತ್ ಅಂದರೆ ಘಟಾದಿಗಳು ಅಲ್ಲಿ ಇಲ್ಲದಿರುವ ಧರ್ಮವೆಂದರೆ ಗುಣತ್ವಾದಿಗಳು ಅದರಿಂದ ಕೂಡಿರುವುದು ಎಂದರೆ ಗುಣಾದಿಗಳೇ ಆಗುತ್ತವೆ. ಹೀಗೆ ಕ್ರಿಯಾ ಉಳ್ಳದ್ದು ದಂಡಾದಿ ಅಲ್ಲಿ ಇಲ್ಲದ ಧರ್ಮ ಅಂದರೆ ಗುಣತ್ವ, ಕರ್ಮತ್ವಾದಿ. ಅವುಗಳುಳ್ಳದ್ದು ಗುಣಾದಿಗಳಾಗುತ್ತವೆ;

'ಸಾಮಾನ್ಯ ಅಂದರೆ ಜಾತಿಗೆ ಆಶ್ರಯವಾಗದಿರುವುದು' ಸಾಮಾನ್ಯಾದಿನಾಲ್ಕರ ಸಾಧರ್ಮ್ಯ. ಸಾಮಾನ್ಯಾದಿಗಳಲ್ಲಿ ಜಾತಿ ಇಲ್ಲವೆಂದು ಹಿಂದೆಯೇ ವಿವರಿಸಿದೆ.

ಅಣುಪರಿಮಾಣ, ಆಕಾಶಾದಿಗಳಲ್ಲಿರುವ ಪರಮಮಹತ್ವಪರಿಮಾಣ, ಪರಮಾಣು ಮುಂತಾದ ಅತೀಂದ್ರಿಯಗಳಲ್ಲಿರುವ ಪರಮಾಣುತ್ವಾದಿಸಾಮಾನ್ಯ, ವಿಶೇಷಪದಾರ್ಥಗಳನ್ನು ಬಿಟ್ಟು ಉಳಿದ ಪದಾರ್ಥಗಳಿಗೆ ಕಾರಣತ್ವಧರ್ಮವು ಸಾಧರ್ಮ್ಯವಾಗುತ್ತದೆ. ಅಣುಪರಿಮಾಣಾದಿಗಳು ಮಾತ್ರ ಯಾವುದಕ್ಕೂ ಕಾರಣವಾಗದಿರುವುದರಿಂದ ಅವುಗಳಲ್ಲಿ ಕಾರಣತ್ವಧರ್ಮ ಬರುವುದಿಲ್ಲ. ನವೀನರ ಮತವನ್ನಾಶ್ರಯಿಸಿ ಗ್ರಂಥಕಾರನು ಹೀಗೆ ಹೇಳಿದ್ದಾನೆ. ಪ್ರಾಚೀನನೈಯಾಯಿಕರು ಅಣುಪರಿಮಾಣಾದಿಗಳೂ ಯೋಗಿಪ್ರತ್ಯಕ್ಷದಲ್ಲಿ ವಿಷಯಮೂಲದಿಂದ ಕಾರಣವಾಗುತ್ತವೆಂದು ಹೇಳುವುದರಿಂದ ಕಾರಣತ್ವ ಇಲ್ಲದಿರುವುದು ಯಾವುದೂ ಇಲ್ಲ.

## ಕಾರಣಗಳು

ಕಾರಣವೆಂದರೆ ಕಾರ್ಯಹುಟ್ಟುವುದಕ್ಕೆ ಪೂರ್ವಕ್ಷಣದಲ್ಲಿ ನಿಯತವಾಗಿರುವ ವಸ್ತು. ನಿಯಮವೆಂದರೆ ಯಾವುದಿಲ್ಲದಿದ್ದರೆ ಕಾರ್ಯವೇ ಹುಟ್ಟುವುದಿಲ್ಲವೋ ಅಂತಹ ಪದಾರ್ಥದ ಇರುವಿಕೆ. ಇದನ್ನೇ ಅನ್ಯಥಾಸಿದ್ಧಿ ಶೂನ್ಯವಾಗಿರಬೇಕೆಂದು ವಿವರಿಸಿರುತ್ತಾನೆ. ಅದಿಲ್ಲದಿದ್ದರೂ ಕಾರಣವಾಗುವುದಾದರೆ ಅದು ಆ ಕಾರ್ಯಕ್ಕೆ ಅನ್ಯಥಾಸಿದ್ಧವಾಗುತ್ತದೆ. ಅದು ಕೆಲವು ಕಾರ್ಯಗಳ ಪೂರ್ವಕ್ಷಣದಲ್ಲಿ ಇದ್ದರೂ ಆ ಕಾರ್ಯಸಾಮಾನ್ಯಕ್ಕೆ ಕಾರಣವಾಗಲಾರದು. ಸಕಲಕಾರ್ಯಕ್ಕೂ ಮೂರುವಿಧವಾದ ಕಾರಣಗಳಿರುತ್ತವೆ.

೧. ಸಮವಾಯಿಕಾರಣ—ಸಮವಾಯಸಂಬಂಧದಿಂದ ಕಾರ್ಯದಿಂದ ಕೂಡಿರುವುದೇ ಸಮವಾಯಿಕಾರಣ. ತಂತುಗಳು ಪಟಕ್ಕೆ ಸಮವಾಯಿಕಾರಣ. ಪಟವು (ವಸ್ತ್ರ) ತಂತುಗಳಲ್ಲಿ ಸಮವಾಯದಿಂದ ಇದ್ದು ಕಾರ್ಯವಾಗಿದೆ.

೨. ಅಸಮವಾಯಿಕಾರಣ—ಇದು ಎರಡು ರೀತಿಯಾಗಿರುತ್ತದೆ. ತನ್ನಕಾರ್ಯದೊಡನೆ ಒಂದು ವಸ್ತುವಿನಲ್ಲಿ ಸಮವಾಯಸಂಬಂಧದಿಂದ ಇದ್ದು ಕಾರಣವಾಗಿರುವುದು ಒಂದು. ತಂತುಸಂಯೋಗ ವಸ್ತ್ರಕ್ಕೆ ಅಸಮವಾಯಿಕಾರಣ. ತಂತುಸಂಯೋಗವು ತನ್ನ ಕಾರ್ಯವಾದ ವಸ್ತ್ರರೂಪಕಾರ್ಯದೊಡನೆ ತಂತುಗಳಲ್ಲಿ ಸಮವಾಯಸಂಬಂಧದಿಂದ ಇದ್ದು ಪಟರೂಪಕ್ಕೆ ಕಾರಣವಾಗುವುದರಿಂದ ಈ ಲಕ್ಷಣ ಅಲ್ಲಿ ಸಂಗತವಾಗುತ್ತದೆ. ೨. ಈ

ಎರಡು ಕಾರಣಗಳಿಗಿಂತ ಬೇರೆಯಾದುದೇ ನಿಮಿತ್ತಕಾರಣ. ಪಟಕ್ಕೆ ನೇಯ್ಗೆಯವನು ನಿಮಿತ್ತಕಾರಣ. ಘಟಕ್ಕೆ ಕುಂಬಾರ, ದಂಡಮುಂತಾದವುಗಳು ನಿಮಿತ್ತಕಾರಣಗಳು.

ಕಾರಣಗಳು ಕಾರ್ಯಗಳ ನಿಯತಪೂರ್ವಕ್ಷಣದಲ್ಲಿರಬೇಕೆಂದುದರಿಂದ ಕೆಲವು ಕಾರಣ ದಂತೆ ತೋರಿದರೂ ಅನ್ಯಥಾಸಿದ್ಧಗಳಾಗುತ್ತವೆ. ಅವು ಇಲ್ಲದಿದ್ದರೂ ಕಾರ್ಯವಾಗುವುದ ರಿಂದ ಅವುಗಳಲ್ಲಿ ಕಾರಣತ್ವ ಬರುವುದಿಲ್ಲ. ಕಾರ್ಯಕ್ಕೆ ವ್ಯಾಪಕವಾಗಿಯೂ (ನಿಯತ) ಆವಶ್ಯಕವಾಗಿಯೂ ಅಂದರೆ ಯಾವುದಿಲ್ಲದಿದ್ದರೆ ಕಾರ್ಯವೇ ಆಗುವುದಿಲ್ಲವೋ ಅಂತಹ ವಸ್ತುವು ಕಾರ್ಯಪೂರ್ವಭಾವಿಯಾಗಿದ್ದರೆ ಕಾರಣವಾಗುತ್ತದೆ. ಇದಕ್ಕಿಂತ ಬೇರೆ ಯಾದುವೆಲ್ಲಾ ಅನ್ಯಥಾಸಿದ್ಧಗಳಾಗುತ್ತವೆ. ಘಟಕಾರ್ಯವನ್ನು ತೆಗೆದುಕೊಂಡರೆ ಅದಕ್ಕೆ ನಿಯತವಾಗಿಯೂ, ಆವಶ್ಯಕವಾಗಿಯೂ, ಪೂರ್ವಭಾವಿಯಾಗಿಯೂ ಇರುವುದು ಕಪಾಲ ದಂಡ, ಚಕ್ರ ಕುಂಬಾರಾದಿಗಳು. ಇವುಗಳಿಗಿಂತ ಬೇರೆಯಾದುದು ಎಂದರೆ ರಾಸಭ (ಕತ್ತೆ) ಮುಂತಾದವುಗಳು. ಕೆಲವು ಕಡೆ ಕತ್ತೆಯಮೇಲೆ ಮಣ್ಣುತಂದು ಘಟಮಾಡಿ ದಾಗ ಅಲ್ಲಿ ಕತ್ತೆ ಘಟಕಾರಣವಾದರೂ ಘಟಸಾಮಾನ್ಯಕ್ಕೆ ಅದು ಕಾರಣವಾಗುವುದಿಲ್ಲ. ಹೀಗೆ ದಂಡತ್ವಾದಿಧರ್ಮಗಳೂ ಅನ್ಯಥಾಸಿದ್ಧಗಳಾಗುತ್ತವೆ. ಇಲ್ಲಿ ವಿಭಾಗಿಸಿರುವ ಐದೂ ಒಂದೇ ಲಕ್ಷಣಲಕ್ಷಿತವಾಗಿದ್ದರೂ ವಿಶದವಾಗಿ ತಿಳಿಯಲು ಬೇರೆಬೇರೆಯಾಗಿ ಹೇಳಿರು ತ್ತಾನೆ.

೧. ಕಾರಣತಾವಚ್ಛೇದಕಧರ್ಮವು ಮೊದಲನೆಯ ಅನ್ಯಥಾಸಿದ್ಧ. ದಂಡಕಾರಣ ವಾದರೆ ದಂಡತ್ವ ಕಾರಣತಾವಚ್ಛೇದಕಧರ್ಮವಾಗುತ್ತದೆ. ಘಟವನ್ನು ಕುರಿತು ದಂಡವು ಕಾರಣವೆಂದಮೇಲೆ ದಂಡದಲ್ಲಿರುವ ದಂಡತ್ವಕ್ಕೆ ಕಾರಣತ್ವ ಹೇಳಬೇಕಾಗಿಲ್ಲ. ಇದು ಅನ್ಯಥಾಸಿದ್ಧ.

೨. ಕಾರಣದಲ್ಲಿರುವ ಗುಣಗಳು ಎರಡನೆಯ ಅನ್ಯಥಾ ಸಿದ್ಧಗಳಾಗುತ್ತವೆ. ದಂಡ ಕಾರಣವಾದರೆ ದಂಡರೂಪವೂ ಘಟಪೂರ್ವವೃತ್ತಿಯಾದುದರಿಂದ ಕಾರಣವಾಗ ಲೆಂದು ಕೆಲವರು ಆಕ್ಷೇಪಿಸಬಹುದು. ಆದರೆ ದಂಡರೂಪಕ್ಕೆ ಸ್ವತಂತ್ರವಾಗಿ ಕಾರ್ಯ ದೊಡನೆ ಅನ್ವಯವ್ಯತಿರೇಕವಿಲ್ಲ. ಅಂದರೆ 'ಘಟಸತ್ತ್ವೇ ರೂಪಸತ್ವಂ' 'ಘಟಾಭಾವೇ–ರೂಪಾಭಾವಃ' ಎಂದು ಸ್ವತಂತ್ರವಾಗಿ ಹೇಳಲು ಸಾಧ್ಯವಿಲ್ಲ. ದಂಡವನ್ನು ಸೇರಿಸಿ ಕೊಂಡೇ ಹೇಳಬೇಕು. ಘಟವಿದ್ದರೆ ದಂಡರೂಪವೂ ಇರುತ್ತದೆ. ಹೀಗೆ ಹೇಳಬೇಕು. ಆಗ ದಂಡಕ್ಕೆ ಕಾರಣತ್ವ ಹೇಳಿರುವುದರಿಂದಲೇ ಅದಕ್ಕೂ ಬರುವುದರಿಂದ ದಂಡರೂಪ ಬೇರೆ ಕಾರಣವೆಂದು ಹೇಳಬೇಕಾಗಿಲ್ಲ.

೩) ಇನ್ನೊಂದು ವಸ್ತುವಿಗೆ ಕಾರಣವೆಂದು ಮೊದಲು ತಿಳಿದ ಮೇಲೆ ಪ್ರಕೃತ ಕಾರಣವೆಂದು ತಿಳಿಯುವುದಾದರೆ ಅದೂ ಅನ್ಯಥಾಸಿದ್ಧ. ಆಕಾಶಾದಿಗಳು ಘಟಕ್ಕೆ ಕಾರಣವೆಂದರೆ ಆಗ ಅವು ಈ ಮೂರನೆಯ ಅನ್ಯಥಾಸಿದ್ಧದಲ್ಲಿ ಸೇರುತ್ತವೆ. ಆಕಾಶವು ಶಬ್ದಕ್ಕೆ ಕಾರಣವೆಂದು ಮೊದಲು ತಿಳಿದ ಮೇಲೆಯೇ ಘಟಕ್ಕೆ ಕಾರಣವೆಂದು ತಿಳಿಯು ವುದರಿಂದ ಆಕಾಶವು ಘಟಕಾರಣವೆಂಬುದರಲ್ಲಿ ಅನ್ಯಥಾಸಿದ್ಧವಾಗುತ್ತದೆ.

೪) ಪ್ರಕೃತಕಾರ್ಯಕ್ಕೆ ಯಾವುದು ಜನಕವೋ ಅದನ್ನು ಕುರಿತು ಯಾವುದು ಪೂರ್ವವೃತ್ತಿಯೆಂದು ತಿಳಿದ ಮೇಲೆಯೆ ಪ್ರಕೃತಕಾರ್ಯಕ್ಕೆ ಪೂರ್ವವೃತ್ತಿಯಾಗಿವೆಯೆಂದು ತಿಳಿಯುವುದಾದರೆ ಅದು ನಾಲ್ಕನೆಯ ಅನ್ಯಥಾಸಿದ್ಧ. ಕುಂಬಾರನತಂದೆ ಘಟಕ್ಕೆ ಕಾರಣವೆಂದರೆ ಈ ಅನ್ಯಥಾಸಿದ್ಧವಾಗುತ್ತದೆ. ಕುಂಬಾರನ ತಂದೆಯು ಕುಂಬಾರನಿಗೆ ಜನಕನಾದುದರಿಂದ ಕುಂಬಾರನಿಂದ ಪೂರ್ವದಲ್ಲಿ ಕುಂಬಾರನತಂದೆ ಇರುವನೆಂದು ತಿಳಿದ ಮೇಲೆ ಘಟಕ್ಕೆ ಅವನು ಪೂರ್ವವೃತ್ತಿಯೆಂದು ತಿಳಿಯುವುದರಿಂದ ಅನ್ಯಥಾಸಿದ್ಧನಾಗುತ್ತಾನೆ. ಐದನೆಯ ಅನ್ಯಥಾಸಿದ್ಧ ಮೊದಲೇ ಹೇಳಿದೆ. (ರಾಸಭಾದಿ) ಅದೇ ಮುಖ್ಯವಾದುದರಿಂದ ಹಿಂದಿನ ನಾಲ್ಕೂ ಅದರಲ್ಲಿಯೇ ಸೇರುತ್ತವೆ.

ಈ ಮೂರುವಿಧಕಾರಣಗಳಲ್ಲಿ ಸಮವಾಯಿಕಾರಣತ್ವ ದ್ರವ್ಯದಲ್ಲಿ ಮಾತ್ರ ಇರುತ್ತದೆ. ಗುಣಕರ್ಮಗಳು ಮಾತ್ರ ಅಸಮವಾಯಿಕಾರಣಗಳಾಗುತ್ತವೆ. ನಿಮಿತ್ತಕಾರಣತ್ವ ಎಲ್ಲದಕ್ಕೂ ಸಂಭವಿಸುತ್ತದೆ. ಅಸಮವಾಯಿಕಾರಣತ್ವ ಗುಣಕರ್ಮಭಿನ್ನವಾದ ಪದಾರ್ಥಗಳಿಗೆ ವೈಧರ್ಮ್ಯವೂ ಆಗುತ್ತದೆ.

ತಾರ್ಕಿಕರಲ್ಲಿ ಸಂಯೋಗ ಮತ್ತು ಸಮವಾಯ ಈ ಎರಡು ಸಂಬಂಧಗಳು ಮಾತ್ರ ವೃತ್ತಿನಿಯಾಮಕಸಂಬಂಧಗಳಾಗುತ್ತವೆ. (ಆಧೇಯತಾವಚ್ಛೇದಕಸಂಬಂಧಗಳು. ಇವು ಒಂದನ್ನಾಶ್ರಯಿಸಿದೆ ಎಂಬ ವ್ಯವಹಾರದಲ್ಲಿ ಕಾರಣವಾದ ಸಂಬಂಧಗಳು.) ಪರಮಾಣು, ಆಕಾಶ ಮುಂತಾದ ನಿತ್ಯದ್ರವ್ಯಗಳನ್ನು ಬಿಟ್ಟರೆ ಉಳಿದ ಪದಾರ್ಥಗಳಿಗೆ ಆಶ್ರಿತತ್ವವು ಸಾಧರ್ಮ್ಯವಾಗುತ್ತದೆ. ಪೃಥಿವ್ಯಪ್‌ತೇಜೋವಾಯು ಪರಮಾಣುಗಳೂ, ಆಕಾಶ, ಕಾಲ, ದಿಕ್ ಆತ್ಮ ಮನಸ್ಸೂ ಒಟ್ಟಿಗೆ ಒಂಬತ್ತು ನಿತ್ಯದ್ರವ್ಯಗಳೆಂದು ಸಿದ್ಧಾಂತ. ಇವುಗಳನ್ನು ಬಿಟ್ಟರೆ ಘಟಪಟಾದಿಗಳು ಯಾವುದಾದರೊಂದು ಪದಾರ್ಥವನ್ನು ಆಶ್ರಯಿಸಿಯೇ ಇರುತ್ತವೆ.

ದ್ರವ್ಯದ ಪೃಥಿವ್ಯಾದಿ ಒಂಬತ್ತು ಭೇದಗಳಿಗೆ 'ದ್ರವ್ಯತ್ವವತ್ತ್ವಂ' (ದ್ರವ್ಯತ್ವ ಜಾತಿಯಿಂದ ಕೂಡಿರುವಿಕೆ) 'ಗುಣವತ್ತ್ವಂ' (ಗುಣವುಳ್ಳದ್ದು) ಸಾಧರ್ಮ್ಯವಾಗುತ್ತದೆ. ಪೃಥಿವಿ, ಅಪ್, ತೇಜಃ, ವಾಯು, ಮನಸ್ಸು—ಇವುಗಳಿಗೆ 'ಪರತ್ವವತ್ತ್ವಂ' 'ಅಪರತ್ವವತ್ತ್ವಂ' 'ಮೂರ್ತತ್ವಂ' 'ಕ್ರಿಯಾವತ್ತ್ವಂ' 'ವೇಗವತ್ತ್ವಂ' ಇವು ಸಮಾನ ಧರ್ಮ. ದಿಕ್, ಕಾಲಗಳಿಂದ ಪರತ್ವ, ಅಪರತ್ವವುಂಟಾಗುತ್ತದೆ. ಈ ಪುಸ್ತಕ ಮೇಜಿಗಿಂತ ಹತ್ತಿರವಿದೆಯೆಂದರೆ ಪುಸ್ತಕದಲ್ಲಿ ಅಪರತ್ವ ಬರುತ್ತದೆ. ರಾಮನು ಕೃಷ್ಣನಿಗಿಂತ ಅಲ್ಪಕಾಲ ಸಂಬಂಧವುಳ್ಳವನೆಂದರೆ ಕಾಲಕೃತವಾದ ಪರತ್ವ ಕೃಷ್ಣನಲ್ಲಿ ಬರುತ್ತದೆ. ಅಪಕೃಷ್ಟವಾದ ಪರಿಮಾಣವುಳ್ಳದ್ದಕ್ಕೆ ಮೂರ್ತವೆಂದು ಹೆಸರು. ಕ್ರಿಯಾವೇಗ ಇಲ್ಲದಿರುವಲ್ಲಿ ಹಿಂದಿನಂತೆ ಜಾತಿಘಟಿತಲಕ್ಷಣ ಮಾಡಬೇಕು.

ಕಾಲ, ಆಕಾಶ, ಆತ್ಮ ದಿಕ್ಕುಗಳಿಗೆ 'ಸರ್ವಗತತ್ವಂ,' 'ಪರಮಮಹತ್ಪರಿಮಾಣವತ್ತ್ವಂ' ಸಾಧರ್ಮ್ಯ. ಸರ್ವಗತವೆಂದರೆ ಸರ್ವಮೂರ್ತವಸ್ತುಗಳ ಸಂಯೋಗದಿಂದ ಕೂಡಿರುವುದೆಂದರ್ಥ.

ಪೃಥಿವೀ, ಅಪ್, ತೇಜೋ, ವಾಯ್ವಾಕಾಶಗಳಿಗೆ 'ಭೂತತ್ವಂ' ಸಾಧರ್ಮ್ಯ. ನಯನಾದಿ ಬಾಹ್ಯೇಂದ್ರಿಯಗಳಿಂದ ಗ್ರಾಹ್ಯವಾದ ಯಾವ ರೂಪಾದಿವಿಶೇಷಣಗಳಿವೆಯೋ ಅವುಗಳಿಂದ ಕೂಡಿರುವವುಗಳೇ ಭೂತಗಳು. ಆತ್ಮನಲ್ಲಿಲ್ಲದ ವಿಶೇಷಗುಣಗಳಿಗೆ ಆಶ್ರಯವಾದವುಗಳಿಗೆ ಭೂತಗಳೆಂದು ಕೆಲವರು ಹೇಳುತ್ತಾರೆ.

ಪೃಥಿವ್ಯಾದಿ ನಾಲ್ಕರಲ್ಲಿ ಸ್ಪರ್ಶವಿರುವುದರಿಂದ 'ಸ್ಪರ್ಶವತ್ತ್ವಂ' ಈ ನಾಲ್ಕರ ಸಾಧರ್ಮ್ಯ. ಹಾಗೆಯೇ 'ದ್ರವ್ಯಾರಂಭಕತ್ವಂ' ಎಂಬುದೂ ಸಾಧರ್ಮ್ಯವಾಗುತ್ತದೆ. ದ್ರವ್ಯಸಮವಾಯಿಕಾರಣಗಳೆಂದರ್ಥ. ಘಟಾದಿಗಳು ಅಂತ್ಯವಾದ ಅವಯವಿಯಾದುದ ರಿಂದ ಅದು ಯಾವುದಕ್ಕೂ ಕಾರಣವಾಗದಿದ್ದರೆ ಆಗ ಜಾತಿಘಟಿತಲಕ್ಷಣ ಮಾಡಬೇಕು. ಸಮವಾಯಿಕಾರಣವಾಗುವ ಪೃಥಿವೀತ್ವಾದಿ ಜಾತಿಗಳು ಘಟಾದಿಗಳಲ್ಲಿರುವುದರಿಂದ ದೋಷವಿಲ್ಲ.

'ಅವ್ಯಾಪ್ಯವೃತ್ತಿವಿಶೇಷಗುಣವತ್ತ್ವಂ' 'ಕ್ಷಣಿಕವಿಶೇಷಗುಣವತ್ತ್ವಂ' ಆತ್ಮಾಕಾಶ ಗಳ ಸಾಧರ್ಮ್ಯ. ಒಂದು ಆಶ್ರಯದಲ್ಲಿ ತಾನೂ ತನ್ನ ಅಭಾವವೂ ಇರುವುದಾದರೆ ಆಗ ಅದು ಅವ್ಯಾಪ್ಯವೃತ್ತಿಯಾಗುತ್ತದೆ. ಕಪಿ ಸಂಯೋಗ ಮರದ ತುದಿಯಲ್ಲಿದ್ದರೆ ಬುಡದಲ್ಲಿರುವುದಿಲ್ಲ. ಹಾಗೆ ಆಕಾಶದ ವಿಶೇಷಗುಣವಾದ ಶಬ್ದವು ಆಕಾಶದಲ್ಲಿ ಒಂದು ಕಡೆ ಇದ್ದರೆ ಇನ್ನೊಂದು ಕಡೆಯಲ್ಲಿಲ್ಲದಿರುವುದರಿಂದ ಶಬ್ದವು ಅವ್ಯಾಪ್ಯವೃತ್ತಿಯಾಗು ತ್ತದೆ. ಹಾಗೆಯೇ ಶಬ್ದದಿಂದ ಶಬ್ದ ಹುಟ್ಟುವುದರಿಂದ ದ್ವಿತೀಯ ಶಬ್ದದಿಂದ ಪ್ರಥಮ ಶಬ್ದನಾಶವಾಗುವುದರಿಂದ ಶಬ್ದವು ಕ್ಷಣಿಕ. ಆತ್ಮನಲ್ಲಿರುವ ಜ್ಞಾನಾದಿವಿಶೇಷಗುಣಗಳೂ ಕ್ಷಣಿಕ, ಅವ್ಯಾಪ್ಯವೃತ್ತಿಗಳೆಂದು ತಾರ್ಕಿಕ ಸಿದ್ಧಾಂತ. ಜ್ಞಾನವು ಎರಡು ಕ್ಷಣ ಮಾತ್ರ ಇರುತ್ತದೆ. ಆತ್ಮನು ವಿಭುವಾದುದರಿಂದ ಶರೀರಾವಚ್ಛೇದದಿಂದ ಜ್ಞಾನವುಂಟಾದರೆ ಘಟಾವಚ್ಛೇದದಿಂದ ಜ್ಞಾನಾಭಾವವಿರುತ್ತದೆ. ಆದುದರಿಂದ ಇದೂ ಅವ್ಯಾಪ್ಯವೃತ್ತಿ

'ರೂಪವತ್ತ್ವಂ' 'ದ್ರವತ್ವವತ್ತ್ವಂ' 'ಪ್ರತ್ಯಕ್ಷವಿಷಯತ್ವಂ' ಪೃಥಿವೀ, ಅಪ್ ತೇಜಸ್ಸುಗಳ ಸಾಧರ್ಮ್ಯ. ಪ್ರತ್ಯಕ್ಷಕ್ಕೆ ಗೋಚರವಾಗುವವುಗಳು ಈ ಮೂರಲ್ಲದೆ ಇವುಗಳಲ್ಲಿಯೆ, ರೂಪ ದ್ರವತ್ವಗುಣಗಳಿರುತ್ತವೆ.

ಗುರುತ್ವ, ರಸ ಈ ಎರಡು ಗುಣಗಳಿರುವವುಗಳು ಪೃಥಿವೀಜಲದ್ರವ್ಯಗಳು ಮಾತ್ರ. 'ನೈಮಿತ್ತಿಕದ್ರವತ್ವವತ್ತ್ವಂ' ಎಂಬುದು ಪೃಥಿವೀತೇಜಸ್ಸುಗಳ ಸಾಧರ್ಮ್ಯ. ಪೃಥಿ ವ್ಯಾದಿ ಪಂಚಭೂತಗಳು ಮತ್ತು ಆತ್ಮ ಈ ಆರಕ್ಕೆ 'ವಿಶೇಷಗುಣವತ್ತ್ವಂ' ಎಂಬುದು ಸಾಧರ್ಮ್ಯ. ವಿಶೇಷಗುಣಗಳು ಯಾವುವೆಂದು ಗುಣನಿರೂಪಣ ಪ್ರಕರಣದಲ್ಲಿ ಹೇಳು ತ್ತಾನೆ. ಹೀಗೆ ಯಾವುದಕ್ಕೆ ಯಾವುದು ಸಾಧರ್ಮ್ಯ ಹೇಳಿದೆಯೋ ಉಳಿದವುಗಳಿಗೆ ಅದೇ ವೈಧರ್ಮ್ಯವೆಂದು ತಿಳಿಯಬೇಕು.

ಸ್ಪರ್ಶಾದಿಗಳು ಎಂಟು, ವೇಗರೂಪ ಸಂಸ್ಕಾರ ಹೀಗೆ ೯ ವಾಯುವಿನ ಗುಣಗಳು. ಸ್ಪರ್ಶಾದಿ ಎಂಟು, ರೂಪ ವೇಗ, ದ್ರವತ್ವ, ರೂಪ, ರಸ, ಸ್ನೇಹ ಹೀಗೆ ೧೪ ನೀರಿನ ಗುಣ ಗಳು. ಸ್ನೇಹಸ್ಥಾನದಲ್ಲಿ ಗಂಧವನ್ನು ಇಟ್ಟು ಉಳಿದ ೧೩ ಸೇರಿ ೧೪ ಪೃಥಿವಿಯಗುಣ

ಗಳು. ಬುಧ್ಯಾದಿ ಆರು, ಸಂಖ್ಯಾದಿ ಐದು, ಭಾವನಾ, ಧರ್ಮ, ಅಧರ್ಮ ಎಂದು ೧೪ ಆತ್ಮನ ಗುಣಗಳು. ಸಂಖ್ಯಾದಿ ಐದು, ಕಾಲದಿಕ್ಕುಗಳ ಗುಣಗಳು. ಹಿಂದಿನ ಐದು ಮತ್ತು ಶಬ್ದ ಸೇರಿ ಆಕಾಶಕ್ಕೆ ಆರು ಗುಣಗಳು, ಸಂಖ್ಯಾದಿ ಐದು, ಬುದ್ಧಿ, ಇಚ್ಛಾ, ಯತ್ನ ಹೀಗೆ ಎಂಟು ಈಶ್ವರನ ಗುಣಗಳು.

ಸಂಖ್ಯಾದಿ ಐದು ಪರತ್ವ, ಅಪರತ್ವ, ವೇಗರೂಪ ಸಂಸ್ಕಾರ ಎಂಟು ಮನಸ್ಸಿನ ಗುಣಗಳು.

## ಪೃಥಿವೀ

ಗಂಧಗುಣವುಳ್ಳದ್ದು ಪೃಥಿವೀದ್ರವ್ಯ. ಗಂಧಸಮವಾಯಿಕಾರಣತಾವಚ್ಛೇದಕ ರೂಪವಾಗಿ ಪೃಥಿವೀತ್ವ ಜಾತಿ ಸಿದ್ಧವಾಗುತ್ತದೆ. ಪಾಷಾಣಾದಿಗಳಲ್ಲಿ ಗಂಧವು ಉದ್ಭೂತವಾಗಿ ತೋರದಿರುವುದರಿಂದ ಅಲ್ಲಿ ಗಂಧವು ಉಪಲಬ್ಧವಾಗುವುದಿಲ್ಲ. ಅಲ್ಲಿ ಗಂಧವಿಲ್ಲವೆನ್ನುವುದಾದರೆ ಅದರ ಅವಯವವಾದ ಭಸ್ಮದಲ್ಲಿ (ಪಾಷಾಣದ ಪುಡಿ) ಗಂಧ ತೋರುವುದು ಹೇಗೆ ? ಹೀಗೆ ಪೃಥಿವೀತ್ವಾಕ್ರಾಂತವಸ್ತುಗಳಲ್ಲಿ ಗಂಧವು ಇದ್ದೇ ಇರುತ್ತದೆ. ಶುಕ್ಲ, ನೀಲ, ಪೀತಾದಿ ನಾನಾರೂಪಗಳು ಕೇವಲ ಪೃಥಿವಿಯಲ್ಲಿ ಮಾತ್ರ ಇರುತ್ತವೆ. ಇಲ್ಲಿಯೂ ಅವ್ಯಾಪ್ತಿಪರಿಹಾರಕ್ಕೆ ಜಾತಿ ಘಟಿತ ಲಕ್ಷಣ ಮಾಡಬೇಕು. ವೈಶೇಷಿಕರ ಮತದಲ್ಲಿ ಪೃಥಿವೀಪರಮಾಣುಗಳಲ್ಲಿಯೇ ರೂಪನಾಶವಾಗಿ ರೂಪಾಂತರೋತ್ಪತ್ತಿಯೆಂದು ಸಿದ್ಧಾಂತ. ನ್ಯಾಯಮತದಲ್ಲಿ ಘಟಾದಿ ಅವಯವಗಳಲ್ಲಿಯೇ ರೂಪ ನಾಶವಾಗಿ ರೂಪಾಂತರ ಹುಟ್ಟುತ್ತದೆಂದು ಸಿದ್ಧಾಂತ. ಹೀಗೆ ಮಧುರಾದಿ ಆರು ರಸಗಳೂ ಪೃಥಿವಿಯಲ್ಲೇ ಇರುತ್ತವೆ. ಪೃಥಿವಿಯ ಗುಣವಾದ ಗಂಧವು ಸುರಭಿ, ಅಸುರಭಿ ಯೆಂದು ಎರಡು ರೀತಿಯಾಗಿರುತ್ತದೆ. ಪೃಥಿವಿಯಲ್ಲಿರುವ ಸ್ಪರ್ಶವು ಪಾಕದಿಂದ ಉಂಟಾಗುವುದಲ್ಲದೆ ಅದು ಅನುಷ್ಣಾಶೀತರೂಪವಾಗಿರುತ್ತದೆ. ಈ ಪೃಥಿವಿಯು ಸಾಮಾನ್ಯವಾಗಿ ನಿತ್ಯ, ಅನಿತ್ಯವೆಂದು ಎರಡು ವಿಧವಾಗಿರುತ್ತದೆ. ಪರಮಾಣುರೂಪ ಪೃಥಿವೀ ನಿತ್ಯವಾಗಿರುತ್ತದೆ. ದ್ವ್ಯಣುಕಾದಿಗಳು ಅನಿತ್ಯವಾಗಿರುತ್ತವೆ. ಅವಯವಸಹಿತವಾದುದೇ ಅನಿತ್ಯವೆಂದು ತಿಳಿಯಬೇಕು.

ಇಲ್ಲಿ ಬೌದ್ಧರು ಆಕ್ಷೇಪಿಸುತ್ತಾರೆ. ಅವಯವಗಳಿಗಿಂತ ಅವಯವಿಯೆಂದು ಬೇರೆ ಏಕೆ ಅಂಗೀಕರಿಸಬೇಕು ? ಪರಮಾಣುಗಳ ಸಮುದಾಯವೇ ಪದಾರ್ಥವೆಂದು ಅಂಗೀಕರಿಸುವುದರಿಂದ ದೋಷವೇನು ? ಪರಮಾಣು ಅತೀಂದ್ರಿಯವಾದುದರಿಂದ ಅದರ ಸಮುದಾಯವೇ ಘಟಾದಿಗಳು ಎಂದು ಒಪ್ಪಿದರೆ ಅದು ಪ್ರತ್ಯಕ್ಷವಾಗುವುದು ಹೇಗೆಂದು ಆಕ್ಷೇಪಿಸಬಾರದು. ಒಂದು ಕೂದಲು ದೂರದಿಂದ ಗೋಚರಿಸುವುದಿಲ್ಲ. ಅದೇ ಕೂದಲಿನ ಸಮುದಾಯವು ಪ್ರತ್ಯಕ್ಷ ಗೋಚರವಾಗುತ್ತದೆ. ಅದರಂತೆ ಪರಮಾಣು ಪ್ರತ್ಯಕ್ಷ ಗೋಚರವಾಗದಿದ್ದರೂ ಅದರ ಸಮುದಾಯವು ತೋರಲು ಯಾವ ಬಾಧಕವೂ ಇಲ್ಲ.

ಹೀಗೆ ಅಸಂಖ್ಯಾಕಪರಮಾಣುಗಳು ಘಟವಾದರೂ ಒಂದು ಧಾನ್ಯರಾಶಿಯೆಂಬ ಲೋಕವ್ಯವಹಾರವಿರುವಂತೆ ಘಟವೆಂಬ ವ್ಯವಹಾರವೂ ಕೂಡುತ್ತದೆ. ಹೀಗೆ ಬೌದ್ಧಮತಾನುಯಾಯಿಗಳು ಅವಯವಿ ಇಲ್ಲವೆಂದು ಸಾಧಿಸಿದರೆ ಅಲ್ಲಿ ತಾರ್ಕಿಕರು ಅನುಪಪತ್ತಿ ತೋರಿಸುತ್ತಾರೆ. ಕೇಶದೃಷ್ಟಾಂತದಿಂದ ಪರಮಾಣುಪುಂಜ ಪ್ರತ್ಯಕ್ಷವಾಗುತ್ತದೆಂದು ಸಾಧಿಸಿರುವುದು ಸರಿಯಲ್ಲ. ಕೇಶವು ದೂರದಿಂದ ತೋರದಿದ್ದರೂ ಹತ್ತಿರ ಹಿಡಿದರೆ ತೋರುತ್ತದೆ. ಪರಮಾಣು ಹಾಗಲ್ಲ. ಅದು ಯಾವಾಗಲೂ ಇಂದ್ರಿಯಗೋಚರವಲ್ಲ. ಹೀಗಿರುವಾಗ ಅವರ ಸಮುದಾಯ ರೂಪವಾದ ಘಟಾದಿಗಳು ತೋರುವುದು ಹೇಗೆ? ಅದೃಶ್ಯವಾದ ಪರಮಾಣುಗಳು ಒಟ್ಟಿಗೆ ಸೇರಿದ ಮೇಲೆ ಪ್ರತ್ಯಕ್ಷವಿಷಯವಾಗುತ್ತದೆಂದು ವಾದಿಸುವುದೂ ಸರಿಯಲ್ಲ. ಅದೃಶ್ಯದಿಂದ ದೃಶ್ಯವು ಎಂದೂ ಹುಟ್ಟುವುದಿಲ್ಲ. ಹಾಗೆ ಒಪ್ಪಿದರೆ ಚಕ್ಷುರಿಂದ್ರಿಯವೂ, ಅಥವಾ ಸುಖವೂ ಒಂದಾನೊಂದು ಕಾಲದಲ್ಲಿ ಪ್ರತ್ಯಕ್ಷವಿಷಯವಾಗಲಿ ಎಂದು ಕೇಳಬಹುದು. ಆದರೆ ಅವು ಎಂದೂ ಗೋಚರಿಸುವುದಿಲ್ಲ. ಕಾದ ಎಣ್ಣೆಯಿಂದ ಬೆಂಕಿ, ನೊರಲು ತೋರದಿರುವುದು ಹುಟ್ಟುತ್ತದೆಂದು ಹೇಳಬಹುದು. ಅಲ್ಲಿ ದೃಶ್ಯವಾದ ಸೂಕ್ಷ್ಮಕಣಗಳೇ ಸ್ಥೂಲವಾಗಿ ತೋರುವುದಲ್ಲದೆ ಅದೃಶ್ಯದಿಂದ ದೃಶ್ಯ ಹುಟ್ಟಲಿಲ್ಲ. ಹೀಗೆಯೇ ತೋರದಿರುವ ದ್ವ್ಯಣುಕದಿಂದ ತೋರುವ ತ್ರಸರೇಣು ಹೇಗೆ ಹುಟ್ಟುತ್ತದೆಂದು ನಮ್ಮನ್ನು ಆಕ್ಷೇಪಿಸಬಾರದು. ದೃಶ್ಯತ್ವ, ಅದೃಶ್ಯತ್ವವೆಂಬುವು ಒಂದು ವಸ್ತುವಿನ ಸ್ವಭಾವವಲ್ಲ. ಮಹತ್ತ್ವೋದ್ಭೂತರೂಪಾದಿಕಾರಣಕಲಾಪಗಳಿಂದ ದೃಶ್ಯತ್ವವೂ, ಅದಿಲ್ಲದಿದ್ದರೆ ಅದೃಶ್ಯತ್ವವೂ ಲೋಕದಲ್ಲಿ ಪ್ರಸಿದ್ಧವಾಗಿದೆ. ತ್ರಸರೇಣ್ವಾದಿಗಳಲ್ಲಿ ಮಹತ್ತ್ವಾದಿಗಳಿರುವುದರಿಂದ ದೃಶ್ಯತ್ವ ಬರುತ್ತದೆ. ದ್ವ್ಯಣುಕಾದಿಗಳಲ್ಲಿ ಅದಿಲ್ಲದಿರುವುದರಿಂದ ದೃಶ್ಯತ್ವವಿಲ್ಲ. ನಿನ್ನ ಮತದಲ್ಲಿ ಪರಮಾಣುವಿನಲ್ಲಿ ಮಹತ್ತ್ವಾದಿಗಳು ಇಲ್ಲದಿರುವುದರಿಂದ ಅವರ ಸಮೂಹ ಪ್ರತ್ಯಕ್ಷವಾಗುವುದು ಹೇಗೆ? ಆದುದರಿಂದ ಅವಯವ ಬೇರೆ ಅವಯವಿ ಬೇರೆಯೆಂದು ಒಪ್ಪಬೇಕು. ಇವುಗಳಿಗೆ ಉತ್ಪತ್ತಿವಿನಾಶಲೋಕಸಿದ್ಧವಾಗಿದೆ. ವಸ್ತುಗಳ ಭೇದ ಸಿದ್ಧವಾಗಬೇಕಾದರೆ ಅವಯವಕ್ಕೆ ಒಂದು ಕಡೆ ವಿಶ್ರಾಂತಿ ಹೇಳಲೇಬೇಕು. ಮಹತ್ಪರಿಮಾಣತಾರತಮ್ಯ ಗಗನಾದಿಗಳಲ್ಲಿ ವಿಶ್ರಾಂತವಾದಂತೆ ಅಣುಪರಿಮಾಣತಾರತಮ್ಯಕ್ಕೂ ಎಲ್ಲಿಯಾದರೂ ವಿಶ್ರಾಂತಿ ಹೇಳಬೇಕು. ಇದೇ ಪರಮಾಣು. ಇದು ನಿತ್ಯ. ತ್ರಸರೇಣು ನಯನಗೋಚರವಾಗುವುದರಿಂದ ಅದು ಸಾವಯವವಾಗುತ್ತದೆ. ಮಹದಾರಂಭಕವಾಗುವುದರಿಂದ ತ್ರಸರೇಣುವಿನ ಅವಯವಗಳಾದ ದ್ವ್ಯಣುಕಗಳೂ ಸಾವಯವಗಳಾಗುವುದರಿಂದ ಅನಿತ್ಯಗಳಾಗಿವೆ. ದ್ವ್ಯಣುಕಾವಯವವೂ ಸಾವಯವಗಳಾಗಲಿ ಎಂದು ಆಕ್ಷೇಪಿಸಬಾರದು. ಹೀಗೆ ಕಲ್ಪಿಸುತ್ತಾ ಹೋದರೆ ಅನವಸ್ಥೆ ಬರುವುದರಿಂದ ಪರಮಾಣುವಿನಲ್ಲಿ ವಿಶ್ರಾಂತಿ ಹೇಳಬೇಕು. ಇದು ನಿತ್ಯ. ಅಣುಪರಿಮಾಣದ ಪರಮಾವಧಿಯೂ ಇದೇ.

ಕಾರ್ಯರೂಪವಾದ ಪೃಥಿವಿಯು ಬೇರೆ ರೀತಿಯಿಂದ ಮೂರು ವಿಧವಾಗುತ್ತದೆ.

೧) ಶರೀರರೂಪ ಪೃಥಿವಿ. ಇದೂ ಯೋನಿಜ, ಅಯೋನಿಜವೆಂದು ಎರಡು ರೀತಿ

ಯಾಗಿರುತ್ತದೆ. ಯೋನಿಜವೂ ಕೂಡಾ ಜರಾಯುಜ. ಅಂಡಜವೆಂದು ಎರಡು ವಿಧ. ಮಾನುಷಾದಿಶರೀರ ಜರಾಯುಜವಾಗುತ್ತದೆ. ಸರ್ಪಾದಿಶರೀರ ಅಂಡಜ. ಅಯೋನಿಜವೂ ಸ್ವೇದಜ, ಉದ್ಭಿಜವೆಂದು ಎರಡು ವಿಧ. ಸೊಳ್ಳೆಮುಂತಾದವುಗಳು ಸ್ವೇದಜಗಳು. ವೃಕ್ಷಾದಿಗಳು ಉದ್ಭಿಜಗಳು. ಚೇಷ್ಟಾಶ್ರಯವಾದುದೇ ಶರೀರ. ಇದರಲ್ಲಿ ಜಲಾದಿಗಳಿದ್ದರೂ ಅವು ನಿಮಿತ್ತಮಾತ್ರ. ಯಾವಾಗಲೂ ಗಂಧವು ಉಪಲಬ್ಧವಾಗುವುದರಿಂದ ಅದು ಪಾರ್ಥಿವ ಶರೀರವೆಂದು ಸಿದ್ಧವಾಗುತ್ತದೆ ಅಲ್ಲಿ ಜಲಾದಿಗಳು ಒಣಗಿದಾಗ ಗಂಧ ಮಾತ್ರ ನಾಶವಾಗುವುದಿಲ್ಲ. ಸಾಂಕರ್ಯದೋಷದಿಂದ ಶರೀರತ್ವವು ಜಾತಿಯಲ್ಲವೆಂದು ಸಿದ್ಧಾಂತ. ಆಧ್ಯಾತ್ಮಿಕವಾಯು ಸಂಬಂಧವಿರುವುದರಿಂದ ವೃಕ್ಷಾದಿಗಳೂ ಶರೀರರೂಪಪೃಥಿವಿಯಲ್ಲಿಯೇ ಸೇರುತ್ತವೆ. ಕತ್ತರಿಸಿದಾಗ ಪುನಃ ಬೆಳೆಯುವುದರಿಂದ ಆಧ್ಯಾತ್ಮಿಕವಾಯುಸಂಬಂಧವಿದೆಯೆಂದು ತಿಳಿಯಬೇಕು. ಮೃತಶರೀರಾದಿಗಳಲ್ಲಿ ಚೇಷ್ಟಾ ಇಲ್ಲದಿರುವುದರಿಂದ ಅವ್ಯಾಪ್ತಿ ಹೋಗಲಾಡಿಸಲು ಹಿಂದಿನಂತೆ ಜಾತಿಘಟಿತ ಲಕ್ಷಣ ಮಾಡಬೇಕು.

ಘ್ರಾಣೇಂದ್ರಿಯ ಪಾರ್ಥಿವವಾಗಿದೆ. ಇದು ವಸ್ತುವಿನಲ್ಲಿರುವ ರೂಪಾದಿಗಳನ್ನು ಅಭಿವ್ಯಕ್ತಪಡಿಸದೆ ಕೇವಲ ಗಂಧವನ್ನು ಮಾತ್ರ ತಿಳಿಸಿಕೊಡುವುದರಿಂದ ಪಾರ್ಥಿವವೆಂದು ಸಿದ್ಧವಾಗುತ್ತದೆ.

ಉಪಭೋಗಕ್ಕೆ ಸಾಧನವಾದವುಗಳಿಗೆ ವಿಷಯಗಳೆಂದು ಹೆಸರು. ದ್ವ್ಯಣುಕಾದಿ ಬ್ರಹ್ಮಾಂಡದವರೆಗಿನ ವಸ್ತುಸಮುದಾಯವು ಪಾರ್ಥಿವವಿಷಯದಲ್ಲಿ ಸೇರುತ್ತದೆ. ಶರೀರೇಂದ್ರಿಯಗಳು ವಿಷಯಗಳಾದರೂ ವಿಶದಪ್ರತೀತಿಗೋಸ್ಕರ ಬೇರೆಯಾಗಿ ಹೇಳಿದೆ. ಯಾವುದಾದರೂ ಸಾಕ್ಷಾತ್ತಾಗಲೀ ಪರಂಪರೆಯಿಂದಾಗಲೀ ಸುಖದುಃಖಾನ್ಯತರವನ್ನು ಉಂಟುಮಾಡುವುದರಿಂದ ಎಲ್ಲವೂ ಉಪಭೋಗಸಾಧನಗಳಾಗಿವೆ.

## ಜಲ

ಜನ್ಯವಾದ ಸ್ನೇಹಕ್ಕೆ ಸಮವಾಯಿಕಾರಣವೇ ಜಲ. ಕಾರಣತಾವಚ್ಛೇದಕ ರೂಪವಾಗಿ ಜಲತ್ವಜಾತಿ ಸಿದ್ಧವಾಗುತ್ತದೆ. ಅಭಾಸ್ವರಶುಕ್ಲವರ್ಣಮಾತ್ರ, ಮಧುರ ರಸ ಮಾತ್ರ, ಶೀತಸ್ಪರ್ಶಮಾತ್ರ ಕೇವಲ ಸಾಂಸಿದ್ಧಿಕದ್ರವತ್ವ ಗುಣಗಳು ಮಾತ್ರ ಜಲದಲ್ಲಿ ಇರುತ್ತವೆ. ಜಲದಲ್ಲಿ ಮಾತ್ರ ಸ್ನೇಹವಿರುವುದು. ಯಮುನಾದಿನದೀಜಲವು ನೀಲವಾಗಿ ತೋರಿದರೂ ಅದು ಆಶ್ರಯೌಪಾಧಿಕವಾಗಿದೆ. ಪೃಥಿವೀ ಸಂಬಂಧದಿಂದ ಅದು ನೀಲವಾಗಿ ತೋರುವುದು. ಮೇಲಕ್ಕೆ ಹಾರಿಸಿದರೆ ಅದರ ಅಭಾಸ್ವರಶುಕ್ಲತ್ವ ತೋರಿಯೇ ತೋರುತ್ತದೆ. ನೀರು ಮಧುರವೆಂಬುದು ನೆಲ್ಲೀಕಾಯಿತಿಂದು ಸ್ವಲ್ಪ ನೀರು ಕುಡಿದಾಗ ಸ್ಪಷ್ಟವಾಗುತ್ತದೆ. ನಿಂಬೇಹಣ್ಣಿನ ರಸದಲ್ಲಿ ಹುಳಿ ಮುಂತಾದ ಇತರ ರಸ ತೋರಿದರೂ ಅದು ಹಿಂದಿನಂತೆ ಪೃಥಿವೀಸಂಬಂಧದಿಂದ ತೋರುವುದರಿಂದ ಆಶ್ರಯೌಪಾಧಿಕವಾಗುತ್ತದೆ. ಗಂಧದಲ್ಲಿ ಶೈತ್ಯವೂ ಕೂಡಾ ಜಲಸಂಬಂಧದಿಂದಲೇ ಆದುದರಿಂದ

ಅದೂ ಔಪಾಧಿಕ. ತೇಜಃಪರಮಾಣುಗಳ ಸಂಯೋಗದಿಂದ ಜಲದಲ್ಲಿ ಉಷ್ಣ ಪ್ರತೀತಿಯೂ ಔಪಾಧಿಕವೇ. ಜಲದಲ್ಲಿ ಪಾಕವಿಲ್ಲವೆಂದು ಸಿದ್ಧಾಂತ. ತುಪ್ಪ ಮುಂತಾದವುಗಳಲ್ಲಿರುವ ಸ್ನೇಹವು ಅವುಗಳ ಸ್ವಾಭಾವಿಕಗುಣವಲ್ಲ. ಜಲಸಂಬಂಧ ದಿಂದ ಅಲ್ಲಿ ಸ್ನೇಹ ತೋರಿದೆ ತೈಲಾದಿಗಳಲ್ಲಿ ಜಲದ ದ್ರವತ್ವವೂ. ಸ್ನೇಹಾತಿಶಯ ದಿಂದ ದಾಹಾನುಕೂಲ್ಯವೂ ಉಂಟಾಗುತ್ತದೆಂದು ಮುಂದೆ ಗುಣನಿರೂಪಣೆಯಲ್ಲಿ ಹೇಳು ತ್ತಾನೆ. ಹಿಂದಿನಂತೆ ಜಲವು ನಿತ್ಯ, ಅನಿತ್ಯವೆಂದು ಮೊದಲು ಎರಡುವಿಧ. ಪರಮಾಣುರೂಪವಾದ ಜಲ ನಿತ್ಯ. ದ್ವ್ಯಣುಕಾದಿಗಳು ಅನಿತ್ಯ. ಅನಿತ್ಯಜಲವೂ ಶರೀರ, ಇಂದ್ರಿಯ, ವಿಷಯಭೇದಗಳಿಂದ ಮೂರುವಿಧ. ಶರೀರವು ಇಲ್ಲಿ ಕೇವಲ ಅಯೋನಿಜವೆಂದೂ, ಅದು ವರುಣಲೋಕದಲ್ಲಿ ಪ್ರಸಿದ್ಧವಾಗಿದೆಯೆಂದೂ ತಿಳಿಯಬೇಕು. ಗಂಧಾದಿಗುಣಗಳನ್ನು ವ್ಯಕ್ತಪಡಿಸದೆ ರಸವನ್ನು ಮಾತ್ರ ಅಭಿವ್ಯಕ್ತಪಡಿಸುವುದರಿಂದ ರಸ ನೇಂದ್ರಿಯವು ಜಲೀಯವಾಗುತ್ತದೆ. ಸಮುದ್ರಾದಿಗಳೇ ವಿಷಯರೂಪಜಲವಾಗುತ್ತದೆ. ಹಿಮಗಡ್ಡೆ ಕಠಿಣವಾದರೂ ಅದು ಪಾರ್ಥಿವವಲ್ಲ. ಅದೃಷ್ಟವಿಶೇಷದಿಂದ ದ್ರವತ್ವ ಪ್ರತಿರೋಧವಿರುವುದರಿಂದ ಕಠಿಣಸ್ಪರ್ಶಪ್ರತ್ಯಯ ಭ್ರಾಂತಿಯೆಂದು ಸಿದ್ಧಾಂತ.

## ತೇಜಸ್ಸು

ಉಷ್ಣಸ್ಪರ್ಶಕ್ಕೆ ಆಶ್ರಯವಾದುದೇ ತೇಜಸ್ಸು. ಚಂದ್ರಕಿರಣಾದಿಗಳಲ್ಲಿ ಉಷ್ಣ ಸ್ಪರ್ಶವಿದ್ದರೂ ಅಲ್ಲಿರುವ ಜಲಸ್ಪರ್ಶದಿಂದ ಅದು ಅಭಿಭೂತವಾಗಿರುತ್ತದೆ. ರತ್ನಾದಿ ಗಳಲ್ಲಿ ಪಾರ್ಥಿವಭಾಗದಿಂದಲೂ, ಚಕ್ಷುರಿಂದ್ರಿಯದಲ್ಲಿ ಉದ್ಭೂತವಾಗದಿರುವುದರಿಂದಲೂ ಉಷ್ಣಸ್ಪರ್ಶಪ್ರತೀತವಾಗುವುದಿಲ್ಲ. ಭಾಸ್ಕರಶುಕ್ಲರೂಪಮಾತ್ರ ತೇಜಸ್ಸಿನಲ್ಲಿದೆ. ಪಾರ್ಥಿವರೂಪದಿಂದ ತಿರಸ್ಕೃತವಾದುದರಿಂದ ಅಗ್ನಿಯಲ್ಲಿ ಸ್ವಾಭಾವಿಕ ಭಾಸ್ಕರಶುಕ್ಲರೂಪ ತೋರದೆ ನಾನಾರೂಪ ತೋರುತ್ತವೆ. ಅನ್ಯರೂಪದಿಂದಲೂ ಒಂದು ವಸ್ತುವು ಗೋಚರ ವಾಗಲು ತೊಂದರೆ ಇಲ್ಲ. ಪಿತ್ತದೋಷದಿಂದ ಶಂಖ ಹಳದಿಯಾದರೂ ತೋರುತ್ತದೆ. ನೈಮಿತ್ತಿಕದ್ರವತ್ವ ಸುವರ್ಣಾದಿ ತೇಜಸ್ಸಿನಲ್ಲಿ ಪ್ರಸಿದ್ಧವಾಗಿದೆ. ತೇಜಸ್ಸಿನಲ್ಲಿಯೂ ಪರಮಾಣುರೂಪ ತೇಜಸ್ಸು ನಿತ್ಯವಾಗಿಯೂ, ಅದಕ್ಕಿಂತ ಬೇರೆಯಾದುದು (ದ್ವ್ಯಣು ಕಾದಿ) ಅನಿತ್ಯವೆಂದು ಎರಡು ವಿಧ. ಅನಿತ್ಯದಲ್ಲಿಯೂ ಶರೀರಾದಿ ಮೂರುಭೇದಗಳಿವೆ. ಅಯೋನಿಜವಾದ ಶರೀರ ಸೂರ್ಯಲೋಕಾದಿಗಳಲ್ಲಿ ಪ್ರಸಿದ್ಧವಾಗಿದೆ. ದೀಪದಂತೆ ಕಣ್ಣು (ಇಂದ್ರಿಯ) ಇತರ ವಸ್ತುಗಳ ಸ್ಪರ್ಶಾದಿಗಳನ್ನು ತಿಳಿಸಿಕೊಡದೆ ರೂಪವನ್ನು ಮಾತ್ರ ಅಭಿವ್ಯಕ್ತಪಡಿಸಿರುವುದರಿಂದ ಅದು ತೈಜಸವಾಗುತ್ತದೆ. ಅಗ್ನಿ ಮುಂತಾದವುಗಳು ವಿಷಯರೂಪ ತೇಜಸ್ಸಿನಲ್ಲಿ ಸೇರಿರುತ್ತವೆ. ತಾರ್ಕಿಕರ ಸಿದ್ಧಾಂತದಲ್ಲಿ ಸುವರ್ಣವು ತೇಜಸ್ಸಿನಲ್ಲಿಯೇ ಸೇರುತ್ತದೆ. ಪಾರ್ಥಿವ ಸಂಬಂಧದಿಂದ ಅಲ್ಲಿ ಕಾಠಿಣ್ಯಾದಿಗಳು ಪ್ರತೀತವಾಗಿವೆ. ನವೀನರು ಮಾತ್ರ ಇದನ್ನು ತೇಜಸ್ಸೆಂದು ಒಪ್ಪುವುದಿಲ್ಲ.

## ವಾಯು

ಪಾಕದಿಂದ ಉಂಟಾಗದಿರುವ (ಸ್ವಾಭಾವಿಕ) ಅನುಷ್ಣಾಶೀತಸ್ಪರ್ಶ ವಾಯುವಿನ ಅಸಾಧಾರಣ ಗುಣ. ವಿಜಾತೀಯಸ್ಪರ್ಶದಿಂದಲೂ, ವಿಲಕ್ಷಣ ಶಬ್ದದಿಂದಲೂ, ತೃಣಾದಿಗಳಧಾರಣೆಯಿಂದಲೂ ಮರಗಳಶಾಖಾಚಲನೆಯಿಂದಲೂ ವಾಯುವಿದೆಯೆಂದು ಅನುಮಾನದಿಂದ ಸಿದ್ಧಪಡಿಸಬಹುದು. ಇದು ಪ್ರತ್ಯಕ್ಷವೆಂದೂ ಕೆಲವರ ಮತ. ಪರಮಾಣು ರೂಪವಾದ ವಾಯುವು ನಿತ್ಯವೂ, ತದಿತರವೂ ಅನಿತ್ಯವೂ ಆಗಿ ಎರಡು ವಿಧವಾಗುತ್ತದೆ. ಅನಿತ್ಯವಾಯುವೂ ಮೂರು ವಿಧ. ಶರೀರವು ಇಲ್ಲಿಯೂ ಅಯೋನಿಜವೇ. ಪಿಶಾಚಾದಿಗಳ ಶರೀರ ವಾಯವೀಯವಾಗಿರುತ್ತದೆ. ಸ್ಪರ್ಶವನ್ನು ಮಾತ್ರ ಗ್ರಹಿಸುವ ತ್ವಗಿಂದ್ರಿಯವು ವಾಯವೀಯ. ಇದು ಸಕಲ ಶರೀರವ್ಯಾಪಿಯಾಗಿರುತ್ತದೆ. ಪ್ರಾಣಾದಿ ಮಹಾ ವಾಯುವಿನವರೆಗಿರುವ ವಾಯುಗಳು ವಿಷಯದಲ್ಲಿ ಸೇರುತ್ತವೆ. ಪ್ರಾಣವಾಯು ಒಂದಾದರೂ ನಾನಾಸ್ಥಾನಭೇದದಿಂದಲೂ, ಕ್ರಿಯಾಭೇದದಿಂದಲೂ ನಾನಾಸಂಜ್ಞೆ ಹೊಂದಿದೆ. ಹೃದಯದಲ್ಲಿದ್ದು ಮುಖನಾಸಿಕಗಳಿಂದ ನಿಷ್ಕ್ರಮಪ್ರವೇಶವುಳ್ಳದ್ದಕ್ಕೆ ಪ್ರಾಣವೆಂದೂ, ಗುದಸ್ಥಾನದಲ್ಲಿದ್ದು ಮಲಾದಿಗಳನ್ನು ಕೆಳಕ್ಕೆ ಒಯ್ಯುವ ವಾಯುವಿಗೆ ಅಪಾನವೆಂದೂ, ನಾಭಿಯಲ್ಲಿದ್ದು ಜಠರಾಗ್ನಿಯನ್ನು ಪ್ರಜ್ವಲಿಸುವ ವಾಯುವಿಗೆ ಸಮಾನವೆಂದೂ, ಜಠರದಲ್ಲಿದ್ದು ಅನ್ನಾದಿಗಳನ್ನು ಒಯ್ಯುವ ಗಾಳಿಗೆ ಉದಾನವೆಂದೂ, ಸರ್ವಶರೀರವ್ಯಾಪಿಯಾಗಿ ನಾಡಿಗಳಲ್ಲಿ ಸಂಚರಿಸುವ ಗಾಳಿಗೆ ವ್ಯಾನವೆಂದು ಹೆಸರು.

## ಆಕಾಶ

ಆಕಾಶ, ಕಾಲ, ದಿಕ್, ಇವು ಒಂದೊಂದೇ ಆದುದರಿಂದ ಆಕಾಶತ್ವಾದಿಗಳು ಜಾತಿಯಾಗುವುದಿಲ್ಲ. ಶಬ್ದರೂಪ ವಿಶೇಷಗುಣಕ್ಕೆ ಆಶ್ರಯವಾಗಿರುವುದು ಆಕಾಶ. ವಸ್ತುವಿರುವವರೆಗೆ ಇರುವ ಗುಣಕ್ಕೆ ಯಾವದ್ದ್ರವ್ಯಭಾವಿಯೆಂದು ಹೆಸರು. ಶಬ್ದ ಹಾಗಿಲ್ಲದೇ ಇರುವುದರಿಂದ ವಾಯ್ವಾದಿಗಳ ಗುಣವಾಗುವುದಿಲ್ಲ. ಇದರಲ್ಲಿ ಶರೀರ, ವಿಷಯಭೇದಗಳಿಲ್ಲ. ಶ್ರೋತ್ರೇಂದ್ರಿಯವು ಶಬ್ದಗ್ರಾಹಕವಾದುದರಿಂದ ಆಕಾಶವಾಗುತ್ತದೆ. ಆಕಾಶ ಒಂದಾದರೂ ಕರ್ಣಶಷ್ಕುಲ್ಯಾದಿಭೇದದಿಂದ (ಶ್ರೋತ್ರ) ನಾನಾ ರೀತಿಯಾಗಿದೆಯೆಂದು ತೋರುತ್ತದೆ

## ಕಾಲ

ಈಗ ಘಟವಿದೆಯೆಂದಾಗ ಸೂರ್ಯನಗತಿಯನ್ನು ವಿಷಯೀಕರಿಸುತ್ತದೆ. ಆಗ ಸೂರ್ಯಗತಿಗೂ ಘಟಕ್ಕೂ ಒಂದು ಸಂಬಂಧ ಕಲ್ಪಿಸಬೇಕು. ಈ ಸಂಬಂಧ ಸಂಯೋಗಾದಿಗಳಾಗುವುದಿಲ್ಲ. ಕಾಲವೇ ಈ ಸಂಬಂಧಕ್ಕೆ ಆಶ್ರಯವೆಂದು ಸಿದ್ಧವಾಗುತ್ತದೆ.

ಈ ಸಂಬಂಧಕ್ಕೆ ಕಾಲಿಕಸಂಬಂಧ ವೆನ್ನುತ್ತಾರೆ. ಇವನು ಪರ, ಇವನು ಅಪರ ಎಂಬ ಬುದ್ಧಿಗೂ ಅಸಾಧಾರಣಕಾರಣವಾದದ್ದು ಕಾಲವೇ. ಕಾಲ ಒಂದಾದರೂ

ಉಪಾಧಿಭೇದದಿಂದ ಕ್ಷಣ, ದಿನ, ಮಾಸಾದಿವ್ಯವಹಾರವನ್ನು ಹೊಂದುತ್ತದೆ. ಕ್ಷಣ ಸಮುದಾಯವೇ ದಿನಾದಿಗಳು. ಸಾಂಖ್ಯರು ಉಪಾಧಿಯೇ ಕಾಲವಲ್ಲದೆ ಅದೊಂದು ಬೇರೆ ಪದಾರ್ಥವೆಂದು ಅಂಗೀಕರಿಸುವುದಿಲ್ಲ.

## ದಿಕ್

ಇದು ದೂರ, ಇದು ಹತ್ತಿರವೆಂಬ ಬುದ್ಧಿಗೆ ಅಸಾಧಾರಣಕಾರಣವಾದುದು ದಿಕ್. ಇದರ ಸಂಬಂಧಕ್ಕೆ ದೈಶಿಕಸಂಬಂಧವೆಂದು ಹೆಸರು. ಇದೂ ಕೂಡಾ ಒಂದಾದರೂ ಉಪಾಧಿಭೇದದಿಂದ ನಾನಾ ಆಗಿರುತ್ತದೆ. ಪ್ರಾಚೀನರು ಮೇರು ಪರ್ವತವನ್ನ ವಧಿಯಾಗಿಟ್ಟುಕೊಂಡು ಪೂರ್ವಾದಿಭೇದಗಳನ್ನು ಹೇಳಿರುತ್ತಾರೆ.

## ಆತ್ಮಾ

ಸುಖದುಃಖಾದಿಗಳಿಗೆ ಸಮವಾಯಿಕಾರಣನಾದವನು ಆತ್ಮಾ. ಈಶ್ವರನಲ್ಲಿ ಅದೃಷ್ಟಾದಿ ಸಹಕಾರಿಕಾರಣ ಇಲ್ಲದಿರುವುದರಿಂದ ಸುಖದುಃಖಾದ್ಯುತ್ಪತ್ತಿ ಇಲ್ಲ. ಕೆಲವರು ಜ್ಞಾನಾಶ್ರಯನಾದವನೇ ಆತ್ಮಾ. ಇವನು ಇಂದ್ರಿಯಗಳಿಗೂ, ಶರೀರಕ್ಕೂ ಪರಂಪರೆಯಿಂದ ಚೈತನ್ಯವನ್ನೊದಗಿಸಿ ಕೊಡುತ್ತಾನೆ. 'ನಾನು ಸುಖಿಯಾಗಿದ್ದೇನೆ.' ಎಂಬ ಪ್ರತೀತಿಯಿಂದ ಆತ್ಮನು ಪ್ರತ್ಯಕ್ಷಗೋಚರನಾದರೂ ಕೆಲವರು ಶರೀರಾದಿಗಳೇ ಆತ್ಮನೆಂದು ತಿಳಿದಿರುವುದರಿಂದ ಶರೀರಾದಿವ್ಯತಿರಿಕ್ತ ಆತ್ಮನಿದ್ದಾನೆಂದು ಸಾಧಿಸಿರುತ್ತಾರೆ. ಕೊಡಲಿ ಮುಂತಾದ ಕರಣಗಳು ಕರ್ತೃ ಇಲ್ಲದೆ ಫಲಸಾಧಕಗಳಾಗಲಾರವು- ಅದರಂತೆ ಇಂದ್ರಿಯರೂಪಕರಣಗಳೂ ಒಬ್ಬ ಕರ್ತೃ ಇಲ್ಲದೆ ಫಲಸಾಧಕಗಳಾಗಲಾರವು. ಆ ಕರ್ತೃವೇ ಆತ್ಮ. ಆ ಕರ್ತೃ ಶರೀರವಾಗಲಿ ಎಂದು ಆಪಾದಿಸಲು ಯುಕ್ತಿ ಇಲ್ಲ. ಮೃತ ಶರೀರವಿದ್ದರೂ ಇಂದ್ರಿಯವ್ಯಾಪಾರವಾಗುವುದಿಲ್ಲ- ಅದೂ ಅಲ್ಲದೆ ಬಾಲ್ಯಾದಿ ಅವಸ್ಥಾ ಭೇದದಿಂದ ಶರೀರಭೇದವುಂಟಾಗುವುದರಿಂದ ಬಾಲ್ಯದಲ್ಲಿ ಅನುಭೂತವಾದದ್ದು ವೃದ್ಧಾವಸ್ಥೆ ದಲ್ಲಿ ಸ್ಮರಣೆಬಾರದೇ ಹೋಗಬೇಕಾಗುತ್ತದೆ. ಆತ್ಮನೊಬ್ಬನು ಬೇರೆ ಇದ್ದಾನೆಂದು ಅಂಗೀಕರಿಸಿದರೆ ಶಿಶುವಿಗೆ ಸ್ತನ್ಯಪಾನದಲ್ಲಿ ಪ್ರವೃತ್ತಿ ಹುಟ್ಟುತ್ತದೆ. ಕಾರ್ಯಪ್ರವೃತ್ತಿಗೆ ಇಷ್ಟಸಾಧನತಾಜ್ಞಾನವು ಕಾರಣವಾದುದರಿಂದ ಹುಟ್ಟಿದ ಮಗುವಿಗೆ ಜನ್ಮಾಂತರದಲ್ಲಿ ಅನುಭೂತವಾದ ಇಷ್ಟಸಾಧನತಾಜ್ಞಾನವಿರುವುದರಿಂದ ಈಗ ಪ್ರವೃತ್ತಿ ಸಮಂಜಸವಾಗು ತ್ತದೆ. ಉದ್ಬೋಧಕಸಾಮಗ್ರಿ ಇಲ್ಲದಿರುವುದರಿಂದ ಜನ್ಮಾಂತರಾನುಭೂತಗಳಾದ ಇತರ ವಿಷಯಸ್ಮರಣೆ ಬರುವುದಿಲ್ಲ. ಸಂಸಾರ ಅನಾದಿಯಾದುದರಿಂದ ಆತ್ಮನೂ ಅನಾದಿ ಯಾಗುವುದರಿಂದ ಅನಾದಿಭಾವಪದಾರ್ಥಕ್ಕೆ ನಾಶವಿಲ್ಲದಿರುವುದರಿಂದ ಆತ್ಮನು ನಿತ್ಯ ನೆಂದೂ ಸಿದ್ಧವಾಗುತ್ತದೆ.

ಚಕ್ಷುರಾದಿ ಇಂದ್ರಿಯಗಳೇ ಆತ್ಮನಾಗಲಿ ಎಂದು ಕೆಲವರು ಆಕ್ಷೇಪಿಸುತ್ತಾರೆ.

ಇದೂ ಸರಿಯಲ್ಲ. ಬಾಲ್ಯದಲ್ಲಿ ಚಕ್ಷುರಿಂದ್ರಿಯದಿಂದ ಒಂದು ವಿಷಯವನ್ನು ಅನುಭವಿಸಿರುತ್ತಾನೆ. ಮಧ್ಯವಯಸ್ಸಿನಲ್ಲಿ ಕಣ್ಣು ನಾಶವಾಗುತ್ತದೆ. ಆಗ ಪೂರ್ವಾನುಭೂತ ವಿಷಯದ ಸ್ಮೃತಿ ಬಾರದೇ ಹೋಗುವುದಲ್ಲದೆ. ಒಬ್ಬನು ಅನುಭವಿಸಿದ್ದನ್ನು ಇನ್ನೊಬ್ಬನು ಸ್ಮರಿಸುವ ಪ್ರಸಂಗ ಬರಬೇಕಾಗುತ್ತದೆ. ಇದು ಎಲ್ಲಿಯೂ ಇಲ್ಲ.

ಹೀಗೆಯೇ ಮನಸ್ಸೂ ಆತ್ಮನೆಂಬವಾದ ಸರಿಯಲ್ಲ. ಪ್ರತ್ಯಕ್ಷದಲ್ಲಿ ಮಹತ್ವವೂ ಕಾರಣ. ಮನಸ್ಸು ನಿತ್ಯವಾದರೂ ಮಹತ್ಪರಿಮಾಣವಿಶಿಷ್ಟವಲ್ಲ. ಅದು ಅಣುವಾದುದರಿಂದ ಅದರಲ್ಲಿ ಜ್ಞಾನಸುಖಾದಿಗಳಿರುವುದಾದರೆ ಅವುಗಳ ಪ್ರತ್ಯಕ್ಷವಾಗದೇ ಹೋಗಬೇಕಾಗುತ್ತದೆ. ಮನಸ್ಸು ಅಣುವೆಂದು ಮುಂದೆ ಸಿದ್ಧಪಡಿಸುತ್ತಾನೆ.

ಬೌದ್ಧಾನುಯಾಯಿಗಳು ವಿಜ್ಞಾನವನ್ನೇ ಆತ್ಮನೆಂದು ಅಂಗೀಕರಿಸಿರುತ್ತಾರೆ. ಅವರ ಸಿದ್ಧಾಂತ,—ಇದು ಸ್ವತಃಪ್ರಕಾಶವಾದುದರಿಂದ ಚೇತನವಾಗುತ್ತದೆ. ಸುಖದುಃಖಾದಿಗಳು ಜ್ಞಾನದ ಆಕಾರವಿಶೇಷಗಳೇ. ಇದು ಭಾವಪದಾರ್ಥವಾದುದರಿಂದ ಕ್ಷಣಿಕ. ಪೂರ್ವಪೂರ್ವವಿಜ್ಞಾನಕ್ಕೆ ಉತ್ತರೋತ್ತರವಿಜ್ಞಾನಕಾರಣವಾಗುವುದರಿಂದ ಸುಷುಪ್ತಿಯಲ್ಲಿಯೂ ಆಲಯವಿಜ್ಞಾನವನ್ನಂಗೀಕರಿಸಿರುವುದರಿಂದ ಯಾವದೋಷಕ್ಕೂ ಅವಕಾಶವಿಲ್ಲ. ಒಂದು ಬಟ್ಟೆಯ ಒಂದು ಪದರಿನಲ್ಲಿ ಹಾಕಿದ ಕಸ್ತೂರಿಪರಿಮಳ ಕೆಳಗಿನಪದರುಗಳಲ್ಲಿ ಸಂಕ್ರಾಂತವಾಗುವಂತೆ ಪೂರ್ವಪೂರ್ವ ವಿಜ್ಞಾನದಿಂದ ಉಂಟಾದ ಸಂಸ್ಕಾರವು ಉತ್ತರೋತ್ತರವಿಜ್ಞಾನದಲ್ಲಿ ಸಂಕ್ರಾಂತವಾಗುವುದರಿಂದ ಸ್ಮರಣೆ ಬರಲೂ ಯಾವ ತೊಂದರೆಯೂ ಇಲ್ಲ. ಹೀಗೆ ಅವನು ವಾದಿಸಿದರೂ ಅದು ಸಮಂಜಸವಾಗಲಾರದು. ಜ್ಞಾನವು ಸವಿಷಯಕವಾದುದರಿಂದ ಸುಷುಪ್ತ್ಯಾದಿಗಳಲ್ಲಿಯೂ ವಿಷಯಾವಭಾಸವಾಗಬೇಕಾಗುತ್ತದೆ. ಅದು ಜಗದ್ವಿಷಯವೆಂದರೆ ಆಗ ಸರ್ವಜ್ಞತ್ವ ಬರಬೇಕಾಗುತ್ತದೆ. ಯಾವುದಾದರೊಂದನ್ನು ವಿಷಯೀಕರಿಸುತ್ತದೆಯೆಂದರೆ ಆಗ ವಿನಿಗಮನಾವಿರಹದೋಷವುಂಟಾಗುತ್ತದೆ. ಸುಷುಪ್ತಿಕಾಲದಲ್ಲಿ ನಿರಾಕಾರವಾದ ಚಿತ್ಸಂತತಿಯುಂಟಾಗುತ್ತದೆಯೆಂದರೆ ಆಗ ಅದು ಸ್ವಪ್ರಕಾಶವೆಂಬುದರಲ್ಲಿ ಪ್ರಮಾಣವಿಲ್ಲ. ಸ್ವಪ್ರಕಾಶಬೇಡವೆಂದರೆ ಘಟಾದಿಗಳೂ ಜ್ಞಾನವಾಗಬೇಕಾಗುತ್ತದೆ. ವಿಜ್ಞಾನಕ್ಕಿಂತ ಬೇರೆ ವಸ್ತುವೇ ಇಲ್ಲದಿರುವುದರಿಂದ ಘಟವೂ ವಿಜ್ಞಾನವಾಗಲಿ ಎಂದು ಆಪಾದಿಸುವುದೂ ಸರಿಯಲ್ಲ. ಜ್ಞಾನಕ್ಕೆ ಘಟವು ವಿಷಯವೆಂದು ಲೋಕಪ್ರಸಿದ್ಧವಾಗಿರುವಾಗ ಜ್ಞಾನವೇ ಅದಾಗುವುದಿಲ್ಲ. ಜ್ಞಾನದ ಆಕಾರವಿಶೇಷವೇ ಘಟಪಟಾದಿಗಳೆಂದರೆ ಆ ಆಕಾರ ಜ್ಞಾನಕ್ಕಿಂತ ಬೇರೆಯಾಗಿರುತ್ತದೆಯೆಂದರೆ ಜ್ಞಾನಕ್ಕಿಂತ ಬೇರೆಯಾದುದನ್ನು ಒಪ್ಪಿದಂತಾಗುತ್ತದೆ. ಜ್ಞಾನಕ್ಕಿಂತ ಬೇರೆಯಾಗುವುದಿಲ್ಲವೆಂದರೆ ಆಗ ಸಮೂಹಾಲಂಬನಜ್ಞಾನದಲ್ಲಿ ನೀಲಾಕಾರವೂ ಪೀತಾಕಾರವಾಗಬೇಕಾಗುತ್ತದೆ. ಸ್ವರೂಪದಿಂದ ವಿಜ್ಞಾನಕ್ಕಿಂತ ಯಾವುದೂ ಬೇರೆಯಲ್ಲವಷ್ಟೆ. ಅನೀಲವ್ಯಾವೃತ್ತವಾದದ್ದು (ಅಪೋಹರೂಪ) ನೀಲರೂಪವೆನ್ನುವುದಾದರೆ ವಿರುದ್ಧವಾದ ನೀಲತ್ವಾದಿಗಳು ಒಂದರಲ್ಲಿ ಒಂದು ಸೇರುವುದು ಹೇಗೆ ? ಬೌದ್ಧ ಮತದಲ್ಲಿ ವಿರುದ್ಧನಿಶ್ಚಯವೇ ಇಲ್ಲದಂತಾದೀತು. ಅವರ ವಾಸನಾ

ಸಂಕ್ರಾಂತಿಯನ್ನೂ ಒಪ್ಪಿದರೆ ತಾಯಿ ಮಗ ಇವರಲ್ಲಿಯೂ ವಾಸನಾಸಂಕ್ರಮ ಬರಬೇಕಾಗುತ್ತದೆ. ಉತ್ತರತ್ರ ವಾಸನಾಹುಟ್ಟುತ್ತದೆಂದರೆ ಉತ್ಪಾದಕನಾರು ? ಚಿತ್ತೇ ಉತ್ಪಾದಕವೆಂದರೆ ಆನಂತ್ಯದೋಷಬರುತ್ತದೆ. ಕ್ಷಣಿಕವಿಜ್ಞಾನದಲ್ಲಿಯೇ ಶಕ್ತಿವಿಶೇಷ ಕಲ್ಪಿತವಾಗುತ್ತದೆಯೆಂದರೆ ಹಾಗೆ ಕಲ್ಪಿಸುವುದರ ಪ್ರಮಾಣವೂ ಇಲ್ಲ. ಗೌರವ ದೋಷವೂ ಬರುತ್ತದೆ.

'ಅವಿನಾಶೀ ವಾಽರೇಽಯಮಾತ್ಮಾ' 'ಸತ್ಯಂಜ್ಞಾನಮನಂತರಂ—ಬ್ರಹ್ಮ' ಇತ್ಯಾದಿ ಶ್ರುತಿಪ್ರಮಾಣದಿಂದ ನಿತ್ಯಜ್ಞಾನನೇ ಆತ್ಮನೆಂದು ವೇದಾಂತಿಗಳು ಹೇಳುತ್ತಾರೆ. ಇದೂ ಸರಿಯಲ್ಲ. ನಿರ್ವಿಷಯನಾದ ಪದಾರ್ಥವೇ ಜ್ಞಾನವೆಂಬುವದಲ್ಲಿ ಪ್ರಮಾಣವಿಲ್ಲ. ಆತ್ಮನೂ ಸವಿಷಯ ಎಂದೂ ಆಗುವುದಿಲ್ಲ 'ಸತ್ಯಂ ಜ್ಞಾನಂ—' ಎಂಬ ಶ್ರುತಿಯು ಜೀವ ಭಿನ್ನವಾದ ಬ್ರಹ್ಮನನ್ನು ಉಪದೇಶಿಸುತ್ತದೆ. ಜ್ಞಾನ, ಅಜ್ಞಾನ, ಸುಖದುಃಖಾದಿಗಳಿಂದ ಜೀವಾತ್ಮರೇ ಪರಸ್ಪರ ಭಿನ್ನರಾಗಿದ್ದಾರೆಂದು ಪ್ರಸಿದ್ಧವಾಗಿದೆ. ಜೀವೇಶ್ವರರೂ ಪರಸ್ಪರ ಭಿನ್ನರಾಗಿದ್ದಾರೆಂದು ಹೇಳಬೇಕಾಗಿಲ್ಲ. ಹೀಗೆ ಒಪ್ಪದಿದ್ದರೆ ಬಂಧಮೋಕ್ಷವ್ಯವಸ್ಥೆಯೇ ಸಿದ್ಧಿಸಲಾರದು. ಈಶ್ವರಾಭೇದಬೋಧಕಶ್ರುತಿಗಳಿಗೆ ಸ್ತೋತ್ರದಲ್ಲಿ ತಾತ್ಪರ್ಯ ಹೇಳಬೇಕು. ಅಭೇದಭಾವನೆಯಿಂದ ವರ್ತಿಸಬೇಕೆಂದು ಅರ್ಥವಾದ (ಅಡ್ವರ್ಟೈಸ್) ರೀತಿಯಿಂದ ಹೇಳಿದೆ. ಜೀವೇಶ್ವರಭೇದ ನಿತ್ಯವಾಗಿರುವಾಗ ಮೋಕ್ಷದೆಶೆಯಲ್ಲಿ ಅಭೇದ ಬರುವುದಾದರೂ ಹೇಗೆ ? ಭೇದನಾಶವಾದರೂ ವ್ಯಕ್ತಿದ್ವಯವಿದ್ದೇ ಇರುತ್ತದೆ. ನಿರ್ಧರ್ಮಕಬ್ರಹ್ಮನಲ್ಲಿ ವೇದಾಂತಿಯು ಸತ್ಯತ್ವಾದಿಗಳನ್ನಂಗೀಕರಿಸುವಂತೆ ದ್ವಿತ್ವಾಭಾವದಲ್ಲಿಯೂ ವ್ಯಕ್ತಿದ್ವಯಾಂಗೀಕಾರದಲ್ಲಿ ಯಾವ ಬಾಧೆಯೂ ಇಲ್ಲ. ಸಂಪದಧಿಕವಾದಾಗ ಹೇಗೆ ಪುರೋಹಿತನೇ ರಾಜನಾಗಿದ್ದಾನೆ ಎಂದು ಲೋಕವ್ಯವಹಾರವಿರುವಂತೆ ದುಃಖವಿಲ್ಲದಿರುವುದರಿಂದ ಈಶ್ವರಸಾಮ್ಯವನ್ನು ವೇದವು ಬೋಧಿಸುತ್ತದೆ. ಇದೇ 'ನಿರಂಜನಃ ಸಾಮ್ಯಮುಪೈತಿ' ಇತ್ಯಾದಿಶ್ರುತಿಗಳಿಂದ ಅಭಿವ್ಯಕ್ತವಾಗುತ್ತದೆ. ಈಶ್ವರನೂ ಜ್ಞಾನರೂಪ ಅಥವಾ ಸುಖರೂಪನಲ್ಲ. ಅವನು ಜ್ಞಾನಕ್ಕೆ ಆಶ್ರಯ. 'ನಿತ್ಯಂ ವಿಜ್ಞಾನಂ—' ಇತ್ಯಾದಿಶ್ರುತಿಗಳಲ್ಲಿ ವಿಜ್ಞಾನಪದಕ್ಕೆ ಜ್ಞಾನಾಶ್ರಯನೆಂದೇ ಅರ್ಥ. ಇದನ್ನು 'ಯಃ ಸರ್ವಜ್ಞಃಸ ಸರ್ವವಿತ್' ಇತ್ಯಾದಿವಾಕ್ಯಗಳು ಸಮರ್ಥಿಸುತ್ತವೆ. ಆನಂದಪದಕ್ಕೆ ಆನಂದವುಳ್ಳವನೆಂದರ್ಥ. ಹೀಗೆ ಅರ್ಥಮಾಡದಿದ್ದರೆ 'ಆನಂದಃ' ಎಂದು ಪುಲ್ಲಿಂಗವಾಗಬೇಕಾಗುತ್ತದೆ. ಆದುದರಿಂದ ನಿತ್ಯವಿಜ್ಞಾನ, ಆನಂದವುಳ್ಳವನು ಈಶ್ವರನೆಂದು ತಿಳಿಯಬೇಕು.

ಸಾಂಖ್ಯರ ಪುರುಷವಾದವೂ ಸಮಂಜಸವಲ್ಲ. ಅವರು ಜಡವಾದ ಅಚೇತನವಾದ ಪ್ರಕೃತಿಯೇ ಪ್ರಪಂಚಕರ್ತೃ, ಪುರುಷನಾದರೋ ತಾವರೆಯ ಎಲೆಯಮೇಲಿನ ನೀರಿನಂತೆ ನಿರ್ಲಿಪ್ತನು ಎನ್ನುತ್ತಾರೆ. ಕಾರ್ಯಕಾರಣಗಳಿಗೆ ಅಭೇದವಿರುವುದರಿಂದ ಕಾರ್ಯನಾಶವಾಯಿತೆಂದರೆ ಆಗ ಕಾರ್ಯರೂಪವಾಗಿ ಪುರುಷನಾಶವಾಗದಿರುವುದರಿಂದ ಅವನು ಯಾವುದಕ್ಕೂ ಕಾರಣನಲ್ಲ. ಪ್ರಕೃತಿಯಿಂದ ಬುದ್ಧಿಯೆಂಬ ಮಹತ್ತತ್ವ ಹುಟ್ಟುತ್ತದೆ.

ಅದೂ ಜಡ-ಅಚೇತನ. ಚೇತನನಾದ ಪುರುಷಸಂಬಂಧದಿಂದ ಚೇತನದಂತೆ ತೋರುತ್ತದೆ. ಬುದ್ಧಿ ಅಥವಾ ಅಂತಃಕರಣದ ಸಂಬಂಧದಿಂದ ಪುರುಷನಿಗೆ ಸಂಸಾರವೂ ಅಸಂಬಂಧದಿಂದ ಮೋಕ್ಷವೂ ಉಂಟಾಗುತ್ತದೆ. ಇದು ತೈಜಸವಾದುದರಿಂದ ಇಂದ್ರಿಯರೂಪ ಪ್ರಣಾಲಿಯಿಂದ ಘಟಾದಿರೂಪಪರಿಣಾಮ ಹೊಂದುತ್ತದೆ. ಇದೇ ಜ್ಞಾನ. ಬುದ್ಧಿಯ ವಿಷಯಾಕಾರವಾದ ಪರಿಣಾಮಕ್ಕೆ ವೃತ್ತಿ ಅಥವಾ ಜ್ಞಾನವೆಂದು ಹೆಸರು. ಬುದ್ಧಿ ಪುರುಷರಿಗೆ ಪರಸ್ಪರಭೇದ ಗೃಹೀತವಾಗದಿರುವದರಿಂದ ಬುದ್ಧಿಯಲ್ಲಿರುವ ಕರ್ತೃತ್ವವು ಪುರುಷನಲ್ಲಿಯೂ, ಪುರುಷನಲ್ಲಿರುವ ಚೈತನ್ಯವು ಬುದ್ಧಿಯಲ್ಲಿಯೂ ತೋರುತ್ತದೆ. ಬುದ್ಧಿಯು ಕನ್ನಡಿಯಂತೆ ಸ್ವಚ್ಛವಾದ ಪದಾರ್ಥ. 'ನಾನು ಈ ಘಟರೂಪಕಾರ್ಯವನ್ನು ಮಾಡುತ್ತೇನೆ' ಎಂಬಲ್ಲಿ ಮೂರು ಅಂಶ ಒಂದೆಡೆ ಇದ್ದುದಾಗಿ ತೋರುತ್ತದೆ. ಅಲ್ಲಿ ಕೆಲವು ವಾಸ್ತವ, ಕೆಲವು ಅವಾಸ್ತವ. ಕನ್ನಡಿಸ್ವಚ್ಛವಾದುದರಿಂದ ಅದರಲ್ಲಿ ವಾಸ್ತವವಲ್ಲದ ಮುಖಸಂಬಂಧ ತೋರುತ್ತದೆ. ಹಾಗೆ ಸ್ವಚ್ಛತೋಪಾಧಿಯಿಂದ ಬುದ್ಧಿಯಲ್ಲಿ ಮದಂಶವು ಪುರುಷನತಾದಾತ್ಮ್ಯವಿಲ್ಲದಿದ್ದರೂ ತಾದಾತ್ಮ್ಯಭ್ರಮೆಯಿಂದ ಪುರುಷಸಂಬಂಧ ತೋರುತ್ತದೆ. ಈ ಘಟರೂಪಕಾರ್ಯವೆಂಬ ವಿಷಯೋಪರಾಗವು ಇಂದ್ರಿಯ ಪ್ರಣಾಲಿಕೆಯಿಂದ ಹೊರಗೆ ಹೋಗಿ ಪರಿಣತಿಹೊಂದಿರುವುದರಿಂದ ತಾತ್ವಿಕವಾಗಿದೆ. ಕನ್ನಡಿಯಲ್ಲಿ ನಿಃಶ್ವಾಸದಿಂದ ಮಾಲಿನ್ಯವುಂಟಾದಂತೆ ಸಹಜವಾದುದೆಂದರ್ಥ. ಮಾಡುವುದು ಎಂಬುದು ವ್ಯಾಪಾರಾಂಶ. ದರ್ಪಣದ ಮಾಲಿನ್ಯದಿಂದ ಮುಖಮಾಲಿನ್ಯ ತೋರುವಂತೆ ಬುದ್ಧಿಪರಿಣಾಮಜ್ಞಾನದಿಂದ ಪುರುಷನಿಗೆ ತಾತ್ವಿಕವಲ್ಲದಸಂಬಂಧ ತೋರುತ್ತದೆ. ಹೀಗೆ ಬುದ್ಧಿಯ ಸುಖದುಃಖಾದಿಗಳೂ ತಾದಾತ್ಮ್ಯಭ್ರಮೆಯಿಂದ ಪುರುಷನಲ್ಲಿ ಆರೋಪಿತವಾಗುತ್ತವೆ. ಈ ಬುದ್ಧಿಯು ಪರಿಣಾಮಿಯಾದುದರಿಂದ ಎಂದೂ ಚೇತನವಾಗುವುದಿಲ್ಲ. ಈ ಆರೋಪಿತಸಂಬಂಧತ್ಯಾಗವೇ ಮೋಕ್ಷವೆಂದು ಸಾಂಖ್ಯರ ಸಿದ್ಧಾಂತ. ಇದೂ ಸರಿಯಲ್ಲ. ಜೀವನಲ್ಲಿ ಚೈತನ್ಯ ತೋರಿದಮೇಲೆ ತತ್ಸಾಮಾನಾಧಿಕರಣ್ಯದಿಂದ ಜ್ಞಾನದುಃಖಾದಿಗಳೂ ಅನುಭೂತವಾಗುವುದು ಪ್ರಸಿದ್ಧವಾಗಿದೆ. 'ಚೇತನನಾದ ನಾನು ತಿಳಿಯುತ್ತೇನೆ' ಎಂಬಲ್ಲಿ ಜ್ಞಾನ, ಚೈತನ್ಯ ಒಂದೆಡೆಯೇ ತೋರುತ್ತದೆ. ಆದುದರಿಂದ ಕೃತಿ, ಸುಖದುಃಖಾದಿಗಳು ಜೀವನಧರ್ಮಗಳೇ. ಬುದ್ಧಿಯ ಧರ್ಮವಲ್ಲ ಬುದ್ಧಿಯಲ್ಲಿ ಚೈತನ್ಯಾಂಶ ಭ್ರಮವಾದಂತೆ ಕೃತ್ಯಾದಿಧರ್ಮಗಳೂ ಭ್ರಾಂತಿಯಿಂದ ಏಕೆ ತೋರಬಾರದು ? ಬುದ್ಧಿ ನಿತ್ಯವೆಂದರೆ ಎಂದೂ ಮೋಕ್ಷವೇ ಇಲ್ಲದಂತಾಗುತ್ತದೆ. ಅನಿತ್ಯವೆಂದರೆ ಬುದ್ಧಿಯು ಪೂರ್ವದಲ್ಲಿ ಸಂಸಾರವೇ ಇಲ್ಲವೆಂದಾಗುತ್ತದೆ. ಆದರೆ ಸಂಸಾರ ಅನಾದಿಯೆಂದು ಲೋಕಪ್ರಸಿದ್ಧವಾಗಿದೆ. ಪ್ರಕೃತ್ಯಾದಿಕಲ್ಪನೆಯಲ್ಲಿ ಪ್ರಮಾಣವಿಲ್ಲ. 'ಪ್ರಕೃತೇಃಕ್ರಿಯಮಾಣಾನಿ—' ಇತ್ಯಾದಿ ಪ್ರಮಾಣವಚನಗಳಿವೆಯೆಂದರೆ ಅಲ್ಲಿ ಪೂರ್ವಪರವಾಕ್ಯಾರ್ಥನಿರ್ಣಯದಿಂದ ಪ್ರಕೃತಿಪದಕ್ಕೆ ಅದೃಷ್ಟವೆಂದು ಅರ್ಥ ಸಿದ್ಧವಾಗುವುದರಿಂದ ಸಾಂಖ್ಯಾಭಿಮತವಾದ ಪ್ರಕೃತಿ, ಮಹತ್ತತ್ವಾದಿಪದಾರ್ಥಕಲ್ಪನೆಯಲ್ಲಿ ಯಾವ ಪ್ರಮಾಣವೂ ಇಲ್ಲ.

ಧರ್ಮಾಧರ್ಮಗಳಿಗೆ ಆಶ್ರಯನು ಆತ್ಮಾ. ಒಂದು ಶರೀರದಲ್ಲಿ ಮಾಡಿದ ಕರ್ಮ ಫಲ ಇನ್ನೊಂದು ಶರೀರದಲ್ಲಿ ಅನುಭೂತವಾಗುವುದರಿಂದ ಇವುಗಳಿಗೆ ಆಶ್ರಯ ಶರೀರ ವೆಂದು ಹೇಳಲು ಸಾಧ್ಯವಿಲ್ಲ. ಜ್ಞಾನಸುಖಾದಿವಿಶೇಷಗುಣಸಂಬಂಧದಿಂದ ಆತ್ಮನು ಪ್ರತ್ಯಕ್ಷಗೋಚರನಾಗುತ್ತಾನೆ. ರಥಗಮನದಿಂದ ಸಾರಥಿಯು ಅನುಮಿತನಾಗುವಂತೆ ಪರದೇಹದಲ್ಲಿ ಚೇಷ್ಟೆಯಿಂದ ಆತ್ಮನು ಇದ್ದಾನೆಂದು ಅನುಮಾನ ಮಾಡಬಹುದು. ಜ್ಞಾನೇಚ್ಛಾಪ್ರಯತ್ನಗಳು ಶರೀರಧರ್ಮವಾಗುವುದಿಲ್ಲ. ಪ್ರಯತ್ನದಿಂದ ಚೇಷ್ಟೆ ಉಂಟಾಗುತ್ತದೆ. ಇದರಿಂದ ಕೃತ್ಯಾದಿಧರ್ಮವಿಶಿಷ್ಟ ಆತ್ಮನು ಇದ್ದಾನೆಂದು ಎಲ್ಲರೂ ತಿಳಿಯಬಹುದು. ರೂಪಾದಿಗಳಿಲ್ಲದಿರುವುದರಿಂದ ಚಕ್ಷುರಾದಿ ಇಂದ್ರಿಯಗಳಿಗೆ ಗೋಚರ ವಾಗದೆ ಕೇವಲ ಮನಸ್ಸಿಗೆ ಮಾತ್ರ ಈ ಆತ್ಮನು ಗೋಚರಿಸುತ್ತಾನೆ. ಮಾನಸಪ್ರತ್ಯಕ್ಷ ಮಾತ್ರ ವಿಷಯನೆಂದು ತಾತ್ಪರ್ಯ. 'ಅಹಂ' ಎಂಬ ಜ್ಞಾನಕ್ಕೆ ವಿಷಯನಾದವನೇ ಆತ್ಮಾ. ಇವನು ಪರಮಮಹತ್ಪರಿಮಾಣವುಳ್ಳವನು. ಸುಖದುಃಖಾದಿಗಳೇ ಆತ್ಮ ರೂಪದ್ರವ್ಯಸಾಧನೆಯಲ್ಲಿ ಲಿಂಗಗಳೆಂದು ವೈಶೇಷಿಕಸೂತ್ರದಲ್ಲಿ ಹೇಳಿದೆ.

## ಬುದ್ಧಿ

ಪ್ರಸಂಗಸಂಗತಿಯಿಂದ ಬುದ್ಧಿಯು ನಿರೂಪಿತವಾಗಿದೆ. ಅನುಭವ, ಸ್ಮರಣವೆಂದು ಇದು ಎರಡುವಿಧವಾಗಿದೆ. ಅನುಭವವೂಕೂಡಾ ಪ್ರತ್ಯಕ್ಷ, ಅನುಮಿತಿ, ಉಪಮಿತಿ, ಶಾಬ್ದವೆಂದು ನಾಲ್ಕುವಿಧವಾಗುತ್ತದೆ. ಇವುಗಳಿಗೆ ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದಗಳು ಕ್ರಮವಾಗಿ ಕಾರಣವಾಗುತ್ತವೆ. ಇಂದ್ರಿಯಗಳಿಂದಉಂಟಾದ ಜ್ಞಾನಕ್ಕೆ ಪ್ರತ್ಯಕ್ಷವೆಂದು ಹೆಸರು. ಈಶ್ವರನ ಪ್ರತ್ಯಕ್ಷವು ಲಕ್ಷ್ಯವಲ್ಲವೆಂದು ಈ ಲಕ್ಷಣ ಹೇಳಿದೆ. ಅಥವಾ ಜ್ಞಾನವು ಕಾರಣವಾಗಿರುವ ಜ್ಞಾನವು ಪ್ರತ್ಯಕ್ಷವೆಂದು ಹೇಳಿದರೆ ಆಗ ಈಶ್ವರ ಪ್ರತ್ಯಕ್ಷ ಬೇರ್ಪಡಿಸಬೇಕಾಗಿಲ್ಲ. ಜ್ಞಾನಕ್ಕೆ ಜ್ಞಾನವುಕರಣವಾಗುವದಿಲ್ಲ. ಅನು ಮಿತ್ಯಾದಿಗಳಲ್ಲಿ ವ್ಯಾಪ್ತಿಜ್ಞಾನಾದಿಗಳು ಕರಣವಾಗಿರುವುದರಿಂದ ಅಲ್ಲಿ ಅತಿವ್ಯಾಪ್ತಿಬರುವು ದಿಲ್ಲ. ಪರಾಮರ್ಶದಿಂದ ಉಂಟಾದ ಜ್ಞಾನಕ್ಕೆ ಅಥವಾ ವ್ಯಾಪ್ತಿಜ್ಞಾನಕರಣವಾಗಿರುವ ಜ್ಞಾನಕ್ಕೆ ಅನುಮಿತಿಯೆಂದೂ, ಪದಜ್ಞಾನವು ಕರಣವಾಗಿರುವ ಜ್ಞಾನಕ್ಕೆ ಶಾಬ್ದಬೋಧ (ಶಾಬ್ದಜ್ಞಾನ) ವೆಂದೂ, ಸಾದೃಶ್ಯಜ್ಞಾನಕರಣವಾಗಿರುವ ಜ್ಞಾನಕ್ಕೆ ಉಪಮಿತಿಯೆಂದೂ ಹೆಸರು. ಘ್ರಾಣಜ, ರಾಸನ, ಚಾಕ್ಷುಷ, ಸ್ಪಾರ್ಶನ, ಶ್ರಾತ್ರ, ಮಾನಸವೆಂದು ಪ್ರತ್ಯಕ್ಷವು ಆರುರೀತಿಯಾಗಿರುತ್ತದೆ. ಇದು ಜನ್ಯಪ್ರತ್ಯಕ್ಷದ ವಿಭಜನೆಯಾದುದರಿಂದ ಈಶ್ವರಪ್ರತ್ಯಕ್ಷಕ್ಕೆ ಸಂಬಂದವಿಲ್ಲ. ಗಂಧ, ಗಂಧತ್ವ, ಗಂಧಾಭಾವಗಳು ಘ್ರಾಣೇಂದ್ರಿಯ ಗಳಿಂದ ಗ್ರಹಿಸಲ್ಪಡುತ್ತವೆ. ಯಾವ ಇಂದ್ರಿಯದಿಂದ ಯಾವಪದಾರ್ಥ ಗ್ರಹಿಸಲ್ಪಡು ತ್ತದೆಯೋ ಅದೇ ಇಂದ್ರಿಯದಿಂದ ಅದರಲ್ಲಿರುವ ಜಾತಿ, ಅಭಾವವೂ ಗೃಹೀತವಾಗುತ್ತ ದೆಂದು ನಿಯಮ. ರಸಾದಿಗಳು ರಸನೇಂದ್ರಿಯದಿಂದ ಗ್ರಾಹ್ಯವಾಗಿವೆ ಶ್ರೋತ್ರೇಂ ದ್ರಿಯದಿಂದ ಶಬ್ದಾದಿಗಳೂ ನಯನದಿಂದ ಉದ್ಭೂತರೂಪಾದಿಗಳೂ ಗ್ರಾಹ್ಯವಾಗುತ್ತವೆ.

ಅರೂಪಾದಿಗಳುಳ್ಳ ದ್ರವ್ಯಗಳೂ ನಯನದಿಂದಲೇ ಗ್ರಾಹ್ಯವಾಗುತ್ತವೆ. ಕಣ್ಣಿನಿಂದ ಪ್ರತ್ಯಕ್ಷವಾಗಬೇಕಾದರೆ ಆಲೋಕ (ಬೆಳಕು) ಸಂಯೋಗ, ಉದ್ಭೂತರೂಪಗಳೂ ಸಹಕಾರಿಕಾರಣಗಳಾಗುತ್ತವೆ. ಇವುಗಳಿಲ್ಲದಿದ್ದರೆ ಕೇವಲ ಕಣ್ಣು ಏನನ್ನೂ ಗ್ರಹಿಸಲಾರದು. ದ್ರವ್ಯಚಾಕ್ಷುಷವಾಗಬೇಕಾದರೆ ಇವು ಸಮವಾಯದಿಂದ ಕಾರಣವಾಗುತ್ತವೆ. ಅಂದರೆ ಸಮವಾಯಸಂಬಂಧದಿಂದ ದ್ರವ್ಯದಲ್ಲಿದ್ದು ಕಾರಣವಾಗುತ್ತದೆಂದರ್ಥ. ದ್ರವ್ಯಸಮವೇತವಾದ ರೂಪಾದಿಪ್ರತ್ಯಕ್ಷದಲ್ಲಿ ಸ್ವಾಶ್ರಯಸಮವಾಯಸಂಬಂಧದಿಂದಲೂ, ದ್ರವ್ಯಸಮವೇತ ಸಮವೇತವಾದ ರೂಪತ್ವಾದಿಪ್ರತ್ಯಕ್ಷಗಳಲ್ಲಿ ಸ್ವಾಶ್ರಯಸಮವೇತಸಮವಾಯಸಂಬಂಧದಿಂದ ಕಾರಣವಾಗುತ್ತವೆ.

ತ್ವಗಿಂದ್ರಿಯವು ಉದ್ಭೂತಸ್ಪರ್ಶವುಳ್ಳದ್ರವ್ಯವನ್ನೂ, ಉದ್ಭೂತಸ್ಪರ್ಶವನ್ನೂ, ಸ್ಪರ್ಶತ್ವ, ಸ್ಪರ್ಶಾಭಾವಗಳನ್ನು ಗ್ರಹಿಸುತ್ತದೆ. ರೂಪ, ರೂಪತ್ವ, ರೂಪಾಭಾವಗಳನ್ನು ಬಿಟ್ಟು ನಯನಗೋಚರವಾಗುವ ಸಂಖ್ಯಾದಿಗಳು ಯಾವುದಿದೆಯೋ ಅವೆಲ್ಲವೂ ತ್ವಗಿಂದ್ರಿಯದಿಂದಲೂ ಗ್ರಾಹ್ಯವಾಗುತ್ತವೆ. ಬಹಿರಿಂದ್ರಿಯದಿಂದುಂಟಾಗುವ ದ್ರವ್ಯಪ್ರತ್ಯಕ್ಷದಲ್ಲಿ ರೂಪವು ಸಾಮಾನ್ಯಕಾರಣವಾಗಿರುತ್ತದೆಂದು ಪ್ರಾಚೀನರ ಮತ. ನವೀನರು ಕೇವಲ ಚಾಕ್ಷುಷಪ್ರತ್ಯಕ್ಷದಲ್ಲಿ ರೂಪವೂ, ಕೇವಲ ಸ್ಪಾರ್ಶನಪ್ರತ್ಯಕ್ಷದಲ್ಲಿ ಸ್ಪರ್ಶವೂ ಕಾರಣವೆಂದೂ ಅಂಗೀಕರಿಸಿರುತ್ತಾರೆ. ದ್ರವ್ಯಪ್ರತ್ಯಕ್ಷ ಮಾತ್ರದಲ್ಲಿ ಆತ್ಮನಲ್ಲಿಲ್ಲದಿರುವ ಶಬ್ದಭಿನ್ನ ವಿಶೇಷಗುಣವು ಪ್ರಯೋಜಕವಾಗುತ್ತದೆ. ಪ್ರಭಾಪ್ರತ್ಯಕ್ಷವಿದ್ದಂತೆ ವಾಯುಪ್ರತ್ಯಕ್ಷವೂ ಲೋಕಸಿದ್ಧವಾಗಿದೆ. ಜ್ಞಾನಸಾಮಾನ್ಯದಲ್ಲಿ ತ್ವಙ್ಮನಃ ಸಂಯೋಗವು ಕಾರಣ. ಸುಷುಪ್ತಿಯಲ್ಲಿ ತ್ವಗಿಂದ್ರಿಯವನ್ನು ಬಿಟ್ಟು ಮನಸ್ಸು ಪುರೀತನ್ನಾಡಿಪ್ರವೇಶಮಾಡುವುದರಿಂದ ಯಾವ ಜ್ಞಾನವು ಉಂಟಾಗುವುದಿಲ್ಲ. ಕೆಲವರು ಆಗ ಇತರ ಜ್ಞಾನಸಾಮಗ್ರಿಗಳಿಲ್ಲದಿರುವುದರಿಂದ ಜ್ಞಾನವುಂಟಾಗುವುದಿಲ್ಲವೆಂದು ಹೇಳುತ್ತಾರೆ. ಇದು ಸರಿಯಲ್ಲ. ಸುಷುಪ್ತಿಯ ಅವ್ಯವಹಿತಪೂರ್ವಕ್ಷಣದಲ್ಲಿ ಇಚ್ಛಾದಿಗಳಿರುವುದರಿಂದ ಅವುಗಳ ಸಂಬಂಧದಿಂದ ಆತ್ಮಪ್ರತ್ಯಕ್ಷವಾಗಲಿ ಎಂದು ಆಪಾದಿಸಲು ಸಂಭವವಿದೆ. ಸುಷುಪ್ತಿಯಲ್ಲಿ ನಿರ್ವಿಕಲ್ಪಜ್ಞಾನಮಾತ್ರ ನಿಯಮದಿಂದುಂಟಾಗುತ್ತದೆ. ಎಂಬುದರಲ್ಲಿ ಯಾವ ಪ್ರಮಾಣವೂ ಇಲ್ಲ. ಜ್ಞಾನಸಾಮಾನ್ಯದಲ್ಲಿ ತ್ವಙ್ಮನಃ ಸಂಯೋಗಕಾರಣವೆನ್ನುವುದಾದರೆ ರಾಸನಾದಿಪ್ರತ್ಯಕ್ಷಕಾಲದಲ್ಲಿಯೂ ತ್ವಾಚಪ್ರತ್ಯಕ್ಷವಾಗಲಿ, ಅಥವಾ ಪರಸ್ಪರ ಪ್ರತಿಬಂಧದಿಂದಯಾವ ಪ್ರತ್ಯಕ್ಷವೂ ಆಗದಿರಲಿ ಎಂದು ಕೇಳಬಹುದು. ಇದಕ್ಕೆ ಎರಡು ರೀತಿ ಸಮಾಧಾನ ಹೇಳುತ್ತಾರೆ. ಚಾಕ್ಷುಷಪ್ರತ್ಯಕ್ಷಕಾಲದಲ್ಲಿ ತ್ವಙ್ಮನಃ ಸಂಯೋಗವಿದ್ದರೂ ಚಾಕ್ಷುಷಾದಿಸಾಮಗ್ರಿ ಅಲ್ಲಿ ಪ್ರತಿಬಂಧಕವಿರುವುದರಿಂದ ಸ್ಪಾರ್ಶನಪ್ರತ್ಯಕ್ಷವಾಗುವುದಿಲ್ಲವೆಂದು ಒಂದು ಮತ. ಚಾಕ್ಷುಷಪ್ರತ್ಯಕ್ಷಕಾಲದಲ್ಲಿ ತ್ವಙ್ಮನಃ ಸಂಯೋಗವೇ ಇಲ್ಲವೆಂದು ಇನ್ನೊಂದು ಮತ.

ಸುಖ, ದುಃಖ, ಇಚ್ಛಾ, ದ್ವೇಷ, ಜ್ಞಾನ ಪ್ರಯತ್ನಗಳು ಕೇವಲ ಮನೋಜನ್ಯಪ್ರತ್ಯಕ್ಷವಿಷಯವಾಗುತ್ತವೆ. ವಿಶಿಷ್ಟಬುದ್ಧಿಯಲ್ಲಿ ವಿಶೇಷಣಜ್ಞಾನ ಕಾರಣವಾದುದರಿಂದ

ಘಟವನ್ನು ನೋಡಿದೊಡನೆ 'ಅಯಂ ಘಟಃ' ಎಂಬ ಘಟತ್ವಾದಿವಿಶಿಷ್ಟಜ್ಞಾನ ಉಂಟಾಗುವುದಿಲ್ಲ. ಘಟ, ಘಟತ್ವಗಳ ವೈಶಿಷ್ಟ್ಯವನ್ನು ಗ್ರಹಿಸದಿರುವ ಸ್ವಲಕ್ಷಣ ಮಾತ್ರ ವಿಷಯಕವಾದ ಜ್ಞಾನ ಉಂಟಾಗುತ್ತದೆ. ಇದಕ್ಕೇ ನಿರ್ವಿಕಲ್ಪಕಜ್ಞಾನವೆಂದು ಹೆಸರು. ಇದು ಇಂದ್ರಿಯಗೋಚರವಾಗದಿರುವುದರಿಂದ ಅತೀಂದ್ರಿಯವಾಗುತ್ತದೆ. 'ಘಟಮಹಂ ಜಾನಾಮಿ' ಎಂಬಲ್ಲಿ ಆತ್ಮನಲ್ಲಿ ಜ್ಞಾನವು ಪ್ರಕಾರವಾಗಿಯೂ, ಜ್ಞಾನದಲ್ಲಿ ಘಟವೂ ಘಟದಲ್ಲಿ ಘಟತ್ವವೂ ಪ್ರಕಾರವಾಗಿ ತೋರುತ್ತದೆ. ಯಾವುದು ಪ್ರಕಾರವೋ ಅದೇ ವಿಶೇಷಣ. ವಿಶೇಷಣದಲ್ಲಿ ವಿಶೇಷಣವಾದುದಕ್ಕೆ ವಿಶೇಷಣತಾವಚ್ಛೇದಕವೆಂದು ಹೆಸರು. ವಿಶಿಷ್ಟವೈಶಿಷ್ಟ್ಯಜ್ಞಾನದಲ್ಲಿ ವಿಶೇಷಣತಾವಚ್ಛೇದಕಜ್ಞಾನವು ಕಾರಣವಾದುದರಿಂದ ನಿರ್ವಿಕಲ್ಪದಲ್ಲಿ ಘಟತ್ವಾದಿಗಳು ಪ್ರಕಾರವಾಗಿ ತೋರದಿರುವುದರಿಂದ ಘಟತ್ವಾದಿ ವಿಶಿಷ್ಟಘಟಾದಿವೈಶಿಷ್ಟ್ಯಭಾವ ಬರುವುದಿಲ್ಲ. ಜಾತಿ, ಅಖಂಡೋಪಾಧ್ಯತಿರಿಕ್ತ ಪದಾರ್ಥಜ್ಞಾನವು ಯಾವಾಗಲೂ ಯಾವುದಾದರೊಂದು ಧರ್ಮಪ್ರಕಾರವಾಗಿಯೇ ಇರುತ್ತದೆ. ಆದುದರಿಂದ ಘಟತ್ವಪ್ರಕಾರವಾಗಿ ತೋರದಿದ್ದರೆ ಘಟಾದಿವಿಶಿಷ್ಟಜ್ಞಾನವೂ ಬರುವುದಿಲ್ಲ. ಹಿಂದೆ ಹೇಳಿದ ಆರುಪ್ರತ್ಯಕ್ಷಗಳಲ್ಲಿಯೂ ಮಹತ್ತ್ವ ಸಾಮಾನ್ಯಕಾರಣವಾಗಿಯೂ ಇಂದ್ರಿಯವುಕರಣವಾಗಿಯೂ ಇರುತ್ತದೆ. ಪೃಥಿವೀತ್ವಾದಿಗಳಿಂದ ಸಾಂಕರ್ಯ ಬರುವುದರಿಂದ ಇಂದ್ರಿಯತ್ವವು ಜಾತಿಯಾಗುವುದಿಲ್ಲ. ಶಬ್ದಕ್ಕಿಂತ ಬೇರೆಯಾದ ಉದ್ಭೂತ ವಿಶೇಷಗುಣಗಳಿಗೆ ಆಶ್ರಯವಾಗದೆ, ಜ್ಞಾನಕಾರಣವಾದ ಮನಃ ಸಂಯೋಗಕ್ಕೆ ಆಶ್ರಯವಾಗಿರುವುದು ಇಂದ್ರಿಯ. ಕರಣವೆಂದರೆ ವ್ಯಾಪಾರದಿಂದ ಕೂಡಿ ಅಸಾಧಾರಣ ಕಾರಣವಾಗಿರುವುದು. ಇಂದ್ರಿಯಕರಣವೆಂದ ಮೇಲೆ ಅದರಲ್ಲಿ ವ್ಯಾಪಾರವಿರಬೇಕು. ಇದಕ್ಕೆ ಸನ್ನಿಕರ್ಷವೆಂದು ಹೆಸರು. ಇದೂ ಆರುವಿಧ. ವಿಷಯಕ್ಕೂ ಇಂದ್ರಿಯಗಳಿಗೂ ಉಂಟಾಗುವ ಸಂಬಂಧವೇ ವ್ಯಾಪಾರ. ದ್ರವ್ಯಪ್ರತ್ಯಕ್ಷವಾಗಬೇಕಾದರೆ ಇಂದ್ರಿಯಸಂಯೋಗ ಸಂನ್ನಿಕರ್ಷವಾಗುತ್ತದೆ. ದ್ರವ್ಯಸಮವೇತ (ಜಾತಿ, ಗುಣಾದಿಗಳು) ಚಾಕ್ಷುಷದಲ್ಲಿ ಉದ್ಭೂತರೂಪಾವಚ್ಛಿನ್ನಮಹತ್ತ್ವಾವಚ್ಛಿನ್ನ ಚಕ್ಷುಃ ಸಂಯುಕ್ತ ಸಮವಾಯವು ಕಾರಣ. ದ್ರವ್ಯಸಮವೇತ (ರೂಪಾದಿ) ಸಮವೇತ (ರೂಪತ್ವಾದಿ) ಚಾಕ್ಷುಷವನ್ನು ಕುರಿತು ಚಕ್ಷುಃ ಸಂಯುಕ್ತಸಮವೇತಸಮವಾಯ ಸಂನ್ನಿಕರ್ಷವಾಗುತ್ತದೆ. ಹೀಗೆಯೇ ಸ್ಪಾರ್ಶನಪ್ರತ್ಯಕ್ಷಾದಿಗಳಲ್ಲಿಯೂ ತಿಳಿಯಬೇಕು. ಶಬ್ದಪ್ರತ್ಯಕ್ಷದಲ್ಲಿ ಶ್ರೋತ್ರಾವಚ್ಛಿನ್ನಸಮವಾಯವೂ, ಶಬ್ದಸಮವೇತ (ಶಬ್ದತ್ವ) ಶ್ರಾವಣಪ್ರತ್ಯಕ್ಷದಲ್ಲಿ ಶ್ರೋತ್ರಾವಚ್ಛಿನ್ನಸಮವೇತಸಮವಾಯವೂ ಕಾರಣವಾಗುತ್ತದೆ. ಇವೆಲ್ಲಾ ಲೌಕಿಕ ಪ್ರತ್ಯಕ್ಷಗಳಾಗುತ್ತವೆ. ಅಲೌಕಿಕಪ್ರತ್ಯಕ್ಷವು ಇಂದ್ರಿಯಸಂಬಂಧವಿಲ್ಲದೇ ಆಗುತ್ತದೆ. ಹೀಗೆ ಆತ್ಮಪ್ರತ್ಯಕ್ಷದಲ್ಲಿ ಮನಃ ಸಂಯೋಗವೂ, ಆತ್ಮಸಮವೇತಮಾನಸಪ್ರತ್ಯಕ್ಷದಲ್ಲಿ ಮನಃ ಸಂಯುಕ್ತಸಮವಾಯವೂ' ಆತ್ಮಸಮವೇತಸಮವೇತಮಾನಸ ಪ್ರತ್ಯಕ್ಷದಲ್ಲಿ ಮನಃ ಸಂಯುಕ್ತ ಸಮವೇತಸಮವಾಯವು ಕಾರಣವಾಗುತ್ತದೆ. ಅಭಾವಪ್ರತ್ಯಕ್ಷದಲ್ಲಿಯೂ, ಸಮವಾಯ (ಸಂಬಂಧ) ಪ್ರತ್ಯಕ್ಷದಲ್ಲಿ ಇಂದ್ರಿಯಸಂಬದ್ಧವಿಶೇಷಣತಾ

ಎಂಬುದು ಸನ್ನಿಕರ್ಷವಾಗುತ್ತದೆ. ವೈಶೇಷಿಕಮತದಲ್ಲಿ ಸಮವಾಯವು ಪ್ರತ್ಯಕ್ಷವಲ್ಲ ವೆಂದು ಸಿದ್ಧಾಂತ. ವಿಶೇಷಣಸಂನ್ನಿಕರ್ಷವೂ ನಾನಾರೀತಿಯಾದರೂ ವಿಶೇಷಣ ತಾತ್ವೇನ ಒಂದೇ ಎಂದು ತಿಳಿಯಬೇಕು. ಇಲ್ಲವಾದರೆ ಆರುವಿಧ ಸಂನಿಕರ್ಷವೆಂದುದು ತಪ್ಪಾಗುತ್ತದೆ.

ಅಭಾವಪ್ರತ್ಯಕ್ಷದಲ್ಲಿ ಯೋಗ್ಯಾನುಪಲಬ್ಧಿಯೂ ಸಹಕಾರಿ ಕಾರಣ. ಭೂತಲ ದಲ್ಲಿ ಘಟಾದಿಜ್ಞಾನ ಬಂದಾಗ ಅಲ್ಲಿ ಘಟಾಭಾವಪ್ರತ್ಯಕ್ಷವಾಗುವುದಿಲ್ಲ. ಆದುದರಿಂದ ಅಭಾವಪ್ರತ್ಯಕ್ಷವಾಗಬೇಕಾದರೆ ಪ್ರತಿಯೋಗಿಯಾದ ಘಟಾದಿಗಳ ಜ್ಞಾನಾಭಾವವಿರ ಬೇಕು. ಪ್ರತಿಯೋಗ್ಯುಪಾಲಂಭಾಭಾವದಲ್ಲಿಯೂ ಯೋಗ್ಯತಾ ಅಪೇಕ್ಷಿತವಾಗಿದೆ. ಅಂದರೆ ಯಾವ ಅಧಿಕರಣದಲ್ಲಿ ಪ್ರತಿಯೋಗ್ಯುಪಲಂಭವನ್ನು ಆಪಾದಿಸಲು ಶಕ್ಯವೋ, ಆ ಅಧಿಕರಣದಲ್ಲಿ ಆ ಪ್ರತಿಯೋಗಿಯ ಅಭಾವಪ್ರತ್ಯಕ್ಷವಾಗುತ್ತದೆ. ಹೇಗೆಂದರೆ 'ಭೂತಲದಲ್ಲಿ ಘಟವಿದ್ದಿದ್ದರೆ ಪ್ರತ್ಯಕ್ಷವಾಗುತ್ತಿತ್ತು' ಎಂದು ಆಪಾದಿಸಲು ಶಕ್ಯವಿರುವುದ ರಿಂದ ಅಲ್ಲಿ ಘಟಾಭಾವಪ್ರತ್ಯಕ್ಷವಾಗುತ್ತದೆ. ಜಲಪರಮಾಣುಗಳಲ್ಲಿ ಪೃಥಿವೀತ್ವ ಇದ್ದಿದ್ದರೆ ಪ್ರತ್ಯಕ್ಷವಾಗುತ್ತಿತ್ತು ಎಂದು ಆಪಾದಿಸಲು ಶಕ್ಯವಿಲ್ಲದಿರುವುದರಿಂದ ಅಲ್ಲಿ ಪೃಥಿವೀತ್ವಾಭಾವದ ಪ್ರತ್ಯಕ್ಷವಿಲ್ಲ. ಹೀಗೆ ಆಪಾದನೆಮಾಡಲು ಶಕ್ಯವಿರುವಸ್ಥಳದಲ್ಲಿ ಆಯಾಯ ವಸ್ತ್ವಭಾವಪ್ರತ್ಯಕ್ಷವಾಗುತ್ತದೆ. ವಾಯುವಿನಲ್ಲಿ ರೂಪಾಭಾವ, ಆತ್ಮನಲ್ಲಿ ಸುಖಾಭಾವ, ಶ್ರೋತ್ರದಲ್ಲಿ ಶಬ್ದಾಭಾವಾದಿಗಳ ಪ್ರತ್ಯಕ್ಷವಾಗುತ್ತದೆ. ಸಂಸರ್ಗಾಭಾವ ಪ್ರತ್ಯಕ್ಷದಲ್ಲಿ ಪ್ರತಿಯೋಗಿಯ ಯೋಗ್ಯತೆಯೂ, ಅನ್ಯೋನ್ಯಾಭಾವಪ್ರತ್ಯಕ್ಷದಲ್ಲಿ ಆಧಿಕರಣಯೋಗ್ಯತೆಯೂ ಅಪೇಕ್ಷಿತವಾಗಿದೆ. ಅದುದರಿಂದ ಸ್ತಂಭದಲ್ಲಿ ಪಿಶಾಚಾ ಭಾವವು ನಯನಗ್ರಾಹ್ಯವಾಗುತ್ತದೆಂದು ಸಿದ್ಧಾಂತ. ||

ಲೌಕಿಕ, ಅಲೌಕಿಕವೆಂದು ಪ್ರತ್ಯಕ್ಷ ಎರಡುವಿಧ. ಲೌಕಿಕದಲ್ಲಿ ಆರುವಿಧ ಸಂನಿ ಕರ್ಷಗಳಂತೆ, ಅಲೌಕಿಕಸಂನಿಕರ್ಷದಲ್ಲಿಯೂ ಮೂರುವಿಧ ಸಂನಿಕರ್ಷಗಳಿವೆ. ಸಾಮಾನ್ಯಲಕ್ಷಣಪ್ರತ್ಯಾಸತ್ತಿ, ಜ್ಞಾನಲಕ್ಷಣಪ್ರತ್ಯಾಸತ್ತಿ, ಯೋಗಜಪ್ರತ್ಯಾಸತ್ತಿಯೆಂದು ಅವುಗಳ ಹೆಸರು, ಲಕ್ಷಣಕ್ಕೆ ಸ್ವರೂಪವೆಂದು ಅರ್ಥಮಾಡಿದರೆ ಆಗ ಸಾಮಾನ್ಯಸ್ವರೂಪ ಪ್ರತ್ಯಾಸತ್ತಿಯೆಂದಾಗುತ್ತದೆ. ಇಂದ್ರಿಯಸಂಬಂಧ್ಧವಿಶೇಷ್ಯಕಜ್ಞಾನದಲ್ಲಿ ಯಾವುದು ಪ್ರಕಾರವಾಗಿದೆಯೋ ಅದೇ ಸಾಮಾನ್ಯಲಕ್ಷಣಪ್ರತ್ಯಾಸತ್ತಿ. ಇಂದ್ರಿಯದಿಂದ ಸಂಯುಕ್ತ ವಾದದ್ದು ಧೂಮ. ತದ್ವಿಶೇಷ್ಯಕಜ್ಞಾನವೆಂದರೆ 'ಅಯಂಧೂಮಃ' ಎಂಬಜ್ಞಾನ. ಅಲ್ಲಿ ಪ್ರಕಾರವಾಗಿರುವುದು ಧೂಮತ್ವ. ಆಗ ಧೂಮತ್ವಸನ್ನಿಕರ್ಷದಿಂದ 'ಧೂಮಾಃ' ಎಂಬ ಸಕಲಧೂಮವಿಷಯಕ ಜ್ಞಾನವುಂಟಾಗುತ್ತದೆ. ಮಾನಸಸ್ಥಳದಲ್ಲಿ ಜ್ಞಾನದಲ್ಲಿ ಪ್ರಕಾರವಾಗಿ ತೋರುವ ಕೆಲವು ಸಾಮಾನ್ಯವು ಸನ್ನಿಕರ್ಷವಾಗುತ್ತದೆ. 'ಸಮಾನಾನಾಂ ಭಾವಃ, ಸಾಮಾನ್ಯಂ' ಎಂಬ ವ್ಯುತ್ಪತ್ತಿಯಿಂದ ಕೆಲವು ಕಡೆ ಈ ಸಾಮಾನ್ಯವು ನಿತ್ಯ ವಾಗಿಯೂ, ಕೆಲವು ಕಡೆ ಅನಿತ್ಯವಾಗಿಯೂ ಇರುತ್ತದೆ. ಧೂಮತ್ವಾದಿಗಳು ನಿತ್ಯವಾದ ಸಾಮಾನ್ಯ. ಸಂಯೋಗಸಂಬಂಧದಿಂದ ಭೂತಲದಲ್ಲಿ ಒಂದು ಘಟದ ಜ್ಞಾದ

ಬಂದೊಡನೆ ಸಕಲಘಟವುಳ್ಳಭೂತಲಜ್ಞಾನ ಬರುವುದು ಅನಿತ್ಯವಾದ ಘಟರೂಪ ಸಾಮಾನ್ಯದಿಂದ ಎಂದು ತಿಳಿಯಬೇಕು. ಸಾಮಾನ್ಯಸ್ವರೂಪಜ್ಞಾನಕಾರಣವೆಂದರೆ ಕೆಲವು ಕಡೆ ಅವ್ಯಾಪ್ತಿಬರುವುದರಿಂದ ಲಕ್ಷಣಪದಕ್ಕೆ ವಿಷಯವೆಂಬರ್ಥವನ್ನು ಅಂಗೀಕರಿಸಿ ಸಾಮಾನ್ಯವಿಷಯಕಜ್ಞಾನವೇ ಪ್ರತ್ಯಾಸತ್ತಿಯೆಂಬು ಸಿದ್ಧಾಂತ. ಇಲ್ಲಿ ಚಕ್ಷುಃ ಸಂಯೋಗ,—ಆಲೋಕಸಂಯೋಗಾದಿಗಳು ಸಹಕಾರಿಕಾರಣಗಳಾಗಿರುತ್ತವೆ. ಸಕಲ ಧೂಮಗಳಲ್ಲಿ ವಹ್ನಿವ್ಯಾಪ್ಯತ್ವನಿಶ್ಚಯಕ್ಕೋಸ್ಕರ ಧೂಮತ್ವೇನ ಸಕಲಧೂಮಜ್ಞಾನ ಆವಶ್ಯಕವಾದುದರಿಂದ ಸಾಮಾನ್ಯಲಕ್ಷಣಪ್ರತ್ಯಾಸತ್ತಿಯನ್ನು ಅಂಗೀಕರಿಸಲೇಬೇಕು. ಜ್ಞಾನಲಕ್ಷಣಾಪ್ರತ್ಯಾಸತ್ತಿಯು ಪೂರ್ವದಂತೇ ತೋರಿದರೂ ಫಲದಲ್ಲಿ ವೈಲಕ್ಷಣ್ಯವಿದೆ. ಸಾಮಾನ್ಯಲಕ್ಷಣಪ್ರತ್ಯಾಸತ್ತಿಯಿಂದ ಅದರ ಆಶ್ರಯದ ಜ್ಞಾನವಾಗುತ್ತದೆ. (ಧೂಮತ್ವ ದಿಂದ ಸಕಲಧೂಮಗಳ ಜ್ಞಾನ.) ಜ್ಞಾನಲಕ್ಷಣಾಪ್ರತ್ಯಾಸತ್ತಿಯಿಂದ ಯದ್ವಿಷಯಕ ಜ್ಞಾನವೋ ಅದರ ಜ್ಞಾನಮಾತ್ರ ಆಗುತ್ತದೆ. 'ಸುರಭಿಚಂದನ' ಎಂಬಲ್ಲಿ ಸೌರಭ ಜ್ಞಾನವು ಇದರಿಂದ ಆಗುತ್ತದೆ. ಇದೂ ಪೂರ್ವಸನ್ನಿಕರ್ಷದಿಂದ ಸಂಭವಿಸಿದರೂ ಸೌರಭತ್ವಜ್ಞಾನ ಜ್ಞಾನಲಕ್ಷಣಪ್ರತ್ಯಾಸತ್ತಿಯಿಂದಲೇ ಆಗುತ್ತದೆ. ಯೋಗಾ ಭ್ಯಾಸದಿಂದ ಉಂಟಾದ ಧರ್ಮವಿಶೇಷವೇ ಯೋಗಪ್ರತ್ಯಾಸತ್ತಿ. ಯುಕ್ತ, ಯುಂಜಾನಭೇದದಿಂದ ಇದು ಎರಡು ವಿಧವಾಗಿದೆ. ಯುಕ್ತಿಯೋಗಸಂನ್ನಿಕರ್ಷದಿಂದ ಯುಕ್ತಯೋಗಿಗೆ ಯಾವತಡೆಯೂ ಇಲ್ಲದೆ ಆಕಾಶಪರಮಾಣ್ವಾದಿ ಸಕಲಪದಾರ್ಥ ವಿಷಯತ್ವಜ್ಞಾನ ಉಂಟಾಗುತ್ತದೆ. ಯುಂಜಾನಯೋಗಿಗೆ ಚಿಂತಾರೂಪ ಸಹಕಾರಿ ಕಾರಣಸಹಾಯದಿಂದ ಕೂಡಿದ ಯೋಗಜಸನ್ನಿಕರ್ಷದಿಂದ ಸಕಲಪದಾರ್ಥವಿಷಯಕ ಜ್ಞಾನ ಬರುತ್ತದೆ.

## ಅನುಮಾನಖಂಡ. ೨

ಅನುಮಿತಿಯಲ್ಲಿ ವ್ಯಾಪ್ತಿಜ್ಞಾನವು ಅನುಮಿತಿ ಕಾರಣವೂ, ಪರಾಮರ್ಶವು ವ್ಯಾಪಾರವೂ ಆಗಿದೆ. ಅಡಿಗೆಮನೆ ಮುಂತಾದವುಗಳಲ್ಲಿ ಒಬ್ಬನಿಗೆ ಧೂಮದಲ್ಲಿ ವಹ್ನಿ ವ್ಯಾಪ್ತಿಯು ಗೃಹೀತವಾಗುತ್ತದೆ. ಆಮೇಲೆ ಅದೇ ಪುರುಷನಿಗೆ ಪರ್ವತಾದಿಗಳಲ್ಲಿ ಅವಿಚ್ಛಿನ್ನವಾದ ಧೂಮವನ್ನು ನೋಡಿದೊಡನೆಯೇ 'ಧೂಮವು ವಹ್ನಿವ್ಯಾಪ್ಯವಾಗಿದೆ' ಎಂಬ ವ್ಯಾಪ್ತಿಸ್ಮರಣ ಬರುತ್ತದೆ. ಆಮೇಲೆ 'ವಹ್ನಿವ್ಯಾಪ್ಯವಾದ ಧೂಮದಿಂದ ಕೂಡಿರು ವುದು ಈ ಪರ್ವತ' ಎಂಬ ಜ್ಞಾನ ಬರುತ್ತದೆ. ಇದೇ ಪರಾಮರ್ಶಜ್ಞಾನ. ಇದು ಬಂದ ಮೇಲೆ 'ಪರ್ವತವು ವಹ್ನಿಯಿಂದ ಕೂಡಿದೆ' ಎಂಬ ಜ್ಞಾನ ಬರುತ್ತದೆ ಇದೇ ಅನುಮಿತಿ.

ಜ್ಞಾನವಿಷಯವಾದ ಲಿಂಗವೇ ಅನುಮಿತಿಕರಣವೆಂದು ಪ್ರಾಚೀನಮತ. ಆದರೆ ಭವಿಷ್ಯತ್ ಅಥವಾ ಭೂತಕಾಲಿಕ ಲಿಂಗದಿಂದಲೂ ಅನುಮಿತಿ ಲೋಕಪ್ರಸಿದ್ಧವಾದುದ ರಿಂದ ಲಿಂಗಜ್ಞಾನವೇ ಕರಣವೆಂದು ನವೀನಮತ. ವ್ಯಾಪ್ತಿವಿಶಿಷ್ಟವಾದ ಹೇತುವಿಗೆ

ಪಕ್ಷದೊಡನೆ ವೈಶಿಷ್ಟ್ಯವನ್ನು ವಿಷಯೀಕರಿಸುವ ಜ್ಞಾನವೇ ಪರಾಮರ್ಶ. ಇದೇ ಅನುಮಿತಿಜನಕ. ವ್ಯಾಪ್ಯ (ಹೇತು) ವು ಪಕ್ಷದಲ್ಲಿದೆ, ಅಥವಾ ವ್ಯಾಪ್ಯದಿಂದಕೂಡಿರುವುದು ಪಕ್ಷ ಹೀಗೆ ಎರಡು ರೀತಿಯಿಂದಲೂ ಪರಾಮರ್ಶ ಅನುಭವಸಿದ್ಧವಾದುದರಿಂದಲೂ ಪಕ್ಷದಲ್ಲಿ ಸಾಧ್ಯವಿದೆ, ಸಾಧ್ಯದಿಂದ ಕೂಡಿರುವುದು ಪಕ್ಷವೆಂದು ಎರಡುರೀತಿಯಿಂದಲೂ ಅನುಮಿತಿ ಬರುತ್ತದೆ. ಕೆಲವರು ಎರಡು ರೀತಿ ಪರಾಮರ್ಶದಿಂದಲೂ 'ಪಕ್ಷಃ ಸಾಧ್ಯವಾನ್' (ಪಕ್ಷವು ಸಾಧ್ಯವುಳ್ಳದ್ದು) ಎಂಬ ಒಂದು ರೀತಿಯಾದ ಅನುಮಿತಿ ಬರುತ್ತದೆಂದು ಹೇಳುತ್ತಾರೆ.

## ವ್ಯಾಪ್ತಿ.

ವ್ಯಾಪ್ಯವೆಂದರೆ ವ್ಯಾಪ್ತಿಗೆ ಆಶ್ರಯವಾಗಿರುವು. ವ್ಯಾಪ್ತಿಲಕ್ಷಣ ನಾನಾರೀತಿಯಾಗಿ ಹೇಳಿದೆ. ಸಾಧ್ಯವುಳ್ಳದ್ದು ಯಾವುದೋ ಅದಕ್ಕಿಂತ ಭಿನ್ನವಾದ ಅಧಿಕರಣದಲ್ಲಿ ಸಂಬಂಧವಿಲ್ಲದಿರುವುದು' ಎಂದು ಪೂರ್ವಪಕ್ಷವ್ಯಾಪ್ತಿಯ ಸ್ವರೂಪ. ವಹ್ನಿಸಾಧ್ಯವಾದರೆ ವಹ್ನಿಉಳ್ಳದ್ದು ಮಹಾನಸಾದಿಗಳು. ಅದಕ್ಕಿಂತ ಬೇರೆಯಾದದ್ದು ಅಂದರೆ ಕೆರೆ ಮುಂತಾದವುಗಳು. ಅಲ್ಲಿ ಸಂಬಂಧವಿಲ್ಲದಿರುವುದು ಧೂಮವಾಗುತ್ತದೆ. ಆದರೆ ಕೇವಲಾನ್ವಯಿ ಹೇತುವಿನಲ್ಲಿ ಇದು ಸಮನ್ವಿತವಾಗುವುದಿಲ್ಲ. 'ವಾಚ್ಯಂ—ಜ್ಞೇಯತ್ವಾತ್' ಜ್ಞೇಯಂ ಪ್ರಮೇಯತ್ವಾತ್' ಇತ್ಯಾದಿಸ್ಥಳಗಳಲ್ಲಿ ಸಾಧ್ಯವುಳ್ಳದ್ದೆಂದರೆ ಸಕಲ ಪದಾರ್ಥಗಳಾಗುತ್ತವೆ. ಸಾಧ್ಯವಿಶಿಷ್ಟಕ್ಕಿಂತ ಬೇರೆಯಾದುದೇ ಇಲ್ಲ. ಆದುದರಿಂದ ಸಿದ್ಧಾಂತವ್ಯಾಪ್ತಿಲಕ್ಷಣ ಬೇರೆ ಹೇಳಿದೆ. 'ಹೇತುವಿನ ಅಧಿಕರಣದಲ್ಲಿ ಯಾವುದು ಇಲ್ಲವೆಂದು ಹೇಳಲುಸಾಧ್ಯವೋ ಅಂತಹ ಅಭಾವಕ್ಕೆ ಪ್ರತಿಯೋಗಿ ಆಗದೇ ಇರುವ ಸಾಧ್ಯದ ಅಧಿಕರಣವುಳ್ಳದ್ದು' ಎಂದು ಅದರ ಸ್ವರೂಪ. ಹೇತುವು ಧೂಮವಾದರೆ ಅದರ ಅಧಿಕರಣ ಪರ್ವತಾದಿ. ಅಲ್ಲಿ ವಹ್ನಿಯ ಅಭಾವ ಹೇಳಲು ಸಾಧ್ಯವಾಗಿದ್ದರೆ ಅಭಾವಕ್ಕೆ ವಹ್ನಿಯು ಪ್ರತಿಯೋಗಿಯಾಗುತ್ತಿತ್ತು. ಆದರೆ ಅಲ್ಲಿ ವಹ್ನಿ ಇರುತ್ತದೆ. ಜಲಾದಿಗಳ ಅಭಾವ ಹೇಳಿದರೆ ಅಭಾವಕ್ಕೆ ಪ್ರತಿಯೋಗಿ ಜಲಾದಿಗಳಾಗುತ್ತವೆ. ಅಪ್ರತಿಯೋಗಿಯಾದ ಸಾಧ್ಯವೆಂದರೆ ವಹ್ನಿ. ಅದರೊಡನೆ ಸಾಮಾನಾಧಿಕರಣ್ಯ (ಒಂದೇ ಆಶ್ರಯವಿರುವಿಕೆ.) ಧೂಮಕ್ಕೆ ಇದೆ. ಇಲ್ಲಿ ಆಯಾಯ ಸಂಬಂಧ, ಅವಚ್ಛೇದಕಗಳನ್ನೂ ಸೇರಿಸಿ ಲಕ್ಷಣಪರಿಷ್ಕಾರಮಾಡಬೇಕು. ಇಲ್ಲವಾದರೆ ಅವ್ಯಾಪ್ತ್ಯತಿವ್ಯಾಪ್ತಿಗಳು ಬರುತ್ತವೆ.

## ಪಕ್ಷತಾ,

ಸಿಷಾಧಯಿಷಾವಿರಹ ವಿಶಿಷ್ಟಸಿದ್ಧ್ಯಭಾವಕ್ಕೆ ಪಕ್ಷತಾ ಎಂದು ಹೆಸರು. ಇದ ಉಳ್ಳದ್ದು ಪಕ್ಷ. 'ಪರ್ವತದಲ್ಲಿ ವಹ್ನ್ಯನುಮಿತಿಯುಂಟಾಗಲಿ' ಎಂಬ ಇಚ್ಛೆಗೆ ಸಿಷಾಧಯಿಷಾ ಎಂದು ಹೆಸರು. ಇದರಿಂದ ಶೂನ್ಯವಾದ 'ಪರ್ವತೋ ವಹ್ನಿಮಾನ್' ಎಂಬ

ಚಾಕ್ಷುಷನಿಶ್ಚಯಕ್ಕೆ ಸಿದ್ಧಿಯೆಂದು ಹೆಸರು. ಇಂತಹವಿಶಿಷ್ಟಸಿದ್ಧಿಯ ಅಭಾವವೇ ಪಕ್ಷತಾ. ಸಾಧ್ಯಸಂದೇಹವೇ ಪಕ್ಷತಾ ಎಂದು ಪ್ರಾಚೀನಮತ. ಸಂದೇಹವಿಲ್ಲ ದಿದ್ದರೂ ಮೇಘಗರ್ಜನೆಯಾದೊಡನೆಯೇ ಅದರಿಂದ ಮೇಘಾನುಮಾನಮಾಡುವುದು ಪ್ರಸಿದ್ಧವಾದುದರಿಂದ ಆ ಲಕ್ಷಣ ಸಮಂಜಸವಲ್ಲ. ಪಕ್ಷತಾವಚ್ಛೇದಕಾವಚ್ಛೇದದಿಂದ ಸಾಧ್ಯಸಿದ್ಧಿಯೂ, ಪಕ್ಷತಾವಚ್ಛೇದಕಸಾಮಾನಾಧಿಕರಣ್ಯದಿಂದ ಅನುಮಿತಿಯನ್ನು ಕುರಿತು ಸಿದ್ಧಿಮಾತ್ರವೂ ಪ್ರತಿಬಂಧಕವಾಗುತ್ತದೆ.

## ಹೇತ್ವಾಭಾಸ. ವ್ಯಭಿಚಾರೀ

ಹೇತುವಿನಂತೆ ಪಂಚನ್ಯಂತವಾಗಿ ತೋರುವುದು ಹೇತ್ವಾಭಾಸ. ಸಾಕ್ಷಾತ್ ಅಥವಾ ಪರಂಪರೆಯಿಂದ ಯಾವ ವಿಶಿಷ್ಟಜ್ಞಾನವು ಅನುಮಿತಿಯನ್ನು ಹುಟ್ಟದಂತೆ ಮಾಡುವುದೋ ಅದಕ್ಕೆ ಹೇತ್ವಾಭಾಸವೆಂದು ಹೆಸರು. ವ್ಯಭಿಚಾರಾದಿವಿಷಯಕ ಜ್ಞಾನದಿಂದ ಅನುಮಿತಿ ಹುಟ್ಟುವುದಿಲ್ಲ. ಸಾಧ್ಯಾಭಾವವದ್ವೃತ್ತಿ ಹೇತ್ವಾದಿಗಳುಳ್ಳದ್ದು ದೋಷ. ಅದು ಯಾವುದಾದರೂ ಒಂದು ಸಂಬಂಧದಿಂದ ಹೇತುವಿನಲ್ಲಿ ಬರುತ್ತದೆ. ಇದು ಸಾಮಾನ್ಯವಾಗಿ ಐದು ವಿಧಗಳೆಂದು ಪ್ರಾಚೀನ ಗ್ರಂಥಗಳಲ್ಲಿ ಹೇಳಿದೆ. ಅನೈಕಾಂತಿಕ ಅಥವಾ ಸವ್ಯಭಿಚಾರ ಮೊದಲನೆಯ ಹೇತ್ವಾಭಾಸ. ಸಾಧಾರಣ, ಅಸಾಧಾರಣ, ಅನುಪಸಂಹಾರೀ ಎಂದು ಇದೂ ಮೂರುವಿಧ. ಸಾಧ್ಯವುಳ್ಳದ್ದಕ್ಕಿಂತ ಬೇರೆ ಸ್ಥಳದಲ್ಲಿಯೂ ಹೇತು ಇದ್ದರೆ ಅದು ಸಾಧಾರಣವಾಗುತ್ತದೆ. 'ಪರ್ವತಃ ವಹ್ನಿಮಾನ್ ಪ್ರಮೇಯತ್ವಾತ್' ಎಂದರೆ ಪ್ರಮೇಯತ್ವಹೇತುವು ಸಾಧ್ಯವತ್ತಾದ ಪರ್ವತದಲ್ಲಿರುವುದಲ್ಲದೆ ಪರ್ವತೇತರವಾದ ತಟಾಕಾದಿಗಳಲ್ಲಿಯೂ ಇರುವುದರಿಂದ ಸಾಧಾರಣವಾಗುತ್ತದೆ. ಇದರಿಂದ ವ್ಯಾಪ್ತಿಜ್ಞಾನಪ್ರತಿಬಂಧವಾಗಿ ಅದರಿಂದ ಅನುಮಿತಿ ಬರುವುದಿಲ್ಲ. ಸಾಧ್ಯಾಸಾಮಾನಾಧಿಕರಣವಾದ ಹೇತುವಿಗೆ ಅಸಾಧಾರಣವೆಂದು ಹೆಸರು. 'ಶಬ್ದಃ ನಿತ್ಯಃ— ಶಬ್ದತ್ವಾತ್' ಇಲ್ಲಿ ಶಬ್ದತ್ವಹೇತು ಅಸಾಧಾರಣವ್ಯಭಿಚಾರಿಯಾಗುತ್ತದೆ. ಶಬ್ದತ್ವವು ನಿತ್ಯಾನಿತ್ಯವ್ಯಾವೃತ್ತವಾಗಿ ಕೇವಲ ಶಬ್ದದಲ್ಲಿ ಮಾತ್ರ ಇರುತ್ತದೆ. ಇದರಿಂದಲೂ ವ್ಯಾಪ್ತಿಪ್ರತಿಬಂಧವಾಗಿ ಅನುಮಿತಿಯುಂಟಾಗವುದಿಲ್ಲ. ಅತ್ಯಂತಾಭಾವಾಪ್ರತಿಯೋಗಿ ಸಾಧ್ಯಕಾದಿಗಳಿಗೆ ಅನುಪಸಂಹಾರಿಯೆಂದು ಹೆಸರು. 'ಸರ್ವಮನಿತ್ಯಂ ಪ್ರಮೇಯತ್ವಾತ್' ಎಂಬಲ್ಲಿ ಪ್ರಮೇಯತ್ವ ಹೇತು ಉದಾಹರಣೆ. ಎಲ್ಲವೂ ಪಕ್ಷವಾದುದರಿಂದ ವ್ಯಾಪ್ತಿಗ್ರಹಸ್ಥಲಾಂತರವೇ ಇರುವುದಿಲ್ಲ. ಪಕ್ಷ, ಸಾಧ್ಯ, ಹೇತು, ಮೂರೂ ಅತ್ಯಂತಾಭಾವಕ್ಕೆ ಅಪ್ರತಿಯೋಗಿಗಳಾಗುತ್ತವೆ. ಇದರಿಂದ ವ್ಯತಿರೇಕವ್ಯಾಪ್ತಿಜ್ಞಾನಪ್ರತಿಬಂಧವಾಗಿ ಅನುಮಿತಿ ಹುಟ್ಟುವುದಿಲ್ಲ.

## ವಿರುದ್ಧ

ಸಾಧ್ಯವ್ಯಾಪಕೀಭೂತಾಭಾವಪ್ರತಿಯೋಗಿಗೆ ವಿರುದ್ಧವೆಂಬ ಹೇತ್ವಾಭಾಸವೆಂದು

ಹೆಸರು. ಇದುಸಾಧ್ಯಾಭಾವಗ್ರಹಸಾಮಗ್ರಿಯಾಗಿರುವುದರಿಂದ ತನ್ಮೂಲಕಪ್ರತಿಬಂಧಕವಾಗುತ್ತದೆ. ಸತ್ಪ್ರತಿಪಕ್ಷದಲ್ಲಿ ಪ್ರತಿಹೇತುವು ಸಾಧ್ಯಾಭಾವಸಾಧಕವೂ ಇಲ್ಲಿ ಹೇತುವೇ ಸಾಧ್ಯಾಭಾವ ಸಾಧಕವಾಗಿರುವುದರಿಂದ ಪರಸ್ಪರಭೇದ ತಿಳಿಯಬೇಕು.

## ಅಸಿದ್ಧಿ

ಆಶ್ರಯಾಸಿದ್ಧ್ಯಾದ್ಯನ್ಯತಮತ್ವದಿಂದ ಕೂಡಿರುವುದು ಅಸಿದ್ಧಿ. ಸಾಮಾನ್ಯವಾಗಿ ಇದು ಮೂರು ವಿಧ. ಪಕ್ಷದಲ್ಲಿ ಪಕ್ಷತಾವಚ್ಛೇದಕಧರ್ಮಬಾರದಿದ್ದರೆ ಅದಕ್ಕೆ ಆಶ್ರಯಾಸಿದ್ಧಿಯೆಂದು ಹೆಸರು. 'ಕಾಂಚನಮಯಃ ಪರ್ವತಃ—ವಹ್ನಿಮಾನ್—' ಎಂದು ಸಾಧಿಸುವಾಗ 'ಪರ್ವತವು ಕಾಂಚನಮಯನಲ್ಲ' ಎಂಬ ಜ್ಞಾನ ಬರುವುದರಿಂದ ಕಾಂಚನಮಯಪರ್ವತದಲ್ಲಿ ಪರಾಮರ್ಶಪ್ರತಿಬಂಧದ್ವಾರಾ ಅನುಮಿತಿಪ್ರತಿಬಂಧವಾಗುತ್ತದೆ. ಪಕ್ಷದಲ್ಲಿ ವ್ಯಾಪ್ಯವಾದ ಹೇತುಬಾರದಿದ್ದರೆ ಸ್ವರೂಪಾಸಿದ್ಧಿಯಾಗುತ್ತದೆ. 'ಹ್ರದಃ–ದ್ರವ್ಯಂ–ಧೂಮಾತ್' ಇಲ್ಲಿ ಪಕ್ಷವಾದ ಮಡುವಿನಲ್ಲಿ ಧೂಮವಿಲ್ಲ. ಆಗ ಸಾಧ್ಯವ್ಯಾಪ್ಯಹೇತುಮತ್ತಾಜ್ಞಾನರೂಪ ಪರಾಮರ್ಶಬರುವುದಿಲ್ಲ. ಸಾಧ್ಯಾಪ್ರಸಿದ್ಧ್ಯಾದಿಗಳು ವ್ಯಾಪ್ಯತ್ವಾಸಿದ್ಧಿಯಲ್ಲಿಯೇ ಸೇರುತ್ತವೆ. ಸಾಧ್ಯದಲ್ಲಿ ಸಾಧ್ಯತಾವಚ್ಛೇದಕ ಬಾರದಿದ್ದರೆ ಸಾಧ್ಯಾಪ್ರಸಿದ್ಧಿ. 'ಕಾಂಚನಮಯವಹ್ನಿಮಾನ್' ಎಂದು ಸಾಧ್ಯಹೇಳಿದರೆ ಇದರ ಧರ್ಮ ಅಪ್ರಸಿದ್ಧವಾಗುತ್ತದೆ. ಇದರಿಂದ ಕಾಂಚನಮಯವಹ್ನಿತ್ವವಿಶಿಷ್ಟ ವಹ್ನಿವ್ಯಾಪ್ಯವತ್ತಾಜ್ಞಾನರೂಪಪರಾಮರ್ಶ ಬರುವುದಿಲ್ಲ. ಹೀಗೇ ಹೇತುಹೇಳಿದರೂ ಕಾಂಚನಮಯಧೂಮತ್ವವಿಶಿಷ್ಟಹೇತು ಜ್ಞಾನಬಾರದಿರುವುದರಿಂದ ವ್ಯಾಪ್ತಿಪ್ರತಿಬಂಧವುಂಟಾಗುತ್ತದೆ. 'ವಹ್ನಿಮಾನ್—' ನೀಲಧೂಮಾತ್' ಎಂದರೂ ನೀಲಧೂಮತ್ವವು ಹೇತುತಾವಚ್ಛೇದಕವಾಗದಿರುವುದರಿಂದ ಅದೂ ವ್ಯಾಪ್ಯತ್ವಾಸಿದ್ಧಿಯಾಗುತ್ತದೆ.

## ಬಾಧ

ಪಕ್ಷದಲ್ಲಿ ಸಾಧ್ಯಾಭಾವ ಬಂದರೆ ಭಾಧವಾಗುತ್ತದೆ. 'ವಹ್ನಿಃ—ಅನುಷ್ಣಃ—ದ್ರವ್ಯತ್ವಾತ್' ಇಲ್ಲಿ ದ್ರವ್ಯತ್ವಹೇತುಬಾಧಿತವಾಗುತ್ತದೆ. ಅನುಷ್ಣತ್ವಾಭಾವವುಳ್ಳದ್ದು ವಹ್ನಿ ಎಂದು ಪ್ರತ್ಯಕ್ಷವಿರುವುದರಿಂದ 'ವಹ್ನಿಃ—ಅನುಷ್ಣಃ' ಎಂಬ ಅನುಮಿತಿಬಾರದಿರುವುದೇ ಪ್ರಯೋಜನ. ಇದಕ್ಕೆ 'ಕಾಲಾತ್ಯಯಾಪದಿಷ್ಟ'ವೆಂದು ನಾಮಾಂತರವಿದೆ. ಪ್ರತಿಬಂಧಕವಾದ ಜ್ಞಾನವು ಆಹಾರ್ಯವಾಗಿರಬಾರದು. ಬಾಧವಿರುವಾಗ ಇಚ್ಛೆಯಿಂದುಂಟಾದ ಜ್ಞಾನಕ್ಕೆ ಆಹಾರ್ಯವೆಂದು ಹೆಸರು. ಅದೂ ಅಪ್ರಾಮಾಣ್ಯಜ್ಞಾನದಿಂದ ಆಕ್ರಾಂತವಾಗಿರಬಾರದು.

## ಸತ್ಪ್ರತಿಪಕ್ಷ

ತನ್ನಸಾಧ್ಯಕ್ಕೆ ವಿರುದ್ಧವಾದ ಸಾಧ್ಯಾಭಾವದಿಂದ ವ್ಯಾಪ್ಯವಾದ ಹೇತುವುಳ್ಳದ್ದು

ಎಂಬ ಪರಾಮರ್ಶಕಾಲದಲ್ಲೇ 'ಸಾಧ್ಯವ್ಯಾಪ್ಯವಾದ ಹೇತುವಿನಿಂದ ಕೂಡಿರುವುದು' ಎಂಬ ಪರಾಮರ್ಶದಲ್ಲಿ ವಿಷಯವಾದ ಹೇತುವಿಗೆ ಸತ್ಪ್ರತಿಪಕ್ಷವೆಂದು ಹೆಸರು. ಇದಕ್ಕೆ ಪ್ರಕರಣಸಮವೆಂದು ಪ್ರಾಚೀನರ ಸಂಜ್ಞೆ.

## ಉಪಮಿತಿ

ಸಾದೃಶ್ಯಜ್ಞಾನ ಉಪಮಿತಿಗೆ ಕರಣ. ಒಬ್ಬ ಆರಣ್ಯಕನಿಂದ ಗವಯವೆಂಬ ಪ್ರಾಣಿ ಗೋವಿಗೆ ಸಮಾನವಾಗಿದೆಯೆಂದು ಮೊದಲು ತಿಳಿದಿರುತ್ತಾನೆ. ಒಂದು ಸಮಯ ಕಾಡಿನಲ್ಲಿ ಗವಯಪ್ರಾಣಿಯನ್ನು ನೋಡುತ್ತಾನೆ. ಅಲ್ಲಿ ಸಾದೃಶ್ಯಜ್ಞಾನವುಂಟಾಗುತ್ತದೆ. 'ಗೋಸದೃಶಃ ಗವಯಪದವಾಚ್ಯಃ' ಎಂಬ ಆರಣ್ಯಕನವಾಕ್ಯಾರ್ಥಸ್ಮರಣ ಬರುತ್ತದೆ. ಇದೇ ವ್ಯಾಪಾರ. ಆಮೇಲೆ 'ಗವಯಪದವಾಚ್ಯವಾದದ್ದು ಗವಯ' (ಪ್ರಾಣಿ) ಎಂಬ ಜ್ಞಾನ ಬರುತ್ತದೆ. ಇದೇ ಉಪಮಿತಿ.

## ಶಬ್ದ ಖಂಡ ಪದವೃತ್ತಿ.

ಪದದಿಂದ ಬರುವ ಜ್ಞಾನಕ್ಕೆ ಶಾಬ್ದಬೋಧವೆಂದು ಹೆಸರು. ಅಲ್ಲಿ ಪದಜ್ಞಾನವೇ ಕರಣ. ವೃತ್ತಿಯಿಂದ ಪದಜನ್ಯಪದಾರ್ಥಸ್ಮರಣವು ವ್ಯಾಪಾರವಾಗುತ್ತದೆ. ಶಕ್ತಿ ಲಕ್ಷಣಾನ್ಯತರಸಂಬಂಧಕ್ಕೆ ವೃತ್ತಿಯೆಂದು ಹೆಸರು. ಪದಪದಾರ್ಥಗಳಸಂಬಂಧಕ್ಕೆ (ವಾಚ್ಯವಾಚಕಭಾವರೂಪ) ಶಕ್ತಿಯೆಂದು ಹೆಸರು. ಅದು ಈಶ್ವರೇಚ್ಛಾರೂಪವೆಂದು ಪ್ರಾಚೀನರ ಮತ. ಅವರು ಆಧುನಿಕಸಂಕೇತದಲ್ಲಿ ಶಕ್ತಿ ಇಲ್ಲವೆಂದು ಹೇಳುತ್ತಾರೆ. ಆದರೆ ಅದರಿಂದಲೂ ಅರ್ಥಬೋಧಬರುವುದರಿಂದ ಆಧುನಿಕರು ಈಶ್ವರೇಚ್ಛೆ-ಶಕ್ತಿಯಲ್ಲ ವೆಂದೂ ಕೇವಲ ಇಚ್ಛೆಯೇ ಶಕ್ತಿಯೆಂದೂ ಅಂಗೀಕರಿಸುತ್ತಾರೆ. ವ್ಯಾಕರಣಾದಿಗಳಿಂದ ಶಕ್ತಿಜ್ಞಾನ ಬರುತ್ತದೆ. ಧಾತುಪ್ರಕೃತಿಪ್ರತ್ಯಯಾದಿಗಳ ಶಕ್ತಿಜ್ಞಾನವು ವ್ಯಾಕರಣ ದಿಂದಲೇ ಉಂಟಾಗುತ್ತದೆ. ಬಾಧಕಬಂದರೆ ಕೆಲವು ಕಡೆ ಅದನ್ನು ಬಿಡುತ್ತಾರೆ. ವೈಯಾಕರಣರು ಆಖ್ಯಾತಕ್ಕೆ ಕರ್ತೃವಿನಲ್ಲಿ ಶಕ್ತಿ ಹೇಳುತ್ತಾರೆ. 'ಚೈತ್ರಃಪಚತಿ' ಎಂಬಲ್ಲಿ ಆಖ್ಯಾತಾರ್ಥಕರ್ತೃವಿಗೆ ಚೈತ್ರನೊಡನೆ ಅಭೇದದಿಂದ ಅನ್ವಯವೆಂದು ಅವರ ಮತ. ಇದು ಗೌರವಾಸ್ಪದವಾದುದರಿಂದ ಅಂಗೀಕರಿಸಲ್ಪಡುವುದಿಲ್ಲ. ಆಖ್ಯಾತಕ್ಕೆ (ತಿಙಾದಿ) ಕೃತಿಯಲ್ಲಿ ಶಕ್ತಿ. ಇದು ಚೈತ್ರನಲ್ಲಿ ಪ್ರಕಾರವಾಗಿ ತೋರುತ್ತದೆ. 'ಕೃತ್ಯಾಶ್ರಯಶ್ಚೈತ್ರಃ' ಎಂದು ಬೋಧ. ಕರ್ತೃಸಂಖ್ಯಾ ಅಭಿಹಿತವಾಗದಿದ್ದರೆ ಆಗ ಕರ್ತೃವಿಗೆ ತೃತೀಯಾ ಎಂದರ್ಥಕಲ್ಪಿಸುವುದರಿಂದ ಕರ್ಮಣಿ ಪ್ರಯೋಗಕ್ಕೆ ಆಪತ್ತಿ ಇಲ್ಲ. ಮೀಮಾಂಸಕರು ಹೇಳುವಂತೆ ವ್ಯಾಪಾರದಲ್ಲಿಯೂ ಶಕ್ತಿ ಇಲ್ಲ. 'ರಥೋಗಚ್ಛತಿ' ಇತ್ಯಾದಿಸ್ಥಲವಲ್ಲಿ ಸ್ವವ್ಯಾಪಾರದಲ್ಲಿ ಅಥವಾ ಆಶ್ರಯತ್ವದಲ್ಲಿಯೂ 'ಜಾನಾತಿ' ಎಂಬಲ್ಲಿ ಆಶ್ರಯತ್ವದಲ್ಲಿಯೂ, 'ನಶ್ಯತಿ' ಎಂಬಲ್ಲಿ ಪ್ರತಿಯೋಗಿತ್ವದಲ್ಲಿಯೂ ಲಕ್ಷಣಾ. ಕೋಶ ದಿಂದ ಶಕ್ತಿಜ್ಞಾನಬರುವಲ್ಲಿಯೂ ಬಾಧಕವಿದ್ದರೆ ಬಿಡಬೇಕು.

ನೀಲಾದಿಪದಗಳಿಗೆ ಕೋಶದಲ್ಲಿ ನೀಲರೂಪಾದಿಗಳಲ್ಲಿಯೂ, ನೀಲಾದಿವಿಶಿಷ್ಟದಲ್ಲಿಯೂ ಶಕ್ತಿ ಹೇಳಿದೆ ಆದರೆ ಲಾಘವದಿಂದ ನೀಲಾದಿರೂಪದಲ್ಲಿ ಮಾತ್ರ ಶಕ್ತಿ ಹೇಳಬೇಕು. ನೀಲರೂಪವಿಶಿಷ್ಟದಲ್ಲಿ ಲಕ್ಷಣಾ. ಕೋಗಿಲೆ ಪಿಕಪದವಾಚ್ಯವಾಗಿದೆಯೆಂಬ ಶಕ್ತಿ ಜ್ಞಾನವು ಆಪ್ತವಾಕ್ಯದಿಂದ ಬರುತ್ತದೆ. ಹೀಗೆ ವ್ಯವಹಾರದಿಂದಲೂ ಶಕ್ತಿ ಜ್ಞಾನ ಬರುತ್ತದೆ. ಪ್ರಯೋಜಕವೃದ್ಧನ ಮಾತಿನಿಂದ ಪ್ರಯೋಜ್ಯವೃದ್ಧನು ಆಯಾಯವಸ್ತುಗಳನ್ನು ತರುತ್ತಾನೆ. ಇದನ್ನು ನೋಡಿದ ವ್ಯುತ್ಪತ್ಸುವಾದ ಬಾಲಕನು ಘಟಾದಿಪದಗಳಿಗೆ ಆಯಾಯಪದಾರ್ಥಗಳಲ್ಲಿ ಶಕ್ತಿ ನಿಶ್ಚಯವನ್ನು ಹೊಂದುತ್ತಾನೆ. ಕಾರ್ಯಾನ್ವಿತ ಪದಾರ್ಥದಲ್ಲಿಯೇ ಶಕ್ತಿಯೆಂಬ ಮೀಮಾಂಸಕಮತಕ್ಕೆ ಕೆಲವು ಕಡೆ ವ್ಯಭಿಚಾರಬರುವುದರಿಂದ ಅದು ಸಮಂಜಸವಲ್ಲ. ಯವಾದಿಪದಗಳಿಗೆ ವಾಕ್ಯಶೇಷದಿಂದ ಶಕ್ತಿನಿರ್ಣಯವಾಗುತ್ತದೆ. ಸಮಾನಾರ್ಥಕಪದಾಂತರದಿಂದ ಒಂದು ಪದದ ಅರ್ಥ ಹೇಳುವುದಕ್ಕೆ ವಿವರಣವೆಂದು ಹೆಸರು. 'ಪಚತಿ' ಎಂಬದಕ್ಕೆ 'ಪಾಕಂ ಕರೋತಿ' ಎಂಬವಿವರಣದಿಂದ ಆಖ್ಯಾತಕ್ಕೆ ಯತ್ನಾರ್ಥಕತ್ವವು ನಿರ್ಣೀತವಾಗುತ್ತದೆ. 'ಸಹಕಾರತರೌ ಪಿಕಃ ಮಧುರಂ ರೌತಿ' ಇತ್ಯಾದಿಸ್ಥಳದಲ್ಲಿ ಸಹಕಾರತರುರೂಪಪ್ರಸಿದ್ಧಪದಸಾನ್ನಿಧ್ಯದಿಂದ ಪಿಕಪದಕ್ಕೆ ಕೋಗಿಲೆಯಲ್ಲಿ ಶಕ್ತಿಗ್ರಹಬರುತ್ತದೆ.

ತಾರ್ಕಿಕರು ಪ್ರಥಮಾಂತಾರ್ಥಮುಖ್ಯವಿಶೇಷ್ಯಕಶಾಬ್ದಬೋಧವನ್ನು ಹೇಳುತ್ತಾರೆ. 'ಚೈತ್ರಃ ಗ್ರಾಮಂ ಗಚ್ಛತಿ' ಎಂದರೆ 'ಗ್ರಾಮಾಭಿನ್ನಏಕಕರ್ಮಕಗಮನಾನುಕೂಲಕೃತ್ಯಾಶ್ರಯಃ ಚೈತ್ರಃ ಎಂದು ಬೋಧ. ವ್ಯಭಿಚಾರ, ಆನಂತ್ಯದೋಷದಿಂದ ಜಾತಿಯಲ್ಲೇ ಶಕ್ತಿಯೆಂದು ಮೀಮಾಂಸಕರ ಮತ. ಅವರು ಜಾತಿವಿಶಿಷ್ಟವ್ಯಕ್ತಿಯಲ್ಲಿ ಲಕ್ಷಣಾ ಹೇಳುತ್ತಾರೆ. ಆದರೆ ವ್ಯಕ್ತಿಯಲ್ಲಿ ಶಕ್ತಿ ಹೇಳಿದರೆ ಶಾಬ್ದಬೋಧದಲ್ಲಿ ವ್ಯಕ್ತಿಭಾನ ಬರಲಾರದು. ಅದಕ್ಕೋಸ್ಕರ ಜಾತ್ಯಾಕೃತಿವಿಶಿಷ್ಟ ವ್ಯಕ್ತಿಯಲ್ಲೇ ಶಕ್ತಿ ಹೇಳಬೇಕು. ಅನುಪಪತ್ತಿ ಇಲ್ಲದೆ ಲಕ್ಷಣಾ ಹೇಳುವುದು ಯುಕ್ತವಲ್ಲ. ವಾಚಕತಾಸಂಬಂಧದಿಂದ ಶಕ್ತಿ ವಿಶಿಷ್ಟವಾದದ್ದು (ಶಕ್ತ) ಪದ. ಇದು ಯೌಗಿಕ. ರೂಢ, ಯೋಗರೂಢ, ಯೌಗಿಕರೂಢವೆಂದು ನಾಲ್ಕುವಿಧ. ಕೇವಲ ಅವಯವಾರ್ಥವಿರುವ ಪದ ಯೌಗಿಕ. ಪಾಚಕ ಎಂದರೆ ಪಾಕಕ್ರಿಯಾ ಉಳ್ಳವನು ಯಾರಾದರೂ ಆಗಬಹುದು. ಅವಯವ ಶಕ್ತ್ಯಪೇಕ್ಷೆ ಇಲ್ಲದೆ ಕೇವಲ ಸಮುದಾಯಶಕ್ತಿಯಿಂದ ಅರ್ಥಬೋಧಕವಾದ ಪದ ರೂಢವಾಗುತ್ತದೆ. ಗೋ ಮುಂತಾದ ಪದಗಳು ಅವಯವಾರ್ಥಾಪೇಕ್ಷೆ ಇಲ್ಲದೆ ಗೋತ್ವಾಕ್ರಾಂತವ್ಯಕ್ತಿಯನ್ನು ಮಾತ್ರ ತಿಳಿಸುತ್ತವೆ. ಇವೆರಡೂ ಇರುವವುಗಳು ಯೌಗಿಕರೂಢಗಳು. ಪಂಕಜ ಪದವು ಪಂಕಜನಿಕರ್ತೃತ್ವವನ್ನು ತಿಳಿಸುತ್ತಾ ಕಮಲಾರ್ಥವನ್ನು ತಿಳಿಸುತ್ತದೆ. ರೂಢಿಜ್ಞಾನವು ಕೇವಲ ಯೋಗಿಕಾರ್ಥಜ್ಞಾನದಲ್ಲಿ ಪ್ರತಿಬಂಧಕವಾಗುವುದೆಂದು ಪ್ರಾಚೀನರ ಮತ. ಆದುದರಿಂದ ಕೇವಲ ಅವಯವ ಶಕ್ತಿಯಿಂದ ಕುಮುದಾದಿಗಳಲ್ಲಿ ಪ್ರಯೋಗವಿಲ್ಲ. ರೂಢ್ಯರ್ಥಕ್ಕೆ ಬಾಧಬಂದಲ್ಲಿ ಲಕ್ಷಣೆಯಿಂದ ಕುಮುದಾದಿಗಳ ಬೋಧವೆಂದು ನವೀನರ ಮತ. ಎಲ್ಲಿ ಕುಮುದ ಬೋಧದಲ್ಲಿಯೂ ತಾತ್ಪರ್ಯವಿಲ್ಲದೆ ಪದ್ಮಾರ್ಥದಲ್ಲಿ

ಬಾಧ ಬರುತ್ತದೋ ಅಲ್ಲಿ ಕೇವಲಾವಯವಶಕ್ತಿಯಿಂದ ಶಾಬ್ದಬೋಧ ಬರುತ್ತದೆ. ಅವಯವಾರ್ಥ, ರೂಢ್ಯರ್ಥಗಳಿಗೆ ಎಲ್ಲಿ ಸ್ವಾತಂತ್ರ್ಯದಿಂದ ಅನ್ವಯವೋ ಅದು ಯೌಗಿಕ ರೂಢವಾಗುತ್ತದೆ. ಉದ್ಭಿದಾದಿಗಳು ಅವಯವಾರ್ಥದಿಂದ ತರುಗುಲ್ಮಾದಿಗಳನ್ನೂ, ರೂಢ್ಯರ್ಥದಿಂದ ಯಾಗವಿಶೇಷವನ್ನೂ ಬೋಧಿಸುತ್ತವೆ.

## ಲಕ್ಷಣಾ

ತಾತ್ಪರ್ಯಾರ್ಥಕೂಡದಿರುವುದರಿಂದ ಎಲ್ಲಿ ಶಕ್ಯಾರ್ಥಸಂಬಂಧ ಹೇಳುತ್ತೇವೋ ಅದೇ ಲಕ್ಷಣಾ. 'ಗಂಗಾಯಾಂ ಘೋಷಃ' ಗಂಗೆಯಲ್ಲಿ ಗೊಲ್ಲರಹಳ್ಳಿ ಇದೆಯೆಂದರೆ ಗಂಗಾ ಪದಕ್ಕೆ ಪ್ರವಾಹರೂಪಾರ್ಥದಲ್ಲಿ ತಾತ್ಪರ್ಯಾನುಪಪತ್ತಿ ಬರುವುದರಿಂದ ಲಕ್ಷಣೆ ಯಿಂದ ತೀರರೂಪಾರ್ಥಬೋಧವಾಗುತ್ತದೆ. ಪ್ರವಾಹರೂಪಶಕ್ಯಾರ್ಥಸಂಬಂಧ ತೀರ ದಲ್ಲಿ ಗೃಹೀತವಾಗುವುದರಿಂದ ತೀರಸ್ಮರಣ ಬಂದು ಆಮೇಲೆ ಗಂಗಾತೀರದಲ್ಲಿ ಘೋಷ ವೆಂದು ಬೋಧ ಬರುತ್ತದೆ. ಅನ್ವಯಾನುಪಪತ್ತಿಯೊಂದೇ ಲಕ್ಷಣಾಬೀಜವೆಂದರೆ 'ಕಾಕೇಭ್ಯೋ ದಧಿ ರಕ್ಷ್ಯತಾಮ್' ಇತ್ಯಾದಿಸ್ಥಳವಲ್ಲಿ ಕಾಕಪದಕ್ಕೆ ದಧ್ಯುಪಘಾತಕದಲ್ಲಿ ಲಕ್ಷಣಾಬಾರದೇ ಹೋಗಬೇಕಾಗುತ್ತದೆ. ಅಜಹತ್ಸ್ವಾರ್ಥಲಕ್ಷಣೆಯಲ್ಲಿ ಛತ್ರಿಣೋ ಯಾಂತೀತ್ಯಾದಿ ಸ್ಥಳದಲ್ಲಿ ಛತ್ರಿಉಳ್ಳವನೂ ಇಲ್ಲದವನೂ ಸಮುದಾಯತ್ವರೂಪದಿಂದ ಬೋಧಿತರಾಗುತ್ತಾರೆ. ಲಕ್ಷ್ಯತಾವಚ್ಛೇದಕವಾದ ತೀರತ್ವಾದಿಗಳಲ್ಲಿ ಲಕ್ಷಣಾವನ್ನು ಅಂಗೀಕಾರಮಾಡುವುದಿಲ್ಲ, ಅಲ್ಲಿ ಲಕ್ಷಣಾ ಅಂಗೀಕರಿಸದಿದ್ದರೂ ಲಕ್ಷತಾವಚ್ಛೇದಕ ಪ್ರಕಾರಕಬೋಧ ಬಂದೇ ಬರುತ್ತದೆ. ಲಾಕ್ಷಣಿಕಪದವು ಯಾವಾಗಲೂ ಶಾಬ್ದಬೋಧ ಜನಕವಾಗುವುದಿಲ್ಲ. ಲಾಕ್ಷಣಿಕಪದಮೊಡನೆ ಹೇಳಿದ ಶಕ್ತವಾದ ಘೋಷಪದಾದಿ ಗಳಿಂದಲೇ ಅದು ನಿರ್ವಾಹವಾಗುತ್ತದೆ. ವಾಕ್ಯದಲ್ಲಿ ಶಕ್ತಿ ಅಂಗೀಕೃತವಾಗದಿರುವುದ ರಿಂದ ಅಲ್ಲಿ ಲಕ್ಷಣೆಯೂ ಇಲ್ಲ. 'ಗಭೀರಾಯಾಂ ನದ್ಯಾಂ ಘೋಷಃ' ಎಂಬಲ್ಲಿ ನದೀ ಪದಕ್ಕೆ ನದೀತೀರದಲ್ಲಿ ಲಕ್ಷಣಾ. ಏಕದೇಶಾನ್ವಯನನ್ನು ಕೆಲವು ಕಡೆ ಅಂಗೀಕರಿಸಿರು ವುದರಿಂದ ಗಭೀರಾಪದಾರ್ಥಕ್ಕೆ ನದಿಯೊಡನೆ ಅಭೇದಾನ್ವಯ ಬರುತ್ತದೆ. ಏಕದೇಶಾ ನ್ವಯವನ್ನು ಅಂಗೀಕರಿಸುವುದಿಲ್ಲವೆಂದರೆ ನದೀಪದಕ್ಕೆ ಗಭೀರನದೀತೀರದಲ್ಲಿ ಲಕ್ಷಣಾ. ಗಭೀರಪದವು ತಾತ್ಪರ್ಯ ಗ್ರಾಹಕವಾಗುತ್ತದೆ. ಬಹುವ್ರೀಹಿಸಮಾಸದಲ್ಲಿಯೂ ಚಿತ್ರಗುಮುಂತಾದ ಸ್ಥಳವಲ್ಲಿ ಗೋಪದಕ್ಕೆ ಚಿತ್ರಗೋಸ್ವಾಮಿಯಲ್ಲಿ ಲಕ್ಷಣಾ. ಚಿತ್ರ ಪದವು ತಾತ್ಪರ್ಯಗ್ರಾಹಕ. ತತ್ಪುರುಷದಲ್ಲ ಪೂರ್ವಪದದಲ್ಲಿ ಲಕ್ಷಣಾ. ರಾಜಪುರು ಷಾದಿಪದದಲ್ಲಿ ರಾಜಪದಾರ್ಥದೊಡನೆ ಪುರುಷಪದಾರ್ಥಕ್ಕೆ ಸಾಕ್ಷಾದನ್ವಯ ಬರುವುದಿಲ್ಲ. ನಿಪಾತಾತಿರಿಕ್ತನಾಮಾರ್ಥಗಳಿಗೆ ಭೇದಸಂಬಂಧದಿಂದ ಅನ್ವಯವಿಲ್ಲವೆಂದು ಸಿದ್ಧಾಂತ. ಆದುದರಿಂದ ರಾಜಪದಕ್ಕೆ ರಾಜಸಂಬಂಧಿಯಲ್ಲಿ ಲಕ್ಷಣಾ. ಅದಕ್ಕೆ ಪುರುಷಪದಮೊಡನೆ ಅಭೇದದಿಂದ ಅನ್ವಯ. ದ್ವಂದ್ವದಲ್ಲಿ ಮೀಮಾಂಸಕರು ಹೇಳುವಂತೆ ಲಕ್ಷಣಾ ಇಲ್ಲ. ವಾಸ್ತವಭೇಧವಿರುವಲ್ಲಿಯೇ ದ್ವಂದ್ವ. ಸಮಾಹಾರದ್ವಂದ್ವದಲ್ಲಿ ಸಮಾಹಾರ ಅನುಭವ

ವಿಷಯವಾಗುವುದಾದರೆ ಆಗ 'ಅಹಿನಕುಲಂ' ಇತ್ಯಾದಿ ಸಮಾಸಗಳಲ್ಲಿ ಪರಪದಕ್ಕೆ ಅಹಿನಕುಲಸಮಾಹಾರದಲ್ಲಿ ಲಕ್ಷಣಾ. ಪೂರ್ವಪದವು ತಾತ್ಪರ್ಯಗ್ರಾಹಕವಾಗುತ್ತದೆ. 'ಪಿತರೌ' ಇತ್ಯಾದಿಸ್ಥಳದಲ್ಲಿ ಪಿತೃಪದದಲ್ಲಿ ಜನಕದಂಪತೀರೂಪಾರ್ಥದಲ್ಲಿ ಲಕ್ಷಣಾ. ಎಲ್ಲಿ ಏಕತ್ವ, ನಪುಂಸಕತ್ವ ಹೇಳಿದೆಯೋ ಅಲ್ಲಿ ಮಾತ್ರ ಸಮಾಹಾರ ಸಂಜ್ಞೆಯೆಂದೂ ಕೆಲವರ ಮತ. ಇತರ ಸ್ಥಳದಲ್ಲಿ ಏಕವಚನ ಅಸಾಧುವೆಂದು ಅವರ ಅಭಿಪ್ರಾಯ. 'ಘಟಾಃ' ಎಂಬ ಏಕಶೇಷದಲ್ಲಿ ಲಕ್ಷಣಾ ಇಲ್ಲ. ಕರ್ಮಧಾರಯದಲ್ಲಿ ಲಕ್ಷಣಾ ಇಲ್ಲ. ಅವ್ಯಯೀಭಾವಸಮಾಸದಲ್ಲಿ ಉಪಕುಂಭಂ' ಇತ್ಯಾದಿಸ್ಥಳಗಳಲ್ಲಿ ಪರಪದವಾದ ಕುಂಭಪದದಲ್ಲಿ ಕುಂಭಸಂಬಂಧ್ಯರ್ಥದಲ್ಲಿ ಲಕ್ಷಣಾ. 'ಕುಂಭಸಂಬಂಧ್ಯಭಿನ್ನಂ ಸಮೀಪಂ' ಎಂದು ಬೋಧ. ಹೀಗೆ ಪದಶಕ್ತಿಯಿಂದಲೇ ನಿರ್ವಾಹವಾಗುವುದರಿಂದ ಸಮಾಸದಲ್ಲಿ ಎಲ್ಲಿಯೂ ಲಕ್ಷಣಾ ಇಲ್ಲವೆಂದು ತಾರ್ಕಿಕ ಸಿದ್ಧಾಂತ.

## ಆಸತ್ತಿಃ

ಆಸತ್ತಿ, ಯೋಗ್ಯತಾ, ಆಕಾಂಕ್ಷಾ, ತಾತ್ಪರ್ಯಜ್ಞಾನಗಳು ಶಾಬ್ದಬೋಧದಲ್ಲಿ ಸಹಕಾರಿಕಾರಣವಾಗುತ್ತವೆ. ಅವ್ಯವಧಾನದಿಂದ ಪದಜನ್ಯಪದಾರ್ಥೋಪಸ್ಥಿತಿಗೆ ಆಸತ್ತಿ ಎಂದು ಹೆಸರು. 'ಗಿರಿಃ, ಭುಕ್ತಂ, ಅಗ್ನಿಮಾನ್, ದೇವದತ್ತಃ' ಇತ್ಯಾದಿಪದಗಳಲ್ಲಿ ಆಸತ್ತಿ ಇಲ್ಲದಿರುವುದರಿಂದ ಶಾಬ್ದಬೋಧ ಬರುವುದಿಲ್ಲ. ಕೆಲವು ಕಡೆ ಆಸತ್ತಿಭ್ರಮೆಯಿಂದಲೂ ಶಾಬ್ದಬೋಧ ಬರುತ್ತದೆ ಅನೇಕ ವಿಶೇಷಣಾದಿಗಳಿಂದ ಕೂಡಿದ ವಾಕ್ಯದಲ್ಲಿ ಉತ್ತರೋತ್ತರಪದಸ್ಮರಣೆಯಿಂದ ಪೂರ್ವಪೂರ್ವಪದಸ್ಮರಣವು ನಾಶವಾದರೂ, ಪ್ರತ್ಯೇಕಪದಾನುಭವದಿಂದುಂಟಾದ ಸಂಸ್ಕಾರಗಳಿಂದಕೂಡಿದ ಅಂತ್ಯಪದವಿಷಯಕವಾದಸ್ಮರಣೆಯು ಅವ್ಯವಧಾನದಿಂದ ಬರುತ್ತದೆ. ನಾನಾಸಂನಿಕರ್ಷಗಳಿಂದ ಒಂದು ಪ್ರತ್ಯಕ್ಷಬರುವಂತೆ ನಾನಾಸಂಸ್ಕಾರಗಳಿಂದ ಒಂದು ಸ್ಮರಣೆ ಬರಲು ತೊಂದರೆ ಇಲ್ಲ. ಅಷ್ಟುಪದಗಳ ಸ್ಮರಣೆಯಿಂದಲೂ ಒಂದೇ ಬಾರಿ ಖಲೇಕಪೋತನ್ಯಾಯದಿಂದ ಅಷ್ಟುಪದಾರ್ಥಗಳಿಗೂ ಕ್ರಿಯಾಕರ್ಮಭಾವದಿಂದ ಅನ್ವಯಬೋಧರೂಪಶಾಬ್ದಬೋಧ ಬರುತ್ತದೆಂದು ಕೆಲವರ ಮತ. ಖಂಡವಾಕ್ಯಾರ್ಥಬೋಧವಾದೊಡನೇ ಅದೇ ಪದಾರ್ಥಸ್ಮೃತಿಯಿಂದ ಮಹಾವಾಕ್ಯಾರ್ಥಬೋಧವೆಂದು ಕೆಲವು ನೈಯಾಯಿಕರ ಅಭಿಪ್ರಾಯ. ಅರ್ಥಾಧ್ಯಾಹಾರ ಹೇಳುವುದು ಸರಿಯಲ್ಲ. ತಚ್ಛಾಬ್ದಬೋಧದಲ್ಲಿ ತತ್ಪದಜನ್ಯಪದಾರ್ಥೋಪಸ್ಥಿತಿಕಾರಣವಾದುದರಿಂದ ಪದಾಧ್ಯಾಹಾರವೇ ಆವಶ್ಯಕವಾಗಿದೆ. ಒಂದು ಪದಾರ್ಥದಲ್ಲಿ ಇನ್ನೊಂದು ಪದಾರ್ಥಸಂಬಂಧವೇ ಯೋಗ್ಯತಾ. 'ವಹ್ನಿನಾ ಸಿಂಚತಿ' ಇಲ್ಲಿ ಯೋಗ್ಯತಾ ಇಲ್ಲದಿರುವುದರಿಂದ ಶಾಬ್ದಬೋಧ ಬರುವುದಿಲ್ಲ. ಸಂಶಯನಿಶ್ಚಯಸಾಧಾರಣವಾದ ಈ ಯೋಗ್ಯತಾ ಜ್ಞಾನವು ಕಾರಣವೆಂದು ಪ್ರಾಚೀನ ಮತ. ನವೀನರು ಈ ಯೋಗ್ಯತಾ ಜ್ಞಾನವನ್ನು ಕಾರಣವನ್ನಾಗಿ ಅಂಗೀಕರಿಸುವುದಿಲ್ಲ.

ಪೂರ್ವೋಕ್ತ ಸ್ಥಳದಲ್ಲಿ ಅಯೋಗ್ಯತಾನಿಶ್ಚಯರೂಪಪ್ರತಿಬಂಧಕವಿರುವುದರಿಂದ ಶಾಬ್ದ ಬೋಧ ಬರುವುದಿಲ್ಲವೆನ್ನುತ್ತಾರೆ. ಯಾವಪದವಿಲ್ಲದಿದ್ದರೆ ಯಾವ ಪದಕ್ಕೆ ಶಾಬ್ದಬೋಧ ಬರುವುದಿಲ್ಲವೋ ಆಪದದೊಡನೆ ಪ್ರಕೃತಪದಕ್ಕೆ ಆಕಾಂಕ್ಷೆ ಇರುತ್ತದೆ. ಘಟಕರ್ಮತಾ ಬೋಧ ಬರಬೇಕಾದರೆ ಘಟಪದೋತ್ತರ ದ್ವಿತೀಯಾವಿಭಕ್ತಿರೂಪಾಕಾಂಕ್ಷಾ ಜ್ಞಾನ ಕಾರಣವಾಗುತ್ತದೆ. ಹೇಳುವವನ ಇಚ್ಛೆಯೇ ತಾತ್ಪರ್ಯಜ್ಞಾನ. ವೇದದಲ್ಲಿಯೂ ತಾತ್ಪರ್ಯನಿಶ್ಚಯಕ್ಕೋಸ್ಕರ ಈಶ್ವರನು ಕಲ್ಪಿತನಾಗುತ್ತಾನೆ. ಕೆಲವರು ಅಲ್ಲಿ ಲಾಘವ ಜ್ಞಾನಸಹಕೃತ ಅನುಮಾನದಿಂದ ಬೋಧವೆಂದು ಅಂಗೀಕರಿಸುತ್ತಾರೆ 'ಸೈಂಧವ ಮಾನಯ' ಎಂಬಲ್ಲಿ ಸೈಂಧವಪದಕ್ಕೆ ಯುದ್ಧ ಭೂಮಿಯಲ್ಲಿ ಕುದುರೆಯೆಂದು ತಾತ್ಪರ್ಯ ಜ್ಞಾನದಿಂದಲೇ ನಿಶ್ಚಿತವಾಗುತ್ತದೆ.

## ಸ್ಮೃತಿಃ

ಅನುಭವ, ಸ್ಮೃತಿಯೆಂದು ಜ್ಞಾನ ಎರಡು ರೀತಿಯಾಗಿ ಹೇಳಿದೆ. ಅನುಭವದ ಚಾತುರ್ವಿಧ್ಯ ಹಿಂದೆ ಹೇಳಿದೆ. ಅನುಭವದಿಂದ ಹುಟ್ಟಿದ ಜ್ಞಾನಕ್ಕೆ ಸ್ಮೃತಿಯೆಂದು ಹೆಸರು. ಅನುಭವತ್ವೇನ ಕಾರಣ ಹೇಳಬಾರದು, ಜ್ಞಾನತ್ವೇನ ಕಾರಣ ಹೇಳಬೇಕೆಂದು ಕೆಲವರ ಮತ.

## ಮನಸ್ಸು

ಸುಖಾದಿಸಾಕ್ಷಾತ್ಕಾರಕ್ಕೆ ಕಾರಣವಾದದ್ದೇ ಮನಸ್ಸು. ಇದು ಸುಖಾದಿಗಳ ಅಸಮವಾಯಿಕಾರಣವಾದ ಸಂಯೋಗಕ್ಕೆ ಆಶ್ರಯವಾಗಿರುತ್ತದೆ. ಚಾಕ್ಷುಷಾದಿ ಪ್ರತ್ಯಕ್ಷಜ್ಞಾನಗಳು ಏಕಕಾಲದಲ್ಲಿ ಆಗದಿರುವುದರಿಂದ ಮನಸ್ಸು ಅಣುವೆಂದು ನಿಶ್ಚಿತ ವಾಗುತ್ತದೆ. ವಿಭುವಾಗಿದ್ದರೆ ಸದಾಮನಃ ಸಂಯೋಗವಿರುವುದರಿಂದ ಏಕದಾ ನಾನಾ ಜ್ಞಾನಗಳುಂಟಾಗಬೇಕಾಗುತ್ತದೆ. ಏಕದಾ ನಾನಾಜ್ಞಾನಗಳು ಅನುಭವಸಿದ್ಧವಾಗಿಲ್ಲ. ಅಣುವಾದರೂ ಅತಿಲಾಘವದಿಂದ ನಾನಾ ಇಂದ್ರಿಯ ಸಂಯೋಗಹೊಂದುವುದರಿಂದ ನಾನಾಜ್ಞಾನೋತ್ಪತ್ತಿಯಾಗುತ್ತದೆ. ಶತಪತ್ರಶತಭೇದನ್ಯಾಯದಿಂದ ಏಕದಾ ಆಗುತ್ತ ದೆಂಬುದು ಭ್ರಾಂತಿ.

## ಗುಣ

ಇಪತ್ತುನಾಲ್ಕುಗುಣಗಳಲ್ಲಿಯೂ ಅಸಮವಾಯಿಕಾರಣತಾವಚ್ಛೇದಕರೂಪದಿಂದ ಸಿದ್ಧವಾದ ಗುಣತ್ವ ಜಾತಿ ಅನುಸ್ಯೂತವಾಗಿದೆ. ಇದು ದ್ರವ್ಯವನ್ನಾಶ್ರಯಿಸಿದ್ದು ಗುಣ ಶೂನ್ಯವಾಗಿಯೂ, ಕ್ರಿಯಾರಹಿತವಾಗಿಯೂ ಇರುತ್ತದೆ. ರೂಪ, ರಸ, ಸ್ಪರ್ಶ, ಗಂಧ, ಪರತ್ವ, ಅಪರತ್ವ, ದ್ರವತ್ವ, ಸ್ನೇಹ ವೇಗಗಳು ಮೂರ್ತಗುಣಗಳಾಗುತ್ತವೆ.

ಅಮೂರ್ತದಲ್ಲಿಲ್ಲದಗುಣಗಳೆಂದರ್ಥ. 'ವಿಭ್ವವೃತ್ತಿಸಂಖ್ಯಾದಿಪಂಚಕಭಿನ್ನಗುಣತ್ವಂ' ಎಂದು ಅವುಗಳ ನಿಷ್ಕೃಷ್ಟವಾದ ಲಕ್ಷಣ. ಧರ್ಮ, ಅಧರ್ಮ, ಭಾವನಾ, ಶಬ್ದ, ಬುದ್ಧ್ಯಾದಿಷಟ್ಕಗಳು ಅಮೂರ್ತಗುಣಗಳು. ಸಂಖ್ಯಾ, ಪರಿಮಾಣ, ಪೃಥಕ್ತ್ವ ಸಂಯೋಗ, ವಿಭಾಗಗಳು ಮೂರ್ತಾಮೂರ್ತಗುಣಗಳು ಸಂಯೋಗ, ವಿಭಾಗ, ಸಂಖ್ಯಾ, (ದ್ವಿತ್ವಾದಿ) ಪೃಥಕ್ತ್ವಾದಿಗಳು ಅನೇಕಾಶ್ರಿತಗುಣಗಳು. ಉಳಿದ ರೂಪರಸಾದಿಗಳು ಏಕಾಶ್ರಿತಗುಣಗಳು. ಬುದ್ಧ್ಯಾದಿಗಳು ಆರು, ರೂಪರಸ, ಗಂಧಸ್ಪರ್ಶಗಳು, ಸ್ನೇಹ, ಸಾಂಸಿದ್ಧಿಕದ್ರವತ್ವ, ಅದೃಷ್ಟ (ಧರ್ಮಾಧರ್ಮ) ಭಾವನಾರೂಪಸಂಸ್ಕಾರ, ಶಬ್ದ ಇವು ಗಳು ವಿಶೇಷಗುಣಗಳಾಗುತ್ತವೆ. ಸಂಖ್ಯಾ, ಪರಿಮಾಣ, ಪೃಥಕ್ತ್ವ, ಸಂಯೋಗ, ವಿಭಾಗ, ಪರತ್ವ, ನೈಮಿತ್ತಿಕದ್ರವತ್ವ, ಗುರುತ್ವ, ವೇಗಗಳು ಸಾಮಾನ್ಯಗುಣಗಳಾಗು ತ್ತವೆ. ಸಂಖ್ಯಾ ಆದಿಯಾಗಿ ಅಪರತ್ವದವರೆಗೆ ಇರುವ ಗುಣಗಳೂ, ದ್ರವತ್ವ, ಸ್ನೇಹ ಗುಣಗಳು ಎರಡು ಇಂದ್ರಿಯಗಳಿಂದ (ತ್ವಕ್, ನಯನ) ಗ್ರಹಣಯೋಗ್ಯಗಳಾಗಿವೆ. ರೂಪ, ರಸ, ಗಂಧ, ಸ್ಪರ್ಶಗಳೂ ಬಾಹ್ಯೇಂದ್ರಿಯಗಳಿಂದ ಗ್ರಹಿಸಲು ಯೋಗ್ಯವಾದ ಗುಣಗಳು. ಗುರುತ್ವ, ಧರ್ಮ, ಅಧರ್ಮ, ಭಾವನಾ ಇವು ಅತೀಂದ್ರಿಯಗಳು. ಬುದ್ಧಿ ಸುಖಾದಿ ವಿಭುಗುಣಗಳು ಅಕಾರಣ ಗುಣೋತ್ಪನ್ನಗಳು. (ಕಾರಣದ ಗುಣ ದಿಂದ ಹುಟ್ಟಿದವುಗಳಲ್ಲ) ರೂಪ, ರಸ, ಗಂಧ ಸ್ಪರ್ಶ, ದ್ರವತ್ವ, ಸ್ನೇಹ, ವೇಗ, ಗುರುತ್ವ, ಏಕತ್ವ, ಪೃಥಕ್ತ್ವ, ಪರಿಮಾಣ, ಸ್ಥಿತಿಸ್ಥಾಪಕಸಂಸ್ಕಾರ ಇವು ಕಾರಣಗುಣೋತ್ಪನ್ನ ಗಳು. (ತಮ್ಮ ಸಮವಾಯಿಕಾರಣಗಳಲ್ಲಿರುವ ಗುಣದಿಂದ ಹುಟ್ಟುವವುಗಳು) ಸಂಯೋಗ, ವಿಭಾಗ, ವೇಗಗುಣಗಳು ಕರ್ಮಜಗಳು. (ಕ್ರಿಯಾದಿಂದ ಹುಟ್ಟುತ್ತವೆ.) ರೂಪ, ರಸ, ಗಂಧ ಸ್ಪರ್ಶ, ಪರಿಮಾಣ, ಏಕತ್ವ, ಪೃಥಕ್ತ್ವ, ಸ್ನೇಹ, ಶಬ್ದ, ಇವುಗಳು ಅಸಮವಾಯಿಕಾರಣಗಳಾಗುತ್ತವೆ. ಬುದ್ಧ್ಯಾದಿ ಆತ್ಮನ ವಿಶೇಷಗುಣಗಳು ನಿಮಿತ್ತ ಕಾರಣಗಳಾಗುತ್ತವೆ. ಉಷ್ಣಸ್ಪರ್ಶ, ಗುರುತ್ವ, ವೇಗ, ದ್ರವತ್ವ, ಸಂಯೋಗ, ವಿಭಾಗ ಗಳು ಅಸಮವಾಯಿಕಾರಣಗಳೂ, ನಿಮಿತ್ತಕಾರಣಗಳೂ ಆಗುತ್ತವೆ. ಉಷ್ಣಸ್ಪರ್ಶ ಉಷ್ಣಸ್ಪರ್ಶಕ್ಕೆ ಅಸಮವಾಯಿಕಾರಣವೂ ಪಾಕಜರೂಪಾದಿಗಳಿಗೆ ನಿಮಿತ್ತಕಾರಣವೂ ಆಗುತ್ತದೆ. ಹೀಗೆಯೇ ಗುರುತ್ವಾದಿಗಳು ಉಭಯಕಾರಣಗಳಾಗುತ್ತವೆ. ವಿಭು ಪದಾರ್ಥಗಳ ವಿಶೇಷಗುಣಗಳೂ, ಸಂಯೋಗವಿಭಾಗಗಳೂ ಅವ್ಯಾಪ್ಯವೃತ್ತಿ ಗುಣಗಳು.

ರೂಪತ್ವಜಾತಿಪ್ರತ್ಯಕ್ಷಸಿದ್ಧವಾಗಿದೆ. ನೀಲತ್ವಾದಿಗಳು ತದ್ವ್ಯಾಪ್ಯಜಾತಿಗಳು. ಚಕ್ಷುರ್ಗ್ರಾಹ್ಯವಾದ ವಿಶೇಷಗುಣವೇ ರೂಪ. ಇದು ದ್ರವ್ಯಗುಣಕರ್ಮಸಾಮಾನ್ಯಗಳ ಪ್ರತ್ಯಕ್ಷದಲ್ಲಿ ಕಾರಣವಾಗಿರುತ್ತದೆ. ಶುಕ್ಲ, ನೀಲ, ಪೀತ, ರಕ್ತ, ಹರಿತ, ಕಪಿಶ, ಕರ್ಬುರ ಮುಂತಾದ ಭೇದಗಳಿಂದ ಇದು ಅನೇಕ ವಿಧವಾಗಿದೆ. ಕರ್ಬುರವೆಂದರೆ ಚಿತ್ರ ರೂಪ. ಇದು ನಾನಾರೂಪಗಳೇ ಎಂದು ಕೆಲವರು ಹೇಳುತ್ತಾರೆ. ಆದರೆ ನಾನಾರೂಪ ಕಲ್ಪನಾಗೌರವಬರುವುದರಿಂದ ಏಕ ಚಿತ್ರರೂಪವೆಂಬ ಅನುಭವವಿರುವುದರಿಂದ ಇದು ಪೀತಾದ್ಯತಿರಿಕ್ತರೂಪವೆಂದು ಸಿದ್ಧಾಂತ. ಜಲಪರಮಾಣು, ತೇಜೋಪರಮಾಣುಗಳ

ಲ್ಲಿರುವ ರೂಪವಾತ್ರ ನಿತ್ಯವೂ ಉಳಿದ ಕಡೆಯಲ್ಲಿರುವ ರೂಪವು ಅನಿತ್ಯವೂ ಆಗಿರುತ್ತದೆ. ಪೃಥಿವೀಪರಮಾಣುರೂಪವು ಪಾಕದಿಂದ ರೂಪಾಂತರ ಹೊಂದುವುದರಿಂದ ಅನಿತ್ಯವೇ.

ರಸನಾಗ್ರಾಹ್ಯಗುಣವೇ ರಸ. ರಾಸನಪ್ರತ್ಯಕ್ಷದಲ್ಲಿ ರಸವು ಕಾರಣ. ಇದೂ ಮಧುರಾದಿಭೇದದಿಂದ ಅನೇಕವಿಧವಾಗುತ್ತದೆ. ಜಲಪರಮಾಣುಗತರಸಮಾತ್ರನಿತ್ಯ ಉಳಿದ ರಸಗಳು ಅನಿತ್ಯಗಳು. ಮೂಗಿನಿಂದ ಗ್ರಹಿಸಲ್ಪಡುವ ಗುಣವು ಗಂಧ. ಘ್ರಾಣಜ ಪ್ರತ್ಯಕ್ಷದಲ್ಲಿ ಗಂಧವು ಕಾರಣ. ಸೌರಭಾಸೌರಭಭೇದದಿಂದ ಇದು ಎರಡು ವಿಧ. ತ್ವಗಿಂದ್ರಿಯಗ್ರಾಹ್ಯವಾದ ಗುಣಕ್ಕೆ ಸ್ಪರ್ಶವೆಂದು ಹೆಸರು. ಸ್ಪಾರ್ಶನಪ್ರತ್ಯಕ್ಷಕ್ಕೆ ಇದು ಕಾರಣ. ಶೀತ, ಉಷ್ಣ, ಅನುಷ್ಣಾಶೀತವೆಂದು ಇದು ಮೂರು ವಿಧ. ಕಠಿಣ,ಮೃದು ಸ್ಪರ್ಶಗಳು ಪೃಥಿವಿಯಲ್ಲಿ ಮಾತ್ರವಿರುತ್ತವೆ. ಜಲತೇಜೋವಾಯು ಪರಮಾಣುಸ್ಪರ್ಶ ಗಳು ನಿತ್ಯವಾಗಿಯೂ ತದ್ಭಿನ್ನವಾದವುಗಳು ಅನಿತ್ಯವಾಗಿಯೂ ಇರುತ್ತವೆ.

ಪೃಥಿವಿಯಲ್ಲಿರುವ ರೂಪ, ರಸ, ಗಂಧ ಸ್ಪರ್ಶಗಳು ಮಾತ್ರ ಪಾಕಜಗಳು (ವಿಲಕ್ಷಣಾಗ್ನಿಸಂಯೋಗವೇ ಪಾಕ.) ವೈಶೇಷಿಕರು ಪೃಥಿವೀಪರಮಾಣುಗಳಲ್ಲಿಯೇ ರೂಪಾದಿ ಗಳ ಪಾಕವೆಂದು ಅಂಗೀಕರಿಸಿರುತ್ತಾರೆ. ವಹ್ನಿಸಂಯೋಗದಿಂದ ಅವಯವಿನಾಶವಾಗಿ ಸ್ವತಂತ್ರವಾಗಿ ಪರಮಾಣುಗಳಲ್ಲಿ ಪಾಕವಾಗುತ್ತದೆ. ಆಮೇಲೆ ಪಕ್ವಪರಮಾಣು ಸಂ ಯೋಗದಿಂದ ಪುನಃ ದ್ವ್ಯಣುಕಾದಿಕ್ರಮದಿಂದ ಮಹಾವಯವಿಪರ್ಯಂತವಾಗಿ ಹುಟ್ಟುತ್ತದೆ. ತೇಜಸ್ಸಿನ ಅತಿಶಯಸಂಯೋಗದಿಂದ ಪೂರ್ವಾವಯವನಾಶ, ವ್ಯೂಹಾಂತರೋತ್ಪತ್ತಿ ನಮಗೆ ಗೋಚರಿಸುವುದಿಲ್ಲ. (ಶಿಷ್ಯರು ಸ್ಫುಟವಾಗಿ ತಿಳಿಯಲು ಈ ರೂಪನಾಶೋ ತ್ಪತ್ತಿಗಳ ಕ್ಷಣವಿವೇಕವು ಗ್ರಂಥದಲ್ಲಿ ವಿವರಿಸಿದೆ.)

ನೈಯಾಯಿಕರಮತದಲ್ಲಿ ದ್ವ್ಯಣುಕಾದ್ಯವಯವಗಳಲ್ಲಿಯೇ ರೂಪಾಂತರೋತ್ಪ ಯೆಂದು ಸಿದ್ಧಾಂತ. ಅವಯವಿಗಳು ಛಿದ್ರಸಹಿತವಾದುದರಿಂದ ಅಲ್ಲಿ ತೇಜಃ ಸಂಯೋಗವಾಗಲು ಯಾವ ಅಭ್ಯಂತರವೂ ಇಲ್ಲ. 'ಅದೇ ಈ ಘಟವೆಂಬ ಪ್ರತ್ಯ ಭಿಜ್ಞೆಯೂ ಇವಕ್ಕೆ ಸಾಧಕವಾಗಿದೆ.

ಒಂದು, ಎರಡು ಇತ್ಯಾದಿಗಣನಾವ್ಯವಹಾರಕ್ಕೆ ಕಾರಣವಾದ ಗುಣಕ್ಕೆ ಸಂಖ್ಯಾ ಎಂದು ಹೆಸರು. ಇದು ನಿತ್ಯದಲ್ಲಿದ್ದರೆ ನಿತ್ಯವೂ ಅನಿತ್ಯದಲ್ಲಿದ್ದರೆ ಅನಿತ್ಯವೂ ಆಗಿರು ತ್ತದೆ. ದ್ವಿತ್ವಾದಿಪದಾರ್ಥವವರೆಗಿರುವ ಸಂಖ್ಯಾ ಅಪೇಕ್ಷಾಬುದ್ಧಿಜನಿತಗಳಾಗಿವೆ. ಅನೇಕಗಳಲ್ಲಿ ಏಕತ್ವಬುದ್ಧಿಗೆ ಅಪೇಕ್ಷಾಬುದ್ಧಿಯೆಂದು ಹೆಸರು. ತ್ರಿತ್ವಾದಿಗಳಿಗಿಂತ ಬಹುತ್ವಸಂಖ್ಯಾ ಬೇರೆಯೆಂದು ಕಂದಲೀಕಾರನಮತ. ಇತರ ಆಚಾರ್ಯರು ತ್ರಿತ್ವಾದಿ ಗಳೇ ಬಹುತ್ವವೆಂದೂ ಅದೊಂದು ಬೇರೆಸಂಖ್ಯೆಯಲ್ಲವೆಂದು ಪ್ರತಿಪಾದಿಸುತ್ತಾರೆ.

ಮಾನವ್ಯವಹಾರಕ್ಕೆ ಕಾರಣವಾದ ಗುಣವೇ ಪರಿಮಾಣ. ಅಣು, ದೀರ್ಘ, ಮಹತ್, ಹ್ರಸ್ವವೆಂದು ಅದು ನಾಲ್ಕು ವಿಧ. ನಿತ್ಯಾನಿತ್ಯ ಸಂಖ್ಯೆಯಂತೆ ತಿಳಿಯಬೇಕು ದ್ವ್ಯಣುಕಾದಿಗಳ ಪರಿಮಾಣ. ಸಂಖ್ಯೆಯಿಂದ ಉಂಟಾಗುತ್ತದೆ. ಶಿಥಿಲಸಂಯೋಗ ದಿಂದ ಉಂಟಾದದ್ದಕ್ಕೆ ಪ್ರಚಯವೆಂದೂ ಹತ್ತಿ ಮುಂತಾದ ಪರಿಮಾಣ ಇದರಿಂದ

ಉಂಟಾಗುತ್ತದೆಂದೂ ತಿಳಿಯಬೇಕು. ಘಟಾದಿಪೃಥಿವೀಪರಿಮಾಣವು ಅವಯವ ಪರಿಮಾಣದಿಂದ ಹುಟ್ಟುತ್ತದೆ. ಆಶ್ರಯನಾಶದಿಂದ ಇದರ ನಾಶವಾಗುತ್ತದೆ.

ಪೃಥಕ್‌ಪ್ರತ್ಯಯಕ್ಕೆ (ಇದು ಇದಕ್ಕಿಂತ ಬೇರೆ) ಅಸಾಧಾರಣಕಾರಣವಾದುದಕ್ಕೆ ಪೃಥಕ್ತ್ವವೆಂದು ಹೆಸರು. ಇದರ ನಿತ್ಯತ್ವಾದಿಗಳನ್ನು ಸಂಖ್ಯೆಯಂತೇ ತಿಳಿಯಬೇಕು. ಅನ್ಯೋನ್ಯಾಭಾವದಿಂದಲೇ ನಿರ್ವಾಹವಾಗುತ್ತಿರುವಾಗ ಇದೊಂದು ಬೇರೆಗುಣವೇಕೆಂದು ನವೀನರು ಆಶಂಕಿಸಿರುತ್ತಾರೆ. ಆದರೆ ಪ್ರಾಚೀನರು 'ಅಸ್ಮಾತ್ ಪೃಥಕ್' 'ಇದಂ ನ' ಎಂದು ಪೃಥಕ್ತ್ವ ಮತ್ತು ಅನ್ಯೋನ್ಯಾಭಾವಕ್ಕೆ ಭೇದ ಪ್ರಸಿದ್ಧವಾದುದರಿಂದ ಒಂದಾಗು ವುದಿಲ್ಲವೆಂದು ಹೇಳಿರುತ್ತಾರೆ.

ಅಸಂಬದ್ಧವಾದವುಗಳ ಸಂಬಂಧಕ್ಕೆ ಸಂಯೋಗವೆಂದು ಹೆಸರು. ಇದು ಮೂರು ವಿಧವಾಗಿದೆ. ೧) ಅನ್ಯತರಕರ್ಮಜ ೨) ಉಭಯಕರ್ಮಜ, ೩) ಸಂಯೋಗಜ ಸಂಯೋಗ. ಪಕ್ಷಿಪರ್ವತಸಂಯೋಗ, ಎರಡು ಟಗರುಗಳ ಸಂಯೋಗ, ಕಪಾಲತರು ಸಂಯೋಗದಿಂದ, ಘಟತರುಸಂಯೋಗ ಈ ಮೂರಕ್ಕೆ ಉದಾಹರಣೆ. ವಿಭಾಗವೂ ಹೀಗೆ ಮೂರು ರೀತಿಯಾಗಿರುತ್ತದೆ. ಮೂರನೆಯ ವಿಭಾಗಜವಿಭಾಗವು ಎರಡುವಿಧ ವಾಗಿದೆ. ಕಾರಣಮಾತ್ರವಿಭಾಗಜನ್ಯ. ಕಾರಣಾಕಾರಣವಿಭಾಗಜನ್ಯವೆಂದು ಅವುಗಳು ಪ್ರಸಿದ್ಧವಾಗಿವೆ. ಸಂಯೋಗನಾಶದಿಂದಲೇ ಇದು ವ್ಯರ್ಥವೆಂದು ಆಪಾದಿಸ ಬಾರದು. ವಿಭಕ್ತಪ್ರತ್ಯಯ ಸಂಯೋಗನಾಶಕ್ಕಿಂತ ಬೇರೆಯಾಗಿ ಅನುಭವಸಿದ್ಧವಾಗಿದೆ.

ಪರ, ಅಪರವ್ಯವಹಾರಗಳಿಗೆ ಕಾರಣವಾದ ಗುಣಗಳು ಪರತ್ವ, ಅಪರತ್ವಗಳು ಇವು ದೇಶ ಕಾಲ ಸಂಬಂಧಗಳಿಂದ ಎರಡು ರೀತಿಯಾಗಿರುತ್ತವೆ. ದೈಶಿಕಪರತ್ವ, ಅಪರತ್ವ ಗಳಿಗೆ ದಿಕ್ಸಂಯೋಗವು ಅಸಮವಾಯಿಕಾರಣವೂ, ಕಾಲಿಕಪರತ್ವ, ಅಪರತ್ವಗಳಿಗೆ ಕಾಲ ಪಿಂಡಸಂಯೋಗವು ಅಸಮವಾಯಿಕಾರಣವಾಗಿಯೂ ಇರುತ್ತದೆ. ಅಪೇಕ್ಷಾಬುದ್ಧಿ ನಾಶದಿಂದ ಇವುಗಳನಾಶ ತಿಳಿಯಬೇಕು.

ಜ್ಞಾನವು ಪ್ರಮಾ, ಅಪ್ರಮಾ ಎಂದು ಎರಡುವಿಧ. ಚಾತುರ್ವಿಧ್ಯ ಹಿಂದೆ ವಿವೃತವಾಗಿದೆ. ಆ ಪ್ರಕಾರವಿಲ್ಲದಿರುವ ವಸ್ತುವಿನಲ್ಲಿ ಆ ಪ್ರಕಾರಸಹಿತವಾದ ಬುದ್ಧಿಗೆ ಅಪ್ರಮಾ ಎಂದು ಹೆಸರು. ಶುಕ್ತಿಯಲ್ಲಿ ರಜತಜ್ಞಾನವು. ಅಪ್ರಮಾ. ವಿಪರ್ಯಾಸ, ಸಂಶಯವೆಂದು ಅದು ಎರಡುವಿಧ. ದೇಹದಲ್ಲಿ ಆತ್ಮತ್ವಪ್ರಕಾರಕನಿಶ್ಚಯ, (ನಾನು ಕೃಶ. ನಾನು ಬೆಳ್ಳಗೆ) ಶಂಖವನ್ನು ನೋಡಿ 'ಪೀತಃ ಶಂಖಃ' ಎಂಬ ಬರುವ ಜ್ಞಾನಕ್ಕೆ ವಿಪರ್ಯಾಸವೆಂದು ಹೆಸರು. ವಿಪರೀತಜ್ಞಾನವೇ ವಿಪರ್ಯಾಸ. ಒಂದು ಧರ್ಮಿ ಯಲ್ಲಿ ವಿರುದ್ಧವಾದ ಭಾವಾಭಾವ ಪ್ರಕಾರಕಜ್ಞಾನಕ್ಕೆ ಸಂಶಯವೆಂದು ಹೆಸರು. ಸರಿಯಾದ ಜ್ಞಾನವೇ ನಿಶ್ಚಯಾತ್ಮಕಜ್ಞಾನ. ಉಭಯಸಾಧಾರಣ ಧರ್ಮವಿದ್ದರೆ ಅಲ್ಲಿ ಸಂಶಯ ಹುಟ್ಟುತ್ತದೆ. ಮೋಟು ಮರದಲ್ಲಿ ಸ್ಥಾಣುತ್ವ, ಪುರುಷತ್ವಧರ್ಮಸಾಧಾರಣ್ಯ ವಿರುವುದರಿಂದ ಪುರುಷನೋ, ಮೋಟುಮರವೋ ಎಂಬ ಸಂಶಯ ಬರುತ್ತದೆ. ಜ್ಞಾನ ದಲ್ಲಿ ಪ್ರಾಮಾಣ್ಯಸಂಶಯ ಬಂದರೆ ವಿಷಯಸಂಶಯ ಬರುತ್ತದೆ. ವ್ಯಾಪ್ಯಸಂಶಯ

ವಿದ್ದರೆ ವ್ಯಾಪಕಸಂಶಯವೂ ಬರುತ್ತದೆ. ಹೀಗೆ ಸಂಶಯದಲ್ಲಿ ಧರ್ಮಿಜ್ಞಾನವೂ, ಧರ್ಮೀಂದ್ರಿಯಸನ್ನಿಕರ್ಷವೂ ಕಾರಣವಾಗಿರುತ್ತದೆ. ಅಪ್ರಮಾಜ್ಞಾನದಲ್ಲಿ ದೋಷವೂ, ಪ್ರಮಾಜ್ಞಾನದಲ್ಲಿ ಗುಣವೂ ಸಾಮಾನ್ಯಕಾರಣ. ಪಿತ್ತಾದಿದೋಷಗಳು ನಾನಾವಿಧ ವಾಗಿದ್ದು ಅಪ್ರಮೆಯನ್ನು ಹುಟ್ಟಿಸುತ್ತದೆ ಹೀಗೆ ಗುಣಗಳೂ ನಾನಾವಿಧಗಳಾಗಿವೆ. ಪ್ರತ್ಯಕ್ಷದಲ್ಲಿ ವಿಶೇಷಣದಿಂದಕೂಡಿರುವ ವಿಶೇಷ್ಯದ ಸಂನ್ನಿಕರ್ಷವೂ, ಅನುಮಿತಿಯಲ್ಲಿ ಸಾಧ್ಯವಿಶಿಷ್ಟವಾದುದರಲ್ಲಿ ಸಾಧ್ಯವ್ಯಾಪ್ಯವೈಶಿಷ್ಟ್ಯಜ್ಞಾನವೂ, (ಪರಾಮರ್ಶಜ್ಞಾನ) ಉಪಮಿತಿಯಲ್ಲಿ ಶಕ್ಯ ವಸ್ತುವಿನಲ್ಲಿ ಸಾದೃಶ್ಯಜ್ಞಾನವೂ, ಶಾಬ್ದಬೋಧದಲ್ಲಿ ಯೋಗ್ಯತಾ, ತಾತ್ಪರ್ಯಜ್ಞಾನಗಳೂ ಕಾರಣಗಳಾಗುತ್ತವೆ.

ಭ್ರಮ ಭಿನ್ನ ಜ್ಞಾನವೇ ಪ್ರಮಾ. ನಿರ್ವಿಕಲ್ಪಕಜ್ಞಾನವು ಪ್ರಮೆಯೂ ಅಲ್ಲ ಭ್ರಮೆಯೂ ಅಲ್ಲ. ಮೀಮಾಂಸಕರ ಮತದಲ್ಲಿ ಜ್ಞಾನ ಸ್ವಪ್ರಕಾಶವಾದುದರಿಂದ ಅದರ ಪ್ರಾಮಾಣ್ಯವು (ಸತ್ಯತ್ವವು) ಅದರಿಂದಲೇ ಗೃಹೀತವಾಗುತ್ತದೆ. ಜ್ಞಾನ ವಿಷಯಕ ಜ್ಞಾನದಿಂದ (ಅನುವ್ಯವಸಾಯ ರೂಪದಿಂದ) ವ್ಯವಸಾಯಾತ್ಮಕ ಜ್ಞಾನದ ಪ್ರಾಮಾಣ್ಯವು ಗೃಹೀತವಾಗುತ್ತದೆಂದು ಭಾಟ್ಟಾದಿ ಮತ. ತಾರ್ಕಿಕರು ಪ್ರಾಮಾಣ್ಯ ಸ್ವತೋಗ್ರಾಹ್ಯವಾಗುವುದಾದರೆ ಪ್ರಾಥಮಿಕ ಬಾಲಕನ ಜ್ಞಾನದಲ್ಲಿ ಸಂಶಯ ಎಂದೂ ಬರಲಾರದು. ಆದುದರಿಂದ ಸಫಲಪ್ರವೃತ್ತಿ ಜನಕತಾ ಲಿಂಗಕ ಅನುಮಾನದಿಂದಲೇ ಪ್ರಾಮಾಣ್ಯಗೃಹೀತವಾಗುತ್ತದೆಂದು ತಿಳಿಯಬೇಕು. ಎಂದು ಅವರ ಮತ ಖಂಡಿಸಿರುತ್ತಾರೆ ಇದನ್ನೇ ಪರತೋಗ್ರಾಹ್ಯವೆಂದು ವ್ಯವಹರಿಸುತ್ತಾರೆ. ಜ್ಞಾನ ಪ್ರಮಾತ್ವ ಮಾತ್ರ ಸ್ವತೋಗ್ರಾಹ್ಯವೆಂದು ತಿಳಿಯಬೇಕು. ವಿಶಿಷ್ಟ ಜ್ಞಾನದಲ್ಲಿ ಮಾತ್ರ ಪ್ರಮಾತ್ವ ಪರತೋಗ್ರಾಹ್ಯವಾಗುತ್ತದೆ.

ವ್ಯಭಿಚಾರಾಗ್ರಹ. ಸಹಚಾರಗ್ರಹವು ವ್ಯಾಪ್ತಿಜ್ಞಾನಗ್ರಾಹಕಸಾಮಗ್ರಿಗಳಾಗುತ್ತವೆ. ಕೆಲವು ಕಡೆ ತರ್ಕವು (ವ್ಯಾಪ್ಯಾರೋಪದಿಂದ ವ್ಯಾಪಕಾರೋಪ) ವ್ಯಭಿಚಾರ ಶಂಕಾನಿವರ್ತಕವಾಗುತ್ತದೆ. ಧೂಮವು ವಹ್ನಿವ್ಯಭಿಚಾರಿಯಾಗುವುದಾದರೆ ವಹ್ನಿ ಜನ್ಯವೂ ಆಗಲಾರದು ಎಂಬ ತರ್ಕದಿಂದ ವ್ಯಭಿಚಾರಶಂಕಾನಿವೃತ್ತಿಮೂಲಕ ಅನುಮಾನ ಪ್ರಮಾಣಾನು ಗ್ರಾಹಕವಾಗುತ್ತದೆ. ಇದರಲ್ಲಿಯೂ ಸಂಶಯ ಬಂದರೆ ಅದು ವ್ಯಾಘಾತ ರೂಪತರ್ಕದಿಂದ ವಾರಣವಾಗುತ್ತದೆ. ಪರಕೀಯವ್ಯಾಪ್ತಿಪ್ರತಿಬಂಧಕ್ಕೋಸ್ಕರ ಉಪಾಧಿಯನ್ನು ಅಂಗೀಕರಿಸುತ್ತಾರೆ. ಸಾಧ್ಯವ್ಯಾಪಕವಾಗಿ ಸಾಧನಾವ್ಯಾಪಕವಾದದ್ದು ಉಪಾಧಿ. 'ಧೂಮವಾನ್—ವಹ್ನೇಃ' ಇಲ್ಲಿ ಆರ್ದ್ರೇಂಧನಸಂಯೋಗ ಉಪಾಧಿ. ಧೂಮವಿದ್ದಲ್ಲಿ ಆರ್ದ್ರೇಂಧನಸಂಯೋಗವಿರುತ್ತದೆ. ಸಾಧನವಾದ ವಹ್ನಿ ಇದ್ದಲ್ಲಿ ಎಲ್ಲಾ ಕಡೆಯಲ್ಲಿ ಇರುವುದಿಲ್ಲ; ಇದರಿಂದ 'ವಹ್ನಿರ್ಧೂಮವ್ಯಭಿಚಾರೀ' ಎಂಬ ಜ್ಞಾನ ಬಂದು ಸಾಧ್ಯಸಾಧನಸಮರ್ಥವಾಗಲಾರದು. (ಉಪಾಧಿವ್ಯಭಿಚಾರದಿಂದ ಹೇತುವಿನಲ್ಲಿ (ಸಾಧ್ಯವ್ಯಭಿಚಾರದ ಅನುಮಾನವೇ ಉಪಾಧಿಗೆ ಪ್ರಯೋಜನ.)

ವೈಶೇಷಿಕರ ಮತದಲ್ಲಿ ಶಬ್ದೋಪಮಾನಗಳು ಅನುಮಾನದಲ್ಲಿಯೇ ಸೇರುವುದ

ೖಂವ ಪ್ರತ್ಯಕ್ಷ, ಅನುಮಾನಗಳೆಂದು ಎರಡೇ ಪ್ರಮಾಣಗಳು. ಆದರೆ ವ್ಯಾಪ್ತಿಜ್ಞಾನ ವಿಲ್ಲದೇ ಶಾಬ್ದಬೋಧ ಬರುವುದು ಅನುಭವಸಿದ್ಧವಾದುದರಿಂದ ಶಬ್ದಪ್ರಮಾಣವನ್ನು ಬೇರೆ ಅಂಗೀಕರಿಸಲೇಬೇಕೆಂದು ನ್ಯಾಯಮತ.

ಅನುಮಾನವು ಕೇವಲಾನ್ವಯಿ, ಕೇವಲವ್ಯತಿರೇಕಿ, ಅನ್ವಯವ್ಯತಿರೇಕಿಯೆಂದು ಮೂರುವಿಧ. ಈ ಮೂರರಿಂದ ಎರಡುವಿಧವಾದ ವ್ಯಾಪ್ತಿಜ್ಞಾನವುಂಟಾಗುತ್ತದೆ. ವಿಪಕ್ಷವಿಲ್ಲದಿರುವುದು ಕೇವಲಾನ್ವಯಿ. 'ಘಟಃ—ಅಭಿಧೇಯಃ—ಪ್ರಮೇಯತ್ವಾತ್' ಎಂಬಲ್ಲಿ ಎಲ್ಲವೂ ಅಭಿಧೇಯವಾದುದರಿಂದ ಸಾಧ್ಯವಿಲ್ಲದ ವಿಪಕ್ಷವೇ ಇಲ್ಲ. ಸಪಕ್ಷ ವಿಲ್ಲದಿರುವುದು ಕೇವಲವ್ಯತಿರೇಕಿ. 'ಪೃಥಿವೀ—ಇತರೇಭ್ಯೋ ಭಿದ್ಯತೇ—ಗಂಧ ವತ್ತ್ವಾತ್'. ಇಲ್ಲಿ ನಿಶ್ಚಿತಸಾಧ್ಯವುಳ್ಳ ಸಪಕ್ಷ ಬೇರೊಂದಿಲ್ಲ. ಸಪಕ್ಷ ವಿಪಕ್ಷ ಎರಡೂ ಇರುವುದು ಅನ್ವಯವ್ಯತಿರೇಕಿ. ವಹ್ನಿಮಾನ್—ಧೂಮಾತ್. ಎಂಬಲ್ಲಿ ಸಪಕ್ಷ ಮಹಾನಸಾದಿಗಳೂ, ವಿಪಕ್ಷ ಹ್ರದಾದಿಗಳೂ ಇವೆ.

ವ್ಯತಿರೇಕ್ಯನುಮಾನದಲ್ಲಿ ವ್ಯತಿರೇಕಿವ್ಯಾಪ್ತಿಜ್ಞಾನವು ಕಾರಣ. ಸಾಧ್ಯಾಭಾವ ವ್ಯಾಪಕೀಭೂತಾಭಾವಪ್ರತಿಯೋಗಿತ್ವಂ' ಎಂದು ವ್ಯತಿರೇಕವ್ಯಾಪ್ತಿಯಲಕ್ಷಣ. ವಹ್ನ್ಯಾದಿ ಸಾಧ್ಯಾಭಾವಕ್ಕೆ ವ್ಯಾಪಕೀಭೂತವಾದ ಅಭಾವವೆಂದರೆ ಧೂಮಾಭಾವ. ಅಲ್ಲಿ ಪ್ರತಿ ಯೋಗಿಯಾಗಿರುವುದು ಧೂಮವಾಗುತ್ತದೆ ವ್ಯತಿರೇಕವ್ಯಾಪ್ತಿಜ್ಞಾನದಲ್ಲಿ ವ್ಯತಿರೇಕ ಸಹ ಚಾರ ಜ್ಞಾನವು ಕಾರಣ. ಇದರಿಂದಲೇ ಅರ್ಥಾಪತ್ತಿಪ್ರಮಾಣಗತಾರ್ಥವಾಗುವುದರಿಂದ ಇದೊಂದು ಬೇರೆ ಪ್ರಮಾಣವಲ್ಲವೆಂದು ತಾರ್ಕಿಕ ಸಿದ್ಧಾಂತ. ಹೀಗೆ ಅಭಾವ ಪ್ರತ್ಯಕ್ಷವೂ ಅನುಭವಸಿದ್ಧವಾಮದರಿಂದ ಅನುಪಲಬ್ಧಿಯೂ ಬೇರೆ ಪ್ರಮಾಣವಲ್ಲ. ಚೇಷ್ಟಾದಿಗಳೂ ಶಬ್ದಾದಿಪ್ರಮಾಣಗಳಲ್ಲಿ ಸೇರುವುದರಿಂದ ನಾಲ್ಕೇಪ್ರಮಾಣಗಳೆಂದು ತಿಳಿಯಬೇಕು.

ಲೋಕಕಾಮನಾವಿಷಯವಾದುದೇ ಸುಖ. ಇದಕ್ಕೆ ಪುಣ್ಯರೂಪವಾದ ಧರ್ಮವು ಕಾರಣ. ಲೋಕದ್ವೇಷವಿಷಯವಾದ ದುಃಖಕ್ಕೆ ಅಧರ್ಮವು ಕಾರಣ. ದುಃಖಾ ಭಾವ, ಸುಖಗಳು ಇಚ್ಛಾವಿಷಯಗಳಾಗಿವೆ. ಇಚ್ಛೆಯು ಫಲವಿಷಯಕ, ಉಪಾಯ ವಿಷಯಕಗಳೆಂದು ಎರಡುವಿಧ. ಸುಖ, ದುಃಖಾಭಾವಗಳೇ ಫಲ. ಫಲೇಚ್ಛೆಯಲ್ಲಿ ಫಲಜ್ಞಾನವೂ, ಉಪಾಯೇಚ್ಛೆಯನ್ನು ಕುರಿತು ಇಷ್ಟಸಾಧನತಾಜ್ಞಾನವೂ ಕಾರಣ. ಕೃತಿಸಾಧ್ಯಕ್ರಿಯಾವಿಷಯಕ ಇಚ್ಛೆಗೆ ಚಿಕೀರ್ಷಾ ಎಂದು ಹೆಸರು. 'ಪಾಕಂ ಕೃತ್ಯಾ ಸಾಧಯಾಮಿ' ಎಂದು ಲೋಕಾನುಭವ ಪ್ರಸಿದ್ಧವಾಗಿದೆ. ಈ ಚಿಕೀರ್ಷೆಯಲ್ಲಿ ಕೃತಿ ಸಾಧ್ಯತಾಜ್ಞಾನವೂ, ಇಷ್ಟಸಾಧನತಾಜ್ಞಾನವೂ ಕಾರಣ. ಬಲವದ್ದ್ವಿಷ್ಟ ಸಾಧನತಾಜ್ಞಾನ ಪ್ರತಿಬಂಧಕವಾಗುತ್ತದೆ. ಬಲವದನಿಷ್ಟಾಜನಕತ್ವಜ್ಞಾನವು ಕಾರಣ ವೆಂದು ಕೆಲವರ ಮತ.

'ದ್ವಿಷ್ಟಸಾಧನತಾಜ್ಞಾನ ಜನ್ಯಗುಣತ್ವಂ' ದ್ವೇಷದ ಲಕ್ಷಣ. ಇದೂ ದುಃಖ ವಿಷಯ, ದುಃಖೋಪಾಯವಿಷಯವೆಂದು ಎರಡುವಿಧ. ಬಲವದ್ದ್ವಿಷ್ಟಸಾಧನತಾ

ಜ್ಞಾನವು ಇದಕ್ಕೆ ಕಾರಣ. ಬಲವದನಿಷ್ಟಸಾಧನತಾಜ್ಞಾನವು ಪ್ರತಿಬಂಧಕ. ಉತ್ಸಾಹರೂಪಪ್ರಯತ್ನವು ಪ್ರವೃತ್ತಿ, ನಿವೃತ್ತಿ ಜೀವನಯೋನಿಯತ್ನಭೇದದಿಂದ ಮೂರು ವಿಧವಾಗಿದೆ.

ಚಿಕೀರ್ಷಾ, ಇಷ್ಟಸಾಧನತಾಜ್ಞಾನ, ಕೃತಿಸಾಧ್ಯತಾಜ್ಞಾನ, ಸಮವಾಯಿ ಕಾರಣದ ಪ್ರತ್ಯಕ್ಷ ಈ ನಾಲ್ಕು ಪ್ರವೃತ್ತಿಯಲ್ಲಿ ಕಾರಣ. ಕಾರ್ಯತಾಜ್ಞಾನವೇ ಪ್ರವರ್ತಕವೆಂದು ಮೀಮಾಂಸಕರ ಮತವನ್ನು ಯುಕ್ತಿಯಿಂದ ಖಂಡಿಸಿರುತ್ತಾನೆ. ದ್ವಿಷ್ಟಸಾಧನತಾಜ್ಞಾನ ನಿವೃತ್ತಿಯಲ್ಲಿ ಕಾರಣ. ಜೀವನಯೋನಿಯತ್ನ ಜೀವವಿರುವವರೆಗೆ ಇರುತ್ತದೆ. ಈ ಪ್ರಯತ್ನ ಮಾತ್ರ ಇಂದ್ರಿಯಗೋಚರವಾಗುವುದಿಲ್ಲ. ಇದು ಪ್ರಾಣಸಂಚಾರಕ್ಕೆ ಕಾರಣವಾಗಿರುತ್ತದೆ.

ಆದ್ಯಪತನಕ್ಕೆ ಅಸಮವಾಯಿಕಾರಣವಾದ ಗುಣಕ್ಕೆ ಗುರುತ್ವವೆಂದು ಹೆಸರು. ಇದೂ ಅತೀಂದ್ರಿಯವಾಗಿ ಪೃಥಿವೀಜಲಗಳೆರಡರಲ್ಲಿ ಇರುತ್ತದೆ. ಅನಿತ್ಯದಲ್ಲಿ ಅನಿತ್ಯವೂ ನಿತ್ಯದಲ್ಲಿ ನಿತ್ಯವೂ ಆಗಿ ಎರಡು ವಿಧವಾಗುತ್ತದೆ.

ಆದ್ಯಸ್ಪಂದನಕ್ಕೆ (ಹರಿಯುವುದು) ಕಾರಣವಾದ ಗುಣಕ್ಕೆ ದ್ರವತ್ವವೆಂದು ಹೆಸರು. ಸಾಂಸಿದ್ಧಿಕ, ನೈಮಿತ್ತಿಕವೆಂದು ಇದು ಎರಡುವಿಧ. ಜಲಪರಮಾಣುವಿನಲ್ಲಿ ನಿತ್ಯ ದ್ರವತ್ವವೂ, ಪೃಥಿವೀಪರಮಾಣು, ದ್ವ್ಯಣುಕಾದಿಗಳಲ್ಲಿ ಅನಿತ್ಯದ್ರವತ್ವವೂ ಇರುತ್ತದೆ. ಅಗ್ನಿಸಂಯೋಗದಿಂದ ಉಂಟಾದ ನೈಮಿತ್ತಿಕದ್ರವತ್ವವು ಸುವರ್ಣಾದಿ ತೇಜಸ್ಸಿನಲ್ಲಿಯೂ, ಘೃತಾದಿಪೃಥಿವಿಯಲ್ಲಿಯೂ ಇರುತ್ತದೆ.

ಸ್ನೇಹಗುಣವು ಜಲದಲ್ಲಿ ಮಾತ್ರ ಇರುತ್ತದೆ. ತೈಲಾದಿಪೃಥಿವಿಯಲ್ಲಿ ಜಲೀಯ ಪ್ರಕರ್ಷಸ್ನೇಹವಿರುವುದರಿಂದ ದಹನಕ್ಕೆ ವಿರುದ್ಧವಾಗುವುದಿಲ್ಲ. ಅಪಕೃಷ್ಟಸ್ನೇಹವುಳ್ಳ ಜಲವು ಅಗ್ನಿಯನ್ನು ನಾಶಮಾಡುತ್ತದೆ.

ವೇಗ, ಸ್ಥಿತಿಸ್ಥಾಪಕ, ಭಾವನಾ ಎಂದು ಸಂಸ್ಕಾರರೂಪಗುಣವು ಮೂರು ವಿಧ ವಾಗಿದೆ. ವೇಗವೂ ಕರ್ಮಜ, ವೇಗಜವೆಂದು ಎರಡು ರೀತಿಯಾಗಿರುತ್ತದೆ. ಎಳೆದ ಕೊಂಬೆಯನ್ನು ಬಿಟ್ಟರೆ ಪುನಃ ತನ್ನ ಸ್ಥಾನ ಸೇರುತ್ತದೆ. ಅಲ್ಲಿ ಸ್ಥಿತಿಸ್ಥಾಪಕರೂಪಸಂಸ್ಕಾರವೇ ಕಾರಣ. ಭಾವನಾರೂಪಸಂಸ್ಕಾರವು ಅತೀಂದ್ರಿಯವಾಗಿ ಜೀವನಲ್ಲಿರುತ್ತದೆ. ಸ್ಮೃತಿಪ್ರತ್ಯಭಿಜ್ಞಾನಗಳಲ್ಲಿ ಇದು ಕಾರಣವಾಗುತ್ತದೆ. ಉಪೇಕ್ಷಾನಾತ್ಮಕನಿಶ್ಚಯ ಇದಕ್ಕೆ ಕಾರಣ.

ಧರ್ಮ, ಅಧರ್ಮಗಳಿಗೆ ಅದೃಷ್ಟವೆಂದು ಹೆಸರು. ಸ್ವರ್ಗಾದಿಸುಖಸಾಧನ ವಾದದ್ದು ಧರ್ಮ. ಅಭ್ಯುದಯಕ್ಕೆ ಕಾರಣವಾದದ್ದೆಂದು ಕಣಾದರು ಹೇಳಿರುತ್ತಾರೆ. ನರಕಾದಿದುಃಖಸಾಧನವಾದದ್ದು ಅಧರ್ಮ. ಪ್ರಾಯಶ್ಚಿತ್ತಾದಿಗಳಿಂದ ಇದು ನಾಶ ವಾಗುತ್ತದೆ. ಇವೆರಡೂ ಜೀವನಲ್ಲಿರುವ ಗುಣಗಳು. ಭೋಗ ಮತ್ತು ಜ್ಞಾನದಿಂದ ಇವೆರಡೂ ನಾಶವಾಗುತ್ತದೆ.

ಶ್ರೋತ್ರಗ್ರಾಹ್ಯಗುಣಕ್ಕೆ ಶಬ್ದವೆಂದು ಹೆಸರು. ಧ್ವನಿ, ವರ್ಣಭೇದದಿಂದ ಇದು ಎರಡುವಿಧ.

ಉತ್ಪತ್ತಿವಿನಾಶಗಳಿಂದ ಇದು ಅನಿತ್ಯ. ಕದಂಬಮುಕುಲನ್ಯಾಯದಿಂದ ಇದು ಉತ್ಪನ್ನವಾಗುತ್ತದೆಂದು ಕೆಲವರ ಮತ. ಅಂದರೆ ಒಂದು ಶಬ್ದ ಹುಟ್ಟಿ ಏಕಕಾಲದಲ್ಲಿ ಹತ್ತು ದಿಕ್ಕಿಗೆ ವ್ಯಾಪಿಸುವ ಹತ್ತು ಶಬ್ದಗಳನ್ನು ಹುಟ್ಟಿಸುತ್ತದೆ. ವೀಚೀತರಂಗನ್ಯಾಯದಿಂದ ಎಂದು ಇನ್ನು ಕೆಲವರ ಮತ. ಒಂದರಿಂದ ಇನ್ನೊಂದು ಶಬ್ದ. ಅದರಿಂದ ಮತ್ತೊಂದು ಶಬ್ದ. ಹೀಗೇ ಹುಟ್ಟುತ್ತಾಹೋಗುವುದೆಂದು ಅವರ ಸಿದ್ಧಾಂತ. ಸಾಜಾತ್ಯದಿಂದ ಅದೇ ಈ ಕಕಾರ ಎಂಬ ಜ್ಞಾನ ಬರುತ್ತದೆ. ಆದುದರಿಂದ ವರ್ಣಗಳೂ ಅನಿತ್ಯಗಳೆಂದೇ ಸಿದ್ಧಾಂತ. ಹೀಗೆ ಪದಾರ್ಥತತ್ವಗಳನ್ನು ಯುಕ್ತಿಯಿಂದಲೂ ಪರಮತ ಖಂಡನಾಪೂರ್ವಕವಾಗಿಯೂ ಗ್ರಂಥಕಾರನು ವಿವರಿಸುತ್ತಾನೆ. ಅದರ ಸೂಕ್ಷ್ಮ ಪರಿಚಯ ಇಲ್ಲಿ ಹೇಳಿದೆ.

श्री रामानुजाय नमः । तर्क्षार्थावद्याणी ।

ಶ್ರೀ ಗಣೇಶಾಯ ನಮಃ

# ನ್ಯಾಯಸಿದ್ಧಾಂತಮುಕ್ತಾವಳೀ

## ಪ್ರಭಾ

### ಕನ್ನಡ ವ್ಯಾಖ್ಯಾನ

**ಚೂಡಾಮಣೀ ಕೃತವಿಧುರ್ವಲಯೀಕೃತವಾಸುಕಿ: ||**
**ಭವೋ ಭವತು ಭವ್ಯಾಯ ಲೀಲಾತಾಂಡವಪಂಡಿತ: ||೧||**

ವಿಶ್ವನಾಥಪಂಚಾನನನೆಂಬ ಮಹಾವಿದ್ವಾಂಸನು ತಾನು ರಚಿಸಿರುವ ಕಾರಿಕಾವಳೀ ಗ್ರಂಥವು ಗಂಭೀರವಾದುದರಿಂದಲೂ, ಶಿಷ್ಯನಾದ ರಾಜೀವನೆಂಬವನ ಹಿತಕ್ಕೋಸ್ಕರವೂ ತಾನೇ ಅದಕ್ಕೆ ವ್ಯಾಖ್ಯಾನವನ್ನು ಬರೆದಿರುತ್ತಾನೆ. ಈ ಗ್ರಂಥವು ನಿರ್ವಿಘ್ನವಾಗಿ ಸಮಾಪ್ತಿ ಹೊಂದಲೆಂದು ಆದಿಯಲ್ಲಿ ಈಶ್ವರನಿರ್ದೇಶರೂಪವಾದ ಮಂಗಳವನ್ನು ಮಾಡಿ ಶಿಷ್ಯರೂ ಕೂಡಾ ಹೀಗೆಯೇ ಮಾಡಬೇಕೆಂದು ಸದಾಚಾರವನ್ನು ಅನುಸರಿಸಿ ಶಿಷ್ಯಶಿಕ್ಷೆ ಗೋಸ್ಕರ ಅದನ್ನು ಗ್ರಂಥದ ಆದಿಯಲ್ಲಿ ಬರೆದಿರುತ್ತಾನೆ. 'ಚೂಡಾಮಣೀ'—ಇತಿ. ಅಚೂಡಾಮಣಿಃ ಚೂಡಾಮಣಿಃ ಸಂಪದ್ಯಮಾನಃ ಕೃತಃ ಚೂಡಾಮಣೀಕೃತಃ ಚೂಡಾಮಣೀಕೃತೋ ವಿಧುಃ ( ಚಂದ್ರಃ ) ಯೇನ ಸಃ . ಚೂಡಾಮಣೀಕೃತವಿಧುಃ. ಅವಲಯಃ ವಲಯಃ ಸಂಪದ್ಯಮಾನಃ ಕೃತಃ, ವಲಯೀಕೃತಃ ವಲಯೀಕೃತಃ ವಾಸುಕಿಃ ಯೇನ ಸಃ, ವಲಯೀಕೃತವಾಸುಕಿಃ. ಭವತಿ ಅಸ್ಮಾತ್ ಪ್ರಪಂಚಃ ಇತಿ ಭವಃ, ಲೀಲಯಾ ತಾಂಡವಂ, ಲೀಲಾತಾಂಡವಂ. ತತ್ರ ಪಂಡಿತಃ.

ಚೂಡಾಮಣಿಯೆಂಬ ಆಭರಣವಾಗಿ ಮಾಡಲ್ಪಟ್ಟ ಚಂದ್ರನುಳ್ಳ, ಬಳೆಯಾಗಿ ಮಾಡಲ್ಪಟ್ಟ ವಾಸುಕಿಯೆಂಬ ಸರ್ಪವುಳ್ಳ, ವಿಲಾಸದಿಂದ ಮಾಡುವ ತಾಂಡವ ನೃತ್ಯದಲ್ಲಿ ಕುಶಲನಾದ, ಪ್ರಪಂಚಕ್ಕೆ ಕಾರಣನಾದ ಶಿವನು ಮಂಗಳಕ್ಕೋಸ್ಕರ ಆಗಲಿ, ( ಕಲ್ಯಾಣ ವನ್ನುಂಟುಮಾಡಲಿ.)

ಇಲ್ಲಿ ಶಾಬ್ದಬೋಧವನ್ನು ಹೀಗೆ ಹೇಳುತ್ತಾರೆ. 'ಯೇನ ಇತ್ಯತ್ರ ಯಚ್ಛಬ್ದಸ್ಯ ಭವಃ ಅರ್ಥಃ. ತೃತೀಯಾಯಾಃ ಸಮವೇತತ್ವಂ. ( ತಚ್ಚ ಸಮವಾಯಸಂಬಂಧಾ ವಚ್ಛಿನ್ನಾಧೇಯತ್ವಮ್ ), ತೃತೀಯಾರ್ಥ ಸಮವೇತತ್ವೈಕದೇಶಭೂತ ಆಧೇಯತ್ವೆ ಯಚ್ಛಬ್ದಸ್ಯ ನಿರೂಪಿತತ್ವಸಂಬಂಧೇನಾನ್ವಯಃ, (ತಚ್ಚ ಸ್ವನಿಷ್ಠ ಅಧಿಕರಣತಾ ನಿರೂಪಿ ತತ್ವೇನ) ತಥಾಚ ಯನ್ನಿಷ್ಠ ಅಧಿಕರಣತಾನಿರೂಪಿತ ಸಮವಾಯಸಂಬಂಧಾವಚ್ಛಿನ್ನಾ ಧೇಯತ್ವಂ ಇತಿ ಫಲತಿ. ಆಧೇಯತ್ವಸ್ಯ ಆಶ್ರಯತಾಸಂಬಂಧೇನ ಕೃಞ್ಧಾತ್ವರ್ಥ

ಕೃತೌ ಅನ್ವಯಃ, ತಥಾಚ ಯನ್ನಿಷ್ಠಆಧಿ..... ಆಧೇಯಭೂತಾಕೃತಿಃ || ಚ್ವಿಪ್ರತ್ಯಯಸ್ಯ ಪೂರ್ವಕಾಲಾವಚ್ಛಿನ್ನ ಸ್ವನಿಷ್ಠಾಭಾವ ಪ್ರತಿಯೋಗಿತ್ವವಿಶಿಷ್ಟ ವರ್ತಮಾನಕಾಲಾವಚ್ಛಿನ್ನ ಸ್ವನಿರೂಪಿತಾಧೇಯತಾಶ್ರಯೇ ಶಕ್ತಿಃ || ತಚ್ಚ ಗೌರವಾತ್ ತ್ಯಜ್ಯತೇ | ತಸ್ಯ ಕೇವಲ ಚೂಡಾಮಣಿತ್ವರೂಪಧರ್ಮೋಽರ್ಥಃ | ಚೂಡಾಮಣಿಶಬ್ದಸ್ಯ ಚೂಡಾಮಣಿ ಸಂಯೋಗವಿಶಿಷ್ಟಃ ಇತ್ಯರ್ಥಃ | ವೈಶಿಷ್ಟ್ಯಂ ಚ ಪೂರ್ವೋಕ್ತ 'ಪೂರ್ವಕಾಲಾ..... ಧೇಯತಾಶ್ರಯತ್ವ ಉಭಯಸಂಬಂಧೇನ. | ಚ್ವಿಪ್ರತ್ಯಯಾರ್ಥಧರ್ಮೇ ಚೂಡಾಮಣಿ ವೈಶಿಷ್ಟ್ಯಂ ಉಭಯಸಂಬಂಧೇನ. | ಧರ್ಮಸ್ಯ ಪ್ರಯೋಜಕತಾಸಂಬಂಧೇನ ಕೃಞ್ ಧಾತ್ವರ್ಥಕೃತೌ ಅನ್ವಯಃ | ತಥಾಚ-ಪೂರ್ವಕಾಲಾ..........ಉಭಯಸಂಬಂಧೇನ ಚೂಡಾಮಣಿವಿಶಿಷ್ಟಃ ಯೋಧರ್ಮಃ (ಅರ್ಥಾತ್ ಅತ್ರ ವಿಶಿಷ್ಟಧರ್ಮಯೋಃ ಸಂಬಂಧಸ್ಯ ನ ಪ್ರಸಕ್ತಿಃ | ಸಂಬಂಧಸ್ತು ಆಶ್ರಯತಾ) ತತ್ಪ್ರಯೋಜಕಾ ಯನ್ನಿರೂಪಿತ ಸಮವೇತತ್ವಾಶ್ರಯಾ ಯಾ ಕೃತಿಃ || ಕ್ತಪ್ರತ್ಯಯಸ್ಯ ಕರ್ಮತಾವಾನ್ ಅರ್ಥಃ | ತದೇಕದೇಶ ಕರ್ಮತಾಯಾಂ ಕೃತೇಃ ನಿರೂಪಿತತ್ವಸಂಬಂಧೇನ ಅನ್ವಯಃ | ಕರ್ಮತಾವತಃ ಅಭೇದಸಂಬಂಧೇನ ವಿಧುಪದಾರ್ಥೇ ಅನ್ವಯಃ || ಬಹುವ್ರೀಹೌ ಉತ್ತರಪದೇಲಕ್ಷಣಾ. ತಥಾಚ-ವಿಗ್ರಹವಾಕ್ಯೇ-ಪೂರ್ವಕಾಲಾ.....ಶ್ರಯತ್ವೋಭಯ ಸಂಬಂಧೇನ ಚೂಡಾಮಣಿ ವಿಶಿಷ್ಟ ಧರ್ಮಪ್ರಯೋಜಕಾ, ಯನ್ನಿರೂಪಿತಸಮವೇ ತತ್ವಾಶ್ರಯಾ ಕೃತಿಃ, ತನ್ನಿರೂಪಿತಕರ್ಮತಾವದಭಿನ್ನವಿಧುಃ' ಇತಿ ಬೋಧಃ || ಅತ್ರ ವಿಧುಪದಸ್ಯ ವಿಶೇಷ್ಯತ್ವಂ, ಪೂರ್ವ........ಕರ್ಮತಾವತಃ ಪ್ರಕಾರತ್ವಂ ದೃಶ್ಯತೇ || ಸಮಾಸವಾಕ್ಯೇ ತದ್ವಿಪರೀತಬೋಧೋ ಜಾಯತೇ. | ಪೂರ್ವಕಾಲಾ....ವಿಶಿಷ್ಟಃ ಯೋ ಧರ್ಮಃ, ತಾದೃಶಧರ್ಮ ಪ್ರಯೋಜಕ ಕೃತಿನಿಷ್ಠ ಆಧೇಯತಾ ನಿರೂಪಿತ ವಿಧುನಿಷ್ಠಕರ್ಮತಾ ನಿರೂಪಕೇತಿ ಲಕ್ಷಣಯಾ ಪರ್ಯವಸನ್ನೋಽರ್ಥಃ | ತಾದೃಶವಿಧುಪದ ಲಕ್ಷಿತಸ್ಯ ನಿರೂಪಕಸ್ಯ ಅಭೇದಸಂಬಂಧೇನ ಭವೇ ಅನ್ವಯಃ | 'ವಲಯೀಕೃತವಾಸುಕಿಃ' ಇದಕ್ಕೂ ಹೀಗೆಯೇ ಅನ್ವಯ ಹೇಳಬೇಕು. ಪೂರ್ವಕಾಲಾವಚ್ಛಿನ್ನಸ್ವನಿಷ್ಠಾಭಾವ ಪ್ರತಿಯೋಗಿತ್ವ, ವರ್ತಮಾನಕಾಲಾವಚ್ಛಿನ್ನಸ್ವನಿರೂಪಿತಾಧೇಯತ್ವಾಶ್ರಯ ಏತದುಭಯ ಸಂಬಂಧೇನ ವಲಯವಿಶಿಷ್ಟಧರ್ಮಪ್ರಯೋಜಕಯನ್ನಿರೂಪಿತ ಸಮವಾಯ ಸಂಬಂಧಾವಚ್ಛಿನ್ನ ಆಧೇಯತಾಶ್ರಯ ಕೃತಿನಿಷ್ಠ ಆಧೇಯತಾನಿರೂಪಕ ವಾಸುಕಿನಿಷ್ಠ ಕರ್ಮತಾನಿರೂಪಕಾಭಿನ್ನಃ ಭವಃ' ಇತಿ ಫಲತಿ. ಲೀಲಾಪದಸ್ಯಹರ್ಷಃ ಅರ್ಥಃ, ತೃತೀಯಾಯಾಃ ಪ್ರಯೋಜ್ಯತ್ವಂ ಅರ್ಥಃ. ತದರ್ಥಪ್ರಯೋಜ್ಯತ್ವೇ ಲೀಲಾಪದಾರ್ಥ ಹರ್ಷಸ್ಯ ಸ್ವನಿಷ್ಠಪ್ರಯೋಜಕತಾನಿರೂಪಿತತ್ವಸಂಬಂಧೇನ ಅನ್ವಯಃ | ತಥಾಚ ಹರ್ಷನಿಷ್ಠಪ್ರಯೋಜಕತಾ ನಿರೂಪಿತಪ್ರಯೋಜ್ಯತ್ವಂ. ಅರ್ಥಃ ಪರ್ಯವಸ್ಯತಿ. | ತಾಂಡವಪದಸ್ಯ ತಾತ್ಕಾಲಿಕರಸಜನಕ ಹಸ್ತಾಕುಂಚನಾದಿ ವ್ಯಾಪಾರೋಽರ್ಥಃ | ತೃತೀಯಾರ್ಥಪ್ರಯೋಜ್ಯತ್ವಸ್ಯ ತಾಂಡವಾರ್ಥೈಕದೇಶೀಭೂತ ವ್ಯಾಪಾರೇ ಆಶ್ರಯತಾ ಸಂಬಂಧೇನ ಅನ್ವಯಃ | ಪಂಡಿತಶಬ್ದಸ್ಯಶಾಸ್ತ್ರಜನ್ಯಜ್ಞಾನವಾನ್ ಅರ್ಥಃ | ತಾಂಡವೇ

ಇತ್ಯತ್ರ ಸಪ್ತಮ್ಯಾಃ ವಿಷಯತ್ವಮರ್ಥಃ । ತತ್ರ ಪ್ರಕೃತ್ಯರ್ಥತಾದೃಶವ್ಯಾಪಾರಸ್ಯ ಆಧೇಯತಾಸಂಬಂಧೇನ ಅನ್ವಯಃ । ವಿಷಯತಾಯಾಃ ನಿರೂಪಕತ್ವಸಂಬಂಧೇನ ಪಂಡಿತಶಬ್ದಾರ್ಥೈಕದೇಶಭೂತ ಜ್ಞಾನೇ ಅನ್ವಯಃ । ಜ್ಞಾನವತಃ ಅಭೇದಸಂಬಧೇನ ಭವೇ ಅನ್ವಯಃ । ತಥಾಚ ಹರ್ಷನಿಷ್ಠಪ್ರಯೋಜಕತಾ ನಿರೂಪಿತಪ್ರಯೋಜ್ಯತಾಶ್ರಯ ತಾತ್ಕಾಲಿಕರಸಜನಕ ಹಸ್ತಾಕುಂಚನಾದಿ ವ್ಯಾಪಾರನಿಷ್ಠವಿಷಯತಾನಿರೂಪಕ ಶಾಸ್ತ್ರಜನ್ಯ ಜ್ಞಾನವದಭಿನ್ನಃ ಭವಃ, ಇತ್ಯರ್ಥಃ ॥ ಭವನ್ತುಶಬ್ದಸ್ಯ ಮಂಗಲಂ ಅರ್ಥಃ । ಚತುರ್ಥ್ಯಾಃ ಪ್ರಯೋಜಕತ್ವಮರ್ಥಃ । ಚತುರ್ಥ್ಯರ್ಥಪ್ರಯೋಜಕತ್ವೇ ಮಂಗಲಸ್ಯ ಸ್ವನಿಷ್ಠಪ್ರಯೋಜ್ಯತಾನಿರೂಪಿತತ್ವಸಂಬಂಧೇನಾನ್ವಯಃ । ಭೂಧಾತೋಃ ಸತ್ತಾರ್ಥಃ । ಸತ್ತಾಯಾಂ ಚತುರ್ಥ್ಯರ್ಥ ಪ್ರಯೋಜಕತ್ವಸ್ಯ ಆಶ್ರಯತಾಸಂಬಧೇನಾನ್ವಯಃ । ತಾದೃಶಪ್ರಯೋಜಕತ್ವಾಶ್ರಯಸತ್ತಾ ॥ ಲೋಟಃ ಇಚ್ಛಾರ್ಥಃ । ಇಚ್ಛಾಯಾಂ ಧಾತ್ವರ್ಥಸತ್ತಾಯಾಃ ಪ್ರಕಾರತಾಸಂಬಂಧೇನಾನ್ವಯಃ । ತಾದೃಶಸತ್ತಾಪ್ರಕಾರಕೇಚ್ಛಾ। ಇಚ್ಛಾಯಾಃವಿಷಯತಾಸಂಬಂಧೇನ ಭವೇಽನ್ವಯಃ । (ವಿಷಯತಾ ಚಾತ್ರ ವಿಶೇಷ್ಯತಾ ರೂಪಾ) ತಥಾಚ–ಮಂಗಲನಿಷ್ಠಪ್ರಯೋಜ್ಯತಾನಿರೂಪಿತ ಪ್ರಯೋಜಕತಾಶ್ರಯಸತ್ತಾ ಪ್ರಕಾರಕೇಚ್ಛಾವಿಷಯೋ ಭವಃ ಇತಿ ಫಲಿತಾರ್ಥಃ ॥ ಇದನ್ನು ಕಂಠಪಾಠ ಮಾಡಿದ ಮೇಲೆ ಆಯಾಯ ಸಂಬಂಧಜ್ಞಾನವಾದ ಮೇಲೆ ಚೆನ್ನಾಗಿ ತಿಳಿಯುತ್ತದೆ.

ಈ ಶ್ಲೋಕದಲ್ಲಿ ಕೆಲವರು 'ಸಮಾಪ್ತಪುನರಾತ್ತತಾ' ಎಂಬ ದೋಷವಿದೆಯೆಂದು ಆಶಂಕಿಸುತ್ತಾರೆ. 'ಕ್ರಿಯಾಕಾರಕಭಾವೇನಾನ್ವಯಬೋಧಕಸಕಲಪದ್ಯೋಕ್ತ್ಯನಂತರಂ ಯತ್ಕಿಂಚಿತ್ಪದಾನ್ವಯಿ ವಿಶೇಷಣೋಪಾದಾನಂ' ಎಂದು ಅದರಲಕ್ಷಣ. ವಿಶೇಷ್ಯ ವಾಚಕಪದವು ಮೊದಲು ಕ್ರಿಯೆಯೊಡನೆ ಅನ್ವಿತವಾದಮೇಲೆ ನಿರಾಕಾಂಕ್ಷೆ ಯುಂಟಾಗುತ್ತದೆ. ಅದಕ್ಕೇ ಬೇರೊಂದು ವಿಶೇಷಣದೊಡನೆ ಅನ್ವಯ ಹೇಳಲು ಪುನಃ ತೆಗೆದುಕೊಂಡರೆ ಆಗ ಈ ಸಮಾಪ್ತಪುನರಾತ್ತತ್ವದೋಷ ಬರುತ್ತದೆ. ಪ್ರಕೃತ 'ಭವಃ' ಎಂಬ ವಿಶೇಷ್ಯಪದಕ್ಕೆ 'ಭವತು' ಎಂಬ ಕ್ರಿಯಾಪದದೊಡನೆ ಮೊದಲು ಅನ್ವಯ ಹೇಳಿ ವಾಕ್ಯಾರ್ಥವಾದಮೇಲೆ ಅದೇಭವಪದಕ್ಕೆ 'ಲೀಲಾ—ತಃ'ಎಂಬ ವಿಶೇಷಣಪದದಿಂದ ಸಂಬಂಧ ಹೇಳಲು 'ಭವನು ಎಂತಹನು ? ಎಂದು ಅನುಸಂಧಾನಮಾಡುವುದರಿಂದ ಈ ದೋಷ ಬರುತ್ತದೆ. ಇದಕ್ಕೆ ಎರಡು ರೀತಿಯಿಂದ ಪರಿಹಾರ ಹೇಳುತ್ತಾರೆ. ಭವಃ ಎಂಬ ಶಬ್ದದವರೆಗಿರುವ ಪ್ರಥಮಾಂತಪದಗಳೆಲ್ಲಾ ವಿಶೇಷಣಗಳೇ. 'ಲೀಲಾ–ತಃ' ಎಂಬುದೇ ವಿಶೇಷ್ಯವಾದುದರಿಂದ ಈ ದೋಷಕ್ಕೆ ಅವಕಾಶವಿಲ್ಲ. ಇನ್ನು ಕೆಲವರು ಹೀಗೆ ಹೇಳು ತ್ತಾರೆ. ನಿಯತಾಕಾಂಕ್ಷಾ. ಉತ್ಥಾಪ್ಯಾಕಾಂಕ್ಷಾ ಎಂದು ಎರಡು ವಿಧ ಆಕಾಂಕ್ಷೆ ಗಳಿವೆ. ನಿಯತಾಕಾಂಕ್ಷಾಸ್ಥಳದಲ್ಲಿ ಈ ದೋಷಕ್ಕೆ ಅವಕಾಶವಿಲ್ಲ. ಕ್ರಿಯಾಕಾರಕ ಗಳಿಗಿರುವ ಪರಸ್ಪರಾಕಾಂಕ್ಷೆಯು ನಿಯತವಾದದ್ದು. ಪುತ್ರಾದಿಪದಗಳಿಗೆ ಅವುಗಳ ಸಂಬಂಧತಿಳಿಸುವ ಪಿತ್ರಾದಿಪದಾಕಾಂಕ್ಷೆಯೂ ನಿಯತವೇ. ಹಾಗೆಯೇ ಪ್ರಯೋಜನಾ ಕಾಂಕ್ಷೆಯೂ ನಿಯತಾಕಾಂಕ್ಷೆಯೇ. ಚಂದ್ರನನ್ನು ಚೂಡಾಮಣಿಯನ್ನಾಗಿಯೂ

ವಾಸುಕಿಯನ್ನು ಬಳೆಯನ್ನಾಗಿಯೂ ಮಾಡಿಕೊಂಡುದಕ್ಕೆ ಪ್ರಯೋಜನವೇನು ? ಎಂದು ಪ್ರಯೋಜನಾಕಾಂಕ್ಷೆ ಬಂದೇ ಬರುತ್ತದೆ. ಈ ಆಕಾಂಕ್ಷೆನಿವೃತ್ತಿಗೋಸ್ಕರವೇ 'ಲೀಲಾ....ತಃ' ಎಂದು ಹೇಳಿದೆ. ಈ ಪದ ಹೇಳದಿದ್ದರೆ ಇಷ್ಟವಾದ ಅನ್ವಯಾರ್ಥ ವಾಗುತ್ತಿರಲಿಲ್ಲ. ತಾಂಡವನೃತ್ಯದಲ್ಲಿ ಇವುಗಳ ಉಪಯೋಗ ಸ್ಪಷ್ಟವಾಗಿದೆ. ಅನಿಯತಾಕಾಂಕ್ಷಾಸ್ಥಳದಲ್ಲಿಮಾತ್ರ ಈ ದೋಷವೆಂದು ತಿಳಿಯಬೇಕು. ಇಲ್ಲಿ ನಿಯತಾಕಾಂಕ್ಷೆ ಇರುವುದರಿಂದ 'ಲೀಲಾ–ತಃ' ಎಂಬ ಪದವು ಸಾರ್ಥಕವಾಗಿದೆ. ಆದುದರಿಂದ 'ಭವತು' ಕ್ರಿಯಾನ್ವಿತವಾದ ಭವಪದಕ್ಕೆ ಪುನಃ ಅನುಸಂಧಾನ ಮಾಡಿಕೊಂಡರೂ ದೋಷವಿಲ್ಲ. ಇಲ್ಲಿ ಈಶ್ವರನ ಸಂತೋಷಾವಸ್ಥೆ (ನೃತ್ಯವರ್ಣನೆ) ಯನ್ನು ವರ್ಣಿಸಿರುವುದರಿಂದ ಪ್ರಾರ್ಥಿತವಾದುದೆಲ್ಲವೂ ಸಿದ್ಧಿಸುತ್ತವೆಂದು ಧ್ವನಿತ ವಾಗುತ್ತದೆ.

**ನಿಜನಿರ್ಮಿತಕಾರಿಕಾವಳೀಮತಿಸಂಕ್ಷಿಪ್ತ ಚಿರಂತನೋಕ್ತಿಭಿಃ ||**
**ವಿಶದೀಕರವಾಣಿ ಕೌತುಕಾನ್ನನು ರಾಜೀವದಯಾವಶಂವದಃ || ೨ ||**

ಈ ಗ್ರಂಥದಲ್ಲಿ ಶಿಷ್ಯರಿಗೆ ಆಸಕ್ತಿಯನ್ನು ಹುಟ್ಟಿಸಲು ತಾನು ಮಾಡಿದುದನ್ನು ತೋರಿಸುತ್ತಾನೆ. (ರಾಜೀವೇ ದಯಾ' ರಾಜೀವದಯಾ. ತಸ್ಯಾಃ ವಶಂವದಃ (ತದಧೀನಃ) ಗುರುಶುಶ್ರೂಷಾದಿಗಳಿಂದ ರಾಜೀವನೆಂಬ ಶಿಷ್ಯನಲ್ಲಿ ಉಂಟಾದ ದಯೆ ಯಿಂದ ಅಧೀನನಾಗಿ, (ನಿಜೇನ ನಿರ್ಮಿತಾ ನಿಜನಿರ್ಮಿತಾ ನಿಜನಿರ್ಮಿತಾ ಚ ಸಾ ಕಾರಿಕಾವಳೀ ಚ. ನಿಜನಿರ್ಮಿತಕಾರಿಕಾವಳೀ. ತಾಮ್.) ತನ್ನಿಂದ ರಚಿತವಾದ ಕಾರಿಕಾವಳೀ ಗ್ರಂಥವನ್ನು, (ಅತ್ಯಂತಂ ಸಂಕ್ಷಿಪ್ತಾಃ, ಅತಿಸಂಕ್ಷಿಪ್ತಾಶ್ಚತಾಃ ಚಿರಂತ ನೋಕ್ತಯಶ್ಚ (ಚಿರಂತನಾನಾಂ ಉಕ್ತಯಃ) ಅತಿ ಸಂಕ್ಷಿಪ್ತಚಿರಂತನೋಕ್ತಯಃ, ತಾಭಿಃ) ಶಬ್ದ ಸಂಕ್ಷೇಪವನ್ನೊಳಗೊಂಡ ಪ್ರಾಚೀನತಾರ್ಕಿಕರ ಮಾತುಗಳಿಂದಲೇ (ಯುಕ್ತಿ ವಚನಗಳಿಂದ) ಕೌತುಕಾತ್ ನನು—ಅನಾಯಾಸದಿಂದಲೇ, ವಿಶದೀಕರವಾಣಿ— ವಿಸ್ತರಿಸಿ (ಸ್ಪಷ್ಟೀಕರಿಸುತ್ತೇನೆ.) ಸ್ಫುಟವಾಗಿ ಹೇಳುತ್ತೇನೆ.

ಕಾರಿಕಾವಳೀ ಗ್ರಂಥವು ಅತಿ ಸಂಕ್ಷಿಪ್ತವಾದರೂ ಪ್ರಾಚೀನಲೀಲಾವತ್ಯಾದಿ ಗ್ರಂಥ ಪಠನದಿಂದ ಸ್ಫುಟವಾಗಿ ತಿಳಿಯಬಹುದು. ಅದಕ್ಕೋಸ್ಕರ 'ಮುಕ್ತಾವಳೀ' ವ್ಯಾಖ್ಯಾನ ಗ್ರಂಥವನ್ನು ಏಕೆ ಬರೆಯಬೇಕು ? ಎಂದು ಯಾರಾದರೂ ಶಂಕೆ ಮಾಡಬಹುದು. ಅದಕ್ಕೆ ಈ ಶ್ಲೋಕದಿಂದ ಸಮಾಧಾನ ಹೇಳುತ್ತಾನೆ. ಸುಕುಮಾರಮತಿಗಳಾದ ಬಾಲಕ ರಿಗೆ ಗ್ರಂಥ ವಿಸ್ತರದಿಂದ ಲೀಲಾವತ್ಯಾದಿ ನ್ಯಾಯ ಗ್ರಂಥಗಳನ್ನು ತಿಳಿಯುದು ಕಷ್ಟ ವಾಗುತ್ತದೆ. ಅಲ್ಪ ಗ್ರಂಥದಿಂದ ಬಹು ನ್ಯಾಯ ಸಿದ್ಧಾಂತಗಳು ತಿಳಿಯುವಂತಾಗ ಬೇಕಾದರೆ ತನ್ನ ಮುಕ್ತಾವಳೀ ಗ್ರಂಥದಿಂದಲೇ ಸಾಧ್ಯವಾದುದರಿಂದ ಇತರ ಗ್ರಂಥ ಗಳಿಂದ ಇದಕ್ಕೆ ವೈಯರ್ಥ್ಯ ಹೇಳಬಾರದು' ತನ್ನ ವ್ಯಾಖ್ಯಾನವು ಸಫಲವೇ ಆಗಿದೆ ಎಂದು ತಾತ್ಪರ್ಯ. 'ಚಿರಂತನೋಕ್ತಿಭಿಃ' ಎಂದುದರಿಂದ ತಾನು ಹೇಳಿರುವುದು

ಸ್ವಕಪೋಲಕಲ್ಪಿತವಲ್ಲವೆಂದೂ ಮೂಲಪ್ರಮಾಣದಿಂದ ಕೂಡಿರುವುದೆಂದೂ ತಿಳಿಯುತ್ತದೆ. ಪ್ರಾಚೀನರ ಯುಕ್ತಿಗಳನ್ನೇ ತಾನು ಹೇಳಿರುವೆನೆಂದುದರಿಂದ ಸತ್ಸಂಪ್ರದಾಯವನ್ನು ತಾನು ಅನುಸರಿಸಿರುವನೆಂದೂ ತಿಳಿಸಿದ್ದಾನೆ. 'ರಾಜೀವವದಯಾವಶಂವದಃ' ಎಂಬುದರಿಂದ ತಾನು ಗ್ರಂಥ ಮಾಡಿರುವುದಕ್ಕೆ ಪ್ರಯೋಜನವನ್ನು ತೋರಿಸಿರುತ್ತಾನೆ.

ಇಲ್ಲಿ ಶಾಬ್ದಬೋಧ. ನಿಜೇನ ನಿರ್ಮಿತಾ । ತೃತೀಯಾಯಾಃ ಸಮವೇತತ್ವಮರ್ಥಃ । ತತ್ರಪ್ರಕೃತ್ಯರ್ಥಸ್ಯ ಸ್ವನಿಷ್ಠ ಅಧಿಕರಣತಾನಿರೂಪಿತತ್ವಸಂಬಂಧೇನಾನ್ವಯಃ । ನಿಪೂರ್ವಕ ಮಿನುದಾತೋಃ ಕೃತಿರರ್ಥಃ । ತೃತೀಯಾರ್ಥ ಸಮವಾಯ ಸಂಬಂಧಾವಚ್ಛಿನ್ನಾಧೇಯತಾಯಾಃ ಆಶ್ರಯತಾ ಸಂಬಂಧೇನ ಕೃತಾವನ್ವಯಃ । ಕ್ತಪ್ರತ್ಯಯಸ್ಯ ಕರ್ಮತಾವಾನ್ ಅರ್ಥಃ (ಕೃದಂತಸ್ಯ ಧರ್ಮೇ ಶಕ್ತಿಃ, ಕರ್ಮತ್ವಂ ಚ ವಿಷಯತಾರೂಪಮ್ ।) ಕೃತೇಃ ಕರ್ಮತಾವದೇಕದೇಶ ಕರ್ಮತಾಯಾಂ ನಿರೂಪಿತತ್ವ ಸಂಬಂದೇನಾನ್ವಯಃ । ಕಾರಿಕಾಶಬ್ದಸ್ಯ ಬುಬೋಧಯಿಷಿತಯಾವದರ್ಥ ಬೋಧಕ ಛಂದೋಬದ್ಧಶಬ್ದೋಽರ್ಥಃ । ಆವಲೇಃ ಸಮುದಾಯೋಽರ್ಥಃ । ಕಾರಿಕಾಣಾಂ ಆವಲಿಃ ಷಷ್ಠ್ಯಾಃ ಘಟಿತತ್ವಮರ್ಥಃ। ತಸ್ಮಿನ್ ಪ್ರಕೃತ್ಯರ್ಥಸ್ಯ ನಿರೂಪಿತತ್ವಸಂಬಂಧೇನಾನ್ವಯಃ । ಕಾರಿಕಾನಿಷ್ಠಘಟಕತಾ ನಿರೂಪಿತ ಘಟಿತತ್ವಮಿತ್ಯರ್ಥಃ । ತಸ್ಯಾಶ್ರಯತಾ ಸಂಬಂಧೇನ ಸಮುದಾಯೇಽನ್ವಯಃ । ದ್ವಿತೀಯಾಯಾಃ ವಿಶೇಷ್ಯತ್ವಮರ್ಥಃ । ತತ್ರ ಪ್ರಕೃತ್ಯರ್ಥಸ್ಯ ಆಧೇಯತಾ ಸಂಬಂಧೇನಾನ್ವಯಃ) ವಿಶದೀಕರಣಂ ನಾಮ ನಾನಾತ್ಮ ಸಮವೇತತ್ವ ಪ್ರಕಾರಕ ಜ್ಞಾನಾನುಕೂಲ ವ್ಯಾಪಾರಃ । ತಾದೃಶವಿಶೇಷ್ಯತಾಯಾಃ ನಿರೂಪಕತಾ ಸಂಬಧೇನ ವಿಶದೀಕರಣಾರ್ಥೈಕ ದೇಶಜ್ಞಾನೇಅನ್ವಯಃ। ವಿಶೇಷ್ಯತಾ ನಿರೂಪಕಂ ಯತ್ ಜ್ಞಾನಂ ತದನುಕೂಲವ್ಯಾಪಾರಃ ।

ಅತಿ ಸಂಕ್ಷಿಪ್ತಪದಸ್ಯ ವಿವಕ್ಷಿತಯಾವದರ್ಥ (ಪ್ರತಿಪಾದಕ) ಬೋಧಕ ಅಲ್ಪ ಶಬ್ದೋಽರ್ಥಃ । ಚಿರಂತನಾನಾಮಿತ್ಯತ್ರ ಷಷ್ಠ್ಯಾಃ ಪ್ರಯೋಜ್ಯತ್ವಮರ್ಥಃ । ತತ್ರ ಪ್ರಕೃತ್ಯರ್ಥಸ್ಯ ಸ್ವನಿಷ್ಠ ಪ್ರಯೋಜಕತಾ ನಿರೂಪಿತತ್ವಸಂಬಂಧೇನಾನ್ವಯಃ । ಉಕ್ತಿ ಪದಸ್ಯ ಶಬ್ದಪ್ರತಿಪಾದ್ಯಯುಕ್ತಿರರ್ಥಃ । ಪ್ರಯೋಜ್ಯತಾಯಾಃ ಆಶ್ರಯತಾಸಂಬಂಧೇನ ಉಕ್ತ್ಯರ್ಥ ಏಕದೇಶ ಯುಕ್ತೌ ಅನ್ವಯಃ । ಸಂಕ್ಷಿಪ್ತಪದಾರ್ಥಸ್ಯ ಅಭೇದ ಸಂಬಂಧೇನ ಉಕ್ತಿಪದಾರ್ಥೈಕದೇಶಶಬ್ದೇಽನ್ವಯಃ । ತಥಾ ಚ ವಿವಕ್ಷಿತಯಾವದರ್ಥಪ್ರತಿಪಾದಕ ಅಲ್ಪ ಶಬ್ದಾಭಿನ್ನ ಚಿರಂತನ ನಿರೂಪಿತ ಪ್ರಯೋಜ್ಯತ್ವಾಶ್ರಯ ಶಬ್ದಪ್ರತಿಪಾದ್ಯಯುಕ್ತಿಃ। ತೃತೀಯಾಯಾಃ ಪ್ರಯೋಜ್ಯತ್ವಮರ್ಥಃ । ತತ್ರ ಪ್ರಕೃತ್ಯರ್ಥಸ್ಯ ನಿರೂಪಿತತ್ವಸಂಬಂಧೇನಾನ್ವಯಃ । ಯುಕ್ತಿನಿರೂಪಿತ ಪ್ರಯೋಜ್ಯತ್ವಮರ್ಥಃ । ತಸ್ಯ ಆಶ್ರಯತಾಸಂಬಂಧೇನ ವಿಶದೀಕರಣಪದಾರ್ಥೈಕದೇಶ ಜ್ಞಾನೇಽನ್ವಯಃ ।

ಕೌತುಕಾನ್ನನು ಇತ್ಯಸ್ಯ ಕೌತುಕಾದೇವ ಇತ್ಯರ್ಥಃ । ತತ್ರ ಪಂಚಮ್ಯಾಃ ಪ್ರಯೋಜ್ಯತ್ವಮರ್ಥಃ । ಕೌತುಕಶಬ್ದಸ್ಯ ನಿರೂಪಿತತ್ವ ಸಂಬಂಧೇನ ಪಂಚಮ್ಯರ್ಥೇಽನ್ವಯಃ । ಏವಕಾರಾರ್ಥನನು ಶಬ್ದಸಮಭಿವ್ಯಾಹೃತ ಕೌತುಕಶಬ್ದಸ್ಯ ಕೌತುಕೇತರಾ

ಪ್ರಯೋಜ್ಯತ್ವಮರ್ಥಃ । ತಸ್ಯಾಶ್ರಯತಾಸಂಬಂಧೇನ ವಿಶದೀಕರಣಪದಾರ್ಥೈಕದೇಶ ಜ್ಞಾನೇಽನ್ವಯಃ । ತಥಾಚ ಕೌತುಕೇತರಾಪ್ರಯೋಜ್ಯತ್ವವಿಶಿಷ್ಟ ಕೌತುಕ ನಿರೂಪಿತ ಪ್ರಯೋಜ್ಯತ್ವಾಶ್ರಯ ಜ್ಞಾನಮಿತ್ಯರ್ಥಃ ಫಲತಿ ॥

ದಯಾಶಬ್ದಸ್ಯ ದುಃಖಪ್ರಹರಣೇಚ್ಛಾಽರ್ಥಃ । ರಾಜೀವೇ ದಯಾ । ಸಪ್ತಮ್ಯಾಃ ಸಮವೇತತ್ವಮರ್ಥಃ । ತದೈಕದೇಶ ಆಧೇಯತ್ವೇ ರಾಜೀವಸ್ಯ ನಿರೂಪಿತತ್ವಸಂಬಧೇನಾ ನ್ವಯಃ । ತಸ್ಯಾಶ್ರಯತಾಸಂಬಂಧೇನ ದಯಾರ್ಥೈಕದೇಶದುಃಖೇಽನ್ವಯಃ । ರಾಜೀವ ನಿರೂಪಿತ ಸಮವಾಯ ಸಂಬಂಧಾವಚ್ಛಿನ್ನ ಆಧೇಯತ್ವಾಶ್ರಯ ದುಃಖ....ಚ್ಛಾ । ವಶಂವದಪದಸ್ಯ ಪ್ರಯೋಜ್ಯತಾವಾನ್ ಅರ್ಥಃ । ತದೈಕದೇಶಪ್ರಯೋಜ್ಯತಾಯಾಂ ದಯಾಪದಾರ್ಥ ಇಚ್ಛಾಯಾಃ ನಿರೂಪಿತತ್ವ ಸಂಬಂಧೇನ ಅನ್ವಯಃ । ಇಚ್ಛಾನಿರೂಪಿತ ಪ್ರಯೋಜ್ಯತಾವಾನ್ ಇತಿಫಲತಿ । ವಿಶದೀಕರಣಾರ್ಥ ವ್ಯಾಪಾರಸ್ಯ ಅನುಕೂಲತಾ । ಸಂಬಧೇನ ಕೃ ಇಾರ್ಥ ಕೃತಾವನ್ವಯಃ । ಉತ್ತಮಪುರುಷಸ್ಯ ಆಶ್ರಯತ್ವಮರ್ಥಃ । ಧಾತ್ವರ್ಥಕೃತೇಃ ನಿರೂಪಿತತ್ವ ಸಂಬಂಧೇನಾಶ್ರಯತಾಯಾಂ ಅನ್ವಯಃ ' ಕೃತಿ ನಿರೂಪಿತಾಶ್ರಯತ್ವಮ್ । ತಸ್ಯ ಆಶ್ರಯತಾಸಂಬಂಧೇನ ಗ್ರಂಥಕರ್ತರಿ ಅಹಂ ಪದಾರ್ಥೇಽನ್ವಯಃ । ತಥಾ ಚ ತಾದೃಶಕೃತಿನಿರೂಪಿತ ಆಶ್ರಯತಾಶ್ರಯೋಽಹಂ ರಾಜೀವನಿರೂಪಿತ ಸಮವೇತತ್ವಾಶ್ರಯ ದುಃಖಪ್ರಹರಣೇಚ್ಛಾಪ್ರಯೋಜ್ಯತಾವದಭಿನ್ನಃ ಇತಿಬೋಧಃ ॥

**ಸದ್ರವ್ಯಾ ಗುಣಗುಂಫಿತಾ ಸುಕೃತಿನಾಂ ಸತ್ಕರ್ಮಣಾಂ ಜ್ಞಾಪಿಕಾ ।**
**ಸತ್ಸಾಮಾನ್ಯವಿಶೇಷನಿತ್ಯಮಿಲಿತಾ ಭಾವಪ್ರಕರ್ಷೋಜ್ಜ್ವಲಾ ॥**
**ವಿಷ್ಣೋರ್ವಕ್ಷಸಿ ವಿಶ್ವನಾಥಕೃತಿನಾ ಸಿದ್ಧಾಂತಮುಕ್ತಾವಳೀ ।**
**ವಿನ್ಯಸ್ತಾ ಮನಸೋ ಮುದಂ ವಿತನುತಾಂ ಸದ್ಯುಕ್ತಿರೇಷಾ ಚಿರಮ್ ॥೩॥**

ವಿಷಯ, ಪ್ರಯೋಜನ, ಅಧಿಕಾರೀ, ಸಂಬಂಧರೂಪಗಳಾದ ಅನುಬಂಧ ಚತುಷ್ಟಯವನ್ನು ಇಲ್ಲಿ ಹೇಳುತ್ತಾನೆ. 'ಗ್ರಂಥಪ್ರವೃತ್ತಿಪ್ರಯೋಜಕಜ್ಞಾನವಿಷಯತ್ವಂ' ಅನುಬಂಧತ್ವಮ್. ಒಂದು ಗ್ರಂಥದಲ್ಲಿ ಪ್ರವೃತ್ತಿಯುಂಟಾಗಬೇಕಾದರೆ ಈ ನಾಲ್ಕು ಅನುಬಂಧಗಳನ್ನು ಹೇಳಿರಬೇಕು. ಇಲ್ಲವಾದರೆ ಪ್ರವೃತ್ತಿಯುಂಟಾಗಲಾರದು. ದ್ರವ್ಯೈಃ ಸಹಿತಾ—ಪೃಥಿವೀ ಮುಂತಾದ ಒಂಬತ್ತು ದ್ರವ್ಯಗಳಿಂದ ಕೂಡಿರುವುದು. ಅವುಗಳನ್ನು ಪ್ರತಿಪಾದಿಸುವುದೆಂದರ್ಥ. (ಪ್ರತಿಪಾದನಕರೀ ಸಿದ್ಧಾಂತಮುಕ್ತಾವಳೀ). ಗುಣೈಃ ಗುಂಫಿತಾ—ರೂಪರಸಾದಿ ೨೪ ಗುಣಗಳಿಂದ ಕೂಡಿರುವ, ಸತ್ಕರ್ಮಣಾಂ— ಉತ್ಕ್ಷೇಪಣಾದಿ ಐದು ಕ್ರಿಯೆಗಳಿಗೆ, ಜ್ಞಾಪಿಕಾ—ಬೋಧಕವಾದ, ಸತ್ಸಾಮಾನ್ಯ ವಿಶೇಷನಿತ್ಯಮಿಲಿತಾ—ಸತ್— ಜಾತಿರೂಪವಾದ ಸಾಮಾನ್ಯವೂ, ವಿಶೇಷ— ನಿತ್ಯ ದ್ರವ್ಯಗಳಲ್ಲಿರುವ ಅನಂತವಿಶೇಷಗಳೂ, ನಿತ್ಯಮಿಲಿತಾ–ಸಮವಾಯಸಂಬಂಧ ಇವುಗಳಿಂದ ಕೂಡಿದ ( ಸಂತಿ ಸಾಮಾನ್ಯವಿಶೇಷನಿತ್ಯಮಿಲಿತಾನಿ ಯಸ್ಯಾಂ ಸಾ. ) ಅಭಾವ

ಪ್ರಕರ್ಷೋಜ್ಜ್ವಲಾ—ಅಭಾವ—ಭಾವಭಿನ್ನವಾದ ಏಳನೆಯ ಪದಾರ್ಥದ, ಪ್ರಕರ್ಷ—ಪ್ರಾಗಭಾವಾದಿಭೇದವೈಲಕ್ಷಣ್ಯಕ್ಕೆ, ಉಜ್ವಲಾ ಪ್ರಕಾಶಕವಾದ (ಅಭಾವವನ್ನು ಚೆನ್ನಾಗಿ ಬೋಧಿಸುವ) ಏಷಾ—ಬುದ್ಧಿಸ್ಥವಾದ, ಸದ್ಯುಕ್ತಿಃ—ವಾದಿಗಳಿಂದ ಖಂಡಿಸಲು ಅಸಾಧ್ಯವಾದ ತರ್ಕಯುಕ್ತಿಗಳಿಂದ ಕೂಡಿದ ಸಿದ್ಧಾಂತಮುಕ್ತಾವಲೀ—ತಾರ್ಕಿಕ ಸಿದ್ಧಾಂತಗಳೆಂಬ ಮುತ್ತುಗಳ ಪಂಕ್ತಿಯು (ಹಾರವು) ವಿಷ್ಣೋಃ—ಪರಮಾತ್ಮನ, ವಕ್ಷಸಿ—ಎದೆಯಲ್ಲಿ. ವಿನ್ಯಸ್ತಾ—ಇಡಲ್ಪಟ್ಟದಾಗಿ, ಸುಕೃತಿನಾಂ—ಪಂಡಿತರ, ಮನಸಃ—ಹೃದಯಕ್ಕೆ, ಮುದಂ—ಸಂತೋಷವನ್ನು, ಚಿರಂ—ಬಹುಕಾಲ, ವಿತನುತಾಂ ಉಂಟುಮಾಡಲಿ. ।। ಧರ್ಮವು (ಸಾಮಾನ್ಯ) ಜಾತಿ, ಅಖಂಡೋಪಾಧಿ ರೂಪದಿಂದ ಎರಡುರೂಪವಾಗಿದ್ದರೂ ಗ್ರಂಥಕಾರನು ಜಾತಿಯನ್ನುಮಾತ್ರ ನಿರೂಪಿಸುವುದರಿಂದ ಸತ್ ಸಾಮಾನ್ಯವೆಂದಿರುತ್ತಾನೆ. ದ್ರವ್ಯಾದಿವಿಷಯಗಳನ್ನು ಹೇಳುವಾಗ ಮುಕ್ತಾವಳೀ ಸಾದೃಶ್ಯವನ್ನು ತೋರಿಸಿರುತ್ತಾನೆ. ಮುತ್ತಿನಹಾರವೂ ಸದ್ರವ್ಯಾ—ಹಣದಿಂದ ಕೊಂಡುಕೊಳ್ಳಲು ಯೋಗ್ಯವಾಗಿದೆ. ಗುಣಗುಂಫಿತಾ—ಹಗ್ಗದಿಂದ ಪೋಣಿಸಲ್ಪಟ್ಟಿದೆ. ಸುಕೃತಿನಾಂ—ಪುಣ್ಯಶಾಲಿಗಳ ಉತ್ತಮಕಾರ್ಯಗಳಿಗೆ ಜ್ಞಾಪಕವಾಗಿದೆ. (ಸತ್ಕರ್ಮಗಳಿಂದ ಪುಣ್ಯಪಡೆದವರೇ ಮುತ್ತಿನಹಾರವನ್ನು ಹೊಂದಲು ಸಮರ್ಥರು. ಆದುದರಿಂದ ಹಾರವು ಸತ್ಕರ್ಮಕ್ಕೆ ಜ್ಞಾಪಕವಾಗುತ್ತದೆ.) ಸತ್ಸಾಲಿತಾ—ಒಳ್ಳೇಯ ಜಾತಿ, (ವಿಶೇಷ—) ವರ್ತುಲಾಕಾರ, ನಿರ್ಮಲಾದಿವಿಶೇಷ, ಇವುಗಳಿಂದ ನಿತ್ಯಮಿಲಿತಾ—ಯಾವಾಗಲೂ ಸಂಬದ್ಧವಾದ ಅಭಾ....ಲಾ—ತೇಜಸ್ಸಿನ ಅಭಾವ ವಿರುವಾಗ ಅಂದರೆ ಕತ್ತಲೆಯಲ್ಲಿಯೂ ಅಧಿಕವಾಗಿ ಪ್ರಕಾಶಿಸುವ (ದೀಪದಂತೆ ಇತರ ವಸ್ತುಗಳನ್ನೂ ಪ್ರಕಾಶಪಡಿಸುವ) ಸದ್ಯುಕ್ತಿಃ—ಚೆನ್ನಾಗಿ ಸೇರಿಸಿರುವ ಮುತ್ತಿನಹಾರವು ವಿಷ್ಣುವಿಗೆ ಅರ್ಪಿತವಾಗಿ ಹೇಗೆ ಸಜ್ಜನರಿಗೆ ಅಮಿತಾನಂದದಾಯಕವಾಗುವುದೋ ಅದರಂತೆ ದ್ರವ್ಯಾದಿಗಳಿಂದ ಕೂಡಿದ ಮುಕ್ತಾವಳೀತರ್ಕಗ್ರಂಥವೂ ವಿದ್ವಾಂಸರಿಗೆ ಹರ್ಷದಾಯಕವಾಗಲಿ ಎಂದು ತಾತ್ಪರ್ಯ. ಮುಕ್ತಾಹಾರಸಾಮ್ಯದಿಂದ ಗ್ರಂಥವು ದೋಷಶೂನ್ಯವೆಂದು ತಿಳಿಯುತ್ತದೆ. ಇದರಿಂದ ಈ ಗ್ರಂಥಕ್ಕೆ ದ್ರವ್ಯಾದಿಗಳೇ ವಿಷಯವೆಂದೂ, ಪದಾರ್ಥತತ್ವಾವಧಾರಣವೇ ಪ್ರಯೋಜನವೆಂದೂ, ಪದಾರ್ಥಜ್ಞಾನವನ್ನು ಬಯಸುವವನೇ ಅಧಿಕಾರಿಯೆಂದೂ, ಅನುಬಂಧಚತುಷ್ಟಯವು ನಿರ್ದಿಷ್ಟವಾಗುತ್ತದೆ. ಒಂದೆರಡನ್ನು ಹೇಳಿದಾಗ ಉಳಿದವುಗಳನ್ನು ಊಹಿಸಿ ತಿಳಿಯಬೇಕು. ಗ್ರಂಥ ವಿಷಯಗಳಿಗೆ ಪ್ರದಿಪಾದ್ಯಪ್ರತಿಪಾದಕಭಾವ ಸಂಬಂಧ. ಅಧಿಕಾರಿ ಗ್ರಂಥಗಳಿಗೆ ಬೋಧ್ಯಬೋಧಕಭಾವ ಸಂಬಂಧ. ಅಧಿಕಾರಿ ವಿಷಯಗಳಿಗೆ ಜ್ಞಾತೃಜ್ಞಾತವ್ಯಭಾವಸಂಬಂಧ. ಹೀಗೆ ಆಯಾಯ ಸಂಬಂಧಗಳನ್ನೂ ತಿಳಿಯಬೇಕು. ನ್ಯಾಯಶಾಸ್ತ್ರಕ್ಕೂ ಮೋಕ್ಷವೇ ಪರಮಪ್ರಯೋಜನ. ಆತ್ಯಂತಿಕದುಃಖನಿವೃತ್ತಿಯೇ ಮೋಕ್ಷ ನ್ಯಾಯಶಾಸ್ತ್ರದಿಂದ ತತ್ವಜ್ಞಾನವೂ, ಅದರಿಂದ ಮಿಥ್ಯಾಜ್ಞಾನನಾಶವೂ, ಅದರಿಂದ ರಾಗಾದಿದೋಷನಾಶವೂ, ಅದರಿಂದ ಪ್ರವೃತ್ತಿನಾಶವೂ, ಅದರಿಂದ ಜನ್ಮನಾಶವೂ ಆಗುವುದರಿಂದ ದುಃಖವುಂಟಾಗು

ವುದಿಲ್ಲ. ಇದನ್ನೇ ಸೂತ್ರಕಾರರು 'ದುಃಖಜನ್ಮಪ್ರವೃತ್ತಿ ದೋಷಮಿಥ್ಯಾಜ್ಞಾನಾನಾಮುತ್ತರೋತ್ತರಾಪಾಯೇ ತದನಂತರಾಪಾಯಾದಪವರ್ಗಃ' ಎಂಬ ಸೂತ್ರದಲ್ಲಿ ಹೇಳಿರುತ್ತಾರೆ. ಹೀಗೆ ವಿಷಯಾದಿಗಳನ್ನು ನಿರ್ದೇಶಿಸಿರುವುದರಿಂದ ಗ್ರಂಥದಲ್ಲಿ ಸಕಲರಿಗೂ ಪ್ರವೃತ್ತಿಯುಂಟಾಗುತ್ತದೆಂದೂ, ವಿಷ್ಣುವಿಗೆ ಸಮರ್ಪಿಸಿರುವುದರಿಂದ ಗ್ರಂಥವು ಸರ್ವತೋಮುಖವಾಗಿ ಪ್ರಕಾಶಿತವಾಗಿ ತಾನು ಸತ್ಕೀರ್ತಿ ಹೊಂದುವನೆಂದೂ ಸೂಚಿತವಾಗುತ್ತದೆ.

## ವಿಘ್ನವಿಘಾತಾಯ ಕೃತಂ ಮಂಗಲಂ ಶಿಷ್ಯಶಿಕ್ಷಾಯೈ ನಿಬಧ್ನಾತಿ

ಗ್ರಂಥಾರಂಭದಲ್ಲಿ ಮಾಡಿದ ಮಂಗಲಕ್ಕೆ ಸಾಫಲ್ಯವನ್ನು ತೋರಿಸುತ್ತಾನೆ· 'ವಿಘ್ನ'-ಇತಿ. ತಾನು ಪ್ರಾರಂಭಿಸಿದ ಗ್ರಂಥದ ವಿಘ್ನಗಳ ಧ್ವಂಸ—ನಾಶಕ್ಕೋಸ್ಕರ ಮಾಡಿದ ಮಂಗಲವನ್ನು ಶಿಷ್ಯರು ತಾವೂ ಮಾಡಲೆಂದು ಗ್ರಂಥದ ಆದಿಯಲ್ಲಿ ಬರೆದು ತೋರಿಸಿರುತ್ತಾನೆ. 'ಸ್ವಕರ್ತವ್ಯತ್ವೇನ ಜ್ಞಾನಂ' ಶಿಕ್ಷಾ. ತಾನು ಹೇಗೆ ವಿಘ್ನನಿವಾರಣೆಗೆ ಗ್ರಂಥಾರಂಭದಲ್ಲಿ ಮಂಗಲ ಮಾಡಿದನೋ ಹಾಗೆಯೇ ಶಿಷ್ಯರೂ ಮಾಡಿ ಸದಾಚಾರವನ್ನು ರಕ್ಷಿಸಲಿ ಎಂದು ಆಸ್ತಿಕಸಂಪ್ರದಾಯ ರಕ್ಷಣೆಗೋಸ್ಕರ ಮಂಗಲವನ್ನು ಮಾಡಿ ತೋರಿಸಿರುತ್ತಾನೆ.

ಇದಕ್ಕೆ ಶಾಬ್ದಬೋಧ. ವಿಘ್ನಾನಾಂ ವಿಘಾತಃ, ತಸ್ಮೈ, ವಿಘ್ನಾನಾಂ ಇತ್ಯತ್ರ ಷಷ್ಠ್ಯಾಃ ಪ್ರತಿಯೋಗಿತ್ವಮರ್ಥಃ, ವಿಘ್ನೋನಾಮ ದುರಿತಂ. ತಸ್ಯ ಆಧೇಯತಾ ಸಂಬಂಧೇನ ಪ್ರತಿಯೋಗಿತಾಯಾಮನ್ವಯಃ ವಿಘಾತೋ ನಾಮ ಅಭಾವಃ, ಪ್ರತಿಯೋಗಿತಾಯಾಃ ನಿರೂಪಕತ್ವ ಸಂಬಂಧೇನ ಅಭಾವೇ ಅನ್ವಯಃ· ವಿಘ್ನನಿಷ್ಠಪ್ರತಿಯೋಗಿತಾ ನಿರೂಪಕಾಭಾವಃ (ವಿಘ್ನಪ್ರತಿಯೋಗಿಕಾಭಾವಃ) ಚತುರ್ಥ್ಯಾಃ ಪ್ರಯೋಜಕತ್ವಮರ್ಥಃ. ಅಭಾವಸ್ಯ ತತ್ರ ನಿರೂಪಿತತ್ವಸಂಬಂಧೇನಾನ್ವಯ. ಕೃತಮಿತ್ಯಸ್ಯ ಕರ್ಮತಾವತ್ ಅರ್ಥ. ತದೇಕದೇಶ ಕರ್ಮತಾಯಾಂ ಪ್ರಯೋಜಕತ್ವಸ್ಯ ಆಶ್ರಯತಾಸಂಬಂಧೇನಾನ್ವಯಃ. ಕರ್ಮತಾವತಃ ಅಭೇದಸಂಬಂಧೇನ ಮಂಗಲೇ ಅನ್ವಯಃ. ಮಂಗಲಮಿತ್ಯತ್ರ ದ್ವಿತೀಯಾಯಾಃ ವಿಶೇಷ್ಯತಾ ಅರ್ಥಃ. ಮಂಗಲಸ್ಯ ತತ್ರ ಆಧೇಯತಾ ಸಂಬಂಧೇನ ಅನ್ವಯಃ. ವಿಘ್ನನಿ.... ಅಭಾವಪ್ರಯೋಜಕ (ನಿರೂಪಿತಪ್ರಯೋಜಕತಾಶ್ರಯ) ಕರ್ಮತಾವದಭಿನ್ನ ಮಂಗಲನಿಷ್ಠವಿಶೇಷ್ಯತಾ ಇತಿ ಫಲತಿ. 'ಅವಶ್ಯಾನುಷ್ಠೇಯತ್ವಪ್ರಕಾರಕಜ್ಞಾನಂ' ಶಿಕ್ಷಾಪದ ಸಾರ್ಥಃ ಶಿಷ್ಯಾಣಾಂ ಶಿಕ್ಷಾ. ಷಷ್ಠ್ಯಾ ಸಮವೇತತ್ವಮರ್ಥಃ. ತತ್ರ ಶಿಷ್ಯಪದಸ್ಯ ನಿರೂಪಿತತ್ವ ಬಂಧೇನಾನ್ವಯಃ . । ಸಮವೇತತ್ವಸ ಆಶ್ರಯತಾಸಂಬಂಧೇನ ಶಿಕ್ಷಾಪದಾರ್ಥೈಕದೇಶ ಜ್ಞಾನೇ ಅನ್ವಯಃ . । ದ್ವಿತೀಯಾರ್ಥ ವಿಶೇಷ್ಯತಾಯಾಃ ತದೇಕದೇಶ ಪ್ರಕಾರತಾಯಾಂ ಅನ್ವಯಃ । ತಾದೃಶವಿಶೇಷ್ಯತಾ ನಿರೂಪಿಕಾ ಯಾ ಅವಶ್ಯಾನುಷ್ಠೇಯತ್ವಪಕಾರಿಕಾ ತನ್ನಿರೂಪಕಂ ಶಿಷ್ಯಸಮವೇತತ್ವಾಶ್ರಯಂ ಜ್ಞಾನಮಿತ್ಯರ್ಥಃ ಫಲತಿ ಶಿಕ್ಷಾಯೈ ಇತ್ಯತ್ರ ಚತುರ್ಥ್ಯಾಃ

ಉದ್ದೇಶ್ಯತ್ವಮರ್ಥಃ । ತತ್ರ ಆಧೇಯತಾಸಂಬಂಧೇನ ಪ್ರಕೃತ್ಯರ್ಥಸ್ಯ ಅನ್ವಯಃ. । ನಿಪೂರ್ವಕ ಬಧಧಾತೋಃ ವರ್ಣಾಭಿವ್ಯಂಜಕ ರೇಖಾವಿನ್ಯಾಸಾನುಕೂಲ ವ್ಯಾಪಾರಃ ಅರ್ಥಃ । ಆಖ್ಯಾತಾರ್ಥಃ ಕೃತಿಃ । ಪ್ರಕೃತ್ಯರ್ಥಸ್ಯ ತಸ್ಮಿನ್ ಅನುಕೂಲತಾಸಂಬಂಧೇನಾನ್ವಯಃ. । ಉದ್ದೇಶ್ಯತಾಯಾಃ ನಿರೂಪಿತತ್ವಸಂಬಂಧೇನ ಕೃತಾವನ್ವಯಃ । ಕೃತೇಃ ಆಶ್ರಯತಾಸಂಬಂಧೇನ ಪ್ರಥಮಪುರುಷಲಭ್ಯಗ್ರಂಥಕರ್ತರಿ ಅನ್ವಯಃ । ತಾದೃಶೋದ್ದೇಶ್ಯತ್ವಪ್ರಕಾರಕವರ್ಣಾಭಿ.... ವ್ಯಾಪಾರನುಕೂಲಕೃತ್ಯಾಶ್ರಯಃ ಗ್ರಂಥಕರ್ತಾ. ಇತಿಫಲತಿ. ನೂತನೇತ್ಯಾದಿನಾ ಇತ್ಯಸ್ಯ ನೂತನೇತ್ಯಾನುಪೂರ್ವೀವಿಶಿಷ್ಟೋರ್ಥಃ । ತಸ್ಯ ಅಭೇದೇನ ಧಾತ್ವರ್ಥೈಕದೇಶೇವರ್ಣೇಽನ್ವಯಃ ॥ ತಥಾಚ ದುರಿತನಿಷ್ಠಪ್ರತಿಯೋಗಿತಾನಿರೂಪಕಾಭಾವ ನಿರೂಪಿತಪ್ರಯೋಜಕತಾಶ್ರಯ ಕರ್ಮತಾವದಭಿನ್ನ ಮಂಗಲನಿಷ್ಠವಿಶೇಷ್ಯತಾ ನಿರೂಪಕಾವಶ್ಯಾನುಷ್ಠೇಯತ್ವಪ್ರಕಾರಕ ಶಿಷ್ಯಸಮವೇತತ್ವಾಶ್ರಯಜ್ಞಾನನಿಷ್ಠ ಉದ್ದೇಶ್ಯತಾನಿರೂಪಕನೂತನೇತ್ಯಾದ್ಯಾನುಪೂರ್ವೀ ವಿಶಿಷ್ಟಾಭಿನ್ನ ವರ್ಣಾಭಿವ್ಯಂಜಕ ರೇಖಾವಿನ್ಯಾಸಾನೂಕೂಲ ವ್ಯಾಪಾರಾನುಕೂಲ ಕೃತ್ಯಾಶ್ರಯಃ ಗ್ರಂಥಕರ್ತಾ. ಇತಿ ಫಲಿತಃ ॥

'ವಿಘಾತ' ಎಂಬಲ್ಲಿ ಎರಡುಪದಗಳಿವೆ. ವಿಃ ಉಪಸರ್ಗ. ಘಾತಪ್ರಾತಿಪದಿಕ. ಉಪಸರ್ಗಗಳು ಅರ್ಥದ್ಯೋತಕಗಳು ಅವುಗಳಿಗೆ ಅರ್ಥವಾಚಕತ್ವವಿಲ್ಲವೆಂದು ಒಂದು ಮತ. ಅವೂ ಅರ್ಥವಾಚಕಗಳೇ ಆಗುತ್ತವೆ ಎಂದು ಕೆಲವರಮತ. ಮೊದಲಿನವರ ಪಕ್ಷದಲ್ಲಿ ವಿ ಎಂಬುದು ಸಮೀಪದಲ್ಲಿರುವ ಘಾತಪದದ ಅರ್ಥವನ್ನೇ ಪ್ರಕಾಶಪಡಿಸುವುದರಿಂದ ಅನರ್ಥಕವಾಗುವುದಿಲ್ಲ. ಎರಡನೆಯವರ ಮತದಲ್ಲಿ ಅದು ನಿಷ್ಫಲವಾಗುತ್ತದೆ. ಘಾತಪದಕ್ಕೇ ಸಕಲವಿಘ್ನಧ್ವಂಸ(ಉತ್ಪತ್ತಿಮದಭಾವರೂಪ) ವು ಅರ್ಥವಾಗುವಾಗ ವಿ ಎಂಬುದು ಅದೇ ಅರ್ಥವನ್ನು ಹೇಳುತ್ತದೆಂದು ಹೇಳುವುದಾದರೆ ವ್ಯರ್ಥವಲ್ಲವೇ ? ಅಂದರೆ ಇಲ್ಲಿ ಹೀಗೆ ಸಮಾಧಾನ ಹೇಳುತ್ತಾರೆ. 'ವಿಶಿಷ್ಟವಾಚಕಾನಾಂ ಪದಾನಾಂ ಸತಿ ಪೃಥಕ್ ವಿಶೇಷಣವಾಚಕಪದಸಮವಧಾನೇ ವಿಶೇಷ್ಯಮಾತ್ರಪರತ್ವಂ' ಎಂಬ ನ್ಯಾಯದಂತೆ ಇಲ್ಲಿ ವ್ಯರ್ಥವಾಗುವುದಿಲ್ಲ. ವಿಶೇಷಣವಿಶಿಷ್ಟವಿಶೇಷ್ಯಾರ್ಥವನ್ನು ಒಂದು ಪದ ಹೇಳುತ್ತಿರುವಾಗ ಪುನಃ ವಿಶೇಷಣಾರ್ಥ ಹೇಳುವ ಪದವನ್ನು ಹೇಳಿದರೆ ಆಗ ವಿಶಿಷ್ಟವಾಚಕಪದಕ್ಕೆ ವಿಶೇಷ್ಯ ಮಾತ್ರ ಅರ್ಥವನ್ನು ಹೇಳಬೇಕು. ಪ್ರಕೃತ ಘಾತಪದಕ್ಕೆ ಧ್ವಂಸ—ಉತ್ಪತ್ತಿಮದಭಾವರೂಪಾರ್ಥ ಹೇಳುವುದಿಲ್ಲ. ಕೇವಲ ಅಭಾವ ಅರ್ಥ ಹೇಳಬೇಕು. ವಿಘಾತ ಪದಕ್ಕೆ ಉತ್ಪತ್ತಿಮದಭಾವರೂಪ ಧ್ವಂಸವು ಅರ್ಥವೆಂದು ಹೇಳಬೇಕು. ಹೀಗೆ ಎಲ್ಲಾ ಕಡೆಯಲ್ಲಿಯೂ ತಿಳಿಯಬೇಕು. 'ಸ ಕೀಚಕೈರ್ಮಾರುತರಂಧ್ರಪೂರ್ಣೈಃ' ಎಂದು ಕಾಳಿದಾಸನು ಪ್ರಯೋಗಿಸಿರುತ್ತಾನೆ. 'ಕೀಚಕಾಃ ವೇಣವಸ್ತೇಸ್ಯುಃ ಯೇ ಸ್ವನಂತ್ಯನಿಲೋದ್ಧತಾಃ ' ಎಂದು ಅಮರ. ಗಾಳಿಯಿಂದ ತುಂಬಿ ಶಬ್ದಮಾಡುವ ರಂಧ್ರಗಳುಳ್ಳ ಬಿದಿರಿಗೇ ಕೀಚಕವೆಂದು ಹೆಸರು. ತಿರುಗಿ 'ಮಾರುತರಂಧ್ರಪೂರ್ಣ' ಎಂದು ಹೇಳಿದ್ದು ವ್ಯರ್ಥವಾಗುತ್ತದೆ. ಆಗ ಕೀಚಕವೆಂದರೆ ಕೇವಲ ಬಿದಿರೆಂದು ಅರ್ಥ

ಮಾಡುವುದರಿಂದ ವ್ಯೆಯರ್ಥ್ಯದೋಷವು ನಿವಾರಿತವಾಗುತ್ತದೆ. ಆಗ ವಿಶೇಷಣವೂ ಸಾರ್ಥಕವಾಗುತ್ತದೆ. ವಿಘಾತವೆಂದರೆ 'ಪ್ರಕೃತಸಮಾಪ್ತಿ ಪ್ರತಿಬಂಧಕಯಾವದ್ವಿಘ್ನ ವಿನಾಶಃ ' ಎಂದು ಅರ್ಥ. (ವಿಶಿಷ್ಟಧ್ವಂಸಃ)

**ನೂತನಜಲಧರರುಚಯೇ ಗೋಪವಧೂಟೀದುಕೂಲಚೌರಾಯ ||**
**ತಸ್ಮೈಕೃಷ್ಣಾಯ ನಮಃ ಸಂಸಾರಮಹೀರುಹಸ್ಯ ಬೀಜಾಯ ||೧ ||**

ನೂತನಶ್ಚಾಸೌ ಜಲಧರಶ್ಚ. ತಸ್ಯ ರುಚಿರಿವ ರುಚಿಃ ಯಸ್ಯ ಸಃ. ಹೊಸತಾದ ಮೇಘದಕಾಂತಿಯಂತೆ ಕಾಂತಿಯುಳ್ಳವನಾದ. ಗೋಪಾನಾಂ ವಧೂಟ್ಯಃ. ತಾಸಾಂ ದುಕೂಲಾನಿ. ತೇಷಾಂ ಚೌರಾಯ. ಗೋಪಯುವತಿಯರರೇಶ್ಮೆವಸ್ತ್ರವನ್ನು ಅಪಹರಿಸುವ, ಸಂಸಾರ ಏವ ಮಹೀರುಹಃ. ತಸ್ಯ. ಸಂಸಾರ (ಪ್ರಪಂಚ) ವೆಂಬ ಮರಕ್ಕೆ. ಬೀಜಾಯ—ನಿಮಿತ್ತಕಾರಣನಾದ, ತಸ್ಮೈ-ಶಾಸ್ತ್ರಪ್ರಸಿದ್ಧನಾದ, ಕೃಷ್ಣಾಯ ನಮಃ .—ಕೃಷ್ಣನಿಗೆ ನಮಸ್ಕಾರವು. (ಆಗಲಿ.) ಗಾಂ—ವಾಣೀಂ, ಪಿಬಂತಿ—ಸೇವಂತೇ ಇತಿ ಗೋಪಾಃ — ವೇದೋಪಾಸಕಯತಿಗಳು. ಅವರ ವಧೂಟೀ — ಬುದ್ಧಿಃ , ತಸ್ಯಾಃ ದುಕೂಲಂ—ಆವರಣಂ, ತಸ್ಯ ಚೌರಾಯ. ಅಜ್ಞಾನನಿವಾರಕನೆಂದರ್ಥ. ಗಾಂ—ಪೃಥ್ವೀಂ, ಪಾಂತಿ— ರಕ್ಷಂತಿ. ಗೋಪಾಃ — ಪಾಂಡವಾಃ. ತೇಷಾಂ ವಧೂಟೀ—ದ್ರೌಪದೀ. ತಸ್ಯಾಃ ದುಕೂಲಸ್ಯ—ವಸನಸ್ಯ. ಚೌರಾಯ (ರಲಯೋರಭೇದಃ) ವರ್ಧಯಿತ್ರೇ ಎಂದು ನಾನಾರ್ಥಗಳನ್ನು ವಿವರಿಸುತ್ತಾರೆ.

ಇದಕ್ಕೆ ಶಾಬ್ದಬೋಧ. ನೂತನಸ್ಯ ವರ್ತಮಾನಕಾಲವಿಶಿಷ್ಟಃ ಅರ್ಥಃ। (ವೈಶಿಷ್ಟ್ಯಂಚ ಸ್ವವೃತ್ತಿತ್ವ, ಸ್ವಪ್ರಾಕ್ಕಾಲೀನಭೋಗಸಾಧನತ್ವಾಭಾವೋಭಯ ಸಂಬಂಧೇನ·) ನೂತನಾರ್ಥಸ್ಯ ಅಭೇದೇನ ಜಲಧರಪದಾರ್ಥೇನನ್ವಯಃ। ಮೇಘೇ ನೂತನವೈಶಿಷ್ಟ್ಯಂ ಪೂರ್ವೋಕ್ತಸಂಬಂಧದ್ವಯೇನ। ತಥಾಚ ನಿರುಕ್ತೋಭಯ ಸಂಬಂಧೇನ ವರ್ತಮಾನಕಾಲವಿಶಿಷ್ಟಾಭಿನ್ನಃ ಜಲಧರಃ। ತಸ್ಯರುಚಿರಿವ ರುಚಿಃ ಯಸ್ಯ ಸಃ। ಯಚ್ಛಬ್ದಸ್ಯ ಕೃಷ್ಣಃ ಅರ್ಥಃ। ಷಷ್ಠ್ಯಾಃ ಸಮವೇತತ್ವಮರ್ಥಃ। (ಸಮವಾಯಸಂಬಧಾವಚ್ಛಿನ್ನಾಧೇಯತಾ) ಷಷ್ಠ್ಯರ್ಥೈಕದೇಶ ಆಧೇಯತ್ವೇ ಪ್ರಕೃತ್ಯರ್ಥ ಕೃಷ್ಣಸ್ಯ ನಿರೂಪಿತತ್ವಸಂಬಂಧೇನಾನ್ವಯಃ॥ ಯನ್ನಿರೂಪಿತಸಮ.... ಧೇಯತ್ವಂ । ಸಮವೇತತ್ವಸ್ಯ ಆಶ್ರಯತಾ ಸಂಬಂಧೇನ ರುಚಿಪದಾರ್ಥ ಕಾಂತಾಸನ್ವಯಃ। ಯನ್ನಿರೂಪಿತ ಸಮವೇತತ್ವಾಶ್ರಯರುಚಿಃ। ಜಲಧರಸ್ಯ ಇತ್ಯತ್ರ ಷಷ್ಠ್ಯಾಃ ಸಮವೇತ್ವಮರ್ಥಃ। ತದ್ವೈಕದೇಶಭೂತಾಧೇಯತ್ವೇ ಪ್ರಕೃತ್ಯರ್ಥಮೇಘಸ್ಯ ಸ್ವನಿಷ್ಠಅಧಿಕರಣತಾನಿರೂಪಿತತ್ವಸಂಬಂಧೇನ ಅನ್ವಯಃ। ಸಮವೇತತ್ವಸ್ಯ ಆಶ್ರಯತಾ ಸಂಬಂಧೇನ ಕಾಂತಾವನ್ವಯಃ। ತಥಾಚ ಸ್ವವೃತ್ತಿ .... ಭಯಸಂಬಂಧೇನ ವರ್ತ .... ಮೇಘನಿಷ್ಠಾಧಿ.... ಸಮವೇತತ್ವಾಶ್ರಯರುಚಿಃ। ಇತಿಫಲತಿ।

ರುಚಿರಿವ ಇತ್ಯತ್ರ ಇವಶಬ್ದಸ್ಯ ಸಾದೃಶ್ಯಮರ್ಥಃ। ಇವಾರ್ಥ ಸಾದೃಶ್ಯೇ ಪ್ರಾಥಮಿಕ ರುಚಿಪದಾರ್ಥಕಾಂತೇಃ ಪ್ರತಿಯೋಗಿತಾಸಂಬಂಧೇನಾನ್ವಯಃ। ಸಾದೃಶ್ಯಾನುಯೋಗಿತಾಸಂಬಂದೇನ ಅಪರರುಚಿ ಪದಾರ್ಥಕಾಂತಾವನ್ವಯಃ। ಏವಂ ಚ ಕಾಂತಿ ವಿಶೇಷ್ಯಕಸ್ವವೃ....ತ್ತ್ಯೋಭಯಸಂ....ಕಾಂತಿಪ್ರತಿಯೋಗಿಕ ಸಾದೃಶ್ಯಾನುಯೋಗಿತ್ವ ಯನ್ನಿರೂಪಿತ ಸಮವೇತತ್ವಾಶ್ರಯತ್ವ ಪ್ರಕಾರಕಶಾಬ್ದಬೋಧಃ ರೂಢಃ। ಸಮಾಸಾತ್ತು ಬಹುವ್ರೀಹೌ ಉತ್ತರಪದಸ್ಯಾನ್ಯಪದಾರ್ಥೇ ಲಕ್ಷಣಾ. ತಥಾಚ ಸ್ವವೃತ್ತಿ.... ಸಾದೃಶ್ಯಾನುಯೋಗಿ ಕಾಂತಿ ನಿಷ್ಠಾಧೇಯತಾನಿರೂಪಕೇತಿ ಲಕ್ಷಣಯಾರ್ಥಃ. ತಸ್ಯ ಅಭೇದಸಂಬಂಧೇನ ಕೃಷ್ಣೇಽನ್ವಯಃ। ಗೋಪಾನಾಂ ವಧೂಟ್ಯಃ। ಷಷ್ಠ್ಯಾಃ ಸಂಬಂಧೋಽರ್ಥಃ। ಸಂಬಂಧೇ ಗೋಪಸ್ಯ ಪ್ರತಿಯೋಗಿತಾ ಸಂಬಂಧೇನಾನ್ವಯಃ। ಸಂಬಂಧಸ್ಯ ಅನುಯೋಗಿತಾ ಸಂಬಂಧೇನ ವಧೂಟೀಪದಾರ್ಥಯುವತಿಷ್ವನ್ವಯಃ॥ ಗೋಪಪ್ರತಿಯೋಗಿಕ ಸಂಬಂಧಾನುಯೋಗಿವಧೂಟ್ಯಃ॥ ತಾಸಾಂ ದುಕೂಲಾನಿ। ದುಕೂಲಪದಸ್ಯ ಕೀಟವಿಶೇಷ ಪರಿಣತತಂತೂಪಾದಾನಕವಸ್ತುವಿಶೇಷೋಽರ್ಥಃ। ಷಷ್ಠ್ಯಾಃ ಸಂಯೋಗ ಸಂಬಂಧಾವಚ್ಛಿನ್ನಾಧೇಯತ್ವಮರ್ಥಃ। ತಸ್ಮಿನ್ ವಧೂಟೀಶಬ್ದಸ್ಯ ನಿರೂಪಕತ್ವ ಸಂಬಧೇನಅನ್ವಯಃ। ಷಷ್ಠ್ಯರ್ಥ ಆಧೇಯತಾಯಾಃ ಆಶ್ರಯತಾಸಂಬಧೇನ ದುಕೂಲ ಪದಾರ್ಥೈಕದೇಶ ವಸ್ತ್ರೇಽನ್ವಯಃ। ದುಕೂಲಾನಾಂಚೌರಾಯ। ಚೋರಶಬ್ದಸ್ಯ ಸ್ವತ್ವ ವಿಶಿಷ್ಟವ್ಯಾಪಾರವಾನ್ ಅರ್ಥಃ। ಷಷ್ಠ್ಯಾಃ ನಿರೂಪಿತತ್ವಮರ್ಥಃ। ಷಷ್ಠ್ಯರ್ಥ ನಿರೂಪಿತತ್ವೇಪ್ರಕೃತ್ಯರ್ಥತಾದೃಶವಸ್ತ್ರವಿಶೇಷಸ್ಯ ಸ್ವನಿಷ್ಠನಿರೂಪಕತಾ ನಿರೂಪ್ಯತ್ವ ಸಂಬಂಧೇನಾನ್ವಯಃ। ತಾದೃಶವಸ್ತ್ರನಿಷ್ಠನಿರೂಕತಾನಿರೂಪ್ಯ ನಿರೂಪಿತ ತ್ವಮಿತಿ ಫಲತಿ। ನಿರೂಪಿತತ್ವಸ್ಯ ಆಶ್ರಯತಾಸಂಬಂಧೇನ ಚೋರಪದಾರ್ಥೈಕದೇಶ ಸ್ವತ್ವೇಽನ್ವಯಃ॥ ವ್ಯಾಪಾರೇ ಸ್ವತ್ವವೈಶಿಷ್ಟ್ಯಂಚ ಚತುಷ್ಟಯಸಂಬಂಧೇನ। ತಥಾಹಿ–ಸ್ವನಿವೃತ್ತ್ಯನುಕೂಲ ಸ್ವನಿರೂಪಕಾನಭಿಮತತ್ವ, ಸ್ವನಿರೂಪಕಾಜ್ಞಾತತ್ವ, ಸ್ವನಿರೂಪಕಾ ಸಮವೇತಕೃತಿ ಜನ್ಯತ್ವ ಮಿತಿರೂಪೇಣ। ಪ್ರಥಮ ದಲಾಭಾವೇ ರಜತೇಽತಿವ್ಯಾಪ್ತಿಃ ಸ್ಯಾತ್। ತತ್ರಾನಭಿಮತತ್ವಂ ನಾಸ್ತಿ। ಸ್ವೋ ನಾಮ ಯಜಮಾನಃ ತಸ್ಯಾಭಿಮತಾದೇವ ನಯತಿ। ದ್ವಿತೀಯಾಭಾವೇ ನಿದ್ರಾಯಾಂ, ತೃತೀಯಾಭಾವೇ ಪ್ರವಾಹೇ ಅತಿವ್ಯಾಪ್ತಿಃ ಸ್ಯಾತ್। ತನ್ನಿವಾರಯಿ ತುಮೇವಮುಕ್ತಮ್॥ ವ್ಯಾಪಾರವತಃ ಅಭೇದಸಂಬಂದೇನ ಕೃಷ್ಣೇಽನ್ವಯಃ। ತಸ್ಮೈ ಇತ್ಯತ್ರ ತಚ್ಛಬ್ದಸ್ಯ ಪ್ರಸಿದ್ಧೋಽರ್ಥಃ। ಪ್ರಸಿದ್ಧಾಭಿನ್ನಃ ಕೃಷ್ಣಃ। ತಥಾಚ ಗೋಪಪ್ರಸಂ....ಅ....ನ....ನಿ....ಸಂ....ಆ....ಸ್ವ....ನಿ ...ನಿ. . ನಿ. . ನಿತ್ವಾಶ್ರಯ....ಸ್ವ....ವ್ಯಾಪಾರವದಭಿನ್ನಃ ॥ಇತಿ ಫಲತಿ॥ ಸಂಸಾರ ಏವ ಮಹೀರುಹಃ। ಏವಶಬ್ದಸ್ಯ ಅಭೇದ ಪ್ರಕಾರಕ ಆಹಾರ್ಯಜ್ಞಾನವಿಷಯತ್ವಂ ಅರ್ಥಃ। ತದೇಕದೇಶೇ ಅಭೇದೇ ಮಹೀರುಹ ಪದಾರ್ಥಸ್ಯ ಪ್ರತಿಯೋಗಿತಾಸಂಬಂಧೇನಾನ್ವಯಃ। ವಿಷಯತ್ವ ಸ್ಯಾಶ್ರಯ ತಾಸಂಬಂದೇನ ಸಂಸಾರೇಽನ್ವಯಃ। ಷಷ್ಠ್ಯಾಃ ಕಾರ್ಯತ್ವಮರ್ಥಃ। ಪ್ರಕೃತ್ಯರ್ಥಸ್ಯ ಕಾರ್ಯತಾಯಾಂ ಆಧೇಯತಾ ಸಂಬಂಧೇನಾನ್ವಯಃ। ಬೀಜಸ್ಯ

ಕಾರಣತಾವಾನರ್ಥಃ । ತದೇಕದೇಶಕಾರಣತ್ವೇ ಕಾರ್ಯತ್ವಸ್ಯ ನಿರೂಪಿತತ್ವ ಸಂಬಂಧೇನಾನ್ವಯಃ । ಕಾರಣತಾವತಃ ಅಭೇದಸಂಬಂಧೇನ ಕೃಷ್ಣೇ ಅನ್ವಯಃ । ತಥಾಚ ಸಂ....ಪ್ರ....ಅಭೇದಪ್ರ—ತ್ವಾಶ್ರಯಸಂ....ಕಾರ್ಯತಾನಿರೂಪಿತ ಕಾರಣ ತಾವದಭಿನ್ನಃ ಕೃಷ್ಣಃ । ಇತಿ ಫಲತಿ । ನನುಃ ಶಬ್ದಸ್ಯ ಉತ್ಕೃಷ್ಟತ್ವಪ್ರಕಾರಕ ಜ್ಞಾನಾನುಕೂಲವ್ಯಾಪಾರಃ ಅರ್ಥಃ । ಚತುರ್ಥ್ಯಾಃ ವಿಶೇಷ್ಯತಾ ಅರ್ಥಃ । ಕೃಷ್ಣನಿಷ್ಠ ವಿಶೇಷ್ಯತಾಯಾಃ ಉತ್ಕೃ....ಜ್ಞಾನೇ ಅನ್ವಯಃ ॥

ಆಶೀರ್ವಾದ, ನಮುಕ್ರಿಯಾ, ವಸ್ತುನಿರ್ದೇಶವೆಂದು ಮಂಗಲ ಮೂರು ವಿಧವಾಗಿದೆ ಪರಮೇಶ್ವರನಿಂದ ತನಗೂ ಶಿಷ್ಯರಿಗೂ ಇಷ್ಟಾರ್ಥಪ್ರಾರ್ಥನೆಯೇ ಆಶೀರ್ವಾದ. ಸ್ವಾಪ ಕರ್ಷ ಬೋಧಾನುಕೂಲ ಸ್ವೀಯವ್ಯಾಪಾರ ವಿಶೇಷವೇ ನಮಸ್ಕಾರ. ಸ್ವೇಷ್ಟದೇವತಾದಿ ಕೀರ್ತನವೇ ವಸ್ತು ನಿರ್ದೇಶ. ಕಾರಿಕಾಮೂಲದಲ್ಲಿ ನಮಸ್ಕಾರವೂ'ಮುಕ್ತಾವಳಿಯಲ್ಲಿ ಆಶೀರ್ವಾದವೂ ಮಾಡಲ್ಪಟ್ಟಿದೆ. 'ಆಶೀರ್ವಾದಾದ್ಯನ್ಯತಮತ್ವಂ' ಅಥವಾ, 'ಸಮಾಪ್ತಿಪ್ರತಿಬಂಧಕೀಭೂತ ದುರಿತವಿಶೇಷಧ್ವಂಸಹೇತುತ್ವಂ' ಅಥವಾ, ವಿಘ್ನ ಭಿನ್ನತ್ವೇ ಸತಿ ವಿಘ್ನಧ್ವಂಸಪ್ರತಿಬಂಧಕಾಭಾವಭಿನ್ನತ್ವೇಚಸತಿ, ಪ್ರಾರಿಪ್ಸಿತ (ಗ್ರಂಥ) ವಿಘ್ನಧ್ವಂಸಾಽಸಾಧಾರಣಕಾರಣತ್ವಂ' ಮಂಗಳತ್ವಂ. ಎಂದು ಮಂಗಳದ ಲಕ್ಷಣ.

**ನನು–ಮಂಗಲಂ ನ ವಿಘ್ನಧ್ವಂಸಂ ಪ್ರತಿ ನ ವಾ ಸಮಾಪ್ತಿಂ ಪ್ರತಿ ಕಾರಣಂ, ವಿನಾಪಿ ಮಂಗಲಂ ನಾಸ್ತಿಕಾದೀನಾಂ ಗ್ರಂಥೇ ನಿರ್ವಿಘ್ನ ಪರಿಸಮಾಪ್ತಿದರ್ಶನಾದಿತಿ ಚೇನ್ನ । ಅವಿಗೀತಶಿಷ್ಟಾಚಾರವಿಷಯತ್ವೇನ ಮಂಗಲಸ್ಯ ಸಫಲತ್ವೇ ಸಿದ್ಧೇ, ತತ್ರ ಚ ಫಲಜಿಜ್ಞಾಸಾಯಾಂ, ಸಂಭವತಿ ದೃಷ್ಟಫಲಕತ್ವೇಽದೃಷ್ಟಫಲಕಲ್ಪನಾಯಾ ಅನ್ಯಾಯತ್ವಾತ್, ಉಪ ಸ್ಥಿತತ್ವಾಚ್ಚ ಸಮಾಪ್ತಿರೇವ ಫಲಂಕಲ್ಪ್ಯತೇ ॥**

ಮಂಗಲವು ವಿಘ್ನ ಧ್ವಂಸನಾಶವನ್ನು ಕುರಿತಾಗಲೀ, ಸಮಾಪ್ತಿಯನ್ನು ಕುರಿ ತಾಗಲೀ ಕಾರಣವಲ್ಲ. ಮಂಗಲವಿಲ್ಲದೇನೇ ನಾಸ್ತಿಕಾದಿಗಳ ಗ್ರಂಥದಲ್ಲಿ ಯಾವವಿಘ್ನ ವಿಲ್ಲದೆಯೂ ಸಮಾಪ್ತಿ ಕಂಡಿದೆಯಾದುದರಿಂದ, ಎಂದು ಆಶಂಕಿಸಬಾರದು । ನಿಂದಿತವಲ್ಲದ ಶಿಷ್ಟರ ಆಚರಣೆಗೆ ವಿಷಯವಾದುದರಿಂದ ಮಂಗಲಕ್ಕೆ ಫಲವಿದೆಯೆಂದು ಸಿದ್ಧವಾದಮೇಲೇ ಅಲ್ಲಿ ಫಲಯಾವುದು ಎಂದು ಜಿಜ್ಞಾಸೆಯುಂಟಾದಾಗ ಎದುರಿಗೆ ತೋರತಕ್ಕಫಲವು ಸಂಭವಿಸುವಾಗ, ಅದೃಷ್ಟವೇ ಫಲವೆಂದು ಕಲ್ಪಿಸುವುದರಲ್ಲಿ ನ್ಯಾಯವಿಲ್ಲದಿರುವುದರಿಂದ, ಪ್ರಕೃತಉಪಸ್ಥಿತವಾದ ಸಮಾಪ್ತಿಯೇ ಫಲವೆಂದು ಸಮರ್ಥಿಸಲ್ಪಡುತ್ತದೆ.

ವೇದವನ್ನು ಒಪ್ಪದಿರುವ ಚಾರ್ವಾಕಾದಿ ನಾಸ್ತಿಕರು ಮಂಗಲವಿಷಯದಲ್ಲಿ ಪೂರ್ವಪಕ್ಷವನ್ನು ಮಾಡುತ್ತಾರೆ. ಅದನ್ನು 'ನನು–' ಇತ್ಯಾದಿ ವಾಕ್ಯಗಳಿಂದ ತೋರಿ ಸುತ್ತಾನೆ. ವಿಘ್ನನಾಶಕ್ಕಾಗಲೀ, ಸಮಾಪ್ತಿಗಾಗಲೀ ಮಂಗಲ ಕಾರಣವಾಗುವುದಿಲ್ಲ.

ಕಾರಣವಾಗುವುದಿಲ್ಲವೆಂಬ ವಿಷಯದಲ್ಲಿ ವ್ಯತಿರೇಕವ್ಯಭಿಚಾರ ತೋರಿಸುತ್ತಾನೆ. 'ವಿನಾ' ಇತಿ. 'ಕಾರಣಾಭಾವೇಪಿ ಕಾರ್ಯಸ್ಯ ಸತ್ವಂ' ವ್ಯತಿರೇಕವ್ಯಭಿಚಾರ. ಕಾರಣವಿಲ್ಲದಿರುವಾಗಲೂ ಕಾರ್ಯವಾಗುವುದು. ನಾಸ್ತಿಕರು ದೇವರನ್ನು ಒಪ್ಪುವುದಿಲ್ಲ. ಅವರು ತಮ್ಮ ಗ್ರಂಥಗಳ ಆದಿಯಲ್ಲಿ ಮಂಗಲವನ್ನೂ ಮಾಡುವುದಿಲ್ಲ. ಆದರೂ ಅವರ ಗ್ರಂಥ ಸಮಾಪ್ತಿ ಆಗಿದೆ. ಆಗ ಮಂಗಲರೂಪ 'ಕಾರಣವಿಲ್ಲದಿದ್ದರೂ ಸಮಾಪ್ತಿರೂಪಕಾರ್ಯವಾಗುವುದರಿಂದ ಅದು ಸಮಾಪ್ತಿಗೆ ಕಾರಣವಾಗಲಾರದು. ಆದುದರಿಂದ ಮಂಗಲವನ್ನೇಕೆ ಮಾಡಬೇಕು? ಅದು ನಿಷ್ಫಲ ಎಂದು ಶಂಕೆಗೆ ತಾತ್ಪರ್ಯ. ಇದರಿಂದ ಅನುಮಾನ ಹೀಗೆ ಸಿದ್ಧವಾಗುತ್ತದೆ. ಯದ್ಯಪಿ ಚಾರ್ವಾಕಾದಿಗಳು ಪ್ರತ್ಯಕ್ಷಪ್ರಮಾಣವೊಂದನ್ನೇ ಒಪ್ಪತಕ್ಕವರು. ಅನುಮಾನಪ್ರಮಾಣವನ್ನವರು ಅಂಗೀಕರಿಸಿಲ್ಲ. ಆದರೂ ತಾರ್ಕಿಕನೊಡನೆ ವಾದಮಾಡುವುದರಿಂದ ಅಭ್ಯುಪಗಮವಾದದಿಂದ ಅಂದರೆ ಪ್ರೌಢಿಮೆಯಿಂದ ಹೇಳುತ್ತಾನೆಂದು ತಿಳಿಯಬೇಕು. 'ಮಂಗಲವಿಷಯಿಣೀ ಕೃತಿಃ—ಇಷ್ಟಸಾಧನತಾಭ್ರಮಪ್ರಯೋಜ್ಯಾ–ನಿಷ್ಫಲತ್ವಾತ್ । ಜಲತಾಡನವತ್ । ವ್ಯರ್ಥವಾಗಿ ನೀರನ್ನು ಹೊಡೆಯುವಂತೆ ಯಾವ ಫಲವೂ ಇಲ್ಲದಿರುವುದರಿಂದ ಮಂಗಲವು ಇಷ್ಟಸಾಧನತಾಭ್ರಮೆಯಿಂದ ಮಾಡಿದೆ. ಮಾಡಬಾರದೆಂದು ತಾತ್ಪರ್ಯ. ಇಲ್ಲಿ ನಿಷ್ಫಲತ್ವ ಹೇತುವೇ ಸ್ವರೂಪಾಸಿದ್ಧ ಎಂದು ಶಂಕೆ ಬಂದರೆ ಅದನ್ನು ಅನುಮಾನಾಂತರದಿಂದ ಹೋಗಲಾಡಿಸಬೇಕು. ಪಕ್ಷದಲ್ಲಿ ಹೇತು ಬಾರದಿದ್ದರೆ ಸ್ವರೂಪಾಸಿದ್ಧಿ ದೋಷಬರುತ್ತದೆ. ಅದು ಉಳ್ಳದ್ದು ಸ್ವರೂಪಾಸಿದ್ಧ. ಮಂಗಲವು ನಿಷ್ಫಲವೇ ಅಲ್ಲ ಎಂದು ವಾದಿಸಿದರೆ ಆಗ ನಿಷ್ಫಲತ್ವವನ್ನು ಸಾಧಿಸಬೇಕು. "ಮಂಗಲಂ,—ನಿಷ್ಫಲಂ–ಫಲವಿಶೇಷಾಭಾವಕೂಟವತ್ತ್ವಾತ್ ।" "ಯಃ ಫಲವಿಶೇಷಾಭಾವಕೂಟವಾನ್, ಸಃ ನಿಷ್ಫಲಃ, ಯಥಾ ನಿರ್ಘಟಂ ಭೂತಲಮ್ ॥" ಫಲವಿಶೇಷಾಭಾವಕೂಟವಿದ್ದಲ್ಲಿ ಅಂದರೆ ಯಾವ ಫಲವಿಶೇಷವೂ ಇಲ್ಲದಿರುವಲ್ಲಿ ಫಲ ಸಾಮಾನ್ಯಾಭಾವವಿರುತ್ತದೆ. ತೆಂಗು, ಮಾವು ಮುಂತಾದ ಯಾವ ಮರವೂ ಇಲ್ಲವೆಂದರೆ ಮರಸಾಮಾನ್ಯವಿಲ್ಲವೆಂದರ್ಥ. ಇಲ್ಲಿಯೂ ಸ್ವರೂಪಾಸಿದ್ಧ ಅಂದರೆ ಫಲವಿಶೇಷಾಭಾವಕೂಟವು ಮಂಗಲದಲ್ಲಿ ಇಲ್ಲವೆಂದು ಆಶಂಕಿಸಿದರೆ ಅದನ್ನು ಇನ್ನೊಂದು ಅನುಮಾನದಿಂದ ಸಾಧಿಸಬೇಕು. 'ಮಂಗಲಂ–ಫಲವಿಶೇಷಾಭಾವಕೂಟವತ್—ವಿಘ್ನಧ್ವಂಸನಿರೂಪಿತ ಕಾರಣತ್ವಾಭಾವವತ್ವೇ ಸತಿ, ಸಮಾಪ್ತಿನಿರೂಪಿತ ಕಾರಣತ್ವಾಭಾವವತ್ತ್ವಾತ್. ಫಲವಿಶೇಷವೆಂದರೆ ಇಲ್ಲಿ ವಿಘ್ನಧ್ವಂಸ ಅಥವಾ ಸಮಾಪ್ತಿ ಹೇಳಬೇಕು. ಅವೆರಡೂ ಸಂಭವಿಸದಿರುವುದರಿಂದ ಫಲವಿಶೇಷಾಭಾವಕೂಟವು ಮಂಗಲದಲ್ಲಿ ಬರಲು ಯಾವ ತೊಂದರೆಯೂ ಇಲ್ಲ. ಇಲ್ಲಿಯೂ ಹೇತ್ವಸಿದ್ಧಿಯನ್ನು ಆಶಂಕಿಸಿ ಅದನ್ನು ನಿವಾರಿಸಲು ನನು—ಇತ್ಯಾದಿ ಗ್ರಂಥ ಆರಂಭವಾಗಿದೆಯೆಂದು ತಿಳಿಯಬೇಕು ವಿಘ್ನಧ್ವಂಸಾದಿಕಾರಣತ್ವವೇ ಇರುವಾಗ ಮಂಗಲದಲ್ಲಿ ಅದರ ಅಭಾವ ಬರುವುದು ಹೇಗೆ ? ಎಂದು ಅಸಿದ್ಧಿಶಂಕಾಮಾಡಬಹುದು. ಆಗ ಅನುಮಾನಾಂತರದಿಂದ ಅದನ್ನು ಸಾಧಿಸಬೇಕು.

ಮಂಗಲಃ- ವಿಘ್ನಧ್ವಂಸ ನಿರೂಪಿತಕಾರಣತ್ವಾಭಾವವತ್—ವಿಘ್ನಧ್ವಂಸ ಸಮಾನಾಧಿಕರಣಾತ್ಯಂತಾಭಾವಪ್ರತಿಯೋಗಿತ್ವಾತ್. ಹೀಗೆಯೇ ಮಂಗಲಂ—ಸಮಾಪ್ತಿನಿ.... ಭಾವವತ್—ಸಮಾಪ್ತಿಸ.... ಗಿತ್ವಾತ್' ಯಃ, ಯತ್ಸಮಾನಾಧಿಕರಣಾತ್ಯಂತಾಭಾವಪ್ರತಿಯೋಗೀ, ಸಃ ತನ್ನಿರೂಪಿತಕಾರಣತ್ವಾಭಾವವಾನ್ । ಯಥಾ ರಾಸಭಃ '' ವಿಘ್ನಧ್ವಂಸ ಅಥವಾ ಸಮಾಪ್ತಿ ಇರುವಲ್ಲಿ ಮಂಗಲ ಇಲ್ಲದಿರುವುದರಿಂದ (ನಾಸ್ತಿಕರ ಗ್ರಂಥದಲ್ಲಿ) ಅವುಗಳಿಗೆ ಮಂಗಲವು ಕಾರಣವಾಗುವುದಿಲ್ಲ. ವ್ಯತಿರೇಕವ್ಯಭಿಚಾರವೇ ಇದು. ಕಾರ್ಯಾವ್ಯವಹಿತಪ್ರಾಕ್‌ಕ್ಷಣಾವಚ್ಛೇದೇನ ಕಾರ್ಯಾಧಿಕರಣವೃತ್ತ್ಯತ್ಯಂತಾಭಾವಪ್ರತಿಯೋಗಿತಾವಚ್ಛೇದಕವತ್ವಂ' ಎಂದು ಅದರ ಲಕ್ಷಣ. ಕಾರ್ಯ—ಗ್ರಂಥಸಮಾಪ್ತಿ. ಅದರ ಅವ್ಯವಹಿತ ಪೂರ್ವಕ್ಷಣದಲ್ಲಿ, ಅದರ ಅಧಿಕರಣವಾದ ನಾಸ್ತಿಕಗ್ರಂಥದಲ್ಲಿ ಇರುವ ಅತ್ಯಂತಾಭಾವ ಅಂದರೆ ಮಂಗಲದ ಅತ್ಯಂತಾಭಾವ. ಅದರಪ್ರತಿಯೋಗಿ—ಮಂಗಲ. ಪ್ರತಿಯೋಗಿತಾ ಅದರಲ್ಲಿದೆ. ಪ್ರತಿಯೋಗಿತಾವಚ್ಛೇದಕ—ಮಂಗಲತ್ವ. ಅದು ಉಳ್ಳದ್ದು ಮಂಗಲವಾಗುತ್ತದೆ. ಯಾವುದರ ಅಭಾವ ಹೇಳುತ್ತೇವೋ ಅದು ಪ್ರತಿಯೋಗೀ. ಯಾವುದು ಯಾವುದರ ಆಶ್ರಯದಲ್ಲಿರುವ ಅತ್ಯಂತಾಭಾವಕ್ಕೆ ಪ್ರತಿಯೋಗಿ ಆಗುತ್ತದೆಯೋ, ಅದು ಅದರ ಕಾರಣವಾಗುವುದಿಲ್ಲ. (ಕತ್ತೆಯು) ರಾಸಭ ಘಟದ ಅಧಿಕರಣವಾದ ಚಕ್ರಾದಿಗಳಲ್ಲಿರುವ ರಾಸಭಾತ್ಯಂತಾಭಾವಕ್ಕೆ (ಚಕ್ರೇ ರಾಸಭಃ ನಾಸ್ತಿ) ಪ್ರತಿಯೋಗಿಯಾಗಿರುವುದರಿಂದ ಘಟನಿರೂಪಿತ ಕಾರಣತ್ವವು ರಾಸಭದಲ್ಲಿ ಬರುವುದಿಲ್ಲ. ಹೀಗೆ ಮಂಗಲವಿಲ್ಲದೆ ನಾಸ್ತಿಕಾದಿಗ್ರಂಥಗಳಲ್ಲಿ ವಿಘ್ನಧ್ವಂಸ, ಸಮಾಪ್ತಿ ತೋರುವುದರಿಂದ ಅವುಗಳಿಗೆ ಮಂಗಲವು ಕಾರಣವಾಗುವುದು ಹೇಗೆ ? ಎಂದು ಪೂರ್ವಪಕ್ಷಮಾಡುವವನ ಆಶಯ. 'ಚೇನ್ನ' ಎಂಬುದರಿಂದ ಸಿದ್ಧಾಂತಿಯು ಅದನ್ನು ಖಂಡಿಸುತ್ತಾನೆ.

ವೇದಾರ್ಥವನ್ನು ತಿಳಿದು ಸದಾಚಾರವನ್ನು ಮಾಡುವ ಶಿಷ್ಟರ ಪ್ರವೃತ್ತಿಯು ಎಂದೂ ನಿಷ್ಫಲವಾಗಿ ನೋಡಲಿಲ್ಲ. ಅವರು ಇತರ ಕರ್ಮಾರಂಭದಲ್ಲಿ ಗಣಪತ್ಯಾದಿ ಪೂಜೆಮಾಡಿ ಪ್ರಾರಂಭಿಸುವಂತೆ ಗ್ರಂಥದ ಆದಿಯಲ್ಲಿ ಮಂಗಳವನ್ನೂ ಮಾಡಿರುತ್ತಾರೆ. ಅವರು ಹಾಗೆ ಮಾಡಿರುವುದರಿಂದ ಅವರ ಕೃತಿಯಿಂದ ನಾವು ಸಫಲತ್ವವನ್ನು ಅನುಮಾನ ಮಾಡುತ್ತೇವೆ. ಫಲವಿದೆಯೆಂದಮೇಲೆ ಆ ಫಲ ಯಾವುದು ಎಂದು ಜಿಜ್ಞಾಸೆ ಬಂದರೆ ವಿಘ್ನಧ್ವಂಸವನ್ನಾಗಲೀ, ಸಮಾಪ್ತಿಯನ್ನಾಗಲೀ ಫಲವನ್ನು ಕಲ್ಪಿಸುತ್ತೇವೆ. ದೃಷ್ಟವಾದ ಫಲದೊರೆಯುವಾಗ ಅದೃಷ್ಟಸ್ವರ್ಗಾದಿಫಲಗಳನ್ನು ಕಲ್ಪಿಸುವುದರಲ್ಲಿ ನ್ಯಾಯವಿಲ್ಲ ನಾಸ್ತಿಕರತರ್ಕವನ್ನು ಖಂಡಿಸಲು ಹೀಗೆ ಅನುಮಾನಾಕಾರಸಿದ್ಧವಾಗುತ್ತದೆ.

'ಮಂಗಲಂ-ಸಫಲಂ- ಅವಿಗೀತಶಿಷ್ಟಾಚಾರವಿಷಯತ್ವಾತ್' । ವಿರುದ್ಧೋಗೀತಃ ವಿಗೀತಃ (ಶಾಸ್ತ್ರಾತ್ ವಿರುದ್ಧಂ ಗೀತಂ—ಕಥನಂ ಯಸ್ಯ ಸಃ) ನಿಂದಿತವೆಂದರ್ಥ. ನ ವಿಗೀತಃ ಅವಿಗೀತಃ ನಿಂದಿತವಾಗದಿರುವುದು. 'ಫಲಸಾಧನತಾಂಶೇ ಭ್ರಾಂತಿರಹಿತಾಃ ಶಿಷ್ಟಾಃ' ವೇದಾನುಮತ ಕರ್ಮವನ್ನು ಭಕ್ತಿಶ್ರದ್ಧಾದಿಗಳಿಂದ ಮಾಡುವವರು.

'ಆರಾಧಿಸಲು ಯೋಗ್ಯನು' ಎಂಬ ಜ್ಞಾನವೇ ಭಕ್ತಿ. ಫಲವಾಗಿಯೇ ಆಗುತ್ತೆ ಎಂಬ ನಿಶ್ಚಯವೇ ಶ್ರದ್ಧೆ. ಶಿಷ್ಟರ ಆಚಾರ—ಕೃತಿ. ಶಿಷ್ಟಾನಾಂ ಆಚಾರಃ, 'ಅವಿಗೀತಶ್ಚಾಸೌ ಶಿಷ್ಟಾಚಾರಶ್ಚ, ತಸ್ಯ ವಿಷಯಃ' ಅವರಕೃತಿಗೆ ವಿಧೇಯವಾದುದು ಎಂದರ್ಥ. 'ಯತ್ರ ೨-ಅವಿಗೀತಶಿಷ್ಟಾಚಾರವಿಷಯತ್ವಂ, ತತ್ರ ೨ ಸಫಲತ್ವಂ' ಎಂದು ವ್ಯಾಪ್ತಿ. 'ಯಥಾ-ದರ್ಶಾದಿಶ್ರಾದ್ಧಕರ್ಮ.' ದರ್ಶಾದಿಶ್ರಾದ್ಧಕರ್ಮವು ಶಿಷ್ಟಾಚಾರ ವಿಷಯವಾದುದರಿಂದ ಹೇಗೆ ಸಫಲವೋ ಹಾಗೆ ಮಂಗಲಕರ್ಮವೂ ಶಿಷ್ಟರಕೃತಿ ವಿಷಯವಾದುದರಿಂದ ಸಫಲವೆಂದರ್ಥ. 'ಅವಿಗೀತ....ತ್ವಾತ್' ಎಂಬುದಕ್ಕೆ ಬಲವದ ನಿಷ್ಟಾನನುಬಂಧೀಷ್ಟಸಾಧನತ್ವಪ್ರಕಾರಕ ಭ್ರಾಂತಿರಹಿತ ಪುರುಷಸಮವೇತ ಕೃತಿ ವಿಧೇಯತ್ವಾತ್' ಎಂಬರ್ಥವು ಸಿದ್ಧವಾಗುತ್ತದೆ.

ಕೇವಲ 'ವಿಷಯತ್ವಾತ್' ಎಂದರೆ ಜ್ಞಾನವವಿಷಯುವಾದಸುಖದಲ್ಲಿ ಅತಿವ್ಯಾಪ್ತ ವಾಗುತ್ತದೆ. ಸುಖವೇಫಲ. ಸಫಲತ್ವಾಭಾವವುಳ್ಳಸುಖದಲ್ಲಿ ಹೇತು ಬರುವುದರಿಂದ ವ್ಯಭಿಚಾರದೋಷ ಬರುತ್ತದೆ. 'ಆಚಾರವಿಷಯತ್ವಾತ್' ಎಂದರೆ ಚೈತ್ಯವಂದನೆಯಲ್ಲಿ ಅತಿವ್ಯಾಪ್ತಿ. ಅಲ್ಲಿಯೂಫಲವಿಲ್ಲ. ಆದುದರಿಂದ 'ಶಿಷ್ಟಾಚಾರವಿಷಯತ್ವಾತ್' ಎಂದಿದೆ. ಚೈತ್ಯವಂದನೆ ಮಾಡುವವರು ಫಲಸಾಧನತಾಂಶದಲ್ಲಿ ಭ್ರಾಂತಿಯಿಂದ ಕೂಡಿದವರಾದುದರಿಂದ ಶಿಷ್ಟರಲ್ಲ. ಕೇವಲ ಇಷ್ಟೇ ಹೇತು ಹೇಳಿದರೆ ಶ್ಯೇನಯಾಗಾದಿ ಯಲ್ಲಿ ವ್ಯಭಿಚಾರ ಬರುತ್ತದೆ. ಶತ್ರುಮರಣಕ್ಕೋಸ್ಕರ ಶಿಷ್ಟರು ಶ್ಯೇನಯಾಗಮಾಡುತ್ತಾರೆ. ಶಿಷ್ಟಕೃತಿವಿಷಯತ್ವ ಅಲ್ಲಿಯೂ ಬರುತ್ತದೆ. ಆದುದರಿಂದ 'ಅವಿಗೀತಶಿಷ್ಟಾ....ತ್ವಾತ್' ಎಂದು ಹೇಳಬೇಕು. ಶ್ಯೇನಯಾಗ ನಿಂದಿತಕೃತಿವಿಷಯವಾಗಿದೆ. 'ಅವಿಗೀತತ್ವಂನಾಮ ಬಲವದನಿಷ್ಟಾನನುಬಂಧಿತ್ವಂ' ಶ್ಯೇನಯಾಗ ಮುಂದೆ ನರಕವನ್ನುಂಟುಮಾಡುವುದರಿಂದ ಬಲವದನಿಷ್ಟಾನನುಬಂಧಿಯಾಗುವುದಿಲ್ಲ. ಜನ್ಮಾಂತರೀಯ ನರಕದುಃಖಾನುಬಂಧಿ ಯಾಗಿದೆ. ಹೀಗೆ ಹೇತುವು ನಿರ್ದುಷ್ಟವಾಗಿದೆ. ಶಿಷ್ಟರ ಅನಿಂದಿತಕೃತಿವಿಷಯ ವಾದರಿಂದ ಮಂಗಲವು ಸಫಲವಾದಮೇಲೆ ಪ್ರಕೃತ ಸಮಾಪ್ತಿಫಲವು ನ್ಯಾಯದಿಂದ ಸಿದ್ಧವಾಗುತ್ತದೆ. ಪೂರ್ವಪಕ್ಷಿಯು ಫಲವಿಶೇಷಾಭಾವಕೊಟವಿದೆಯೆಂದು ಹೇಳಿರುವುದು ಸರಿಯಲ್ಲ. 'ಮಂಗಲಂ —ಸಮಾಪ್ತಿಫಲಕಂ —ಸಮಾಪ್ತ್ಯನ್ಯಾಫಲಕತ್ವೇ ಸತಿ ಸಫಲತ್ವಾತ್' ಎಂಬ ಅನುಮಾನದಿಂದ ಸಮಾಪ್ತಿಫಲವು ಸಿದ್ಧವಾಗುತ್ತದೆ. ದೃಷ್ಟವಾದ ಫಲವು ಕೊಡದಿರುವಸ್ಥಳದಲ್ಲಿಮಾತ್ರ ಅದೃಷ್ಟಸ್ವರ್ಗಾದಿಫಲಗಳು ಕಲ್ಪಿತವಾಗುತ್ತವೆ. ಕಲ್ಪನಾ ಎಂದರೆ ಅನುಮಾನ ಇಲ್ಲಿ ಸಮಾಪ್ತಿರೂಪ ದೃಷ್ಟಫಲವು ಸಿದ್ಧಿಸುತ್ತದೆ. ಹೀಗೆ ಹೇಳಿದರೂ ಪೂರ್ವಪಕ್ಷಿಯು ತೋರಿಸಿದ ವ್ಯತಿರೇಕವ್ಯಭಿಚಾರ ನಿವಾರಣೆ ಆಗಲಿಲ್ಲ. ಈಗ ಆ ದೋಷನಿವಾರಣೆಯ ರೀತಿಯನ್ನು ತೋರಿಸುತ್ತಾನೆ.

**ಇತ್ಥಂ ಚ ಯತ್ರ ಮಂಗಲಂ ನ ದೃಶ್ಯತೇ ತತ್ರಾಪಿ ಜನ್ಮಾಂತರೀಯಂ ತತ್ಕಲ್ಪ್ಯತೇ, ಯತ್ರ ಚ ಸತ್ಯಪಿ ಮಂಗಲೇ ಸಮಾಪ್ತಿರ್ನ ದೃಶ್ಯತೇ ತತ್ರ**

**ಬಲವತ್ತರೋ ವಿಘ್ನೋ ವಿಘ್ನಪ್ರಾಚುರ್ಯಂ ವಾ ಬೋಧ್ಯಂ, ಪ್ರಚುರಸ್ಯೈವ ಬಲವತ್ತರ ವಿಘ್ನ ನಿರಾಕರಣ ಕಾರಣತ್ವಮ್ ||**

ಮಂಗಲಕ್ಕೆ ಸಮಾಪ್ತಿಫಲವು ಸಿದ್ಧವಾದಮೇಲೆ ಎಲ್ಲಿ ಮಂಗಲತೋರುವುದಿಲ್ಲವೊ ಅಲ್ಲಿಯೂ ಹಿಂದಿನ ಜನ್ಮದಲ್ಲಿ ಮಾಡಿದ ಮಂಗಲವು ಅನುಮಿತವಾಗುತ್ತದೆ, ಎಲ್ಲಿ ಮಂಗಲವಿದ್ದರೂ ಸಮಾಪ್ತಿ ದೃಷ್ಟವಾಗಲಿಲ್ಲವೋ ಅಲ್ಲಿ ಅತಿಬಲವಾದ ವಿಘ್ನವಾಗಲೀ ವಿಘ್ನಬಾಹುಳ್ಯವಾಗಲೀ ಇದೆಯೆಂದು ತಿಳಿಯಬೇಕು, ಅತಿಶಯಮಂಗಲವೇ ಅತಿಶಯ ವಿಘ್ನನಿವಾರಣೆಯಲ್ಲಿ ಕಾರಣ. ||

ನಾಸ್ತಿಕಗ್ರಂಥದಲ್ಲಿ ವ್ಯತಿರೇಕವ್ಯಭಿಚಾರ ಬಂದಿತ್ತು. ಮಂಗಲವಿಲ್ಲದೆ ಅಲ್ಲಿ ಸಮಾಪ್ತಿರೂಪಕಾರ್ಯವು ತೋರಿದೆ. ಅನುಮಾನದಿಂದ ಮಂಗಲ ಸಮಾಪ್ತಿಗಳಿಗೆ ಕಾರ್ಯಕಾರಣಭಾವ ಸಿದ್ಧವಾದಮೇಲೆ ಅಲ್ಲಿಯೂ ಕಾರ್ಯವಿರುವುದರಿಂದ ಕಾರಣವಿದ್ದೇ ಇದೆಯೆಂದು ತಿಳಿಯಬೇಕು. ನಾಸ್ತಿಕನು ಈ ಜನ್ಮದಲ್ಲಿ ಮಂಗಲಮಾಡದಿದ್ದರೂ ಹಿಂದಿನ ಜನ್ಮದಲ್ಲಿ ಮಂಗಲಮಾಡಿರುತ್ತಾನೆಂದು ಕಲ್ಪಿಸಬೇಕು. ಕಾರಣವಿಲ್ಲದೆ ಕಾರ್ಯವಾಗಲಾರದು. ಆದುದರಿಂದ ಹೀಗೆ ಅನುಮಾನ ಮಾಡಬೇಕು. 'ಅಯಂ ನಾಸ್ತಿಕಃ–ಜನ್ಮಾಂತರೀಯ (ಪೂರ್ವಜನ್ಮನಿ) ಕೃತಮಂಗಲಕಃ—ಗ್ರಂಥಸ್ಯ ನಿರ್ವಿಘ್ನಪರಿಸಮಾಪ್ತಿದರ್ಶನಾತ್' ಆಸ್ತಿಕವತ್| ಯತ್ರ ೨ ನಿರ್ವಿಘ್ನಾಪರಿಸಮಾಪ್ತಿಃ, ತತ್ರ ೨ 'ಮಂಗಲಸ್ಯ ಸತ್ವಂ' ಯಥಾ ಆಸ್ತಿಕಗ್ರಂಥೇ' ಹೀಗೆ ಕಾರಣವಿದೆಯೆಂದು ಅನುಮಾನದಿಂದ ಸಿದ್ಧಪಡಿಸಿದುದರಿಂದ ಹಿಂದಿನ ದೋಷಕ್ಕೆ ಅವಕಾಶವಿಲ್ಲ. ವ್ಯತಿರೇಕ ವ್ಯಭಿಚಾರ ಬೇಡ. ಕಾರಣವಿದ್ದರೂ ಕಾರ್ಯವಾಗಲಿಲ್ಲವೆಂಬ ಅನ್ವಯವ್ಯಭಿಚಾರ ವನ್ನು ಇಲ್ಲಿ ಹೇಳಬಹುದು. ಕಾದಂಬರ್ಯಾದಿಗ್ರಂಥಗಳಲ್ಲಿ ಮಂಗಲಮಾಡಿದ್ದರೂ ಸಮಾಪ್ತಿಯಾಗಲಿಲ್ಲ. ಅಲ್ಲಿ ಅನ್ವಯವ್ಯಭಿಚಾರದೋಷಬರುವುದರಿಂದ ಮಂಗಲ ಸಮಾಪ್ತಿಗಳಿಗೆ ಕಾರ್ಯಕಾರಣಭಾವ ಹೇಳುವುದು ಹೇಗೆ ? ಎಂದು ಶಂಕಾಬಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. ಯತ್ರ—ಇತಿ. ಕಾದಂಬರಿಯಲ್ಲಿ ಮಂಗಲಮಾಡಿ ದ್ದರೂ ಸಮಾಪ್ತಿಯಾಗಲಿಲ್ಲವೆಂಬುದು ನಿಜ. ಆದರೆ ಅಲ್ಲಿ ಅತಿಬಲವಾದ ವಿಘ್ನವಿರು ವುದರಿಂದ ವಿಘ್ನಧ್ವಂಸಮೂಲಕ ಸಮಾಪ್ತಿಯಾಗಲಿಲ್ಲ. ವಿಘ್ನದ ಬಲಾತಿಶಯ ತಿಳಿಯಲಸಾಧ್ಯವಾದುದರಿಂದ 'ವಾ' ಎಂಬುದರಿಂದ ಪಕ್ಷಾಂತರ ತೋರಿಸುತ್ತಾನೆ. 'ವಿಘ್ನಪ್ರಾ'—ಇತಿ. ವಿಘ್ನಬಾಹುಳ್ಯವಿರುವುದರಿಂದ ಅಲ್ಲಿ ಮಂಗಳದಿಂದ ಕೆಲವು ವಿಘ್ನ ಗಳು ನಾಶವಾದರೂ ಕೆಲವು ಉಳಿದಿವೆಯಾದುದರಿಂದ ಸಮಾಪ್ತಿಯಾಗಲಿಲ್ಲಿ. 'ತತ್ ಸ್ಥಲೀಯ ವಿಘ್ನಾಪೇಕ್ಷಯಾ ಮಂಗಳಾಲ್ಪತ್ವಂ' ವಿಘ್ನಭೂಯಸ್ತ್ವಂ || ಎಷ್ಟುವಿಘ್ನ ಗಳಿವೆಯೋ ಅಷ್ಟೇಮಂಗಲಗಳಿರಬೇಕು. ಬಲವತ್ತರವಿಘ್ನಧ್ವಂಸನಿಷ್ಠಕಾರ್ಯತಾ ನಿರೂಪಿತಕಾರಣತ್ವವು ಬಲವತ್ತರಮಂಗಲದಲ್ಲಿದೆ. ವಿಘ್ನಸಮಸಂಖ್ಯಾಕವಾದ ಮಂಗಲ ವೇ ವಿಘ್ನಧ್ವಂಸವನ್ನು ಕುರಿತು ಕಾರಣವಾಗುತ್ತದೆಂದು ತಿಳಿಯಬೇಕು.

**ವಿಘ್ನಧ್ವಂಸಸ್ತು ಮಂಗಲಸ್ಯ ದ್ವಾರಮಿತ್ಯಾಹುಃ ಪ್ರಾಂಚಃ ॥**

ಮಂಗಲವು ಸಮಾಪ್ತಿಗೆ ಕಾರಣವೆಂದ ಮೇಲೆ ಕಾರಣವಿದ್ದಮೇಲೆ ಕಾರ್ಯವು ಆಗಲೇಬೇಕು. ಕಾದಂಬರಿಯಲ್ಲಿ ಮಂಗಲವಿರುವುದರಿಂದ ವಿಘ್ನಧ್ವಂಸ ಆಗದೇ ಹೋಗಲಿ. ಸಮಾಪ್ತಿ ಏಕೆ ಆಗಲಿಲ್ಲ? ಎಂದು ಶಂಕೆ ಬಂದರೆ ಅದಕ್ಕೆ ಪರಿಹಾರ ತೋರಿಸುತ್ತಾನೆ. 'ವಿಘ್ನಧ್ವಂಸಃ—' ಇತಿ. ಮಂಗಲಕ್ಕೆ ವಿಘ್ನಧ್ವಂಸವು ದ್ವಾರ ಅಂದರೆ ವ್ಯಾಪಾರ. ಕಾರಣದಿಂದ ವ್ಯಾಪಾರವುಂಟಾಗದಿದ್ದರೆ ಕಾರ್ಯವಾಗಲಾರದು. ಕಟ್ಟಿಗೆ ಒಡೆಯಲು ಕೊಡಲಿ ಕಾರಣ. ಆದರೆ ಅದರಲ್ಲಿ ಉದ್ಯಮನ ನಿಪತನರೂಪವ್ಯಾಪಾರವಾಗದಿದ್ದರೆ ಛೇದವಾಗಲಾರದು. ಒಂದು ಕಡೆ ಇಟ್ಟದ್ದರಿಂದ ಫಲವಾಗುವುದಿಲ್ಲ. ಹಾಗೆ ಸಮಾಪ್ತಿ ಕಾರಣವಾದರೂ ಮಂಗಲವು, ತನ್ನ ವ್ಯಾಪಾರ ಅಂದರೆ ವಿಘ್ನಧ್ವಂಸವಾಗದೇ ಹೋದರೆ ಸಮಾಪ್ತಿಯನ್ನು ಹುಟ್ಟಿಸಲಾರದು. ಕಾದಂಬರಿಯಲ್ಲಿ ಮಂಗಲ ರೂಪಕಾರಣವಿದ್ದರೂ ವಿಘ್ನಬಾಹುಲ್ಯವಿರುವುದರಿಂದ ವಿಘ್ನಧ್ವಂಸಾತ್ಮಕ ವ್ಯಾಪಾರವಿಲ್ಲದಿರುವುದರಿಂದ ಸಮಾಪ್ತಿ ರೂಪಫಲವುಂಟಾಗಲಿಲ್ಲ. ಹೀಗೆ ಮಧ್ಯೆ ವಿಘ್ನ ಧ್ವಂಸರೂಪವ್ಯಾಪಾರವನ್ನು ಹುಟ್ಟಿಸಿ ಮಂಗಲವು ಸಮಾಪ್ತಿಗೆ ಕಾರಣವಾಗುತ್ತದೆಂದು ಪ್ರಾಚೀನರ ಮತ. 'ತಜ್ಜನ್ಯತ್ವೇ ಸತಿ ತಜ್ಜನ್ಯಜನಕತ್ವಂ' ವ್ಯಾಪಾರಲಕ್ಷಣ. ಮಂಗಲಜನ್ಯವಾಗಿ, ಮಂಗಲ್ಯಜನ್ಯ ಸಮಾಪ್ತಿಗೆ ಕಾರಣವಾಗುವುದರಿಂದ ವಿಘ್ನಧ್ವಂಸದಲ್ಲಿ ವ್ಯಾಪಾರಲಕ್ಷಣ ಬರುತ್ತದೆ.

**ನವ್ಯಾಸ್ತು—ಮಂಗಲಸ್ಯ ವಿಘ್ನಧ್ವಂಸ ಏವಫಲಂ ಸಮಾಪ್ತಿಸ್ತು ಬುದ್ಧಿಪ್ರತಿಭಾದಿಕಾರಣಕಲಾಪಾತ್ ॥**

ನವೀನರೆಂದರೆ ಮಣಿಗ್ರಂಥಕಾರ ಗಂಗೇಶೋಪಾಧ್ಯಾಯ ಮುಂತಾದವರು. ನವ್ಯಾಃ ಎಂಬುದಕ್ಕೆ 'ಆಹುಃ' ಎಂದು ಮುಂದೆ ಹೇಳುವ ಕ್ರಿಯೆಯಲ್ಲಿ ಅನ್ವಯ. ಇವರು ಸಮಾಪ್ತಿ ಫಲವನ್ನು ಅಂಗೀಕರಿಸುವುದಿಲ್ಲ. ಏವಕಾರದಿಂದ ಸಮಾಪ್ತಿ ವ್ಯವಚ್ಛೇದ ತೋರುತ್ತದೆ. ಮಂಗಲಕ್ಕೆ ಫಲ ಅಂದರೆ ಮಂಗಲಪ್ರವೃತ್ತಿಗೆ ಉದ್ದೇಶ್ಯವಾದದ್ದು ವಿಘ್ನಧ್ವಂಸವೇ. ವಿಘ್ನನಾಶವಾಗಬೇಕೆಂದು ಮಂಗಲಮಾಡುವುದು. ಮಂಗಲಕ್ಕೆ ವಿಘ್ನನಾಶಕ್ಕಿಂತ ಬೇರೆಯಾದ ಫಲವಿಲ್ಲವೆಂದು ನವೀನರ ವಾದ. ಹಾಗಾದರೆ ಸಮಾಪ್ತಿ ಆಗುವುದು ಹೇಗೆ. ? ಅಂದರೆ— 'ಸಮಾಪ್ತಿ'—ಎಂದು ಸಮಾಧಾನ ತೋರಿಸುತ್ತಾನೆ. ಸಮಾಪ್ತಿಯಾದರೋ ಬುದ್ಧಿಪ್ರತಿಭಾದಿಗಳಿಂದ ಆಗುತ್ತದೆ. ಆದಿಪದದಿಂದ ವಿಘ್ನದ ಅತ್ಯಂತಾಭಾವ ಮುಂತಾದವುಗಳನ್ನು ತೆಗೆದುಕೊಳ್ಳಬೇಕು. ಬುದ್ಧಿಃ—ಜ್ಞಾನ. ಪ್ರತಿಭಾ—ಹಿಂದಿನ ಸಂಸ್ಕಾರವಿಶೇಷ. "ಬುದ್ಧಿಸ್ತಾತ್ಕಾಲಿಕೀ ಜ್ಞೇಯಾ, ಮತಿರಾಗಾಮಿಗೋಚರಾ । ಪ್ರಜ್ಞಾ ನವನವೋನ್ಮೇಷಶಾಲಿನೀ ಪ್ರತಿಭಾಮತಾ" ಎಂದು ಭರತವಚನ. ಹೊಸಹೊಸತಾಗಿ ಸ್ಫುರಿಸುವ ಜ್ಞಾನವೇ ಪ್ರತಿಭಾ. ಕೋಷದಲ್ಲಿ ಎಲ್ಲವೂ ಪರ್ಯಾಯವಾಚಕಗಳಾಗಿವೆ. ಹೀಗೆ ಬುದ್ಧ್ಯಾದಿಕಾರಣ ಸಮುದಾಯ

ದಿಂದ ಸಮಾಪ್ತಿಯಾಗುತ್ತದೆ. ಮಂಗಲವು ಇದಕ್ಕೆ ಕಾರಣವಲ್ಲ. ('ಸಮಾಪ್ತಿ ನಿಷ್ಠಕಾರ್ಯತಾ ನಿರೂಪಿತ ಕಾರಣತಾ ಬುದ್ಧ್ಯಾದಿ ಕಲಾಪನಿಷ್ಠಾ, ನ ತು ಮಂಗಲ ನಿಷ್ಠಾ' ಎಂದು ಅವರ ಅಭಿಪ್ರಾಯ.)

**ನ ಚೈವಂ ಸ್ವತಃ ಸಿದ್ಧವಿಘ್ನವಿರಹವತಾ ಕೃತಸ್ಯ ಮಂಗಲಸ್ಯ ನಿಷ್ಫಲತ್ವಾಪತ್ತಿರಿತಿ ವಾಚ್ಯಮ್ । ಇಷ್ಟಾಪತ್ತೇಃ, ವಿಘ್ನಶಂಕಯಾ ತದಾಚರಣಾತ್ । ತಥೈವ ಶಿಷ್ಟಾಚಾರಾತ್ । ನ ಚ ತಸ್ಯ ನಿಷ್ಫಲತ್ವೇ ತದ್ಬೋಧಕವೇದಾಪ್ರಾಮಾಣ್ಯಾಪತ್ತಿರಿತಿ ವಾಚ್ಯಮ್ । ಸತಿ ವಿಘ್ನೇ ತನ್ನಾಶಸ್ಯೈವ ವೇದಬೋಧಿತತ್ವಾತ್ । ಅತ ಏವ ಪಾಪಭ್ರಮೇಣ ಕೃತಸ್ಯ ಪ್ರಾಯಶ್ಚಿತ್ತಸ್ಯ ನಿಷ್ಫಲತ್ವೇಽಪಿ ನ ತದ್ಬೋಧಕವೇದಾಽಪ್ರಾಮಾಣ್ಯಮ್ ॥**

ಇನ್ನೊಂದು ರೀತಿಯಿಂದ ಮಂಗಲವು ವಿಫಲವೆಂದು ಆಶಂಕಿಸುತ್ತಾನೆ. 'ನಚೈವಂ—' ಇತಿ. ಏವಂ—ಈ ರೀತಿ ಮಂಗಲಕ್ಕೆ ಸಾಫಲ್ಯವನ್ನು ಹೇಳಿದರೂ, ಸ್ವತಃ—ತಾ— ಸ್ವಾಭಾವಿಕವಾಗಿ ಯಾವ ವಿಘ್ನವೂ ಇಲ್ಲದಿರುವವನಿಂದ ಮಾಡಿದ ಮಂಗಲಕ್ಕೆ ನಿಷ್ಫಲತ್ವ ಬರಬೇಕಾಗುತ್ತದೆ. ವಿಘ್ನಧ್ವಂಸಕ್ಕೆ ವಿಘ್ನವೇ ಪ್ರತಿಯೋಗಿ. ನಾಶವನ್ನು ಕುರಿತು ಪ್ರತಿಯೋಗಿಯೂ ಕಾರಣ. ಪ್ರತಿಯೋಗಿಯೇ ಇಲ್ಲದಮೇಲೆ ಅದರ ಅಭಾವ ಬರುವುದು ಹೇಗೆ ? ಆದುದರಿಂದ ಅಲ್ಲಿ ಮಂಗಲವಿದ್ದರೂ ವಿಘ್ನಧ್ವಂಸರೂಪ ಕಾರ್ಯವಿಲ್ಲದಿರುವುದರಿಂದ ಮಂಗಳ ವಿಘ್ನಧ್ವಂಸಗಳಿಗೆ ಕಾರ್ಯಕಾರಣಭಾವ ಕೂಡುವುದಿಲ್ಲವೆಂದು ಶಂಕಾಸಾರ. ಇದಕ್ಕೆ ಸಮಾಧಾನ. 'ಇಷ್ಟಾಪತ್ತೇಃ—' ಇತಿ. ವಿಘ್ನವಿಲ್ಲದವನಿಂದ ಮಾಡಿದ ಮಂಗಲವು ನಿಷ್ಫಲವಾಗಲಿ. ಇದರಿಂದ ಯಾವ ದೋಷವೂ ಇಲ್ಲ. ಹಾಗಾದರೆ ನಿಷ್ಫಲವಾದ ಮಂಗಲ ಕಾರ್ಯದಲ್ಲಿ ಯಾವ ವಿಘ್ನವೂ ಇಲ್ಲದ ಶಿಷ್ಟ ಪುರುಷನು ಪ್ರವರ್ತಿಸುವುದು ಹೇಗೆ? ಮೂರ್ಖನೂ ಪ್ರಯೋಜನವಿಲ್ಲದ ಕಾರ್ಯದಲ್ಲಿ ಪ್ರವರ್ತಿಸಲಾರನು, ಅಂದರೆ ಅದಕ್ಕೆ ಸಮಾಧಾನ. 'ವಿಘ್ನಶಂಕ'—ಇತಿ. ವಿಘ್ನವಿದೆಯೆಂಬ ಸಂಶಯದಿಂದ ಆತನು ಮಂಗಲಾಚರಣೆಮಾಡುತ್ತಾನೆ. ಪ್ರವೃತ್ತಿಯನ್ನು ಕುರಿತು ಲೋಕದಲ್ಲಿ ನಿಶ್ಚಯಜ್ಞಾನವೊಂದೇ ಪ್ರಯೋಜಕವಾಗುವುದಿಲ್ಲ. ಸಂಶಯ ನಿಶ್ಚಯಸಾಧಾರಣಜ್ಞಾನವೇ ಪ್ರವರ್ತಕವಾಗುತ್ತದೆ. ಶಿಷ್ಟಪುರುಷನಿಗೆ ವಿಘ್ನದ ಸಂಶಯವಿರುವುದರಿಂದ ವಿಘ್ನಸಂಶಯನಿಶ್ಚಯ ಸಾಧಾರಣಜ್ಞಾನವೇ ಮಂಗಲಪ್ರವರ್ತಕವೆಂದುದರಿಂದ ಮಂಗಲದಲ್ಲಿ ಪ್ರವೃತ್ತನಾಗುತ್ತಾನೆ.

'ತಥೈವ—' ಇತಿ. ಆಸ್ತಿಕರ ಪ್ರವೃತ್ತಿಯೇ ಹೀಗಿರುತ್ತದೆ. ವಿಘ್ನಪ್ರಕಾರಕ ಜ್ಞಾನಮಾತ್ರದಿಂದ ಮಂಗಲಾಚರಣೆ ಮಾಡುತ್ತಾರೆ. ಆ ಜ್ಞಾನವು ನಿಶ್ಚಯಾತ್ಮಕವಾಗಿರಬೇಕೆಂದಿಲ್ಲ. ಸಂಶಯಾತ್ಮಕವಾಗಿದ್ದರೂ ಪ್ರವರ್ತಿಸುತ್ತಾರೆ ವಿಷಯತಾಸಂಬಂಧದಿಂದ ಅವರ ಮಂಗಲಪ್ರವೃತ್ತಿಯು ವಿಘ್ನಶಂಕೆಯಿಂದಲೇ ಎಂದರ್ಥ. ಆಚಾರ—

ಪ್ರವೃತ್ತಿ. 'ಕೂಷ್ಮಾಂಡೈರ್ಜುಹುಯಾತ್ ಯೋಽಪೂತ ಇವ ಮನ್ಯೇತ" ಎಂದು ಶ್ರುತಿ. ಕೂಷ್ಮಾಂಡಹೋಮರೂಪ ಪ್ರಾಯಶ್ಚಿತ್ತ ಇಲ್ಲಿ ಹೇಳಿದೆ. ಇದಕ್ಕೆ ಕಾರಣ (ಪ್ರಯೋಜಕ) ಅಪೂತತ್ವ ಶಂಕಾ. ತಾನು ಅಪವಿತ್ರನೆಂಬ (ಪಾಪೀ) ಶಂಕೆ ಬಂದರೆ ಕೂಷ್ಮಾಂಡಹೋಮ ಮಾಡಲಿ ಎಂದು ಶ್ರುತಿ ಬೋಧಿಸುತ್ತದೆ. ಆಸ್ತಿಕರಿಗೆ ಪಾಪ ಶಂಕೆಯೇ ಕೂಷ್ಮಾಂಡಹೋಮ ಪ್ರವೃತ್ತಿಯಲ್ಲಿ ಹೇಗೆ ಕಾರಣವೋ ಅದರಂತೆ ವಿಘ್ನವಿದೆ ಯೆಂಬ ಶಂಕೆಯೇ ಮಂಗಲಪ್ರವೃತ್ತಿಯಲ್ಲಿ ಕಾರಣವೆಂದು ತಿಳಿಯಬೇಕು. ವಾಸ್ತವವಾಗಿ ವಿಘ್ನವಿಲ್ಲದವನು ವಿಘ್ನವಿದೆಯೆಂಬ ಸಂಶಯದಿಂದ ಮಂಗಲಮಾಡುವುದರಿಂದ ಅಲ್ಲಿ ನಿಷ್ಫಲವಾದರೂ ದೋಷವಿಲ್ಲ. ಮಂಗಲಕ್ಕೆ ವಿಘ್ನಧ್ವಂಸವೇ ಫಲವೆಂದು ಹೇಳುವ ಶ್ರುತಿಗೆ ಅಪ್ರಾಮಾಣ್ಯ ಬರುವುದಿಲ್ಲವೇ? ಅಂದರೆ ಸಮಾಧಾನ—'ನ ಚ—' ಇತಿ. 'ಬಾಧಿತಾರ್ಥ ಬೋಧಕತ್ವಂ ಅಪ್ರಾಮಾಣ್ಯಂ' ವಾಸ್ತವವಿಘ್ನವಿಲ್ಲದವನಲ್ಲಿ ನಿಷ್ಫಲತ್ವ ತೋರಿರುವುದರಿಂದ ವೇದವು ಬಾಧಿತಾರ್ಥಬೋಧಕವಾಗಿ ಅಪ್ರಮಾಣವಾಗುತ್ತದೆ ಎಂದು ಶಂಕೆ ಬರಬಹುದು. ಯದ್ಯಪಿ ಇದಕ್ಕೆ ಪ್ರತ್ಯಕ್ಷ ಶ್ರುತಿಯೇ ಇಲ್ಲ. ಆದರೆ ಮಂಗಲವು ಶಿಷ್ಟಾಚಾರವಿಷಯವಾದುದರಿಂದ ಶ್ರುತಿಯು ಕಲ್ಪಿತವಾಗುತ್ತದೆ. 'ಸಮಾಪ್ತಿ ಕಾಮೋ, ವಿಘ್ನಧ್ವಂಸಕಾಮೋ ವಾ ಮಂಗಲಮಾಚರೇತ್' ಎಂದು ಕಲ್ಪಿತ ಶ್ರುತಿ. ಈಗ ಇದು ಅಪ್ರಮಾಣವಾಗಬೇಕಾಗುತ್ತದೆ. ತಸ್ಯ—ನಿರ್ವಿಘ್ನಪುರುಷನಿಂದ ಅನು ಷ್ಠಾನಮಾಡಿದ ಮಂಗಲಕ್ಕೆ, ನಿಷ್ಫಲತ್ವ ಉಂಟಾದರೆ ಮಂಗಲವಿಘ್ನಧ್ವಂಸಗಳಿಗೆ ಕಾರ್ಯ ಕಾರಣಭಾವಬೋಧಕ ಶ್ರುತಿಗೆ ಅಪ್ರಾಮಾಣ್ಯ ಶಂಕೆ ಮಾಡಬಾರದು.

'ಸತಿವಿಘ್ನೇ'—ಇತಿ. ಮಂಗಲವು ವಿಘ್ನವಿದ್ದಾಗ ಅದರ ನಾಶಜನಕವಾಗುತ್ತ ದೆಂದು ಶ್ರುತಿಯು ಬೋಧಿಸುತ್ತದೆ. ನಾಶವಾಗಬೇಕಾದರೆ ಹಿಂದೆ ಹೇಳಿದಂತೆ ಪ್ರತಿ ಯೋಗಿಯೂ ಒಂದು ಕಾರಣ. ಕಾರಣಕಲಾಪವಿದ್ದರೇ ಕಾರ್ಯ ಆಗುವುದು. ಘಟಕ್ಕೆ ದಂಡಕಾರಣವೆಂದರೆ ಇತರ ಮಣ್ಣು ಮುಂತಾದ ಕಾರಣವಿಲ್ಲದಿರುವಾಗ ದಂಡ ಒಂದಿದ್ದರೆ ಘಟವಾಗುತ್ತದೆಯೇ ? ಆಗ 'ಘಟಕ್ಕೆ ದಂಡವು ಕಾರಣ' ಎಂಬ ವಾಕ್ಯ ಅಪ್ರ ಮಾಣವಾಗಲಿ ಎನ್ನುತ್ತಾರೆಯೇ ? ಇಲ್ಲ. ಮೃತ್ ಮುಂತಾದ ಕಾರಣ ಸಮುದಾಯ ಇರುವಾಗ ದಂಡ ಇಲ್ಲದಿದ್ದರೂ ಘಟವಾಗುವುದಿಲ್ಲ. ದಂಡಕಾರಣವೆಂದರೆ ಇತರ ಕಾರಣ ಕಲಾಪ ಇರುವಾಗ ಇದೊಂದು ಕಾರಣ ಎಂದರ್ಥವಾಗುವಂತೆ ಇಲ್ಲಿ ವಿಘ್ನ ಮುಂತಾದ ಕಾರಣಕಲಾಪ ಇರುವಾಗ ಮಂಗಲವು ಸಮಾಪ್ತಿಗೆ ಕಾರಣವೆಂದು ವೇದತಾತ್ಪರ್ಯ. ಆದುದರಿಂದ ಅಪ್ರಮಾಣವಾಗುವುದಿಲ್ಲ. ಮಂಗಲವಿಧಾಯಕ ಶ್ರುತಿವಾಕ್ಯಾನುಮಾನ ಹೀಗೆ ತಿಳಿಯಬೇಕು. "ಮಂಗಲಂ—ವೇದಬೋಧಿತಕರ್ತವ್ಯತಾಕಂ—ಅಲೌಕಿಕ ಅವಿ ಗೀತ ಶಿಷ್ಟಾಚಾರ ವಿಷಯತ್ವಾತ್ ॥ ದರ್ಶಾದಿ ಶ್ರಾದ್ಧವತ್." ವೇದವು ಬಾಧಿತಾರ್ಥ ಬೋಧಕವಾಗಿಲ್ಲವೆಂಬುದನ್ನೇ ವಿವರಿಸುತ್ತಾನೆ. 'ಅತಏವ'—ಇತಿ. ನಾಶವನ್ನು ಕುರಿತು ಪ್ರತಿಯೋಗಿಯೂ ಕಾರಣವಾದುದರಿಂದ. ಪಾಪಭ್ರಮೇಣ—ಪಾಪವಿಲ್ಲ ದಿದ್ದರೂ 'ಅಹಂ ಪಾಪಃ' ಎಂಬ ಜ್ಞಾನದಿಂದ ಮಾಡಿದ ಪ್ರಾಯಶ್ಚಿತ್ತಕ್ಕೆ ನೈಷ್ಫಲ್ಯ

ಕಂಡರೂ, ಪ್ರಾಯಶ್ಚಿತ್ತಕ್ಕೆ ಪಾಪ ನಾಶಕತ್ವವನ್ನು ಬೋಧಿಸುವ ವೇದಕ್ಕೆ ಅಪ್ರಾಮಾಣ್ಯ ವಿಲ್ಲ. 'ಪ್ರಾಯೋ ನಾಮ ತಪಃ ಪ್ರೋಕ್ತಂ ಚಿತ್ತಂ ನಿಶ್ಚಯ ಉಚ್ಯತೇ । ತಪೋ ನಿಶ್ಚಯಸಂಯೋಗಾತ್ ಪ್ರಾಯಶ್ಚಿತ್ತಂ ತದುಚ್ಯತೇ ।' ತಪೋನಿಶ್ಚಯಕ್ಕೆ ಪ್ರಾಯಶ್ಚಿತ್ತ ವೆಂದು ಹೆಸರು. ಪಾಪನಾಶಕಕ್ಕೋಸ್ಕರ ಮಾಡುವ ಕಠಿಣತಪಸ್ಸು. ಸಂಶಯನಿಶ್ಚಯ ಸಾಧಾರಣ ಪಾಪಜ್ಞಾನವೇ ಪ್ರಾಯಶ್ಚಿತ್ತಕ್ಕೆ ಪ್ರಯೋಜಕವಾಗುವಂತೆ ವಿಘ್ನಸಾಮಾನ್ಯ ಜ್ಞಾನವು ಮಂಗಲಾನುಷ್ಠಾನಕ್ಕೆ ಪ್ರಯೋಜಕವೆಂದು ತಿಳಿಯಬೇಕು.

**ಮಂಗಲಂ ತು ವಿಘ್ನಧ್ವಂಸವಿಶೇಷೇ ಕಾರಣಂ, ವಿಘ್ನಧ್ವಂಸವಿಶೇಷೇ ಚ ವಿನಾಯಕಸ್ತವಪಾಠಾದಿಃ ॥**

ವಿಘ್ನಧ್ವಂಸವು ಮಂಗಲದಿಂದಲೇ ಆಗುತ್ತದೆ ಎಂದರೆ ತಿರುಗಿ ವ್ಯಭಿಚಾರ ಬರುತ್ತದೆ. ವಿನಾಯಕಸ್ತೋತ್ರಪಾಠದಿಂದಲೂ ವಿಘ್ನನಾಶವಾಗುತ್ತದೆ. ಸ್ತೋತ್ರಪಾಠ ಮಂಗಳ ವಲ್ಲ. ಮಂಗಳವು ಜ್ಞಾನರೂಪ. ಪಾಠವು ಕಂಠತಾಲ್ವಾದ್ಯಭಿಘಾತರೂಪ. (ಕ್ರಿಯಾ) ಹೀಗೆ ಪರಸ್ಪರ ಭೇದವಿದೆ. ಮಂಗಲವಿಲ್ಲದಿದ್ದರೂ ವಿನಾಯಕಸ್ತವಪಾಠದಿಂದ ವಿಘ್ನ ಧ್ವಂಸವುಂಟಾಗುವುದರಿಂದ ಹಿಂದೆ ಹೇಳಿದಂತೆ ವ್ಯತಿರೇಕವ್ಯಭಿಚಾರ ಶಂಕೆ ಬಂದರೆ ಅದಕ್ಕೆ ಸಮಾಧಾನ—'ಕ್ವಚಿಚ್ಚ—' ಇತಿ. ವಿಜಾತೀಯ ವಿಘ್ನಧ್ವಂಸಕ್ಕೆ ಮಂಗಲ ಕಾರಣ. ಹಾಗೆಯೇ ವಿಜಾತೀಯ ವಿಘ್ನಧ್ವಂಸಕ್ಕೆ ವಿನಾಯಕಸ್ತವಪಾಠವು ಕಾರಣ. ಆಯಾಯ ಕಾರ್ಯಕಾರಣಗಳೇ ಬೇರೆಯೆಂದು ತಿಳಿಯಬೇಕು. 'ಸ್ವಾವ್ಯವಹಿತೋತ್ತರತ್ವಸಂಬಂಧೇನ ಮಂಗಲವಿಶಿಷ್ಟವಿಘ್ನಧ್ವಂಸಂ ಪ್ರತಿ ಮಂಗಲಂ ಕಾರಣಂ' ಹೀಗೆಯೇ 'ವಿನಾಯಕಸ್ತವ ಪಾಠವಿಶಿಷ್ಟ'—ಎಂದು ಕಾರ್ಯಕಾರಣಭಾವ ಊಹಿಸಿ ತಿಳಿಯಬೇಕು. ಆದಿಪದದಿಂದ ಪ್ರಾಯಶ್ಚಿತ್ತವನ್ನು ತೆಗೆದುಕೊಳ್ಳಬೇಕು. ಪ್ರಾಯಶ್ಚಿತ್ತದಿಂದ ಉಂಟಾಗುವ ವಿಘ್ನ ಧ್ವಂಸವೇ ವಿಜಾತೀಯವಾಮದರಿಂದ ಅಲ್ಲಿಯೂ ದೋಷವಿಲ್ಲ. ಕೆಲವು ಮಂಗಲ ದಿಂದಲೂ ಕೆಲವು ವಿನಾಯಕಸ್ತವಪಾಠದಿಂದಲೂ, ಕೆಲವು ಪ್ರಾಯಶ್ಚಿತ್ತದಿಂದಲೂ ನಾಶ ವಾಗುತ್ತವೆ. ತತ್ತತ್ಕಾರಣವಿಶಿಷ್ಟ ತತ್ತತ್ಕಾರ್ಯಕ್ಕೆ ಆಯಾಯ ಕಾರಣವು ಕಾರಣ ವೆಂದು ಹಿಂದೆ ಹೇಳಿದಂತೆ ತಿಳಿಯಬೇಕು.

**ಕ್ವಚಿಚ್ಚ ವಿಘ್ನಾತ್ಯಂತಾಭಾವ ಏವ ಸಮಾಪ್ತಿಸಾಧನಂ, ಪ್ರತಿಬಂಧಕಸಂಸರ್ಗಾಭಾವಸ್ಯೈವ ಕಾರ್ಯ (ಮಾತ್ರ) ಜನಕತ್ವಾತ್ । ಇತ್ಥಂಚ ನಾಸ್ತಿಕಾದೀನಾಂ ಗ್ರಂಥೇಷು ಜನ್ಮಾಂತರೀಯ ಮಂಗಲಜನ್ಯ ದುರಿತಧ್ವಂಸಃ, ಸ್ವತಃ ಸಿದ್ಧವಿಘ್ನಾತ್ಯಂತಾಭಾವೋ ವಾಸ್ತೀತಿ ನ ವ್ಯಭಿಚಾರ ಇತ್ಯಾಹುಃ**

ಮಂಗಲಕ್ಕೆ ವಿಘ್ನಧ್ವಂಸವೇ ಫಲವಾದರೆ ಸಮಾಪ್ತಿಯನ್ನು ಬಯಸುವವರು

ಮಂಗಳಮಾಡಬೇಕಾಗಿಲ್ಲವೆಂಬ ಶಂಕೆಯನ್ನು ಪರಿಹರಿಸುತ್ತಾನೆ. 'ಕ್ವಚಿಚ್ಚ—' ಇತಿ. ಕೆಲವು ಕಡೆ ವಿಘ್ನದ ಅತ್ಯಂತಾಭಾವವೇ ಸಮಾಪ್ತಿಗೆ ಕಾರಣ. 'ತ್ರೈಕಾಲಿಕ ಸಂಸರ್ಗಾವಚ್ಛಿನ್ನಪ್ರತಿಯೋಗಿತಾಕಾಭಾವಃ ಅತ್ಯಂತಾಭಾವಃ' ಎಂದು ಮುಂದೆ ವಿವರಿಸುತ್ತಾನೆ. 'ಪ್ರತಿಬಂಧಕ—' ಇತಿ. ಕಾರ್ಯಸಾಮಾನ್ಯವನ್ನು ಕುರಿತು ಪ್ರತಿಬಂಧಕಸಂಸರ್ಗಾಭಾವವು ಕಾರಣವೆಂದು ಲೋಕಪ್ರಸಿದ್ಧವಾಗಿದೆ. ವಿಘ್ನಧ್ವಂಸ ಮತ್ತು ವಿಘ್ನಾತ್ಯಂತಾಭಾವ ಇವೆರಡು ಸಂಸರ್ಗಾಭಾವಗಳಾಗುತ್ತವೆ. ಸಂಸರ್ಗಾಭಾವತ್ವೇನ ಕಾರ್ಯಕಾರಣವೆಂದರೆ ಎರಡಕ್ಕೂ ಅನುಗಮ ಹೇಳಿದಂತಾಗುತ್ತದೆ. ಸಂಸರ್ಗಾಭಾವಕಾರಣವೆಂದರೆ ವಾಸ್ತವವಿಘ್ನವಿಲ್ಲದಿರುವಲ್ಲಿಯೂ ಇದು ಬರುವುದರಿಂದ ವ್ಯಭಿಚಾರಕ್ಕೆ ಅವಕಾಶವಿಲ್ಲ. ಸಮಾಪ್ತಿರೂಪಕಾರ್ಯಕ್ಕೆ ವಿಘ್ನಸಂಸರ್ಗಾಭಾವ ಕಾರಣವೆಂದು ನಿಶ್ಚಿತವಾದುದರಿಂದ ಹಿಂದೆ ಹೇಳಿದ ವ್ಯತಿರೇಕವ್ಯಭಿಚಾರ ಬರುವುದಿಲ್ಲವೆಂದು ತೋರಿಸುತ್ತಾನೆ. 'ಇತ್ಥಂ ಚ—' ಇತಿ. ನಾಸ್ತಿಕಾದಿಗಳ ಗ್ರಂಥಗಳಲ್ಲಿ ಪೂರ್ವಜನ್ಮದಲ್ಲಿ ಮಾಡಿದ ಮಂಗಲದಿಂದ ವಿಘ್ನಧ್ವಂಸವಾಗಿ ಅದರಿಂದ ಸಮಾಪ್ತಿ, ಅಥವಾ ವಾಸ್ತವಿಕವಿಘ್ನಗಳ ಅತ್ಯಂತಾಭಾವವಿರುವುದರಿಂದ ಅದರಿಂದ ಸಮಾಪ್ತಿ, ಎಂದು ಅಂಗೀಕರಿಸುವುದರಿಂದ ದೋಷವಿಲ್ಲ. ವಿಘ್ನಧ್ವಂಸ, ವಿಘ್ನಾತ್ಯಂತಾಭಾವ ಎರಡನ್ನೂ ಸಂಸರ್ಗಾಭಾವರೂಪದಿಂದ ಕಾರಣವೆಂದು ಅಂಗೀಕರಿಸಿರುವುದರಿಂದ ಯಾವುದರಿಂದಲಾದರೂ ಕಾರ್ಯೋತ್ಪತ್ತಿ ಸಂಭವಿಸುತ್ತದೆ. ಹೀಗೆ ನವೀನರು ಹೇಳುತ್ತಾರೆ.

ಮಂಗಲ ಸಮಾಪ್ತಿಗಳಿಗೆ ಕಾರ್ಯಕಾರಣಭಾವ ಹೇಳಿದ ಮೇಲೆ ಅವುಗಳಿಗೆ ಸಾಮಾನಾಧಿಕರಣ್ಯವಿರಬೇಕು ಅಂದರೆ ಅವೆರಡೂ ಒಂದೇ ಆಶ್ರಯದಲ್ಲಿರಬೇಕು. ಘಟಕ್ಕೆ ಕುಂಬಾರನು ಕಾರಣನಾದರೆ ಘಟವಿದ್ದಲ್ಲಿ ಕುಂಬಾರನಿರಬೇಕು. ದೇಶಾಂತರದಲ್ಲಿ ಅವನಿದ್ದರೆ ಘಟ ಇಲ್ಲಿ ಆಗಲಾರದು. ಹಾಗೆ ಇಲ್ಲಿ ಇವೆರಡು ಒಂದು ಆಶ್ರಯದಲ್ಲಿ ಬರುವುದು ಹೇಗೆ? ಸಮಾಪ್ತಿಯೆಂದರೆ ಚರಮವರ್ಣರೂಪ ಇದು ವರ್ಣಾತ್ಮಕವಾಗುವುದರಿಂದ ಸ್ವಸಮವಾಯಿಕಾರಣವಾದ ಆಕಾಶದಲ್ಲಿ ಇರುತ್ತದೆ. ಸ್ವಂ—ಶಬ್ದರೂಪವರ್ಣ. ಇದರ ಸಮವಾಯಿಕಾರಣ ಆಕಾಶ. ಅದರಲ್ಲಿದೆ. (ಶಬ್ದಗುಣಕಮಾಕಾಶಂ) ಚರಮವರ್ಣಧ್ವಂಸ ಸಮಾಪ್ತಿ ಎಂದರೂ ಅದೂ ಆಕಾಶದಲ್ಲಿಯೇ ಇರುತ್ತದೆ. ಸ್ವಪ್ರತಿ ಯೋಗಿ ಸಮವಾಯಿಕಾರಣಾಕಾಶನಿಷ್ಠಃ. ಸ್ವಂ — ಚರಮವರ್ಣಧ್ವಂಸಃ. ಅದರ ಪ್ರತಿಯೋಗಿ— ಚರಮವರ್ಣಃ . ಅದರ ಸಮವಾಯಿಕಾರಣವೆಂದರೆ ಆಕಾಶ. ಅದರಲ್ಲಿರುತ್ತದೆ. ಗುರು ಈಶ್ವರಾದಿ ಸ್ಮರಣರೂಪವಾದ ಮಂಗಲವು ಜ್ಞಾನಾತ್ಮಕವಾದುದರಿಂದ ಅದು ಗ್ರಂಥಕರ್ತೃಪುರುಷನಲ್ಲಿರುತ್ತದೆ. ಹೀಗೆ ಕಾರ್ಯಕಾರಣಗಳಾದ ಸಮಾಪ್ತಿ ಮಂಗಲಗಳು ಆಕಾಶಪುರುಷರಲ್ಲಿದ್ದು ವ್ಯಧಿಕರಣಗಳಾದುದರಿಂದ (ಭಿನ್ನಅಧಿಕರಣಗಳಲ್ಲಿರುವುದು—ವ್ಯಧಿಕರಣ.) ಕಾರ್ಯಕಾರಣಭಾವ ಹೊಂದುವುದು ಹೇಗೆ? ಎಂದು ಆಶಂಕೆ ಬರುತ್ತದೆ. ಸಮಾನಾಶ್ರಯವುಳ್ಳವುಗಳಿಗೇ ಲೋಕದಲ್ಲಿ ಕಾರ್ಯಕಾರಣಭಾವ ಕಂಡಿದೆ ಎಂದು ಆಶಂಕಿಸಿದರೆ ಸಾಮಾನಾಧಿಕರಣ್ಯ ಹೇಳಲು ಬರುತ್ತದೆ. 'ಸ್ವಜನಕವಿಘ್ನ

ಧ್ವಂಸೋತ್ಪತ್ತ್ಯವಚ್ಛೇದಕತಾರೂಪಸಂಬಂಧದಿಂದ ಸಮಾಪ್ತಿಗೆ ಅವಚ್ಛೇದಕತಾಸಂಬಂಧ ದಿಂದ ಮಂಗಲವು ಕಾರಣವೆಂದರೆ ಆಗ ಇವೆರಡೂ ಗ್ರಂಥಕರ್ತೃಪುರುಷಶರೀರದಲ್ಲಿ ಬರು ವುದರಿಂದ ಸಮಾನಾಧಿಕರಣಗಳಾಗುತ್ತವೆ. ಸ್ವಶಬ್ದದಿಂದ ಸಮಾಪ್ತಿ ತೆಗೆದುಕೊಂಡರೆ ಸ್ವಜನಕಃ — ವಿಘ್ನಧ್ವಂಸಃ. ವಿಘ್ನಧ್ವಂಸವು ಶರೀರಾವಚ್ಛಿನ್ನ ಆತ್ಮನಲ್ಲಿರುತ್ತದೆ. ಸಮಾಪ್ತಿಜನಕವಿಘ್ನಧ್ವಂಸೋತ್ಪತ್ತಿಗೆ-ಶರೀರವು ಅವಚ್ಛೇದಕ. ಸ್ವಜ....ಚ್ಛೇದಕತಾ ರೂಪಸಂಬಧದಿಂದ ವಿಘ್ನಧ್ವಂಸಕ್ಕೆ ಆಶ್ರಯ ಶರೀರ. ಮಂಗಲವೂ ಜ್ಞಾನಾತ್ಮಕ ವಾದುದರಿಂದ ಶರೀರಾವಚ್ಛಿನ್ನಾತ್ಮನಲ್ಲಿರುತ್ತದೆ. ಅವಚ್ಛೇದಕತಾಸಂಬಂಧದಿಂದ ಶರೀರ ದಲ್ಲಿ ಮಂಗಲವು ಬರುತ್ತದೆ. ಶರೀರಾವಚ್ಛೇದದಿಂದ ಜ್ಞಾನವು ಆತ್ಮನಲ್ಲಿ ಹುಟ್ಟುತ್ತದೆ. "ಸ್ವಜನಕವಿಘ್ನಧ್ವಂಸೋತ್ಪತ್ತ್ಯವಚ್ಛೇದಕತಾ ಸಂಬಂಧೇನ ತಚ್ಛರೀರನಿಷ್ಠಸಮಾಪ್ತಿಂ ಪ್ರತಿ ಅವಚ್ಛೇದಕತಾಸಂಬಂಧೇನ ತಚ್ಛರೀರನಿಷ್ಠಮಂಗಲಂ ಕಾರಣಂ" ಎಂದು ಸಮನಾಧಿಕರಣ್ಯ ಹೇಳಿದರೆ ಎಲ್ಲಿಯೂ ದೋಷ ಬರುವುದಿಲ್ಲ. ಕಾರಣದ ಅಧಿಕರಣ ದಲ್ಲಿ ಕಾರ್ಯವು ಯಾವ ಸಂಬಂಧದಿಂದ ಇರುತ್ತದೆಯೋ ಅದೇ ಕಾರ್ಯತಾವಚ್ಛೇದಕ ಸಂಬಂಧ. ಇಲ್ಲಿ ಸಮಾಪ್ತಿಯಲ್ಲಿರುವ ಕಾರ್ಯತಾವಚ್ಛೇದಕ ಸಂಬಂಧವು ಸ್ವಜನಕ ವಿಘ್ನಧ್ವಂಸೋತ್ಪತ್ತ್ಯವಚ್ಛೇದಕತಾಸಂಬಂಧವಾಗುತ್ತದೆ. ಕಾರ್ಯದ ಅಧಿಕರಣ ದಲ್ಲಿ ಕಾರಣವು ಯಾವಸಂಬಂಧದಿಂದ ಇರುತ್ತದೆಯೋ ಅದು ಕಾರಣತಾವಚ್ಛೇದಕ ಸಂಬಂಧವಾಗುತ್ತದೆ. ಇಲ್ಲಿ ಅವಚ್ಛೇದಕತಾಸಂಬಂಧವೇ ಕಾರಣತಾವಚ್ಛೇದಕ ಸಂಬಂಧ. ದ್ರವ್ಯದಚಾಕ್ಷುಷಪ್ರತ್ಯಕ್ಷಕ್ಕೆ ಉದ್ಭೂತರೂಪ ಕಾರಣ. ವಿಷಯತಾ ಸಂಬಂಧದಿಂದ ಚಾಕ್ಷುಷಪ್ರತ್ಯಕ್ಷವು ( ಕಾರ್ಯ ) ಘಟದಲ್ಲಿದೆ. ಆದುದರಿಂದ ವಿಷಯತಾ ಎಂಬುದೇ ಕಾರ್ಯತಾವಚ್ಛೇದಕಸಂಬಂಧ. ಅದೇ ಘಟದಲ್ಲಿ ಉದ್ಭೂತ ರೂಪವು (ಕಾರಣ) ಸಮವಾಯಸಂಬಂಧದಿಂದ ಇರುವುದರಿಂದ ಸಮವಾಯವು ಕಾರಣತಾವಚ್ಛೇಧಕಸಂಬಂಧವಾಗುತ್ತದೆ· ಹೀಗೆಯೇ ಎಲ್ಲಾ ಕಡೆ ತಿಳಿಯಬೇಕು. ಕೆಲವರು ಅವಚ್ಛೇದಕತಾಸಂಬಂಧದಿಂದ ಸಮಾಪ್ತಿಯನ್ನು ಕುರಿತು ಸ್ವಜನ್ಯವಿಘ್ನ ಧ್ವಂಸಾವಚ್ಛೇದಕತಾಸಂಬಂಧದಿಂದ ಮಂಗಲವು ಕಾರಣವೆನ್ನುತ್ತಾರೆ. ಇಲ್ಲಿಯೂ ಶರೀರಸಾಮಾನಾಧಿಕರಣ್ಯ ಹಿಂದೆ ಹೇಳಿದಂತೆಯೇ ಇದೆ. ಚರಮವರ್ಣ ಅಥವಾ ಚರಮವರ್ಣಧ್ವಂಸರೂಪ ಸಮಾಪ್ತಿಯು ಶರೀರಾವಚ್ಛಿನ್ನಾಕಾಶದಲ್ಲಿದೆ. ಅಲ್ಲಿಯೇ ಮಂಗಲವು 'ಸ್ವಜನ....ದಕತಾ' ಸಂಬಂಧದಿಂದ ಇದೆ. ಸ್ವಂ—ಮಂಗಲಂ. ತಜ್ಜನ್ಯ ವಾದ ವಿಘ್ನಧ್ವಂಸಕ್ಕೆ ಅವಚ್ಛೇದಕ ಶರೀರವೇ. ಅವಚ್ಛೇದಕತಾ ಆ ಶರೀರದಲ್ಲಿದೆ. ಇಲ್ಲಿ ಅವಚ್ಛೇದಕತಾ ಕಾರ್ಯತಾವಚ್ಛೇದಕಸಂಬಂಧ. ಸ್ವಜನ್ಯವಿಘ್ನಧ್ವಂಸಾವಚ್ಛೇದ ಕತಾಸಂಬಂಧವು ಕಾರಣತಾವಚ್ಛೇದಕಸಂಬಂಧವಾಗುತ್ತದೆ.

ಇನ್ನು ಕೆಲವರು ಬೇರೆ ರೀತಿಯಿಂದ ಕಾರ್ಯಕಾರಣಭಾವ ಹೇಳುತ್ತಾರೆ. 'ಸ್ವಪ್ರತಿ-ಯೋಗಿ ಚರಮವರ್ಣಾನುಕೂಲಕೃತಿಮತ್ತ್ವಸಂಬಂಧೇನ ಸಮಾಪ್ತಿಂ ಪ್ರತಿ ಆಶ್ರಯತಾ-ಸಂಬಂಧೇನ ಮಂಗಲಂ ಕಾರಣಮ್" ಸ್ವಪದದಿಂದ ಚರಮವರ್ಣಧ್ವಂಸರೂಪ

ಸಮಾಪ್ತಿಯನ್ನು ತೆಗೆದುಕೊಳ್ಳಬೇಕು. ಚರಮವರ್ಣಧ್ವಂಸವೆಂದರೆ ಅದರ ಪ್ರತಿಯೋಗೀ ಚರಮವರ್ಣ. ಸ್ವಪ್ರತಿಯೋಗಿ ಚರಮವರ್ಣಕ್ಕೆ ನಿಮಿತ್ತಕಾರಣ ಕೃತಿ (ಪ್ರಯತ್ನ). ಇದು ಆತ್ಮನಲ್ಲಿ ಸಮವಾಯ ಸಂಬಂಧದಿಂದ ಇರುತ್ತದೆ. ಅದೇ ಆತ್ಮನಲ್ಲಿ ಮಂಗಲವೂ ಸಮವಾಯದಿಂದ ಇದೆ. ಆದುದರಿಂದ ಸ್ವಪ್ರತಿಯೋಗಿ ಚರಮವರ್ಣಾನುಕೂಲಕೃತಿಮತ್ತ್ವ ಸಂಬಂಧದಿಂದ ಆತ್ಮನಲ್ಲಿರುವ ಸಮಾಪ್ತಿಯನ್ನು ಕುರಿತು ಆಶ್ರಯತಾಸಂಬಂಧದಿಂದ ಅದೇ ಆತ್ಮನಲ್ಲಿರುವ ಮಂಗಲವು ಕಾರಣವಾಗುತ್ತದೆ. ಹಿಂದೆ ಹೇಳಿರುವುದು ಶರೀರಸಾಮಾನಾಧಿಕರಣ್ಯದಿಂದ, ಇದು ಆತ್ಮಸಾಮಾನಾಧಿಕರಣ್ಯದಿಂದ. ನಾಸ್ತಿಕನಲ್ಲಿ ಇದು ಚೆನ್ನಾಗಿ ಕೂಡುತ್ತದೆ. ಹಿಂದಿನಂತೆ ಸ್ವಪ್ರತಿ....ಕೃತಿಮತ್ತ್ವಸಂಬಂಧವು ಕಾರ್ಯತಾವಚ್ಛೇದಕಸಂಬಂಧವೆಂದೂ ಆಶ್ರಯತಾ ಕಾರಣತಾವಚ್ಛೇದಕ ಸಂಬಂಧವೆಂದೂ ತಿಳಿಯಬೇಕು.

ಮಂಗಲಕ್ಕೆ ವಿಘ್ನಧ್ವಂಸವೇ ಫಲವೆನ್ನುವ ನವೀನರಮತದಲ್ಲಿ ಸಮಾಪ್ತಿಯನ್ನು ಕುರಿತು ವಿಘ್ನಧ್ವಂಸಕಾರಣವಷ್ಟೆ. ಆಗ ಸ್ವಪ್ರತಿಯೋಗಿ ಚರಮವರ್ಣಾನುಕೂಲ ಕೃತಿಮತ್ತ್ವಸಂಬಂಧದಿಂದ ಆತ್ಮನಲ್ಲಿರುವ ಸಮಾಪ್ತಿಯನ್ನು ಕುರಿತು ವಿಶೇಷಣತಾ ಸಂಬಂಧದಿಂದ ಆತ್ಮನಲ್ಲಿರುವ ವಿಘ್ನಧ್ವಂಸಕ್ಕೆ ಕಾರಣತ್ವ ಹೇಳಬೇಕು. (ಸ್ವಪ್ರ....ತ್ತ್ವಸಂಬಂಧೇನ ಸಮಾಪ್ತಿಂ ವಿಶೇಷಣತಾ ಪ್ರತಿ ವಿಶೇಷಣತಾ ಸಂಬಂಧೇನ ವಿಘ್ನಧ್ವಂಸಃ ಕಾರಣಂ) ಕಾರಣತಾವಚ್ಛೇದಕ ಸಂಬಂಧವಾಗುತ್ತದೆ. ಧ್ವಂಸ ಅಭಾವವಾದುದರಿಂದ ಅದು ವಿಶೇಷಣತಾ ಸಂಬಂಧದಿಂದ ಆತ್ಮನಲ್ಲಿರುತ್ತದೆ.

**ಸಂಸಾರಮಹೀರುಹಸ್ಯ ಬೀಜಾಯೇತಿ। ಸಂಸಾರ ಏವ ಮಹೀರುಹೋ ವೃಕ್ಷಸ್ತಸ್ಯ ಬೀಜಾಯ ನಿಮಿತ್ತಕಾರಣಾಯೇತ್ಯರ್ಥಃ। ಏತೇನ ಈಶ್ವರೇ ಪ್ರಮಾಣಮಪಿ ದರ್ಶಿತಂ ಭವತಿ। ತಥಾ ಹಿ ಯಥಾ ಘಟಾದಿಕಾರ್ಯಂ ಕರ್ತೃಜನ್ಯಂ ತಥಾ ಕ್ಷಿತ್ಯಂಕುರಾದಿಕಮಪಿ। ನ ಚ ತತ್ಕರ್ತೃತ್ವಮಸ್ಮದಾದೀನಾಂ ಸಂಭವತೀತ್ಯತಸ್ತತ್ಕರ್ತೃತ್ವೇನೇಶ್ವರಸಿದ್ಧಿಃ॥**

ಸಂಸಾರವೆಂಬುದೇ ಒಂದು ಮರ. ಅದರ ಬೀಜ ಅಂದರೆ ನಿಮಿತ್ತಕಾರಣ ಎಂದರ್ಥ. 'ಹೇತುರ್ನಾಕಾರಣಂ ಬೀಜಂ—' ಎಂದು ಅಮರ. ಕಾರಣ ಸಾಮಾನ್ಯದಲ್ಲಿ ಬೀಜಶಬ್ದ ಹೇಳಿದೆ. ಇಲ್ಲಿ ಸಮವಾಯಿಕಾರಣತ್ವವು ಈಶ್ವರನಿಗೆ ಕೂಡುವುದಿಲ್ಲ. ಆದುದರಿಂದ ನಿಮಿತ್ತಕಾರಣ ಎಂದಿದೆ. ವೇದಾಂತಿಗಳು ಅಭಿನ್ನನಿಮಿತ್ತೋಪಾದಾನ ಕಾರಣ ಎನ್ನುತ್ತಾರೆ. ಈಶ್ವರನೊಬ್ಬನಿರುವುದಾದರೆ ಅವನಿಗೆ ನಮಸ್ಕಾರರೂಪ ಮಂಗಲವು ಕೂಡುತ್ತದೆ. ಈಶ್ವರನು ಇದ್ದಾನೆಯೆಂಬುವದರಲ್ಲಿ ಪ್ರಮಾಣವೇ ಇಲ್ಲ. ಈ ವಿಷಯದಲ್ಲಿ ಅನುಮಾನ ಹೀಗೆ ಹೇಳುತ್ತಾರೆ. 'ಈಶ್ವರಃ— ಸ್ವಜನ್ಯಜೀವಭಿನ್ನತ್ವ ಪ್ರಕಾರಕ ಪ್ರಮಾಣವಿಶೇಷ್ಯತಾಸಂಬಂಧೇನ ಪ್ರಮಾಣಸಾಮಾನ್ಯಾಭಾವವಾನ್–

ಪ್ರಮಾಣ ವಿಶೇಷಾಭಾವಕೂಟವತ್ತ್ವಾತ್' ಜೀವನಿಗಿಂತ ಬೇರೆಯಾಗಿ ಈಶ್ವರನಿದ್ದಾನೆ ಯೆಂಬುದರಲ್ಲಿ ಯಾವ ಪ್ರಮಾಣವೂ ಇಲ್ಲ. ಪ್ರಮಾಣ ವಿಶೇಷವೇ ಇದೆಯೆಂದರೆ ಸ್ವರೂಪಾಸಿದ್ಧದೋಷಬರುತ್ತದೆ. ಅದಕ್ಕೋಸ್ಕರ ಅದನ್ನು ಸಾಧಿಸಬೇಕು. 'ಈಶ್ವರಃ— ಪ್ರಮಾಣ ವಿಶೇಷಾಭಾವಕೂಟವಾನ್—ಪ್ರತ್ಯಕ್ಷಾವಿಷಯತ್ವೇಸತಿ, ಅನುಮಿತ್ಯ ವಿಷಯತ್ವೇಸತಿ, ಉಪಮಿತ್ಯವಿಷಯತ್ವೇಸತಿ ಶಾಬ್ದಾವಿಷಯತ್ವಾತ್' ಇಲ್ಲಿಯೂ ಪ್ರತ್ಯಕ್ಷಾವಿಷಯತ್ವಗಳಿಲ್ಲವೆಂದರೆ ಸ್ವರೂಪಾಸಿದ್ಧಿದೋಷ ಬರುವುದರಿಂದ ಅವುಗಳನ್ನು ಸಾಧಿಸಬೇಕು. 'ಈಶ್ವರಃ—ಪ್ರತ್ಯಕ್ಷಾವಿಷಯಃ—ಅರೂಪಿದ್ರವ್ಯತ್ವಾತ್ ॥ ಅನುಮಿತ್ಯ ವಿಷಯಃ—ಲಿಂಗಾಭಾವಾತ್ ॥ ಉಪಮಿತ್ಯವಿಷಯಃ—ಸಾದೃಶ್ಯಜ್ಞಾನಾಭಾವಾತ್॥ ಶಾಬ್ದಾವಿಷಯಃ—ಶಬ್ದಪ್ರಮಾಣಾಭಾವಾತ್ ॥ ಹೀಗೆ ಯಾವ ಪ್ರಮಾಣಕ್ಕೂ ವಿಷಯವಾಗದಿರುವುದರಿಂದ ಈಶ್ವರನೇ ಇಲ್ಲವೆಂಬ ಶಂಕೆ ಬಂದರೆ ಅದಕ್ಕೆ ಸಮಾಧಾನ 'ಏತೇನ—'ಇತಿ. ಸಂಸಾರವೃಕ್ಷಕ್ಕೆ ಬೀಜ—ನಿಮಿತ್ತಕಾರಣನೆಂದುದರಿಂದ ಈಶ್ವರನಿದ್ದಾ ನೆಂಬುದರಲ್ಲಿ ಅನುಮಾನರೂಪ ಪ್ರಮಾಣ ತೋರಿಸದಂತಾಗುತ್ತದೆ.

'ತಥಾಹಿ' ಎಂಬುದರಿಂದ ಕಾರ್ಯಕಾರಣಗಳ ವ್ಯಾಪ್ತಿ (ನಿತ್ಯಸಂಬಂಧ)ಯನ್ನು ದೃಷ್ಟಾಂತಮೂಲಕವಾಗಿ ತೋರಿಸುತ್ತಾನೆ. 'ಯತ್ಕಾರ್ಯಂ ತತ್ಕರ್ತೃಜನ್ಯಂ' ಕಾರ್ಯ—ಜನ್ಯವು ಯಾವುದೋ ಅದು ಒಂದು ಕರ್ತೃವಿನಿಂದ ಹುಟ್ಟಿರುತ್ತದೆ. ಇದು ಸಾಮಾನ್ಯವ್ಯಾಪ್ತಿ. ಘಟಾದಿಗಳು ಕಾರ್ಯವಾದುದರಿಂದ ಕುಂಬಾರರೂಪಕರ್ತೃವಿನಿಂದ ಉಂಟಾಗಿವೆ. ಅನುಮಾನಾಕಾರ—ಕ್ಷಿತ್ಯಂಕುರಾದಿಕಂ-ಕರ್ತೃಜನ್ಯಂ-ಕಾರ್ಯತ್ವಾತ್ । ಘಟವತ್ । ಸಾಧ್ಯಸಂದೇಹವುಳ್ಳದ್ದು ಪಕ್ಷವಾದುದರಿಂದ ಕ್ಷಿತ್ಯಾದಿಗಳು ಪಕ್ಷ. ಸಂದಿಗ್ಧ ವಾದದ್ದು (ಸಂದೇಹ ವಿಷಯ) ಸಾಧ್ಯ. ಪ್ರಕೃತ ಕರ್ತೃಜನ್ಯತ್ವ ಸಾಧ್ಯ. ಸಾಧ್ಯ ಸಾಧನೆಗೆ ಹೇಳುವುದು ಹೇತು. ಇಲ್ಲಿ ಕಾರ್ಯತ್ವವೇ ಹೇತು. ಎಲ್ಲಿ ಸಾಧ್ಯದ ನಿಶ್ಚಯ ವಿರುತ್ತದೆಯೋ ಅದು ದೃಷ್ಟಾಂತ. (ಸಪಕ್ಷ) ಘಟಾದಿಗಳು ದೃಷ್ಟಾಂತ. ಜಡ ವಾದದ್ದು ಚೇತನನೊಬ್ಬನು ಪ್ರೇರಕನಿಲ್ಲದೆ ಕಾರ್ಯಮಾಡುವುದು ಲೋಕದಲ್ಲಿ ದೃಷ್ಟ ವಾಗಿಲ್ಲ. ಕೇವಲ ಮಣ್ಣು ಕುಂಬಾರನಿಲ್ಲದೆ ಘಟವಾಗಲಾರದು. ಪ್ರತ್ಯಕ್ಷಕ್ಕೆ ಗೋಚರವಾಗುವ ಘಟಾದಿಗಳಿಗೆ ಕುಂಬಾರ ಮುಂತಾದ ಕಾರಣವಿದ್ದಂತೆ ಕ್ಷಿತ್ಯಾದಿಗಳಿಗೂ ಈಶ್ವರರೂಪ ಕಾರಣನಿದ್ದಾನೆಂದು ತಿಳಿಯಬೇಕು. ಪ್ರತ್ಯಕ್ಷಕ್ಕೆ ಗೋಚರವಾಗದ ಪರಮಾಣ್ವಾದಿ ಉಪಾದಾನಗಳು ಈಶ್ವರಾಧಿಷ್ಠಿತವಾಗಿ ಜಗದ್ರೂಪವನ್ನು ಹೊಂದುತ್ತವೆ. ನಿತ್ಯಕ್ಷಿತಿವಾರಣೆಗೋಸ್ಕರ ಅಂಕುರಪದಕೊಟ್ಟಿದೆ. ಆದಿ ಪದದಿಂದ ಪ್ರತ್ಯಕ್ಷಕ್ಕೆ ಗೋಚರ ವಾಗದಿರುವ ದ್ವ್ಯಣುಕಾದಿಗಳನ್ನು ತೆಗೆದುಕೊಳ್ಳಬೇಕು. ಕ್ಷಿತಿ ಎಂದರೆ ಭೂಮಿಯಲ್ಲ. ಕಾರ್ಯಸಾಮಾನ್ಯತೆಗೆದುಕೊಳ್ಳಬೇಕು. ಸ್ವರೂಪ ಸಂಬಂಧರೂಪಕಾರ್ಯತ್ವವೇ ಪಕ್ಷತಾವಚ್ಛೇದಕ. ಪ್ರಾಗಭಾವಪ್ರತಿಯೋಗಿತ್ವ ರೂಪಕಾರ್ಯತ್ವ ಹೇತುವಾದುದರಿಂದ ಪಕ್ಷತಾವಚ್ಛೇದಕಹೇತ್ವೈಕ್ಯದೋಷಕ್ಕೆ ಅವಕಾಶವಿಲ್ಲ. ಕ್ಷಿತ್ಯಾದಿಕರ್ತೃತ್ವವು ಜೀವನಿಗೆ ಸಂಭವಿಸುವುದಿಲ್ಲ. ಇದನ್ನೇ 'ನಚ—' ವಾಕ್ಯದಿಂದ ವಿವರಿಸುತ್ತಾನೆ. ನಾವು

ಅಲ್ಪಜ್ಞರೂ, ಅಲ್ಪಶಕ್ತಿಯುಳ್ಳವರೂ ಆದುದರಿಂದ ಕ್ಷಿತ್ಯಾದಿಕರ್ತೃತ್ವ ಕೂಡುವುದಿಲ್ಲ. ಆದರೆ ಘಟಾದಿಗಳಂತೆ ಕ್ಷಿತ್ಯಾದಿಕಾರ್ಯ ತೋರಿದೆ. ಕರ್ತೃವಿಲ್ಲದೇ ಕಾರ್ಯವಿಲ್ಲ. 'ಕರ್ತೃಜನ್ಯತ್ವವ್ಯಾಪ್ಯಕಾರ್ಯತ್ವವತೀ ಪೃಥಿವೀ.' ಎಂಬ ಪರಾಮರ್ಶದಿಂದ ಕಾರಣವಾದ ಒಂದು ಕೃತಿಯು ಸಿದ್ಧವಾಗುತ್ತದೆ. 'ಸೇತ್ಸ್ಯಮಾನಾಯಾಃ ಕೃತೇಃ ನಿತ್ಯತ್ವೇ ಏಕತ್ವೇ ಲಾಘವಂ' ಎಂಬ ಲಾಘವಜ್ಞಾನಸಹಕೃತಪರಾಮರ್ಶದಿಂದ ಆ ಕೃತಿಯು ಸಿದ್ಧವಾಗುವಾಗ ಅದು ನಿತ್ಯವಾಗಿಯೂ ಒಂದೇ ಎಂದು ಸಿದ್ಧವಾಗುತ್ತದೆ. 'ತಾದೃಶೀ ಕೃತಿಃ—ಕಿಂಚಿದಾಶ್ರಿತಾ–ಗುಣತ್ವಾತ್ । ರೂಪವತ್ ।' ಈ ಅನುಮಾನದಿಂದ ಸಿದ್ಧವಾಗುವ ಪರಾಮರ್ಶವೂ ಲಾಘವಜ್ಞಾನ ಸಹಕೃತವಾಗಿಯೇ ಬರುತ್ತದೆ. 'ಸೇತ್ಸ್ಯಮಾನಸ್ಯ ದ್ರವ್ಯಸ್ಯ ನಿತ್ಯತ್ವೇ ಏಕತ್ವೇ ಜಾತಿತ್ವೇ ಲಾಘವಂ' ಕೃತ್ಯಾಶ್ರಯವಾಗಿ ಸಿದ್ಧಿಸುವ ದ್ರವ್ಯವು ನಿತ್ಯವಾಗಿಯೂ ಏಕವಾಗಿಯೂ, ಇರುತ್ತದೆ ಎಂದರ್ಥ. 'ಕಿಂಚಿದ್ದ್ರವ್ಯಾಶ್ರಿತತ್ವವ್ಯಾಪ್ಯ ಗುಣತ್ವವತೀ ಕೃತಿಃ' ಎಂದು ಇಲ್ಲಿ ಪರಾಮರ್ಶ. ಇದರಿಂದ ನಿತ್ಯ ಏಕ ಈಶ್ವರರೂಪ ದ್ರವ್ಯವಿಷಯಕ ಅನುಮಿತಿಯು ಹುಟ್ಟುತ್ತದೆ. ನಿತ್ಯಕೃತ್ಯಾಶ್ರಯದ್ರವ್ಯವಾದುದರಿಂದಲೇ ಅದು ಜೀವನಾಗುವುದಿಲ್ಲ.

**ನಚ ಶರೀರಾಜನ್ಯತ್ವೇನ ಕರ್ತ್ರಜನ್ಯತ್ವಸಾಧಕೇನ ಸತ್ಪ್ರತಿಪಕ್ಷ ಇತಿ ವಾಚ್ಯಮ್ । ಅಪ್ರಯೋಜಕತ್ವಾತ್ । ಮಮತು ಕರ್ತೃತ್ವೇನ ಕಾರ್ಯತ್ವೇನ ಕಾರ್ಯಕಾರಣಭಾವ ಏವ ಅನುಕೂಲಸ್ತರ್ಕಃ । "ದ್ಯಾವಾಭೂಮೀ ಜನಯನ್ ದೇವ ಏಕಃ" 'ವಿಶ್ವಸ್ಯ ಕರ್ತಾ ಭುವನಸ್ಯ ಗೋಪ್ತಾ' ಇತ್ಯಾದಯ ಆಗಮಾ ಅಪ್ಯನುಸಂಧೇಯಾಃ ॥ ೧ ॥**

ಕಾರ್ಯತ್ವಹೇತುವಿಗೆ ಸತ್ಪ್ರತಿಪಕ್ಷತ್ವವನ್ನು ಆಶಂಕಿಸುತ್ತಾನೆ. 'ನಚ—' ಇತಿ. ಸಾಧ್ಯಾಭಾವಸಾಧಕಹೇತ್ವಂತರವುಳ್ಳದ್ದು ಸತ್ಪ್ರತಿಪಕ್ಷಹೇತ್ವಾಭಾಸವಾಗುತ್ತದೆ. ಕ್ಷಿತ್ಯಂಕುರಾದಿಕಂ–ಕರ್ತೃಜನ್ಯಂ–ಕಾರ್ಯತ್ವಾತ್ ಎಂದು ಅನುಮಾನ ಹೇಳಿದರೆ ಇಲ್ಲಿ ಕಾರ್ಯತ್ವಹೇತುವಿಗೆ ಸಾಧ್ಯಾಭಾವಸಾಧಕಹೇತ್ವಂತರವುಳ್ಳ ಅನುಮಾನ ಹೇಳುತ್ತಾರೆ. 'ಕ್ಷಿತ್ಯಂಕುರಾದಿಕಂ–ಕರ್ತ್ರಜನ್ಯಂ–ಶರೀರಾಜನ್ಯತ್ವಾತ್ । ಆಕಾಶವತ್ ॥' ಎಂದು ಶರೀರಾಜನ್ಯತ್ವರೂಪಹೇತುವಿನಿಂದ ಸಾಧ್ಯಾಭಾವ ಅಂದರೆ ಕರ್ತೃಅಜನ್ಯತ್ವವನ್ನು ಸಾಧಿಸುತ್ತಾರೆ. ಆಗ ಕಾರ್ಯತ್ವಹೇತುವು ಸತ್ಪ್ರತಿಪಕ್ಷತವಾಗುವುದರಿಂದ ಸಾಧ್ಯಸಾಧನಸಾಮರ್ಥ್ಯಶೂನ್ಯವಾಗುತ್ತದೆ. ಅದರಿಂದ 'ಕ್ಷಿತ್ಯಂಕುರಾದಿಕಂ ಕರ್ತೃಜನ್ಯಂ' ಎಂದು ಅನುಮಿತಿ ಬರಲಾರದು. ಕ್ಷಿತ್ಯಾದಿಗಳಲ್ಲಿ ಕಾರ್ಯತ್ವವಿರುವಂತೆ ಸಾಧ್ಯಾಭಾವ ಸಾಧಕಹೇತುವೂ ಇರುವುದಾದರೆ ಸಾಧ್ಯಸಾಧನ ಹೇಗಾಗುತ್ತದೆ ? ಕರ್ತ್ರಜನ್ಯತ್ವ ರೂಪಸಾಧ್ಯ ( ಪ್ರಕೃತಸಾಧ್ಯದ ಅಭಾವ ) ಸಾಧಕವಾದ ಹೇತು—ಶರೀರಾಜನ್ಯತ್ವ. ಕರ್ತೃಜನ್ಯವೆಂದರೆ ಒಂದು ಶರೀರದಿಂದ ಹುಟ್ಟಿರಬೇಕು. ಕ್ಷಿತ್ಯಾದಿಗಳು ಶರೀರದಿಂದ

ಹುಟ್ಟಿದಿಸುವುದರಿಂದ ಕರ್ತೃಜನ್ಯಗಳೂ ಆಗುವುದಿಲ್ಲವೆಂದು ಸತ್ಪ್ರತಿಪಕ್ಷ ಹೇಳುವವನ ತಾತ್ಪರ್ಯ. ಕರ್ತೃಜನ್ಯವಾದವುಗಳೆಲ್ಲಾ ಶರೀರವುಳ್ಳವುಗಳಿಂದಲೇ ಎಂದು ಹೇಗೆ ವಾದಿಸುವುದು. ಇದನ್ನು 'ಅಪ್ರಯೋಜಕತ್ವಾತ್' ಎಂಬುದರಿಂದ ಖಂಡಿಸುತ್ತಾನೆ. ಹೇತುವಿಗೆ ವ್ಯಭಿಚಾರಶಂಕಾ ಮಾಡಿದರೆ ಅನುಕೂಲತರ್ಕವಿಲ್ಲದಿರುವುದರಿಂದ ಎಂದರ್ಥ. ಶರೀರಾಜನ್ಯತ್ವಹೇತುವಿನಿಂದ ನಾಸ್ತಿಕನು ಕರ್ತೃಜನ್ಯತ್ವವನ್ನು ಸಾಧಿಸಿರುತ್ತಾನೆ. ಆಗ ಅವನ ಅನುಮಾನದಲ್ಲಿ ವ್ಯಭಿಚಾರಶಂಕಾ ಮಾಡಿದರೆ ಅದನ್ನು ಹೋಗಲಾಡಿಸಲು ಯಾವುದಾದರೊಂದು ಅನುಕೂಲತರ್ಕ ಹೇಳಬೇಕು. ಅದೇ ಇಲ್ಲ. 'ಹೇತುಸ್ತಿಷ್ಠತು ಸಾಧ್ಯಂಮಾಸ್ತು' ಎಂದು ಆಶಂಕಿಸುವುದೇ ವ್ಯಭಿಚಾರಶಂಕಾ. ಕ್ಷಿತ್ಯಂಕುರಾದಿಗಳಲ್ಲಿ ಶರೀರಾಜನ್ಯತ್ವ ಹೇತುವಿರಲಿ ಕರ್ತೃಜನ್ಯತ್ವ ಸಾಧ್ಯವು ಇರಲಾರದೆಂದು ಆಶಂಕಿಸಿದರೆ ಆಗ ಇದನ್ನು ಹೋಗಲಾಡಿಸಲು ಯಾವ ತರ್ಕವೂ ಇಲ್ಲ. ಕಾರ್ಯಕಾರಣಭಂಗ ಬರುತ್ತದೆಂದು ಸಾಧಾರಣವಾಗಿ ಅನುಕೂಲತರ್ಕ ಹೇಳಬೇಕು. ಕರ್ತೃಜನ್ಯತ್ವ ಇಲ್ಲದೇ ಹೋದರೆ ಶರೀರಾಜನ್ಯತ್ವವೂ ಇಲ್ಲದೇ ಹೋಗಬೇಕಾಗುತ್ತದೆ ಎಂದು ತರ್ಕ ಹೇಳಬೇಕು. ಆದರೆ ಕರ್ತೃಜನ್ಯತ್ವ, ಶರೀರಾಜನ್ಯತ್ವಗಳಿಗೆ ಕಾರ್ಯಕಾರಣಭಾವವು ಲೋಕದಲ್ಲಿ ದೃಷ್ಟವಾಗಿದ್ದರೆ ಹೇಳಬಹುದಿತ್ತು. ಹಾಗೆ ಕಾರ್ಯಕಾರಣ ಪ್ರಸಿದ್ಧವಾಗಿದ್ದರೆ 'ಕಾರ್ಯಕಾರಣಭಾವಭಂಗ ಪ್ರಸಂಗಃ' ಎಂದು ತರ್ಕ ಹೇಳಲು ಸಾಧ್ಯ. ಆಕಾಶದಲ್ಲಿ ಶರೀರಾಜನ್ಯತ್ವವಿರುವುದರಿಂದ ಕರ್ತೃಜನ್ಯತ್ವವಿದೆಯೆಂದು ನಾಸ್ತಿಕನಮತ. ಆದರೆ ಆಕಾಶದಲ್ಲಿ ಕರ್ತೃಜನ್ಯತ್ವ ಮತ್ತು ಅಜನ್ಯತ್ವಗಳಿಗೆ ವ್ಯಾಪ್ತಿ ತೋರಿದೆಯೇ ವಿನಾ ಕರ್ತೃಜನ್ಯತ್ವ, ಶರೀರಾಜನ್ಯತ್ವಗಳಿಗೆ ವ್ಯಾಪ್ತಿ ತೋರಲಿಲ್ಲ. ಆಕಾಶವು ಅಜನ್ಯವಾದುದರಿಂದ ಕರ್ತೃಜನ್ಯವೆಂದು ಹೇಳಬಹುದು. ನಾಸ್ತಿಕನು ಕೇವಲ ಅಜನ್ಯವೆಂದುಹೇಳದೆ ಶರೀರಾಜನ್ಯವೆಂದು ಹೇಳಿರುತ್ತಾನೆ. ಅಜನ್ಯತ್ವ ಹೇತುವಿಗೆ ಶರೀರವೆಂಬ ವಿಶೇಷಣ ವ್ಯರ್ಥವೇ. ಆದುದರಿಂದ ನಾಸ್ತಿಕನ ಅನುಮಾನವು ದೋಷಯುಕ್ತವೇ ಆಗಿದೆ ಈಶ್ವರವಾದಿಯ ಅನುಮಾನದಲ್ಲಿ (ಕರ್ತೃಜನ್ಯಂ–ಕಾರ್ಯತ್ವಾತ್) ಅಪ್ರಯೋಜಕತ್ವ ಶಂಕೆಗೆ ಅವಕಾಶವಿಲ್ಲವೇ ? ಅಂದರೆ ಅಲ್ಲಿ ವ್ಯಭಿಚಾರಶಂಕೆ ಮಾಡಿದರೆ ಅನುಕೂಲತರ್ಕವಿದೆ. 'ಯದಿ ಕರ್ತೃಜನ್ಯಂನ ಸ್ಯಾತ್, ಕಾರ್ಯತ್ವಮಪಿ ನ ಸ್ಯಾತ್ । ಕರ್ತೃವಿನಿಂದ ಹುಟ್ಟದಿದ್ದರೆ ಕಾರ್ಯವೇ ಆಗಲಾರದು ಎಂದು ಕಾರ್ಯಕಾರಣಭಂಗ ಆಪಾದನಾರೂಪತರ್ಕ ಹೇಳಲು ಬರುತ್ತದೆ. ಘಟಪಟಾದಿಗಳಲ್ಲಿ ಕರ್ತೃಜನ್ಯತ್ವಕಾರ್ಯತ್ವಗಳಿಗೆ ಪರಸ್ಪರ ಕಾರ್ಯಕಾರಣಭಾವಗಳು ಲೋಕಪ್ರಸಿದ್ಧವಾಗಿವೆ. ಕಾರ್ಯವಾದುದರಿಂದ ಯಾವುದೋ ಕರ್ತೃವಿನಿಂದ ಆಗಿದೆಯೆಂದು ಎಲ್ಲರೂ ತಿಳಿಯುತ್ತಾರೆ. ಘಟವು ಕುಂಬಾರನಿಂದ, ಪಟವು ನೇಯ್ಗೆಯವನಿಂದ ಆಗಿದೆ ಎಂದು ಬಾಲಕನೂ ತಿಳಿದಿರುತ್ತಾನೆ.

ಎಲ್ಲಿಯಾದರೂ ಅನುಮಾನ ಹೇಳಿದಲ್ಲಿ ಅಲ್ಲಿ ವ್ಯಭಿಚಾರಶಂಕಾ ಮಾಡಿದರೆ ಆಗ ಕಾರ್ಯಕಾರಣಭಂಗರೂಪ ಅನುಕೂಲತರ್ಕ ಹೇಳಬೇಕು. 'ಹೇತುಸ್ತಿಷ್ಠತು ಸಾಧ್ಯಂಮಾಸ್ತು' ಎಂದರೆ ಆ ಹೇತುವಿನಿಂದ ಸಾಧ್ಯಸಾಧನಮಾಡಲು ಶಕ್ಯವಿಲ್ಲವೆಂದಾಗುತ್ತದೆ.

ಸಾಧ್ಯವಿಲ್ಲದಿರುವಲ್ಲಿ ಹೇತುವಿದೆಯೆಂದು ಹೇಳಿದರೆ ವ್ಯಭಿಚಾರದೋಷ ಹೇಳಿದಂತಾಗುತ್ತದೆ. ಆಗ ಅವುಗಳಿಗೆ ಕಾರ್ಯಕಾರಣಭಾವ ಹೇಳಿದರೆ ಕಾರಣವಿಲ್ಲದೇ ಕಾರ್ಯವಿದೆಯೆಂದು ಪೂರ್ವಪಕ್ಷಿಯು ಆಪಾದಿಸುವುದು ಹೇಗೆ ? । ಧೂಮುಸ್ತ್ರಿಸ್ಥತುವಹ್ನಿರ್ವಾಸ್ತು ಎಂದರೆ ವಹ್ನಿ ಇಲ್ಲದಿರುವಲ್ಲಿ ಧೂಮವಿದೆಯೆಂದಾಗುತ್ತದೆ. ಆಗ ವಹ್ನಿ ಇಲ್ಲದಿದ್ದರೆ ಧೂಮವೂ ಇರಲಾರದು ಎಂದು ತರ್ಕ ಹೇಳಬೇಕು. ಧೂಮವು ವಹ್ನಿಜನ್ಯವಷ್ಟೇ. ಪ್ರಕೃತ ಈಶ್ವರವಾದಿಯ ಅನುಮಾನದಲ್ಲಿ ನಾಸ್ತಿಕನು ಸತ್ಪ್ರತಿಪಕ್ಷ ಹೇಳಿರುವುದು ಸರಿಯಲ್ಲವೆಂದು ಸಿದ್ಧಾಂತ. ನಾಸ್ತಿಕಾನುಮಾನದಲ್ಲಿ ವ್ಯಭಿಚಾರದೋಷವಿರುವುದರಿಂದ ಅದು ದುಷ್ಟವಾಗುತ್ತದೆ. ಹೇತುವು ಅನುಕೂಲತರ್ಕದಿಂದ ಬಲಯುತವಾಗಿರಬೇಕು. ಅದು ನಾಸ್ತಿಕನಹೇತುವಿನಲ್ಲಿ ಇಲ್ಲ. ಹೀಗೆ ಅನುಮಾನಪ್ರಮಾಣದಿಂದ ಈಶ್ವರನು ಸಿದ್ಧವಾದ ಮೇಲೆ ಅವನಿಂದ ಉಕ್ತವಾದ ವೇದವೂ ಸಹ ಪ್ರಮಾಣವಾಗುತ್ತದೆ. ಆದಿ ಪದದಿಂದ 'ಯಃ ಸರ್ವಜ್ಞಃ ಸರ್ವವಿತ್—' 'ತದೈಕ್ಷತ ಬಹುಸ್ಯಾಂ ಪ್ರಜಾಯೇಯ— ಇತ್ಯಾದಿ ಶ್ರುತಿಗಳನ್ನು ಊಹಿಸಿ ತಿಳಿಯಬೇಕು.

**ವಿಶ್ವತಶ್ಚಕ್ಷುರುತ ವಿಶ್ವತೋ ಮುಖೋ ವಿಶ್ವತೋ ಬಾಹುರುತ ವಿಶ್ವತಸ್ಪಾತ್ ॥ ಸಂಬಾಹುಭ್ಯಾಂ ಧಮತಿ ಸಂಪತತ್ರೈರ್ದ್ಯಾವಾಭೂಮೀ ಜನಯನ್ ದೇವ ಏಕಃ ॥**

ಇಲ್ಲಿ ವಿಶ್ವತಶ್ಚಕ್ಷು ಎಂದದ್ದರಿಂದ ಸರ್ವಜ್ಞತ್ವವೂ, ವಿಶ್ವತೋಮುಖವೆಂದುದರಿಂದ ಸರ್ವವಕ್ತೃತ್ವವೂ, ವಿಶ್ವತೋಬಾಹುವೆಂದುದರಿಂದ ಸರ್ವಸಹಕಾರಿತ್ವವೂ, ವಿಶ್ವತಸ್ಪಾತ್ ಪದದಿಂದ ವ್ಯಾಪಕತ್ವವೂ, ಸಂಬಾಹುಭ್ಯಾಂ—ಇತ್ಯಾದಿಗಳಿಂದ ಪರಮಾಣುಪ್ರಧಾನಾಧಿಷ್ಠೇಯತ್ವವೂ ಈಶ್ವರನಿಗೆ ಪ್ರತಿಪಾದಿತವಾಗಿವೆ. ಮೊದಲನೆಯ ಸಂ ಎಂಬುದಕ್ಕೆ ಧಮತಿ ಎಂಬಲ್ಲಿಯೂ ಎರಡನೆಯ (ಸಂಪತತ್ರೈಃ) ಸಂ ಎಂಬುದಕ್ಕೆ ಜನಯನ್ ಎಂಬಲ್ಲಿ ಅನ್ವಯ. ಪರಮಾಣುಗಳು ಗತಿಶೀಲಗಳಾದುದರಿಂದ ಪತತ್ರವೆನಿಸುತ್ತವೆ. ಏಕ ಅಂದರೆ ಅನಾದಿ ಎಂದರ್ಥ. ಈಶ್ವರನು ಸರ್ವಪ್ರಾಣ್ಯಾತ್ಮಕನಾದುದರಿಂದ ಪ್ರಾಣಿಗಳ ಚಕ್ಷುರಾದ್ಯುಪಾಧಿಗಳಿಂದ ಈಶ್ವರನೇ ಇರುವುದರಿಂದ ಸರ್ವಚಕ್ಷು ಇತ್ಯಾದಿ ಪದಗಳು ಈಶ್ವರನಲ್ಲಿ ಸಮಂಜಸವಾಗಿವೆ.

ಶಾಸ್ತ್ರಪ್ರವೃತ್ತಿ ಮೂರು ವಿಧವಾಗಿದೆ. ಉದ್ದೇಶ, ಲಕ್ಷಣ, ಪರೀಕ್ಷಾ. ''ನಾಮಮಾತ್ರೇಣ ವಸ್ತು ಸಂಕೀರ್ತನಂ'' ಉದ್ದೇಶಃ ದ್ರವ್ಯಂ ಗುಣಃ–ಇತ್ಯಾದಿ ಪದಾರ್ಥಗಳ ಹೆಸರನ್ನು ಮುಂದೆ ಹೇಳುವುದರಿಂದ ಉದ್ದೇಶ ಹೇಳಿದಂತಾಯಿತು. ಅಸಾಧಾರಣ ಧರ್ಮ ಹೇಳುವುದು ಲಕ್ಷಣ. 'ಗಂಧವತ್ವಂ ಪೃಥಿವ್ಯಾಃ ಲಕ್ಷಣಂ' ಎಂದು ಮುಂದೆ ಹೇಳುತ್ತಾನೆ. 'ಲಕ್ಷಿತಸ್ಯ ಲಕ್ಷಣಂ ಸಂಭವತಿ ವಾ ನವಾ' ಎಂಬ ವಿಚಾರಕ್ಕೆ ಪರೀಕ್ಷಾ ಎಂದು ಹೆಸರು. ಲಕ್ಷಣ ಹೇಳಿ ಅವ್ಯಾಪ್ತ್ಯತಿವ್ಯಾಪ್ತಿದೋಷಗಳನ್ನಾಶಂಕಿಸಿ ಪರಿಹಾರ

ಮಾಡುವುದರಿಂದ ಪರೀಕ್ಷೆಯೂ ಇಲ್ಲಿ ಇರುವುದರಿಂದ ಈ ಶಾಸ್ತ್ರಗ್ರಂಥವು ಉಪಾದೇಯ ಅಂದರೆ ಎಲ್ಲರಿಂದಲೂ ಆದರಿಸಲು ಯೋಗ್ಯವಾಗಿದೆ.

ಹೀಗೆ ಈಶ್ವರವಾದ ಮುಗಿದಿದೆ.

**ಪದಾರ್ಥಾನ್ ವಿಭಜತೇ ।**

**(ಕಾರಿ–) ದ್ರವ್ಯಂ ಗುಣಸ್ತಥಾ ಕರ್ಮ ಸಾಮಾನ್ಯಂ ಸವಿಶೇಷಕಮ್ ॥**
**ಸಮವಾಯಸ್ತಥಾಭಾವಃ ಪದಾರ್ಥಾಃ ಸಪ್ತ ಕೀರ್ತಿತಾಃ ॥ ೨ ॥**

ಸ್ವಕರ್ತವ್ಯತ್ವೇನ ನಿರ್ದೇಶಃ' ಪ್ರತಿಜ್ಞಾ ಎಂದು ಹಿಂದೆ ಹೇಳಿದೆ. ದ್ರವ್ಯಾದಿ ನಿರೂಪಣೆಯೇ ಇಲ್ಲಿ ಸ್ವಕರ್ತವ್ಯತ್ವ ರೂಪದಿಂದ ಪ್ರತಿಜ್ಞಾತವಾದದ್ದು. ಯಾವಾಗಲೂ ಮೊದಲು ಲಕ್ಷಣ. ಆಮೇಲೆ ವಿಭಾಗ ತೋರಿಸುವುದು ಸಂಪ್ರದಾಯ. ಇಲ್ಲಿ ಲಕ್ಷಣ ಹೇಳದೆ ಪದಾರ್ಥ ವಿಭಾಗ ಮಾಡಿರುವುದು ಹೇಗೆ ? ಎಂದು ಶಂಕೆ ಬರಬಹುದು. ಆದರೆ ಪದಸ್ಯ ಅರ್ಥಃ ಪದಾರ್ಥಃ ಎಂಬ ವ್ಯುತ್ಪತ್ತಿಯಿಂದ 'ಅಭಿಧೇಯತ್ವಂ—ಪದಶಕ್ತ್ಯಾ ಪ್ರತಿಪಾದ್ಯತ್ವಂ' ಎಂದು ಪದಾರ್ಥದ ಸಾಮಾನ್ಯ ಲಕ್ಷಣವು ಆ ಪದದಿಂದಲೇ ತೋರುವುದ ರಿಂದ ಲಕ್ಷಣಾನಂತರವೇ ವಿಭಾಗ ಹೇಳಿದೆಯೆಂದು ತಿಳಿಯಬೇಕು. 'ವಿಭಜತೇ—' ಇತಿ. ಉದ್ದೇಶ್ಯತಾವಚ್ಛೇದಕವ್ಯಾಪ್ಯ ನಾನಾಧರ್ಮಪ್ರಕಾರಕ ಜ್ಞಾನಾನುಕೂಲವ್ಯಾಪಾರಃ' ವಿಪೂರ್ವಕ ಭಜಧಾತುವಿಗೆ ಅರ್ಥ. ಉದ್ದೇಶ್ಯತಾವಚ್ಛೇದಕ—ಸಾಮಾನ್ಯಧರ್ಮ. ತದಪೇಕ್ಷಯಾ ನ್ಯೂನವೃತ್ತಿಧರ್ಮಗಳು ತದ್ವ್ಯಾಪ್ಯನಾನಾಧರ್ಮಗಳಾಗುತ್ತವೆ. ಈ ನಾನಾಧರ್ಮಗಳು ಪರಸ್ಪರವ್ಯಧಿಕರಣಗಳಾಗಿರುತ್ತವೆ. (ಪರಸ್ಪರ ಭಿನ್ನ ಭಿನ್ನ ಅಧಿಕರಣವುಳ್ಳವುಗಳು) ಅವೆಲ್ಲವನ್ನೂ ತಿಳಿಸಲು ಪ್ರಯೋಗಿಸುವ ವಾಕ್ಯಕ್ಕೆ ವಿಭಜನ ವೆಂದು ಹೆಸರು. (ತೇ) ಆಖ್ಯಾತಕ್ಕೆ ಕೃತಿ ಅರ್ಥ. ಕೃತಿಯಲ್ಲಿ ಪೂರ್ವೋಕ್ತವ್ಯಾಪಾರಕ್ಕೆ ಅನುಕೂಲತಾಸಂಬಂಧದಿಂದ ಅನ್ವಯ. ಆಖ್ಯಾತಾರ್ಥಕೃತಿಗೆ ಆಶ್ರಯತಾಸಂಬಂಧ ದಿಂದ ಗ್ರಂಥಕರ್ತೃವಿನಲ್ಲಿ ಅನ್ವಯ. ಪದಾರ್ಥಾನ್ ಎಂಬಲ್ಲಿ ದ್ವಿತೀಯೆಗೆ ವಿಶೇಷ್ಯತ್ವಂ ಅರ್ಥ. ಪದಾರ್ಥಕ್ಕೆ ವಿಶೇಷ್ಯತೆಯಲ್ಲಿ ಆಧೇಯತಾಸಂಬಂಧದಿಂದ ಅನ್ವಯ. ವಿಶೇಷ್ಯತೆಗೆ ನಿರೂಪಿತತ್ವಸಂಬಂಧದಿಂದ ಭಜಧಾತ್ವರ್ಥೈಕದೇಶ ಪ್ರಕಾರತೆಯಲ್ಲಿ ಅನ್ವಯ. ಒಟ್ಟಿಗೆ ಬೋಧ. 'ಪದಾರ್ಥನಿಷ್ಠವಿಶೇಷ್ಯತಾನಿರೂಪಿತ, ಉದ್ದೇಶ್ಯ ತಾವಚ್ಛೇದಕವ್ಯಾಪ್ಯ ನಾನಾಧರ್ಮಪ್ರಕಾರಕಜ್ಞಾನಾನುಕೂಲವ್ಯಾಪಾರಾನುಕೂಲ ಕೃತಿಮಾನ್ ( ಗ್ರಂಥಕಾರಃ )'. ಪದಾರ್ಥವಿಭಾಗದಲ್ಲಿ ಉದ್ದೇಶ್ಯತಾವಚ್ಛೇದಕ ಪದಾರ್ಥತ್ವ. ತದ್ವ್ಯಾಪ್ಯಧರ್ಮಗಳೆಂದರೆ ದ್ರವ್ಯತ್ವಾದಿಗಳು. ತತ್ಪ್ರಕಾರಕಜ್ಞಾನಾನು ಕೂಲವ್ಯಾಪಾರ ಅಂದರೆ 'ದ್ರವ್ಯಂಗುಣಃ—'ಇತ್ಯಾದಿ ಶ್ಲೋಕರೂಪವಾಗಿದೆ. 'ತದನುಕೂಲಕೃತಿ — ಪ್ರಯತ್ನವುಳ್ಳವನು ಗ್ರಂಥಕಾರ. ದ್ರವ್ಯತ್ವಾದಿಗಳು ಏಳು. 'ದ್ರವ್ಯಂ ಗುಣಃ—ಎಂದು ಜಾತ್ಯೈಕವಚನತಾತ್ಪರ್ಯದಿಂದ ಹೇಳಿದೆ.

ಸಂಯೋಗಕ್ಕಿಂತ ಬೇರೆ ಕರ್ಮವೆಂಬುದಿಲ್ಲವೆಂದು ಕೆಲವರ ಮತ. ಅದನ್ನು ದೂಷಿಸಲು 'ತಥಾಕರ್ಮ' ಎಂದಿದೆ. ಹೇಗೆ ಗುಣವು ಒಂದು ಪದಾರ್ಥವೋ ಹಾಗೆಯೇ ಕರ್ಮವೂ ಒಂದು ಪದಾರ್ಥ ಎಂದರ್ಥ. ಸಾಮಾನ್ಯವೆಂದರೆ ಜಾತಿ. ಸತ್ತಾ) ಎಂದು ಮುಂದೆ ವಿವರಿಸುತ್ತಾನೆ. ಅಭಾವ ಅಧಿಕರಣಸ್ವರೂಪ. ಭೂತಲದಲ್ಲಿ ಘಟಾಭಾವವೆಂದರೆ ಭೂತಲಸ್ವರೂಪವೇ ಅದು ಎಂದು ಪ್ರಭಾಕರಮತ. ಅದು ತಪ್ಪೆಂದು ತಿಳಿಸಲು 'ತಥಾ ಅಭಾವಃ' ಎಂದಿದೆ. ಹೇಗೆ ಗುಣಾದಿಗಳು ಪದಾರ್ಥಗಳೋ ಹಾಗೆ ಅಭಾವವೂ ಒಂದು ಪದಾರ್ಥ. ಸಪ್ತ ಎಂದುದರಿಂದ ಅಧಿಕ ಪದಾರ್ಥವಿಲ್ಲವೆಂದು ಸೂಚಿತವಾಗುತ್ತದೆ. 'ಕೀರ್ತಿತಾಃ' ಕಣಾದಮುಂತಾದ ಋಷಿಗಳಿಂದ ಹೇಳಿದೆಯೆಂದರ್ಥ.

**ಅತ್ರ ಸಪ್ತಮಸ್ಯಾಽಭಾವತ್ವಕಥನಾದೇವ ಷಣ್ಣಾಂ ಭಾವತ್ವಂ ಪ್ರಾಪ್ತಂ, ತೇನ ಭಾವತ್ವೇನ ಪೃಥಗುಪನ್ಯಾಸೋ ನ ಕೃತಃ । ಏತೇ ಚ ಪದಾರ್ಥಾ ವೈಶೇಷಿಕೇ ಪ್ರಸಿದ್ಧಾ ನೈಯಾಯಿಕಾನಾಮಪ್ಯವಿರುದ್ಧಾಃ । ಪ್ರತಿಪಾದಿತಂ ಚೈವಮೇವ ಭಾಷ್ಯೇ ॥ ಅತ ಏವೋಪಮಾನಚಿಂತಾಮಣೌ ಸಪ್ತಪದಾರ್ಥಭಿನ್ನತಯಾ ಶಕ್ತಿಸಾದೃಶ್ಯಾದೀನಾಮತಿರಿಕ್ತಪದಾರ್ಥತ್ವಮಾಶಂಕಿತಮ್ ॥**

ನ್ಯಾಯ ಗ್ರಂಥಗಳಲ್ಲಿ 'ಪದಾರ್ಥಃ—ದ್ವಿವಿಧಃ, ಭಾವೋಽಭಾವಶ್ಚ' ಎಂದು ಹೇಳಿದೆ. ಅದರಂತೆ ದ್ರವ್ಯಾದಿ ಆರು ಭಾವಗಳೂ, ಏಳನೆಯ ಪದಾರ್ಥ ಅಭಾವವೆಂದೂ ಏಕೆ ನಿರೂಪಣ ಮಾಡಲಿಲ್ಲವೆಂದು ಆಶಂಕಿಸಿದರೆ ಸಮಾಧಾನ ತೋರಿಸುತ್ತಾನೆ. 'ಅತ್ರ—' ಇತಿ. ಏಳನೆಯ ಪದಾರ್ಥವು ಅಭಾವವೆಂದು ಹೇಳಿರುವುದರಿಂದಲೇ ಸಾಮರ್ಥ್ಯದಿಂದ ಉಳಿದ ಆರು ಭಾವಪದಾರ್ಥಗಳೆಂದು ತಿಳಿಯುತ್ತದೆ. ಸಮವಾಯ, ಏಕಾರ್ಥಸಮವಾಯ ಅನ್ಯತರ ಸಂಬಂಧದಿಂದ ಸತ್ತಾಧರ್ಮದಿಂದ ಕೂಡಿರುವುದು ಭಾವ. ದ್ರವ್ಯದಲ್ಲಿ ಸತ್ತಾ ಜಾತಿ ಸಮವಾಯದಿಂದ ಇದೆ. ಏಕಾರ್ಥಸಮವಾಯಃ—ಒಂದು ವಸ್ತುವಿನಲ್ಲಿ ಎರಡೂ ಸಮವಾಯಸಂಬಂಧದಿಂದ ಇರುವುದು. ಗುಣಾದಿ ಪಂಚಕಗಳೂ ಸತ್ತೆಯೂ ಸಮವಾಯದಿಂದ ದ್ರವ್ಯದಲ್ಲಿರುತ್ತವೆ. ಭಾವತ್ವಾಭಾವಃ—ಅಭಾವತ್ವಂ. ಇದರಿಂದ ಭಾವಗಳೆಂದು ಪುನಃ ಹೇಳಲಿಲ್ಲ. "ದ್ರವ್ಯಾದಯಃ ಷಟ್—ಭಾವಾಃ—ಅಭಾವ ಪ್ರಭಿನ್ನಧರ್ಮವಿಶಿಷ್ಟತ್ವಾತ್ । ಯನ್ನೈವಂ ತನ್ನೈವಂ'' ಎಂದು ವ್ಯತಿರೇಕದೃಷ್ಟಾಂತ ಹೇಳಬೇಕು. ನ್ಯಾಯ, ವೈಶೇಷಿಕಗಳಲ್ಲಿ ಹದಿನಾರು ಪದಾರ್ಥಗಳನ್ನು ಹೇಳಿರುವಾಗ ಏಳೇ ಪದಾರ್ಥಗಳನ್ನು ಇಲ್ಲಿ ಹೇಳಿರುವುದು ಹೇಗೆ ? ಅಂದರೆ ಅವುಗಳೆಲ್ಲವೂ ಈ ಏಳರಲ್ಲಿಯೇ ಅಡಕವಾಗಿವೆಯೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾನೆ. 'ಏತೇಚ'—ಇತಿ. ಈ ಏಳು ಪದಾರ್ಥಗಳು ವೈಶೇಷಿಕದಲ್ಲಿ ಪ್ರಸಿದ್ಧವಾಗಿವೆ; ನೈಯಾಯಿಕರಿಗೂ ವಿರುದ್ಧವಲ್ಲ.

ಈ ಅರ್ಥದಲ್ಲಿ ಪ್ರಾಚೀನರಸಂಮತಿ ತೋರಿಸುತ್ತಾನೆ. 'ಪ್ರತಿಪಾ—' ಇತಿ. ಹೀಗೆಯೇ ನ್ಯಾಯಭಾಷ್ಯದಲ್ಲಿ ಹೇಳಿದೆ. 'ದ್ರವ್ಯಗುಣ.......ಪದಾರ್ಥಾಃ । ಷೋಡಶಾನಾಮ ತ್ರೈವಾನ್ತರ್ಭಾವಾತ್' ಎಂದು ಅಲ್ಲಿ ನಿರೂಪಿಸಿದೆ. ಯುಕ್ತಿ ಇಲ್ಲವಾದರೂ ಪ್ರಾಚೀನರ ಮಾತು ಆರ್ಷೇಯವಾದುದರಿಂದ ಸಾಧುವಾಗಬಹುದು. ತರ್ಕಕುಶಲರಾದ ನವೀನ ನೈಯಾಯಿಕರು ಇದನ್ನು ಹೇಳಿರುವರೇ ? ಎಂದು ಆಶಂಕಿಸಿದರೆ ಆಧುನಿಕರ ಸಂಮತಿ ಯನ್ನೂ ತೋರಿಸುತ್ತಾನೆ. 'ಅತಏವ—' ಇತಿ. ಗಂಗೇಶೋಪಾಧ್ಯಾಯರೆಂಬವರು 'ಚಿಂತಾಮಣಿ' ಎಂಬ ತರ್ಕಗ್ರಂಥವನ್ನು ಬರೆದಿರುತ್ತಾರೆ. ಅವರು ತಮ್ಮ ಉಪಮಾನ ಚಿಂತಾಮಣಿ ಗ್ರಂಥದಲ್ಲಿ ಈ ಏಳು ಪದಾರ್ಥಗಳಿಗಿಂತ ಬೇರೆಯಾಗಿ ಶಕ್ತಿ, ಸಾದೃಶ್ಯ ಮುಂತಾದ ಪದಾರ್ಥಗಳಿಲ್ಲವೇ ಎಂದು ಆಶಂಕಿಸುತ್ತಾರೆ. ಭಾಷ್ಯಾದಿಗಳಲ್ಲಿ ಏಳುಪದಾರ್ಥ ಗಳಿಗಿಂತ ಹೆಚ್ಚಾಗಿ ಹೇಳಿದ್ದರೆ ಅವರು ಏಳಕ್ಕಿಂತ ಹೆಚ್ಚಿನ ಪದಾರ್ಥವಿಲ್ಲವೇ ? ಎಂದು ಆಶಂಕೆ ಮಾಡಿರುವುದು ಕೂಡಲಾರದು. ಆಶಂಕಿಸಿ ನಿರಾಕರಿಸಿರುವುದರಿಂದ ಪ್ರಾಚೀನರು ಏಳುಪದಾರ್ಥ ಹೇಳಿದ್ದೇ ಸಮಂಜಸವೆಂದು ಅವರ ತಾತ್ಪರ್ಯ ವ್ಯಕ್ತವಾಗುತ್ತದೆ. ಆದುದರಿಂದ ಏಳೇ ಪದಾರ್ಥಗಳು ನ್ಯಾಯಸಂಮತವೆಂದು ತಿಳಿಯಬೇಕು.

**ನನು ಕಥಮೇತ ಏವ ಪದಾರ್ಥಾಃ ಶಕ್ತಿಸಾದೃಶ್ಯಾದೀನಾಮಪ್ಯತಿರಿಕ್ತ ಪದಾರ್ಥತ್ವಾತ್ । ತಥಾಹಿ–ಮಣ್ಯಾದಿಸಮವಹಿತೇನ ವಹ್ನಿನಾ ದಾಹೋ ನ ಜನ್ಯತೇ ॥ ತತ್ರ ಮಣ್ಯಾದಿನಾ ವಹ್ನೌ ದಾಹಾನುಕೂಲಾ ಶಕ್ತಿರ್ನಾಶ್ಯತೇ, ಉತ್ತೇಜಕೇನ ಮಣ್ಯಾದ್ಯಪಸಾರಣೇನ ಚ ಜನ್ಯತ ಇತಿ ಕಲ್ಪ್ಯತೇ ॥**

ಈಗ ಮಣಿಗ್ರಂಥದಲ್ಲಿ ಶಕ್ತ್ಯಾದಿಗಳಿಗೆ ಅತಿರಿಕ್ತಪದಾರ್ಥತ್ವವನ್ನಾಶಂಕಿಸಿರು ವುದನ್ನೂ ನಿರಾಕರಣ ಮಾಡಿರುವುದನ್ನೂ ತೋರಿಸುತ್ತಾನೆ. 'ನನು—' ಇತಿ. ಶಕ್ತಿ, ಸಾದೃಶ್ಯಗಳು ಅತಿರಿಕ್ತಪದಾರ್ಥಗಳೆಂದು ಪ್ರಾಭಾಕರನ ಮತ. ಅವನ ಆಶಂಕೆ ಇದು. ಶಕ್ತಿಸಾದೃಶ್ಯ ಮುಂತಾದ ಅತಿರಿಕ್ತಪದಾರ್ಥಗಳಿರುವಾಗ ಈ ಏಳೇಪದಾರ್ಥ ಗಳು ಹೇಗೆ ? 'ತಥಾಹಿ'—ಎಂಬುದರಿಂದ ಅತಿರಿಕ್ತತ್ವವನ್ನು ತೋರಿಸುತ್ತಾನೆ. ಚಂದ್ರಕಾಂತಮಣಿ ಮುಂತಾದವುಗಳ ಸಮೀಪದಲ್ಲಿರುವ ಬೆಂಕಿಯಿಂದ ದಾಹ ಹುಟ್ಟುವು ದಿಲ್ಲ. ಆದಿ ಪದದಿಂದ ಮಂತ್ರ. ಔಷಧಿಗಳನ್ನು ತೆಗೆದುಕೊಳ್ಳಬೇಕು. ದಾಹ— ರೂಪಾಂತರೋತ್ಪತ್ತಿ ಅಥವಾ ಪೂರ್ವರೂಪಪರಾವೃತ್ತಿ. ಮಣಿಸಂನಿಧಾನವಿರುವಾಗ ದಾಹ ಹುಟ್ಟುವುದಿಲ್ಲ. ಆದುದರಿಂದ ಮಣಿಮುಂತಾದುವುಗಳಿಂದ ಬೆಂಕಿಯಲ್ಲಿ ಸುಡತಕ್ಕ ಶಕ್ತಿಯು ನಾಶವಾಗುತ್ತದೆ. ( ವಹ್ನಿನಿಷ್ಠಶಕ್ತಿತ್ವಾವಚ್ಛಿನ್ನಂ ಪ್ರತಿ ಮಣಿತ್ವೇನ ನಾಶಕತ್ವಸ್ವೀಕಾರೇಣ ಮಣಿಸತ್ವದಶಾಯಾಂ ಶಕ್ತೇರಭಾವಃ, ಅತಃ ದಾಹೋ ನ. ) ಅದೇ ಪ್ರತಿಬಂಧಕ ಮಣಿಯನ್ನು ಬೆಂಕಿಯಿಂದ ತೆಗೆದಾಗ, ಅಥವಾ ಅದು ಇದ್ದಾಗಲೇ ಇನ್ನೊಂದು ಉತ್ತೇಜಕ ಮಣಿಯನ್ನಿಟ್ಟಾಗ ಬೆಂಕಿಯಲ್ಲಿ ಸುಡತಕ್ಕ

ಶಕ್ತಿಯೂ ಹುಟ್ಟುತ್ತದೆ. ಚಕಾರವು ವಿಕಲ್ಪಾರ್ಥವನ್ನು ಬೋಧಿಸುತ್ತದೆ. ಇತಿ. ಹೀಗೆ ಕಂಡುಬಂದುದರಿಂದ ಬೆಂಕಿಯಲ್ಲಿ ಒಂದು ಶಕ್ತಿಯು ಅನುಮಿತವಾಗುತ್ತದೆ. ಶಕ್ತಿಸಾಧಕ ಅನುಮಾನ- ''ವಹ್ನಿಃ—ಮಣಿಸಮವಧಾನ ಜನ್ಯನಾಶ ಪ್ರತಿಯೋಗಿ ಶಕ್ತಿಮಾನ್—ಮಣಿಸಮವಧಾನೇ ಸತಿ ದಾಹಾಜನಕತ್ವಾತ್ ॥ ಯಃ ಯತ್ಸಮವಧಾನೇ ಸತಿ (ದಾಹ) ಕಾರ್ಯಜನಕಃ ಸಃ ತತ್ಸಮವಧಾನಜನ್ಯನಾಶಪ್ರತಿಯೋಗಿ ಶಕ್ತಿಮಾನ್, ಯಥಾ ಕೀಟಾಯತಬೀಜವತ್ ॥ '' ಬೆಂಕಿಯು ಮಣಿಸನ್ನಿಧಾನವಿರುವಾಗ ಸುಡದಿರುವುದರಿಂದ, ಮಣಿಸಂನಿಧಾನದಿಂದ ಉಂಟಾದ ನಾಶಕ್ಕೆ ಪ್ರತಿಯೋಗಿಯಾದ ಶಕ್ತಿಯುಳ್ಳದ್ದು. ಕೀಟ ಕಡಿದ ಬೀಜವು ಅಂಕುರಾದಿಕಾರ್ಯವನ್ನು ಹೊಂದದಿರುವುದರಿಂದ ಅಲ್ಲಿ ಕೀಟದಿಂದ ಅಂಕುರೋತ್ಪತ್ತಿಜನಕವಾದ ಶಕ್ತಿಯು ನಷ್ಟವಾಗಿದೆಯೆಂದು ಎಲ್ಲರಿಗೂ ತಿಳಿದ ವಿಷಯ.

ಹಾಗೆಯೇ "ವಹ್ನಿಃ—ಉತ್ತೇಜಕಮಣಿ (ಅಥವಾ ಪ್ರತಿಬಂಧಕಮಣ್ಯಪಸಾರಣ) ಜನ್ಯ ಶಕ್ತಿಮಾನ್—ಉತ್ತೇಜಕ (ಮಣ್ಯಪಸಾರಣ) ಸಮವಧಾನೇ ದಾಹಜನಕತ್ವಾತ್ ॥ ಯಃ ಯತ್ಸಮವಧಾನೇ ಸತಿ ಕಾರ್ಯಜನಕಃ, ಸಃ ತತ್ಸಮವಧಾನಜನ್ಯಶಕ್ತಿಮಾನ್, ಯಥಾಭೂಮಿಷ್ಠಬೀಜವತ್ ॥" ಉತ್ತೇಜಕಮಣಿ ಇರುವಾಗ ದಾಹ ಉಂಟಾಗುವುದರಿಂದ ಉತ್ತೇಜಕಮಣಿ ಸಾಂನಿಧ್ಯದಿಂದ ದಾಹಾನುಕೂಲವಾದ ಶಕ್ತಿಯು ಹುಟ್ಟುತ್ತದೆ ಎಂದರ್ಥ. ಈ ಅನುಮಾನಗಳಿಂದ ವಹ್ನಿಯಲ್ಲಿ ಕಾರಣತಾವಚ್ಛೇದಕ ರೂಪವಾದ ಒಂದು ಶಕ್ತಿಯು ಸಿದ್ಧವಾಗುತ್ತದೆ. ವಹ್ನಿತ್ವವು ಕಾರಣತಾವಚ್ಛೇದಕವಾಗುವುದಿಲ್ಲ. ಮಣಿ ಇರುವಾಗ ಸುಡದಿರುವುದರಿಂದ ಕಾರಣತಾವಚ್ಛೇದಕದಿಂದ ಕೂಡಿದ ವಹ್ನಿ ಇಲ್ಲವೆನ್ನಬೇಕು. ವಹ್ನಿತ್ವವೇ ಅದು ಆಗುವುದಾದರೆ ವಹ್ನಿತ್ವವು ವಹ್ನಿಯಲ್ಲಿ ಯಾವಾಗಲೂ ಇರುವುದರಿಂದ ಪ್ರತಿಬಂಧಕಮಣಿ ಇರುವಾಗಲೂ ಸುಡಬೇಕಾಗುತ್ತದೆ. ಅತಿರಿಕ್ತವಾಗಿ ವಹ್ನಿಯಲ್ಲಿ ಒಂದು ಶಕ್ತಿಯನ್ನು ಅಂಗೀಕರಿಸಿದರೆ ಆಗ ಸುಡಲು, ಸುಡದಿರಲು, ಕಾರಣ ಸ್ಪಷ್ಟವಾಗುತ್ತದೆ. ಈ ಶಕ್ತಿಯು ಹಿಂದೆ ಹೇಳಿದ ದ್ರವ್ಯಾದಿಗಳಲ್ಲಿ ಸೇರುವುದಿಲ್ಲ. ಗುಣಕರ್ಮಾದಿಗಳಲ್ಲಿಯೂ ಇರುವುದರಿಂದ ದ್ರವ್ಯವಾಗುವುದಿಲ್ಲ. ಗುಣ ಕರ್ಮಗಳಲ್ಲಿರುವುದರಿಂದಲೇ ಗುಣವಲ್ಲ, ಕರ್ಮವಲ್ಲ. ಶಕ್ತಿಗೆ ಉತ್ಪತ್ತಿ ವಿನಾಶವಿರುವುದರಿಂದ ನಿತ್ಯವಾದ ಸಾಮಾನ್ಯಾದಿ ನಾಲ್ಕು ಪದಾರ್ಥಗಳಲ್ಲಿಯೂ ಸೇರುವುದಿಲ್ಲ. ಈ ವಿಷಯದಲ್ಲಿ ಅನುಮಾನ. "ಶಕ್ತಿಃ—ಉತ್ಪತ್ತಿವಿನಾಶಶಾಲಿನೀ-ಮಣಿಸಮವಧಾನಪ್ರಯೋಜ್ಯದಾಹೋತ್ಪಾದಕಾಭಾವವದವೃತ್ತಿತ್ವೇ ಸತಿ ಮಣ್ಯಸಮವಧಾನದಾಹೋತ್ಪತ್ತಿಕಾರಣತಾವಚ್ಛೇದಕತ್ವಾತ್ ॥" ಇದರಿಂದ ಅತಿರಿಕ್ತತ್ವ ಹೇಳಿದಂತಾಗುತ್ತದೆ. 'ಶಕ್ತಿ:—ನ ಪೃಥಿವ್ಯಾದಿಚತುಷ್ಟಯಾಂತರ್ಭೂತಾ—ಸ್ಪರ್ಶಶೂನ್ಯತ್ವಾತ್ ॥ ' ಶಕ್ತಿಯಲ್ಲಿ ಸ್ಪರ್ಶ ಇಲ್ಲದಿರುವುದರಿಂದ ಪೃಥಿವೀ, ಜಲ, ತೇಜಸ್ಸು, ವಾಯುಗಳಲ್ಲಿ ಸೇರುವುದಿಲ್ಲವೆಂದರ್ಥ. 'ಶಕ್ತಿಃ—ನಾಕಾಶಾದ್ಯಂತರ್ಭೂತಾ—ಉತ್ಪತ್ತಿಮತ್ವೇಸತಿ, ವಿನಾಶಶಾಲಿತ್ವಾತ್ ।' ಉತ್ಪತ್ತಿವಿನಾಶವಿರುವುದರಿಂದ ಆಕಾಶಾದಿನಿತ್ಯಗಳಲ್ಲಿ ಸೇರು

ವುದಿಲ್ಲ. ಗುಣಕರ್ಮಗಳಲ್ಲಿಯೂ ಇರುವುದರಿಂದ ಗುಣ ಕರ್ಮದಲ್ಲಿ ಸೇರುವುದಿಲ್ಲ. ಗುಣದಲ್ಲಿ ಗುಣವಿಲ್ಲ. ಶಕ್ತಿ ಗುಣವೆಂದರೆ ಗುಣದಲ್ಲಿ ಗುಣ ಅಂಗೀಕರಿಸಿದಂತಾಗುತ್ತದೆ. 'ಶಕ್ತಿಃ—ನ ಅಭಾವಾಂತರ್ಭೂತಾ—ಭಾವರೂಪತ್ವಾತ್ (ಸತ್ವೇನ ಪ್ರತೀಯಮಾನತ್ವಾತ್) ಹೀಗೆ ಶಕ್ತಿಯು ದ್ರವ್ಯಾದಿಗಳಿಗಿಂತ ಅತಿರಿಕ್ತವಾದ ಪದಾರ್ಥವೆಂದು ಅವರ ಸಿದ್ಧಾಂತ.

**ಏವಂ ಸಾದೃಶ್ಯಮಪ್ಯತಿರಿಕ್ತಃ ಪದಾರ್ಥಃ । ತದ್ಧಿ ನ ಷಟ್ಸು ಭಾವೇಷ್ವಂತರ್ಭವತಿ ಸಾಮಾನ್ಯೇಽಪಿ ಸತ್ವಾತ್ । ಯಥಾ ಗೋತ್ವಂ ನಿತ್ಯಂ ತಥಾಽಶ್ವತ್ವಮಪೀತಿ ಸಾದೃಶ್ಯಪ್ರತೀತೇಃ, ನಾಪ್ಯಭಾವೇ ಸತ್ವೇನ ಪ್ರತೀಯಮಾನತ್ವಾತ್ ಇತಿಚೇನ್ನ ಮಣ್ಯಾದ್ಯಭಾವವಿಶಿಷ್ಟವಹ್ನ್ಯಾದೇರ್ದಾಹಕಂ ಪ್ರತಿ ಸ್ವಾತಂತ್ರ್ಯೇಣ ಮಣ್ಯಭಾವಾದೇರೇವ ವಾ ಹೇತುತ್ವಂ ಕಲ್ಪ್ಯತೇ ॥**

ಶಕ್ತಿಯು ಅತಿರಿಕ್ತಪದಾರ್ಥವಾದಂತೆ ಸಾದೃಶ್ಯವೆಂಬುದೂ ಅತಿರಿಕ್ತಪದಾರ್ಥವಾಗಿದೆ. ಇದು ಆಲಂಕಾರಿಕರ ಸಿದ್ಧಾಂತ. 'ಸಾದೃಶ್ಯಂ-ಕ್ಲೃಪ್ತಪದಾರ್ಥಾತಿರಿಕ್ತಂ—ಷಟ್ ಭಾವಪದಾರ್ಥಾನಂತರ್ಭೂತತ್ವೇ ಸತಿ ಅಭಾವಾನಂತರ್ಭೂತತ್ವಾತ್' ಎಂದು ಅತಿರಿಕ್ತ ಪದಾರ್ಥತ್ವಸಾಧಕಾನುಮಾನ. ಇಲ್ಲಿ ಹೇತುವಿನಲ್ಲಿ ವಿಶೇಷಣಾಸಿದ್ಧಿ ಪರಿಹಾರವನ್ನು ತೋರಿಸುತ್ತಾನೆ. 'ತದ್ಧಿ—'ಇತಿ. ಷಟ್ ಭಾವಗಳಲ್ಲಿಯೇ ಸೇರಿದೆಯೆಂದರೆ ಹೇತು ಅಸಿದ್ಧವಾಗುತ್ತದೆ.) 'ಸಾದೃಶ್ಯಂ—ಷಟ್ ಭಾವಪದಾರ್ಥಾನಂತರ್ಭೂತಂ-ಸಾಮಾನ್ಯೇಽಪಿಸತ್ವಾತ್ । ಇಲ್ಲಿ ಸಾಮಾನ್ಯಸತ್ವವೆಂದರೆ 'ಸಾಮಾನ್ಯೇತರವೃತ್ತಿತ್ವೇ ಸತಿ ಸಾಮಾನ್ಯವೃತ್ತಿತ್ವಂ' ಹೀಗೆ ಹೇಳದಿದ್ದರೆ ಸಾಮಾನ್ಯತ್ವವೂ ಸಾಮಾನ್ಯದಲ್ಲಿರುವುದರಿಂದ ಅಲ್ಲಿ ವ್ಯಭಿಚಾರ ಬರುತ್ತದೆ. ಸಾಮಾನ್ಯೇತರದಲ್ಲಿಯೂ ಇರುವುದು ಎಂದುದರಿಂದ ಸಾಮಾನ್ಯತ್ವವು ಸಾಮಾನ್ಯ ಮಾತ್ರದಲ್ಲಿರುವುದರಿಂದ ಅದನ್ನು ತೆಗೆದುಕೊಳ್ಳಲು ಸಾಧ್ಯವಿಲ್ಲ. ದ್ರವ್ಯಾದಿಗಳಲ್ಲಿ ಸಾದೃಶ್ಯವಿರುವುದರಿಂದ ಅದು ದ್ರವ್ಯಾದಿಗಳಾಗುವುದಿಲ್ಲವೆಂದು ತಾತ್ಪರ್ಯ. ಸಾಮಾನ್ಯದಲ್ಲಿ (ಜಾತಿಯಲ್ಲಿ) ಇರುವುದು ಹೇಗೆಂದು ತೋರಿಸುತ್ತಾನೆ. 'ಯಥಾ'—ಇತಿ. ಗೋತ್ವವು (ಸಾಮಾನ್ಯ) ಹೇಗೆ ನಿತ್ಯವೋ ಹಾಗೆಯೇ ಅಶ್ವತ್ವವೂ ನಿತ್ಯ ಇಲ್ಲಿ ಸಾದೃಶ್ಯಕ್ಕೆ ಅನುಯೋಗಿ (ಆಶ್ರಯ) ಅಶ್ವತ್ವರೂಪ ಸಾಮಾನ್ಯವಾಗುವುದರಿಂದ ಸಾದೃಶ್ಯವು ಸಾಮಾನ್ಯದಲ್ಲಿ ಬಂದಂತಾಗುತ್ತದೆ. ಹೇತುವಿನಲ್ಲಿರುವ ವಿಶೇಷ್ಯಾಸಿದ್ಧಿಯನ್ನು ತೋರಿಸುತ್ತಾನೆ. 'ಸಾದೃಶ್ಯಂ—ನ ಅಭಾವಾಂತರ್ಭೂತಂ—ಸತ್ವೇನ ಪ್ರತೀಯಮಾನತ್ವಾತ್ ।' ಭಾವವಾದುದರಿಂದ ಅಭಾವದಲ್ಲಿ ಸೇರುವುದಿಲ್ಲವೆಂದರ್ಥ. ಹೀಗೆ ಸಾದೃಶ್ಯವು ಅತಿರಿಕ್ತವೆಂದು ಅವರ ಸಿದ್ಧಾಂತ.

'ನ' ಎಂಬುದರಿಂದ ಮೊದಲು ಪ್ರಾಭಾಕರನು ಹೇಳಿದ ಶಕ್ತಿಯನ್ನು ಅತಿರಿಕ್ತ ಪದಾರ್ಥ ಅಲ್ಲವೆಂದು ಖಂಡಿಸುತ್ತಾನೆ. 'ಮಣ್ಯಾದ್ಯ'—ಇತಿ. ಉತ್ತೇಜಕಮಣ್ಯ

ಭಾವದಿಂದ ಕೂಡಿದ ಯಾವ ಪ್ರತಿಬಂಧಕಮಣಿ ಇದೆಯೋ ಅದರ ಅಭಾವದಿಂದ ಕೂಡಿದ್ದ ವಹ್ನಿಯೇದಾಹವನ್ನು ಕುರಿತು ಕಾರಣವಾಗುತ್ತದೆ. 'ಸಮವಾಯಸಂಬಂಧಾವಚ್ಛಿನ್ನ ದಾಹತ್ವಾವಚ್ಛಿನ್ನಕಾರ್ಯತಾ (ದಾಹನಿಷ್ಠಾ) ನಿರೂಪಿತಾ—,ತಾದಾತ್ಮ್ಯಸಂಬಂಧಾವ ಚ್ಛಿನ್ನೋತ್ತೇಜಕಾಭಾವ ವಿಶಿಷ್ಟಮಣ್ಯಾದ್ಯಭಾವ ವಿಶಿಷ್ಟವಹ್ನಿತ್ವಾವಚ್ಛಿನ್ನಾ ವಹ್ನಿನಿಷ್ಠಾ ಕಾರಣತಾ' ಎಂದು ಕಾರ್ಯಕಾರಣಭಾವ. ಸಮವಾಯಸಂಬಂಧದಿಂದ ದಾಹರೂಪ ಕಾರ್ಯವಹ್ನಿಯಲ್ಲಿದೆ. ದಾಹಕ್ಕೆ ಪ್ರತಿಬಂಧಕಾಭಾವದಿಂದ ಕೂಡಿದ ವಹ್ನಿಯೇ ಕಾರಣವಾಗುವುದರಿಂದ ಶಕ್ತಿವಿಶಿಷ್ಟವಹ್ನಿ ಕಾರಣವೆಂದು ಹೇಳಬೇಕಾಗಿಲ್ಲ. ಶಕ್ತಿವಿಶಿಷ್ಟ ವಹ್ನಿತ್ವವನ್ನು ಕಾರಣತಾವಚ್ಛೇದಕವೆಂದು ಒಪ್ಪಿದರೆ ಆಗ ಕಾರಣತಾದ್ವಯಕಲ್ಪನರೂಪ ಗೌರವ ಬರುತ್ತದೆ. ಹೇಗೆಂದರೆ ಶಕ್ತಿವಿಶಿಷ್ಟವಹ್ನಿತ್ವವೆಂಬಲ್ಲಿ ಅದೇ ವಿಶೇಷ್ಯ, ಇದೇ ವಿಶೇಷಣವೆಂದು ನಿರ್ಧರಿಸಲು ಯುಕ್ತಿ ಇಲ್ಲ. ವಿನಿಗಮನಾವಿರಹದಿಂದ ವಹ್ನಿವಿಶಿಷ್ಟ ಶಕ್ತಿಮತ್ವಂ (ಶಕ್ತಿರೇವ) ಶಕ್ತಿವಿಶಿಷ್ಟವಹ್ನಿತ್ವ ಎಂದು ಎರಡು ರೀತಿಯಿಂದಲೂ ಹೇಳ ಬಹುದು. ಆಗ ಕಾರಣತಾವಚ್ಛೇದಕ ಎರಡಾಗುತ್ತದೆ. ಇಲ್ಲಿ ಪೂರ್ವಪಕ್ಷಿಯು ತಾರ್ಕಿಕನ ಮೇಲೆ ಹೀಗೆ ಆಪಾದಿಸಬಹುದು. ನಿನ್ನ ಮತದಲ್ಲಿಯೂ ಈ ಗೌರವವು ತಪ್ಪಿದ್ದಲ್ಲ. ದಾಹವನ್ನು ಕುರಿತು ಕೇವಲವಹ್ನಿ ಕಾರಣವೆಂದು ಹೇಳಿಲ್ಲ ಮಣ್ಯಾದ್ಯ ಭಾವವಿಶಿಷ್ಟವಹ್ನಿ ಕಾರಣವೆಂದರೆ ಗುರುಧರ್ಮಾವಿಚ್ಛಿನ್ನ ಕಾರಣಾತಾದ್ವಯಾಪತ್ತಿ' ಬಂದೇ ಬರುತ್ತದೆ. ಮಣ್ಯಭಾವವಿಶಿಷ್ಟವಹ್ನಿತ್ವೇನ, ಅಥವಾ ವಹ್ನಿವಿಶಿಷ್ಟಮಣ್ಯಭಾವ ತ್ವೇನ ಕಾರಣವೆನ್ನಬೇಕು. ಹೀಗೆಯೆ ಹೇಳಬೇಕೆಂಬುದರಲ್ಲಿ ನಿಯಾಮಕವಿಲ್ಲ. ಆದ ಕ್ಕೋಸ್ಕರ ಪಕ್ಷಾಂತರವನ್ನು ತೋರಿಸುತ್ತಾನೆ. 'ಸ್ವಾತಂತ್ರ್ಯೇಣ—' ಇತಿ. ಉತ್ತೇಜಕ ವಿಲ್ಲದ ಪ್ರತಿಬಂಧಕಮಣಿ ಇಲ್ಲದ ವಹ್ನಿ ಕಾರಣವೆನ್ನುವುದಿಲ್ಲ. ಕೇವಲ ಪ್ರತಿಬಂಧಕಮಣ್ಯ ಭಾವಕ್ಕೆ ಕಾರಣತ್ವ ಹೇಳುತ್ತೇವೆ. ಈಗ ವಿಶೇಷಣ ವಿಶೇಷ್ಯಭಾವವಿಲ್ಲದಿರುವುದರಿಂದ ಕಾರಣವು ಗುರುಧರ್ಮಾವಚ್ಛಿನ್ನವಾಗುವುದಿಲ್ಲ. (ಮಣ್ಯಭಾವತ್ವಂ—ಇದು ಕಾರಣ ತಾವ ಚ್ಛೇದಕವಾಗುವುದರಿಂದ ಗುರುಧರ್ಮವಲ್ಲ.) ಪ್ರತಿಬಂಧಕಮಣಿ ಇದ್ದರೆ ವಹ್ನಿಯೇ ಇರುವುದಿಲ್ಲ. ಆದುದರಿಂದ ದಾಹವುಂಟಾಗುವುದಿಲ್ಲ. ದಾಹವನ್ನು ಕುರಿತು ಪ್ರತಿ ಬಂಧಕಮಣ್ಯಭಾವವೇ ಕಾರಣ (ಮಣ್ಯಭಾವವಿದ್ದರೆ ವಹ್ನಿ ಇದ್ದಂತಯೇ)ವೆಂದು ಕಲ್ಪಿಸುವುದರಿಂದ ದಾಹಕ್ಕೆ ಕಾರಣರೂಪವಾಗಿ ವಹ್ನಿಯಲ್ಲಿ ಒಂದು ಅಧಿಕ ಶಕ್ತಿ ಕಲ್ಪನಾ ಮಾಡಬೇಕಾಗಿಲ್ಲ. 'ಕಾರ್ಯಾನುಕೂಲಧರ್ಮವಿಘಟಕತ್ವಂ ಪ್ರತಿಬಂಧ ಕತ್ವಮ್.' ಪ್ರತಿಬಂಧಕವು ಕಾರಣದಲ್ಲಿರುವ ಕಾರ್ಯಾನುಕೂಲಧರ್ಮವನ್ನು ಇಲ್ಲ ದಂತೆ ಮಾಡುತ್ತದೆ. 'ಪ್ರತಿಬಂಧಕಸತ್ವೇಪಿ ಕಾರ್ಯಜನಕತ್ವಂ ಉತ್ತೇಜಕತ್ವಂ' ಪ್ರತಿ ಬಂಧಕವಿದ್ದರೂ ಕಾರ್ಯವನ್ನು ಹುಟ್ಟಿಸುವಂತೆ ಮಾಡುವುದು ಉತ್ತೇಜಕ.

**ಅನೇನೈವ ಸಾಮಂಜಸ್ಯೇ ಅನಂತಶಕ್ತಿತತ್ಪ್ರಾಗಭಾವಧ್ವಂಸ ಕಲ್ಪನಾಽನೌಚಿತ್ಯಾತ್ । ನ ಚೋತ್ತೇಜಕೇ ಸತಿ ಪ್ರತಿಬಂಧಕ**

**ಸದ್ಭಾವೇಽಪಿ ಕಥಂ ದಾಹ ಇತಿ ವಾಚ್ಯಮ್ । ಉತ್ತೇಜಕಾಭಾವವಿಶಿಷ್ಟ ಮಣ್ಯಭಾವಸ್ಯ ಹೇತುತ್ವಾತ್ । ಸಾದೃಶ್ಯಮಪಿ ನ ಪದಾರ್ಥಾಂತರಮ್ । ಕಿಂತು ತದ್ಭಿನ್ನತ್ವೇ ಸತಿ ತದ್ಗತಭೂಯೋಧರ್ಮವತ್ತ್ವಂ, ಯಥಾ ಚಂದ್ರ ಭಿನ್ನತ್ವೇ ಸತಿ ಚಂದ್ರಗತಾಹ್ಲಾದಕತ್ವಾದಿಮತ್ವಂ ಮುಖೇ ಚಂದ್ರ ಸಾದೃಶ್ಯಮಿತಿ॥ ೨ ॥**

ತಾರ್ಕಿಕನಮತದಲ್ಲಿ ಕೆಲವು ಕಡೆ ದಾಹವನ್ನು ಕುರಿತು ವಹ್ನಿ ಕಾರಣ ; ಕೆಲವು ಕಡೆ ಮಣ್ಯಭಾವ ಕಾರಣ. ಹೀಗೆ ಎರಡು ಕಾರಣಗಳನ್ನು ಕಲ್ಪಿಸುವುದಕ್ಕಿಂತ ಒಂದೇ ಶಕ್ತಿಗೆ ಕಾರಣತ್ವವನ್ನು ಕಲ್ಪಿಸುವುದು ಲಾಘವವಲ್ಲವೇ ಎಂದು ಪ್ರಾಭಾಕರನು ಕೇಳಿದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಅನೇನೈವ'—ಇತಿ. ಮಣ್ಯಭಾವ ರೂಪದಿಂದ ಕಾರಣತ್ವವನ್ನು ಕಲ್ಪಿಸುವುದು ಸಮಂಜಸವಲ್ಲದೆ ಶಕ್ತಿತ್ವರೂಪದಿಂದ ಕಾರಣ ವೆಂದು ಕಲ್ಪಿಸುವುದು ಉಚಿತವಲ್ಲ. ಅನಂತಶಕ್ತಿಗಳನ್ನು ನಿನ್ನ ಮತದಲ್ಲಿ ಕಲ್ಪಿಸ ಬೇಕಾಗುತ್ತದೆ. ಮಣಿ ಇರುವಾಗ ಅದರ ಧ್ವಂಸಪ್ರಾಗಭಾವಗಳನ್ನೂ ಮಣಿ ಇಲ್ಲದಿರು ವಾಗ ಪುನಃ ಉತ್ಪತ್ತಿಯನ್ನೂ ಕಲ್ಪಿಸಬೇಕು. ಹೀಗೆ ಉತ್ಪತ್ತಿನಾಶಗಳನ್ನು ಕಲ್ಪಿಸುತ್ತಾ ಹೋದರೆ ಅದಕ್ಕೆ ಅಂತ್ಯ ಎಲ್ಲಿ ? ಶಕ್ತಿಯು ಅತಿರಿಕ್ತಪದಾರ್ಥವಾಗದಿದ್ದರೆ ಪ್ರತಿಬಂಧಕ ಮಣಿ ಇರುವಾಗ ಉತ್ತೇಜಕಮಣಿಯೂ ಇರುವಾಗ ದಾಹವುಂಟಾಗುವುದು ಹೇಗೆ ? ಎಂದು ಪ್ರಭಾಕರನು ಕೇಳಬಹುದು. ಅದಕ್ಕೆ ಸಮಾಧಾನ ಹೇಳುತ್ತಾನೆ. 'ನಚ'— ಇತಿ. ನಾವು ಕೇವಲ ಚಂದ್ರಕಾಂತಾದಿಮಣಿಗೆ ಪ್ರತಿಬಂಧಕತ್ವವನ್ನು ಹೇಳುವುದಿಲ್ಲ. ಉತ್ತೇಜಕಾಭಾವದಿಂದ ಕೂಡಿದ ಮಣಿಯು ಪ್ರತಿಬಂಧಕವೆನ್ನುತ್ತೇವೆ. ಆದುದರಿಂದ ಉತ್ತೇಜಕವಿರುವಾಗ ಪ್ರತಿಬಂಧಕಮಣಿ ಇದ್ದರೂ ದಾಹವಾಗುತ್ತದೆ.

ವಿಶಿಷ್ಟಾಭಾವವೆಂಬುದು ಮೂರು ರೀತಿಯಾಗಿರುತ್ತದೆ. ವಿಶೇಷಣಾಭಾವ ಪ್ರಯುಕ್ತವಿಶಿಷ್ಟಾಭಾವ ; ವಿಶೇಷ್ಯಾಭಾವಪ್ರಯುಕ್ತವಿಶಿಷ್ಟಾಭಾವಃ ವಿಶೇಷಣ ವಿಶೇಷ್ಯೋಭಯಾಭಾವಪ್ರಯುಕ್ತವಿಶಿಷ್ಟಾಭಾವಃ, 'ದಂಡೀ ಪುರುಷಃ ನಾಸ್ತಿ' ಇಲ್ಲಿ ವಿಶಿಷ್ಟಾಭಾವ ಹೇಳಿದೆ. ದಂಡವಿಶಿಷ್ಟಪುರುಷನು ಇಲ್ಲವೆಂಬಲ್ಲಿ ವಿಶೇಷ್ಯ ಪುರುಷ. ದಂಡವಿಶಿಷ್ಟತ್ವ ವಿಶೇಷಣ. ( ದಂಡ ) ದಂಡವೂ, ಪುರುಷನೂ ಇಲ್ಲವೆಂದರೆ ವಿಶೇಷಣ, ವಿಶೇಷ್ಯಉಭಯಾಭಾವಪ್ರಯುಕ್ತ ವಿಶಿಷ್ಟಾಭಾವವಾಗುತ್ತದೆ. ದಂಡವಿಲ್ಲದೆ ಕೇವಲ ಪುರುಷನಿದ್ದರೂ, 'ದಂಡೀ ಪುರುಷಃ ನಾಸ್ತಿ' ಎಂಬ ಪ್ರಯೋಗವಿದೆ. ಅಲ್ಲಿ ವಿಶೇಷಣಾ ( ದಂಡ ) ಭಾವಪ್ರಯುಕ್ತವಿಶಿಷ್ಟಾಭಾವವಾಗುತ್ತದೆ- ಹೀಗೆಯೇ ದಂಡವಿದ್ದು ಪುರುಷನಿಲ್ಲದಿದ್ದರೂ 'ದಂಡೀಪು....ಸ್ತಿ' ಎನ್ನುತ್ತಾರೆ. ಇಲ್ಲಿ ವಿಶೇಷ್ಯಾ ( ಪುರುಷ ) ಭಾವಪ್ರಯುಕ್ತವಿಶಿಷ್ಟಾಭಾವವಾಗುತ್ತದೆ. ಪ್ರಕೃತ ಉತ್ತೇಜಕಾಭಾವವಿಶಿಷ್ಟಮಣ್ಯ ಭಾವ ಕಾರಣವೆಂದುದರಿಂದ ವಿಶಿಷ್ಟಾಭಾವವಾಗುತ್ತದೆ. ಮಣಿ ಇರುವಾಗ ಉತ್ತೇಜಕವೇ ಇದ್ದರೆ ವಿಶೇಷಣಾಭಾವಪ್ರಯುಕ್ತ ವಿಶಿಷ್ಟಾಭಾವ ಬಂದಂತಾಗುತ್ತದೆ.

ಉತ್ತೇಜಕಾಭಾವ ವಿಶೇಷಣ. ಉತ್ತೇಜಕವಿರುವಾಗ ಉತ್ತೇಜಕಾಭಾವವಿರುವುದಿಲ್ಲ. ವಿಶೇಷಣಾಭಾವ ಅಂದರೆ ಉತ್ತೇಜಕಾಭಾವಾಭಾವ ಅಂದರೆ ಉತ್ತೇಜಕವೇ ಆಗುತ್ತದೆ. ಉತ್ತೇಜಕವಿರುವಾಗ ಮಣಿ ಇದ್ದರೂ ವಿಶಿಷ್ಟಾಭಾವ (ಉತ್ತೇಜಕಾಭಾವವಿಶಿಷ್ಟಮಣ್ಯಭಾವ ) ಬರುವುದರಿಂದ ದಾಹವುಂಟಾಗುತ್ತದೆ.

ಸಾದೃಶ್ಯವು ಅತಿರಿಕ್ತಪಧಾರ್ಥವಲ್ಲವೆಂದು ತೋರಿಸುತ್ತಾನೆ. 'ಸಾದೃಶ್ಯ'—ಇತಿ. ಸಾದೃಶ್ಯವು ಕೂಡಾ ಸ್ವತಂತ್ರವಾಗಿ ಒಂದು ಪದಾರ್ಥವಲ್ಲ. 'ತದ್ಭಿನ್ನತ್ವೇ ಸತಿ ತದ್ಗತಭೂಯೋ ಧರ್ಮವತ್ವಂ' ಸಾದೃಶ್ಯ. ತದ್ಭಿನ್ನತ್ವಂ—ತತ್‌ಪ್ರತಿಯೋಗಿಕ ಭೇಧವತ್ವಂ. ತದ್ಗತಭೂಯೋಧರ್ಮವತ್ವಂ—ಅದರಲ್ಲಿರುವ ಅನೇಕ ಧರ್ಮಗಳೆಂದರ್ಥ. ಚಂದ್ರನಂತೆ ಮುಖನೆಂದರೆ ಚಂದ್ರನ ಸಾದೃಶ್ಯ ಮುಖದಲ್ಲಿ ತೋರುತ್ತದೆ. ಮುಖ ಚಂದ್ರವಲ್ಲ. ಭೇದವತ್ವಂ—ಭೇದವೇ. ಅದು ಅನ್ಯೋನ್ಯಾಭಾವರೂಪವಾಗಿದೆ. ಚಂದ್ರಪ್ರತಿಯೋಗಿಕಭೇದ ಮುಖದಲ್ಲಿ ಬರುತ್ತದೆ. ಧರ್ಮವತ್ವಂ—ಧರ್ಮವೇ. ಇದು ಗುಣಕ್ರಿಯಾದಿರೂಪವೇ ಆಗಿರುತ್ತದೆ. ಘಟಸದೃಶಪಟವೆಂದರೆ, ಘಟದ ಸಾದೃಶ್ಯವು ಪಟದಲ್ಲಿ ತೋರುತ್ತದೆ. ಘಟಧರ್ಮವೆಂದರೆ ಇಲ್ಲಿ ಜಾತಿ. ಅದು ಕೆಲವು ಕಡೆ ಉಪಾಧಿರೂಪವಾಗಿರುತ್ತದೆ. 'ಯಥಾ ಗೋತ್ವಂ ನಿತ್ಯಂ ತಥಾ ಅಶ್ವತ್ವಮಪಿ' ಇಲ್ಲಿ ಉಪಾಧಿರೂಪದಿಂದ ಸಾಮ್ಯ. 'ಚಂದ್ರಸದೃಶಂ ಮುಖಂ' ಎಂಬಲ್ಲಿ ಆಹ್ಲಾದಕತ್ವಾದಿ ಧರ್ಮಗಳೇ ಸಾದೃಶ್ಯ. ಆಗ ಅವು ಗುಣರೂಪವಾಗುತ್ತವೆ. ಹೀಗೆ ಸಾದೃಶ್ಯವು ಧರ್ಮರೂಪವಾಗಿ ಉಕ್ತಪದಾರ್ಥದಲ್ಲಿಯೇ ಸೇರಿರುತ್ತದೆ.

**ಕ್ಷಿತ್ಯಪ್‌ತೇಜೋ ಮರುದ್ವ್ಯೋಮಕಾಲದಿಗ್‌ದೇಹಿನೋ ಮನಃ || ದ್ರವ್ಯಾಣಿ—**

**ದ್ರವ್ಯಾಣಿ ವಿಭಜತೇ—ಕ್ಷಿತ್ಯಬಿತಿ—ಕ್ಷಿತಿಃ—ಪೃಥಿವೀ, ಆಪೋ—ಜಲಾನಿ, ತೇಜೋ—ವಹ್ನಿಃ, ಮರುದ್—ವಾಯುಃ, ವ್ಯೋಮ–ಆಕಾಶಃ, ಕಾಲಃ—ಸಮಯಃ, ದಿಗ್—ಆಶಾ, ದೇಹೀ—ಆತ್ಮಾ, ಮನಃ, ಏತಾನಿ ನವ ದ್ರವ್ಯಾಣೀತ್ಯರ್ಥಃ । ನನುದ್ರವ್ಯತ್ವಜಾತೌ ಕಿಂ ಮಾನಮ್ । ನಹಿ ತತ್ರ ಪ್ರತ್ಯಕ್ಷಂ ಪ್ರಮಾಣಂ ಘೃತಜತುಪ್ರಭೃತಿಷು ದ್ರವ್ಯತ್ವಾಗ್ರಹಾದಿತಿ ಚೇನ್ನ, ಕಾರ್ಯ ಸಮವಾಯಿ ಕಾರಣತಾವಚ್ಛೇದಕತಯಾ ತತ್ಸಿದ್ಧೇರಿತಿ||**

'ಗುಣಕ್ರಿಯಾವತ್ವಂ' ಅಥವಾ 'ಸಮವಾಯಿಕಾರಣತ್ವಂ, ದ್ರವ್ಯದ ಸಾಮಾನ್ಯ ಲಕ್ಷಣ. ಸಮವಾಯಸಂಬಂಧದಿಂದ ಗುಣಕ್ರಿಯಾಉಳ್ಳದು ದ್ರವ್ಯ. ಇದು ಯಾವುದಕ್ಕಾದರೂ ಸಮವಾಯಿಕಾರಣ ಆಗಿಯೇ ಇರುವುದರಿಂದ 'ಸಮವಾಯಿಕಾರಣತ್ವಂ' ಎಂಬುದೂ ಸಾಮಾನ್ಯಲಕ್ಷಣವಾಗುತ್ತದೆ. ಅದನ್ನು ಈಗ ವಿಭಾಗಿಸುತ್ತಾನೆ. 'ಸ್ವಸಮ

ಭಿವ್ಯಾಹೃತಪದಾರ್ಥತಾವಚ್ಛೇದಕಧರ್ಮವ್ಯಾಪ್ಯಮಿಥೋವಿರುದ್ಧಯಾವದ್ಧರ್ಮಪ್ರಕಾರಕ ಜ್ಞಾನಾನುಕೂಲವ್ಯಾಪಾರಃ' ವಿಪೂರ್ವಕಭಜಧಾತ್ವರ್ಥ. ಸ್ವಂ—ವಿಪೂರ್ವಕಭಜ ಧಾತು (ವಿಭಜತೇ) ತತ್ಸಮಭಿವ್ಯಾಹೃತ—ಅದರೊಡನೆ ಹೇಳಿರುವ ಪದ—ದ್ರವ್ಯಪದ, ತದರ್ಥತಾವಚ್ಛೇದಕಧರ್ಮಃ—ಅಲ್ಲಿ ಪ್ರಕಾರ (ವಿಶೇಷಣ)ವಾಗಿ ತೋರುವ ಧರ್ಮ—ದ್ರವ್ಯತ್ವರೂಪವಾದ ಧರ್ಮ, ತದ್ವ್ಯಾಪ್ಯಾಃ – ದ್ರವ್ಯತ್ವನಿಷ್ಠವ್ಯಾಪಕತಾನಿರೂಪಿತ ವ್ಯಾಪ್ಯತಾಶ್ರಯಾಃ (ದ್ರವ್ಯತ್ವದಿಂದ ವ್ಯಾಪ್ಯವಾಗಿರುವ) ಮಿಥೋ ವಿರುದ್ಧಾಃ—ಪರಸ್ಪರ ಅಸಾಮಾನಾಧಿಕರಣಗಳಾದ (ಪೃಥಿವೀತ್ವ ಇದ್ದಲ್ಲಿ ಜಲತ್ವ ಇಲ್ಲ. ಹೀಗೆ ಒಂದು ಆಶ್ರಯದಲ್ಲಿ ಇಲ್ಲದಿರುವ) ಯೇ ಧರ್ಮಾಃ—ಯಾವ ಧರ್ಮಗಳಿವೆಯೋ, ತತ್ಪ್ರಕಾರಕಂ ಯಜ್ಜ್ಞಾನಂ—ಅದೇ ಪ್ರಕಾರವಾಗಿರುವ ಯಾವ ಜ್ಞಾನವಿದೆಯೋ (ಪೃಥಿವೀ ಇತ್ಯಾದಿ) ತದನುಕೂಲಃ ತಜ್ಜನಕಃ—ಅದನ್ನು ಹುಟ್ಟಿಸುವ ವ್ಯಾಪಾರಃ—ವಾಕ್ಯಪ್ರಯೋಗ ರೂಪ ವಾದ ವ್ಯಾಪಾರ. ಇದಕ್ಕೆ ವಿಭಾಗವೆಂದು ಹೆಸರು. ಕ್ಷಿತ್ಯಾದಿಗಳ ಅರ್ಥವನ್ನು ತೋರಿಸು ತ್ತಾನೆ. 'ಕ್ಷಿತಿಃ—ಪೃಥಿವೀ'—ಇತಿ.

ದ್ರವ್ಯತ್ವಜಾತಿಯನ್ನು ಸಾಧಿಸಲು ಮೊದಲು ಆಶಂಕಿಸುತ್ತಾನೆ. 'ನನು'—ಇತಿ. ದ್ರವ್ಯತ್ವವೆಂಬುದು ಜಾತಿ ಎಂಬುದರಲ್ಲಿ ಪ್ರಮಾಣವೇನು ? ಎಂಬ ಪ್ರಶ್ನೆಯಲ್ಲಿ 'ಕಿಂ' ಶಬ್ದ ಹೇಳಿದೆ. 'ದ್ರವ್ಯಂ ದ್ರವ್ಯಂ' ಎಂಬ ಅನುಗತಪ್ರತೀತಿಯೇ ದ್ರವ್ಯತ್ವಜಾತಿಯಲ್ಲಿ ಪ್ರಮಾಣ ಎಂದರೆ ತಪ್ಪೇನು ? ಅಂದರೆ ಪ್ರತ್ಯಕ್ಷಪ್ರಮಾಣದಿಂದ ದ್ರವ್ಯತ್ವಜಾತಿ ತಿಳಿಯಲು ಸಾಧ್ಯವಿಲ್ಲ. ಅದನ್ನೇ 'ನಹಿ'—ಎಂಬ ವಾಕ್ಯದಿಂದ ವಿವರಿಸುತ್ತಾನೆ. ಸಾಮಾನ್ಯ ಜನರಿಗೆ ಮೊಸರು, ಅರಗು ಮುಂತಾದ ಪದಾರ್ಥಗಳಲ್ಲಿ ದ್ರವ್ಯತ್ವಜಾತಿ ಇದೆಯೆಂದು ತಿಳಿಯುವುದಿಲ್ಲ. ಆದುದರಿಂದ ದ್ರವ್ಯತ್ವವು ಪ್ರತ್ಯಕ್ಷದಿಂದ ತಿಳಿಯಲ್ಪಡು ವುದಿಲ್ಲ. ಇತಿಚೇತ್—ಹೀಗೆ ಆಶಂಕಿಸಿದರೆ, ನ—ಅದು ಸರಿಯಲ್ಲವೆಂದು ಉತ್ತರ ತೋರಿಸುತ್ತಾನೆ. 'ಕಾರ್ಯ'—ಇತಿ. ಕಾರ್ಯಕ್ಕೆ ಸಮವಾಯಿಕಾರಣ ತಾವಚ್ಛೇದಕರೂಪದಿಂದ ದ್ರವ್ಯತ್ವವೆಂಬ ಜಾತಿ ಸಿದ್ಧವಾಗುತ್ತದೆ. 'ಸತ್ವೇ ಸತಿ ಪ್ರಾಗ ಭಾವಪ್ರತಿಯೋಗಿತ್ವಂ' ಕಾರ್ಯತ್ವಂ' ಎಂದು ಕಾರ್ಯದಲಕ್ಷಣ. ಘಟಕಾರ್ಯ. ಸತ್ವ ಅದರಲ್ಲಿದೆ. ಪ್ರಾಗಭಾವಕ್ಕೆ ಪ್ರತಿಯೋಗಿಯೂ ಆಗಿದೆ. ಎಲ್ಲಿ ಸಮವಾಯದಿಂದ ಕಾರ್ಯವಿದೆಯೋ ಅಲ್ಲಿ ತದಾತ್ಮ್ಯಸಂಬಂಧದಿಂದ ದ್ರವ್ಯವಿದೆ. ಇದು ಸಾಮಾನ್ಯ ನಿಯಮ. ಆಗ ಅನುಮಾನ. ಸಮವಾಯಸಂಬಂಧಾವಚ್ಛಿನ್ನ ಕಾರ್ಯತ್ವಾವಚ್ಛಿನ್ನ ಕಾರ್ಯತಾನಿರೂಪಿತ ತಾದಾತ್ಮ್ಯಸಂಬಂಧಾವಚ್ಛಿನ್ನ ಕಾರಣತಾಕಿಂಚಿದ್ಧರ್ಮಾ ವಚ್ಛಿನ್ನಾ—ಕಾರಣತಾತ್ವಾತ್ । ದಂಡನಿಷ್ಠಘಟಕಾರಣತಾವತ್. ಘಟವನ್ನು ಕುರಿತು ದಂಡಕಾರಣ. ಕಾರಣತಾ ಅದರಲ್ಲಿದೆ. ಘಟಕಾರ್ಯ. ಘಟತ್ವಾವಚ್ಛಿನ್ನ ಕಾರ್ಯತಾನಿರೂಪಿತ ದಂಡನಿಷ್ಠಕಾರಣತಾ, ದಂಡತ್ವಾವಚ್ಛಿನ್ನವಾಗಿದೆ. ಕಾರಣತಾವ ಚ್ಛೇದಕ ದಂಡತ್ವ. ಅದರಂತೆ ಇಲ್ಲಿಯೂ ಕಾರ್ಯತಾನಿರೂಪಿತಕಾರಣತಾ ದ್ರವ್ಯ ದಲ್ಲಿದೆ. ಕಾರ್ಯವನ್ನು ಕುರಿತು ದ್ರವ್ಯಕಾರಣವಷ್ಟೆ. ಕಾರಣದಲ್ಲಿರುವ ಕಾರಣತಾ

ಯಾವಾಗಲೂ ಒಂದು ಧರ್ಮದಿಂದ ಕೂಡಿರಲೇಬೇಕು. ಪ್ರಕೃತ ದ್ರವ್ಯದಲ್ಲಿರುವ (ನಿಷ್ಠ) ಕಾರಣತಾ ಎಂಬುದು ದ್ರವ್ಯತ್ವದಿಂದ ಕೂಡಿದೆ ಎಂದು ತಿಳಿಯಬೇಕು. ಕಾರಣತಾವಚ್ಛೇದಕ ದ್ರವ್ಯತ್ವವಾಗುತ್ತದೆ. 'ಕಿಂಚಿದ್ಧರ್ಮಾವಚ್ಛಿನ್ನತ್ವವ್ಯಾಪ್ಯ ಕಾರಣತಾತ್ವವತೀ. ಸಮವಾಯಸಂಬಂಧಾವಚ್ಛಿನ್ನಕಾರ್ಯತಾವಚ್ಛಿನ್ನಕಾರ್ಯತಾ ನಿರೂಪಿತ ತಾದಾತ್ಮ್ಯಸಂಬಂಧಾವಚ್ಛಿನ್ನಕಾರಣತಾ' ಎಂಬ ಪರಾಮರ್ಶದಿಂದ 'ತಾದೃಶ ಕಾರಣತಾ ಕಿಂಚಿದ್ಧರ್ಮಾವಚ್ಛಿನ್ನಾ' ಎಂಬ ಅನುಮಿತಿ ಬರುತ್ತದೆ. 'ಸೇತ್ಸ್ಯಮಾನಸ್ಯ ಧರ್ಮಸ್ಯ ನಿತ್ಯತ್ವೇ ಏಕತ್ವೇ, ಜಾತಿತ್ವೇ ಲಾಘವಂ' ಎಂಬ ಲಾಘವಜ್ಞಾನ ಸಹಕಾರ ದಿಂದ ನಿತ್ಯವಾದ ಏಕವಾದ ದ್ರವ್ಯತ್ವಜಾತಿ ಸಿದ್ಧವಾಗುತ್ತದೆ. ಅವಚ್ಛೇದಕರೂಪವಾಗಿ ದ್ರವ್ಯತ್ವಜಾತಿಸಿದ್ಧಿ. ಅವಚ್ಛಿದ್ಯತೇ—ವ್ಯಾವರ್ತ್ಯತೇ (ನಿರೂಪ್ಯತೇ, ನಿಯಮ್ಯತೇ) ಅನೇನ ಧರ್ಮೇಣ ಧರ್ಮೀ ಇತಿ ಅವಚ್ಛೇದಃ. ಅವಚ್ಛೇದ ಏವ ಅವಚ್ಛೇದಕಃ ಸ್ವಾರ್ಥ ದಲ್ಲಿ ಕ ಪ್ರತ್ಯಯ. ನಿಯಾಮಕವಾದ ಧರ್ಮವೇ ಅವಚ್ಛೇದಕ. ಇದು ಅನ್ಯೂನಾ ನತಿರಿಕ್ತವೃತ್ತಿಯಾಗಿರುತ್ತದೆ. ಪೃಥಿವಿಯಲ್ಲಿ ಪೃಥಿವೀತ್ವ ಅವಚ್ಛೇದಕ. ಪೃಥಿವೀತ್ವ ವಿರುವುದರಿಂದ ಪೃಥಿವಿಯಲ್ಲಿ ಜಲಾದಿವ್ಯಾವೃತ್ತಿಯುಂಟಾಗುತ್ತದೆ. ಇದು ಸಕಲ ಪೃಥಿವಿಗಳಲ್ಲಿಯೂ ಇರುತ್ತದೆ. ಅವಚ್ಛೇದಕೇನ ಯಃ ಅವಚ್ಛಿದ್ಯತೇ—ವ್ಯಾವರ್ತ್ಯತೇ ಧರ್ಮೀ ಸಃ ತದವಚ್ಛಿನ್ನಃ. ಪೃಥಿವೀತ್ವದಿಂದ ಪೃಥಿವಿಯು ಅವಚ್ಛಿನ್ನವಾಗಿದೆ.

ಹಿಂದಿನ ಅನುಮಾನದಿಂದ ದ್ರವ್ಯದಲ್ಲಿರುವ ಕಾರಣತಾ ಎಂಬುದು ಒಂದು ಧರ್ಮ ದಿಂದ ಕೂಡಿದೆಯೆಂದೂ, ಆ ಧರ್ಮವೇ ದ್ರವ್ಯತ್ವವೆಂದೂ ಅದು ನಿತ್ಯವೂ ಜಾತಿರೂಪ ವೆಂದೂ ಸಿದ್ಧವಾಗುತ್ತದೆ. ಈ ಅನುಮಾನದಲ್ಲಿ ಕಾರ್ಯತಾ(ವಚ್ಛೇದಕ) ಗುರುಧರ್ಮಾ ವಚ್ಛಿನ್ನವಾಗುವುದರಿಂದ ಅಸ್ವಾರಸ್ಯ ಬರುತ್ತದೆ. ಪ್ರಾಗಭಾವಪ್ರತಿಯೋಗಿತ್ವಂ ಕಾರ್ಯತ್ವಂ ಇದು ಗುರುಧರ್ಮ. ಕೇವಲ ಕಾರ್ಯತ್ವಾವಚ್ಛಿನ್ನಕಾರ್ಯತಾ ಎಂದರೆ ಅವಚ್ಛೇದ್ಯ ಅವಚ್ಛೇದಕ ಎರಡೂ ಒಂದಾಗುವುದರಿಂದ ಅಸಂಬದ್ಧಪ್ರಲಾಪವಾದೀತು. ಕಾರ್ಯತೇ (ಅವಚ್ಛೇದ್ಯ)ಯಲ್ಲಿ ಅವಚ್ಛೇದಕವೂ ಕಾರ್ಯತ್ವವೇ ಆದಂತಾಗುತ್ತದೆ. ಲೋಕದಲ್ಲಿ ಅವಚ್ಛೇದಕವೇ ಬೇರೆ, ಅವಚ್ಛೇದ್ಯವೇ ಬೇರೆಯಾಗಿರುತ್ತದೆ. ಗಂಧವತ್ವಂ (ಗಂಧಃ) ಅವಚ್ಛೇದಕವಾದರೆ ಪೃಥಿವೀ ಅವಚ್ಛೇದ್ಯ. ಆದುದರಿಂದ ಕಾರ್ಯತ್ವವನ್ನು ಪ್ರಾಗಭಾವಪ್ರತಿಯೋಗಿತ್ವರೂಪವಾಗಿ ಹೇಳಬೇಕು. ಹೀಗೆ ಹೇಳಿದರೆ ಗೌರವ. ಅದಕ್ಕೋಸ್ಕರ ಬೇರೆ ಕಾರ್ಯಕಾರಣಭಾವ ತೋರಿಸಿರುತ್ತಾನೆ. 'ಸಮವಾಯಸಂಬಂಧಾ ವಚ್ಛಿನ್ನ ಸಂಯೋಗತ್ವಾವಚ್ಛಿನ್ನ ಸಂಯೋಗನಿಷ್ಠಕಾರ್ಯತಾನಿರೂಪಿತ ತಾದಾತ್ಮ್ಯ ಸಂಬಂಧಾವಚ್ಛಿನ್ನ ದ್ರವ್ಯನಿಷ್ಠಕಾರಣತಾ-ಕಿಂಚಿದ್ಧರ್ಮಾವಚ್ಛಿನ್ನಾ—ಕಾರಣತಾತ್ವಾತ್'॥ ಸಮವಾಯದಿಂದ ಸಂಯೋಗರೂಪ ಕಾರ್ಯವನ್ನು ಕುರಿತು ದ್ರವ್ಯವು ತಾದಾತ್ಮ್ಯದಿಂದ ಕಾರಣ. ಹಿಂದಿನಂತೆ ಕಾರಣತಾ ಎಂದಮೇಲೆ ಅದು ಒಂದು ವ್ಯಾವರ್ತಕಧರ್ಮದಿಂದ ಕೂಡಿರಬೇಕು. (ದಂಡದಲ್ಲಿರುವ ಘಟಕಾರಣತೆಯಂತೆ.) ಆ ಧರ್ಮವೇ ಜಾತಿರೂಪ ವಾದ ದ್ರವ್ಯತ್ವ. ಇಲ್ಲಿ ಕಾರ್ಯತ್ವ, ಸಂಯೋಗತ್ವ ಭಿನ್ನವಾಗಿವೆ. ಅವಚ್ಛೇದಕ

ವಾದ ಸಂಯೋಗತ್ವದಿಂದ ಅವಚ್ಛೇದ್ಯವಾದ ಕಾರ್ಯತಾ ಅವಚ್ಛಿನ್ನವಾಗಿದೆ. ಆದುದ ರಿಂದ ಪೂರ್ವೋಕ್ತದೋಷಕ್ಕೆ ಅವಕಾಶವಿಲ್ಲ. ಆದರೂ ವಿಭುದ್ವಯ ಸಂಯೋಗ ನಿತ್ಯ ವಾದುದರಿಂದ ಅದು ಹುಟ್ಟುವುದಿಲ್ಲ. ಆತ್ಮಾ ಆಕಾಶ ಇವೆರಡೂ ವಿಭು ಪದಾರ್ಥಗಳು. ಇವುಗಳ ಸಂಯೋಗ ನಿತ್ಯವಾದುದರಿಂದ ಸಂಯೋಗತ್ವಾವಚ್ಛಿನ್ನ ಸಂಯೋಗನಿಷ್ಠ ಕಾರ್ಯತಾ ಇಲ್ಲಿ ಬರುವುದಿಲ್ಲ. ನಿತ್ಯಸಂಯೋಗಾವನ್ನಂಗೀಕರಿಸಿದಾಗ ಈ ಅನುಪಪತ್ತಿ. ಸಂಯೋಗದಲ್ಲಿ ಕಾರ್ಯತಾ ಬರಬೇಕಾದರೆ ಅದು ಹುಟ್ಟಬೇಕು. ಅದಕ್ಕೋಸ್ಕರ ವಿಭಾಗ ಪರ್ಯಂತ ಮೂರನೇ ಕಾರ್ಯಕಾರಣಭಾವ ತೋರಿಸಿರುತ್ತಾನೆ. 'ಸಮವಾಯಸಂಬಂಧಾ ವಚ್ಛಿನ್ನವಿಭಾಗತ್ವಾವಚ್ಛಿನವಿಭಾಗನಿಷ್ಠಕಾರ್ಯತಾನಿರೂಪಿತತಾದಾತ್ಮ್ಯಸಂಬಂಧಾವಚ್ಛಿನ್ನ ದ್ರವ್ಯನಿಷ್ಠಕಾರಣತಾ—ಕಿಂಚಿದ್ಧರ್ಮಾವಚ್ಛಿನ್ನಾ—ಕಾರಣತಾತ್ವಾತ್ ॥ ವಿಭಾಗ ಎಂದೂನಿತ್ಯವಲ್ಲ. ವಿಭಾಗರೂಪಕಾರ್ಯಕ್ಕೆ ದ್ರವ್ಯ ಕಾರಣ. ಇದರಲ್ಲಿ ಕಾರಣತಾ ಇದೆ. ಅದು ಒಂದು ಧರ್ಮದಿಂದ ಕೂಡಿರಬೇಕು. ಆ ಧರ್ಮವೇ ದ್ರವ್ಯತ್ವ. ಇದು ಜಾತಿ. ಹೀಗೆ ಕಾರಣತಾವಚ್ಛೇದಕ ರೂಪವಾಗಿ ದ್ರವ್ಯತ್ವ ಜಾತಿ ಸಿದ್ಧವಾಗುತ್ತದೆ. ಯದ್ಯಪಿ ಘಟ ಪಟಾದಿಗಳಲ್ಲಿ ದ್ರವ್ಯತ್ವಜಾತಿ ಪ್ರತ್ಯಕ್ಷದಿಂದ ಗೃಹೀತವಾದರೂ ಘೃತ ಮುಂತಾದ ದ್ರವ್ಯ ಗಳು ಆಗಾಗ ನಾನಾರೂಪ ಹೊಂದುವುದರಿಂದ ಅವುಗಳಲ್ಲಿ ದ್ರವ್ಯತ್ವವಿದೆಯೆಂದು ಸಾಮಾನ್ಯರಿಗೆ ತಿಳಿಯಲಾರದು. ಅದಕ್ಕೋಸ್ಕರ ಅನುಮಾನದಿಂದ ದ್ರವ್ಯತ್ವಜಾತಿ ಯನ್ನು ಸಾಧಿಸಿರುತ್ತಾನೆ.

**ನನು—ದಶಮಂ ದ್ರವ್ಯಂ ತಮಃ ಕುತೋನೋಕ್ತಂ ತದ್ಧಿ ಪ್ರತ್ಯ ಕ್ಷೇಣ ಗೃಹ್ಯತೇ, ತಸ್ಯ ಚ ರೂಪವತ್ತ್ವಾತ್ ಕರ್ಮವತ್ತ್ವಾಚ್ಚ ದ್ರವ್ಯ ತ್ವಮ್ ॥ ತದ್ಧಿ—ಗಂಧಶೂನ್ಯತ್ವಾನ್ನ ಪೃಥಿವೀ, ನೀಲರೂಪವತ್ತ್ವಾಚ್ಚ ನ ಜಲಾದಿಕಂ, ತತ್ಪ್ರತ್ಯಕ್ಷೇ ಚಾಲೋಕನಿರಪೇಕ್ಷಂ ಚಕ್ಷುಃ ಕಾರಣಮಿತಿ ಚೇನ್ನ—ಆವಶ್ಯಕತೇಜೋಭಾವೇನೈವೋಪಪತ್ತೌ ದ್ರವ್ಯಾಂತರಕಲ್ಪ ನಾಯಾ ಅನ್ಯಾಯ್ಯತ್ವಾತ್ । ರೂಪವತ್ತಾಪ್ರತೀತಿಸ್ತು ಭ್ರಮರೂಪಾ ಕರ್ಮವತ್ತಾಪ್ರತೀತಿರಪ್ಯಾಲೋಕಾಪಸಾರಣೌಪಾಧಿಕೀ ಭ್ರಾಂತಿರೇವ । ತಮಸೋಽತಿರಿಕ್ತತ್ವೇಽನಂತಾವಯವಾದಿಕಲ್ಪನಾಗೌರವಂ ಚ ಸ್ಯಾತ್ । ಸ್ವರ್ಣಸ್ಯ ಯಥಾ ತೇಜಸ್ಯಂತರ್ಭಾವಸ್ತಥಾ ವಕ್ಷ್ಯತೇ ॥**

ಕತ್ತಲೆಯು ಹತ್ತನೆಯ ದ್ರವ್ಯವೆಂದು ಮೀಮಾಂಸಕಮತ. ಅದನ್ನು ತೋರಿಸು ತ್ತಾನೆ. 'ನನು'—ಇತಿ. ಕತ್ತಲೆಯನ್ನು ಹತ್ತನೆಯ ದ್ರವ್ಯವೆಂದು ಏಕೆ ಹೇಳಲಿಲ್ಲ. 'ತದ್ಧಿ—ಎಂಬುದರಿಂದ ಅದು ಇದೆಯೆಂಬುದರಲ್ಲಿ ಪ್ರತ್ಯಕ್ಷ ಪ್ರಮಾಣವನ್ನು ತೋರಿಸು ತ್ತಾನೆ. ಈ ಕತ್ತಲೆಯಾದರೋ ಸಾಕ್ಷಾತ್ ಕಣ್ಣಿನಿಂದಲೇ ಗ್ರಹಿಸಲ್ಪಡುತ್ತದೆ. ಕತ್ತಲೆ ಇದೆಯೆಂಬುದರಲ್ಲಿ ಚಕ್ಷುರಿಂದ್ರಿಯವೇ ಪ್ರಮಾಣ. ಕತ್ತಲೆಯನ್ನು ನೋಡದಿರುವವರೇ

ಇಲ್ಲ. ಕತ್ತಲೆ ದ್ರವ್ಯವೆಂಬುದರಲ್ಲಿ ಪ್ರಮಾಣವೇನು ? ಎಂದರೆ—ಅದು ದ್ರವ್ಯವೆಂಬುದನ್ನು ತೋರಿಸುತ್ತಾನೆ ತಸ್ಯ—ಇತಿ. ಅನುಮಾನ ಪ್ರಮಾಣದಿಂದ ಅದು ದ್ರವ್ಯವೆಂದು ಸಿದ್ಧವಾಗುತ್ತದೆ. ರೂಪ, ಕ್ರಿಯಾದಿಗಳು ಕತ್ತಲೆಯಲ್ಲಿರುವುದರಿಂದ ಅದು ದ್ರವ್ಯವಾಗುತ್ತದೆ. ರೂಪಾದಿಗಳಿಂದ ಕೂಡಿರುವುದು ದ್ರವ್ಯ. "ತಮಃ—ದ್ರವ್ಯಂ—ರೂಪವತ್ತ್ವಾತ್, ಕರ್ಮವತ್ತ್ವಾತ್ (ಕ್ರಿಯಾವತ್ತ್ವಾತ್) ಘಟವತ್." ಘಟದಲ್ಲಿ ರೂಪವಿರುವುದರಿಂದ ಹೇಗೆ ದ್ರವ್ಯವೋ ಅದರಂತೆ ತಮಸ್ಸೂ ರೂಪವುಳ್ಳದ್ದಾದುದರಿಂದ ದ್ರವ್ಯವಾಗುತ್ತದೆ. 'ತಮಃ—ದ್ರವ್ಯಂ—ಪರತ್ವಾಪರತ್ವಾದ್ಯಾಶ್ರಯತ್ವಾತ್' ಇತ್ಯಾದಿ ಅನುಮಾನಗಳೂ ಪ್ರಮಾಣಗಳಾಗುತ್ತವೆ. ಕತ್ತಲೆಯಲ್ಲಿ ರೂಪವಿದೆಯೆಂದು ಹೇಗೆ ನಿಶ್ಚಯ ? 'ನೀಲಂ ತಮಃ' ಕತ್ತಲೆಕಪ್ಪಾಗಿದೆ ಇತ್ಯಾದಿ ಪ್ರತೀತಿ ಇದ್ದರೂ ಅದು ಭ್ರಾಂತಿ ಏಕಾಗಬಾರದು? ಎಂದು ಆಕ್ಷೇಪಿಸಿದರೆ 'ಕರ್ಮವತ್ತ್ವಾತ್' ಎಂದು ಎರಡನೇ ಹೇತು ಹೇಳಿದೆ. 'ನೀಲಂ ತಮಶ್ಚಲತಿ' ಕಪ್ಪಾದ ಕತ್ತಲೆ ಚಲಿಸುತ್ತದೆ ಎಂದು ಬಾಲಕನೂ ತಿಳಿಯುವುದರಿಂದ ಕತ್ತಲೆಯಲ್ಲಿ ಕ್ರಿಯೆ (ಚಲನ) ತೋರುವುದು ಭ್ರಾಂತಿಯಲ್ಲ. ತಮಸ್ಸು ದ್ರವ್ಯವಾದರೂ ಉಕ್ತವಾದ ಪೃಥಿವ್ಯಾದಿಗಳಲ್ಲಿಯೇ ಇದು ಸೇರುತ್ತದೆ ಎಂದರೆ ಆಗ ಅತಿರಿಕ್ತ ಕಲ್ಪನೆ ಮಾಡಬೇಕಾಗಿಲ್ಲ. ಲಾಘವ ಬರುವುದಿಲ್ಲವೇ ? ಎಂದು ಶಂಕಿಸಿದರೆ ಅದು ಪೃಥಿವ್ಯಾದಿಗಳಲ್ಲಿ ಸೇರುವುದಿಲ್ಲವೆಂದು ತೋರಿಸುತ್ತಾನೆ. 'ತದ್ಧಿ'—ಇತಿ. 'ತಮಃ—ನ ಪೃಥಿವೀ—ಗಂಧ—ಶೂನ್ಯತ್ವಾತ್' ಅದು ಗಂಧವಿಲ್ಲದಿರುವುದರಿಂದ ಪೃಥಿವಿಯಾಗಲಾರದು. 'ತಮಃ—ನ ಜಲಾದಿಕಂ—ನೀಲರೂಪವತ್ತ್ವಾತ್' ನೀಲರೂಪವಿರುವುದರಿಂದ ಜಲಾದಿ ಎಂಟು ದ್ರವ್ಯಗಳಾಗುವುದಿಲ್ಲ. 'ಗಂದ ಶೂನ್ಯತ್ವಾತ್' ಹೇತುವನ್ನು ಪ್ರತಿಯೋಗಿವ್ಯಧಿಕರಣ ಗಂಧತ್ವಾವಚ್ಛಿನ್ನ ಪ್ರತಿಯೋಗಿತಾಕಾಭಾವವತ್ತ್ವಾತ್' ಎಂದು ಪರಿಷ್ಕರಿಸಬೇಕು. ಇಲ್ಲವಾದರೆ ಪೃಥಿವೀತ್ವರೂಪ ಸಾಧ್ಯಾಭಾವವಿರುವ ಆದ್ಯಕ್ಷಣದಲ್ಲಿರುವ ಘಟದಲ್ಲಿ ಗಂಧವಿಲ್ಲದಿರುವುದರಿಂದ ವ್ಯಭಿಚಾರ ಬರುತ್ತದೆ. ಉತ್ಪನ್ನವಿನಷ್ಟಘಟದಲ್ಲಿ ವ್ಯಭಿಚಾರವಾರಣೆಗೋಸ್ಕರ ಪ್ರತಿಯೋಗಿವ್ಯಧಿಕರಣವೆಂದು ಸೇರಿಸಬೇಕು. ಗಂಧಾಭಾವವು ಪ್ರತಿಯೋಗಿ ವ್ಯಧಿಕರಣವಾಗುವುದಿಲ್ಲ. ಪ್ರಥಮ ಕ್ಷಣದಲ್ಲಿ ಗಂಧವಿಲ್ಲದಿದ್ದರೂ ದ್ವಿತೀಯ ಕ್ಷಣದಲ್ಲಿ ಇದ್ದೇ ಇರುತ್ತದೆ.

ಕತ್ತಲೆ ರೂಪವುಳ್ಳದ್ರವ್ಯವಾದರೆ ದ್ರವ್ಯಸಾಮಾನ್ಯಪ್ರತ್ಯಕ್ಷವನ್ನು ಕುರಿತು ಆಲೋಕಸಹಕೃತ ಚಕ್ಷುರಿಂದ್ರಿಯವು ಕಾರಣವಾದುದರಿಂದ ಕತ್ತಲೆಯೂ ಆಲೋಕಸಹಕೃತ ಚಕ್ಷುರಿಂದ್ರಿಯದಿಂದ ಗ್ರಹಿಸಲ್ಪಡುವುದಿಲ್ಲವೇಕೆ ? ಘಟವನ್ನು ನೋಡಬೇಕಾದರೆ ಕೇವಲ ಕಣ್ಣಿದ್ದರೆ ಸಾಲದು. ಬೆಳಕೂ ಬೇಕು. ಬೆಳಕಿನಸಹಕಾರದಿಂದ ಕಣ್ಣು ಘಟವನ್ನು ನೋಡುತ್ತದೆ. ಹಾಗೆ ಕತ್ತಲೆಯುಪ್ರತ್ಯಕ್ಷವೂ ಆಗಬೇಕಲ್ಲವೇ ? ಎಂದರೆ—ಕತ್ತಲೆಯ ಪ್ರತ್ಯಕ್ಷದಲ್ಲಿ ಮಾತ್ರ ಈ ನಿಯಮವಿಲ್ಲವೆಂದು ತೋರಿಸುತ್ತಾನೆ. ತತ್ಪ್ರತ್ಯಕ್ಷೇ—ಇತಿ. ಕತ್ತಲೆಯ ಪ್ರತ್ಯಕ್ಷದಲ್ಲಿ ಮಾತ್ರ ಆಲೋಕನಿರಪೇಕ್ಷವಾದ (ಕೇವಲ) ಚಕ್ಷುಸ್ಸು ಕಾರಣ. ಆಗ 'ತಮೋಭಿನ್ನದ್ರವ್ಯಚಾಕ್ಷುಷಪ್ರತ್ಯಕ್ಷೇ ಆಲೋಕಸಹಕೃತಂ ಚಕ್ಷು

ರಿಂದ್ರಿಯಂ ಕಾರಣಂ' ಎಂದು ನಿಯಮ ಹೇಳಬೇಕು. ಬೆಳಕಿನ ಸಹಕಾರವಿಲ್ಲದ ಕೇವಲ ಕಣ್ಣು ಕತ್ತಲೆಯನ್ನು ನೋಡುತ್ತದೆ. ತಮಃ ಖಲುಚಲಂ ನೀಲಂ ಪರಾಪರ ವಿಭಾಗವತ್ । ಪ್ರಸಿದ್ಧದ್ರವ್ಯವೈಧರ್ಮ್ಯಾನ್ನವಭ್ಯೋ ಭೇತ್ತುಮರ್ಹತಿ' ಎಂದು ಅವನ ವಾದ. ಹೀಗೆ ಕತ್ತಲೆಯು ಬೇರೊಂದು ದ್ರವ್ಯವೆಂದು ಮೀಮಾಂಸಕನು ಸಾಧಿಸಿದರೆ ಸಿದ್ಧಾಂತಿಯು 'ತನ್ನ'—ಎಂಬ ಗ್ರಂಥದಿಂದ ಅದನ್ನು ಖಂಡಿಸಿ ಅಭಾವದಲ್ಲಿ ಅಂತರ್ಭಾವ ತೋರಿಸುತ್ತಾನೆ. 'ಆವಶ್ಯಕ'—ಇತಿ. ಪ್ರೌಢಪ್ರಕಾಶವುಳ್ಳತೇಜಃ ಸಾಮಾನ್ಯಾಭಾವವೇ ತಮಸ್ಸು. ಪ್ರೌಢಪ್ರಕಾಶವೆಂದರೆ ಉಷ್ಣಸ್ಪರ್ಶದಿಂದಕೂಡಿದ ಭಾಸ್ವರಸ್ವರೂಪವುಳ್ಳದ್ದು. ಇಂತಹಪ್ರಕಾಶವುಳ್ಳ ಯಾವ ತೇಜಸ್ಸಿದೆಯೋ ? ಅದರ ಅಭಾವವೇ ಕತ್ತಲೆ. ಆಗ ಅದು ಅಭಾವರೂಪವಾಯಿತು. ಭಾವಪದಾರ್ಥವಲ್ಲ. ತೇಜೋಭಾವವೇ ಕತ್ತಲೆಯೆಂಬ ವ್ಯವಹಾರವು ಕೂಡುತ್ತಿರುವಾಗ ಇದೊಂದು ಬೇರೆ ದ್ರವ್ಯವೆಂದು ಕಲ್ಪಿಸುವುದರಲ್ಲಿ ಪ್ರಮಾಣವಿಲ್ಲ. ತೇಜೋಭಾವವೇ ಕತ್ತಲೆಯಾದರೆ 'ನೀಲಂ ತಮಃ' ಕಪ್ಪುಕತ್ತಲೆಯೆಂಬ ಪ್ರತೀತಿ ಹೇಗೆ ? ಅಭಾವಕ್ಕೆ ರೂಪವಿಲ್ಲವಷ್ಟೇ ? ಅಂದರೆ ಅದು ಭ್ರಾಂತಿ ಎಂದು ತೋರಿಸುತ್ತಾನೆ. 'ರೂಪವತ್ತಾ'—ಇತಿ. ಇದು ಭ್ರಾಂತಿ. ಯಥಾರ್ಥಜ್ಞಾನವಲ್ಲ. ಆಕಾಶದಲ್ಲಿ ನೀಲರೂಪ ತೋರಿದಂತೆ ಕತ್ತಲೆಯಲ್ಲಿ ರೂಪ ತೋರುತ್ತದೆ. ಹಾಗೆಯೇ ಕ್ರಿಯೆ ಇದೆಯೆಂಬುದೂ ಭ್ರಾಂತಿ ಎನ್ನುತ್ತಾನೆ. "ಕರ್ಮವತ್ತಾ'—ಇತಿ. ಯದ್ಯಪಿ ಕತ್ತಲೆಯಲ್ಲಿ ಚಲನಾತ್ಮಕಕ್ರಿಯಾಪ್ರತೀತಿ ಇದೆ. ಕತ್ತಲೆ ಹೋಯಿತು, ಬಂದಿತು ಇತ್ಯಾದಿ ನೋಡುತ್ತೇವೆ. ಆದರೆ ಇದು ಉಪಾಧಿಯಿಂದ ಬಂದಿದೆ. 'ಉಪಾಧಿನಾ ಚರತಿ ಔಪಾಧಿಕಃ' ಸ್ತ್ರೀಯೇತ್ವದಲ್ಲಿ ಙಷ್ ಬಂದಿದೆ. ಆಲೋಕಾಪಸರಣವೇ ಉಪಾಧಿ. ಪ್ರಕಾಶತೆಗೆದರೆ ಕತ್ತಲೆ ಬಂದಿತೆಂದೂ, ಪ್ರಕಾಶ ತಂದರೆ ಕತ್ತಲೆಹೋಯಿತೆಂದೂ ತೋರುತ್ತದೆ. ಬೆಳಕಿನ ಚಲನೆಯಿಂದ ಕತ್ತಲೆಯಲ್ಲಿ ಚಲನೆ ಆರೋಪಿತವಾಗುವುದರಿಂದ ಕರ್ಮವತ್ತಾಪ್ರತೀತಿಯೂ ಭ್ರಾಂತಿಯೇ ಆಗುತ್ತದೆ. ಆದುದರಿಂದ ಆವಶ್ಯಕತೇಜೋಭಾವವೇ ತಮಸ್ಸು. ಆವಶ್ಯಕತೇಜೋಭಾವವೆಂದರೆ 'ಪ್ರಕೃಷ್ಟಮಹತ್ತ್ವೋದ್ಭೂತಾನಭಿಭೂತತೇಜಸ್ತ್ವಾವಚ್ಛಿನ್ನಪ್ರತಿಯೋಗಿತಾಕಾಭಾವಃ ' ಎಂದರ್ಥ. ಆವಶ್ಯಕಪದದಿಂದ ಈ ಅರ್ಥ ತಿಳಿಯುತ್ತದೆ. ಕತ್ತಲೆಯಲ್ಲಿಯೂ ತೇಜಸ್ಸಿನ ತ್ರ್ಯಣುಕಾದಿಗಳು ಇರಬಹುದು. ಅದಕ್ಕೋಸ್ಕರ ಪ್ರಕೃಷ್ಟ, ಮಹತ್ವ ವಿಶೇಷಣ ತೇಜಸ್ಸಿಗೆ ಕೊಟ್ಟಿದೆ- ಕಣ್ಣಿನಲ್ಲಿ ಅನದ್ಭೂತರೂಪದಿಂದ ತೇಜೋಭಾವ ಬರುವುದರಿಂದ ಉದ್ಭೂತವೆನ್ನಬೇಕು. ಸುವರ್ಣದಲ್ಲಿ ಅಭಿಭೂತವಾಗಿರುವುದರಿಂದ ಅನಭಿಭೂತವೆಂದು ವಿಶೇಷಣ ಹೇಳಿದೆ ಆದುದರಿಂದ ಆಯಾಯ ವಿಶೇಷಣಗಳು ಸಾರ್ಥಕವಾಗಿವೆ.

ಬೇರೆ ರೀತಿಯಿಂದ ದೂಷಣೆ ತೋರಿಸುತ್ತಾನೆ. 'ತಮಸಃ—' ಇತಿ. ಇದೊಂದು ಬೇರೆ ಪದಾರ್ಥವೆಂದರೆ ಅದರ ಉತ್ಪತ್ತಿ ಧ್ವಂಸಗಳನ್ನು ಕಲ್ಪಿಸಬೇಕು. ಅನಂತ ಅವಯವಗಳನ್ನು ಕಲ್ಪಿಸಬೇಕು. ಆದುದರಿಂದಲೂ ಗೌರವ. ಇದು ಆಲೋಕ ನಿರಪೇಕ್ಷ ಚಕ್ಷುರ್ಗ್ರಾಹ್ಯವಾದುದರಿಂದಲೇ ದ್ರವ್ಯವಲ್ಲ. ತಮಸ್ಸಿನ ಅಭಾವವೇ ತೇಜಸ್ಸು ಎಂದು

ಹೇಳಲು ಸಾಧ್ಯವಿಲ್ಲ. ಉಷ್ಣಸ್ಪರ್ಶಜನಕತಾವಚ್ಛೇದಕರೂಪದಿಂದ ತೇಜಸ್ತ್ವ ಜಾತಿ ಪ್ರಸಿದ್ಧವಾಗಿದೆ. ಆದುದರಿಂದ ತೇಜೋಽಭಾವವೇ ತಮಸ್ಸು ಎನ್ನಬೇಕು. ಹೀಗೆಯೇ ಸುವರ್ಣವೆಂಬುದೂ ಬೇರೊಂದು ದ್ರವ್ಯವೆಂದು ಕೆಲವರ ಮತ. ಅದೂ ಸರಿಯಲ್ಲ. ಅದು ತೇಜಸ್ಸಿನಲ್ಲಿ ಅಂತರ್ಭಾವ ಹೊಂದುತ್ತದೆಂದು ಮುಂದೆ ತೇಜಸ್ಸನ್ನು ನಿರೂಪಿಸುವಾಗ ಹೇಳುತ್ತೇವೆಂದು ಸಮಾಧಾನ ತೋರಿಸುತ್ತಾನೆ. 'ಸ್ವರ್ಣಸ್ಯ'—ಇತಿ.

ಕಣಾದ ಸೂತ್ರದಲ್ಲಿ ಆರು ಭಾವ ಪದಾರ್ಥಗಳೇ ನಿರೂಪಿತವಾಗಿದ್ದರೂ ಅಭಾವವು ಭಾವ ಪರತಂತ್ರವಾದುದರಿಂದ ಬೇರೆ ಹೇಳಿಲ್ಲ. ಇಲ್ಲಿ ಬಾಲಕರಿಗೆ ವಿಶದವಾಗಿ ತಿಳಿಯಲು ಅಭಾವವನ್ನು ಏಳನೆಯ ಪದಾರ್ಥವನ್ನಾಗಿ ಹೇಳಿದೆ.

**ಅಥ ಗುಣಾ ರೂಪಂ ರಸೋ ಗಂಧಸ್ತತಃ ಪರಮ್ ॥ ೩ ॥**
**ಸ್ಪರ್ಶಃ ಸಂಖ್ಯಾ.ಪರಿಮಿತಿಃ ಪೃಥಕ್ತ್ವಂ ಚ ತತಃ ಪರಮ್ ॥**
**ಸಂಯೋಗಶ್ಚ ವಿಭಾಗಶ್ಚ ಪರತ್ವಂ ಚಾಪರತ್ವಕಮ್ ॥ ೪ ॥**
**ಬುದ್ಧಿಃ ಸುಖಂ ದುಃಖಮಿಚ್ಛಾ ದ್ವೇಷೋಯತ್ನೋಗುರುತ್ವಕಮ್ ॥**
**ದ್ರವತ್ವಂ ಸ್ನೇಹಸಂಸ್ಕಾರಾವದೃಷ್ಟಂ ಶಬ್ದ ಏವ ಚ ॥ ೫ ॥**

**ಗುಣಾನ್ವಿಭಜತೇ—'ಅಥಗುಣಾ' ಇತಿ । ಏತೇ ಗುಣಾಶ್ಚತುರ್ವಿಂಶತಿ ಸಂಖ್ಯಾಕಾಃ ಕಣಾದೇನ ಕಂಠತಃ ಚಶಬ್ದೇನ ಚ ದರ್ಶಿತಾಃ । ಅತ್ರ ಗುಣತ್ವಾದಿಜಾತಿಸಿದ್ಧಿರಗ್ರೇ ವಕ್ಷ್ಯತೇ ॥ ೩-೫ ॥**

ವಿಭಾಗದ ಅರ್ಥ ಹಿಂದೆ ವಿವರಿಸಿದೆ. 'ದ್ರವ್ಯಕರ್ಮಭಿನ್ನತ್ವೇ ಸತಿ ಸಾಮಾನ್ಯವತ್ವಂ' ಎಂದು ಗುಣದ ಸಾಮಾನ್ಯಲಕ್ಷಣವು ಹೇಳಿದೆಯೆಂದು ವಿಭಾಗ ಮಾಡಿದೆ. ಕಣಾದರು ಸೂತ್ರದಲ್ಲಿ ಕೇವಲ ಹದಿನೇಳು ಗುಣಗಳನ್ನು ಹೇಳಿ ಚಶಬ್ದದಿಂದ ಉಳಿದವುಗಳಿಗೆ ಸಂಗ್ರಹವಾಗುವುದೆಂದು ಸೂಚಿಸಿರುತ್ತಾರೆ. "ರೂಪರಸಗಂಧಸ್ಪರ್ಶಾಃ ಸಂಖ್ಯಾಃ ಪರಿಮಾಣಾನಿ ಪೃಥಕ್ತ್ವಂ ಸಂಯೋಗವಿಭಾಗೌ ಪರತ್ವಾಽಪರತ್ವೇ ಬುದ್ಧಯಃ ಸುಖದುಃಖೇ ಇಚ್ಛಾದ್ವೇಷೌ ಪ್ರಯತ್ನಾಶ್ಚ ಗುಣಾಃ" ಎಂದು ಕಣಾದ ಸೂತ್ರ. ಇಲ್ಲಿರುವ ಚಶಬ್ದದಿಂದ ಗುರುತ್ವ ದ್ರವತ್ವ ಸ್ನೇಹಸಂಸ್ಕಾರ ಧರ್ಮಾಧರ್ಮಗಳು ಸಮುಚ್ಚಿತವಾಗುತ್ತವೆ. ಗುಣತ್ವಜಾತಿಯೂ ಕಾರಣತಾವಚ್ಛೇದಕರೂಪದಿಂದ ಸಿದ್ಧವಾಗುತ್ತದೆ.

**ಉತ್ಕ್ಷೇಪಣಂ ತತೋಽಪಕ್ಷೇಪಣಮಾಕುಂಚನಂ ತಥಾ ।**
**ಪ್ರಸಾರಣಂ ಚ ಗಮನಂ ಕರ್ಮಾಣ್ಯೇತಾನಿ ಪಂಚ ಚ ॥ ೬ ॥**

**ಕರ್ಮಾಣಿ ವಿಭಜತೇ—ಉತ್ಕ್ಷೇಪಣಮಿತಿ—ಕರ್ಮತ್ವ ಜಾತಿಸ್ತು ಪ್ರತ್ಯಕ್ಷಸಿದ್ಧಾ । ಏವಮುತ್ಕ್ಷೇಪಣತ್ವಾದಿಕಮಪೀತಿ॥ ೬ ॥**

'ಸಂಯೋಗಭಿನ್ನತ್ವೇ ಸತಿ ಸಂಯೋಗಾಸಮವಾಯಿಕಾರಣಂ ಕರ್ಮ' ಎಂದು

ಕರ್ಮದ ಸಾಮಾನ್ಯ ಲಕ್ಷಣ. ಅಥವಾ 'ಕರ್ಮತ್ವಜಾತಿಮತ್ತ್ವಂ' ಎಂದು ಲಕ್ಷಣ. 'ಅಯಂ ಚಲತಿ' ಇತ್ಯಾದಿ ಅನುಗತ ಪ್ರತೀತಿಯಿಂದ ಕರ್ಮತ್ವ ಜಾತಿ ಪ್ರತ್ಯಕ್ಷಸಿದ್ಧ ವಾಗುವುದರಿಂದ ಇದನ್ನು ಸಾಧಿಸಲು ಅನುಮಾನಾಪೇಕ್ಷೆ ಇಲ್ಲ. ಊರ್ಧ್ವದೇಶ ಸಂಯೋಗಾನುಕೂಲ ವ್ಯಾಪಾರಕ್ಕೆ ಉತ್ ಕ್ಷೇಪಣವೆಂದೂ, ಅಧೋದೇಶಸಂಯೋಗಾನು ಕೂಲ ವ್ಯಾಪಾರಕ್ಕೆ ಅಪಕ್ಷೇಪಣವೆಂದೂ, ಶರೀರ ಸಂಕೋಚಾನುಕೂಲ ವ್ಯಾಪಾರಕ್ಕೆ ಆಕುಂಚನವೆಂದೂ, ಶರೀರದ ವಿಪ್ರಕೃಷ್ಟ (ದೂರ) ಸಂಯೋಗಾನುಕೂಲ ವ್ಯಾಪಾರಕ್ಕೆ ಪ್ರಸಾರಣವೆಂದೂ, ಉತ್ತರದೇಶಸಂಯೋಗಾನುಕೂಲ ವ್ಯಾಪಾರಕ್ಕೆ ಗಮನವೆಂದೂ ಹೆಸರು.

**ನನ್ವತ್ರ ಭ್ರಮಣಾದಿಕಮಪಿ ಪಂಚಕರ್ಮಾಧಿಕತಯಾ ಕುತೋ ನೋಕ್ತಮತ ಆಹ—**

**ಭ್ರಮಣಂ ರೇಚನಂ ಸ್ಯಂದನೋರ್ಧ್ವಜ್ವಲನಮೇವ ಚ ||**
**ತಿರ್ಯಗ್ಗಮನಮಪ್ಯತ್ರ ಗಮನಾದೇವ ಲಭ್ಯತೇ || ೭ ||**

ಭ್ರಮಣ—ಸುತ್ತುವುದು ಮುಂತಾದ ಇತರ ಕರ್ಮಗಳೂ ಇರುವಾಗ ಅವುಗಳನ್ನೂ ಹೇಳದೆ ಐದನ್ನು ಮಾತ್ರ ಹೇಳಿದುದು ಹೇಗೆ ? ಎಂಬ ಶಂಕೆ ಬಂದರೆ ಅದಕ್ಕೆ ಕಾರಿಕೆ ಯಲ್ಲಿ ಸಮಾಧಾನ ತೋರಿಸುತ್ತಾನೆ. ಗಮನ ಹೇಳಿರುವುದರಿಂದ ಭ್ರಮಣಾದಿಗಳು ಇದರಲ್ಲಿಯೇ ಸೇರುವುದರಿಂದ ಬೇರೆ ಹೇಳಲಿಲ್ಲವೆಂದು ತಾತ್ಪರ್ಯ. ಉತ್ ಕ್ಷೇಪಣಾದಿ ಗಳೂ ಗಮನವಿಶೇಷವಾದುದರಿಂದ ಅವುಗಳೂ ಗಮನದಲ್ಲಿಯೇ ಅಂತರ್ಭೂತವಾಗುವುದ ರಿಂದ ಅವುಗಳನ್ನು ಮಾತ್ರ ಬೇರೆ ಹೇಳಿದುದೇಕೆ ? ಅಂದರೆ ಮುನಿಗಳು ಹೇಳಿದುದರಿಂದ ಹಾಗೆ ಹೇಳಿದೆ ಎನ್ನಬೇಕು. ಮುನಿಗಳನ್ನು ನಿಯಂತ್ರಣ ಮಾಡಲು ಸಾಧ್ಯವಿಲ್ಲ. ಆದುದರಿಂದ ದೋಷವಿಲ್ಲ. || ೭ ||

**ಸಾಮಾನ್ಯಂ ದ್ವಿವಿಧಂ ಪ್ರೋಕ್ತಂ ಪರಂ ಚಾಪರಮೇವ ಚ ||**
**ದ್ರವ್ಯಾದಿತ್ರಿಕವೃತ್ತಿಸ್ತು ಸತ್ತಾ ಪರತಯೋಚ್ಯತೇ || ೮ ||**

**ಸಾಮಾನ್ಯಂ ನಿರೂಪಯತಿ—ಸಾಮಾನ್ಯಮಿತಿ—। ತಲ್ಲಕ್ಷಣಂ ತು ನಿತ್ಯತ್ವೇಸತಿ ಅನೇಕಸಮವೇತತ್ವಮ್ । ಅನೇಕ ಸಮವೇತತ್ವಂ ಸಂಯೋ ಗಾದೀನಾಮಪ್ಯಸ್ತ್ಯತ ಉಕ್ತಂ ನಿತ್ಯತ್ವೇ ಸತೀತಿ । ನಿತ್ಯತ್ವೇ ಸತಿ ಸಮವೇ ತತ್ವಂ ಗಗನಪರಿಮಾಣಾದೀನಾಮಪ್ಯಸ್ತ್ಯತ ಉಕ್ತಮನೇಕೇತಿ । ನಿತ್ಯತ್ವೇ ಸತಿ ಅನೇಕ ವೃತ್ತಿತ್ವಮತ್ಯಂತಾಭಾವೇಽಪ್ಯಸ್ತ್ಯತೋ ವೃತ್ತಿತ್ವಸಾಮಾನ್ಯಂ ವಿಹಾಯ ಸಮವೇತತ್ವಮಿತ್ಯುಕ್ತಮ್ । ಏಕಮಾತ್ರವ್ಯಕ್ತಿವೃತ್ತಿಸ್ತು ನ ಜಾತಿಃ । ತಥಾಚೋಕ್ತಮ್**

ವ್ಯಕ್ತೇರಭೇದಸ್ತುಲ್ಯತ್ವಂ ಸಂಕರೋಽಥಾನವಸ್ಥಿತಿಃ ।
ರೂಪಹಾನಿರಸಂಬಂಧೋ ಜಾತಿಬಾಧಕ ಸಂಗ್ರಹಃ ॥ ೧ ॥

ದ್ರವ್ಯಾದೀತಿ —, ಪರತ್ವಮಧಿಕದೇಶವೃತ್ತಿತ್ವಮ್ । ಅಪರತ್ವಮಲ್ಪದೇಶವೃತ್ತಿತ್ವಮ್ । ಸಕಲ ಜಾತ್ಯಪೇಕ್ಷಯಾಽಧಿಕದೇಶವೃತ್ತಿತ್ವಾತ್ ಸತ್ತಾಯಾಃ ಪರತ್ವಮ್ । ತದಪೇಕ್ಷಯಾಚಾನ್ಯಾಸಾಂ ಜಾತೀನಾಮಪರತ್ವಮ್ ॥ ೮ ॥

ಸಾಮಾನ್ಯದ ಸ್ವರೂಪವನ್ನು ತೋರಿಸುತ್ತಾನೆ. ಮೊದಲು ಲಕ್ಷಣ ಹೇಳುತ್ತಾನೆ. ಅವ್ಯಾಪ್ತಿ, ಅತಿವ್ಯಾಪ್ತಿ ಅಸಂಭವರೂಪ ದೋಷತ್ರಯ ಶೂನ್ಯವಾದದ್ದೇ ಲಕ್ಷಣ. ಇದು ನನ್ನ ತರ್ಕಸಂಗ್ರಹವ್ಯಾಖ್ಯಾನದಲ್ಲಿ ವಿವರಿಸಿದೆ. 'ಲಕ್ಷ್ಯೈಕದೇಶಾಽವೃತ್ತಿತ್ವಂ' 'ಅವ್ಯಾಪ್ತಿಃ. 'ಕಪಿಲತ್ವಂ' ಗೋವಿನಲಕ್ಷಣವೆಂದರೆ ಕೆಲವು ಕಪಿಲಗೋವುಗಳಲ್ಲಿ ಬರಬಹುದು. ಬಿಳಿ ಕಪ್ಪು ಹಸುಗಳಲ್ಲಿ ಬಾರದಿರುವುದರಿಂದ ಅವ್ಯಾಪ್ತವಾಗುತ್ತದೆ. 'ಲಕ್ಷ್ಯವೃತ್ತಿತ್ವೇ ಸತಿ ಅಲಕ್ಷ್ಯವೃತ್ತಿತ್ವಂ' ಅತಿವ್ಯಾಪ್ತಿಃ. 'ಶೃಂಗವತ್ವಂ' ಗೋವಿನಲಕ್ಷಣವೆಂದರೆ ಎಲ್ಲಾ ಗೋಗಳಲ್ಲಿ ಬಂದುದಲ್ಲದೆ ಎಮ್ಮೆ ಮುಂತಾದವುಗಳಲ್ಲಿಯೂ ಬರುವುದರಿಂದ ಅತಿವ್ಯಾಪ್ತವಾಗುತ್ತದೆ. 'ಲಕ್ಷ್ಯಮಾತ್ರಾಽವೃತ್ತಿತ್ವಂ' ಅಸಂಭವಃ 'ಏಕಶಫತ್ವಂ' ಗೋಲಕ್ಷಣವೆಂದರೆ ಅದು ದ್ವಿಶಫಪ್ರಾಣಿಯಾದುದರಿಂದ ಎಲ್ಲಿಯೂ ಬಾರದಿರುವುದರಿಂದ ಅಸಂಭವದೋಷ ಬರುತ್ತದೆ. 'ಸಾಸ್ನಾದಿಮತ್ತ್ವಂ' ಎಂದು ಹೇಳಿದರೆ ಈ ಮೂರು ದೋಷಗಳಿಗೂ ಅವಕಾಶವಿಲ್ಲದೆ ಗೋವಿನ ಸಲ್ಲಕ್ಷಣವಾಗುತ್ತದೆ. 'ವ್ಯಾವೃತ್ತಿರ್ವ್ಯವಹಾರೋವಾ ಲಕ್ಷಣಸ್ಯ ಪ್ರಯೋಜನಮ್'' ಎಂದು ಲಕ್ಷಣಕ್ಕೆ ಇತರ ಭೇದಜ್ಞಾನ ಅಥವಾ ವ್ಯವಹಾರವೇ ಪ್ರಯೋಜನವೆಂದು ತಿಳಿಯಬೇಕು. ಗೋವಿನಲಕ್ಷಣ ತಿಳಿದರೆ ಈ ಲಕ್ಷಣದಿಂದ ಕೂಡಿದ ಗೋವು ಇತರ ಪ್ರಾಣಿಗಳಿಗಿಂತ ಬೇರೆಯಾಗಿದೆ ಎಂಬ ಜ್ಞಾನ ಬರುತ್ತದೆ. ಅಥವಾ ಇದು ಗೋವು ಎಂದು ವ್ಯವಹರಿಸಲು ಕಾರಣವಾಗುತ್ತದೆ. ಪ್ರಕೃತ ಸಾಮಾನ್ಯಕ್ಕೆ ಲಕ್ಷಣ ಹೇಳಿದರೆ ಅದು ಇತರ ದ್ರವ್ಯದಿಗಳಿಗಿಂತ ಬೇರೆಯಾಗಿದೆಯೆಂದು ತಿಳಿಯಬಹುದು. ಇಲ್ಲಿ ಅನುಮಾನ ಹೀಗೆ ಹೇಳಬಹುದು. 'ಸಾಮಾನ್ಯಂ— ಇತರೇಭ್ಯೋ ದ್ರವ್ಯಾದಿಭ್ಯೋ ಭಿದ್ಯತೇ, (ಅಥವಾ ಇದಂ ಸಾಮಾನ್ಯಮಿತ್ಯಾಕಾರಕ ವ್ಯವಹಾರವಿಷಯಃ ಭವತಿ)—ನಿತ್ಯತ್ವೇ ಸತಿ ಅನೇಕ ಸಮವೇತತ್ವಾತ್ । ಯನ್ನೈವಂ ತನ್ನೈವಂ ಯಥಾ ದ್ರವ್ಯಮ್'. ಹೀಗೆಯೇ ಇತರ ಲಕ್ಷಣ ಹೇಳಿದಲ್ಲಿ ಇತರ ಭೇದ ಜ್ಞಾನ ಅಥವಾ ವ್ಯವಹಾರ ಪ್ರಯೋಜನವನ್ನು ತಿಳಿಯಬೇಕು.

ಈಗ ಲಕ್ಷಣದಲ್ಲಿರುವ ಪದ ಪ್ರಯೋಜನವನ್ನು ತೋರಿಸುತ್ತಾನೆ. 'ಅನೇಕ'— ಇತಿ. ಸಮವೇತ ಅಂದರೆ ಸಮವಾಯಸಂಬಂಧದಿಂದ ಇರುವುದು. (ಸಮವಾಯೇನ ವೃತ್ತಿಮತ್ತ್ವಂ) ಅನೇಕ ಅಂದರೆ ಏಕಭಿನ್ನವೆಂದರ್ಥ. ಎರಡಕ್ಕಿಂತ ಹೆಚ್ಚಾದ ವಸ್ತುಗಳಲ್ಲಿ ಸಮವಾಯದಿಂದ ಇರುವುದು. ಕೇವಲ ಅನೇಕ 'ಸಮವೇತತ್ವಂ' ಎಂದರೆ

ಸಂಯೋಗಾದಿಗಳಲ್ಲಿ ಅತಿವ್ಯಾಪ್ತಿ. ಸಂಯೋಗವೂ ಅನೇಕ ಸಮವೇತವಾಗಿದೆ. ಆದುದರಿಂದ 'ನಿತ್ಯತ್ವೇಸತಿ' ಎನ್ನಬೇಕು. ಸಂಯೋಗ ನಿತ್ಯವಲ್ಲ. ನಿತ್ಯತ್ವ ಅದರಲ್ಲಿಲ್ಲ. 'ನಿತ್ಯತ್ವೇ ಸತಿ ಸಮವೇತತ್ವಂ' ಅಂದರೆ ಗಗನಪರಿಮಾಣದಲ್ಲಿ ಅತಿವ್ಯಾಪ್ತಿ. ಅದು ನಿತ್ಯವಾಗಿ ಗಗನದಲ್ಲಿ ಸಮವಾಯಸಂಬಂಧದಿಂದ ಇದೆ. ಆದುದರಿಂದ 'ಅನೇಕಸಮವೇತತ್ವಂ' ಎಂದಿದೆ. ಗಗನಪರಿಮಾಣವು ಕೇವಲ ಗಗನದಲ್ಲಿ ಮಾತ್ರ ಸಮವೇತ. ಅನೇಕ ಸಮವೇತವಲ್ಲ. (ಅನೇಕ ವ್ಯಕ್ತಿಗಳಲ್ಲಿ ಇಲ್ಲ) 'ನಿತ್ಯತ್ವೇ ಸತಿ ಅನೇಕವೃತ್ತಿತ್ವಂ, ಎಂದರೆ ಅತ್ಯಂತಾಭಾವದಲ್ಲಿ ಅತಿವ್ಯಾಪ್ತಿ. ಅತ್ಯಂತಾಭಾವವು ನಿತ್ಯವಾಗಿ ಅನೇಕಾಧಿಕರಣಗಳಲ್ಲಿ ಇರುತ್ತದೆ. ರೂಪಾತ್ಯಂತಾಭಾವವು ವಾಯುವಿನಲ್ಲಿಯೂ, ಆತ್ಮಕಾಲಾಕಾಶಾದಿಗಳಲ್ಲಿಯೂ ಇದೆ. ಆದುದರಿಂದ 'ಅನೇಕಸಮವೇತತ್ವಂ' ಎಂದು ಹೇಳಿದೆ. ಅತ್ಯಂತಾಭಾವವು ಅನೇಕ ಅಧಿಕರಣಗಳಲ್ಲಿ ಇದ್ದರೂ ಸಮವಾಯ ಸಂಬಂಧದಿಂದ ಇರುವುದಿಲ್ಲ. ಸ್ವರೂಪಸಂಬಂಧದಿಂದ ಇರುವುದರಿಂದ ಅತಿವ್ಯಾಪ್ತಿ ಇಲ್ಲ. ಹೀಗೆ ಲಕ್ಷಣದಲ್ಲಿರುವ ಎಲ್ಲಾ ಪದಗಳೂ ದೋಷನಿವಾರಕಗಳಾದುದರಿಂದ ಸಾರ್ಥಕವಾಗಿ ಲಕ್ಷಣವು ನಿರ್ದುಷ್ಟವಾಗಿದೆ.

ಜಾತಿಸ್ವರೂಪವನ್ನು ಚನ್ನಾಗಿ ತಿಳಿಯಲು ಜಾತಿ ಬಾಧಕಗಳನ್ನು ತೋರಿಸುತ್ತಾನೆ. 'ಏಕಮಾತ್ರ—'ಇತಿ. ಘಟಪಟಾದಿಗಳಲ್ಲಿ ಸಮಾನಧರ್ಮಪ್ರಕಾರಕವಾದ ಜ್ಞಾನ ಬರಲು ಘಟತ್ವ ಪಟತ್ವ ಜಾತಿ ಕಲ್ಪನೆ ಮಾಡಿದೆ. ಒಂದೇ ವಸ್ತುವಾದರೆ ಅಲ್ಲಿ ಅನುಗತ ಪ್ರತೀತಿಯೇ ಬರುವುದಿಲ್ಲ. ಅಲ್ಲಿ ತದ್ವ್ಯಕ್ತಿತ್ವಧರ್ಮವನ್ನು ಅಂಗೀಕರಿಸಿ ವ್ಯವಹರಿಸುತ್ತಾರೆ. ಅದಕ್ಕಿಂತಲೂ ಬೇರೆಯಾದ ಜಾತಿಕಲ್ಪನೆ ಬೇಕಾಗಿಲ್ಲ. ಪ್ರಾಚೀನ ಉದಯನಾಚಾರ್ಯರು ಹೇಳಿರುವ ಆರು ಜಾತಿಬಾಧಕಗಳನ್ನು ತೋರಿಸುತ್ತಾನೆ. 'ವ್ಯಕ್ತೇರಭೇದಃ—' ಇತಿ. ವ್ಯಕ್ತೇರಭೇದಃ—ಇದು ಮೊದಲನೆಯ ಜಾತಿಬಾಧಕ. ಸ್ವಾಶ್ರಯವ್ಯಕ್ತಿಯ ಐಕ್ಯವೇ ವ್ಯಕ್ತ್ಯಭೇದ. ಒಂದು ಧರ್ಮವು ಒಂದೇ ವ್ಯಕ್ತಿಯಲ್ಲಿರುವುದಾದರೆ ಅದು ಜಾತಿಯಾಗುವುದಿಲ್ಲ. ಆಕಾಶತ್ವ, ಕಾಲತ್ವ ಮುಂತಾದವುಗಳು ವ್ಯಕ್ತ್ಯಭೇದದಿಂದ ಜಾತಿಯಾಗುವುದಿಲ್ಲ. ಇವುಗಳಿಗೆ ಉಪಾಧಿಯೆಂದು ಕರೆಯುತ್ತಾರೆ. ಧರ್ಮಸಾಮಾನ್ಯಕ್ಕೂ ಉಪಾಧಿಯೆಂದು ಹೆಸರು. ಆದರೆ ನ್ಯಾಯದಲ್ಲಿ ಹೆಚ್ಚಾಗಿ ಜಾತ್ಯರಿಕ್ತಧರ್ಮಕ್ಕೆ ಮಾತ್ರ ಉಪಾಧಿ ಎಂದು ವ್ಯವಹಾರ. ಈ ಉಪಾಧಿಯನ್ನೂ ಸಖಂಡೋಪಾಧಿ, ಅಖಂಡೋಪಾಧಿ ಎಂದು ಎರಡುವಿಧವಾಗಿ ಪರಿಗಣಿಸಿರುತ್ತಾರೆ. ನಿರ್ವಚನಮಾಡಲು ಬರುವ ಧರ್ಮಕ್ಕೆ ಸಖಂಡೋಪಾಧಿಯೆಂದು ಹೆಸರು ಸಾಮಾನ್ಯತ್ವವು ಸಖಂಡೋಪಾಧಿ. ಇದನ್ನು 'ನಿತ್ಯತ್ವೇ ಸತಿ ಅನೇಕಸಮವೇತತ್ವಂ' ಎಂದು ನಿರ್ವಚನ ಮಾಡಲು ಸಾಧ್ಯ. (ಸ್ವರೂಪ ವಿವರಿಸಲು ಸಾಧ್ಯವಾದದ್ದು.) 'ನಿತ್ಯಸಂಬಂಧತ್ವಂ ಸಮವಾಯತ್ವಂ' ಎಂದು ಬೇರೆ ರೀತಿಯಿಂದ ತೋರಿಸಲು ಬರುತ್ತದೆ. ಹೀಗೆಯೇ ಆಕಾಶತ್ವಾದಿಗಳನ್ನು ನಿರ್ವಚನಮಾಡಲು ಬರುತ್ತದೆ. ಯಾವ ಧರ್ಮವನ್ನು ನಿರ್ವಚನ ಮಾಡಲು ಸಾಧ್ಯವಿಲ್ಲವೋ ಅದು ಅಖಂಡೋಪಾಧಿಯಾಗುತ್ತದೆ. ಅನು

ಯೋಗಿತಾತ್ವ, ಪ್ರತಿಯೋಗಿತಾತ್ವ, ವಿಷಯತಾತ್ವ ಮುಂತಾದ ಧರ್ಮಗಳನ್ನು ಬೇರೆ ರೀತಿಯಿಂದ ನಿರ್ವಚನಮಾಡಲು ಬರುವುದಿಲ್ಲ. ಅವು ಅಖಂಡೋಪಾಧಿಗಳು. ಇವುಗಳನ್ನು ಬಿಟ್ಟು ಉಳಿದವು ಸಖಂಡೋಪಾಧಿಗಳು. ಪ್ರಕೃತ ಆಕಾಶತ್ವವು ಜಾತಿಯಲ್ಲ. ಇದು ಆಕಾಶವೊಂದರಲ್ಲಿ ಮಾತ್ರ ಇರುತ್ತದೆ. 'ಶಬ್ದಸಮವಾಯಿಕಾರಣತ್ವಂ' ಎಂದು ನಿರ್ವಚನಮಾಡಲು ಬರುವುದರಿಂದ ಸಖಂಡೋಪಾಧಿಧರ್ಮ. 'ಆಕಾಶತ್ವಂ—ನ ಜಾತಿಃ—ಸ್ವಪ್ರತಿಯೋಗಿವೃತ್ತಿತ್ವ ಸ್ವಾನುಯೋಗಿವೃತ್ತಿತ್ವ ಏತದುಭಯಸಂಬಂಧೇನ ಭೇದವಿಶಿಷ್ಟಾನ್ಯತ್ವಾತ್ । ಯಥಾ ವ್ಯತಿರೇಕೇಣಘಟಃ । " ಜಾತಿತ್ವೇನ ಅಭಿಮತವಾದ ಧರ್ಮಕ್ಕೆ ಈ ಉಭಯಸಂಬಂಧದಿಂದ ಭೇದವೈಶಿಷ್ಟ್ಯ ಇರುತ್ತದೆ. ಎಲ್ಲಿ ಜಾತಿತ್ವ ಇಲ್ಲವೋ ಅಲ್ಲಿ ಭೇದವಿಶಿಷ್ಟಾಭಾವವಿರುತ್ತದೆ. ಸ್ವಪದದಿಂದ ಭೇಧವನ್ನು ತೆಗೆದುಕೊಳ್ಳಬೇಕು. 'ಘಟಃ ಪಟೋನ' ಎಂಬ ಭೇದವನ್ನು ತೆಗೆದುಕೊಂಡರೆ ಸ್ವಂ—ಭೇದಃ, ಸ್ವಪ್ರತಿಯೋಗೀ—ಪಟಃ ತದ್ವತ್ತ್ವಂ —ಅದರಲ್ಲಿರುವಿಕೆಯು ಪೃಥಿವೀತ್ವಜಾತಿಗೆ ಬರುತ್ತದೆ. ಸ್ವಾನುಯೋಗೀ—ಭೇದಕ್ಕೆ ಅನುಯೋಗೀ ಘಟಃ, ತದ್ವೃತ್ತಿತ್ವಂ—ಅಲ್ಲಿ ಇರುವಿಕೆ ಪೃಥಿವೀತ್ವಕ್ಕೆ ಸಂಭವಿಸುತ್ತದೆ. ಹೀಗೆ ಉಭಯ ಸಂಬಂಧದಿಂದ ಭೇದ ವಿಶಿಷ್ಟವಾದದ್ದು ಪೃಥಿವೀತ್ವ ಆಗುವುದರಿಂದ ಅದು ಜಾತಿಯಾಗುತ್ತದೆ. ಭೇಧ ವಿಶಿಷ್ಟಾನ್ಯತ್ವ ಆಕಾಶತ್ವದಲ್ಲಿ ಬರುವುದರಿಂದ ಅದು ಜಾತಿಯಲ್ಲ. 'ಆಕಾಶಂ ಘಟೋನ' ಎಂಬ ಭೇದದಲ್ಲಿ ಕೇವಲ ಸ್ವಾನಯೋಗಿತ್ವಸಂಬಂಧದಿಂದಲೂ, 'ಘಟಃ ಆಕಾಶಂ ನ' ಎಂಬ ಭೇದದಲ್ಲಿ ಕೇವಲ ಸ್ವಪ್ರತಿಯೋಗಿತ್ವಸಂಬಂಧದಿಂದಲೂ ಭೇದವೈಶಿಷ್ಟ್ಯ ಆಕಾಶತ್ವದಲ್ಲಿ ಸಂಭವಿಸಿದರೂ ಉಭಯಸಂಬಂಧದಿಂದ ಭೇದವೈಶಿಷ್ಟ್ಯ ಸಂಭವಿಸುವುದಿಲ್ಲ. ಆದುದರಿಂದ ಆಕಾಶತ್ವ ಜಾತಿಯಲ್ಲ. 'ಆಕಾಶತ್ವಂ—ಜಾತಿತ್ವಾಭಾವವಾನ್' ಎಂಬ ಜ್ಞಾನದಲ್ಲಿ ಇದು ಬಾಧಕವಾಗುತ್ತದೆ. ಜಾತಿಬಾಧಕವೆಂಬಲ್ಲಿ ಜಾತಿ, ಜಾತಿತ್ವಅನ್ಯತರಪ್ರಕಾರಕ ಜ್ಞಾನಪ್ರತಿಬಂಧಕವೆಂದು ಅರ್ಥಮಾಡಬೇಕು. ಮೊದಲಿನ ಮೂರು, ಜಾತಿತ್ವಪ್ರಕಾರಕಜ್ಞಾನದಲ್ಲಿಯೂ ಕೊನೆಯ ಮೂರು, ಜಾತಿಪ್ರಕಾರಕಜ್ಞಾನದಲ್ಲಿಯೂ ಬಾಧಕಗಳಾಗುತ್ತವೆ. ವ್ಯಕ್ತ್ಯಭೇದಜ್ಞಾನದಿಂದ 'ಆಕಾಶತ್ವಂ ಜಾತಿಃ' ಎಂಬ ಜ್ಞಾನ ಬರುವುದಿಲ್ಲ.

ತುಲ್ಯತ್ವಂ—ತುಲ್ಯವ್ಯಕ್ತಿವೃತ್ತಿತ್ವಂ—ಅನ್ಯೂನಾನತಿರಿಕ್ತವ್ಯಕ್ತಿಕತ್ವಂ. ಇದೂ ಜಾತಿತ್ವದಲ್ಲಿ ಪ್ರತಿಬಂಧಕ. (ಸಮನಿಯತತ್ವಂ ತುಲ್ಯತ್ವಂ) ಘಟತ್ವಕಲಶತ್ವಗಳೆರಡೂ ಜಾತಿ ಎಂಬ ಜ್ಞಾನಕ್ಕೆ ಈ ಸಮನಿಯತತ್ವರೂಪ ತುಲ್ಯತ್ವಜ್ಞಾನವು ಪ್ರತಿಬಂಧಕ. ಘಟ ಕಲಶ ಶಬ್ದಗಳು ಪರ್ಯಾಯವಾಚಿಗಳಾದುದರಿಂದ ಅವುಗಳಿಂದ ವಾಚ್ಯವಾದ ಘಟ ಪದಾರ್ಥವು ಒಂದೇ ಆಗಿದೆ. ಘಟತ್ವಕಲಶತ್ವಗಳಿಗೆ ಅಧಿಕರಣ ಒಂದೇ ಆದುದರಿಂದ ಘಟತ್ವ ಒಂದೇ ಜಾತಿಯಾಗುತ್ತದೆ. ಎರಡೂ ಬೇರೆ ಬೇರೆ ಜಾತಿಗಳಲ್ಲ. ಕಲಶತ್ವವು ಎಲ್ಲೆಲ್ಲಿ ಇರುತ್ತದೆಯೋ ಅಲ್ಲೆಲ್ಲಾ ಘಟತ್ವವಿರುವುದರಿಂದ ಕಲಶತ್ವ ಜಾತಿಯಲ್ಲ. (ಜಾತಿತ್ವಾಭಾವವುಳ್ಳದ್ದು) 'ಸ್ವಾಶ್ರಯಯಾವದ್ವ್ಯಕ್ತಿವೃತ್ತಿತ್ವ, ಸ್ವಾನಾಶ್ರಯಯಾವದ್ವ್ಯಕ್ತ್ಯ

ವೃತ್ತಿತ್ವ, ಸ್ವಭಿನ್ನತ್ವ, ಏತತ್ರಿತಯಸಂಬಂಧೇನ ಜಾತಿವಿಶಿಷ್ಟತ್ವಾತ್—ಕಲಶತ್ವಂ—ನಜಾತಿಃ ||' ಯದ್ವೈಶಿಷ್ಟ್ಯಂ ಯತ್ರಉಚ್ಯತೇ ತತ್ ಸ್ವಪದೇನ ಗೃಹ್ಯತೇ' ಯಾವುದರ ವೈಶಿಷ್ಟ್ಯ ಎಲ್ಲಿ ಹೇಳುತ್ತೇವೋ ಅದು ಸ್ವಪದದಿಂದ ಬೋಧಿತವಾಗುತ್ತದೆ. ಇಲ್ಲಿ ಜಾತಿತ್ವೇನಾಭಿಮತವಾದ ಘಟತ್ವವನ್ನು ಸ್ವಪದದಿಂದ ತೆಗೆದುಕೊಳ್ಳಬೇಕು. ಘಟತ್ವಕ್ಕೆ ಆಶ್ರಯವಾದ ಎಲ್ಲಾ ಘಟಗಳಲ್ಲಿ ಕಲಶತ್ವ ಇದೆ, ಘಟತ್ವಕ್ಕೆ ಆಶ್ರಯವಲ್ಲದ ಎಲ್ಲಾ ವಸ್ತುಗಳಲ್ಲಿ ಕಲಶ್ವವಿಲ್ಲ. ಘಟತ್ವಕ್ಕಿಂತ ಅದು ಬೇರೆಯೂ ಆಗಿದೆ. ಈ ತ್ರಿತಯ ಸಂಬಂಧದಿಂದ ಘಟತ್ವವಿಶಿಷ್ಟವಾದುದರಿಂದ ಕಲಶತ್ವವು ಜಾತಿಯಾಗಲಾರದು. ಸ್ವಭಿನ್ನಜಾತಿಸಮನಿಯತವೆಂದರೂ ಇದೇ ತಾತ್ಪರ್ಯ. ದ್ರವ್ಯತ್ವ ಸಮನಿಯತವಾದ ಪೃಥಿವ್ಯಾದಿಮನೋನ್ಯತಮತ್ವವೂ ಜಾತಿಯಲ್ಲ. 'ಸ್ವಾಶ್ರಯೇತ್ಯಾದಿ ಮೂರು ಸಂಬಂಧಗಳಲ್ಲಿ ಮೊದಲನೆಯ ಸಂಬಂಧ ಹೇಳದಿದ್ದರೆ ದ್ರವ್ಯತ್ವಾದಿ ಜಾತಿ ವಿಶಿಷ್ಟವಾಗುವುದರಿಂದ ಪೃಥಿವೀತ್ವವು ಜಾತಿಯಾಗಲಾರದು. ಸ್ವಾನಾಶ್ರಯವೆಂದರೆ ದ್ರವ್ಯತ್ವಕ್ಕೆ ಆಶ್ರಯವಲ್ಲದ ಗುಣಾದಿಗಳಲ್ಲಿ ಪೃಥಿವೀತ್ವ ಇರುವುದಿಲ್ಲ. ದ್ರವ್ಯತ್ವಭಿನ್ನವೂ ಆಗಿದೆ. ಮೊದಲನೆಯ ದಳ ಹೇಳದರೆ ದ್ರವ್ಯತ್ವ ಇದ್ದಲ್ಲಿ ಎಲ್ಲಾ ಕಡೆ ಪೃಥಿವೀತ್ವ ಇಲ್ಲದಿರುವುದರಿಂದ ದ್ರವ್ಯತ್ವ ವೈಶಿಷ್ಟ್ಯ ಬರುವುದಿಲ್ಲ. ಹೀಗೆ ಎರಡನೇ ದಳ ಹೇಳದಿದ್ದರೆ ಪೃಥಿವೀತ್ವವಿಶಿಷ್ಟ ದ್ರವ್ಯತವಾಗುವುದರಿಂದ ದ್ರವ್ಯತ್ವ ಜಾತಿಯಾಗಲಾರದು ಪೃಥಿವೀತ್ವ ಇದ್ದಲ್ಲಿ ಎಲ್ಲಾ ಕಡೆಯಲ್ಲಿ ದ್ರವ್ಯತ್ವ ಇರುವುದಲ್ಲವೆ ಪೃಥಿವೀತ್ವಭಿನ್ನವೂ ಆಗಿದೆ. ಎರಡನೇ ದಳ ಹೇಳದರೆ ಪೃಥಿವೀತ್ವ ಇಲ್ಲದೆಡೆಯಲ್ಲಿ ದ್ರವ್ಯತ್ವ ಇಲ್ಲವೆಂತಿಲ್ಲ. ಪೃಥಿವೀತ್ವ ಇಲ್ಲದಿರುವ ಜಲಾದಿಗಳಲ್ಲಿ ದ್ರವ್ಯತ್ವವಿರುವುದರಿಂದ ವೈಶಿಷ್ಟ್ಯ ಸಂಭವಿಸುವುದಿಲ್ಲ. ಮೂರನೇ ಸಂಬಂಧ ಹೇಳದಿದ್ದರೆ ಘಟತ್ವಕ್ಕೆ ಘಟತ್ವದೊಡನೆ ವಿರೋಧ ಬರುತ್ತದೆ. ಆಗ ಘಟತ್ವವೇ ಜಾತಿಯಾಗಲಾರದು. ತುಲ್ಯತ್ವ ಜ್ಞಾನದಿಂದ ಕಲಶತ್ವಂ ಜಾತಿತ್ವಾಭಾವವತ್' ಎಂಬ ಜ್ಞಾನ ಬರುತ್ತದೆ. ಇದರಿಂದ 'ಕಲಶತ್ವಂ ಜಾತಿಃ ಎಂಬ' ಜಾತಿತ್ವ ಪ್ರಕಾರಕಜ್ಞಾನ ಬರುವುದಿಲ್ಲ.

೩ ಸಂಕರಃ—ಇದೂ ಜಾತಿತ್ವಪ್ರಕಾರಕ ಜ್ಞಾನಕ್ಕೆ ಬಾಧಕ. 'ಪರಸ್ಪರಾತ್ಯಂತಾಭಾವಸಮಾನಾಧಿಕರಣಯೋರ್ಧರ್ಮಯೋರೇಕತ್ರ ಸಮಾವೇಶಃ (ಸಾಮಾನಾಧಿಕರಣ್ಯಂ). ಇದು ಭೂತತ್ವ ಮೂರ್ತತ್ವಗಳಿಗೆ ಜಾತಿತ್ವದಲ್ಲಿ ಬಾಧಕವಾಗುತ್ತವೆ. ಪೃಥಿವ್ಯಾದಿಪಂಚಕಗಳು ಭೂತಗಳು. ಅಲ್ಲಿರುವ ಧರ್ಮವೇ ಭೂತತ್ವ. ಆಕಾಶ ಬಿಟ್ಟು ಪೃಥಿವ್ಯಾದಿ ನಾಲ್ಕು ಮತ್ತು ಮನಸ್ಸು—ಇವುಗಳು ಮೂರ್ತಗಳು. ಮೂರ್ತತ್ವ ಈ ಐದರಲ್ಲಿದೆ. ಭೂತತ್ವವನ್ನು ಬಿಟ್ಟು ಮೂರ್ತತ್ವ ಮನಸ್ಸಿನಲ್ಲಿಯೂ, ಮೂರ್ತತ್ವವನ್ನು ಬಿಟ್ಟು ಭೂತತ್ವವು ಆಕಾಶದಲ್ಲಿಯೂ ಇದೆ. ಪೃಥಿವ್ಯಾದಿ ನಾಲ್ಕರಲ್ಲಿ ಎರಡೂ ಇವೆ. ಭೂತತ್ವ, ಮೂರ್ತತ್ವ ಎರಡೂ ಜಾತಿ ಎಂಬುದರಲ್ಲಿ ಸಂಕರವು ಬಾಧಕ. 'ಭೂತತ್ವಂ—ಜಾತಿತ್ವಾಭಾವವತ್—ಮೂರ್ತತ್ವವಿಶಿಷ್ಟತ್ವಾತ್ । ವೈಶಿಷ್ಟ್ಯಂ ಚ ಸ್ವಸಾಮಾನಾಧಿಕರಣ್ಯ ಸ್ವಾಭಾವಸಾಮಾನಾಧಿಕರಣ್ಯ, ಸ್ವಸಮಾನಾಧಿಕರಣಾತ್ಯಂತಾ

ಭಾವಪ್ರತಿಯೋಗಿತ್ವ ಏತತ್ತ್ರಿತಯಸಂಬಂಧೇನ.” ಸ್ವಂ—ಮೂರ್ತತ್ವ. ತತ್ಸಮಾನಾಧಿಕರಣ—ಪೃಥಿವೀ. ತದ್ವೃತ್ತಿತ್ವ ಭೂತತ್ವದಲ್ಲಿದೆ. ಸ್ವಾಭಾವಸಮಾನಾಧಿಕರಣ—ಆಕಾಶ. ತದ್ವೃತ್ತಿತ್ವವೂ ಇದೆ. ಸ್ವಸಮಾನಾಧಿಕರಣ—ಮನಃ, ತತ್ರ ವರ್ತತೇ ಯೋಽತ್ಯಂತಾಭಾವಃ—ಭೂತತ್ವಾತ್ಯಂತಾಭಾವ. ಅತ್ಯಂತಾಭಾವಕ್ಕೆ ಪ್ರತಿಯೋಗಿ—ಭೂತತತ್ವ. ಹೀಗೆ ಮೂರು ಸಂಬಂಧದಿಂದ ಮೂರ್ತತ್ವವೈಶಿಷ್ಟ್ಯ ಭೂತತ್ವಕ್ಕೆ ಬರುವುದರಿಂದ ಭೂತತ್ವ ಜಾತಿಯಲ್ಲ. ಹೀಗೆಯೇ ಇಂದ್ರಿಯತ್ವಾದಿ ಸಾಂಕರ್ಯ ಬರುವುದರಿಂದ ಶರೀರತ್ವವೂ ಜಾತಿಯಾಗುವುದಿಲ್ಲ. ಈ ಸಂಬಂಧಗಳಲ್ಲಿ ಮೊದಲನೆಯ ಸಂಬಂಧವನ್ನು ಹೇಳದಿದ್ದರೆ ಜಲತ್ವಕ್ಕೆ ಪೃಥಿವೀತ್ವಾದಿಗಳಿಂದ ಸಾಂಕರ್ಯ ಬಂದು ಜಾತಿಯಾಗದೇ ಹೋಗಬೇಕಾಗುತ್ತದೆ. ಸ್ವಂ—ಪೃಥಿವೀತ್ವಂ ಸ್ವಾಭಾವಸಾಮಾನಾಧಿಕರಣ್ಯ ಅಂದರೆ ಪೃಥಿವೀತ್ವಾಭಾವವಿರುವ ಜಲದಲ್ಲಿ ಜಲತ್ವವಿರುತ್ತದೆ. ಸ್ವಸಮಾನಾಧಿ ....ಗಿತ್ವದಳವೂ ಬರುತ್ತದೆ. ಪೃಥಿವೀತ್ವಾಧಿಕರಣವಾದ ಘಟದಲ್ಲಿರುವ ಅತ್ಯಂತಾಭಾವವೆಂದರೆ ಜಲತ್ವಾತ್ಯಂತಾಭಾವ ಅತ್ಯಂತಾಭಾವಪ್ರತಿಯೋಗಿ ಜಲತ್ವ. ಪ್ರತಿಯೋಗಿತ್ವ ಜಲತ್ವದಲ್ಲಿ ಬರುತ್ತದೆ. ಪ್ರಥಮದಳ ಹೇಳಿದರೆ ಈ ವೈಶಿಷ್ಟ್ಯ ಬರುವುದಿಲ್ಲ. ಸ್ವಂ—ಪ್ರಥಿವೀತ್ವ. ತತ್ಸಮಾನಾಧಿಕರಣ—ಪೃಥಿವೀ. ತದ್ವೃತ್ತಿತ್ವ ಜಲತ್ವಕ್ಕೆ ಬರುವುದಿಲ್ಲ. ದ್ವಿತೀಯದಳ ಹೇಳದಿದ್ದರೆ ದ್ರವ್ಯತ್ವವಿಶಿಷ್ಟವಾಗುವುದರಿಂದ ಪೃಥೀವಿತ್ವವು ಜಾತಿಯಾಗಲಾರದು. ದ್ರವ್ಯತ್ವಾಧಿಕರಣವೃತ್ತಿಯಾಗಿ ದ್ರವ್ಯತ್ವಾಧಿಕರಣವೃತ್ತ್ಯತ್ಯಂತಾಭಾವಪ್ರತಿಯೋಗಿಯಾಗಿಯೂ ಪೃಥಿವೀತ್ವವಿರುತ್ತದೆ. ಆದರೆ ದ್ರವ್ಯತ್ವಾಭಾವಸಾಮಾನಾಧಿಕರಣ್ಯ ಬರುವುದಿಲ್ಲ. ದ್ರವ್ಯತ್ವ ಇಲ್ಲದಿರುವಲ್ಲಿ ಪೃಥಿವೀತ್ವವೂ ಇರುವುದಿಲ್ಲ. ಮೂರನೇದಳ ಹೇಳದಿದ್ದರೆ ಪೃಥಿವೀತ್ವವೈಶಿಷ್ಟ್ಯ ದ್ರವ್ಯತ್ವಕ್ಕೆ ಬರುವುದರಿಂದ ದ್ರವ್ಯತ್ವ ಜಾತಿಯಾಗದೇ ಹೋಗಬೇಕಾಗುತ್ತದೆ. ಪೃಥಿವೀತ್ವವಿರುವ ಘಟಾದಿಗಳಲ್ಲಿ ದ್ರವ್ಯತ್ವವಿರುವುದಲ್ಲದೆ ಪೃಥಿವೀತ್ವ ಇಲ್ಲದ ಜಲಾದಿಗಳಲ್ಲಿಯೂ ಇರುತ್ತದೆ. ಆದರೆ ಮೂರನೇದಳ ಬರುವುದಿಲ್ಲ. ಪೃಥಿವೀತ್ವಾಧಿಕರಣಘಟಾದಿಗಳಲ್ಲಿ ದ್ರವ್ಯತ್ವಾಭಾವ ಹೇಳಲು ಬರುವುದಿಲ್ಲ. ಘಟಾದಿಗಳಲ್ಲಿ ದ್ರವ್ಯತ್ವವಿಲ್ಲವೆಂದು ಹೇಳಲು ಬಂದಿದ್ದರೆ ಸ್ವಪ್ರತಿಯೋಗಿತ್ವ ಸಂಬಂಧ ಬರುತ್ತಿತ್ತು. ಆದುದರಿಂದ ಮೂರು ಸಂಬಂಧಗಳನ್ನೂ ಹೇಳಬೇಕು. ನವೀನರ ಮತದಲ್ಲಿ ಸಾಂಕರ್ಯವು ಜಾತಿಬಾಧಕವಾಗುವುದಿಲ್ಲ. ಇವು ಮೂರು ಜಾತಿತ್ವ ಪ್ರಕಾರಕ ಜ್ಞಾನಕ್ಕೆ ಬಾಧಕಗಳು. ಜಾತಿಃ ಎಂಬ ಜ್ಞಾನದಲ್ಲಿ ಜಾತಿತ್ವಪ್ರಕಾರವಾಗುತ್ತದೆ. ಭೂತತ್ವಂ—ಜಾತಿತ್ವಾಭಾವವತ್—ಸಾಂಕರ್ಯಾತ್. ಸಾಂಕರ್ಯವಿರುವುದರಿಂದ 'ಭೂತತ್ವಂ ಜಾತಿಃ' ಎಂಬ ಜ್ಞಾನ ಬರುವುದಿಲ್ಲ.

೪ ಅನವಸ್ಥಿತಿಃ—ಇದು ಜಾತಿಪ್ರಕಾರಕ ಜ್ಞಾನದಲ್ಲಿ ಬಾಧಕ. ಅನವಸ್ಥಾ ಕಾರಣದಿಂದ ಜಾತಿಯು ಜಾತಿಯುಳ್ಳದ್ದು ಎಂಬ ಜ್ಞಾನ ಬರುವುದಿಲ್ಲ. 'ಜಾತಿಃ ಜಾತಿಮತೀ' ಎಂಬಲ್ಲಿ ಜಾತಿಯೇ ಪ್ರಕಾರ. ಎಲ್ಲಿಯೂ ವಿಶ್ರಾಂತಿ ಇಲ್ಲದಿರುವುದೇ ಅನವಸ್ಥಾ. ಜಾತಿಯಲ್ಲಿ ಒಂದು ಜಾತಿ ಕಲ್ಪಿಸಿದರೆ ಅದರಲ್ಲಿ ಒಂದು ಜಾತಿ ಹೀಗೆ

ಉತ್ತರೋತ್ತರವಾಗಿ ಕಲ್ಪಿಸಬೇಕಾಗುತ್ತದೆ. ಆದುದರಿಂದ ಜಾತಿಯಲ್ಲಿ ಜಾತಿಯಿಲ್ಲ ವೆನ್ನಬೇಕು. ಜಾತಿಃ—ನ ಜಾತಿಮತೀ–ಅನವಸ್ಥಾಯಾಃ ||" ಎಂದು ಅನುಮಾನ. ಅನವಸ್ಥಾಲಕ್ಷಣಃ— 'ಅಪ್ರಾಮಾಣಿಕಾನಂತಪದಾರ್ಥಕಲ್ಪನಾಧಾರಾವಿಶ್ರಾಂತ್ಯಭಾವಃ' ಅನುಗತವಾದ ಒಂದು ಧರ್ಮವಿಲ್ಲದೇ ಇದು ಗೋವು, ಇದು ಗೋವು ಎಂಬ ಅನುಗತ ವ್ಯವಹಾರ ಕೂಡುವುದಿಲ್ಲ. ಅವಕ್ಕೋಸ್ಕರ ಗೋವಿನಲ್ಲಿ ಗೋತ್ವರೂಪ ಜಾತಿ ಅಂಗಿಕೃತ ವಾಗಿದೆ. ಹೀಗೆಯೇ 'ಜಾತಿಃ ಜಾತಿಃ' ಎಂಬ ಅನುಗತವ್ಯವಹಾರಕ್ಕೋಸ್ಕರ ಜಾತಿಯಲ್ಲಿ ಒಂದು ಜಾತಿಯನ್ನು ಅಂಗೀಕರಿಸಿದರೆ ಆ ಜಾತಿಯಲ್ಲಿರುವ ಜಾತಿಯ ಅನುಗತ ವ್ಯವಹಾರಕ್ಕೆ ಜಾತಿಜಾತಿಯಲ್ಲಿ ಇನ್ನೊಂದು ಜಾತಿಯನ್ನು ಹೇಳಬೇಕಾಗುತ್ತದೆ. ಹೀಗೆ ಅನವಸ್ಥಾದೋಷ ಬರುವುದರಿಂದ ಜಾತಿಯು ಜಾತಿಯಿಂದ ಕೂಡಿರುವುದಿಲ್ಲವೆಂದು ಸಿದ್ಧವಾಗುತ್ತದೆ. ಬಾಧವಿದ್ದರೆ ಅನುಗತಪ್ರತೀತಿಯು ಅನುಗತ ಧರ್ಮಕ್ಕೆ ಸಾಧಕ ವಾಗುವುದಿಲ್ಲ.

೫. ರೂಪಹಾನಿಃ—ಸ್ವತೋ ವ್ಯಾವರ್ತಕತ್ವರೂಪಲಕ್ಷಣಕ್ಕೆ ಭಂಗ ಬರುವುದೇ ರೂಪಹಾನಿ. ಇದೂ ಜಾತಿಪ್ರಕಾರಕಜ್ಞಾನಕ್ಕೆ ಪ್ರತಿಬಂಧಕವಾಗುತ್ತದೆ. "ವಿಶೇಷಾಃ ನ ಜಾತಿಮಂತಃ—ರೂಪಹಾನೇಃ ।( ಸ್ವತೋ ವ್ಯಾವರ್ತಕಸ್ಯ ಭಂಗಾತ್ )" ತಾನು ಇತರವ್ಯಾವೃತ್ತವಾಗಿ ಇನ್ನೊಂದಕ್ಕೆ ವ್ಯಾವರ್ತಕವಾಗುತ್ತದೆ. ವಸ್ತುವು ತನ್ನ ತನ್ನ ಅವಯುವಗಳಿಂದ ಇತರ ವ್ಯಾವರ್ತಕವಾಗುತ್ತದೆ. ಜಾತಿಗೆ ಆಶ್ರಯವಾದ ವಸ್ತುವು ತನ್ನ ಜಾತಿಯ ಮೂಲಕವೇ ವ್ಯಾವರ್ತಕವಾಗುತ್ತದೆ. ಘಟತ್ವ ಘಟದಲ್ಲಿರುವುದರಿಂದ ಪಟ ದಿಂದ ಘಟವು ವ್ಯಾವೃತ್ತವಾಗಿದೆ. ವಿಶೇಷಪದಾರ್ಥಕ್ಕೆ ಜಾತಿಮೂಲಕ ಭೇದ ಸಾಧಕತ್ವವಿಲ್ಲ. ಅವು ಜಾತಿ ಮೂಲಕ ವ್ಯಾವರ್ತಕಗಳಾದರೆ ಸ್ವತೋವ್ಯಾವರ್ತಕ ಗಳೆಂಬ ಅವುಗಳ ಲಕ್ಷಣವು ನಷ್ಟವಾಗಬೇಕಾಗುತ್ತದೆ. ಇವು ಸ್ವರೂಪದಿಂದಲೇ ಭೇಧ ಸಾಧಕಗಳೆಂದು ಸಿದ್ಧಾಂತ ವಿಶೇಷದಲ್ಲಿ ಜಾತಿ ಒಪ್ಪಿದರೆ ವಿಶೇಷಪದಾರ್ಥಲಕ್ಷಣಕ್ಕೆ ಭಂಗ ಬರುವುದರಿಂದ ವಿಶೇಷತ್ವವು ಜಾತಿಯಲ್ಲ. ಅದು ಒಂದು ಉಪಾಧಿ.

೬. ಅಸಂಬಂಧಃ—ಸಮವಾಯಸಂಬಂಧದ ಅಭಾವವೇ ಅಸಂಬಂಧ. ಸಮವಾಯ, ಅಭಾವಗಳು ಜಾತಿಉಳ್ಳವುಗಳು ಎಂಬ ಜ್ಞಾನಕ್ಕೆ ಅಸಂಬಂಧಜ್ಞಾನವು ಬಾಧಕ. ಸಮವಾಯವೆಂಬುದು ಒಂದು ಸಂಬಂಧ. ಇದರಲ್ಲಿ ಸಮವಾಯತ್ವರೂಪ ಜಾತಿ ಇರುವುದಾದರೆ ಅದು ಸಮವಾಯಸಂಬಂಧದಿಂದಲೇ ಇರಬೇಕು. ಸಮವಾಯ ದಲ್ಲಿ ಇನ್ನೊಂದು ಸಮವಾಯಸಂಬಂಧ ಅಪ್ರಸಿದ್ಧವಾಗಿದೆ. ರೂಪಾದಿಧರ್ಮಗಳು ದ್ರವ್ಯದಲ್ಲಿ ಸಮವಾಯಸಂಬಂಧದಿಂದ ಇರುವಂತೆ ಸಮವಾಯದಲ್ಲಿ ಸಮವಾಯತ್ವವು ಸಮವಾಯಸಂಬಂಧದಿಂದ ಇರಲುಸಾಧ್ಯವಿಲ್ಲ. ಸಮವಾಯವು ಕೆಲವು ಕಡೆ ಪ್ರತಿಯೋಗಿತಾಸಂಬಂಧದಿಂದಲೂ ಕೆಲವು ಕಡೆ ಅನುಯೋಗಿತಾಸಂಬಂಧದಿಂದಲೂ ಇರುತ್ತದೆ. ಯಾವುದರ ಸಂಬಂಧಹೇಳುತ್ತೇವೋ ಅದು ಆ ಸಂಬಂಧಕ್ಕೆ ಪ್ರತಿಯೋಗಿ ಎಲ್ಲಿ ಸಂಬಧಹೇಳುತ್ತೇವೋ ಅದು ಆ ಸಂಬಂಧಕ್ಕೆ ಅನುಯೋಗಿ. ರೂಪಸಮವಾಯ

ದ್ರವ್ಯದಲ್ಲಿದೆಯೆಂದರೆ ಸಮವಾಯಕ್ಕೆ ರೂಪಪ್ರತಿಯೋಗಿ, ದ್ರವ್ಯ ಅನುಯೋಗಿ ಆಗುತ್ತದೆ. ಸಮವಾಯದಲ್ಲಿ ಸಮವಾಯಕಲ್ಪನೆ ಇಲ್ಲ. ಹೀಗೆಯೇ ಅಭಾವತ್ವವೂ ಜಾತಿಯಲ್ಲ. ಜಾತಿಯೆಂದರೆ ಹಿಂದಿನಂತೆ ಸಮವಾಯದಿಂದ ಇದೆಯೆನ್ನಬೇಕು. ಅಭಾವದಲ್ಲಿ ಸಮವಾಯದಿಂದ ಯಾವುದೂ ಇಲ್ಲ. 'ಸಮವಾಯಾಭಾವೌ—ಜಾತ್ಯಭಾವವನ್ತೌ—ಪ್ರತಿಯೋಗಿತಾನುಯೋಗಿತಾನ್ಯತರಸಂಬಂಧೇನ ( ಜಾತ್ಯತಿರಿಕ್ತಪ್ರತಿಯೋಗಿಕತ್ವವಿಶಿಷ್ಟ ) ಸಮವಾಯಾಭಾವಾತ್' ಎಂಬ ಅನುಮಾನದಿಂದ ಅಭಾವತ್ವ, ಸಮವಾಯತ್ವಗಳು ಜಾತಿಯಲ್ಲವೆಂದು ಸಿದ್ಧವಾಗುತ್ತದೆ. ಹೀಗೆ ಆರು ಜಾತಿಬಾಧಕಗಳಿಂದ ಜಾತ್ಯಭಾವವನ್ನು ನಿರ್ಣಯಿಸಬೇಕು. ಜಾತಿಬಾಧಕಸಂಗ್ರಹಃ' ಎಂಬುದಕ್ಕೆ ಶಾಬ್ದಬೋಧ. "ಜಾತಿಜಾತಿತ್ವಅನ್ಯತರಪ್ರಕಾರಕ ಜ್ಞಾನನಿಷ್ಠಪ್ರತಿಬಧ್ಯತಾನಿರೂಪಿತ ಪ್ರತಿಬಂಧಕತಾಕಜ್ಞಾನವಿಷಯಜ್ಞಾನಜನಕಾಲ್ಪಶಬ್ದಪ್ರಯೋಗಃ ॥" ಅಜಹತ್ ಸ್ವಾರ್ಥಲಕ್ಷಣೆಯಿಂದ ಜಾತಿಪದದಿಂದ ಜಾತಿ, ಜಾತಿತ್ವ ಎರಡನ್ನೂ ತೆಗೆದುಕೊಳ್ಳಬೇಕು.

ಪರ, ಅಪರವೆಂದು ಜಾತಿ ಎರಡು ವಿಧವಾಗಿದೆ. ದ್ರವ್ಯಗುಣ ಕರ್ಮಗಳಲ್ಲಿ ಸತ್ತಾ ಎಂಬ ಪರಜಾತಿ ಇದೆ. ದ್ರವ್ಯಂ ಸತ್, ಗುಣಃ ಸನ್, ಕರ್ಮಸತ್ ಎಂಬ ಅನುಗತ ಪ್ರತೀತಿಯೇ ಸತ್ತಾ ಜಾತಿಯಲ್ಲಿ ಪ್ರಮಾಣ. ಇದು ಹೀಗೆ ಮೂರರಲ್ಲಿರುವುದರಿಂದ ಎಲ್ಲಾ ಜಾತಿಗಳಿಗಿಂತಲೂ ಅಧಿಕದೇಶ ವೃತ್ತಿಯಾದುದರಿಂದ ವ್ಯಾಪಕ ಜಾತಿಯಾಗುತ್ತದೆ. ಅಪರಜಾತಿ ಸತ್ತಾಜಾತಿಗಿಂತ ಅಲ್ಪದೇಶದಲ್ಲಿರುತ್ತದೆ. ಆದುದರಿಂದ ಸತ್ತಾ ವ್ಯಾಪ್ಯವಾಗುತ್ತದೆ. ॥ ೮ ॥

**ಪರಭಿನ್ನಾ ಚ ಯಾ ಜಾತಿಃ ಸೈವಾಽಪರತಯೋಚ್ಯತೇ ॥**
**ದ್ರವ್ಯತ್ವಾದಿಕಜಾತಿಸ್ತು ಪರಾಪರತಯೋಚ್ಯತೇ ॥ ೯ ॥**
**ವ್ಯಾಪಕತ್ವಾತ್ಪರಾಪಿ ಸಾದ್ವ್ಯಾಪ್ಯತ್ವಾದಪರಾಪಿ ಚ ॥**

**ಪೃಥಿವೀತ್ವಾದ್ಯಪೇಕ್ಷಯಾ ವ್ಯಾಪಕತ್ವಾದಧಿಕದೇಶವೃತ್ತಿತ್ವಾತ್ ದ್ರವ್ಯತ್ವಾದೇಃ ಪರತ್ವಂ, ಸತ್ತಾಪೇಕ್ಷಯಾ ವ್ಯಾಪ್ಯತ್ವಾದ್ ಅಲ್ಪದೇಶವೃತ್ತಿತ್ವಾಚ್ಚ ದ್ರವ್ಯತ್ವಸ್ಯಾಪರತ್ವಮ್ । ತಥಾ ಚ—ಧರ್ಮದ್ವಯ ಸಮಾವೇಶಾದುಭಯಮವಿರುದ್ಧಮ್ ॥**

ಪರವಾದ ಸತ್ತಾಜಾತಿಗಿಂತ ಬೇರೆ ಇರತಕ್ಕ ಜಾತಿಗಳೆಲ್ಲವೂ ಅಪರ ಜಾತಿಗಳಾಗುತ್ತವೆ. ದ್ರವ್ಯತ್ವ, ಪೃಥಿವೀತ್ವ ಮುಂತಾದ ಜಾತಿಗಳು ಪರಾಪರಜಾತಿಗಳಾಗುತ್ತವೆ. ಪರತ್ವ, ಅಪರತ್ವಗಳು ಪರಸ್ಪರ ವಿರುದ್ಧವಾದುದರಿಂದ ಹೇಗೆ ಒಂದರಲ್ಲಿ ಬರುತ್ತವೆ ? ಎಂಬುದನ್ನು ತೋರಿಸುತ್ತಾನೆ. 'ಪೃಥಿವೀ—'ಇತ್ಯಾದಿ. ದ್ರವ್ಯತ್ವವು ಪೃಥಿವೀತ್ವಾದಿಗಳಿಗಿಂತ ಅಧಿಕದೇಶದಲ್ಲಿರುವುದರಿಂದ ವ್ಯಾಪಕವಾಗಿ ಪರವಾಗುತ್ತದೆ. ಸತ್ತಾಜಾತಿಗಿಂತ

ವ್ಯಾಪ್ಯವಾಗಿ ಅಲ್ಪದೇಶದಲ್ಲಿರುವುರಿಂದ ಅಪರತ್ವ ಬರುತ್ತದೆ. ಹೀಗೆ ಆಪೇಕ್ಷಿಕಧರ್ಮ ದ್ವಯವಿರುವುದರಿಂದ ವಿರೋಧ ಬರುವುದಿಲ್ಲ. ಒಬ್ಬ ಹೆಂಗಸಿನಲ್ಲಿ ಪತ್ಯಪೇಕ್ಷೆಯಿಂದ ಕಾಂತಾತ್ವವೂ, ಮಗನ ಅಪೇಕ್ಷೆಯಿಂದ ಮಾತೃತ್ವವೂ, ಹೀಗೆ ನಾನಾ ವಿರುದ್ಧಧರ್ಮ ಗಳು ಬರುತ್ತವೆ. ಅದರಂತೆ ಇಲ್ಲಿ ಅಪೇಕ್ಷಿತವಾಗಿ ಬಂದುದರಿಂದ ವಿರೋಧವಿಲ್ಲ.

**ಅಂತ್ಯೋ ನಿತ್ಯದ್ರವ್ಯವೃತ್ತಿರ್ವಿಶೇಷಃ ಪರಿಕೀರ್ತಿತಃ ॥ ೧೦ ॥**

**ಅಂತೇ ಅವಸಾನೇ ವರ್ತತ ಇತ್ಯಂತ್ಯಃ। ಯದಪೇಕ್ಷಯಾ ವಿಶೇಷೋನಾಸ್ತೀತ್ಯರ್ಥಃ ಘಟಾದೀನಾಂ ದ್ವ್ಯಣುಕಪರ್ಯಂತಾನಾಂ ತತ್ತ ದವ ಯವಭೇದಾತ್ಪರಸ್ಪರಂ ಭೇದಃ ಪರಮಾಣೂನಾಂ ಪರಸ್ಪರಭೇದಕೋ ವಿಶೇಷ ಏವ। ಸ ತು ಸ್ವತ ಏವ ವ್ಯಾವೃತ್ತಃ ತೇನ ತತ್ರ ವಿಶೇಷಾಂತರಾ ಪೇಕ್ಷಾನಾಸ್ತೀತಿ ಭಾವಃ ॥ ೧೦ ॥**

'ಅಂತೇ—ಉತ್ಪಾದವಿನಾಶಯೋರಂತೇ.' ಉತ್ಪತ್ತಿವಿನಾಶದ ಕೊನೆಯಲ್ಲಿ ಇರುವುದರಿಂದ ಅಂತವೆಂದರೆ ನಿತ್ಯದ್ರವ್ಯ ಪರಮಾಣು ಮುಂತಾದವುಗಳು ಆಗುತ್ತವೆ. ಭವಾರ್ಥದಲ್ಲಿ (ದಿಗಾದಿಭ್ಯೋಯತ್) ಯತ್ ಪ್ರತ್ಯಯ ಬಂದಿದೆ. ಅವುಗಳಲ್ಲಿ ಇರು ವುದು ವಿಶೇಷ. ಅಂತೇಸ್ವೀಕೃತಃ ಎಂದು ಕೊನೆಯ ವ್ಯಾವರ್ತಕರೂಪದಿಂದ ಅಂಗೀಕರಿ ಸಿದ ಪದಾರ್ಥ. ನಿತ್ಯದ್ರವ್ಯಗಳಿಗೆ ಭೇದಸಾಧಕಗಳಾಗಿಯೂ ತಾವು ಸ್ವತೋವ್ಯಾವೃತ್ತ ಗಳಾಗಿಯೂ ಇರುವವುಗಳು. ಸಾವಯವ ಪದಾರ್ಥಗಳಿಗೆ ಅವುಗಳ ಅವಯವಗಳೇ ಭೇದಸಾಧಕಗಳಾಗುತ್ತವೆ. ಅವಯವಗಳ ಮೂಲಕ ಪದಾರ್ಥಗಳಿಗೆ ಭೇದ ಕಲ್ಪಿಸ ಬಹುದು. ಪರಮಾಣು ಮುಂತಾದ ನಿತ್ಯದ್ರವ್ಯಗಳಿಗೆ ಅವಯವಗಳು ಇಲ್ಲದಿರುವುದರಿಂದ ಈ ವಿಶೇಷ ಪದಾರ್ಥವನ್ನು ಕಲ್ಪಿಸದಿದ್ದರೆ ಭೇದಸಾಧಕವಾದದ್ದು ಯಾವುದೂ ಇಲ್ಲದೇ ಹೋಗಬೇಕಾಗುತ್ತದೆ. ಅವುಗಳ ಪರಸ್ಪರ ವ್ಯಾವೃತ್ತಿಬುದ್ಧಿಯನ್ನುಂಟುಮಾಡುವುದೇ ವಿಶೇಷ. ವಿಶೇಷಕ್ಕೆ ವ್ಯಾವರ್ತಕವಾಗಿ ವಿಶೇಷಾಂತರಾಪೇಕ್ಷೆ ಇಲ್ಲ. 'ಘಟಃ— ಪಟಾತ್ ಭಿದ್ಯತೇ–ಘಟತ್ವಾತ್ !''. ಎಂಬಲ್ಲಿ ಘಟಕ್ಕಿಂತ ಬೇರೆಯಾದ ಘಟತ್ವರೂಪ ಧರ್ಮವು ಪಟದ ಭೇದಸಾಧಕವಾದಂತೆ ವಿಶೇಷದಲ್ಲಿ ವಿಶೇಷಕ್ಕಿಂತ ಬೇರೆಯಾದ ಯಾವ ಧರ್ಮವೂ ಭೇದಸಾಧಕವಾಗಿ ಸ್ವೀಕೃತವಾಗಲಿಲ್ಲ. ಆದುದರಿಂದಲೇ ಸ್ವತೋವ್ಯಾವರ್ತಕ ವೆಂದಿದೆ. ಇದನ್ನೇ 'ಯದಪೇ—' ಎಂಬುದರಿಂದ ತೋರಿಸಿರುತ್ತಾನೆ. ವಿಶೇಷಗಳ ಭೇದಸಾಧನೆ ವಿಶೇಷಗಳಿಂದಲೇ ಆಗುತ್ತದೆ.

ಸ್ವತೋವ್ಯಾವರ್ತಕವೆಂಬುದಕ್ಕೆ ಶಾಬ್ದಬೋಧ. ವಿ+ಆಙ್ ಇತ್ಯುಪಸರ್ಗ ಪೂರ್ವಕ ವೃತ್ ಧಾತೋಃ ಇತರ ಭೇದವಿಧೇಯಕಾನುಮಿತಿರರ್ಥಃ। ಕ್ತಪ್ರತ್ಯಯಸ್ಯ 'ವಿಷಯತಾವಾನ್' ಅರ್ಥಃ। ಅನುಮಿತೇಃ ನಿರೂಪಿತತ್ವಸಂಬಂಧೇನ ವಿಷಯತಾ

ಯಾಮನ್ವಯಃ. । ಸ್ವಪದಂ ಸ್ವಾತ್ಮಲಿಂಗಜ್ಞಾನಪರಂ. । ಪಂಚಮ್ಯರ್ಥತಸಃ ಜನ್ಯತ್ವಮರ್ಥಃ. । ಪ್ರಕೃತ್ಯರ್ಥಸ್ಯ ನಿರೂಪಿತತ್ವಸಂಬಧೇನ ಜನ್ಯತ್ವೇ ಅನ್ವಯಃ. । ಜನ್ಯತ್ವಸ್ಯ ಆಶ್ರಯತಾಸಂಬಂಧೇನ ಅನುಮಿತೌ ಅನ್ವಯಃ । ತಥಾ ಚ 'ಸ್ವಾತ್ಮಲಿಂಗನಿಷ್ಠ ಜನಕತಾ ನಿರೂಪಿತ ಜನ್ಯತಾಶ್ರಯೇತರಭೇದ ವಿಧೇಯಕಾನುಮಿತಿ ನಿರೂಪಿತವಿಷಯತಾವಾನ್' ಇತಿ ಫಲತಿ । ತಸ್ಯಾಭೇದೇನ ಸ್ವಶಬ್ದೇ ಅನ್ವಯಃ । ಏವಕಾರಾರ್ಥಃ ಭೇದಃ, ಅಭಾವತ್ವಂಚ ಅರ್ಥಃ । ಪ್ರತ್ಯಯಪ್ರಕೃತಿಭೂತಸ್ವಶಬ್ದೇ ಭೇದಪದಾನ್ವಯೇ, ವಿಷಯತಾಯಾಮಭಾವತ್ವಾನ್ವಯೇ—ಸ್ವಭಿನ್ನಲಿಂಗಲಿಂಗನಿಷ್ಠ ಜನಕತಾನಿರೂಪಿತ ಜನ್ಯತಾಶ್ರಯ ಇತರಭೇದವಿಧಾಯಕ ಅನುಮಿತಿನಿರೂಪಿತ ವಿಷಯತಾವನ್ನಿಷ್ಠಪ್ರತಿಯೋಗಿತಾಕಾಭಾವವತ್ವೇ ಸತಿ ಸ್ವಾತ್ಮಲಿಂಗ....ವಿಷಯತಾವತ್ವಮ್ । ವಿಶೇಷ್ಯದಳಮಾತ್ರೋಕ್ತೌಘಟತ್ವೇ ಅತಿವ್ಯಾಪ್ತಿಃ. ! ಅಯಂ ಘಟಃ, ತಸ್ಮಾತ್ ಘಟಾತ್ ಭಿದ್ಯತೇ—ತಾದಾತ್ಮ್ಯೇನೈತತ್ ಘಟಾತ್.

ಈ ಅನುಮಾನದಲ್ಲಿ ಸ್ವಾತ್ಮಲಿಂಗ....ವಿಷಯಾತ್ವವು ಘಟತ್ವದಲ್ಲಿ ಸಂಭವಿಸುತ್ತದೆ. ಆದುದರಿಂದ ಗುರುಭೂತವಾದರೂ ನಞ್ದ್ವಯಘಟಿತಲಕ್ಷಣ ಹೇಳಿದೆ. ಹೀಗೆ ಹೇಳುವುದರಿಂದ 'ಸ್ವಭಿನ್ನಲಿಂಗಜನ್ಯ ಸ್ವವಿಶೇಷ್ಯಕ ಸ್ವಸಜಾತಿಯೇತರಭೇದ ವಿಧೇಯಕಾನುಮಿತ್ಯವಿಷಯತ್ವಂ' ಎಂದು ವಿಶೇಷದ ಲಕ್ಷಣ ನಿಶ್ಚಿತವಾಗುತ್ತದೆ. ಅನುಮಿತಿಯಲ್ಲಿ ಸ್ವವಿಶೇಷ್ಯಕತ್ವದಳವನ್ನು ಸ್ವಾತಂತ್ರ್ಯದಿಂದ ಹೇಳಬೇಕು. ಇತರವನ್ನು ಆಶ್ರಯಿಸಿ ಲಕ್ಷಣ ಸಮನ್ವಯ ಮಾಡಬೇಕು. ಸ್ವಪದದಿಂದ ಪಕ್ಷವನ್ನು ತೆಗೆದುಕೊಳ್ಳಬೇಕು. 'ಘಟಃ—ಪಟಾತ್ ಭಿದ್ಯತೇ—ಕಪಾಲಸಮವೇತತ್ವಾತ್' ಈ ಅನುಮಾನದಲ್ಲಿ ಸ್ವಂ—ಘಟಃ, ಸ್ವಭಿನ್ನಂ ಯಲ್ಲಿಂಗಂ ( ಘಟಕ್ಕಿಂತ ಬೇರೆಯಾದ ಹೇತು )—ಕಪಾಲಸಮವೇತತ್ವರೂಪವಾದ ಲಿಂಗ. ತಜ್ಜನ್ಯಾ ಯಾ ಅನುಮಿತಿಃ ( ಆ ಹೇತುವಿನಿಂದ ಉಂಟಾದ ಅನುಮಿತಿ )— 'ಘಟಃ—ಪಟಾತ್ ಭಿದ್ಯತೇ' ಎಂಬ ಅನುಮಿತಿ. ಈ ಅನುಮಿತಿಯಲ್ಲಿ ಸ್ವವಿಶೇಷ್ಯಕತ್ವವಿದೆ—ಘಟವೇ ವಿಶೇಷ್ಯವಾಗಿದೆ. ಸ್ವಸ....ಕತ್ವವೂ ಇದೆ. ಸ್ವಂ—ಘಟಃ, ತತ್ಸಜಾಯೇತರಃ—ಪಟಃ, ತದ್ಭೇದ ವಿಧಾಯಕಾ ಚ. ಈ ಅನುಮಿತಿ ವಿಷಯತ್ವವು ಘಟದಲ್ಲಿಯೂ ಅವಿಷಯತ್ವವು ವಿಶೇಷದಲ್ಲಿಯೂ ಬರುತ್ತದೆ. ಇಲ್ಲಿ 'ಸ್ವಭಿನ್ನಲಿಂಗಜನ್ಯ' ವೆಂದು ಹೇಳದಿದ್ದರೆ ಅಸಂಭವದೋಷ ಬರುತ್ತದೆ. 'ಅಯಂ ವಿಶೇಷಃ—ತದ್ವಿಶೇಷಾದ್ಭಿದ್ಯತೇ—ತಾದಾತ್ಮ್ಯೇನ ಏತದ್ವಿಶೇಷಾತ್.' ಈ ಅನುಮಾನದಲ್ಲಿ ಸ್ವಂ—ವಿಶೇಷಃ ಅನುಮಿತಿಯಲ್ಲಿ ವಿಶೇಷವೇ ವಿಶೇಷ್ಯವಾದುದರಿಂದ ಸ್ವವಿಶೇಷ್ಯಕತ್ವ ಬರುತ್ತದೆ. ಸ್ವವಿಶೇಷ್ಯಕಾನುಮಿತಿ ಎಂದರೆ' ಅಯಂ ವಿಶೇಷಃ—ತದ್ವಿಶೇಷಾತ್ ಭಿದ್ಯತೇ' ಎಂಬ ಅನುಮಿತಿ. ಇಲ್ಲಿ ಸ್ವಸಜಾತೀಯಭೇದ ವಿಧಾಯಕತ್ವವೂ ಇರುವುದರಿಂದ ಅನುಮಿತಿವಿಷಯತ್ವವೇ ವಿಶೇಷಕ್ಕೆ ಬರುವುದಲ್ಲದೆ ಅವಿಷಯತ್ವ ಬರುವುದಿಲ್ಲ. 'ಸ್ವಭಿನ್ನಲಿಂಗಜನ್ಯ' ಎಂದು ಹೇಳಿದರೆ ಇಲ್ಲಿ ಸ್ವ—ತಾನೇ ಲಿಂಗವಾದುದರಿಂದ ಈ ಅನುಮಾನವನ್ನು ತೆಗೆದುಕೊಳ್ಳಲು ಬರುವುದಿಲ್ಲ. ಸ್ವವಿಶೇಷ್ಯಕ'

ವೆಂದು ಹೇಳದಿದ್ದರೆ 'ಸ್ವಭಿನ್ನಲಿಂಗಜನ್ಯ ಸ್ವಸಜಾ....ಷಯತ್ವಂ' ಎಂದು ಲಕ್ಷಣ ವಾಗುತ್ತದೆ. ಆಗ 'ಘಟಃ—ವಿಶೇಷಾತ್ ಭಿದ್ಯತೇ—ಕಪಾಲಸಮವೇತತ್ವಾತ್' ಎಂಬಲ್ಲಿ ಸ್ವಂ—ವಿಶೇಷಃ, ತದ್ಭಿನ್ನಂ ಯಲ್ಲಿಂಗಂ—ಕಪಾಲಸಮವೇತತ್ವಂ, ತಜ್ಜ ನ್ಯಾ ಯಾ ಅನುಮಿತಿಃ—' ಘಟಃ—ವಿಶೇಷಾತ್ ಭಿದ್ಯತೇ' ಎಂಬ ಅನುಮಿತಿ. ಅನುಮಿತಿ ವಿಷಯತ್ವ ವಿಶೇಷಕ್ಕೂ ಬರುತ್ತದೆ. ಆದರೆ ವಿಶೇಷ ವಿಶೇಷ್ಯಕತ್ವವಿಲ್ಲ. ಅಲ್ಲಿ ವಿಶೇಷ್ಯ—ಘಟ ಆದುದರಿಂದ 'ಸ್ವವಿಶೇಷ್ಯಕತ್ವಂ' ಎಂಬುದು ಸಾರ್ಥಕವಾಗಿದೆ. 'ಸ್ವಸಜಾ....ಕ' ವಿಶೇಷಣ ಕೊಡದೇ ಹೋದರೆ—'ವಿಶೇಷಃ—ಘಟಾತ್ ಭಿದ್ಯತೇ-ಗುಣ ಶೂನ್ಯತ್ವಾತ್' ಎಂಬ ಅನುಮಾನದಲ್ಲಿ ಸ್ವಂ—ವಿಶೇಷಃ ಸ್ವಭಿನ್ನಂ ಯಲ್ಲಿಂಗಂ—ಗುಣ ಶೂನ್ಯತ್ವಂ. ತಜ್ಜನ್ಯಾಸ್ವವಿಶೇಷ್ಯಕಾ ಚ ಯಾ ಅನುಮಿತಿಃ—ವಿಶೇಷವಿಶೇಷ್ಯಕಾನು ಮಿತಿಯಾಗುವುದರಿಂದ ತದ್ವಿಷಯತ್ವವೇ ವಿಶೇಷದಲ್ಲಿ ಬರುವುದರಿಂದ ಪುನಃ ಅಸಂಭವ ಬರುತ್ತದೆ. ಇತರ ಭೇದವಿಧಾಯಕವೆಂದುದರಿಂದ ಘಟಭೇದವಿಧಾಯಕವಾಗಿದೆ. 'ಸ್ವಸಜಾತೀಯ ಭೇದವಿಧಾಯಕ'ವೆಂದರೆ ಇದನ್ನು ತೆಗೆದುಕೊಳ್ಳಲು ಸಾಧ್ಯವಿಲ್ಲ. 'ಪದಾರ್ಥವಿಭಾಜಕೋಪಾಧಿಮತ್ವೇನ' ಸಾಜಾತ್ಯ ವಿವಕ್ಷಿತವಾಗಿದೆ. ಇಲ್ಲವಾದರೆ ಪ್ರಮೇಯತ್ವಾದಿಗಳಿಂದ ಸಾಜಾತ್ಯ ತೆಗೆದುಕೊಂಡು ಪುನಃ ಅಸಂಭವವೇ ಬರುತ್ತದೆ.

ಹೀಗೆ ಹೇಳಿದರೂ ಅನುಮಿತ್ಯವಿಷಯತ್ವವು ಉದಾಸೀನ ಘಟಪಟಾದಿಗಳಲ್ಲಿಯೂ ಬರುವುದರಿಂದ ವ್ಯಭಿಚರಿತವಾಗುತ್ತದೆ. ಅದಕ್ಕೋಸ್ಕರ ವೀಪ್ಸಾರ್ಥ ಹೇಳಬೇಕು. ತಾದೃಶ ಅನುಮಿತಿ ವಿಷಯಃ ಯೋಯಃ ತದ್ಭಿನ್ನತ್ವಂ ಎಂದರೆ ಆಗ ಕೇವಲ ವಿಶೇಷವೇ ಆಗುತ್ತದೆ.

ಪರಮಾಣುಭೇಧಃ—ಕಿಂಚಿಲ್ಲಿಂಗಜನ್ಯಃ—ಭೇದವತ್ತ್ವಾತ್ । ಕಪಾಲಸಮ ವೇತತ್ವಜ್ಞಾಪ್ಯಘಟಭೇದವತ್ । ಈ ಅನುಮಾನದಿಂದ ಪರಮಾಣುಭೇದಸಾಧಕವಾಗಿ ವಿಶೇಷಪದಾರ್ಥವು ಸಿದ್ಧಿಸುತ್ತದೆ.

**ಘಟಾದೀನಾಂ ಕಪಾಲಾದೌ ದ್ರವ್ಯೇಷು ಗುಣಕರ್ಮಣೋಃ ॥**
**ತೇಷು ಜಾತೇಶ್ಚ ಸಂಬಂಧಃ ಸಮವಾಯಃ ಪ್ರಕೀರ್ತಿತಃ ॥ ೧೧ ॥**

'ಘಟಾದೀನಾಂ' ಎಂಬಲ್ಲಿ ಷಷ್ಠಿಗೆ ಪ್ರತಿಯೋಗಿತ್ವಂ ಅರ್ಥ. ಯಾವುದರ ಸಂಬಂಧ ಹೇಳುತ್ತೇವೋ ಅದಕ್ಕೆ ಅದು ಪ್ರತಿಯೋಗಿ. ಎಲ್ಲಿ ಸಂಬಂಧ ಹೇಳುತ್ತೇವೋ ಅದಕ್ಕೆ ಅದು ಅನುಯೋಗಿ. ಕಪಾಲಾದೌ ಎಂಬಲ್ಲಿ ಸಪ್ತಮಿಗೆ ಅನುಯೋಗಿತ್ವಂ ಅರ್ಥ. ಘಟಾದಿಗಳಿಂದ ಅವಯವಿಸಾಮಾನ್ಯವನ್ನೂ, ಕಪಾಲಾದಿಗಳಿಂದ ಅವಯವ ಸಾಮಾನ್ಯವನ್ನೂ ತೆಗೆದುಕೊಳ್ಳಬೇಕು. ಆಗ 'ಅವಯವಿ ಪ್ರತಿಯೋಗಿಕಃ ಅವಯವಾನು ಯೋಗಿಕಃ', 'ಗುಣಕರ್ಮಪ್ರತಿಯೋಗಿಕಃ ದ್ರವ್ಯಾನುಯೋಗಿಕಃ', 'ಜಾತಿಪ್ರತಿ ಯೋಗಿಕಃ, ದ್ರವ್ಯಗುಣಕರ್ಮಾನುಯೋಗಿಕಃ', ಚಕಾರದಿಂದ 'ವಿಶೇಷಪ್ರತಿಯೋಗಿಕಃ

ನಿತ್ಯದ್ರವ್ಯಾನುಯೋಗಿಕಃ ಸಂಬಂಧಃ ಸಮವಾಯಃ' ಎಂದು ಫಲಿತವಾಗುತ್ತದೆ. ಘಟವು ಸಮವಾಯದಿಂದ ಕಪಾಲದಲ್ಲಿದೆ. ಇತ್ಯಾದಿ ತಿಳಿಯಬೇಕು.

**ಅವಯವಾವಯವಿನೋರ್ಜಾತಿವ್ಯಕ್ತ್ಯೋರ್ಗುಣಗುಣಿನೋಃ ಕ್ರಿಯಾ ಕ್ರಿಯಾವತೋರ್ನಿತ್ಯದ್ರವ್ಯವಿಶೇಷಯೋಶ್ಚ ಯಃ ಸಂಬಂಧಃ ಸ ಸಮವಾಯಃ । ಸಮವಾಯತ್ವಂ ನಿತ್ಯ ಸಂಬಂಧತ್ವಮ್ ॥**

ಅವಯವ ಅವಯವಿಗೂ, ಜಾತಿವ್ಯಕ್ತಿಗಳಿಗೂ, ಗುಣ ಮತ್ತು ಗುಣಿಗೂ, ಕ್ರಿಯಾ ಮತ್ತು ಕ್ರಿಯಾ ವಿಶಿಷ್ಟಕ್ಕೂ, ನಿತ್ಯದ್ರವ್ಯ ಮತ್ತು ವಿಶೇಷಕ್ಕೂ ಇರುವ ಸಂಬಂಧವೇ ಸಮವಾಯ. ಇದರ ಲಕ್ಷಣ ತೋರಿಸುತ್ತಾನೆ. 'ನಿತ್ಯಸಂಬಂಧತ್ವಂ' —ಇತಿ. 'ಸಂಬಂಧಿಭಿನ್ನತ್ವೇ ಸತಿ ಸಂಬದ್ಧ ಪ್ರತೀತಿನಿಯಾಮಕತ್ವಂ' ಇದು ಸಂಬಂಧ ಸಾಮಾನ್ಯ ಲಕ್ಷಣ. ಸಂಬಂಧವುಳ್ಳ ಪದಾರ್ಥಕ್ಕಿಂತಲೂ ಬೇರೆಯಾಗಿ ಇದು ಕೂಡಿದೆ ಎಂಬ ವ್ಯವಹಾರಕ್ಕೆ ಸಾಧಕವಾದದ್ದು ಎಂದರ್ಥ. ಸಮವಾಯವು ಒಂದು ನಿತ್ಯವಾದ ಸಂಬಂಧ. ಅಯುತಸಿದ್ಧಪದಾರ್ಥಗಳಿರುವ ಸಂಬಂಧ. ಯಾವ ಎರಡು ಪದಾರ್ಥ ಗಳಲ್ಲಿ ಒಂದು ಬೇರೆಯಾದರೆ ಒಂದರ ಉತ್ಪತ್ತಿಯಾಗಲೀ ಉಪಲಬ್ಧಿಯಾಗಲೀ ಪ್ರತೀತ ವಾಗದಿದ್ದರೆ ಅವು ಅಯುತಸಿದ್ಧಗಳು. ಅಯತ ಸಿದ್ಧಗಳಾದ ಗುಣ ಗುಣಿಗಳಲ್ಲಿ ಬೇರೆ ಯಾಗಿ ಗುಣವಾಗಲೀ ಗುಣಿಯಾಗಲೀ ತೋರುವುದಿಲ್ಲ. ಇದೇ ಹಿಂದೆ ಅವಯವ ಅವಯವಿಗಳಿಗೆ—ಎಂದು ಹೇಳಿರುವುದು.

**ತತ್ರ ಪ್ರಮಾಣಂ ತು—ಗುಣ ಕ್ರಿಯಾದಿ ವಿಶಿಷ್ಟ ಬುದ್ಧಿರ್ವಿಶೇಷಣ ವಿಶೇಷ್ಯ ಸಂಬಂಧವಿಷಯಾ-ವಿಶಿಷ್ಟಬುದ್ಧಿತ್ವಾತ್. 'ದಂಡೀಪುರುಷ' ಇತಿ ವಿಶಿಷ್ಟ ಬುದ್ಧಿವತ್ ಇತ್ಯನುಮಾನಮ್ । ಏತೇನ ಸಂಯೋಗಾದಿ ಬಾಧಾತ್ ಸಮವಾಯ ಸಿದ್ಧಿಃ । ನ ಚ ಸ್ವರೂಪಸಂಬಂದೇನ ಸಿದ್ಧ ಸಾಧ ನಮ್, ಅರ್ಥಾಂತರಂ ವಾ, ಅನಂತ ಸ್ವರೂಪಾಣಾಂ ಸಂಬಂಧತ್ವ ಕಲ್ಪನೇ ಗೌರವಾಲ್ಲಾಘವಾದೇಕ ಸಮವಾಯಸಿದ್ಧಿಃ । ನ ಚ ಸಮವಾಯಸ್ಯೈ ಕತ್ವೇ ವಾಯೌ ರೂಪವತ್ತಾ ಬುದ್ಧಿ ಪ್ರಸಂಗಃ ತತ್ರರೂಪ ಸಮವಾಯ ಸತ್ವೇಽಪಿ ರೂಪಾಭಾವಾತ್ ॥**

ಸಮವಾಯವು ಒಂದು ಸಂಬಂಧವೆಂಬುದರಲ್ಲಿ ಪ್ರಮಾಣ ತೋರಿಸುತ್ತಾನೆ. 'ತತ್ರ—'ಇತಿ. 'ನೀಲೋಘಟಃ' ಇತ್ಯಾದಿ ಗುಣವಿಶಿಷ್ಟಬುದ್ಧಿ. ನೀಲ ವಿಶೇಷಣ. ಘಟ ವಿಶೇಷ್ಯ. ಗತಿಮಾನ್ ದೇವದತ್ತಃ' ಇದು ಕ್ರಿಯಾವಿಶಿಷ್ಟಬುದ್ಧಿ 'ಘಟತ್ವವಾನ್. ಘಟಃ' ಇದು ಜಾತಿ ವಿಶಿಷ್ಟಬುದ್ಧಿ. ಇವು ವಿಶಿಷ್ಟಬುದ್ಧಿಯಾದುದರಿಂದ ಇಲ್ಲಿ (ಈ ಗುಣ ಕ್ರಿಯಾದಿ ವಿಶಿಷ್ಟ ಬುದ್ಧಿಯಲ್ಲಿ) ವಿಶೇಷಣ ವಿಶೇಷ್ಯಗಳ ಒಂದು ಸಂಬಂಧವು

ವಿಷಯವಾಗಿ ತೋರುತ್ತದೆ. 'ದಂಡೀ ಪುರುಷಃ' ಎಂಬುದು ವಿಶಿಷ್ಟಬುದ್ಧಿ. ಈ ಬುದ್ಧಿಯಲ್ಲಿ ದಂಡ ಮತ್ತು ಪುರುಷ ವಿಷಯವಾಗಿ ತೋರುವಂತೆ ಅವುಗಳ ಸಂಬಂಧವಾದ ಸಂಯೋಗವೂ ವಿಷಯವಾಗಿ ತೋರುತ್ತದೆ. ಅದರಂತೆ ಇಲ್ಲಿಯೂ ವಿಶಿಷ್ಟಬುದ್ಧಿಯಾದುದರಿಂದ ಈ ಗುಣ ಕ್ರಿಯಾದಿಗಳ ಒಂದು ಸಂಬಂಧವೂ ವಿಷಯವಾಗಿ ತೋರುತ್ತದೆ. ಗುಣ....ದ್ಧಿಃ—ಇದು ಪಕ್ಷ. 'ವಿಶೇಷ....ಯಾ ? ಇದು ಸಾಧ್ಯ. 'ವಿಶಿ....ತ್ವಾತ್.' ಇದು ಹೇತು. 'ದಂಡೀ ಪುರುಷಃ' ಇದು ದೃಷ್ಟಾಂತ. 'ಯಾ ಯಾ ವಿಶಿಷ್ಟಬುದ್ಧಿಃ ಸಾ ಸಾ ವಿಶೇಷಣ ವಿಶೇಷ್ಯಸಂಬಂಧ ವಿಷಯಾ' ಎಂಬುದು ವ್ಯಾಪ್ತಿ. ಈ ವಿಷಯ ರೂಪವಾಗಿ ತೋರುವ ಸಂಬಂಧವೇ ಸಮವಾಯ. ದ್ರವ್ಯಯೋರೇವ ಸಮವಾಯಃ' ಪರಸ್ಪರ ದ್ರವ್ಯಗಳಿರುವ ಸಂಬಂಧವೇ ಸಂಯೋಗವಾದುದರಿಂದ ಗುಣದ್ರವ್ಯಗಳಿಗೆ ಸಂಯೋಗ ಸಂಬಂಧವು ಬಾಧಿತವಾಗುತ್ತದೆ. ಈ ವಿಶಿಷ್ಟ ಬುದ್ಧಿಗೆ ಕಾರಣವಾದ ಸಂಬಂಧವೇ ಸಮವಾಯ. ಅಯುತಸಿದ್ಧಪದಾರ್ಥಗಳಿಗೆ ·ಸ್ವರೂಪಸಂಬಂಧವೆಂದು ಮೀಮಾಂಸಕರ ಮತ. ಅದನ್ನು ಆಶಂಕಿಸಿ ಖಂಡಿಸುತ್ತಾನೆ. 'ನಚ—' ಇತಿ. ವಿಶಿಷ್ಟ ಪ್ರತೀತಿಗೆ ನಿಯಾಮಕವಾಗಿ ಸಿದ್ಧಿಸುವ ಸಂಬಂಧವು ಸ್ವರೂಪವೆಂಬುದಾದರೆ ಆಗ ಸಿದ್ಧಸಾಧನತಾದೋಷ ಬರುತ್ತದೆ. ಅನುಮಾನವನ್ನು ಹೇಳಿ ಮಹಾಪ್ರಯತ್ನದಿಂದ ಸ್ವರೂಪ ಸಂಬಂಧವನ್ನೇ ಸಾಧಿಸಿದರೆ ನಾವು ಅಂಗೀಕರಿಸಿದುದನ್ನೇ ಹೇಳಿದಂತಾಗುತ್ತದೆ. ಹೊಸದಾಗಿ ಏನೂ ಸಾಧಿಸಿದಂತಾಗುವುದಿಲ್ಲ. ಪಿಷ್ಟಪೇಷಣನ್ಯಾಯದಂತೆ ನಾವು ಸಿದ್ಧಪಡಿಸಿರುವುದನ್ನೇ ಸಾಧಿಸಿದಂತಾಗುತ್ತದೆ. 'ಅರ್ಥಾಂತರಂ ವಾ—' ಇತಿ. ಉದ್ದೇಶ್ಯಾಸಿದ್ಧಿ ಎಂದರ್ಥ. 'ಪ್ರಕೃತಾದರ್ಥಾದಪ್ರತಿಸಂಬದ್ಧಾರ್ಥಮರ್ಥಾಂತರಂ' ಎಂದು ನ್ಯಾಯಸೂತ್ರ. ಪ್ರಕೃತಕ್ಕೆ ಬೇಕಾದ ಅರ್ಥವನ್ನು ಬಿಟ್ಟು ಅಸಂಬದ್ಧವಾದ ಅರ್ಥವನ್ನು ಹೇಳುವುದು ಅರ್ಥಾಂತರವೆಂಬ ಒಂದು ನಿಗ್ರಹಸ್ಥಾನ. ಸಮವಾಯವನ್ನು ಸಾಧಿಸಲು ಹೊರಟ ನೈಯಾಯಿಕರಿಗೆ ಅದು ಸಿದ್ಧಿಸದೆ, ಅನಿಷ್ಟವಾದ ಸ್ವರೂಪ ಸಂಬಂಧವು ಸಿದ್ಧಿಸಿದರೆ ಈ ನಿಗ್ರಹಸ್ಥಾನವಾದ ಅರ್ಥಾಂತರವು ಸಂಭವಿಸುತ್ತದೆ. ಇದು ಪೂರ್ವಪಕ್ಷಿಯಾದ ಮೀಮಾಂಸಕನ ವಾದ. ಇದನ್ನು ಖಂಡಿಸುತ್ತಾನೆ. 'ಅನಂತಸ್ವ —' ಇತಿ. ಗುಣಾದಿಗಳಿಗೆ ದ್ರವ್ಯಾದಿಗಳೊಡನೆ ಸಮವಾಯರೂಪವಾದ ಒಂದು ನಿತ್ಯಸಂಬಂಧದಿಂದಲೇ ನಿರ್ವಾಹವಾಗುವಾಗ ಅದನ್ನು ಬಿಟ್ಟು ಸ್ವರೂಪ ಸಂಬಂಧವನ್ನು ಕಲ್ಪಿಸುವುದಾದರೆ ಗೌರವ ಬರುತ್ತದೆ. ಸ್ವರೂಪವೇ ಸಂಬಂಧವೆನ್ನುವುದಾದರೆ ಆಯಾಯ ಗುಣಗಳು ಆಯಾಯ ದ್ರವ್ಯಗಳಲ್ಲಿ ಆಯಾಯ ಸ್ವರೂಪಗಳಿಂದ ಇವೆಯೆನ್ನಬೇಕು. ಆಗ ಅನಂತ ಸ್ವರೂಪ ಸಂಬಂಧಗಳನ್ನು ಕಲ್ಪಿಸಬೇಕಾದುದರಿಂದ ಗೌರವ. ನಮ್ಮ ಮತದಲ್ಲಿ ಕ್ಷಿತ್ಯಾದಿಗಳಿಗೆ ಕಾರಣರೂಪನಾಗಿ ಲಾಘವಜ್ಞಾನಸಹಕೃತವಾಗಿ ಒಬ್ಬ ಈಶ್ವರನು ಸಿದ್ಧನಾದಂತೆ ಅಯುತಸಿದ್ಧಗಳಿಗೆ ಲಾಘವದಿಂದ ಒಂದು ಸಮವಾಯ ಸಿದ್ಧವಾಗುತ್ತದೆ. ನವೀನರು ಅನೇಕ ಸಮವಾಯವನ್ನು ಒಪ್ಪಿದರೂ 'ಯತ್ಸಮವೇತಂ ಕಾರ್ಯಮುತ್ಪದ್ಯತೇ ತತ್ಸಮವಾಯಿಕಾರಣಂ' ಎಂದು ಸಮವಾಯಿ

ಕಾರಣ ಹೇಳುವುದರಿಂದ ಕಾರ್ಯತಾವಚ್ಛೇದಕ ಸಂಬಂಧರೂಪವಾಗಿ ಸಮವಾಯವನ್ನು ಒಪ್ಪಲೇಬೇಕಾಗುತ್ತದೆ.

ಸಮವಾಯ ಒಂದಾದರೆ ವಾಯುವಿನಲ್ಲಿ ರೂಪವತ್ವಜ್ಞಾನ ಬರಲಿ ವಾಯು (ರೂಪವುಳ್ಳದ್ದು) ಎಂದು ಆಶಂಕಿಸಿ ಖಂಡಿಸುತ್ತಾನೆ. 'ನಚ—'ಇತಿ. 'ವಾಯುಃ ರೂಪವಾನ್' ಎಂಬ ಜ್ಞಾನವು ಯಥಾರ್ಥವಾಗಲಿ ಎಂದು ಆಕ್ಷೇಪ. ಸ್ಪರ್ಶಪ್ರತಿಯೋಗಿಕ ಸಮವಾಯವು ವಾಯುವಿನಲ್ಲಿದೆ (ವಾಯುವಿನಲ್ಲಿ ಸಮವಾಯಸಂಬಂಧದಿಂದ ಸ್ಪರ್ಶಗುಣವಿದೆ.) ರೂಪಪ್ರತಿಯೋಗಿಕ ಸಮವಾಯ ಪೃಥಿವಿಯಲ್ಲಿದೆ. ಸಮವಾಯ ಒಂದೇ ಆದರೆ ಎರಡು ಈ ಸಮವಾಯಗಳೂ ಒಂದಾದುದರಿಂದ ರೂಪಸಮವಾಯವು ವಾಯುವಿನಲ್ಲಿರುವುದರಿಂದ ರೂಪವೂ ಇದ್ದಂತಾಗಿ ವಾಯು ರೂಪವುಳ್ಳದ್ದು ಎಂಬ ಜ್ಞಾನ ಬರಲಿ ಎಂದು ಆಕ್ಷೇಪಿಸುವವನ ಅಭಿಪ್ರಾಯ. 'ಸಂಬಂಧಸತ್ವೇ ಸಂಬಂಧಿಸತ್ವಂ' ಎಂಬ ನಿಯಮವಿರುವುದರಿಂದ ಸ್ಪರ್ಶಪ್ರತಿಯೋಗಿಕ ಸಮವಾಯಾಭಿನ್ನವಾದ ರೂಪ ಸಮವಾಯ ಸಂಬಂಧವಿದ್ದ ಮೇಲೆ ಸಂಬಂಧಿಯಾದ ರೂಪವೂ ಬರಲಿ ಎಂದು ಆಕ್ಷೇಪ. ಖಂಡಿಸುತ್ತಾನೆ. 'ತತ್ರ'—ಇತಿ. ಅಲ್ಲಿ ರೂಪ ಸಮವಾಯವಿದ್ದರೂ ರೂಪವಿಲ್ಲ. ಪ್ರತಿಯೋಗಿಕತ್ವ ಸಂಬಂಧದಿಂದ ರೂಪಾಭಾವವಿರುವುದರಿಂದ ರೂಪವತ್ತಾ ಬುದ್ಧಿ ಬರುವುದಿಲ್ಲ. ಹಿಂದೆ ಹೇಳಿದ ನಿಯಮ ವಿಪರೀತವಾಗಿ ಹೇಳಬೇಕು. 'ಸಂಬಂಧಿಸತ್ವೇ ಸಂಬಂಧಸತ್ವಂ' ಎಂದು ನಿಯಮ. ರೂಪಪ್ರತಿಯೋಗಿಕಸಮವಾಯವಿದ್ದರೆ ಮಾತ್ರ ರೂಪವತ್ತ್ವಬುದ್ಧಿಯುಂಟಾಗುತ್ತದೆ. 'ವಿಶಿಷ್ಟಃ ಶುದ್ಧಾನ್ನಾತಿರಿಚ್ಯತೇ' ನ್ಯಾಯದಿಂದ—ರೂಪ ಸಮವಾಯ ಇದ್ದ ಮೇಲೆ ರೂಪಪ್ರತಿಯೋಗಿಕತ್ವ ವಿಶಿಷ್ಟಸಮವಾಯವೂ ಇರುತ್ತದೆಯೆಂದು ತಿರುಗಿ ಆಶಂಕಿಸಿದರೆ ಆಗ 'ರೂಪಾಭಾವಾತ್' ಎಂಬುದಕ್ಕೆ ಬೇರೆ ಅರ್ಥ ಕಲ್ಪಿಸಬೇಕು. 'ರೂಪ ನಿರೂಪಿತತ್ವ ವಿಶಿಷ್ಟಸಮವಾಯನಿರೂಪಿತ ಅಧಿಕರಣತ್ವಾಭಾವಾತ್ ಎಂದು ಅರ್ಥವಿವರಣೆ ಹೇಳಿದರೆ ದೋಷ ಬರುವುದಿಲ್ಲ. ನೀರಿನಲ್ಲಿ ಗಂಧಾಭಾವವೆಂದರೆ ಗಂಧಾಧಿಕರಣಪೃಥಿವಿ ಇಲ್ಲವೆಂದು ಹೇಗೆ ಅರ್ಥವಾಗುತ್ತದೋ ಅದರಂತೆ ರೂಪಾಧಿಕರಣ (ಪೃಥಿವ್ಯಾದಿಗಳು) ವಿಲ್ಲದಿರುವುದರಿಂದ ರೂಪವತ್ತಾಪ್ರತೀತಿ ಬರುವುದಿಲ್ಲ.

**ನ ಚೈವಮಭಾವಸ್ಯ ವೈಶಿಷ್ಟ್ಯಂ ಸಂಬಂಧಾಂತರಂ ಸಿದ್ಧ್ಯೇದಿತಿ ವಾಚ್ಯಂ, ತಸ್ಯ ನಿತ್ಯತ್ವೇ ಭೂತಲೇ ಘಟಾನಯನಾನಂತರಮಪಿ ಘಟಾಭಾವಬುದ್ಧಿಪ್ರಸಂಗಾತ್ । ಘಟಾಭಾವಸ್ಯ ತತ್ರ ಸತ್ವಾತ್ । ತಸ್ಯ ನಿತ್ಯತ್ವಾತ್, ಅನ್ಯಥಾ ದೇಶಾಂತರೇಽಪಿ ತತ್ಪ್ರತೀತಿರ್ನಸ್ಯಾತ್ । ವೈಶಿಷ್ಟ್ಯಸ್ಯ ಚ ತತ್ರ ಸತ್ವಾತ್ । ಮಮ ತು ಘಟೇ ಪಾಕರಕ್ತತಾದಶಾಯಾಂ ಶ್ಯಾಮರೂಪಸ್ಯ ನಷ್ಟತ್ವಾನ್ನ ತದ್ವತ್ತಾಬುದ್ಧಿಃ । ವೈಶಿಷ್ಟ್ಯಸ್ಯಾನಿತ್ಯತ್ವೇ ತ್ವನಂತವೈಶಿಷ್ಟ್ಯ**

**ಕಲ್ಪನೇ ತನ್ಯೈವ ಗೌರವಮ್ । ಇತ್ಥಂ ಚ—ತತ್ತತ್ಕಾಲೀನತತ್ತದ್ಭೂತಲಾದಿಕಂ ತತ್ತದಭಾವಾನಾಂ ಸಂಬಂಧಃ ॥ ೧೧ ॥**

ಸಂಯೋಗಾದಿಗಳಿಗಿಂತ ಅತಿರಿಕ್ತವಾಗಿ ಸಮವಾಯವೆಂಬ ಸಂಬಂಧ ಸಿದ್ಧವಾದ ಮೇಲೆ ಭೂತಲಾದಿಗಳಲ್ಲಿ ವೈಶಿಷ್ಟ್ಯವೆಂಬ ಇನ್ನೊಂದು ಅತಿರಿಕ್ತವಾದ ಸಂಬಂಧ ಸಿದ್ಧಿಸಲಿ ಎಂದು ಆಶಂಕಿಸುವವರ ಮತವನ್ನು ತೋರಿಸಿ ಖಂಡಿಸುತ್ತಾನೆ. 'ನಚ—'ಇತಿ. ಅಭಾವದ ವೈಶಿಷ್ಟ್ಯವೇ ಬೇರೊಂದು ಸಂಬಂಧವೆಂದು ಪೂರ್ವಪಕ್ಷಿಗಳ ಅಭಿಪ್ರಾಯ. 'ಘಟಾಭಾವವತ್ ಭೂತಲಂ' ಎಂಬುದು ವಿಶಿಷ್ಟಬುದ್ಧಿ. 'ದಂಡೀಪುರುಷಃ' ಎಂಬಲ್ಲಿ ದಂಡಪುರುಷರ ಸಂಬಂಧ ತೋರುವಂತೆ ಇಲ್ಲಿಯೂ ಅಭಾವಭೂತಲಕ್ಕೆ ಒಂದು ಸಂಬಂಧತೋರುವುದರಿಂದ ಆ ಸಂಬಂಧವೇ ವೈಶಿಷ್ಟ್ಯವಾಗುತ್ತದೆ. ಸಂಯೋಗಾದಿಗಳಿಗೆ ಬಾಧ ಬರುವುದರಿಂದ ಅದು (ಬೇರೊಂದು ಸಂಬಂಧವಾದ) ವೈಶಿಷ್ಟ್ಯವೇ ಆಗುತ್ತದೆ. "ಘಟಾಭಾವವತ್‌ಭೂತಲಂ" ಇತ್ಯಾಕಾರಿಕಾ ಬುದ್ಧಿಃ—ಸಂಸರ್ಗತಾನಿರೂಪಿಕಾ—ವಿಶಿಷ್ಟಬುದ್ಧಿತ್ವಾತ್ । ದಂಡೀಪುರುಷಃ ಇತಿ ಬುದ್ಧಿವತ್. ಈ ಅನುಮಾನದಿಂದ ಹಿಂದೆ ಹೇಳಿದಂತೆ ವೈಶಿಷ್ಟ್ಯವೆಂಬ ಸಂಬಂಧ ಸಿದ್ಧವಾಗುತ್ತದೆ. ಅದಕ್ಕೆ ತಾರ್ಕಿಕನ ಸಮಾಧಾನ. 'ತಸ್ಯ—' ಇತಿ. 'ಘಟಾಭಾವವತ್ ಭೂತಲಂ' ಎಂಬಲ್ಲಿ ವೈಶಿಷ್ಟ್ಯವೆಂಬ ಅಪೂರ್ವ ಸಂಬಂಧ ಸಿದ್ಧಿಸುವುದಾದರೆ ಅದು ನಿತ್ಯ ಸಂಬಂಧವೇ ಅಥವಾ ಅನಿತ್ಯವೇ ? ನಿತ್ಯವೆನ್ನುವುದಾದರೆ ಘಟ ತಂದ ನಂತರವೂ ಅಂದರೆ ಘಟ ಇರುವಾಗಲೂ ಅಭಾವದ ಸಂಬಂಧವಿರುವುದರಿಂದ 'ಘಟಾಭಾವವತ್ ಭೂತಲಂ' ಎಂಬ ಜ್ಞಾನ ಬರಲಿ. ಘಟವಿದ್ದಾಗ ಘಟಾಭಾವ ಇಲ್ಲದಿರುವುದರಿಂದ (ಘಟಾಭಾವಾಭಾವ) ಘಟಾವತ್ತ್ವ ಬುದ್ಧಿ ಬರುವುದಿಲ್ಲವೆಂದು ಹೇಳಲೂ ಸಾಧ್ಯವಿಲ್ಲ. ಘಟಾಭಾವ ನಿತ್ಯವಾದುದರಿಂದ ಅದೂ ಅಲ್ಲಿ ಇರುತ್ತದೆ. ಘಟಾಭಾವ ಅನಿತ್ಯವೆನ್ನುವುದಾದರೆ ದೋಷ ಬರುತ್ತದೆಂದು ತೋರಿಸುತ್ತಾನೆ. 'ಅನ್ಯಥಾ—'ಇತಿ. ಘಟಾಭಾವ ನಿತ್ಯವಲ್ಲವೆಂದರೆ ಇತರ ಪ್ರದೇಶಗಳಲ್ಲಿ ಘಟವಿಲ್ಲದೇ ಇರುವಾಗಲೂ 'ಘಟಾಭಾವಃ' ಎಂಬ ಬುದ್ಧಿ ಬಾರದೇ ಹೋಗಬೇಕಾಗುತ್ತದೆ. ಘಟಾಭಾವ ಒಂದಾದುದರಿಂದ ಅದು ಅನಿತ್ಯವಾದರೆ ಘಟವಿಲ್ಲದ ಸ್ಥಳದಲ್ಲಿ ಘಟಾಭಾವಪ್ರತೀತಿ ಬರಲಾರದು. ಆದುದರಿಂದ ಅದು ನಿತ್ಯವೆನ್ನಬೇಕು. 'ವೈಶಿಷ್ಟ್ಯಸ್ಯ—' ಇತಿ. ಘಟಾಭಾವ ಮತ್ತು ಭೂತಲಕ್ಕಿಂತ ಅತಿರಿಕ್ತವಾಗಿ ವೈಶಿಷ್ಟ್ಯಸಂಬಂಧವು ನಿತ್ಯವಾದುದರಿಂದ ಘಟವಿರುವಾಗಲೂ ಘಟಾಭಾವಬುದ್ಧಿ ಬರಬೇಕಾಗುತ್ತದೆ.

ತಾರ್ಕಿಕ ಮತದಲ್ಲಿಯೂ ಪಾಕದಿಂದ (ವಿಲಕ್ಷಣವಾದ ತೇಜಃ ಸಂಯೋಗ) ಘಟವು ಕಪ್ಪಾದದ್ದು ಕೆಂಪಾಗುತ್ತದೆ. ರಕ್ತವಾದಾಗಲೂ ಶ್ಯಾಮದ ಸಮವಾಯ ಇದ್ದರೂ (ಅದೂ ನಿತ್ಯಸಂಬಂಧ.) ಶ್ಯಾಮವತ್ತಾಬುದ್ಧಿ ಬರುವುದಿಲ್ಲ. ರಕ್ತವೆಂಬ ಬುದ್ಧಿಯೇ ಹುಟ್ಟುತ್ತದೆ. ಅದರಂತೆಯೇ ವೈಶಿಷ್ಟ್ಯ ರೂಪವಾದ ನಿತ್ಯ ಸಂಬಂಧ

ವಿದ್ದರೂ ಘಟವಿರುವಾಗ ಘಟಾಭಾವಬುದ್ಧಿ ಬರುವುದಿಲ್ಲ. ಇದು ಉಭಯರಿಗೂ ಸಮಾನವೆಂದು ಪೂರ್ವಪಕ್ಷಿ ಹೇಳುವುದಾದರೆ ಅದಕ್ಕೆ ಸಮಾಧಾನ ಹೇಳುತ್ತಾನೆ. 'ಮಮತು—' ಇತಿ. ಘಟದಲ್ಲಿ ಕೆಂಪು ಬಣ್ಣ ಹುಟ್ಟಿವಾಗ ಶ್ಯಾಮರೂಪ ಇರುವುದಿಲ್ಲ. ಸಮವಾಯ ಒಂದಾದರೂ ಶ್ಯಾಮ ನಿರೂಪಿತತ್ವ ವಿಶಿಷ್ಟ ಸಮವಾಯವು ವಿಶಿಷ್ಟ ಬುದ್ಧಿಯಲ್ಲಿ ಕಾರಣವೆಂದು ಹೇಳಿರುವುದರಿಂದ ವಿಶಿಷ್ಟ ಸಮವಾಯ ಇಲ್ಲದಿರುವುದರಿಂದ ಶ್ಯಾಮವತ್ತಾಬುದ್ಧಿ ಬರುವುದಿಲ್ಲ. ನಿನ್ನ ಮತದಲ್ಲಿಯಾದರೋ ಅಭಾವದ ವೈಶಿಷ್ಟ್ಯ ರೂಪ ಸಂಬಂಧವು ನಿತ್ಯವಾದುದರಿಂದ ಘಟವಿರುವಾಗಲೂ ಘಟಾಭಾವಬುದ್ಧಿ ಬರಬೇಕಾಗುತ್ತದೆ. ಆದುದರಿಂದ ತುಂಬಾ ವೈಲಕ್ಷಣ್ಯವಿದೆ. ವೈಶಿಷ್ಟ್ಯ ಅನಿತ್ಯವೆನ್ನುವುದಾದರೆ ಅನಂತ ಸಂಬಂಧಕಲ್ಪಿಸುವುದಲ್ಲದೆ ಅವುಗಳ ಉತ್ಪತ್ತಿ ವಿನಾಶಗಳನ್ನೂ ಕಲ್ಪಿಸಬೇಕಾದುದರಿಂದ ತುಂಬಾ ಗೌರವ ಬರುತ್ತದೆ.

ಹಾಗಾದರೆ 'ಘಟಾಭಾವವತ್ ಭೂತಲಂ' ಎಂಬಲ್ಲಿ ಘಟಾಭಾವಕ್ಕೂ ಭೂತಲಕ್ಕೂ ಯಾವ ಸಂಬಂಧ ? ಸ್ವರೂಪ ಸಂಬಂಧವೆಂದು ಹೇಳಿದರೆ ಘಟವಿರುವಾಗಲೂ ಭೂತಲಸ್ವರೂಪವಿರುವುದರಿಂದ ಘಟಾಭಾವಪ್ರತೀತಿ ಬರಬೇಕಾಗುತ್ತದೆ. ಎಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಏವಂ ಚ—' ಇತಿ. ಎಲ್ಲಿ ನಮಗೆ ಘಟಾತ್ಯಂತಾಭಾವಬುದ್ಧಿ ಬರುತ್ತದೆಯೋ ಅಲ್ಲಿ ಕೇವಲ ಅಭಾವ ತೋರುವುದಿಲ್ಲ. ತತ್‌ಕ್ಷಣವಿಶಿಷ್ಟಘಟಾತ್ಯಂತಾಭಾವ ತೋರುತ್ತದೆ. ತತ್‌ಜ್ಞಾನಕಾಲವೂ ತೋರುತ್ತದೆಂದು ಒಪ್ಪಬೇಕು. ಘಟ ಇರುವ ಕಾಲದಲ್ಲಿ ಘಟಾತ್ಯಂತಾಭಾವವಿದ್ದರೂ ಅದರ ವಿಶೇಷಣ ಅಂದರೆ ತತ್ಕಾಲವೈಶಿಷ್ಟ್ಯ ಇಲ್ಲದಿರುವುದರಿಂದ ವಿಶೇಷಣವಿಲ್ಲದಿರುವುದರಿಂದ ವಿಶೇಷ್ಯವೂ ಬರುವುದಿಲ್ಲ. ಕ್ಷಣಾತ್ಮಕವಿಶೇಷಣವಿಶಿಷ್ಟಸ್ವರೂಪವಿಶೇಷವೇ ಸಂಬಂಧವೆಂದು ಸ್ವೀಕರಿಸಿರುವುದರಿಂದ ಘಟಸತ್ತಾಕಾಲದಲ್ಲಿ ನಿತ್ಯವಾದ ಘಟಾತ್ಯಂತಾಭಾವವಿದ್ದರೂ ತತ್‌ಕ್ಷಣವಿಶಿಷ್ಟಘಟಾತ್ಯಂತಾಭಾವರೂಪ ಸ್ವರೂಪವಿಲ್ಲದಿರುವುದರಿಂದ ಘಟಾತ್ಯಂತಾಭಾವಬುದ್ಧಿ ಬರುವುದಿಲ್ಲ. ( ಇದೇ ಅಭಾವದ ವಿಶೇಷಣತಾಸಂಬಂಧಃ ) ಎಲ್ಲಿ ಯಾವ ಅಭಾವ ಹೇಳುತ್ತೇವೋ ಅಲ್ಲಿ ಆ ಜ್ಞಾನಕಾಲೀನಭೂತಲವೇ ಸಂಬಂಧ. 'ಘಟಾಭಾವವತ್ ಭೂತಲಮ್' ಎಂಬ ಜ್ಞಾನವು ಯಾವ ಕಾಲದಲ್ಲಿ ಬಂದಿದೆಯೋ ಆ ಜ್ಞಾನಕಾಲವಿಶಿಷ್ಟಭೂತಲವೇ ಆಗ ಸಂಬಂಧವಾಗುತ್ತದೆ. ಈ ಸಂಬಂಧವು ಘಟಕಾಲದಲ್ಲಿ ಇರುವುದಿಲ್ಲ. ಆದುದರಿಂದ ಸ್ವರೂಪಸಂಬಂಧ ಹೇಳಿದರೂ ಘಟಕಾಲದಲ್ಲಿ ಘಟಾಭಾವಬುದ್ಧಿ ಬರುವುದಿಲ್ಲ.

**ಅಭಾವಸ್ತು ದ್ವಿಧಾ ಸಂಸರ್ಗಾನ್ಯೋನ್ಯಾಭಾವಭೇದತಃ ||**
**ಪ್ರಾಗಭಾವಸ್ತಥಾ ಧ್ವಂಸೋತ್ಯಂತಾಭಾವ ಏವ ಚ || ೧೨ ||**
**ಏವಂ ತ್ರೈವಿಧ್ಯಮಾಪನ್ನಃ ಸಂಸರ್ಗಾಭಾವ ಇಷ್ಯತೇ ||**

**ಅಭಾವಂ ವಿಭಜತೇ–ಅಭಾವತ್ವಂ ದ್ರವ್ಯಾದಿಷಟ್ಕಾನ್ಯೋನ್ಯಾಭಾವ**

**ವತ್ವಮ್ । ಸಂಸರ್ಗಾಭಾವಾನ್ಯೋನ್ಯಾಭಾವಭೇದಾದಿತ್ಯರ್ಥಃ । ಅನ್ಯೋನ್ಯಾಭಾವಸ್ಯೈಕವಿಧತ್ವಾತ್ತದ್ವಿಭಾಗಾಭಾವಾತ್ಸಂಸರ್ಗಾಭಾವಂ ವಿಭಜತೇ —ಪ್ರಾಗಭಾವ ಇತಿ. ಸಂಸರ್ಗಾಭಾವತ್ವಂ—ಅನ್ಯೋನ್ಯಾಭಾವಭಿನ್ನಾಭಾವತ್ವಮ್ । ಅನ್ಯೋನ್ಯಾಭಾವತ್ವಂ ತಾದಾತ್ಮ್ಯಸಂಬಂಧಾವಚ್ಛಿನ್ನ ಪ್ರತಿಯೋಗಿತಾಕಾಭಾವತ್ವಮ್ । ವಿನಾಶ್ಯಭಾವತ್ವಂ ಪ್ರಾಗಭಾವತ್ವಮ್ । ಜನ್ಯಾಭಾವತ್ವಂ ಧ್ವಂಸತ್ವಮ್ । ನಿತ್ಯಸಂಸರ್ಗಾಭಾವತ್ವಂ ಅತ್ಯಂತಾಭಾವತ್ವಮ್ ॥**

ವಿಭಾಗಕ್ಕಿಂತ ಲಕ್ಷಣ ಮೊದಲು ಹೇಳಬೇಕಾದುದರಿಂದ ಅಭಾವಲಕ್ಷಣ ತೋರಿಸುತ್ತಾನೆ. 'ಅಭಾವತ್ವಂ—' ಇತಿ. 'ದ್ರವ್ಯಾದಿಷಡ್ಭಾವಪದಾರ್ಥ ಪ್ರತಿಯೋಗಿಕ ಭೇದವತ್ವಂ' ಎಂದು ಅದರ ಅರ್ಥ. ದ್ರವ್ಯಾದಿ ಆರು ಭಾವಪದಾರ್ಥವಲ್ಲದಿರುವುದು ಅಭಾವಪದಾರ್ಥ. ದ್ರವ್ಯಾದಿಷಟ್ಕದ ಭೇದವೆಂದರೆ ಆಗ ದ್ರವ್ಯಾದಿಷಟ್ಕವು ಅಲ್ಲಿ ಪ್ರತಿಯೋಗಿಯಾಗಿರುತ್ತದೆ. ಪ್ರತಿಯೋಗಿತಾವಚ್ಛೇದಕಧರ್ಮ ಯಾವುದು ಎಂದು ವಿಚಾರಿಸಬೇಕು. ದ್ರವ್ಯತ್ವಾದಿಗಳೆಂದರೆ ಅನನುಗಮವಾಗುತ್ತದೆ. 'ಷಟ್ಕತ್ವಂ' ಎಂದರೆ ದ್ರವ್ಯಾದಿಗಳೇ ಅಭಾವವಾಗಬೇಕಾಗುತ್ತದೆ. 'ದ್ರವ್ಯಂ—ದ್ರವ್ಯಾದಿಷಟ್ಕಂ ನ' ಎಂಬ ಭೇದ ತೆಗೆದುಕೊಂಡರೆ ಭೇದವಿಶಿಷ್ಟವಾದದ್ದು ದ್ರವ್ಯವೇ ಆಗುತ್ತದೆ. 'ಷಟ್ಕನಿಷ್ಠ ಪರ್ಯಾಪ್ತಿಸಂಬಂಧಾವಚ್ಛಿನ್ನ ಅವಚ್ಛೇದಕತಾಕ ಪ್ರತಿಯೋಗಿತಾಕಭೇದವತ್ವಂ' ಎಂದು ಪರಿಷ್ಕೃತವಾಗಿ ಹೇಳಿದರೂ ಹಿಂದಿನಂತೆ ದ್ರವ್ಯದಲ್ಲಿಯೇ ಭೇದ ಹೇಳಲು ಬರುವುದರಿಂದ ದ್ರವ್ಯಾದಿಗಳಿಗೆ ಅಭಾವತ್ವ ಬರಬೇಕಾಗುತ್ತದೆ. ಆದುದರಿಂದ ಷಟ್ಕನಿಷ್ಠಪರ್ಯಾಪ್ತ್ಯತಿರಿಕ್ತ ಸ್ವರೂಪಸಂಬಂಧಾವಚ್ಛಿನ್ನ ಅವಚ್ಛೇದಕತಾಕಪ್ರತಿಯೋಗಿತಾಕ ಭೇದವತ್ವಂ' ಎಂದು ಹೇಳಬೇಕು. ಕೆಲವರು 'ಅಪೇಕ್ಷಾಬುದ್ಧಿರೂಪ ಷಟ್ಕನಿಷ್ಠ ಅವಚ್ಛೇದಕತಾಕ ಪ್ರತಿಯೋಗಿತಾಕಭೇದವತ್ವಂ' ಎಂದು ಪರಿಷ್ಕಾರ ಹೇಳುತ್ತಾರೆ.

ಅಭಾವವು ಎರಡು ವಿಧವಾಗಿದೆ. ಸಂಸರ್ಗಾಭಾವ, ಅನ್ಯೋನ್ಯಾಭಾವವೆಂದು ಅವುಗಳ ಹೆಸರು. ದ್ವಂದ್ವಾಂತದಲ್ಲಿ ಇರುವ ಪದವು ದ್ವಂದ್ವಘಟಕಪದಾರ್ಥಗಳಲ್ಲಿ ಪ್ರತ್ಯೇಕಾನ್ವಯ ಹೊಂದುತ್ತದೆ. ಸಂಸರ್ಗಶ್ಚ ಅನ್ಯೋನ್ಯಂಚ. 'ಸಂಸರ್ಗಾನ್ಯೋನ್ಯೇ' ಎಂದು ದ್ವಂದ್ವಸಮಾಸ. ತಯೋಃ ಅಭಾವಃ, ಸಚಾಸೌ ಭೇದಶ್ಚ. ತಸ್ಮಾತ್. ಅನ್ಯೋನ್ಯಾಭಾವ ಒಂದೇ ವಿಧವಾದುದರಿಂದ ಸಂಸರ್ಗಾಭಾವವನ್ನು ವಿಭಾಗಿಸುತ್ತಾನೆ. ಪ್ರಾಗಭಾವ, ಪ್ರಧ್ವಂಸಾಭಾವ, ಅತ್ಯಂತಾಭಾವವೆಂದು ಅದು ಮೂರುವಿಧ. 'ಅನ್ಯೋನ್ಯಾಭಾವಭಿನ್ನತ್ವೇ ಸತಿ ಅಭಾವತ್ವಂ' ಸಂಸರ್ಗಾಭಾವದಲಕ್ಷಣ. ಕೇವಲ ಅಭಾವತ್ವಂ ಎಂದರೆ ಅನ್ಯೋನ್ಯಾಭಾವದಲ್ಲಿ ಅತಿವ್ಯಾಪ್ತಿ. ಅನ್ಯೋನ್ಯಾಭಾವಭಿನ್ನತ್ವಂ ಎಂದರೆ ಭಾವದಲ್ಲಿ ಅತಿವ್ಯಾಪ್ತಿ. ಆದುದರಿಂದ ಎರಡೂದಳ ಹೇಳಬೇಕು. ಸಂಸರ್ಗವೆಂದರೆ ಸಂಬಂಧ. ಇಲ್ಲಿ ವೃತ್ತಿನಿಯಾಮಕಸಂಬಂಧವನ್ನೇ ತೆಗೆದುಕೊಳ್ಳಬೇಕು.

ವೃತ್ತಿ ಎಂದರೆ ಆಧೇಯತಾ. ಆಧೇಯವು ಯಾವ ಸಂಬಂಧದಿಂದ ತನ್ನ ಆಧಾರದಲ್ಲಿ ಇರುತ್ತದೆಯೋ ಆ ಸಂಬಂಧವೇ ವೃತ್ತಿನಿಯಾಮಕಸಂಬಂಧ. ಇದು ಸಂಯೋಗ, ಸಮವಾಯ, ಸ್ವರೂಪ, ಕಾಲಿಕ ಮುಂತಾದ ಸಂಬಂಧವಾಗುತ್ತದೆ. ಇದಕ್ಕಿಂತ ಭಿನ್ನ ವಾದ ಸಂಬಂಧ ವೃತ್ತ್ಯನಿಯಾಮಕ ಸಂಬಂಧವಾಗುತ್ತದೆ. ವಿಷಯತ್ವ, ವಿಷಯಿತ್ವ, ಅನುಯೋಗಿತ್ವ, ಪ್ರತಿಯೋಗಿತ್ವ, ನಿರೂಪಕತ್ವ, ನಿರೂಪ್ಯತ್ವ ಮುಂತಾದ ಸಂಬಂಧಗಳು ವೃತ್ತ್ಯನಿಯಾಮಕ ಸಂಬಂಧಗಳು. ಸಂಸರ್ಗ—ವೃತ್ತಿನಿಯಾಮಕ ಸಂಬಂಧಾವಚ್ಛಿನ್ನ ಪ್ರತಿಯೋಗಿತಾಕಾಭಾವವೇ ಸಂಸರ್ಗಾಭಾವ. ಯಾವುದರ ಅಭಾವ ಹೇಳುತ್ತೇವೋ ಅದು ಪ್ರತಿಯೋಗೀ. ಪ್ರತಿಯೋಗಿಯಭಾವ ಪ್ರತಿಯೋಗಿತಾ. ಈ ಪ್ರತಿಯೋಗಿತೆ ಯಲ್ಲಿ ಅವಚ್ಛೇದಕಗಳು ಎರಡು ಪದಾರ್ಥಗಳು.

ಒಂದು ಧರ್ಮ, ಇನ್ನೊಂದು ಸಂಬಂಧ. ಈ ಧರ್ಮ ಸಂಬಂಧಗಳಿಂದ ಪ್ರತಿ ಯೋಗಿತಾ ಎಂಬುದು ಅವಚ್ಛೇದ ಹೊಂದುತ್ತದೆ. ಇತರ ಪ್ರತಿಯೋಗಿತೆಗಳಿಂದ ವಿಶೇಷ ಹೊಂದುತ್ತದೆ. ಆದುದರಿಂದ ಪ್ರತಿಯೋಗಿತಾ ಆ ಧರ್ಮ ಸಂಬಂಧಗಳಿಂದ ಅವಚ್ಛಿನ್ನ ವಾಗುತ್ತದೆ. ಪ್ರತಿಯೋಗಿತಾ ಸಮನಿಯತವಾದ (ಅದು ಇದ್ದಲ್ಲಿ ಇರುವುದು) ಧರ್ಮವು ಪ್ರತಿಯೋಗಿತಾವಚ್ಛೇದಕವಾಗುತ್ತದೆ. ಪ್ರತಿಯೋಗಿಯು ತನ್ನ ಅಧಿಕರಣದಲ್ಲಿ ಯಾವ ಸಂಬಂಧದಿಂದ ಇರುತ್ತದೆಯೋ ಅದು ಪ್ರತಿಯೋಗಿತಾವಚ್ಛೇದಕ ಸಂಬಂಧ. ಹಾಗೆಯೇ ಪ್ರತಿಯೋಗಿಯು ಯಾವ ಧರ್ಮದಿಂದ ಇತರ ವ್ಯಾವೃತ್ತವಾಗುತ್ತದೆಯೋ ಅದು ಪ್ರತಿ ಯೋಗಿತಾವಚ್ಛೇದಕ ಸಂಬಂಧವಾಗುತ್ತದೆ. 'ಭೂತಲೇ ಘಟಾಭಾವಃ' ಎಂದರೆ ಅಭಾ ವಕ್ಕೆ ಪ್ರತಿಯೋಗಿಘಟ. ಪ್ರತಿಯೋಗಿಯಾದ ಘಟವು ಭೂತಲದಲ್ಲಿ ಸಂಯೋಗ ಸಂಬಂಧದಿಂದ ಇರುವುದರಿಂದ ಪ್ರತಿ....ದಕಸಂಬಂಧ ಸಂಯೋಗ ಆಗುತ್ತದೆ. ಘಟನಿಷ್ಠ ಪ್ರತಿಯೋಗಿತಾ ಘಟತ್ವಾವಚ್ಛಿನ್ನವೂ ಸಂಯೋಗ ಸಂಬಂಧಾವಚ್ಛಿನ್ನವೂ ಆಗುತ್ತದೆ. ಮನೆಯಲ್ಲಿ ಘಟವಿಲ್ಲವೆಂದರೆ ಘಟದ ಸಂಸರ್ಗ—ಸಂಯೋಗವು ಇಲ್ಲವೆಂದರ್ಥ. ಯಾವಾಗಲೂ ಇಲ್ಲವೆಂದರೆ ಘಟಾತ್ಯಂತಾಭಾವವಾಗುತ್ತದೆ. ಮುಂದಾಗುವ ಘಟದ ಅಧಿಕರಣವಾದ ಕಪಾಲಾದಿಗಳಲ್ಲಿ ಇರುವ ಅಭಾವವು ಪ್ರಾಗಭಾವ. ಆದಮೇಲೆ ನಷ್ಟ ವಾದರೆ ಅದು ಪ್ರಧ್ವಂಸಾಭಾವ. ಹೀಗೆ ತಾದಾತ್ಮ್ಯ ಅತಿರಿಕ್ತ ಸಂಬಂಧಾವಚ್ಛಿನ್ನ ಪ್ರತಿಯೋಗಿತಾಕಾಭಾವವೇ ಸಂಸರ್ಗಾಭಾವವಾಗುತ್ತದೆ. ಅನ್ಯೋನ್ಯಾಭಾವಲಕ್ಷಣ ತೋರಿಸುತ್ತಾನೆ. 'ತಾದಾತ್ಮ್ಯ'—ಇತಿ. 'ಅನ್ಯೋನ್ಯಸ್ಮಿನ್ ತಾದಾತ್ಮ್ಯೇನ ಅಭವನಂ' ಅನ್ಯೋನ್ಯಾಭಾವ. ತಸ್ಯ ಆತ್ಮಾ ಸ್ವರೂಪಂ—ತದಾತ್ಮಾ. ತಸ್ಯ ಭಾವಃ— ತಾದಾತ್ಮ್ಯಂ—ಅಭೇದಃ. ಹಿಂದೆ ಹೇಳಿದಂತೆ ಈ ತಾದಾತ್ಮ್ಯವೇ ಪ್ರತಿಯೋಗಿತಾವ ಚ್ಛೇದಕ ಸಂಬಂಧವಾಗುತ್ತದೆ. 'ಘಟಃ ಪಟೋನ' ಎಂಬುದೇ ಈ ಅನ್ಯೋನ್ಯಾಭಾವ. ಘಟವು ಪಟಾತ್ಮ—ಪಟಸ್ವರೂಪವಲ್ಲವೆಂದರ್ಥ. ಪಟತಾದಾತ್ಮ್ಯಾಭಾವಃ. ಪಟ ತಾದಾತ್ಮ್ಯಾವಚ್ಛಿನ್ನಪಟನಿಷ್ಠಪ್ರತಿಯೋಗಿತಾಕಭೇಧ ಘಟದಲ್ಲಿದೆಯೆಂದು ತಾತ್ಪರ್ಯ. ನಞ್ ಇಲ್ಲದಿರುವಾಗ ಯಾವ ಪ್ರತೀತಿ ಇದೆಯೋ ಅಲ್ಲಿ ನಞ್ ಹೇಳಿದರೆ ಅಗ ನಿಷೇದ

ತೋರುತ್ತದೆ. 'ನೀಲೋಘಟಃ' ಎಂಬಲ್ಲಿ ಅಭೇದಪ್ರತೀತಿ ತೋರಿದಂತೆ 'ಘಟಃ ಪಟಃ' ಎಂಬಲ್ಲಿಯೂ ಅಭೇದಸಂಸರ್ಗ ತೋರುತ್ತದೆ. ಅಲ್ಲಿಯೇ ನಞ್ ಹೇಳಿದರೆ ('ಘಟಃ ನ ಪಟಃ') ಆಗ ನಞ್‌ನಿಂದ ಅಭೇದಸಂಸರ್ಗ ನಿಷೇದ ತೋರುತ್ತದೆ. ಅಭಾವವನ್ನು ಕುರಿತು ಪ್ರತಿಯೋಗಿ ವಿರೋಧಿ ಎಂದರೆ ಯಾವುದೋ ಸಂಬಂಧದಿಂದ ವಿರೋಧಿಯಾಗುವುದಿಲ್ಲ. ಪ್ರತಿಯೋಗಿತಾವಚ್ಛೇದಕ ಸಂಬಂಧದಿಂದಲೇ ವಿರೋಧಿಯಾಗುತ್ತದೆ. ಅನ್ಯೋನ್ಯಾಭಾವಕ್ಕೆ ತಾದಾತ್ಮ್ಯದಿಂದ ಪ್ರತಿಯೋಗಿ ಇದ್ದರೆ ವಿರೋಧಿಯಾಗುವುದರಿಂದ ತಾದಾತ್ಮ್ಯ ಸಂಬಂಧಾವಚ್ಛಿನ್ನ ಪ್ರತಿಯೋಗಿತಾಕಾಭಾವಕ್ಕೆ ಅನ್ಯೋನ್ಯಾಭಾವವೆಂದು ಹೇಳಿದ್ದು ಸಮಂಜಸವಾಗುತ್ತದೆ. ತಾದಾತ್ಮ್ಯಸಂಬಂಧದಿಂದ ಪಟವು ತನ್ನಲ್ಲಿದೆ. ಘಟಾದಿಗಳಲ್ಲಿ ಇಲ್ಲ. ಆಗ ಘಟಾದಿಗಳಲ್ಲಿ ಪಟಾನ್ಯೋನ್ಯಾಭಾವ ಬರುತ್ತದೆ. ಆಗ 'ಘಟಃ ಪಟೋನ' ಎಂದು ಅದನ್ನು ಹೇಳುವ ರೀತಿ.

'ವಿನಾಶ್ಯಭಾವತ್ವಂ'. 'ವಿನಾಶಿತ್ವೇ ಸತಿ ಅಭಾವತ್ವಂ' ಪ್ರಾಗಭಾವದ ಲಕ್ಷಣ. ಧ್ವಂಸದಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ ಸತ್ಯಂತವನ್ನೂ ಘಟಾದಿಭಾವದಲ್ಲಿ ಅತಿವ್ಯಾಪ್ತಿಗೋಸ್ಕರ ವಿಶೇಷ್ಯವನ್ನೂ ಹೇಳಬೇಕು. 'ಕಪಾಲೇ ಘಟೋ ಭವಿಷ್ಯತಿ' 'ತಂತುಷು ಪಟಃ ಭವಿಷ್ಯತಿ' ಈ ಜ್ಞಾನದಲ್ಲಿ ತೋರುವ ಉತ್ಪತ್ತಿಗಿಂತಲೂ ಪೂರ್ವದಲ್ಲಿ ಆಯಾಯ ಕಾರ್ಯದ ಅಭಾವವೇನಿದೆಯೋ ಅದೇ ಪ್ರಾಗಭಾವ. ಕಾರ್ಯೋತ್ಪತ್ತಿಗಿಂತ ಮೊದಲು ತನ್ನ ಪ್ರತಿಯೋಗಿಯ ಸಮವಾಯಿಕಾರಣದಲ್ಲಿರುವ ಅಭಾವವಾಗುತ್ತದೆ. ಇದಕ್ಕೆ ಆದಿ ಇಲ್ಲ ಅಂತವಿದೆ. ಆ ಕಾರ್ಯ ಹುಟ್ಟಿದ ಮೇಲೆ ನಾಶಹೊಂದುತ್ತದೆ.

'ಜನ್ಯತ್ವೇಸತಿ ಅಭಾವತ್ವಂ' ಧ್ವಂಸದ ಲಕ್ಷಣ. 'ಘಟೋಧ್ವಸ್ತಃ' 'ಪಟಃ ಧ್ವಸ್ತಃ' ಪ್ರತೀತಿಸಾಕ್ಷಿಕವಾಗಿದೆ. ಕಾರ್ಯ ಹುಟ್ಟಿದ ಮೇಲೆ ಸ್ವಪ್ರತಿಯೋಗಿ ಸಮವಾಯಿಕಾರಣದಲ್ಲಿ ಇರುತ್ತದೆ. ಇದು ಸಾದಿ—ಹುಟ್ಟುತ್ತದೆ. ಅಂತವಿಲ್ಲ.

"ತ್ರೈಕಾಲಿಕತ್ವೇ ಸತಿ ಸಂಸರ್ಗಾವಚ್ಛಿನ್ನ ಪ್ರತಿಯೋಗಿತಾಕಾಭಾವತ್ವಂ' ಅತ್ಯಂತಾಭಾವದ ಲಕ್ಷಣ. ಧ್ವಂಸಪ್ರಾಗಭಾವಗಳಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ 'ತ್ರೈಕಾಲಿಕತ್ವೇ ಸತಿ' ಎಂದಿದೆ. ಅನ್ಯೋನ್ಯಾಭಾವದಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ 'ಸಂಸ....ತ್ವಂ' ಎಂದು ವಿಶೇಷ್ಯದಳ ಹೇಳಿದೆ. 'ಭೂತಲೇ ಘಟೋ ನಾಸ್ತಿ' ಎಂದು ಅತ್ಯಂತಾಭಾವ ನಿರ್ದೇಶನದ ರೀತಿ.

**ಯತ್ರ ತು ಭೂತಲಾದೌ ಘಟಾದಿಕಮುಪಸಾರಿತಂ ಪುನರಾನೀತಂ ಚ ತತ್ರ ಘಟಕಾಲಸ್ಯ ಸಂಬಂಧಾಘಟಕತಯಾ ಅತ್ಯಂತಾಭಾವಸ್ಯ ನಿತ್ಯತ್ವೇಽಪಿ ಘಟಕಾಲೇ ನ ಘಟಾತ್ಯಂತಾಭಾವಬುದ್ಧಿಃ। ತತ್ರ ಉತ್ಪಾದ ವಿನಾಶಶಾಲೀ ಚತುರ್ಥೋಽಯಮಭಾವ ಇತಿ ಕೇಚಿತ್ । ಅತ್ರ ಧ್ವಂಸ ಪ್ರಾಗಭಾವಯೋರಧಿಕರಣೇ ನಾತ್ಯಂತಾಭಾವ ಇತಿ ಪ್ರಾಚೀನಮತಮ್। ಶ್ಯಾಮಘಟೇ ರಕ್ತೋ ನಾಸ್ತಿ, ರಕ್ತಘಟೇಶ್ಯಾಮೋ ನಾಸ್ತೀತಿ ಧೀಶ್ಚ**

**ಪ್ರಾಗಭಾವಂ ಧ್ವಂಸಂ ಚಾವಗಾಹತೇ ನ ತು ತದತ್ಯಂತಾಭಾವಮ್ ॥ ನ ವ್ಯಾಸ್ತು — ತತ್ರ ವಿರೋಧೇ ಮಾನಾಭಾವಾತ್ ಧ್ವಂಸಾದಿಕಾಲಾವಚ್ಛೇದೇನಾಪ್ಯತ್ಯಂತಾಭಾವೋ ವರ್ತತ ಇತಿ ಪ್ರಾಹುಃ ॥**

ಅತ್ಯಂತಾಭಾವ ನಿತ್ಯನೆಂದು ಹೇಳಿದೆ. ಕಾಲತ್ರಯದಲ್ಲಿಯೂ ಪ್ರತಿಯೋಗಿ ಪ್ರತೀತಿ ಇಲ್ಲದಿರುವಲ್ಲಿ ಈ ಅಭಾವ ಇರುತ್ತದೆ. ಘಟ ಇರುವ ದೇಶದಲ್ಲಿ ಘಟಾತ್ಯಂತಾಭಾವ ಬರಲಾರದು. ಆಗ ಅದು ನಿತ್ಯ ಹೇಗೆ ? ಎಂಬ ಶಂಕೆಗೆ ನವೀನರ ಮತದಿಂದ ಉತ್ತರ ತೋರಿಸುತ್ತಾನೆ. 'ಯತ್ರ—' ಇತಿ. ಯಾವ ಭೂತಲದಲ್ಲಿ ಘಟವು ಮೊದಲು ಇಲ್ಲದೆ ಆಮೇಲೆ ತರಲ್ಪಟ್ಟಿತೋ ಅಲ್ಲಿ ಘಟಕಾಲವೂ ಸಂಬಂಧ ಘಟಕವಾಗುತ್ತದೆ. 'ತದ್ಭೂತಲ ವಿಶಿಷ್ಟಘಟಕಾಲ ಸಂಯೋಗ' ಸಂಬಂಧವಾಗುತ್ತದೆ. ಈ ಸಂಬಂಧವು ಅತ್ಯಂತಾಭಾವನಿತ್ಯವಾಗಿದ್ದರೂ ಅದರ ಪ್ರತೀತಿಗೆ ಪ್ರತಿಬಂಧಕವಾಗುತ್ತದೆ. ಆದುದರಿಂದ ಘಟವನ್ನು ಪುನಃ ತಂದಾಗ ಘಟಾತ್ಯಂತಾಭಾವಬುದ್ಧಿ ಬರುವುದಿಲ್ಲ. ಘಟಾತ್ಯಂತಾಭಾವವುಳ್ಳ ಭೂತಲದಲ್ಲಿ ಘಟತಂದ ಮೇಲೆ ಘಟಸತ್ತಾಕಾಲವು ಭೂತಲ ಮತ್ತು ಘಟಾತ್ಯಂತಾಭಾವಗಳ ಸಂಸರ್ಗ ಪ್ರತೀತಿಯನ್ನು ವಿಘಟನ(ನಾಶ)ಮಾಡುತ್ತವೆ. ಆಗ 'ಇಹಭೂತಲೇ ಘಟೋ ನಾಸ್ತಿ' ಎಂಬ ಜ್ಞಾನ ಬರುವುದಿಲ್ಲ. ಇದರಿಂದ ಅತ್ಯಂತಾಭಾವ ಇಲ್ಲವೆಂದು ಹೇಳಬಾರದು. ಅದು ನಿತ್ಯವಾದುದರಿಂದ ಕೇವಲಾನ್ವಯಿ. (ಅದರ ಅಭಾವ ಪ್ರದೇಶವಿಲ್ಲ.) ಮತಾಂತರವನ್ನೂ ತೋರಿಸುತ್ತಾನೆ. 'ತತ್ರ—' ಇತಿ. ಇಂತಹ ಸ್ಥಳದಲ್ಲಿ ನಾಲ್ಕನೆಯ ಸಂಸರ್ಗಾಭಾವವನ್ನು ಕೆಲವರು ಅಂಗೀಕರಿಸುತ್ತಾರೆ. ಇದಕ್ಕೆ ಸಾಮಾಯಿಕಾಭಾವವೆಂದು ಹೆಸರು. ಕಾಲವಿಶೇಷ ವಿಶಿಷ್ಟ ಸ್ವರೂಪ ಸಂಬಂಧವನ್ನಂಗೀಕರಿಸುವುದರಿಂದ ಹಿಂದಿನಂತೆ ಘಟವುಳ್ಳ ಪ್ರದೇಶದಲ್ಲಿ ಘಟಾತ್ಯಂತಾಭಾವ ಬುದ್ಧಿ ಬರುವುದಿಲ್ಲವೆಂದು ಹೇಳಿರುವುದೇ ಸಮಂಜಸವಾಗುವಾಗ ಅತಿರಿಕ್ತಾಭಾವಕಲ್ಪನೆ ಮಾಡಬೇಕಾಗಿಲ್ಲವೆಂದು ನವೀನರ ಮತ. ಧ್ವಂಸ ಪ್ರಾಗಭಾವಗಳಿಗೂ, ಅತ್ಯಂತಾಭಾವಕ್ಕೂ ಭಿನ್ನ ಭಿನ್ನ ಅಧಿಕರಣ ಹೇಳಬೇಕೆಂದು ಪ್ರಾಚೀನರ ಮತವನ್ನು ತೋರಿಸುತ್ತಾನೆ. 'ಅತ್ರ—' ಇತಿ. ಧ್ವಂಸಪ್ರಾಗಭಾವಗಳಿದ್ದಲ್ಲಿ ಅತ್ಯಂತಾಭಾವ ಇರುವುದಿಲ್ಲ. 'ಶ್ಯಾಮಘಟೇ ರಕ್ತೋ ನಾಸ್ತಿ' ಎಂಬ ಪ್ರತೀತಿಯಲ್ಲಿ ರಕ್ತಪ್ರಾಗಭಾವವೂ, 'ರಕ್ತಘಟೇ ಶ್ಯಾಮೋನಾಸ್ತಿ' ಎಂಬ ಪ್ರತೀತಿಯಲ್ಲಿ ಧ್ವಂಸವೂ ತೋರುವುದಲ್ಲದೆ ಅತ್ಯಂತಾಭಾವವು ಅಲ್ಲಿ ವಿಷಯವಾಗುವುದಿಲ್ಲವೆಂದು ಅವರ ಮತ. 'ನಾಸ್ತಿ' ಎಂಬ ಪ್ರತೀತಿ ಕೇವಲ ಅತ್ಯಂತಾಭಾವವನ್ನೇ ವಿಷಯೀಕರಿಸುತ್ತದೆಂಬ ನಿಯಮವಿಲ್ಲ. ಧ್ವಂಸಪ್ರಾಗಾಭಾವಾಧಿಕರಣಕ್ಕಿಂತ ಭಿನ್ನಾಧಿಕರಣದಲ್ಲಿ ಅದು ಅತ್ಯಂತಾಭಾವವನ್ನು ವಿಷಯೀಕರಿಸುತ್ತದೆ. ಧ್ವಂಸಪ್ರಾಗಾಭಾವಾಧಿಕರಣಗಳಲ್ಲಿ ಕ್ರಮವಾಗಿ ಧ್ವಂಸಾಭಾವವನ್ನೂ, ಪ್ರಾಗಭಾವವನ್ನು ತಿಳಿಸುತ್ತದೆಂದು ಅವರ ಸಿದ್ಧಾಂತ.

ಆದರೆ ನವೀನರ ಸಿದ್ಧಾಂತ ಇದಕ್ಕೆ ವಿರುದ್ಧವಾಗಿದೆ. ಅತ್ಯಂತಾಭಾವ ನಿತ್ಯ

ವಾದುದರಿಂದ ಧ್ವಂಸಪ್ರಾಗಭಾವಾಧಿಕರಣಗಳಲ್ಲಿ ಅದು ಇದ್ದೇ ಇರುತ್ತದೆ. ಧ್ವಂಸ ಪ್ರಾಗಭಾವಗಳಿಂದ ಅದಕ್ಕೆ ಯಾವ ವಿರೋಧವೂ ಇಲ್ಲವೆಂದು ಅವರ ಮತ.

**ನನ್ವಸ್ತು ಅಭಾವಾನಾಮಧಿಕರಣಾತ್ಮಕತ್ವಂ ಲಾಘವಾದಿತಿ ಚೇತ್‌। ನ, ಅನಂತಾಧಿಕರಣಾತ್ಮಕತ್ವಕಲ್ಪನಾಪೇಕ್ಷಯಾಽತಿರಿಕ್ತಕಲ್ಪನಾಯಾ ಏವ ಲಘೀಯಸ್ತ್ವಾತ್ । ಏವಂ ಚ— ಆಧಾರಾಧೇಯಭಾವೋಽಪ್ಯುಪಪದ್ಯತೇ । ಏವಂ ಚ ತತ್ತಚ್ಛಬ್ದಗಂಧರಸಾದ್ಯಭಾವಾನಾಂ ಪ್ರತ್ಯಕ್ಷತ್ವಮುಪಪದ್ಯತೇ । ಅನ್ಯಥಾತತ್ತದಧಿಕರಣಾನಾಂ ತತ್ತದಿಂದ್ರಿಯಾಗ್ರಾಹ್ಯತ್ವಾದಪ್ರತ್ಯಕ್ಷತ್ವಂ ಸ್ಯಾತ್ । ಏತೇನ ಜ್ಞಾನವಿಶೇಷಕಾಲವಿಶೇಷಾದ್ಯಾತ್ಮಕತ್ವಮತ್ಯಂತಾಭಾವಸ್ಯೇತಿ ಪ್ರತ್ಯುಕ್ತಮಪ್ರತ್ಯಕ್ಷತ್ವಾಪತ್ತೇಃ ॥**

ಅಭಾವವು ಅಧಿಕರಣಸ್ವರೂಪವೆಂದು ಪ್ರಾಭಾಕರನ ಮತ. ಭೂತಲದಲ್ಲಿ ಘಟಾಭಾವವೆಂದರೆ ಅದೊಂದು ಬೇರೆ ಪದಾರ್ಥವಲ್ಲ. ಭೂತಲಸ್ವರೂಪವೇ ಆಗುವುದರಿಂದ ಅತಿರಿಕ್ತಪದಾರ್ಥಕಲ್ಪನೆ ಏಕೆ ? ಅಧಿಕರಣಸ್ವರೂಪವೆಂದರೆ ಭಾವದಲ್ಲಿಯೇ ಸೇರುವುದರಿಂದ ಲಾಘವವಾಗುತ್ತದೆ ಎಂದು ಅವನ ಸಿದ್ಧಾಂತ. 'ನ' ಎಂಬುದರಿಂದ ಖಂಡಿಸುತ್ತಾನೆ. ಅಭಾವವು ಅಧಿಕರಣಸ್ವರೂಪವೆಂದರೆ ಅನಂತಅಧಿಕರಣಕಲ್ಪನೆ ಗೌರವವಾಗುತ್ತದೆ. ರೂಪಾಭಾವವೆಂದರೇ ಅನಂತವಾಗುತ್ತವೆ. ಹೀಗೆ ಒಂದೊಂದೇ ಅನಂತವಾದರೆ ಎಲ್ಲಾ ಅಭಾವಗಳ ವಿಷಯದಲ್ಲಿ ಹೇಳಲು ಸಾಧ್ಯವೇ ಇಲ್ಲ. ಅಧಿಕರಣಕ್ಕಿಂತ ಅದು ಅತಿರಿಕ್ತವೆಂದು ಕಲ್ಪಿಸಿದರೇ ಲಾಘವ. ಬೇರೆಯೆಂದು ಕಲ್ಪಿಸುವುದರಿಂದ ಲಾಘವವಲ್ಲದೆ ಇತರ ದೋಷನಿವಾರಣೆಯೂ ಆಗುತ್ತದೆಂದು ತೋರಿಸುತ್ತಾನೆ. 'ಏವಂ' ಇತಿ. ಲೋಕದಲ್ಲಿ ಆಧಾರ ಆಧೇಯಗಳು ಬೇರೆ ಬೇರೆಯೆಂದು ಎಲ್ಲರಿಗೂ ತಿಳಿದ ವಿಷಯ. ಘಟಾಭಾವ ಅಧಿಕರಣಕ್ಕಿಂತ ಬೇರೆಯೆಂದರೆ 'ಭೂತಲೇ ಘಟಾಭಾವಃ' ಎಂಬಲ್ಲಿ ಆಧಾರಾಧೇಯಭಾವ ಕೊಡುತ್ತದೆ. ಭೂತಲಸ್ವರೂಪವೆಂದರೆ ಆಧಾರಾಧೇಯಗಳ ಸಂಬಂಧ ಸಮಂಜಸವಾಗಲಾರದು. ಇನ್ನು ಅಭಾವಪ್ರತ್ಯಕ್ಷವೂ ಅದು ಅತಿರಿಕ್ತವೆಂದು ಒಪ್ಪಿದಾಗ ಮಾತ್ರ ಕೊಡುತ್ತದೆ. ಅಧಿಕರಣ ಸ್ವರೂಪವೆಂದರೆ ಅಭಾವಪ್ರತ್ಯಕ್ಷವಾಗಲಾರದು. ಶಬ್ದಾಭಾವ ಅತಿರಿಕ್ತವೆಂದರೆ ಶಬ್ದವು ಶ್ರವಣದಿಂದ ಗೃಹೀತವಾದಾಗ ಶಬ್ದಾಭಾವವೂ ಅದರಿಂದಲೇ ಗೃಹೀತವಾಗುತ್ತದೆ. ಅಧಿಕರಣ ಸ್ವರೂಪವೆಂದರೆ ಆಕಾಶರೂಪವಾಗುವುದರಿಂದ ಆಕಾಶವು ಆ ಇಂದ್ರಿಯದಿಂದ ಪ್ರತ್ಯಕ್ಷವಾಗದಿರುವುದರಿಂದ ಶಬ್ದಾಭಾವವು ಪ್ರತ್ಯಕ್ಷವಿಷಯವಾಗದೇ ಹೋಗಬೇಕಾಗುತ್ತದೆ. ಹೀಗೆಯೇ ಆಯಾಯ ಇಂದ್ರಿಯಗಳಿಗೆ ಅಧಿಕರಣಗಳು ವಿಷಯವಾಗದಿರುವುದರಿಂದ ಅಭಾವ ಪ್ರತ್ಯಕ್ಷವೇ ಇಲ್ಲದೇ ಹೋಗಬೇಕಾಗುತ್ತದೆ. 'ಏತೇನ'—ಇತಿ. ಜ್ಞಾನವಿಶೇಷ ಸ್ವರೂಪವೇ ಅಭಾವ. ಅಥವಾ ಕಾಲವಿಶೇಷಸ್ವರೂಪವೇ ಅಭಾವವೆಂದು ಕೆಲವರು ಹೇಳುವುದೂ ಸಮಂಜಸವಲ್ಲ. ಅಲ್ಲಿಯೂ ಹಿಂದೆ ಹೇಳಿದ ದೋಷವು ಇದ್ದೇ ಇರುತ್ತದೆ.

ಗಂಧಾಭಾವವು ಜ್ಞಾನವಿಶೇಷವಾದರೆ ಜ್ಞಾನಸಾಮಾನ್ಯವು ಮನೋವೇದ್ಯವಾದುದರಿಂದ ಗಂಧಾಭಾವವೂ ಮನೋವೇದ್ಯವಾಗಬೇಕಾಗುತ್ತದೆ. ಘ್ರಾಣಗ್ರಾಹ್ಯತ್ವನಿಯಮ ಭಂಗವಾಗಬೇಕಾಗುತ್ತದೆ. ಕಾಲವೆಂದರೆ ಅದು ಯಾವ ಇಂದ್ರಿಯಕ್ಕೂ ವಿಷಯ ವಾಗದಿರುವುದರಿಂದ ಅಭಾವಪ್ರತ್ಯಕ್ಷವೇ ಇಲ್ಲವೇ ಹೋಗಬೇಕಾಗುತ್ತದೆ. ಆದುದರಿಂದ ಅಭಾವವನ್ನು ಅತಿರಿಕ್ತಪದಾರ್ಥವೆಂದೇ ಸ್ವೀಕರಿಸಬೇಕು.

**ಸಪ್ತಾನಾಮಪಿ ಸಾಧರ್ಮ್ಯಂ ಜ್ಞೇಯತ್ವಾದಿಕಮುಚ್ಯತೇ ॥ ॥೧೩॥**

**ಇದಾನೀಂ ಪದಾರ್ಥಾನಾಂ ಸಾಧರ್ಮ್ಯಂ ವೈಧರ್ಮ್ಯಂ ಚ ವಕ್ತುಂ ಪ್ರಕ್ರಮತೇ ॥ ಸಮಾನೋ ಧರ್ಮೋ ಯೇಷಾಂ ತೇ ಸಧರ್ಮಾಣಃ ತೇಷಾಂ ಭಾವಃ ಸಾಧರ್ಮ್ಯಂ ಸಮಾನೋ ಧರ್ಮ ಇತಿ ಫಲಿತಾರ್ಥಃ । ಏವಂ—ವಿರುದ್ಧೋ ಧರ್ಮೋ ಯೇಷಾಂ ತೇ ವಿಧರ್ಮಾಣಃ ತೇಷಾಂ ಭಾವೋ ವೈಧರ್ಮ್ಯಮ್, ವಿರುದ್ಧೋ ಧರ್ಮ ಇತಿ ಫಲಿತಾರ್ಥಃ ॥ ಜ್ಞೇಯತ್ವಂ ಜ್ಞಾನವಿಷಯತಾ ಸಾ ಚ ಸರ್ವತ್ರೈವಾಸ್ತಿ । ಈಶ್ವರ ಜ್ಞಾನವಿಷಯತಾಯಾಃ ಕೇವಲಾನ್ವಯಿತ್ವಾತ್ । ಏವಮಭಿಧೇಯತ್ವ ಪ್ರಮೇಯತ್ವಾದಿಕಂ ಬೋಧ್ಯಮ್ ॥ ೧೩ ॥**

ಸಾಮಾನ್ಯವಾಗಿ ಏಳು ಪದಾರ್ಥಗಳ ಸ್ವರೂಪವನ್ನು ತೋರಿಸಿದ ಮೇಲೆ ಈಗ ಅವುಗಳಿಗೆ ಪರಸ್ಪರಭೇದ ತಿಳಿಯಲು ಸಾಧರ್ಮ್ಯವೈಧರ್ಮ್ಯಗಳನ್ನು ತೋರಿಸುತ್ತಾನೆ. 'ಇದಾನೀಂ—' ಇತಿ. ಪದಾರ್ಥಗಳನ್ನು ನಿರೂಪಿಸಿದ ಮೇಲೆ ಎಂದರ್ಥ. ಸಾಧರ್ಮ್ಯ ವೈಧರ್ಮ್ಯಗಳ ವಿಗ್ರಹ ಅರ್ಥಗಳನ್ನು ತೋರಿಸುತ್ತಾನೆ. 'ಸಮಾನೋ—' ಇತಿ. 'ಪ್ರಕೃತಿಜನ್ಯಬೋಧೇ ಪ್ರಕಾರೋ ಭಾವಃ' ಸಮಾನಧರ್ಮವುಳ್ಳದ್ದರ ಭಾವ ಸಮಾನ ಧರ್ಮವೇ ಆಗುತ್ತದೆ. ಹಾಗೆಯೇ ವಿರುದ್ಧಧರ್ಮವುಳ್ಳದ್ದರ ಭಾವ ವಿರುದ್ಧಧರ್ಮವೇ ಆಗುತ್ತದೆ. ಭಾವಪ್ರತ್ಯಯದ ಪ್ರಕೃತ್ಯರ್ಥದಲ್ಲಿ ವಿಶೇಷಣವಾಗಿ ತೋರುವುದು ಜಾತ್ಯಾದಿರೂಪವಾದ ಅರ್ಥವೇ ಆಗುತ್ತದೆ. ದ್ರವ್ಯಾದಿ ಏಳುಪದಾರ್ಥಗಳ ಸಾಧರ್ಮ್ಯ—ಸಮಾನಧರ್ಮವು ಜ್ಞೇಯತ್ವವಾಗುತ್ತದೆ. ಜ್ಞಾನವಿಷಯತ್ವಂ—ಜ್ಞಾನದಿಂದ ನಿರೂಪಿತವಾಗುತ್ತದೆ ಎಂದರ್ಥ. ವಿಷಯವು ನಿರೂಪ್ಯ. ಜ್ಞಾನವು ನಿರೂಪಕವಾಗುತ್ತದೆ. ಇದೇ ಜ್ಞಾನವಿಷಯಗಳಿಗೆ ನಿರೂಪ್ಯನಿರೂಪಕಭಾವಸಂಬಂಧ. ಎಲ್ಲಾ ಪದಾರ್ಥಗಳು ನಮ್ಮ ಜ್ಞಾನಕ್ಕೆ ವಿಷಯವಾಗದಿದ್ದರೂ ಈಶ್ವರನ ಜ್ಞಾನ ಕೆ ವಿಷಯವಾಗುತ್ತವೆ. ಆತನು ಸರ್ವಜ್ಞ. ಈಶ್ವರನ ಜ್ಞಾನವಿಷಯತಾ ಕೇವಲಾನ್ವಯಿ. ಅದು ಇಲ್ಲದಿರುವ ಸ್ಥಳವಿಲ್ಲ. (ಅತ್ಯಂತಾಭಾವಪ್ರತಿಯೋಗಿತ್ವಂ) ಜ್ಞಾನ ವಿಷಯತೆಯ ಅತ್ಯಂತಾಭಾವ ಎಲ್ಲಿಯೂ ಇಲ್ಲ. ಜ್ಞೇಯತ್ವಾದಿಪದದಿಂದ ಅಭಿ ಧೇಯತ್ವಂ, ಪ್ರಮೇಯತ್ವಂ ಅಸ್ತಿತ್ವಂ ಎಂಬವುಗಳೂ ಏಳರ ಸಾಧರ್ಮ್ಯವೆಂದು ತಿಳಿಯ ಬೇಕು. ಅಭಿದಾ—ಸಂಕೇತ. ಅಭಿಧಾವಿಷಯತ್ವಂ—ಅಭಿಧೇಯತ್ವಂ. ಸಂಕೇತ

ದಿಂದ ಗ್ರಾಹ್ಯವಾದ ಪದಾರ್ಥಾಂತರವು 'ಅಭಿಧಾ' ಎಂದು ಮೀಮಾಂಸಕರ ಮತ. ಪ್ರಮಾವಿಷಯತ್ವಂ ಪ್ರಮೇಯತ್ವಮ್. ಕಾಲಸಂಬಂಧಿತ್ವಂ ಅಸ್ತಿತ್ವಮ್. ವಸ್ತುವಿನ ಸ್ವರೂಪವೇ ಅಸ್ತಿತ್ವ. ಹೀಗೆ ಇವು ಏಳರ ಸಾಧರ್ಮ್ಯ.

**ದ್ರವ್ಯಾದಯಃ ಪಂಚ ಭಾವಾ ಅನೇಕೇ ಸಮವಾಯಿನಃ ||**

**ದ್ರವ್ಯಗುಣಕರ್ಮಸಾಮಾನ್ಯವಿಶೇಷಾಣಾಂ ಸಾಧರ್ಮ್ಯಮನೇಕತ್ವಂ ಸಮವಾಯಿತ್ವಞ್ಚ । ಯದ್ಯಪ್ಯನೇಕತ್ವಮಭಾವೇಽಪ್ಯಸ್ತಿ ತಥಾಪ್ಯನೇಕತ್ವೇ ಸತಿ ಭಾವತ್ವಂ ಪಂಚಾನಾಂ ಸಾಧರ್ಮ್ಯಮ್ । ತಥಾಚ—ಅನೇಕಭಾವ ವೃತ್ತಿಪದಾರ್ಥವಿಭಾಜಕೋಪಾಧಿಮತ್ವಂ ಫಲಿತೋಽರ್ಥಃ । ತೇನಪ್ರತ್ಯೇಕಂ ಘಟಾದೌ ಆಕಾಶಾದೌ ಚ ನಾವ್ಯಾಪ್ತಿಃ । ಸಮವಾಯಿತ್ವಂ ಚ ಸಮವಾಯ ಸಂಬಂಧೇನ ಸಂಬಂಧಿತ್ವಂ ನತುಸಮವಾಯವತ್ವಂ ಸಾಮಾನ್ಯಾದೌ ಅಭಾವಾತ್ । ತಥಾಚ—ಸಮವೇತವೃತ್ತಿಪದಾರ್ಥ ವಿಭಾಜಕೋಪಾಧಿ ಮತ್ವಂ ಇತಿ ಫಲಿತೋಽರ್ಥಃ । ತೇನ ನಿತ್ಯದ್ರವ್ಯೇಷು ನಾವ್ಯಾಪ್ತಿಃ ||**

ದ್ರವ್ಯಾದಿ ಆರು ಪದಾರ್ಥಗಳಿಗೆ 'ಭಾವತ್ವಂ' ಸಾಧರ್ಮ್ಯವೆಂದು ತಿಳಿಯಬೇಕು. ಈಗ ದ್ರವ್ಯಾದಿಪಂಚಕಕ್ಕೆ ಸಾಧರ್ಮ್ಯ ತೋರಿಸುತ್ತಾನೆ. 'ದ್ರವ್ಯಾದಯಃ—' ಇತಿ. 'ದ್ರವ್ಯಾದಯಃ ಪಂಚ' ಇದು ಉದ್ದೇಶ್ಯ. ಯಾವುದನ್ನು ಲಕ್ಷೀಕರಿಸಿ ವಿಧೇಯವನ್ನು ಹೇಳುತ್ತಾರೋ ಅದೇ ಉದ್ದೇಶ್ಯ. ಇದಕ್ಕೆ ಅನುವಾದ್ಯವೆಂದೂ ಹೆಸರು. ಉದ್ದೇಶ್ಯ ದಲ್ಲಿ ಪ್ರಕಾರರೂಪವಾಗಿ ( ವಿಶೇಷಣರೂಪವಾಗಿ ) ತೋರುವ ಪದಾರ್ಥವೇ ವಿಧೇಯ. 'ಅನೇಕತ್ವೇ ಸತಿ ಭಾವತ್ವಂ' ಇದು ಸಾಧರ್ಮ್ಯ. ( ವಿಧೇಯ. ) ಸಮವಾಯದಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ ಸತ್ಯಂತವೂ, ಅಭಾವದಲ್ಲಿ ಅತಿವ್ಯಾಪ್ತಿವಾರಣೆ ಗೋಸ್ಕರ ಭಾವತ್ವವೂ ಹೇಳಿದೆ. ಹೀಗೆ ಹೇಳಿದರೆ ಆಕಾಶದಲ್ಲಿಯೂ, ತತ್ತ್ವಾವಿಶಿಷ್ಟಘಟ ( ಪ್ರತ್ಯೇಕವಾಗಿ ಒಂದಾದ ಘಟ ) ದಲ್ಲಿಯೂ ಅವ್ಯಾಪ್ತಿ ಬರುತ್ತದೆ. ಭಾವತ್ವವಿದ್ದರೂ ಅವುಗಳಲ್ಲಿ ಅನೇಕತ್ವವಿಲ್ಲ. ಒಂದೇ ಘಟವನ್ನು ತತ್ತ್ವಾವಿಶಿಷ್ಟಘಟವೆನ್ನುತ್ತಾರೆ. ಅಲ್ಲಿ ಅನೇಕತ್ವವಿಲ್ಲ. ಆದುದರಿಂದ ಲಕ್ಷಣವನ್ನು ಪರಿಷ್ಕರಿಸಿ ತೋರಿಸುತ್ತಾನೆ. 'ತಥಾಚ—' ಇತಿ. 'ಅನೇಕಭಾವವೃತ್ತಿಪದಾರ್ಥವಿಭಾಜಕೋಪಾಧಿಮತ್ತ್ವಂ' ಅನೇಕೇ ಯೇ ಭಾವಾಃ—ಪಟಘಟಾದಿಗಳು. ತದ್ವೃತ್ತಿಃ—ಅವುಗಳಲ್ಲಿರುವ, ಯಃ ಪದಾರ್ಥವಿಭಾಜಕೋಪಾಧಿಃ—ಪದಾರ್ಥತ್ವಕ್ಕೆ ಸಾಕ್ಷಾತ್ ವ್ಯಾಪ್ಯವಾದ ದ್ರವ್ಯತ್ವಾದಿ ಗಳು. ತದ್ವತ್ತ್ವಂ—ಆ ದ್ರವ್ಯತ್ವವುಳ್ಳದ್ದು ಆಕಾಶವಾಗುತ್ತದೆ. ತತ್ತ್ವಾವಿಶಿಷ್ಟಘಟವೂ ಆಗುತ್ತದೆ. ಇದಕ್ಕೆ ಇನ್ನೂ ಪರಿಷ್ಕಾರವನ್ನು ಕೆಲವರು ತೋರಿಸಿರುತ್ತಾರೆ. 'ಸ್ವಪ್ರತಿ ಯೋಗಿವೃತ್ತಿತ್ವಸ್ವಸಾಮಾನಾಧಿಕರಣ್ಯೋಭಯಸಂಬಂಧೇನ ಭೇದವಿಶಿಷ್ಟತ್ವೇ ಸತಿ ಭಾವವೃತ್ತಿತ್ವಮ್' । ಅನೇಕತ್ವ ಸಾಂಖ್ಯಾರೂಪವಾದರೆ ಗುಣದಲ್ಲಿ ಗುಣವನ್ನು

ಅಂಗೀಕರಿಸದಿರುವುದರಿಂದ ಗುಣದಲ್ಲಿ ಅತಿವ್ಯಾಪ್ತಿ ಬರುವುದರಿಂದ ಈ ರೀತಿ ಪರಿಷ್ಕಾರ ಮಾಡಿದೆ. ಭಾವತ್ವಂ ಎಂಬುದಕ್ಕೆ 'ಸಮವಾಯಸ್ವರೂಪಾನ್ಯತರಸಂಬಂಧಾವಚ್ಛಿನ್ನ ಆಧೇಯತಾ ನಿರೂಪಕತ್ವಂ' ಎಂದು ಹಿಂದೆಯೇ ಪರಿಷ್ಕಾರ ಹೇಳಿದೆ. ಘಟಾದಿಗಳ ಭೇದವನ್ನು ತೆಗೆದುಕೊಂಡು ಲಕ್ಷಣಸಮನ್ವಯಮಾಡಬೇಕು. ಭೇದವಿಶಿಷ್ಟಧರ್ಮ ವೆಂದರೆ ಪದಾರ್ಥ ವಿಭಾಜಕೋಪಾಧಿ ದ್ರವ್ಯತ್ವಾದಿಗಳು. ತದ್ವತ್ವಂ ಘಟ ಆಕಾಶಾದಿ ಗಳಲ್ಲಿ ಬರುತ್ತದೆ. 'ಪ್ರತಿಯೋಗಿವೃತ್ತಿತ್ವಂ' ಎಂದು ಹೇಳದಿದ್ದರೆ 'ಘಟಃ ಸಮ ವಾಯೋನ' ಎಂಬ ಭೇದವನ್ನು ತೆಗೆದುಕೊಂಡು ಭೇದವೈಶಿಷ್ಟ್ಯವು ಸಮವಾಯದಲ್ಲಿ ಬರುವುದರಿಂದ ಅತಿವ್ಯಾಪ್ತಿ ಬರುತ್ತದೆ. ಸ್ವಸಾಮಾನಾಧಿಕರಣ್ಯ ಅಂದರೆ ಸ್ವಾನು ಯೋಗಿವೃತ್ತಿತ್ವದಳ ಹೇಳಿರುವುದರಿಂದ ಆಭೇದವನ್ನು ತೆಗೆದುಕೊಳ್ಳಲು ಬರುವುದಿಲ್ಲ. ಹೀಗೆಯೇ ಸ್ವಾನುಯೋಗಿವೃತ್ತಿತ್ವದಳ ಹೇಳದಿದ್ದರೆ ಘಟೋ 'ಸಮವಾಯಃ ನ' ಎಂಬ ಭೇದವನ್ನು ತೆಗೆದುಕೊಂಡು ಪುನಃ ಸಮವಾಯದಲ್ಲಿ ಅತಿವ್ಯಾಪ್ತಿ ಬರುತ್ತದೆಂದು ಎರಡೂ ದಳ ಹೇಳಿವೆ.

ಕೇವಲ 'ಭೇದವಿಶಿಷ್ಟ ಭಾವವೃತ್ತಿತ್ವಂ' ಎಂದರೆ ಪುನಃ ಸಮವಾಯದಲ್ಲಿ ಅತಿವ್ಯಾಪ್ತಿ. ಭಾವತ್ವಧರ್ಮವನ್ನು ತೆಗೆದುಕೊಂಡು ಸಮವಾಯದಲ್ಲಿ ಹೇಳಲು ಬರುತ್ತದೆ. ಅದಕ್ಕೋಸ್ಕರ 'ಭೇದವಿಶಿಷ್ಟಪದಾರ್ಥವಿಭಾಜಕೋಪಾಧಿನಿಷ್ಠ ಸಮವಾಯ ಸ್ವರೂಪಾನ್ಯತರ ಸಂಬಂಧಾವಚ್ಛಿನ್ನ ಆಧೇಯತಾನಿರೂಪಕತ್ವಂ' ಎಂದು ಹೇಳಬೇಕು. ಆಧೇಯತೆಯಲ್ಲಿ ಯಾವುದಾದರೂ ಸಂಬಂಧ ಹೇಳಿದರೆ ಧ್ವಂಸದಲ್ಲಿ ಅತಿವ್ಯಾಪ್ತಿ ಬರುತ್ತದೆ. ಕಾಲಿಕಸಂಬಂಧದಿಂದ ಧ್ವಂಸದಲ್ಲಿಯೂ ಈ ಆಧೇಯತಾ ನಿರೂಪಕತ್ವ ಬರಬಹುದು. ಕೇವಲ ಸಮವಾಯಸಂಬಂಧ ಹೇಳಿದರೆ ಸಾಮಾನ್ಯದಲ್ಲಿ ಅತಿವ್ಯಾಪ್ತಿ ಬರುವುದರಿಂದ ಸ್ವರೂಪವನ್ನೂ ಹೇಳಿದೆ.

'ಸಮವಾಯಿತ್ವಂ' ಇದೂ ಐದರ ಸಾಧರ್ಮ್ಯ. ಸಮವಾಯಃ ಏಷಾಮಸ್ತೀತಿ ಸಮವಾಯಿನಃ ಘಟದಲ್ಲಿ ರೂಪಸಮವಾಯ ಇದೆ. ರೂಪಾದಿಗುಣಗಳಲ್ಲಿ ತತ್ತ್ವಜಾತಿ ಸಮವಾಯ ಇದೆ. ಹೀಗೆ ಸಮವಾಯವುಳ್ಳವುಗಳು ದ್ರವ್ಯಾದಿಗಳು. ಇಲ್ಲಿಯೂ ಸಾಮಾನ್ಯ, ವಿಶೇಷಗಳಲ್ಲಿ ಯಾವುದರ ಸಮವಾಯವೂ ಇಲ್ಲದಿರುವುದರಿಂದ ಅವ್ಯಾಪ್ತಿ ಬರುತ್ತದೆ. ಆದುದರಿಂದ ಪರಿಷ್ಕೃತಲಕ್ಷಣ ತೋರಿಸುತ್ತಾನೆ. 'ಸಮವಾಯೇನ ಸಂಬಂಧಿತ್ವಂ—' ಇತಿ. ಪ್ರತಿಯೋಗಿತಾ ಅನುಯೋಗಿತಾಸಂಬಂಧೇನ ಸಮವಾಯ ವತ್ವಂ' ಎಂದರ್ಥ. ದ್ರವ್ಯಾದಿಗಳಲ್ಲಿ ಅನುಯೋಗಿತಾಸಂಬಂಧದಿಂದ ಸಮವಾಯವೂ, ಸಾಮಾನ್ಯ ವಿಶೇಷಗಳಲ್ಲಿ ಪ್ರತಿಯೋಗಿತಾ ಸಂಬಂಧದಿಂದ ಸಮವಾಯವೂ ಇರುತ್ತದೆ. ಸಾಮಾನ್ಯ ವಿಶೇಷಗಳು ಸಮವಾಯದಿಂದ ದ್ರವ್ಯದಲ್ಲಿ ಇರುತ್ತವೆ. ಸಾಮಾನ್ಯದ ಸಮವಾಯ ಅಂದರೆ ಸಮವಾಯಕ್ಕೆ ಪ್ರತಿಯೋಗಿ ಸಾಮಾನ್ಯ. ಅನುಯೋಗಿ ದ್ರವ್ಯಾದಿಗಳು. ದ್ರವ್ಯಾದಿಗಳಲ್ಲಿ ಎರಡು ಸಂಬಂಧದಿಂದಲೂ ಸಮವಾಯ ಬರಬಹುದು. ಹೀಗೆ ಹೇಳಿದರೂ ನಿತ್ಯವಾದ ಪರಮಾಣು ಮುಂತಾದವುಗಳು ಯಾವ ಪದಾರ್ಥದಲ್ಲಿಯೂ

ಸಮವಾಯದಿಂದ ಇರುವುದಿಲ್ಲ. ಆಗ ಸಮವಾಯದಿಂದ ಸಂಬಂಧಿತ್ವಧರ್ಮವು ಅವು ಗಳಲ್ಲಿ ಬಾರದಿರುವುದರಿಂದ ಅವ್ಯಾಪ್ತಿ ಬರುತ್ತದೆ. ಅದಕ್ಕೋಸ್ಕರ ಇನ್ನೂ ಪರಿಷ್ಕರಿಸು ತ್ತಾನೆ. 'ಸಮವೇತ—'ಇತಿ. ಸಮವೇತಗಳಾದ ಘಟಾದಿಗಳಲ್ಲಿ ವೃತ್ತಿ—ಇರುವ ಪದಾರ್ಥವಿಭಾಜಕೋಪಾಧಿಧರ್ಮ ಅಂದರೆ ದ್ರವ್ಯತ್ವಾದಿಗಳು. ಅದು ಉಳ್ಳದ್ದು ಘಟಾದಿದ್ರವ್ಯ ಆದಂತೆ ಪರಮಾಣುವೂ ಆಗುತ್ತದೆ. ಹೀಗೆ ಪರಿಷ್ಕರಿಸಿರುವುದರಿಂದ ಪರಮಾಣ್ವಾದಿ ನಿತ್ಯದ್ರವ್ಯಗಳಲ್ಲಿ ಅವ್ಯಾಪ್ತಿ ಬರುವುದಿಲ್ಲ.

'ಸಮವೇತವೃತ್ತಿಪದಾರ್ಥ ವಿಭಾಜಕೋಪಾಧಿಮತ್ವಂ' ದ್ರವ್ಯಾದಿನಾಲ್ಕರ ಸಾಧರ್ಮ್ಯ. ಕಪಾಲಾದಿಗಳಲ್ಲಿ ಸಮವಾಯದಿಂದ ಇರುವವುಗಳು ( ಸಮವೇತ ) ಘಟಾದಿಗಳು. ಅಲ್ಲಿರುವ ಪದಾರ್ಥವಿಭಾಜಕೋಪಾಧಿ ಎಂದರೆ ದ್ರವ್ಯತ್ವ, ಗುಣ ತ್ವಾದಿ. ಅದು ಉಳ್ಳದ್ದು ದ್ರವ್ಯಮುಂತಾದವುಗಳು.

**ಸತ್ತಾವಂತಸ್ತ್ರಯಸ್ತ್ವಾದ್ಯಾ ಗುಣಾದಿರ್ನಿರ್ಗುಣಕ್ರಿಯಃ ॥ ೧೪ ॥**

**ಸತ್ತಾವಂತ ಇತಿ । ದ್ರವ್ಯಗುಣಕರ್ಮಣಾಂ ಸತ್ತಾವತ್ತ್ವಮಿತ್ಯರ್ಥಃ । ಗುಣಾದಿರಿತಿ । ಯದ್ಯಪಿ ಗುಣಕ್ರಿಯಾಶೂನ್ಯತ್ವಮಾದ್ಯಕ್ಷಣೇ ಘಟಾದಾ ವತಿವ್ಯಾಪ್ತಂ ಕ್ರಿಯಾಶೂನ್ಯತ್ವಂ ಚ ಗಗನಾದಾವತಿವ್ಯಾಪ್ತಮ್ । ತಥಾಪಿ ಗುಣವದವೃತ್ತಿಧರ್ಮವತ್ತ್ವಂ ಕರ್ಮವದವೃತ್ತಿಪದಾರ್ಥವಿಭಾಜಕೋ ಪಾಧಿಮತ್ತ್ವಂ ತದರ್ಥಃ । ನಹಿಘಟತ್ವಾದಿಕಂ ದ್ರವ್ಯತ್ವಂ ವಾ ಗುಣವದ ವೃತ್ತಿ ಕರ್ಮವದವೃತ್ತಿ ವಾ ಕಿಂತುಗುಣತ್ವಾದಿಕಮ್ । ತಥಾ—ಆಕಾಶ ತ್ವಾದಿಕಂ ತು ನ ಪದಾರ್ಥವಿಭಾಜಕೋಪಾಧಿಃ ॥ ೧೪ ॥**

'ಆದ್ಯಾಃ'—ಇತಿ. ಮೊದಲಿನ ಮೂರು ಅಂದರೆ ದ್ರವ್ಯಗುಣಕರ್ಮಗಳಿಗೆ 'ಸತ್ತಾ ವತ್ತ್ವಂ' ಸಾಧರ್ಮ್ಯ. ಸಮವಾಯಸಂಬಂಧದಿಂದ ಸತ್ತಾವುಳ್ಳವುಗಳು ಎಂದರ್ಥ. 'ನಿತ್ಯಾನಿತ್ಯಭಾವವೃತ್ತಿ ಪದಾರ್ಥವಿಭಾಜಕೋಪಾಧಿಮತ್ತ್ವಂ' ದ್ರವ್ಯಗುಣ ಈ ಎರಡರ ಸಾಧರ್ಮ್ಯ. 'ಸಮವಾಯಿಕಾರಣತ್ವವತ್ತ್ವಂ' ದ್ರವ್ಯಗಳ ಸಾಧರ್ಮ್ಯ. ಇವು ಸುಲಭ ವೇದ್ಯವಾದುದರಿಂದ ಮೂಲದಲ್ಲಿ ಹೇಳಿಲ್ಲ. ಈಗ ದ್ರವ್ಯವನ್ನು ಬಿಟ್ಟು ಗುಣಾದಿ ಆರರ ಸಾಧರ್ಮ್ಯ ತೋರಿಸುತ್ತಾನೆ. ( ವ್ಯುತ್ಕ್ರಮದಿಂದ ) 'ನಿರ್ಗುಣವತ್ತ್ವಂ' 'ನಿಷ್ಕ್ರಿಯಾವತ್ತ್ವಂ' ಎಂದು ಗುಣಕರ್ಮಸಾಮಾನ್ಯವಿಶೇಷ ಸಮವಾಯಾಭಾವಗಳ ಸಾಧರ್ಮ್ಯ. ಗುಣಾದಿಗಳಲ್ಲಿ ಗುಣವಿಲ್ಲ. ಕ್ರಿಯೆಯೂ ಇಲ್ಲ. ಗುಣಕ್ರಿಯೆಗಳಿಂದ ಕೂಡಿರುವುದು ದ್ರವ್ಯಮಾತ್ರ. 'ಗುಣಾತ್ಯಂತಾಭಾವವತ್ತ್ವಂ' 'ಕ್ರಿಯಾತ್ಯಂತಾಭಾವ ವತ್ತ್ವಂ' ಎಂದರ್ಥ.

ಹೀಗೆ ಹೇಳಿದರೆ ದ್ರವ್ಯದಲ್ಲಿ ಅತಿವ್ಯಾಪ್ತಿ ಬರುತ್ತದೆಂದು ತೋರಿಸುತ್ತಾನೆ. 'ಯದ್ಯಪಿ'—ಇತಿ. 'ಉತ್ಪನ್ನಂ ದ್ರವ್ಯಂ ಕ್ಷಣಮಗುಣಂ ಅಕ್ರಿಯಾಕಂ ಚ ತಿಷ್ಠತಿ' ಎಂದು ನೈಯಾಯಿಕರ ಸಿದ್ಧಾಂತ. ಹುಟ್ಟಿದ ಮೊದಲಿನ ಕ್ಷಣದಲ್ಲಿ ದ್ರವ್ಯದಲ್ಲಿ ಯಾವ

ಗುಣವೂ ಇರುವುದಿಲ್ಲವೆಂದು ಅರ್ಥ. ಆಗ ಆ ದ್ರವ್ಯವು ನಿರ್ಗುಣವಾಗುತ್ತದೆ. 'ಗುಣ ಶೂನ್ಯತ್ವಂ' ಅಲ್ಲಿ ಅತಿವ್ಯಾಪ್ತವಾಗುತ್ತದೆ. ಆಕಾಶದಲ್ಲಿಯೂ ಕಾಲಾದಿವಿಭುಪದಾರ್ಥ ಗಳಲ್ಲಿಯೂ ಕ್ರಿಯೆಯೇ ಹುಟ್ಟುವುದಿಲ್ಲ. ಅವು ಕ್ರಿಯಾಶೂನ್ಯವಾಗುವುದರಿಂದ ಅಲ್ಲಿ ಅತಿವ್ಯಾಪ್ತವಾಗುತ್ತದೆ. ಹೀಗೆ ಗುಣಾದಿಗಳಿಗೆ ಹೇಳಿದ ಸಾಧರ್ಮ್ಯವು ಕೆಲವು ದ್ರವ್ಯ ದಲ್ಲಿಯೂ ಬರುವುದರಿಂದ ಅತಿವ್ಯಾಪ್ತವಾಗುತ್ತದೆ. ಆದುದರಿಂದ ಹಿಂದಿನಂತೆ ಜಾತಿ ಘಟಿತಲಕ್ಷಣದಿಂದ ಪರಿಷ್ಕರಿಸುತ್ತಾನೆ. 'ಗುಣವದವೃತ್ತಿಧರ್ಮವತ್ತ್ವಂ' ಗುಣವತ್— ದ್ರವ್ಯ ಅಲ್ಲಿ ಇಲ್ಲದಿರುವ ಧರ್ಮ ಅಂದರೆ ಗುಣತ್ವಾದಿ· ಅದು ಉಳ್ಳದ್ದು ಗುಣಾದಿ ಗಳಾಗುತ್ತವೆ. ಗುಣವು ದ್ರವ್ಯದಲ್ಲಿದ್ದರೂ ಗುಣತ್ವ ಅದರಲ್ಲಿಲ್ಲ. ಹೀಗೆಯೇ 'ಕರ್ಮ ವದವೃತ್ತಿಪದಾರ್ಥವಿಭಾಜಕೋಪಾಧಿಮತ್ತ್ವಮ್' ಕರ್ಮವುಳ್ಳದ್ದು ದ್ರವ್ಯ. ಅಲ್ಲಿಲ್ಲದಿರುವ ( ಪದಾರ್ಥತ್ವವ್ಯಾಪ್ಯವಾದ ) ಪದಾರ್ಥವಿಭಾಜಕೋಪಾಧಿ ಅಂದರೆ ಗುಣತ್ವಾದಿ. ಅದು ಉಳ್ಳದ್ದು ಗುಣಾದಿ. ಆಕಾಶತ್ವವು ಕರ್ಮವದವೃತ್ತಿಯಾದರೂ ಪದಾರ್ಥ ವಿಭಾಜಕೋಪಾಧಿಯಾಗುವುದಿಲ್ಲ. (ಅದು ದ್ರವ್ಯವಿಭಾಜಕೋಪಾಧಿ ) ಆದುದರಿಂದ ಆಕಾಶಾದಿದ್ರವ್ಯದಲ್ಲಿ ಅತಿವ್ಯಾಪ್ತಿ ಇಲ್ಲ.

'ನಿತ್ಯಾನಿತ್ಯಭಾವಾವೃತ್ತಿ ಪದಾರ್ಥವಿಭಾಜಕೋಪಾಧಿಮತ್ತ್ವಂ' ಕರ್ಮಾದಿ ಐದು ಪದಾರ್ಥಗಳ ಸಾಧರ್ಮ್ಯ.

**ಸಾಮಾನ್ಯಪರಿಹೀನಾಸ್ತು ಸರ್ವೇ ಜಾತ್ಯಾದಯೋ ಮತಾಃ ||**
**ಸಾಮಾನ್ಯಾನಧಿಕರಣತ್ವಂ ಸಾಮಾನ್ಯಾದೀನಾಮಿತ್ಯರ್ಥಃ ||**

ಸಾಮಾನ್ಯ ವಿಶೇಷ ಸಮವಾಯಾಭಾವ ಪದಾರ್ಥಗಳ ಸಾಧರ್ಮ್ಯ ಹೇಳುತ್ತಾನೆ. 'ಸಾಮಾನ್ಯಾ—' ಇತಿ. ಸಾಮಾನ್ಯದಿಂದ—ಜಾತಿಯಿಂದ ರಹಿತವಾದವುಗಳು. 'ಸಾಮಾನ್ಯತ್ವಾವಚ್ಛಿನ್ನಪ್ರತಿಯೋಗಿತಾಕಾಭಾವವತ್ವಂ' ಎಂದರೆ ಸಾಮಾನ್ಯದಲ್ಲಿ ಸಾಮಾನ್ಯ ಇದೆಯೆಂದು ಹೇಳಲು ಬರುತ್ತದೆ. ಭಾವತ್ವ ಪರಿಷ್ಕಾರದಲ್ಲಿ 'ಸಮವಾಯಸ್ವ ರೂಪಾನ್ಯತರ ಸಂಬಂಧೇನ ಸತ್ತಾವತ್ತ್ವಂ' ಎಂದುದರಿಂದ ಸ್ವರೂಪದಿಂದ ಸಾಮಾನ್ಯ ದಲ್ಲಿ ಸಾಮಾನ್ಯ ಇರುತ್ತದೆ. ಏಕಾರ್ಥಸಮವಾಯಸಂಬಂಧದಿಂದಲೂ ಸಾಮಾನ್ಯದಲ್ಲಿ ಸಾಮಾನ್ಯ ಹೇಳಲು ಬರುತ್ತದೆ. ಏಕಸ್ಮಿನ್ ಅರ್ಥೇ ಸಮವಾಯೇನ ಸತ್ವಮೇಕಾರ್ಥ ಸಮವಾಯಃ 'ಏಕಂ ರೂಪಂ' ಎಂದರೆ ರೂಪಗುಣದಲ್ಲಿ ಏಕಾರ್ಥಸಮವಾಯದಿಂದ ಸಂಖ್ಯಾತೋರುತ್ತದೆ. ಯಾವ ಘಟದಲ್ಲಿ ರೂಪ ತೋರುತ್ತದೆಯೋ ಅಲ್ಲಿಯೇ ಏಕತ್ವಸಂಖ್ಯೆಯೂ ಸಮವಾಯಸಂಬಂಧದಿಂದ ಇದೆ. ಆದುದರಿಂದ ರೂಪಸಂಖ್ಯೆಗಳಿಗೆ ಏಕರ್ಥಸಮವಾಯ. ಹೀಗೆ ಏಕಾರ್ಥಸಮವಾಯದಿಂದ ಸಾಮಾನ್ಯದಲ್ಲಿ ಸಾಮಾನ್ಯ ಬರಬಹುದು. ಎರಡು ಜಾತಿಗಳು ಒಂದು ದ್ರವ್ಯದಲ್ಲಿ ಬರುವುದರಿಂದ ಏಕಾರ್ಥ ಸಮವಾಯದಿಂದ ಜಾತಿಯಲ್ಲಿ ಜಾತಿ ಬರುತ್ತದೆ. ಆದುದರಿಂದ 'ಸಾಮಾನ್ಯಾನಧಿ ಕರಣತ್ವಂ' ಎಂದು ಪರಿಷ್ಕರಿಸಬೇಕು. ಸಾಮಾನ್ಯಕ್ಕೆ ಸಾಮಾನ್ಯವು ಅಧಿಕರಣ

ವಾಗುವುದಿಲ್ಲ. ಏಕಾರ್ಥಸಮವಾಯ ಸಂಬಂಧವು ವೃತ್ತಿನಿಯಾಮಕ ಸಂಬಂಧವಲ್ಲ. ರೂಪವು ಏಕತ್ವಕ್ಕೆ ಅಧಿಕರಣವಾಗಲಾರದು. ವೃತ್ತಿನಿಯಾಮಕ ಸಂಬಂಧದಿಂದ ಅಧಿಕರಣವಾದರೇ ಆಗ ಅವ್ಯಾಪ್ತಿ ಬರುತ್ತಿತ್ತು. ಸಮವಾಯ ವೃತ್ತಿನಿಯಾಮಕ ಸಂಬಂಧ. ಸಮವಾಯದಿಂದ ಜಾತ್ಯಧಿಕರಣ—ದ್ರವ್ಯಗುಣ ಕರ್ಮಗಳು. ಜಾತ್ಯನಧಿಕರಣ—ಸಾಮಾನ್ಯಾದಿಗಳು. 'ಯತ್ಸಂಬಂಧಾವಚ್ಛಿನ್ನಾಧೇಯತಾ ನಿರೂಪಿತ ಅಧಿಕರಣತಾ ವರ್ತತೇ ತದವಚ್ಛಿನ್ನಪ್ರತಿಯೋಗಿತಾಕಾಭಾವವತ್ವಂ' ಎಂದು ಫಲಿತವಾಗುತ್ತದೆ.

**ಪಾರಿಮಾಂಡಲ್ಯಭಿನ್ನಾನಾಂ ಕಾರಣತ್ವಮುದಾಹೃತಮ್ ॥ ೧೫ ॥**

**ಪಾರಿಮಾಂಡಲ್ಯೇತಿ । ಪಾರಿಮಾಂಡಲ್ಯಮಣುಪರಿಮಾಣಂ ಕಾರಣತ್ವಂ ತದ್ಭಿನ್ನಾನಾಮಿತ್ಯರ್ಥಃ । ಅಣುಪರಿಮಾಣಂ ತು ನ ಕಸ್ಯಾಪಿ ಕಾರಣಮ್ । ತದ್ಧಿ ಸ್ವಾಶ್ರಯಾರಬ್ಧದ್ರವ್ಯಪರಿಮಾಣಾರಂಭಕಂ ಭವೇತ್ ತಚ್ಚ ನ ಸಂಭವತಿ, ಪರಿಮಾಣಸ್ಯ ಸ್ವಸಮಾನಜಾತೀಯೋತ್ಕೃಷ್ಟ ಪರಿಮಾಣಜನಕತ್ವನಿಯಮಾತ್ ಮಹದಾರಬ್ಧಸ್ಯ ಮಹತ್ತರತ್ವವದಣುಜನ್ಯಸ್ಯಾಣುತರತ್ವಪ್ರಸಂಗಾತ್ । ಏವಂಪರಮಮಹತ್ಪರಿಮಾಣಮತೀಂದ್ರಿಯ ಸಾಮಾನ್ಯಂ ವಿಶೇಷಾಶ್ಚ ಬೋಧ್ಯಾಃ ॥**

ಸಾಮಾನ್ಯ ವಿಶೇಷಸಮವಾಯಾಭಾವಗಳಿಗೆ 'ಅಕಾರಣತ್ವಂ' ಸಾಧರ್ಮ್ಯ. 'ಕಿಂಚಿನ್ನಿರೂಪಿತಕಾರಣತ್ವಾಭಾವವತ್ವಂ' ಫಲಿತಾರ್ಥ. ಪಾರಿಮಾಂಡಲ್ಯಶಬ್ದ ಅಪ್ರಸಿದ್ಧವಾದುದರಿಂದ ಅದರ ಅರ್ಥವನ್ನು ವಿವರಿಸುತ್ತಾನೆ. 'ಅಣೋಃ ಪರಿಮಾಣಂ—ಪಾರಿಮಾಂಡಲ್ಯಮ್' ಪೃಷೋದರಾದಿಯಲ್ಲಿ ಸೇರಿರುವುದರಿಂದ ಸಾಧುವಾಗಿದೆ. ಅಣುಪರಿಮಾಣಕ್ಕೆ ಪಾರಿಮಾಂಡಲ್ಯವೆಂದು ಹೆಸರು. ಅಣುಪರಿಮಾಣವು ಯಾವುದಕ್ಕೂ ಕಾರಣವಾಗುವುದಿಲ್ಲ. ಅದಕ್ಕಿಂತ ಬೇರೆಯಾದವುಗಳಿಗೆ 'ಕಾರಣತ್ವಂ' ಸಾಧರ್ಮ್ಯ. ಪರಮಾಣುಪರಿಮಾಣ, ಅಣು ಪರಿಮಾಣ ಬೇರೆ ಬೇರೆಯೆಂದು ಕೆಲವರ ಮತ. ದ್ವ್ಯಣುಕಪರಿಮಾಣಕ್ಕೆ ಅಣುಪರಿಮಾಣವೆಂದು ಹೆಸರು. ಪರಮಾಣು ಪರಿಮಾಣವು ಹೇಗೆ ಯಾವುದಕ್ಕೂ ಕಾರಣವಾಗುವುದಿಲ್ಲವೋ ದ್ವ್ಯಣುಕಪರಿಮಾಣವಾದ ಅಣು ಪರಿಮಾಣವೂ ಕಾರಣವಾಗುವುದಿಲ್ಲ. ಇದಕ್ಕೆ ಕಾರಣ ತೋರಿಸುತ್ತಾನೆ 'ತದ್ಧಿ'—ಇತಿ. ಪರಮಾಣುಪರಿಮಾಣವು ದ್ವ್ಯಣುಕಪರಿಮಾಣಕ್ಕೆ ಕಾರಣವಾಗುವುದಾದರೆ ದ್ವ್ಯಣುಕವು ಅಣುತರವಾಗಬೇಕಾಗುತ್ತದೆ. ಹಾಗೆ ದ್ವ್ಯಣುಕಪರಿಮಾಣವು ಕಾರಣವಾಗುವುದಾದರೆ ತ್ರ್ಯಣುಕವು ಪ್ರತ್ಯಕ್ಷಗೋಚರವಾಗದೇ ಹೋಗಬೇಕಾಗುತ್ತದೆ. ಏಕೆಂದರೆ ಪರಿಮಾಣವು ಯಾವಾಗಲೂ ಸ್ವಸಮಾನಜಾತೀಯೋತ್ಕೃಷ್ಟ ಪರಿಮಾಣ ಜನಕವೇ ಆಗಿರುವುದು ಲೋಕದೃಷ್ಟವಾಗಿದೆ. 'ಯತ್ರ ಯತ್ರ ಪರಿಮಾಣತ್ವಂ (ಇದುವ್ಯಾಪ್ಯ) ತತ್ರ ಸ್ವಸ.... ಜನಕತ್ವಂ' (ಇದು ವ್ಯಾಪಕ) ಎಂದು ವ್ಯಾಪ್ತಿ.

ಯಾವ ಪರಿಮಾಣವಾದರೂ ಇನ್ನೊಂದು ಪರಿಮಾಣವನ್ನು ಹುಟ್ಟಿಸುವುದಾದರೆ ತನ್ನ ಜಾತೀಯವಾದ ತನಗಿಂತಲೂ ಉತ್ಕೃಷ್ಟಪರಿಮಾಣವನ್ನೇ ಹುಟ್ಟಿಸುತ್ತದೆ. ಕಪಾಲ ಪರಿಮಾಣದಿಂದ ಘಟದ ಪರಿಮಾಣ ಉಂಟಾಗಿದೆ. ಎರಡು ಪರಿಮಾಣಗಳಿಗೂ ಸಾದೃಶ್ಯವಿದೆ ; ಕಪಾಲಕ್ಕಿಂತ ಘಟಪರಿಮಾಣ ಉತ್ಕೃಷ್ಟವೂ ಆಗಿದೆ.

ಪ್ರಕೃತ ಪರಮಾಣುಪರಿಮಾಣವು ದ್ವ್ಯಣುಕಪರಿಮಾಣವನ್ನು ಹುಟ್ಟಿಸುವುದಾದರೆ ತನಗಿಂತ ಉತ್ಕೃಷ್ಟವನ್ನೇ ಹುಟ್ಟಿಸುತ್ತದೆಯೆನ್ನಬೇಕು. ಅಣುಗಿಂತ ಅಣುತರವೇ ಉತ್ಕೃಷ್ಟ. ಆಗ ಅಣುಪರಿಮಾಣಕ್ಕಿಂತ ಸೂಕ್ಷ್ಮತ್ರವಾದುದೇ ಉತ್ಕೃಷ್ಟವಾಗ ಬೇಕಾಗುತ್ತದೆ. ಉತ್ಕರ್ಷವಾಚಕ ತರಪ್‌ಪ್ರತ್ಯಯದಿಂದ ಈ ಅರ್ಥ ತಿಳಿಯುತ್ತದೆ. ಅಣುಗಿಂತ ಅಪಕರ್ಷವೇ ಉತ್ಕೃಷ್ಟವೆಂದಾಗುತ್ತದೆ. ಹೀಗೆ ದ್ವ್ಯಣುಕಪರಿಮಾಣ ದಿಂದ ತ್ರ್ಯಣುಕಪರಿಮಾಣವಾಗುವುದಾದರೆ ಹಿಂದಿಗಿಂತಲೂ ಉತ್ಕೃಷ್ಟವಾಗಬೇಕು. ಅಂದರೆ ಅಣುತರತರ. ಅತ್ಯಂತಸೂಕ್ಷ್ಮ. ( ಸಮಾನ ಜಾತೀಯವಾದುದರಿಂದ. ) ಆದರೆ ತ್ರ್ಯಣುಕಪರಿಮಾಣವು ಅಣುತರತರವಾಗಿಲ್ಲ. ಅದು ಪ್ರತ್ಯಕ್ಷಗೋಚರವಾಗಿದೆ. ಆದುದರಿಂದ ತತ್ಸಜಾತೀಯವಾಗುವುದಿಲ್ಲ. ವಿಜಾತೀಯವಾದ ಮಹತ್ತ್ವದಿಂದ ಕೂಡಿರುತ್ತದೆ. ಏಕೆಂದರೆ ಮೂರು ದ್ವ್ಯಣುಕಗಳಿಂದ ೧ ತ್ರ್ಯಣುಕವಾಗುತ್ತದೆಂದು ನ್ಯಾಯಸಿದ್ಧಾಂತ. ಅನೇಕಾವಯವಿಜನ್ಯವಾದುದರಿಂದ ಅಪಕೃಷ್ಟಮಹತ್ತ್ವವಿರುತ್ತದೆ. ಅಪಕೃಷ್ಟಮಹತ್ತ್ವಕ್ಕೆ ಅನೇಕಾವಯವಿಜನ್ಯದ್ರವ್ಯಕಾರಣವೆಂದು ನಿಯಮ. ಎರಡು ಅಣುಗಳಿಂದ ೧ ದ್ವ್ಯಣುಕವು ಹುಟ್ಟುತ್ತದೆ. ಅಲ್ಲಿ ಅನೇಕಾವಯವಿಜನ್ಯತ್ವವಿಲ್ಲದಿರು ವುದರಿಂದ ಅಪಕೃಷ್ಟಮಹತ್ತ್ವವೂ ಇಲ್ಲ. ಅಣುಪರಿಮಾಣವೇ ಇರುತ್ತದೆ. ಅದುದ ರಿಂದ ಪರಮಾಣುಪರಿಮಾಣ, ಅಣುಪರಿಮಾಣ ಇವೆರಡೂ ಯಾವುದಕ್ಕೂ ಕಾರಣ ವಾಗುವುದಿಲ್ಲ. ಇವನ್ನು ಬಿಟ್ಟು ಉಳಿವವುಗಳು ಯಾವುವಕ್ಕಾದರೂ ಕಾರಣವಾಗಿಯೇ ಆಗುತ್ತವೆ. 'ಏವಂ—' ಇತಿ. ಅಣುಪರಿಮಾಣ ಹೇಗೆ ಕಾರಣವಾಗುವುದಿಲ್ಲವೋ ಅದರಂತೆ ಆಕಾಶಕಾಲಾದಿಗಳಲ್ಲಿರುವ ಮಹತ್ಪರಿಮಾಣವೂ, ಪರಮಾಣ್ವಾದಿಗಳಲ್ಲಿರುವ ಪರಮಾಣುತ್ವಾದಿರೂಪ ಸಾಮಾನ್ಯವೂ ( ಇದು ಅತೀಂದ್ರಿಯ—ಇಂದ್ರಿಯಗಳಿಗೆ ಗೋಚರವಾಗುವುದಿಲ್ಲ. ) ಸ್ವತೋ ವ್ಯಾವೃತ್ತರೂಪಗಳಾದ ವಿಶೇಷಪದಾರ್ಥಗಳೂ ಯಾವುದಕ್ಕೂ ಕಾರಣಗಳಾಗುವುದಿಲ್ಲ. 'ಕಾರಣತ್ವಂಚಾನ್ಯತ್ರ ಪಾರಿಮಾಂ ಡಲ್ಯಾದಿಭ್ಯಃ' ಎಂಬ ಸೂತ್ರದಲ್ಲಿ ಆದಿಪದಹೇಳಿರುವುದರಿಂದ ಇದು ಸಿದ್ಧವಾಗಿದೆ.

**ಇದಮಪಿ ಯೋಗಿಪ್ರತ್ಯಕ್ಷೇ ವಿಷಯಸ್ಯ ನ ಕಾರಣತ್ವಮ್ । ಜ್ಞಾಯಮಾನ ಸಾಮಾನ್ಯಂ ನ ಪ್ರತ್ಯಾಸತ್ತಿಃ । ಜ್ಞಾಯಮಾನಂ ಲಿಂಗಂ ನಾನುಮಿತಿಕರಣಮಿತ್ಯಭಿಪ್ರಾಯೇಣೋಕ್ತಮ್ । ಆತ್ಮಮಾನಸಪ್ರತ್ಯಕ್ಷೇ ಆತ್ಮಮಹತ್ತ್ವಸ್ಯ ಕಾರಣತ್ವಾತ್**

**ಪರಿಮಾಣಂ ಕಾಲಾದೇರ್ಬೋರ್ಧ್ಯಮ್ । ತಸ್ಯಾಪಿ ನ ಕಾರಣತ್ವ ಮಿತ್ಯಾಚಾರ್ಯಾಣಾಮಾಶಯ ಇತ್ಯನ್ಯೇ, ತನ್ನ ಜ್ಞಾನಾತಿರಿಕ್ತಂ ಪ್ರತ್ಯೇವಾ ಕಾರಣತಾಯಾ ಆಚಾರ್ಯೈರುಕ್ತತ್ವಾತ್ ॥ ೧೫ ॥**

ಪರಮಾಣು ಪರಿಮಾಣವು ಯಾವುದಕ್ಕೂ ಕಾರಣವಾಗುವುದಿಲ್ಲವೆಂದು ಹೇಳಿರುವುದು ಸರಿಯಲ್ಲ. ಯೋಗಿ ಪ್ರತ್ಯಕ್ಷದಲ್ಲಿ ವಿಷಯರೂಪವಾಗಿ ಅದು ಕಾರಣವಾಗುತ್ತದೆ. ವಿಷಯ ವಿಲ್ಲದೆ ಪ್ರತ್ಯಕ್ಷವಾಗಲಾರದು. ಯೋಗಿಗಳಿಗೆ ಆ ಪರಿಮಾಣವೂ ಪ್ರತ್ಯಕ್ಷವಾಗುವುದರಿಂದ ವಿಷಯರೂಪದಿಂದ ಅದಕ್ಕೆ ಕಾರಣತ್ವ ಸಂಭವಿಸುತ್ತದೆ. ಹೀಗಿರುವಾಗ ಅದನ್ನು ಬಿಟ್ಟು ಉಳಿದವುಗಳಿಗೆ ಕಾರಣತ್ವ ಹೇಳಿರುವುದು ಹೇಗೆ ? ಎಂಬ ಶಂಕೆಗೆ ಸಮಾಧಾನ ತೋರಿಸು ತ್ತಾನೆ. 'ಇದಮಪಿ' ಇತಿ. ಪಾರಿಮಾಂಡಲ್ಯಭಿನ್ನವಾದವುಗಳಿಗೆ ಕಾರಣತ್ವ ಹೇಳಿರುವುದೂ ಪಾರಿಮಾಂಡಲ್ಯ ಮಹತ್ಪರಿಮಾಣ, ಅಣುಪರಿಮಾಣ, ವಿಶೇಷ ಈ ನಾಲ್ಕಕ್ಕೆ ಅಕಾ ರಣತ್ವ ಹೇಳಿರುವುದೂ ಯೋಗಿಗಳ ಪ್ರತ್ಯಕ್ಷದಲ್ಲಿ ವಿಷಯಕ್ಕೆ ಕಾರಣತ್ವವಿಲ್ಲವೆಂಬ ಅಭಿ ಪ್ರಾಯದಿಂದ. ನವೀನರು ಯೋಗಿಪ್ರತ್ಯಕ್ಷದಲ್ಲಿ ವಿಷಯವು ಕಾರಣವೆಂದು ಅಂಗೀಕರಿ ಸುವುದಿಲ್ಲ. ಸಮಾಧಿಭಾವನಾಪ್ರಕರ್ಷದಿಂದ ಯೋಗಿಗಳಿಗೆ ಕಳೆದುಹೋದ, ಮುಂದೆ ಆಗುವ, ದೂರದ, ಹತ್ತಿರದ ಎಲ್ಲಾ ವಸ್ತುಗಳ ಸಾಕ್ಷಾತ್ಕಾರವಾಗುತ್ತದೆ. ಅಲ್ಲಿ ಯೋಗಜ ಧರ್ಮಪ್ರತ್ಯಾಸತ್ತಿಯೇ ಕಾರಣವಾದುದರಿಂದ ವಿಷಯವಿರಬೇಕೆಂಬ ನಿಯಮವಿಲ್ಲ. ಅತೀತಾನಾಗತ ವಸ್ತುಗಳ ಪ್ರತ್ಯಕ್ಷವಾಗುತ್ತದೆಂದ ಮೇಲೆ ಅಲ್ಲಿ ವಿಷಯವು ಇರುವುದೇ ಇಲ್ಲ. ಹೀಗೆ ವರ್ತಮಾನ ಪ್ರತ್ಯಕ್ಷದಲ್ಲಿಯೂ ವಿಷಯಸತ್ತೆಯು ಕಾರಣವಲ್ಲವೆಂದು ನವೀನರ ಮತ. 'ಜ್ಞಾಯಮಾನಂ—' ಇತಿ. ಯೋಗಿಪ್ರತ್ಯಕ್ಷದಲ್ಲಿ ವಿಷಯರೂಪ ದಿಂದ ಕಾರಣತ್ವ ಬೇಡ. ಆದರೆ ಸಾಮಾನ್ಯಲಕ್ಷಣಾಜನ್ಯ ಜ್ಞಾನದಲ್ಲಿಯೂ, ಅನುಮಿತಿ ಯಲ್ಲಿಯೂ ಅಣುಪರಿಮಾಣವು ಕಾರಣವಾಗಲಿ ಎಂದು ಪುನಃ ಆಶಂಕಿಸುವವನಿಗೆ ಇದು ಉತ್ತರ. ವರ್ತಮಾನಕಾಲಿಕವಾದ ಯಾವ ಜ್ಞಾನವಿದೆಯೋ ಆ ಜ್ಞಾನದಲ್ಲಿ ವಿಷಯೀ ಭೂತವಾದ ಸಾಮಾನ್ಯಕ್ಕೆ (ಜಾತಿಗೆ) ಜ್ಞಾಯಮಾನಸಾಮಾನ್ಯವೆಂದು ಹೆಸರು. ಹೀಗೆಯೇ ವರ್ತಮಾನಕಾಲದಲ್ಲಿರುವ ಜ್ಞಾನಕ್ಕೆ ವಿಷಯವಾದ ಲಿಂಗಕ್ಕೆ ಜ್ಞಾಯಮಾನ ಲಿಂಗವೆಂದು ಹೆಸರು.

ಜ್ಞಾಯಮಾನಸಾಮಾನ್ಯವು ಪ್ರತ್ಯಾಸತ್ತಿಯಾಗುವುದಿಲ್ಲ. ಹೀಗೆಯೇ ಜ್ಞಾಯಮಾನಲಿಂಗವು ಅನುಮಿತಿಕರಣವಾಗುವುದಿಲ್ಲ. ಪ್ರತ್ಯಾಸತ್ತಿಯೆಂದರೆ ಸನ್ನಿ ಕರ್ಷ. ಪರಮಾಣುಭೇದಸಾಧನೆಗೆ ವಿಶೇಷಪದಾರ್ಥವನ್ನು ಅಂಗೀಕರಿಸಿದೆಯಷ್ಟೆ. ಅಲ್ಲಿ ವಿಶೇಷಪದಾರ್ಥ ಭೇದಕವಲ್ಲ. ವಿಶೇಷಜ್ಞಾನವೇ ಭೇದಕ. ಹಾಗೆ ಲಿಂಗಜ್ಞಾನ ಮಾತ್ರ ಅನುಮಿತಿಗೆ ಕಾರಣವಾಗುತ್ತದೆ. ಪ್ರಾಚೀನರು ಪರಮಾಣುತ್ವಸಾಮಾನ್ಯ ಲಕ್ಷಣಪ್ರತ್ಯಾಸತ್ತಿಯಿಂದ ( ಪರಮಾಣುತ್ವ ಸಾಮಾನ್ಯದಿಂದ ) ಸಕಲಪರಮಾಣುಜ್ಞಾನ ವುಂಟಾಗುತ್ತದೆಂದು ಹೇಳುತ್ತಾರೆ. ವಿಷಯವಿಧಯಾ ಕಾರಣತ್ವವಿಲ್ಲವಾದರೂ

ಪ್ರತ್ಯಾಸತ್ತಿರೀತಿಯಿಂದ ಕಾರಣತ್ವವಾಗುತ್ತದೆಯೆಂದರೆ ಅಲ್ಲಿಯೂ ಸಾಮಾನ್ಯಜ್ಞಾನವೇ ಪ್ರತ್ಯಾಸತ್ತಿಯಾಗುತ್ತದೆಯೋ ವಿನಾ ಸಾಮಾನ್ಯವಲ್ಲವೆಂದು ನವೀನಮತ. ನವೀನ ಮತದಲ್ಲಿ ಮಾತ್ರ ಸಾಮಾನ್ಯಜ್ಞಾನವೇ ಪ್ರತ್ಯಾಸತ್ತಿ. ಲಿಂಗಜ್ಞಾನವೇ ಅನುಮಿತಿ ಕರಣ. ಆದುದರಿಂದ ಅಕಾರಣತ್ವ ಹೇಳಿರುವುದು ಸಮಂಜಸವೇ ಆಗಿದೆ. 'ಆತ್ಮಮಾನಸ—' ಇತಿ. 'ಜ್ಞಾನವಾನಹಮ್' 'ಸುಖೀ ಅಹಮ್' ಎಂಬಿವೇ ಮುಂತಾದ ಆತ್ಮಮಾನಸಪ್ರತ್ಯಕ್ಷದಲ್ಲಿ ಆತ್ಮನಲ್ಲಿರುವ ಮಹತ್ಪರಿಮಾಣಕ್ಕೆ ಕಾರಣತ್ವವಿದೆ. ದ್ರವ್ಯಸಂಬಂಧವಾದ ಲೌಕಿಕಪ್ರತ್ಯಕ್ಷವನ್ನು ಕುರಿತು ಸಮವಾಯದಿಂದ ಮಹತ್ತ್ವವು ಕಾರಣವೆಂದು ನ್ಯಾಯಸಿದ್ಧಾಂತ. ಆದುದರಿಂದ ಆತ್ಮನಲ್ಲಿ ಆಗುವ ಈ ಪ್ರತ್ಯಕ್ಷಕ್ಕೆ ಆತ್ಮನ ಮಹತ್ಪರಿಮಾಣವು ಕಾರಣವಾಗುವುದರಿಂದ ಮಹತ್ಪರಿಮಾಣಕ್ಕೆ ಕಾರಣತ್ವ ವಿಲ್ಲವೆಂದು ಹೇಳಿರುವುದು ಹೇಗೆ ಎಂಬ ಶಂಕೆ ಬರುತ್ತದೆ. ಆಗ ಮಹತ್ಪರಿಮಾಣ ವೆಂದರೆ ಆತ್ಮನಮಹತ್ಪರಿಮಾಣವನ್ನು ಬಿಟ್ಟು ಉಳಿದ ಆಕಾಶಾದಿಗಳ ಮಹತ್ಪರಿಮಾಣ ವನ್ನು ತೆಗೆದುಕೊಳ್ಳಬೇಕು. ಅವುಗಳು ಯಾವುದಕ್ಕೂ ಕಾರಣವಲ್ಲ. 'ತಸ್ಯಾಪಿ—' ಇತಿ. ಆತ್ಮನಲ್ಲಿರುವ ಮಹತ್ಪರಿಮಾಣಕ್ಕೂ ಕಾರಣತ್ವವಿಲ್ಲವೆಂದು ಕೆಲವರ ಮತ. ಇದು ಪ್ರಶಸ್ತಪಾದವ್ಯಾಖ್ಯಾಕಾರರಾದ ಉದಯನಾಚಾರ್ಯರಿಗೆ ಸಂಮತವೆಂದೂ ಹೇಳು ತ್ತಾರೆ. ಇದು ಸರಿಯಲ್ಲವೆಂದು 'ತನ್ನ—' ಎಂದು ಖಂಡಿಸುತ್ತಾನೆ. ಜ್ಞಾನವನ್ನು ಕುರಿತು (ಪ್ರತ್ಯಕ್ಷಾದಿ) ಆತ್ಮಮಹತ್ಪರಿಮಾಣವು ಕಾರಣವಾಗುತ್ತದೆ. ಜ್ಞಾನಭಿನ್ನ ವನ್ನು ಕುರಿತು ಕಾರಣವಲ್ಲವೆಂದು ಅವರ ಅಭಿಪ್ರಾಯ. 'ಪಾರಿಮಾಂಡಲ್ಯಾದಿಭ್ಯಃ' ಎಂಬಲ್ಲಿ ಆದಿಪದದಿಂದ ಆತ್ಮನ ಮಹತ್ಪರಿಮಾಣವನ್ನು ತೆಗೆದುಕೊಂಡರೂ ಜ್ಞಾನಾತಿ ರಿಕ್ತವನ್ನು ಕುರಿತು ಅದು ಕಾರಣವಲ್ಲವೆಂಬ ಅಭಿಪ್ರಾಯದಿಂದ ಹೇಳಿದೆ. ಆದುದರಿಂದ ಅಕಾರಣತ್ವ ಹೇಳಿರುವುದು ಸಮಂಜಸವೇ. ॥ ೧೫ ॥

**ಅನ್ಯಥಾಸಿದ್ಧಿಶೂನ್ಯಸ್ಯ ನಿಯತಾ ಪೂರ್ವವರ್ತಿತಾ ॥**
**ಕಾರಣತ್ವಂ ಭವೇತ್ತಸ್ಯ ತ್ರೈವಿಧ್ಯಂ ಪರಿಕೀರ್ತಿತಮ್ ॥ ೧೬ ॥**
**ಸಮವಾಯಿಕಾರಣತ್ವಂ ಜ್ಞೇಯಮಥಾಪ್ಯಸಮವಾಯಿ ಹೇತುತ್ವಮ್ ॥**
**ಏವಂ ನ್ಯಾಯನಯಜ್ಞೈಸ್ತೃತೀಯಮುಕ್ತಂ ನಿಮಿತ್ತಹೇತುತ್ವಮ್ ॥೧೭॥**

**ನನುಕಾರಣತ್ವಂ ಕಿಮ್ ? ಅತ ಆಹ—ಅನ್ಯಥಾಸಿದ್ಧೀತಿ । ತಸ್ಯಕಾರಣತ್ವಸ್ಯ ॥ ೧೬, ೧೭ ॥**

'ಕಾರಣತ್ವಂ' ಎಂದು ಹಿಂದೆ ಉಪಸ್ಥಿತವಾದುದರಿಂದ ಅದರ ಸ್ವರೂಪವೇನು ? ಎಂದು ಜಿಜ್ಞಾಸೆ ಬರುವುದರಿಂದ ಅದನ್ನು ಹೋಗಲಾಡಿಸಲು ಕಾರಣಸ್ವರೂಪವನ್ನು ತೋರಿಸುತ್ತಾನೆ. 'ಅನ್ಯಥಾ—' ಇತಿ. ಅನ್ಯಥಾಸಿದ್ಧಿಶೂನ್ಯತ್ವೇ ಸತಿ ನಿಯತ ಪೂರ್ವವೃತ್ತಿತ್ವಂ' ಕಾರಣಲಕ್ಷಣ. ದಂಡತ್ವಾದಿಗಳಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ

ಪ್ರಥಮದಳವೂ ( ಸತ್ಯಂತವೂ ) ರಾಸಭ, ಘಟಾದಿಗಳಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ 'ನಿಯತಪೂರ್ವವೃತ್ತಿತ್ವ' ಎಂಬ ವಿಶೇಷ್ಯದಳವೂ ಹೇಳಿದೆ. ಶೂನ್ಯಸ್ಯ ಎಂಬಲ್ಲಿ ಷಷ್ಠಿಗೆ 'ನಿಷ್ಠತ್ವಂ' ಅರ್ಥ. ಆಗ 'ಅನ್ಯಥಾಸಿದ್ಧಿಶೂನ್ಯನಿಷ್ಠಾಯಾ ನಿಯತಾ—ಅವಶ್ಯಂ ಭಾವನೀ' ಪೂರ್ವವೃತ್ತಿತಾ—ಕಾರ್ಯೋತ್ಪತ್ತ್ಯವ್ಯವಹಿತೇ ಪೂರ್ವಸ್ಮಿನ್‌ಕ್ಷಣೇ ಕಾರ್ಯಾಧಿಕರಣವೃತ್ತಿತಾ, ತದೇವ ಕಾರಣತ್ವಂ' ಎಂದು ಫಲಿತವಾಗುತ್ತದೆ. ಅನ್ಯಥಾಸಿದ್ಧಿಗಳನ್ನು ಮುಂದೆ ಹೇಳುತ್ತಾನೆ. ಕಾರಣವೆಂದು ನಾವು ಯಾವುದನ್ನು ಹೇಳುತ್ತೇವೋ ಅದು ಅನ್ಯಥಾಸಿದ್ಧವಾಗಿರಬಾರದು. ಅವಶ್ಯವಾಗಿ ಕಾರ್ಯಹುಟ್ಟುವ ಪೂರ್ವಕ್ಷಣದಲ್ಲಿ ಕಾರ್ಯಾಧಿಕರಣದಲ್ಲಿ ಇರಬೇಕು. ಘಟರೂಪ ಕಾರ್ಯದ ಪೂರ್ವ ಕ್ಷಣದಲ್ಲಿ ಕೆಲವು ಕಡೆ ಕತ್ತೆ ಇರಬಹುದು. ಆದರೆ ಘಟಕ್ಕೆ ಕತ್ತೆ ಕಾರಣವಲ್ಲ. ಅದಕ್ಕೋಸ್ಕರ ನಿಯತವೆಂದು ಹೇಳಿದೆ. ಕತ್ತೆಯು ಅವಶ್ಯವಾಗಿ ಪೂರ್ವಭಾವಿಯಲ್ಲ. ಅದು ಇಲ್ಲದೆಯೂ ಘಟವಾಗುತ್ತದೆ. ದಂಡವು ಹೇಗೆ ನಿಯತಪೂರ್ವವರ್ತಿಯೋ ಹಾಗೆ ದಂಡತ್ವವೂ ಘಟಾದಿಕಾರ್ಯನಿಯತಪೂರ್ವವರ್ತಿಯಾಗಿರುತ್ತದೆ. ಅದ ಕ್ಕೋಸ್ಕರ ಅನ್ಯಥಾಸಿದ್ಧಿಶೂನ್ಯವೆಂದಿದೆ. ದಂಡತ್ವವು ಅನ್ಯಥಾಸಿದ್ಧವೆಂದು ಮುಂದೆ ಹೇಳುತ್ತಾನೆ. ಶೂನ್ಯತ್ವ ಅದರಲ್ಲಿ ಬರುವುದಿಲ್ಲ. ಇದು ಪರಿಷ್ಕೃತವಾದ ಲಕ್ಷಣ. ( ಅನ್ಯಥಾಸಿದ್ಧ್ಯನಿರೂಪಕ ) ಅನ್ಯಥಾಸಿದ್ಧಿನಿರೂಪಿತಾನವಚ್ಛೇದಕತ್ವೇಸತಿ, ಕಾರ್ಯಾಧಿ ಕರಣ ವೃತ್ತಿಃ ಪೂರ್ವಕಾಲಾವಚ್ಛಿನ್ನಃ ಯೋಽಭಾವಃ ತತ್ಪ್ರತಿಯೋಗಿತಾನವಚ್ಛೇದ ಕತ್ವಮ್" ಕಾರಣತ್ವಮ್. ತತ್ಘಟತ್ವಾವಚ್ಛಿನ್ನನಿರೂಪಿತ ಕಾರಣತ್ವವು ರಾಸಭದಲ್ಲಿ ಇದ್ದರೂ ಘಟತ್ವಾವಚ್ಛಿನ್ನನಿರೂಪಿತ ಕಾರಣತ್ವವು ಬರುವುದಿಲ್ಲ. ಘಟಸಾಮಾನ್ಯವನ್ನು ಕುರಿತು ರಾಸಭಕಾರಣವಾಗುವುದಿಲ್ಲವೆಂದರ್ಥ. ಘಟವನ್ನು ಕುರಿತು ದಂಡವು ಕಾರಣ. ದಂಡದಲ್ಲಿರುವ ಕಾರಣತ್ವವು ಪೂರ್ವೋಕ್ತಲಕ್ಷಣಾಕ್ರಾಂತವಾಗಿದೆ. ಈ ಕಾರಣವು ಮೂರು ವಿಧ. ತಿಸ್ರಃ ವಿಧಾಃ ಅಸ್ಯ. ತ್ರಿವಿಧಂ. ತಸ್ಯಭಾವಃ ತ್ರೈವಿಧ್ಯಮ್. ಸಮವಾಯಿಕಾರಣ. ಅಸಮವಾಯಿಕಾರಣ, ನಿಮಿತ್ತಕಾರಣವೆಂದು ಅವುಗಳ ಹೆಸರು.

**ಯತ್ಸಮವೇತಂ ಕಾರ್ಯಂ ಭವತಿ ಜ್ಞೇಯಂ ತು ಸಮವಾಯಿ ಜನ ಕಂತತ್ ।ತತ್ರಾಸನ್ನಂ ಜನಕಂ ದ್ವಿತೀಯಮಾಭ್ಯಾಂ ಪರಂ ತೃತೀಯಂ ಸ್ಯಾತ್ ॥೧೮॥**

ತತ್ರೇತಿ । **ಸಮವಾಯಿಕಾರಣೇ ಆಸನ್ನಂ ಪ್ರತ್ಯಾಸನ್ನಂ ಕಾರಣಂ ದ್ವಿತೀಯಮಸಮವಾಯಿಕಾರಣಮಿತ್ಯರ್ಥಃ ॥**

ಸಮವಾಯಿಕಾರಣಲಕ್ಷಣ ಹೇಳುತ್ತಾನೆ. 'ಯತ್ಸಮವೇತಂ—' ಇತಿ. ಯಸ್ಮಿನ್ ಸಮವೇತಂ—ಸಮವಾಯಸಂಬಂಧೇನ ವರ್ತಮಾನಂ ಸತ್ ಕಾರ್ಯಂ ಭವತಿ ತತ್‌ಸಮವಾಯಿಜನಕಂ ಜ್ಞೇಯಮ್. ಭೂಧಾತುವಿಗೆ ಉತ್ಪತ್ತಿ ಅರ್ಥ. ಆಖ್ಯಾತಕ್ಕೆ ಆಶ್ರಯತ್ವಂ ಅರ್ಥ. ಎಲ್ಲಿ ಸಮವಾಯಸಂಬಂಧದಿಂದ ಇದ್ದು ಕಾರ್ಯ

ಹುಟ್ಟುತ್ತದೆಯೋ ಅದು ಸಮವಾಯಿಕಾರಣ. ಸಮವಾಯಸಂಬಂಧದಿಂದ ಕಾರ್ಯ ವಿಶಿಷ್ಟವಾದದ್ದು ಸಮವಾಯಿಕಾರಣವೆಂದರ್ಥ. ಪಟಕ್ಕೆ ತಂತುಗಳು ಸಮವಾಯಿ ಕಾರಣ. ತಂತುಗಳಲ್ಲಿ ಅದರ ಕಾರ್ಯವಾದ ಪಟವು ಸಮವಾಯದಿಂದ ಇರುತ್ತದೆ. ಉದ್ದೇಶ್ಯವಿಧೇಯಭಾವವಿದ್ದಲ್ಲಿ ಉದ್ದೇಶ್ಯತಾವಚ್ಛೇದಕವಿಧೇಯಗಳಿಗೆ ಅವಚ್ಛೇದ್ಯ ಅವಚ್ಛೇದಕಭಾವ ನಿಯತವಾಗಿರುತ್ತದೆ. ಪ್ರಕೃತ ಯದನುಯೋಗಿಕಸಮವಾಯವತ್ವ ವನ್ನುದ್ದೇಶಿಸಿ ಆಶ್ರಯತಾಸಂಬಂಧದಿಂದ ಕಾರ್ಯತ್ವವನ್ನು ವಿಧಾನಮಾಡುತ್ತಾನೆ. ಆಗ ಸಮವಾಯಸಂಬಂಧಾವಚ್ಛಿನ್ನ ಕಾರ್ಯತ್ವಾವಚ್ಛಿನ್ನಕಾರ್ಯತಾನಿರೂಪಿತ ತಾದಾತ್ಮ್ಯಸಂಬಂಧಾವಚ್ಛಿನ್ನಕಾರಣತ್ವಂ ಸಮವಾಯಿಕಾರಣತ್ವಂ ಎಂದು ಫಲಿತವಾಗು ತ್ತದೆ. ಕಪಾಲದಲ್ಲಿ ಘಟವು ಸಮವಾಯದಿಂದ ಹುಟ್ಟುವುದರಿಂದ ಘಟರೂಪ ಕಾರ್ಯಕ್ಕೆ ಕಪಾಲವು ಸಮವಾಯಿಕಾರಣ.

ಅಸಮವಾಯಿಕಾರಣಲಕ್ಷಣ ತೋರಿಸುತ್ತಾನೆ. 'ತತ್ರಾಸನ್ನಂ—' ಇತಿ. ತತ್ರ — ಸಮವಾಯಿಕಾರಣದಲ್ಲಿ ಆಸನ್ನಂ— ಸನ್ನಿಹಿತವಾದ ಜನಕಂ— ಕಾರಣವು ದ್ವಿತೀಯಂ— ಎರಡನೆಯ ಅಸಮವಾಯಿಕಾರಣವೆಂದರ್ಥ. ಇದೂ ಕೂಡಾ ಎರಡು ರೀತಿಯಾಗಿರುತ್ತದೆ. "ಕಾರ್ಯೇಣ ಸಹ ಏಕಸ್ಮಿನ್ನರ್ಥೇ ಸಮವೇತಂ (ಸಮವಾಯ ಸಂಬಂಧೇನ ವರ್ತಮಾನಂ ಸತ್) ಯತ್ಕಾರಣಂ" ಇದೊಂದು ಅಸಮವಾಯಿಕಾರಣ. ಪಟಕ್ಕೆ ತಂತುಸಂಯೋಗವು ಈ ಕಾರಣವಾಗುತ್ತದೆ. ಕಾರ್ಯವೆಂದರೆ ಪಟ. ಅದರೊ ಡನೆ ಒಂದು ಅರ್ಥದಲ್ಲಿ ಅಂದರೆ ತಂತುವಿನಲ್ಲಿ ಸಮವಾಯಸಂಬಂಧದಿಂದ ಇರುವುದು ತಂತುಸಂಯೋಗವಾಗುವುದರಿಂದ ಪಟವನ್ನು ಕುರಿತು ತಂತುಸಂಯೋಗವು ಅಸಮ ವಾಯಿಕಾರಣವಾಗುತ್ತದೆ. ಜನ್ಯದ್ರವ್ಯವನ್ನು ಕುರಿತು ಅವಯವಸಂಯೋಗವು ಅಸಮ ವಾಯಿಕಾರಣವೆಂದು ತಾರ್ಕಿಕ ನಿಯಮ. 'ಕಾರಣೇನ ಸಹ ಏಕಸ್ಮಿನ್ನರ್ಥೇ ಸಮವೇತಂ ಸತ್ ಯತ್ಕಾರಣಂ ತದಪರಮಸಮವಾಯಿಕಾರಣಮ್'. ಪಟರೂಪವನ್ನು ಕುರಿತು ತಂತು ರೂಪವು ಈ ಎರಡನೆಯ ಅಸಮವಾಯಿಕಾರಣವಾಗುತ್ತದೆ. ಕಾರಣವೆಂದರೆ ಪಟರೂಪ ವನ್ನು ಕುರಿತು ಸಮವಾಯಿಕಾರಣವಾದ ಪಟವನ್ನು ತೆಗೆದುಕೊಳ್ಳಬೇಕು. ಕಾರಣ ವಾದ ಪಟದೊಡನೆ ಒಂದು ಅರ್ಥದಲ್ಲಿ ಅಂದರೆ ತಂತು ಎಂಬ ವಸ್ತುವಿನಲ್ಲಿ ಸಮವಾಯ ಸಂಬಂಧದಿಂದ ತಂತುರೂಪವಿರುವುದರಿಂದ ಅದು ಪಟರೂಪಕ್ಕೆ ಅಸಮವಾಯಿಕಾರಣ ವಾಗುತ್ತದೆ. ಪಟೋತ್ಪತ್ತಿಗಿಂತಲೂ ಮೊದಲೇ ಪಟಾಧಿಕರಣವಾದ ತಂತುವಿನಲ್ಲಿ ರೂಪವಿರುವುದರಿಂದ ಅದು ಕಾರಣವಾಗಲು ತೊಂದರೆ ಇಲ್ಲ. ಸಮವಾಯಿಕಾರಣ ವ್ಯಾವೃತ್ತಿಗೋಸ್ಕರ ಸಮವಾಯಿಕಾರಣದಲ್ಲಿ ಇದ್ದು—ಎಂದು ಹೇಳಿದೆ. ತಂತುತ್ವಾದಿ ಗಳಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ 'ಜನಕಂ' ಎಂದು ಹೇಳಿದೆ. ತಂತುತ್ವಾದಿಗಳು ಅನ್ಯಥಾಸಿದ್ಧಗಳೆಂದು ಮುಂದೆ ಹೇಳುತ್ತಾನೆ. ಸಮವಾಯಿ, ಅಸಮವಾಯಿಕಾರಣಭಿನ್ನ ವಾದ ಕಾರಣವೇ ನಿಮಿತ್ತಕಾರಣ.

ಅತ್ರ ಯದ್ಯಪಿ ತುರೀತಂತುಸಂಯೋಗಾನಾಂ ಪಟಾಸಮವಾಯಿಕಾರಣತ್ವಂ ಸ್ಯಾತ್ । ಏವಂ ವೇಗಾದೀನಾಮಭಿಘಾತಾದ್ಯಸಮವಾಯಿಕಾರಣತ್ವಂ ಸ್ಯಾತ್ । ಏವಂ ಜ್ಞಾನಾದಿಕಮಪೀಚ್ಛಾದ್ಯಸಮವಾಯಿಕಾರಣಂ ಸ್ಯಾತ್, ತಥಾಪಿ ಪಟಾಸಮವಾಯಿಕಾರಣಲಕ್ಷಣೇ ತುರೀತಂತುಸಂಯೋಗಭಿನ್ನತ್ವಂ ದೇಯಮ್ । ತುರೀತಂತುಸಂಯೋಗಸ್ತು ತುರೀಪಟಸಂಯೋಗಂ ಪ್ರತ್ಯಸಮವಾಯಿಕಾರಣಂ ಭವತ್ಯೇವ । ಏವಂ ವೇಗಾದಿಕಮಪಿ ವೇಗಸ್ಪಂದಾದ್ಯಸಮವಾಯಿಕಾರಣಂ ಭವತ್ಯೇವೇತಿ ತತ್ತತ್ಕಾರ್ಯಾಸಮವಾಯಿಕಾರಣಲಕ್ಷಣೇ ತತ್ತದ್ಭಿನ್ನತ್ವಂ ದೇಯಮ್ । ಆತ್ಮವಿಶೇಷಗುಣಾನಾಂ ತು ಕುತ್ರಾಪ್ಯಸಮವಾಯಿಕಾರಣತ್ವಂ ನಾಸ್ತಿ, ತೇನ ತದ್ಭಿನ್ನತ್ವಂ ಸಾಮಾನ್ಯಲಕ್ಷಣೇ ದೇಯಮೇವ ॥

ಅಸಮವಾಯಿಕಾರಣ ವಿಷಯದಲ್ಲಿ ಆಕ್ಷೇಪಿಸುತ್ತಾನೆ. 'ಅತ್ರ—' ಇತಿ. ಸಂಯೋಗವು ಎಲ್ಲಿ ಇದೆಯೋ ಅದು ಸಂಯೋಗಕ್ಕೆ ಅನುಯೋಗಿ. ಯಾವುದರ ಸಂಯೋಗ ಹೇಳುತ್ತೇವೋ ಅದು ಸಂಯೋಗಕ್ಕೆ ಪ್ರತಿಯೋಗಿ. ಪ್ರಕೃತ ತುರೀತಂತುಸಂಯೋಗವು ಅನುಯೋಗಿತಾಸಂಬಂಧದಿಂದ ತಂತುಸಮವೇತವಾಗಿ ಪಟರೂಪಕಾರ್ಯಕ್ಕೆ ಜನಕವಾಗಿಯೂ ಇರುವುದರಿಂದ ಅದು ತಂತುಸಂಯೊ.ಗದಂತೆ ಪಟಕ್ಕೆ ಅಸಮವಾಯಿಕಾರಣವಾಗಬೇಕಾಗುತ್ತದೆ. ಹೀಗೆಯೇ ವೇಗವು ಅಭಿಘಾತಕ್ಕೆ ಅಸಮವಾಯಿಕಾರಣವಾಗಬೇಕು. ದ್ವಿತೀಯಪತನಕ್ಕೆ ಅಸಮವಾಯಿಕಾರಣವೇಗ. ಇದು ಪೃಥಿವ್ಯಾದಿನಾಲ್ಕರಲ್ಲಿಯೂ ಮನಸ್ಸಿನಲ್ಲಿಯೂ ಇರುತ್ತದೆ. ಶಬ್ದಕ್ಕೆ ನಿಮಿತ್ತಕಾರಣವಾದ ಸಂಯೋಗವೇ ಅಭಿಘಾತ. ಯಾವುದರಿಂದ ಉಂಟಾದ ಕರ್ಮವು ಸಂಯೋಗವಿಶಿಷ್ಟಪದಾರ್ಥಗಳ ವಿಭಾಗಹೇತುವಾಗುತ್ತದೆಯೋ ಆ ಸಂಯೋಗವೇ ಅಭಿಘಾತ. ಜೋರಾಗಿ ಎರಡು ಕೈಗಳನ್ನು ಕೂಡಿಸಿದಾಗ ಶಬ್ದವಾಗುತ್ತದೆ. ಅಭಿಘಾತಾದಿ ಎಂಬಲ್ಲಿ ಆದಿಪದದಿಂದ ನೋದನವನ್ನು ತೆಗೆದುಕೊಳ್ಳಬೇಕು. ಶಬ್ದವಾಗುವ ಸಂಯೋಗವೇ ಅಭಿಘಾತ. ಶಬ್ದವಾಗದ ಸಂಯೋಗವೇ ನೋದನ. ಯಾವ ಸಂಯೋಗದಿಂದ ಉಂಟಾದ ಕರ್ಮವು ಸಂಯೋಗವಿಶಿಷ್ಟಪದಾರ್ಥಗಳ ವಿಭಾಗಕ್ಕೆ ಹೇತುವಾಗುವುದಿಲ್ಲವೋ ಯಾವ ಸಂಯೋಗವು ಶಬ್ದಕ್ಕೆ ನಿಮಿತ್ತಕಾರಣವಾಗುವುದಿಲ್ಲವೋ ಆ ಸಂಯೋಗ ವಿಶೇಷಕ್ಕೆ ನೋದನವೆಂದು ಹೆಸರು. (ಮೆತ್ತಗಾದ ಸ್ಪರ್ಶ ) ಪ್ರಕೃತ ವೇಗವು ಅಭಿಘಾತರೂಪಸಂಯೋಗಕ್ಕೂ, ಸ್ಪರ್ಶವು ನೋದನರೂಪಸಂಯೋಗಕ್ಕೂ ಅಸಮವಾಯಿಕಾರಣವಾಗಬೇಕಾಗುತ್ತದೆ. ಎಂದು ಆಕ್ಷೇಪ. ಹೀಗೆಯೇ 'ಯತ್ಸಮವೇತಂ—' ಇತ್ಯಾದಿಲಕ್ಷಣ ಹೇಳುವುದಾದರೆ ಜ್ಞಾನವು ಇಚ್ಛೆಗೂ, ಇಚ್ಛೆ ಪ್ರವೃತ್ತಿಗೂ ಅಸಮವಾಯಿಕಾರಣವಾಗಬೇಕಾಗುತ್ತದೆ. ಜ್ಞಾನವು ಸಮವಾಯದಿಂದ ಆತ್ಮನಲ್ಲಿದೆ. ಅಲ್ಲಿಯೇ ಇಚ್ಛೆಯುಂಟಾಗುತ್ತದೆ. ಆದರೆ ಈ ಮೂರು ಆಕ್ಷೇಪಗಳಲ್ಲಿಯೂ ಅಸಮ

ವಾಯಿಕಾರಣತ್ವ ಅವುಗಳಿಗೆ ಇಷ್ಟವಲ್ಲ ಅದಕ್ಕೋಸ್ಕರ ಸಮಾಧಾನ ತೋರಿಸುತ್ತಾನೆ. 'ತಥಾಪಿ—' ಇತಿ. ಪಟದ ಅಸಮವಾಯಿಕಾರಣಲಕ್ಷಣದಲ್ಲಿ ತುರೀತಂತುಸಂಯೋಗ ಭಿನ್ನತ್ವವಿಶೇಷಣವನ್ನು ಕೊಡಬೇಕು ; ಅಂದರೆ 'ತಂತುಸಮವೇತತ್ವೇ ಸತಿ ತುರೀತಂತು ಸಂಯೋಗಭಿನ್ನತ್ವೇ ಸತಿ ಪಟಕಾರಣತ್ವಂ' ಪಟಾಸಮವಾಯಿಕಾರಣತ್ವಮ್' ಎಂದು ಪರಿಷ್ಕರಿಸಿ ಹೇಳಬೇಕು.

ಹೀಗೆಯೇ 'ಕಪಾಲಸಮವೇತತ್ವೇ ಸತಿ, ಚಕ್ರಕಪಾಲಸಂಯೋಗಭಿನ್ನತ್ವೇ ಸತಿ ಘಟಕಾರಣತ್ವಂ' ಎಂದು ಘಟದ ಅಸಮವಾಯಕಾರಣದಲಕ್ಷಣ. ಆಯಾಯ ಕಾರ್ಯದ ಅಸಮವಾಯಿಕಾರಣದಲಕ್ಷಣದಲ್ಲಿ ನಿಮಿತ್ತಕಾರಣಸಮವಾಯಿಕಾರಣಗಳ ಯಾವ ಪರ ಸ್ಪರಸಂಯೋಗವಿದೆಯೋ ತದ್ಭಿನ್ನತ್ವವನ್ನು ಸೇರಿಸಬೇಕು. ತುರಿ—ನಿಮಿತ್ತಕಾರಣ ತಂತು —ಸಮವಾಯಿಕಾರಣ. ಇವುಗಳ ಸಂಯೋಗ ಅಂದರೆ ತುರೀತಂತು ಸಂಯೋಗ. ಇದನ್ನು ಹೊರತಾದ ಕಾರಣ ಪಟದ ಅಸಮವಾಯಿಕಾರಣಲಕ್ಷಣವಾಗುತ್ತದೆ. ಹೀಗೆಯೇ ಚಕ್ರ — ನಿಮಿತ್ತಕಾರಣ, ಕಪಾಲ — ಸಮವಾಯಿಕಾರಣ. ಇವುಗಳ ಸಂಯೋಗಭಿನ್ನ ಸಂಯೋಗವೇ ಘಟದ ಅಸಮವಾಯಕಾರಣವೆಂದು ತಿಳಿಯಬೇಕು. ತುರೀತಂತು ಸಂಯೋಗಾದಿಗಳಿಗೆ ಪಟವನ್ನು ಕುರಿತು ಅಸಮವಾಯಿಕಾರಣತ್ವವನ್ನು ಅಂಗೀಕರಿಸಿದರೆ ದೋಷವೇನು ? ಎಂದು ಕೆಲವರು ಆಶಂಕಿಸಬಹುದು. ಆದರೆ 'ಅಸಮವಾಯಕಾರಣ ನಾಶವಾದರೆ ಕಾರ್ಯನಾಶ 'ಎಂದೂ ಸಿದ್ಧಾಂತ. ತಂತುಸಂಯೋಗ ನಷ್ಟವಾದರೆ ಪಟವೂ ನಷ್ಟವಾಗುತ್ತದೆ. ತುರೀತಂತುಸಂಯೋಗಕ್ಕೆ ಅಸಮವಾಯಕಾರಣತ್ವವನ್ನು ಅಂಗೀಕರಿ ಸಿದರೆ ಆಗ ಅದು ನಾಶವಾದಾಗ ಪಟವೂ ನಾಶವಾಗಬೇಕಾಗುತ್ತದೆ. ಆದರೆ ಲೋಕದಲ್ಲಿ ಇದು ದೃಷ್ಟವಾಗಿಲ್ಲ. ತುರೀತಂತುಸಂಯೋಗ ನಾಶವಾದಾಗ ಪಟವಿದ್ದೇ ಇರುತ್ತದೆ. ಆದುದರಿಂದ ಅದಕ್ಕೆ ಅಸಮವಾಯಿಕಾರಣತ್ವವಿಲ್ಲ. ಸಾಮಾನ್ಯಲಕ್ಷಣದಲ್ಲಿಯೇ ತುರೀ ತಂತುಸಂಯೋಗಾದಿಭಿನ್ನತ್ವವನ್ನು ಏಕೆ ಹೇಳಲಿಲ್ಲ. ತತ್ತತ್ಕಾರ್ಯದ ಅಸಮವಾಯಿ ಕಾರಣಲಕ್ಷಣಗಳಲ್ಲಿ ತತ್ತದ್ಭಿನ್ನತ್ವವೆಂದು ಏಕೆ ಹೇಳಬೇಕು ? ಅಂದರೆ ತುರೀತಂತು ಸಂಯೋಗವು ಎಲ್ಲಿಯೂ ಅಸಮವಾಯಿಕಾರಣವಾಗದಿದ್ದರೆ ಸಾಮಾನ್ಯಲಕ್ಷಣದಲ್ಲಿ ತದ್ಭಿನ್ನತ್ವವನ್ನು ಸೇರಿಸಬಹುದಿತ್ತು. ಅದು ಇಲ್ಲವೆಂದು ತೋರಿಸುತ್ತಾನೆ. 'ತುರೀ ತಂತು—' ಇತಿ. ತುರೀತಂತುಸಂಯೋಗವು ತುರೀಪಟಸಂಯೋಗವನ್ನು ಕುರಿತು ಅಸಮವಾಯಿಕಾರಣವಾಗುತ್ತದೆ. ಹೀಗೆಯೇ ವೇಗವೂ ವೇಗಜನ್ಯಕ್ರಿಯೆ ( ಸ್ಪಂದ ) ಯನ್ನು ಕುರಿತು ಅಸಮವಾಯಿಕಾರಣವಾಗುತ್ತದೆ. ಆದುದರಿಂದ ಸಾಮಾನ್ಯ ಲಕ್ಷಣದಲ್ಲಿ ವೇಗಾದಿಭಿನ್ನತ್ವವಿಶೇಷಣ ಸೇರಿಸಲು ಸಾಧ್ಯವಿಲ್ಲ. ಆಯಾಯಕಾರ್ಯದ ಅಸಮವಾಯಿಕಾರಣದಲಕ್ಷಣದಲ್ಲಿಯೇ, ತತ್ತದ್ಭಿನ್ನತ್ವವಿಶೇಷಣವನ್ನು ಹೇಳಬೇಕು. ಆತ್ಮವಿಶೇಷಗುಣಗಳು ಮಾತ್ರ ಎಲ್ಲಿಯೂ ಅಸಮವಾಯಿಕಾರಣವಾಗದಿರುವುದರಿಂದ ಅಸಮವಾಯಿಕಾರಣದ ಸಾಮಾನ್ಯಲಕ್ಷಣದಲ್ಲಿಯೇ 'ಆತ್ಮವಿಶೇಷಗುಣಭಿನ್ನತ್ವೇ ಸತಿ' ಎಂದು ವಿಶೇಷಣವನ್ನು ಸೇರಿಸಬೇಕು.

ಇದಕ್ಕೆ ಕಾರಣವಿಷ್ಟೆ. ಜ್ಞಾನೇಚ್ಛಾದಿಗಳು ಆತ್ಮನ ವಿಶೇಷಗುಣಗಳು. ಜ್ಞಾನವನ್ನು ಕುರಿತು ಆತ್ಮಮನಃ ಸಂಯೋಗವು ಅಸಮವಾಯಿಕಾರಣವೆಂದು ಒಪ್ಪಲೇಬೇಕು. ಜ್ಞಾನವನ್ನು ಕುರಿತು ಕ್ಲೃಪ್ತಕಾರಣಭಾವವನ್ನು ಹೊಂದಿದ ಆತ್ಮಮನಃ ಸಂಯೋಗವೇ ಇರುವಾಗ ಇಚ್ಛಾದಿಗಳನ್ನು ಕುರಿತೂ ಅದೇ ಕಾರಣವಾಗುತ್ತದೆ ; ಮಧ್ಯದಲ್ಲಿ ಜ್ಞಾನಕ್ಕೆ ಆಕಾರಣತ್ವವನ್ನು ಕಲ್ಪಿಸುವುದು ಏಕೆ ? ನಿಷ್ಫಲ. ಆದುದರಿಂದ 'ಆತ್ಮವಿಶೇಷಗುಣಭಿನ್ನತ್ವೇ ಸತಿ ಸಮವಾಯಿಕಾರಣಪ್ರತ್ಯಾಸನ್ನಂ ಕಾರಣಂ ಅಸಮವಾಯಿಕಾರಣಂ' ಎಂದು ಸಿದ್ಧವಾಗುತ್ತದೆ. ಹೀಗೆ ಹೇಳಿರುವುದರಿಂದ ಇಚ್ಛಾದಿಗಳನ್ನು ಕುರಿತು ಜ್ಞಾನಾದಿಗಳಾಗಲೀ, ಅನುಮಿತಿಯನ್ನು ಕುರಿತು ಪರಾಮರ್ಶಜ್ಞಾನವಾಗಲೀ ಅಸಮವಾಯಿಕಾರಣವಾಗಲಿ ಎಂಬ ಶಂಕೆಗೆ ಅವಕಾಶವಿಲ್ಲ.

**ಅತ್ರ ಸಮವಾಯಿಕಾರಣೇ ಪ್ರತ್ಯಾಸನ್ನಂ ದ್ವಿವಿಧಂ—ಕಾರ್ಯೈಕಾರ್ಥಪ್ರತ್ಯಾಸತ್ತ್ಯಾ, ಕಾರಣೈಕಾರ್ಥಪ್ರತ್ಯಾಸತ್ತ್ಯಾ ಚ । ಆದ್ಯಂ ಯಥಾ—ಘಟಾದಿಕಂ ಪ್ರತಿ ಕಪಾಲಸಂಯೋಗಾದಿಕಮಸಮವಾಯಿಕಾರಣಮ್ । ತತ್ರ—ಕಾರ್ಯೇಣ ಘಟೇನ ಸಹ ಕಾರಣಸ್ಯ ಕಪಾಲಸಂಯೋಗಸ್ಯ ಏಕಸ್ಮಿನ್ ಕಪಾಲೇ ಪ್ರತ್ಯಾಸತ್ತಿರಸ್ತಿ ॥**

ಸಮವಾಯಿಕಾರಣದಲ್ಲಿ ಪ್ರತ್ಯಾಸನ್ನವಾದ ಕಾರಣವೆಂದು ಕಾರಿಕೆಯಲ್ಲಿ ಹೇಳಿದೆ. ಇದು ಎರಡು ವಿಧ. ಪ್ರತ್ಯಾಸನ್ನತ್ವಂ—ಕಾರ್ಯದೊಡನೆ ಅಸಮವಾಯಿಕಾರಣಕ್ಕೆ ಸಾಮಾನಾಧಿಕರಣ್ಯವು ಎರಡು ರೀತಿಯಿಂದ ಸಂಭವಿಸುತ್ತದೆ. ಕಾರ್ಯೈಕಾರ್ಥಪ್ರ ಪ್ರತ್ಯಾಸತ್ತಿಯಿಂದ ಒಂದು. ಕಾರ್ಯದೊಡನೆ ಏಕಾಧಿಕರಣಸಂಬಂಧಕ್ಕೆ ಕಾರ್ಯೈಕಾರ್ಥಪ್ರತ್ಯಾಸತ್ತಿಯೆಂದು ಹೆಸರು. ಕಾರಣದೊಡನೆ ಏಕಾಧಿಕರಣಸಂಬಂಧಕ್ಕೆ ಕಾರಣೈಕಾರ್ಥಪ್ರತ್ಯಾಸತ್ತಿಯೆಂದು ಹೆಸರು. ಕಾರಣೈಕಾರ್ಥಪ್ರತ್ಯಾಸತ್ತಿಯಿಂದ ಎರಡನೆಯ ಅಸಮವಾಯಿಕಾರಣವಾಗುತ್ತದೆ. ಮೊದಲನೆಯ ಅ—ಕಾರಣಕ್ಕೆ ಉದಾಹರಣೆ ತೋರಿಸುತ್ತಾನೆ. 'ಆದ್ಯಂ—' ಇತಿ. ಘಟವನ್ನು ಕುರಿತು ಕಪಾಲದ್ವಯ ಸಂಯೋಗವು ಅಸಮವಾಯಿಕಾರಣ. ಕಾರ್ಯ—ಘಟ. ಇದರೊಡನೆ ಕಾರಣವಾದ ಕಪಾಲದ್ವಯಸಂಯೋಗವು ಒಂದೇ ಅಧಿಕರಣವಾದ ಕಪಾಲದಲ್ಲಿ ಸಮವಾಯ ಸಂಬಂಧದಿಂದ ಇದೆ. ( ಏಕಾರ್ಥಸಮವೇತತ್ವಂ ಸಂಬಂಧಃ ) ಹೀಗೆಯೇ ಪಟರೂಪಕಾರ್ಯವನ್ನು ಕುರಿತು ತಂತುಸಂಯೋಗವು ಅಸಮವಾಯಿಕಾರಣವಾಗುತ್ತದೆ. 'ಸಮವಾಯಸಂಬಂಧಾವಚ್ಛಿನ್ನಕಾರ್ಯತಾನಿರೂಪಿತ ಸಮವಾಯಸಂಬಂಧಾವಚ್ಛಿನ್ನಕಾರಣತಾಶ್ರಯತ್ವಂ ಅಸಮವಾಯಿಕಾರಣತ್ವಂ' ಎಂದು ಪರಿಷ್ಕೃತಲಕ್ಷಣವಾಗುತ್ತದೆ.

**ದ್ವಿತೀಯಂ ಯಥಾ—ಘಟರೂಪಂ ಪ್ರತಿ ಕಪಾಲರೂಪಮಸಮ**

**ವಾಯಿಕಾರಣಮ್ । ತತ್ರ ಸ್ವಗತರೂಪಾದಿಕಂ ಪ್ರತಿ ಸಮವಾಯಿಕಾರಣಂ ಘಟಃ, ತೇನ ಸಹ ಕಪಾಲರೂಪಸ್ಯೈಕಸ್ಮಿನ್ ಕಪಾಲೇ ಪ್ರತ್ಯಾಸತ್ತಿರಸ್ತಿ ॥**

ಕಾರಣದೊಡನೆ ಏಕಾರ್ಥದಲ್ಲಿರುವುದು ಎರಡನೆಯ ಅ—ಕಾರಣವೆಂದಿದೆ. ಅದಕ್ಕೆ ಉದಾಹರಣೆ ತೋರಿಸುತ್ತಾನೆ. 'ದ್ವಿತೀಯಂ—' ಇತಿ. ಘಟರೂಪಕ್ಕೆ ಕಪಾಲರೂಪವು ಎರಡನೆಯ ಅಸಮವಾಯಿಕಾರಣಕ್ಕೆ ಉದಾಹರಣೆ. ಇಲ್ಲಿ ಕಾರಣವೆಂದರೆ ಘಟರೂಪವನ್ನು ಕುರಿತು ಘಟವು ಸಮವಾಯಿಕಾರಣ. ಆ ಘಟದೊಡನೆ ಕಪಾಲರೂಪವು ಕಪಾಲದಲ್ಲಿ ಸಮವಾಯಸಂಬಂಧದಿಂದ ಇದೆ. ಆದುದರಿಂದ ಅಸಮವಾಯಿಕಾರಣವಾಗುತ್ತದೆ. ಹೀಗೆಯೇ ತಂತುರೂಪವು ಪಟರೂಪವನ್ನು ಕುರಿತು ಅಸಮವಾಯಿಕಾರಣವಾಗುತ್ತದೆ.

**ತಥಾಚ—ಕ್ವಚಿತ್ಸಮವಾಯಸಂಬಂಧೇನ ಕ್ವಚಿತ್ಸಮವಾಯಿಸಮವಾಯಸಂಬಂಧೇನೇತಿ ಫಲಿತೋಽರ್ಥಃ । ಇತ್ಥಂ ಚ—ಕಾರ್ಯೈಕಾರ್ಥಕಾರಣೈಕಾರ್ಥಾನ್ಯತರಪ್ರತ್ಯಾಸತ್ತ್ಯಾ ಸಮವಾಯಿಕಾರಣೇ ಪ್ರತ್ಯಾಸನ್ನಂ ಕಾರಣಂ ಜ್ಞಾನಾದಿಭಿನ್ನಮಸಮವಾಯಿಕಾರಣಮಿತಿ ಸಾಮಾನ್ಯಲಕ್ಷಣಂ ಪರ್ಯವಸನ್ನಮ್ । ಆಭ್ಯಾಂ ಸಮವಾಯಿಕಾರಣಾಽಸಮವಾಯಿಕಾರಣಾಭ್ಯಾಂ ಪರಂ ಭಿನ್ನಂ ಕಾರಣಂ ತೃತೀಯಂ ನಿಮಿತ್ತಕಾರಣಮಿತ್ಯರ್ಥಃ ॥**

ಅಸಮವಾಯಿಕಾರಣಗಳಿಗೆ ನಿಯಾಮಕಗಳಾದ ಎರಡು ಸಂಬಂಧಗಳನ್ನು ನಿಷ್ಕೃಷ್ಟವಾಗಿ ತೋರಿಸುತ್ತಾನೆ. 'ತಥಾಚ—' ಇತಿ. ಕೆಲವು ಕಡೆ ಸಮವಾಯಸಂಬಂಧವೂ, ಕೆಲವು ಕಡೆ ಸ್ವಸಮವಾಯಿಸಮವಾಯಸಂಬಂಧವೂ ಕಾರಣತಾನಿಯಾಮಕವಾಗುತ್ತದೆ. ಘಟವನ್ನು ಕುರಿತು ಕಪಾಲದ್ವಯಸಂಯೋಗವು ಅಸಮವಾಯಿಕಾರಣವಾದರೆ ಅದರಲ್ಲಿರುವ ಕಾರಣತಾನಿಯಾಮಕಸಂಬಂಧವು ಸಮವಾಯವಾಗುತ್ತದೆ. ಗುಣಗುಣಿಗಳಿಗೆ ಸಮವಾಯಸಂಬಂಧವೆಂದುದರಿಂದ—ಕಪಾಲವು ಗುಣೀ—ದ್ರವ್ಯ. ಅದರಲ್ಲಿ ಸಂಯೋಗರೂಪಗುಣವು ಸಮವಾಯದಿಂದ ಇರುತ್ತದೆ. ಘಟರೂಪವನ್ನು ಕುರಿತು ಕಪಾಲರೂಪವು ಅಸಮವಾಯಿಕಾರಣವೆಂದು ಎರಡನೇಯದಾಗಿ ಹೇಳಿದೆ. ಕಪಾಲರೂಪದಲ್ಲಿರುವ ಕಾರಣತಾನಿಯಾಮಕಸಂಬಂಧವು ಸ್ವಸಮವಾಯಿ ಸಮವಾಯವಾಗುತ್ತದೆ. ಸ್ವಂ—ಕಪಾಲರೂಪ. ಅದಕ್ಕೆ ಸಮವಾಯಿ—ಕಪಾಲ ಅದರಲ್ಲಿ ಸಮವಾಯದಿಂದ ಘಟವಿರುತ್ತದೆ. ಅಲ್ಲಿಯೇ ಘಟರೂಪವಾಗುತ್ತದೆ.

ಕಾರ್ಯಕಾರಣಗಳಿಗೆ ಸಾಮಾನಾಧಿಕರಣ್ಯವಿರಬೇಕು. ಘಟ ಮತ್ತು ಕಪಾಲಸಂಯೋಗಗಳು ಸಾಕ್ಷಾತ್ ಸಮವಾಯಸಂಬಂಧದಿಂದ ಕಪಾಲರೂಪವಾದ ಒಂದೇ ಅಧಿಕರಣದಲ್ಲಿರುವುದರಿಂದ ಅವುಗಳಿಗೆ ಕಾರ್ಯಕಾರಣಭಾವ ಸಮಂಜಸವಾಗಿದೆ. ಎರಡನೇ ಕಾರ್ಯಕಾರಣಭಾವದಲ್ಲಿ ಎರಡಕ್ಕೂ ಸಾಕ್ಷಾತ್ ಸಮವಾಯಸಂಬಂಧ ಹೇಳಲು ಬರುವು

ದಿಲ್ಲ. ಘಟರೂಪ ಘಟದಲ್ಲಿ ಸಮವಾಯದಿಂದ ಇದೆ. ಕಪಾಲರೂಪ ಕಪಾಲದಲ್ಲಿದೆ. ಇವುಗಳಿಗೆ ಏಕಾಧಿಕರಣ ಎಲ್ಲಿ ? ಅದಕ್ಕೋಸ್ಕರ ಘಟದಲ್ಲಿ ಕಪಾಲರೂಪತಂದು ಏಕಾಧಿಕರಣವನ್ನು ತೋರಿಸುತ್ತಾನೆ. ಘಟದಲ್ಲಿ ಘಟದರೂಪವಾದಕಾರ್ಯವೂ ಸಮವಾಯದಿಂದ ಇದೆ. ಅಲ್ಲಿಯೇ ಕಪಾಲರೂಪವು ಸ್ವಸಮವಾಯಿಸಮವೇತತ್ವಸಂಬಂಧದಿಂದ ಬರುತ್ತದೆ. ಸ್ವ— ಕಪಾಲರೂಪ. ಅದಕ್ಕೆ ಸಮವಾಯಿ— ಕಪಾಲ. ಅಲ್ಲಿ ಸಮವೇತ —ಸಮವಾಯದಿಂದ ಇರುವುದು ಘಟ. ಹೀಗೆ ಈ ಪರಂಪರಾಸಂಬಂಧದಿಂದ ಘಟದಲ್ಲಿ ಕಪಾಲರೂಪ ಬರುತ್ತದೆ. ಆಗ ಕಾರ್ಯಕಾರಣಗಳಿಗೆ ಸಾಮಾನಾಧಿಕರಣ್ಯ ಬಂದಂತಾಗುತ್ತದೆ. ಆಗ 'ಸಮವಾಯಸಂಬಂಧಾವಚ್ಛಿನ್ನಕಾರ್ಯತಾನಿರೂಪಿತಸ್ವಸಮವಾಯಿಸಮವೇತತ್ವಸಂಬಂಧಾವಚ್ಛಿನ್ನಕಾರಣತಾಶ್ರಯತ್ವಂ' ಎಂದು ಎರಡನೇ ಅಸಮವಾಯಿಕಾರಣಲಕ್ಷಣ ಫಲಿತವಾಗುತ್ತದೆ. ಹೀಗೆ ಅಸಮವಾಯಿಕಾರಣದ ನಿಷ್ಕೃಷ್ಟಲಕ್ಷಣವನ್ನು ತಾನೇ ತೋರಿಸುತ್ತಾನೆ. 'ಇತ್ಥಂಚ—' ಇತಿ. ಕಾರ್ಯೈಕಾರ್ಥಪ್ರತ್ಯಾಸತ್ತಿಃ— ಸಮವಾಯಃ, ಕಾರಣೈಕಾರ್ಥಪ್ರತ್ಯಾಸತ್ತಿಃ— ಸ್ವಸಮವಾಯಿಸಮವಾಯಃ 'ಜ್ಞಾನಾದಿಆತ್ಮವಿಶೇಷಗುಣಭಿನ್ನತ್ವೇಸತಿ ಸಮವಾಯ ಸಂಬಂಧಾವಚ್ಛಿನ್ನಕಾರ್ಯತಾನಿರೂಪಿತ ಸಮವಾಯ ಸ್ವಸಮವಾಯಿಸಮವಾಯಾನ್ಯತರಸಂಬಂಧಾವಚ್ಛಿನ್ನಕಾರಣತಾಶ್ರಯತ್ವಂ ಅಸಮವಾಯಿಕಾರಣತ್ವಮ್' ಎಂದು ಫಲಿತವಾಗುತ್ತದೆ. ಸಮವಾಯಿಕಾರಣಭಿನ್ನತ್ವೇ ಸತಿ, ಅಸಮವಾಯಿಕಾರಣಭಿನ್ನತ್ವೇ ಸತಿ, ಕಾರಣತ್ವಂ' ನಿಮಿತ್ತಕಾರಣ ಲಕ್ಷಣ. ಘಟಕ್ಕೆ ದಂಡಾದಿಗಳೂ, ಪಟಕ್ಕೆ ತುರೀವೇಮಾದಿಗಳೂ ನಿಮಿತ್ತಕಾರಣಗಳಾಗುತ್ತವೆ. ದಾರದಿಂದ ಸುತ್ತಿದ ನಳಿಗೆ ತುರೀ. ಚಲಿಸುವದಂಡಕ್ಕೆ ವೇಮಾ ಎಂದು ಹೆಸರು.

**ಯೇನ ಸಹ ಪೂರ್ವಭಾವಃ—**

**ಇದಾನೀಮನ್ಯಥಾಸಿದ್ಧತ್ವಮೇವ ಕಿಯತಾಂ ಪದಾರ್ಥಾನಾಮತ ಆಹ—ಯೇನೇತಿ। ಯತ್ಕಾರ್ಯಂ ಪ್ರತಿ ಕಾರಣಸ್ಯ ಪೂರ್ವವೃತ್ತಿತಾ ಯೇನ ರೂಪೇಣ ಗೃಹ್ಯತೇ ತತ್ಕಾರ್ಯಂ ಪ್ರತಿ ತದ್ರೂಪಮನ್ಯಥಾಸಿದ್ಧಮಿತ್ಯರ್ಥಃ। ಯಥಾ ಘಟಂ ಪ್ರತಿ ದಂಡತ್ವಾದಿ ॥**

ಅನ್ಯಥಾಸಿದ್ಧಿಶೂನ್ಯವಾದದ್ದು ಕಾರಣವೆಂದುದರಿಂದ ಅನ್ಯಥಾಸಿದ್ಧವೆಂದರೇನು ಎಂಬ ಜಿಜ್ಞಾಸೆ ಬರುವುದರಿಂದ ಅನ್ಯಥಾಸಿದ್ಧಗಳನ್ನು ತೋರಿಸುತ್ತಾನೆ. ಎಷ್ಟು ಪದಾರ್ಥಗಳಿಗೆ ಅನ್ಯಥಾಸಿದ್ಧತ್ವವಿದೆಯೆಂದು ಕ್ರಮವಾಗಿ ಹೇಳುತ್ತಾನೆ. ಕಾರಣತಾವಚ್ಛೇದಕಧರ್ಮವಾದ ದಂಡಾದಿಗಳಲ್ಲಿರುವ ದಂಡತ್ವಾದಿಗಳು ಮೊದಲನೆಯ ಅನ್ಯಥಾಸಿದ್ಧ. 'ಯತ್ಕಾರ್ಯಂಪ್ರತಿ ಕಾರಣಸ್ಯ' ಎಂಬುದನ್ನು ಅಧ್ಯಾಹಾರಮಾಡಿಕೊಳ್ಳಬೇಕು. ಯತ್ಕಾರ್ಯಂ ಎಂಬುದಕ್ಕೆ ಯದ್ಧರ್ಮಾವಚಿನ್ನಕಾರ್ಯಂ ಎಂದು ಅರ್ಥಮಾಡಬೇಕು.

ಘಟತ್ವಾವಚ್ಛಿನ್ನಘಟಕಾರ್ಯವನ್ನು ಕುರಿತು ಕಾರಣಸ್ಯ—ಕಾರಣತ್ವೇನಾಭಿಮತವಾದ ದಂಡಕ್ಕೆ ಪೂರ್ವವೃತ್ತಿತಾ—ಪೂರ್ವಭಾವವು ಯೇನ ಸಹ—ಯಾವರೂಪದಿಂದ ಅಂದರೆ ದಂಡತ್ವಾದಿರೂಪದಿಂದ ಕೂಡಿಕೊಂಡೇ ಗೃಹ್ಯತೇ—ತಿಳಿಯಲ್ಪಡುವುದೋ ತತ್ಕಾರ್ಯಂ ಪ್ರತಿ—ಘಟತ್ವಾವಚ್ಛಿನ್ನಘಟಕಾರ್ಯವನ್ನು ಕುರಿತು ತದ್ರೂಪಂ— (ಕಾರಣತಾವಚ್ಛೇದಕವಾದ) ದಂಡತ್ವವು ಅನ್ಯಥಾಸಿದ್ಧವಾಗುತ್ತದೆ. ಘಟವನ್ನು ಕುರಿತು ದಂಡವು ಕಾರಣ ಕಾರಣತಾ ದಂಡದಲ್ಲಿ ಇದೆ. ಕಾರಣತಾವಚ್ಛೇದಕ—ದಂಡತ್ವ. ದಂಡಕಾರಣವಾಗುವಾಗ ಇದು ಅನ್ಯಥಾಸಿದ್ಧವಾಗುತ್ತದೆ. ಪರಿಷ್ಕೃತಲಕ್ಷಣ 'ಯದ್ಧರ್ಮಾವಚ್ಛಿನ್ನಕಾರಣನಿಷ್ಠಪೂರ್ವವೃತ್ತಿತಾನಿಷ್ಠಪ್ರಕಾರತಾನಿರೂಪಕಜ್ಞಾನನಿರೂಪಿತ ವಿಶೇಷ್ಯತಾವಚ್ಛೇದಕವಮ್' "ದಂಡತ್ವೇನದಂಡಃ ಘಟಪೂರ್ವವೃತ್ತಿಃ" ಎಂಬ ಜ್ಞಾನದಲ್ಲಿ ಘಟಪೂರ್ವವೃತ್ತಿತಾ (ದಂಡದಲ್ಲಿ) ತೋರುತ್ತದೆ. ಪೂರ್ವವೃತ್ತಿತ್ವವು ಪ್ರಕಾರವಾಗಿದೆ. ವಿಶೇಷ್ಯ ದಂಡ. ವಿಶೇಷ್ಯತಾವಚ್ಛೇದಕವು ದಂಡತ್ವ. ಸಂಗ್ರಹಲಕ್ಷಣ. 'ಯದ್ಧರ್ಮಾವಚ್ಛಿನ್ನನಿರೂಪಿತಪೂರ್ವವೃತ್ತಿತ್ವಪ್ರಕಾರಕ ಗೃಹೀಯವಿಶೇಷ್ಯತಾವಚ್ಛೇದಕತ್ವೇ ಸತಿ ಸ್ವತಂತ್ರಾನ್ವಯವ್ಯತಿರೇಕಶೂನ್ಯತ್ವಮ್' ಸ್ವತಂತ್ರಾನ್ವಯವ್ಯತಿರೇಕವತ್ವಂ ಅಂದರೆ ಇತರಾನ್ವಯವ್ಯತಿರೇಕಾನಧೀನವ್ಯತಿರೇಕವತ್ವಮ್ ದಂಡತ್ವಕ್ಕೆ ಸ್ವತಂತ್ರಾನ್ವಯವ್ಯತಿರೇಕವಿಲ್ಲ. ದಂಡಮೂಲಕವಾಗಿ ಹೇಳಬೇಕು. ಪ್ರಥಮದಳ ಹೇಳದಿದ್ದರೆ ಎರಡನೆಯ ಅನ್ಯಥಾಸಿದ್ಧದಲ್ಲಿ ಅತಿವ್ಯಾಪ್ತಿ ಬರುತ್ತದೆ. ಅಲ್ಲಿಯೂ ಸ್ವತಂತ್ರಾನ್ವಯವ್ಯತಿರೇಕವಿಲ್ಲ. ಎರಡನೆಯದಳ ಹೇಳದಿದ್ದರೆ ಕಪಾಲವೇ ಅನ್ಯಥಾಸಿದ್ಧವಾಗಬೇಕಾಗುತ್ತದೆ. 'ಅವಚ್ಛೇದಕಕೋಟಿಪ್ರವಿಷ್ಟಾನಾಮವಚ್ಛೇದಕತ್ವಂ' ಎಂದು ನಿಯಮ. ಅವಚ್ಛೇದಕಕೋಟಿಯಲ್ಲಿರುವ ಪದಗಳಿಗೆಲ್ಲಾ ಅವಚ್ಛೇದಕತ್ವವನ್ನು ಅಂಗೀಕರಿಸುತ್ತಾರೆ. ಆಗ "ಕಪಾಲಸಂಯೋಗಃ ಘಟಪೂರ್ವವೃತ್ತಿಃ" ಎಂಬ ಜ್ಞಾನದಲ್ಲಿ ಕಪಾಲಕ್ಕೂ ಅವಚ್ಛೇದಕತ್ವವಿರುವುದರಿಂದ ಪ್ರಥಮದಳ ಅಲ್ಲಿ ಬರುತ್ತದೆ. ಸ್ವತಂತ್ರಾನ್ವಯವ್ಯತಿರೇಕಶೂನ್ಯತ್ವವೆಂದು ಎರಡನೇದಳ ಹೇಳಿದರೆ ಆಗ ಕಪಾಲಕ್ಕೆ ಸ್ವತಂತ್ರಾನ್ವಯವ್ಯತಿರೇಕಶೂನ್ಯತ್ವವಿಲ್ಲದಿರುವುದರಿಂದ ದೋಷ ಬರುವುದಿಲ್ಲ. ಆದುದರಿಂದ ಎರಡುದಳಗಳನ್ನೂ ಹೇಳಬೇಕು. ದಂಡತ್ವಾದಿಗಳಲ್ಲಿ ಈ ಲಕ್ಷಣಬರುವುದರಿಂದ ಅವು ಮೊದಲನೆಯ ಅನ್ಯಥಾಸಿದ್ಧವಾಗುತ್ತವೆ. (ದಂಡಕ್ಕೇ ಕಾರಣತ್ವ ಉಪಪನ್ನವಾಗುವಾಗ ದಂಡತ್ವಕ್ಕೆ ಕಾರಣತ್ವ ಹೇಳುವುದು ವ್ಯರ್ಥವೆಂದು ತಾತ್ಪರ್ಯ.)

(೨) ಎರಡನೆಯ ಅನ್ಯಥಾಸಿದ್ಧ.

**ಕಾರಣಮಾದಾಯ ವಾ ಯಸ್ಯ ।**

**ದ್ವಿತೀಯಮನ್ಯಥಾಸಿದ್ಧಮಾಹ—ಕಾರಣಮಿತಿ । ಯಸ್ಯ ಸ್ವಾತಂತ್ರ್ಯೇಣಾನ್ವಯವ್ಯತಿರೇಕೌ ನ ಸ್ತಃ, ಕಿಂತು ಕಾರಣಮಾದಾಯೈವಾನ್ವಯವ್ಯತಿರೇಕೌಗೃಹ್ಯೇತೇ ತದನ್ಯಥಾಸಿದ್ಧಮ್ ಯಥಾ ದಂಡರೂಪಮ್ ॥**

ಯಸ್ಯ— ಸ್ವತಂತ್ರಾನ್ವಯವ್ಯತಿರೇಕಶೂನ್ಯವಾದ ಯಾವ ವಸ್ತುವಿಗೆ'ಸ್ವಾತಂತ್ರ್ಯೇಣ'— ತನ್ನಕಾರಣಾಪೇಕ್ಷೆ ಇಲ್ಲದೆ, 'ಅನ್ವಯವ್ಯತಿರೇಕೌ— ಕಾರಣಾಧಿಕರಣದಲ್ಲಿ ಕಾರ್ಯವಿರುವುದು ಅನ್ವಯ, ಕಾರಣಾಧಿಕರಣದಲ್ಲಿ ಕಾರ್ಯವಿಲ್ಲದಿರುವುದು ವ್ಯತಿರೇಕ. ಈ ಎರಡೂ "ನಸ್ತ"— ಇರುವುದಿಲ್ಲವೋ, 'ಕಿಂತು'— ಆದರೆ, 'ಕಾರಣಮಾದಾಯ್ಯೈವ'— ತನ್ನ ಕಾರಣವನ್ನು ಸ್ವೀಕರಿಸಿಯೇ, ಅನ್ವಯವ್ಯತಿರೇಕೌ— ಹಿಂದೆ ಹೇಳಿದ ಅನ್ವಯವ್ಯತಿರೇಕಗಳು, ಗೃಹ್ಯೇತೇ— ತಿಳಿಯಲ್ಪಡುತ್ತವೆಯೋ, ಅದು ಎರಡನೆಯ ಅನ್ಯಥಾಸಿದ್ಧವಾಗುತ್ತದೆ. ಸ್ವಸ್ವರೂಪದಿಂದ ಕಾರ್ಯವನ್ನು ಕುರಿತು ಪೂರ್ವಭಾವವನ್ನು ಹೊಂದದೆ ತನ್ನ ಕಾರಣವನ್ನು ತೆಗೆದುಕೊಂಡೇ ಪೂರ್ವಭಾವವನ್ನು ಹೊಂದುವುದು ಅನ್ಯಥಾಸಿದ್ಧ. ಘಟವನ್ನು ಕುರಿತು ದಂಡರೂಪವು ಎರಡನೆಯ ಅನ್ಯಥಾಸಿದ್ಧ ದಂಡರೂಪಕ್ಕೆ ಘಟವನ್ನು ಕುರಿತು ಸ್ವತಂತ್ರವಾದ ಪೂರ್ವಭಾವವಿಲ್ಲ. ತನಗೆ ಸಮವಾಯಿಕಾರಣವಾದ ದಂಡದ ಪೂರ್ವಭಾವವನ್ನು ಅನುಸರಿಸಿಯೇ ಪೂರ್ವಭಾವವನ್ನು ಹೊಂದುತ್ತದೆ. ಆದುದರಿಂದ ದಂಡರೂಪವು ಘಟಪೂರ್ವವೃತ್ತಿಯಾದರೂ ಕಾರಣವಾಗುವುದಿಲ್ಲ. ಅನ್ಯಥಾ ಸಿದ್ಧವಾಗುತ್ತದೆ. ಪರಿಷ್ಕೃತಲಕ್ಷಣ. "ಸ್ವತಂತ್ರಾನ್ವಯವ್ಯತಿರೇಕಶೂನ್ಯತ್ವೇ ಸತಿ ತತ್ಕಾರ್ಯಕಾರಣಾವಚ್ಛಿನ್ನನಿಯತಪೂರ್ವವೃತ್ತಿತ್ವಪ್ರಕಾರಕಗ್ರಾಹ್ಯಹೀಯವಿಶೇಷತ್ವಮ್." 'ದಂಡರೂಪಂ'ಘಟಪೂರ್ವವೃತ್ತಿ ಎಂಬ ಜ್ಞಾನದಲ್ಲಿ ದಂಡರೂಪವೇ ವಿಶೇಷ್ಯ. ಪೂರ್ವವೃತ್ತಿತ್ವವು ಪ್ರಕಾರವಾಗಿ ತೋರುತ್ತದೆ. ತತ್ಕಾರ್ಯಕಾರಣವಾದ ದಂಡವೂ ಅವಚ್ಛೇದಕ(ವಿಶೇಷಣ)ವಾದುದರಿಂದ ಕಾರಣಾವಚ್ಛಿನ್ನವಾಗಿಯೂ ಇದೆ. ದಂಡವು ವಿಶೇಷವಾಗಿ ತೋರಿರುವುದರಿಂದ ಅದೂ ಅವಚ್ಛೇದಕವಾಗುತ್ತದೆ. ದಂಡರೂಪಕ್ಕೆ ದಂಡಮೂಲಕ ಅನ್ವಯ ವ್ಯತಿರೇಕವಿರುವುದಲ್ಲದೆ ಕೇವಲ ರೂಪಮೂಲಕವಾಗಿಲ್ಲ. ಅಂದರೆ 'ರೂಪಂ ಘಟನಿಯತಪೂರ್ವವೃತ್ತಿ' ಎಂದು ಹೇಳಲು ಬರುವುದಿಲ್ಲ. ದಂಡರೂಪಂ ಎಂದು ದಂಡವನ್ನು ಸೇರಿಸಿಕೊಂಡೇ ಕಾರ್ಯಾನ್ವಯವ್ಯತಿರೇಕ ಹೇಳಬೇಕಾದುದರಿಂದ ಅದು ಅನ್ಯಥಾಸಿದ್ಧವಾಗುತ್ತದೆ. ಪ್ರಥಮದಳ ಹೇಳದಿದ್ದರೆ ಕಪಾಲದ್ವಯ ಸಂಯೋಗದಲ್ಲಿ ಅತಿವ್ಯಾಪ್ತಿ ಬರುತ್ತದೆ. ಎರಡನೆಯದಳ ಹೇಳದಿದ್ದರೆ ದಂಡತ್ವ ರೂಪ ಪ್ರಥಮಾನ್ಯಥಾಸಿದ್ಧದಲ್ಲಿ ಅತಿವ್ಯಾಪ್ತಿ ಬರುತ್ತದೆ. 'ಕಾರಣಸಮವೇತವಿಶೇಷಣಗುಣತ್ವಂ' ಇದು ಲಘುವಾದ ಲಕ್ಷಣ. ದಂಡಕಾರಣದಲ್ಲಿ ಸಮವಾಯದಿಂದ ಇರುವುದು ದಂಡರೂಪವಾಗುತ್ತದೆ.

**(೩) ಮೂರನೆಯ ಅನ್ಯಥಾಸಿದ್ಧ.**

**ಅನ್ಯಂ ಪ್ರತಿ ಪೂರ್ವಭಾವೇ ಜ್ಞಾತೇ ಯತ್ಪೂರ್ವಭಾವ ವಿಜ್ಞಾನಮ್ ॥ ೧೯ ॥**

**ತೃತೀಯಮಾಹ—ಅನ್ಯಂಪ್ರತೀತಿ ॥ ಅನ್ಯಂ ಪ್ರತಿ ಪೂರ್ವವೃತ್ತಿತ್ವಂ ಗೃಹೀತ್ವೈವಯಸ್ಯ ಯತ್ಕಾರ್ಯಂ ಪ್ರತಿ ಪೂರ್ವವೃತ್ತಿತ್ವಂ ಗೃಹ್ಯತೇ ತಸ್ಯ**

**ತತ್ಕಾರ್ಯಂಪ್ರತ್ಯನ್ಯಥಾಸಿದ್ಧತ್ವಮ್ ॥ ಯಥಾ ಘಟಾದಿಕಂ ಪ್ರತ್ಯಾಕಾಶಸ್ಯ । ತಸ್ಯ ಹಿ ಘಟಾದಿಕಂ ಪ್ರತಿ ಕಾರಣತ್ವಮಾಕಾಶತ್ವೇನೈವ ಸ್ಯಾತ್ । ಆಕಾಶತ್ವಂ ಹಿ ಶಬ್ದಸಮವಾಯಿಕಾರಣತ್ವಮ್ । ಏವಂ ಚ ತಸ್ಯ ಶಬ್ದಂ ಪ್ರತಿ ಜನಕತ್ವಂ ಗೃಹೀತ್ವೈವಘಟಾದಿಕಂ ಪ್ರತಿ ಜನಕತ್ವಂ ಗ್ರಾಹ್ಯಮತಸ್ತದನ್ಯಥಾಸಿದ್ಧಮ್ ॥ ನನು—ಶಬ್ದಾಶ್ರಯತ್ವೇನ ತಸ್ಯ ಕಾರಣತ್ವೇ ಕಾಽನ್ಯಥಾಸಿದ್ಧಿರಿತಿ ಚೇತ್ ? ಪಂಚಮೀತಿ ಗೃಹಾಣ। ನನ್ವಾಕಾಶಸ್ಯ ಶಬ್ದಂ ಪ್ರತಿ ಜನಕತ್ವೇ ಕಿಮವಚ್ಛೇದಕಮಿತಿ ಚೇತ್ಕವತ್ವಾದಿಕಂ ವಿಶೇಷಪದಾರ್ಥೋವೇತಿ ॥೧೯॥**

ಅನ್ಯಂ ಪ್ರತಿ—ಪ್ರಕೃತಕಾರ್ಯಭಿನ್ನವಾದ ಕಾರ್ಯವನ್ನು ಕುರಿತು (ಘಟಕ್ಕಿಂತ ಬೇರೆಯಾದ ಶಬ್ದರೂಪಕಾರ್ಯವನ್ನು ಕುರಿತು.) ಪೂರ್ವವೃತ್ತಿತ್ವಂ—ಪೂರ್ವಭಾವವನ್ನು ಗೃಹೀತ್ವೈವ—ತಿಳಿದುಕೊಂಡೇ, ಯಸ್ಯ—ಯಾವಕಾರಣಕ್ಕೆ (ಆಕಾಶಕ್ಕೆ) ಯತ್ಕಾರ್ಯಂಪ್ರತಿ—ಯಾವ ಪ್ರಕೃತ ಕಾರ್ಯವನ್ನು ಕುರಿತು (ಘಟವನ್ನು ಕುರಿತು) ಪೂರ್ವವೃತ್ತಿತ್ವಂ ಗೃಹ್ಯತೇ—ಪೂರ್ವಭಾವವೃತ್ತಿ ಳಿಯಲ್ಪಡುವುದೋ, ತಸ್ಯತ ತ್ಕಾರ್ಯಂ ಪ್ರತಿ ಅನ್ಯಥಾಸಿದ್ಧತ್ವಮ್—ಆಕಾರಣವು ಆ ಕಾರ್ಯವನ್ನು ಕುರಿತು ಅನ್ಯಥಾಸಿದ್ಧವಾಗುತ್ತದೆ. ಆಕಾಶಾದಿಗಳು ಘಟಾದಿಕಾರ್ಯವನ್ನು ಕುರಿತು ಕಾರಣವೆಂದರೆ ಅಲ್ಲಿ ಈ ಈ ಮೂರನೆಯ ಅನ್ಯಥಾಸಿದ್ಧಲಕ್ಷಣಬರುವುದರಿಂದ ಅವು ಕಾರಣಗಳಾಗುವುದಿಲ್ಲ. 'ಅನ್ಯಕಾರಣತ್ವೇನ ಗೃಹೀತಕಾರಣತಾಕಂ' ಎಂದು ಲಘುಲಕ್ಷಣ ಹೇಳಬಹುದು. ಆಕಾಶವು ಮೊದಲು ಶಬ್ದಕ್ಕೆ ಕಾರಣವೆಂದು ತಿಳಿದಮೇಲೆ ಘಟಕ್ಕೆ ಕಾರಣವೆಂದು ತಿಳಿಯುತ್ತದೆ. ಘಟವನ್ನು ಕುರಿತು ಆಕಾಶವು ಕಾರಣವೆಂದರೆ ಆಕಾಶತ್ವರೂಪದಿಂದ ಕಾರಣತ್ವ ಹೇಳಬೇಕು. ಆಗ 'ಆಕಾಶತ್ವಂ ಕಿಂ ರೂಪಂ?' ಎಂದು ಜಿಜ್ಞಾಸೆ ಬರುವುದರಿಂದ 'ಆಕಾಶತ್ವಂ ಶಬ್ದಸಮವಾಯಿಕಾರಣತ್ವಂ' ಎಂದು ಹೇಳಬೇಕು. ಶಬ್ದಕ್ಕೆ ಸಮವಾಯಿಕಾರಣವಾದದ್ದು ಆಕಾಶವೆಂದರ್ಥ. ಆಗ 'ಆಕಾಶಂ ಶಬ್ದಪೂರ್ವವೃತ್ತಿ' (ಶಬ್ದಕ್ಕೆ ಕಾರಣವಾದುದರಿಂದ ಶಬ್ದಕ್ಕಿಂತಪೂರ್ವದಲ್ಲಿ ಇರುವುದು) ಎಂಬ ಜ್ಞಾನ ಬಂದ ಮೇಲೆಯೇ ಘಟಪೂರ್ವವೃತ್ತಿ (ಘಟಕ್ಕೆ ಕಾರಣ) ಎಂಬ ಜ್ಞಾನ ಬರುತ್ತದೆ. "ತದ್ಧರ್ಮಾವಚ್ಛಿನ್ನ ನಿರೂಪಿತ ಪೂರ್ವವೃತ್ತಿತ್ವಪ್ರಕಾರಕ ಗ್ರಹಾಧೀನ ತದ್ಧರ್ಮಾವಚ್ಛಿನ್ನ ನಿರೂಪಿತ ಪೂರ್ವವೃತ್ತಿತ್ವಪ್ರಕಾರಕ ಗ್ರಹೀಯ ವಿಶೇಷ್ಯತ್ವಂ" ತೃತೀಯಾನ್ಯಥಾ ಸಿದ್ಧತ್ವಮ್." ಆಕಾಶಂ ಶಬ್ದಪೂರ್ವವೃತ್ತಿ–ಎಂಬ ಜ್ಞಾನ (ಗ್ರಹ–ಜ್ಞಾನ)ದಲ್ಲಿ ಆಕಾಶವೇ ವಿಶೇಷ್ಯ. ಪೂರ್ವವೃತ್ತಿತ್ವವು ಪ್ರಕಾರವಾಗಿ ತೋರುತ್ತದೆ. ಅದು ಘಟತ್ವಾವಚ್ಛಿನ್ನ ನಿರೂಪಿತವಾಗಿರುತ್ತದೆ. ಈ ಜ್ಞಾನವು 'ಆಕಾಶಂ ಶಬ್ದಪೂರ್ವವೃತ್ತಿ' ಎಂಬ ಜ್ಞಾನಕ್ಕಧೀನವಾಗಿದೆ. ಜ್ಞಾನಾಧೀನವೆಂದರೆ ಜ್ಞಾನೋತ್ತರಕಾಲೀನ (ಜ್ಞಾನ ಬಂದ ಮೇಲೆ ಬರುವ ಜ್ಞಾನ) ಎಂದರ್ಥ. ಆಕಾಶವು ಶಬ್ದಕ್ಕಿಂತ ಪೂರ್ವ

ದಲ್ಲಿರುವುದು ಅಂದರೆ ಶಬ್ದ ಸಮವಾಯಿ ಕಾರಣವೆಂಬ ಜ್ಞಾನ ಬಂದ ಮೇಲೆ ಆಕಾಶವು ಘಟಪೂರ್ವವೃತ್ತಿ ಅಂದರೆ ಘಟಕ್ಕೆ ಕಾರಣವೆಂಬ ಜ್ಞಾನ ಬರುತ್ತದೆ. ಮೊದಲಿನ ಜ್ಞಾನದಲ್ಲಿಯೂ ಪೂರ್ವವೃತ್ತಿತ್ವವೇ ಪ್ರಕಾರವಾಗಿದೆ. ಆದರೆ ಅದು ಶಬ್ದತ್ವಾವಚ್ಛಿನ್ನ ವಾದ ಶಬ್ದದಿಂದ ನಿರೂಪಿತವಾಗಿದೆ. ಹೀಗೆ ಆಕಾಶವು ಮೂರನೆಯ ಅನ್ಯಥಾಸಿದ್ಧ ವಾಗುತ್ತದೆ.

'ನನು' ಎಂಬ ಗ್ರಂಥದಿಂದ ಆಕಾಶಕ್ಕೆ ತೃತೀಯಾನ್ಯಥಾಸಿದ್ಧಲಕ್ಷಣ ಬರುವು ದಿಲ್ಲವೆಂದು ಆಶಂಕಿಸುತ್ತಾನೆ. ಆಕಾಶತ್ವರೂಪದಿಂದ ಘಟಕಾರಣತ್ವವನ್ನು ಹೇಳ ಬೇಕಷ್ಟೆ. ಆಗ ಅಕಾಶತ್ವವೆಂದರೇನು ? ಎಂಬ ಜಿಜ್ಞಾಸೆ ಬರುವುದು ಸಹಜ. ಆಕಾಶವು ಶಬ್ದಸಮವಾಯಿಕಾರಣವೆಂದರೆ ತಾನೆ ಶಬ್ದಪೂರ್ವವೃತ್ತಿ ಎಂಬ ಜ್ಞಾನವು ಮೊದಲು ಬರಬೇಕಾಗುತ್ತದೆ. 'ಶಬ್ದಸಮವಾಯಿಕಾರಣತ್ವಂ ಆಕಾಶತ್ವಂ' ಎಂದು ಹೇಳುವುದಿಲ್ಲ. ಶಬ್ದಾಶ್ರಯತ್ವಂ ಆಕಾಶತ್ವಂ ಎಂದು ಹೇಳುತ್ತೇವೆ. ಆಕಾಶವು ಶಬ್ದಕ್ಕೆ ಆಶ್ರಯ ವೆಂದು ಹೇಳಿದಾಗ ಅದು ಶಬ್ದಪೂರ್ವವೃತ್ತಿ ಎಂಬ ಜ್ಞಾನಾಪೇಕ್ಷೆ ಬರುವುದಿಲ್ಲ. ಶಬ್ದಾ ಶ್ರಯತ್ವರೂಪದಿಂದ ಆಕಾಶವು ಘಟಕಾರಣವೆಂದರೆ ಅಲ್ಲಿ ಜ್ಞಾನಾಧೀನಜ್ಞಾನ ಬರುವು ದಿಲ್ಲ. ಹೀಗಿರುವಾಗ ಅನ್ಯಥಾಸಿದ್ಧತ್ವ ಹೇಳಿರುವುದು ಹೇಗೆ ? ಅಂದರೆ ಮೂರನೆಯ ಲಕ್ಷಣ ಬಾರದಿದ್ದರೂ ಐದನೆಯ ಅನ್ಯಥಾಸಿದ್ಧವಾಗುತ್ತದೆ ಎಂದು ಸಮಾಧಾನ ತೋರಿಸುತ್ತಾನೆ. 'ಪಂಚಮೀ'—ಇತಿ. ಅವಶ್ಯನಿಯತಪೂರ್ವವೃತ್ತಿಯಾದವುಗಳಿಗೆ ಕಾರಣತ್ವವು ಸಂಭವಿಸುವಾಗ ಬೇರೆ ಎಲ್ಲವೂ ಅನ್ಯಥಾ ಸಿದ್ಧಗಳಾಗುತ್ತವೆ ಎಂದು ಮುಂದೆ ಹೇಳುತ್ತಾನೆ. ಆಕಾಶವು ಅವಶ್ಯನಿಯತಪೂರ್ವವೃತ್ತಿ ಭಿನ್ನವಾಗುವುದರಿಂದ ಐದನೆಯ ಅನ್ಯಥಾಸಿದ್ಧವಾಗುತ್ತದೆ.

ವಿಚಾರಿಸಿದರೆ ಶಬ್ದಾಶ್ರಯತ್ವರೂಪದಿಂದ ಆಕಾಶಕ್ಕೆ ಘಟಕಾರಣತ್ವ ಹೇಳಿದರೂ ಮೂರನೆಯ ಲಕ್ಷಣವೇ ಅಲ್ಲಿ ಬರುತ್ತದೆ. ಶಬ್ದವು ದ್ರವ್ಯಜನ್ಯವೆಂಬುದು ಅನುಮಾನ ದಿಂದ ಸಿದ್ಧವಾಗಬೇಕು. 'ಶಬ್ದಃ—ದ್ರವ್ಯಜನ್ಯಃ—ಜನ್ಯಗುಣತ್ವಾತ್' ಎಂದು ಅನು ಮಾನಾಕಾರ. ಹೀಗೆ ದ್ರವ್ಯಜನ್ಯತ್ವಸಿದ್ಧವಾದ ಮೇಲೆ 'ಶಬ್ದಃ—ದ್ರವ್ಯಾಶ್ರಿತಃ—ಗುಣ ತ್ವಾತ್' ರೂಪವತ್ ಎಂಬ ಅನುಮಾನದಿಂದ ಅದು ದ್ರವ್ಯವನ್ನೇ ಆಶ್ರಯಿಸಿರುತ್ತದೆಂದು ಸಿದ್ಧವಾಗುತ್ತದೆ. ಆ ದ್ರವ್ಯ ಯಾವುದು ? ಆಕಾಶವೇ. ಈ ಅನುಮಾನದಲ್ಲಿ ಅಪ್ರ ಯೋಜಕತ್ವಶಂಕಾ ಮಾಡಿದರೆ (ಅಂದರೆ ವ್ಯಭಿಚಾರಿತ್ವಶಂಕಾ. 'ಹೇತುಃಸ್ತು, ಸಾಧ್ಯಂಮಾಸ್ತು' ಎಂದು ಹೇಳಿದರೆ ಪ್ರಕೃತ ಹೇತುವಿಗೆ ಸಾಧ್ಯಸಾಧನಸಾಮರ್ಥ್ಯ ವಿಲ್ಲವೆಂದಾಗುತ್ತದೆ.) ಆಗ ಕಾರ್ಯಕಾರಣ ಭಾವರೂಪವಾದ ಅನುಕೂಲತರ್ಕವನ್ನು ಹೇಳಬೇಕು. ದ್ರವ್ಯಾಶ್ರಿತತ್ವವಿಲ್ಲದೇ ಹೋದರೆ ಗುಣತ್ವವೂ ಇಲ್ಲದೇ ಹೋಗಬೇಕು. ಶಬ್ದಕ್ಕೆ ಆಕಾಶವು ಕಾರಣವಾದುದರಿಂದ ಆಕಾಶವು ಇಲ್ಲದೇ ಹೋದರೆ ಶಬ್ದವೂ ಇಲ್ಲದೇ ಹೋಗಬೇಕಾಗುತ್ತದೆ. ಆದರೆ ಹಾಗಿಲ್ಲ. ಹೀಗೆ ಕಾರ್ಯಕಾರಣಭಾವ ಹೇಳುವುದಾದರೆ ಆಗ ಹಿಂದೆ ಹೇಳಿದ ಜ್ಞಾನ ಅಂದರೆ 'ಆಕಾಶಂ ಶಬ್ದಪೂರ್ವವೃತ್ತಿ' ಎಂಬ ಜ್ಞಾನ ಬಂದೇ

ಬರುತ್ತದೆ. ಈ ಜ್ಞಾನ ಬಂದಮೇಲೆ ಘಟಪೂರ್ವವೃತ್ತಿ ಎಂಬ ಜ್ಞಾನ ಬರುವುದರಿಂದ 'ಜ್ಞಾನಾಧೀನಜ್ಞಾನವಿಶೇಷ್ಯತ್ವ'ರೂಪವಾದ ಮೂರನೆಯ ಅನ್ಯಥಾಸಿದ್ಧದಲಕ್ಷಣ ಬಂದೇ ಬರುತ್ತದೆ. ಇದನ್ನೂ ಕೆಲವರು ವಾರಣೆ ಮಾಡುತ್ತಾರೆ. ಯಥಾಶ್ರುತವಾಗಿ ಹೀಗೆ ಹೇಳಿದರೆ ಅಂದರೆ ಶಬ್ದ ಪೂರ್ವವೃತ್ತಿತ್ವಘಟಿತಲಕ್ಷಣ ಹೇಳಿದರೆ ಅಪೂರ್ವವನ್ನು ಕುರಿತು ಯಾಗಕ್ಕೂ ಅನ್ಯಥಾಸಿದ್ಧತ್ವ ಬರಬೇಕಾಗುತ್ತದೆ. ಯಾಗದಿಂದ ಅಪೂರ್ವ (ಪುಣ್ಯ ವಿಶೇಷ)ವುಂಟಾಗಿ ಅದರಿಂದ ಸ್ವರ್ಗಫಲ ಸಿಗುತ್ತದೆಂದು ಮೀಮಾಂಸಕರ ಸಿದ್ಧಾಂತ. ಈಗ ಯಾಗವು ಸ್ವರ್ಗಪೂರ್ವವೃತ್ತಿ ಎಂದು ತಿಳಿದಮೇಲೆಯೇ ಅಪೂರ್ವ ಪೂರ್ವವೃತ್ತಿ ಎಂಬ ಜ್ಞಾನ ಬರುವುದರಿಂದ ಯಾಗವು ಅನ್ಯಥಾಸಿದ್ಧವಾಗಬೇಕಾಗುತ್ತದೆ. ಆದುದರಿಂದ ಯಾಗಕ್ಕೆ ಸ್ವರ್ಗಪೂರ್ವವೃತ್ತಿತ್ವ ಘಟಿತ ಲಕ್ಷಣವನ್ನು ಹೇಳಬಾರದು. ಕೇವಲ ಯಾಗ ತ್ವೇನ ಕಾರಣ ಹೇಳಬೇಕು. ಆಗ ಅನ್ಯಥಾ ಸಿದ್ಧವಾಗುವುದಿಲ್ಲ. ಹಾಗೆ ಇಲ್ಲಿ ಕೇವಲ ಆಕಾಶತ್ವೇನ (ಶಬ್ದಾಶ್ರಯತ್ವೇನ) ಘಟಕಾರಣವೆಂದರೆ ಆಗ ಜ್ಞಾನಾಧೀನಜ್ಞಾನವು ಬರುವುದಿಲ್ಲ. ಆಗ ಲಕ್ಷಣ. "ಪ್ರಕೃತ ಕಾರ್ಯನಿರೂಪಿತ ನಿಯತಪೂರ್ವವೃತ್ತಿತ್ವಪ್ರಕಾರಕ ಜ್ಞಾನವಿಶೇಷ್ಯತಾವಚ್ಛೇದಕಂ ಯತ್ (ಅನ್ಯನಿರೂಪಿತ ಪೂರ್ವವೃತ್ತಿತ್ವಂ) ತತ್ಕತ್ವಂ'. (ಸ್ವರ್ಗಸಾಧನತ್ವೇನ ಯಾಗವು ಅಪೂರ್ವವನ್ನು ಕುರಿತು ಅನ್ಯಥಾಸಿದ್ಧವಾದರೂ ಯಾಗತ್ವರೂಪದಿಂದ ಆಗುವುದಿಲ್ಲ.) ಆಕಾಶತ್ವರೂಪದಿಂದ ಆಕಾಶವು ಘಟಕಾರಣ ವೆಂದಾಗ ಮೂರನೆಯ ಲಕ್ಷಣವು ಬಾರದಿದ್ದರೂ ಹಿಂದೆ ಹೇಳಿದಂತೆ ಐದನೆಯ ಲಕ್ಷಣ ಬರುವುದರಿಂದ ಅದು ಅನ್ಯಥಾಸಿದ್ಧವೇ ಆಗುತ್ತದೆ.

ಕಾರಣಪ್ರಸಂಗದಿಂದ ಆಕಾಶದಲ್ಲಿರುವ ಕಾರಣತೆಯಲ್ಲಿ ಅವಚ್ಛೇದಕ ಯಾವುದು ಎಂದು ನಿರ್ಣಯಿಸಲು ಆಶಂಕಿಸುತ್ತಾನೆ. 'ನನು'–ಇತಿ. ಶಬ್ದಕ್ಕೆ ಆಕಾಶವು ಸಮ ವಾಯಿಕಾರಣವೆಂದರೆ ಆಗ ಕಾರಣತಾ ಆಕಾಶದಲ್ಲಿ ಇರುತ್ತದೆ. ಕಾರಣತಾ ಎಂದ ಮೇಲೆ ಅದು ಯಾವುದಾದರೊಂದು ಅವಚ್ಛೇದಕದಿಂದ ಕೂಡಿರಲೇ ಬೇಕು. ಆಕಾ ಶತ್ವವೇ ಕಾರಣತಾವಚ್ಛೇದಕವೆಂದರೆ ಆಕಾಶತ್ವವು ಶಬ್ದ ಸಮವಾಯಿಕಾರಣತ್ವವಾಗು ತ್ತದೆ; ಆಗ ಸ್ವಾವಚ್ಛೇದಕವು ತಾನೇ ಆಗುತ್ತದೆ. ತನಗೆ ತಾನು ಅವಚ್ಛೇದಕವಾಗ ಲಾರದು. ಅವಚ್ಛೇದ್ಯ ಅವಚ್ಛೇದಕ ಭಾವವು ಯಾವಾಗಲೂ ಭಿನ್ನಸ್ವರೂಪದಿಂದಲೇ ಇರುತ್ತದೆ. ಆದಕ್ಕೋಸ್ಕರ ಕವತ್ವ, ಗವತ್ವ ಮುಂತಾದವುಗಳು ಆಕಾಶದಲ್ಲಿರುವ ಕಾರಣತಾವಚ್ಛೇದಕಗಳಾಗುತ್ತವೆ. ಕಃ—ಕಕಾರಃ ಸಮವಾಯೇನ ವಿದ್ಯತೇ ಅಸ್ಮಿನ್ ಇತಿ ಕವತ್. ಕಕಾರಾದಿ ವರ್ಣಗಳುಳ್ಳದ್ದು ಆಕಾಶ. ತಸ್ಯಭಾವಃ ಕವತ್ವಮ್. ಈಗ ಕಾರಣತಾ ನಿರವಚ್ಛಿನ್ನವಾಗುವುದಿಲ್ಲ. ಕವತ್ವಾವಚ್ಛಿನ್ನಾ, ಆಕಾಶನಿಷ್ಠ ಕಾರಣತಾ ಎಂದು ಸ್ಪಷ್ಟವಾಗಿ ಹೇಳಬಹುದು. ಹೀಗೆ ಹೇಳಿದರೆ ಗೌರವ ಬರುತ್ತದೆ. ವರ್ಣಗಳು ಅನೇಕವಾದುದರಿಂದ ಅವುಗಳಿಂದ ಅವಚ್ಛೇದಕತ್ವವು ಕೂಡಿದ್ದರೆ ಶರೀರಕೃತ ಗೌರವ ಬರುತ್ತದೆ. ಅದೂ ಅಲ್ಲದೆ ಕವತ್ವಾವಚ್ಛಿನ್ನವೋ, ಗವತ್ವಾವಚ್ಛಿನ್ನವೋ ಎಂಬುದರಲ್ಲಿ ವಿನಿಗಮನಾ ಇಲ್ಲ. ಇದರಿಂದಲೇ ಅವಿಚ್ಛಿನ್ನವಾದದ್ದು ಕಾರಣತಾ ಎಂಬು

ದರಲ್ಲಿ ಯುಕ್ತಿ ಇಲ್ಲ. ಆದುದರಿಂದ ಮತಾಂತರ ತೋರಿಸುತ್ತಾನೆ. 'ವಿಶೇಷ ಪದಾರ್ಥೋವಾ' ಇತಿ. ಆಕಾಶದಲ್ಲಿರುವ ಕಾರಣತೆಯಲ್ಲಿ ಅವಚ್ಛೇದಕವಾದದ್ದು ಒಂದು ವಿಶೇಷವಾದ ಪದಾರ್ಥ. ಆಕಾಶನಿಷ್ಠಕಾರಣತಾ ವಿಶೇಷ ಪದಾರ್ಥಾವಚ್ಛಿನ್ನಾ. ಅವಚ್ಛೇದಕ ಹೇಳದಿದ್ದರೆ ಇತರ ಕಾರಣತಾವ್ವೈಲಕ್ಷಣ್ಯ (ಇತರ ವ್ಯಾವೃತ್ತಿ) ಈ ಕಾರಣತೆಯಲ್ಲಿ ಕಂಡುಹಿಡಿಯುವುದು ಹೇಗೆ? ಈಗ ಈ ವಿಶೇಷ ಪದಾರ್ಥಕ್ಕೆ ಅವಚ್ಛೇದಕತ್ವ ಹೇಳಿರುವುದರಿಂದ ಆಕಾಶದಲ್ಲಿರುವ ಕಾರಣತಾ ಎಂಬುದು ದಂಡಾದಿಗಳಲ್ಲಿರುವ ಕಾರಣತೆಗಳಿಗಿಂತ ಬೇರೆಯಾದುದು ಎಂದು ತಿಳಿಯುತ್ತದೆ. ವಿಶೇಷಪದಾರ್ಥಾವಚ್ಛಿನ್ನಕಾರಣತೆಯು ಆಕಾಶದಲ್ಲಿ ಮಾತ್ರ ಇರುತ್ತದೆ. ಈ ಆಕಾಶವು ಶಬ್ದಜನಕತ್ವರೂಪದಿಂದ ಘಟಕಾರಣವೆಂದರೆ ಮೂರನೆಯ ಅನ್ಯಥಾಸಿದ್ಧವೂ ಆಕಾಶತ್ವರೂಪದಿಂದ ಘಟಕಾರಣವೆಂದರೆ ಐದನೆಯ ಅನ್ಯಥಾಸಿದ್ಧವೂ ಆಗುತ್ತದೆ.

## ನಾಲ್ಕನೆಯ ಅನ್ಯಥಾಸಿದ್ಧ

**ಜನಕಂ ಪ್ರತಿ ಪೂರ್ವವೃತ್ತಿತಾಮಪರಿಜ್ಞಾಯ ನ ಯಸ್ಯ ಗೃಹ್ಯತೇ ||**

**ಚತುರ್ಥಮನ್ಯಥಾಸಿದ್ಧಮಾಹ– ಜನಕಂ ಪ್ರತೀತಿ । ಯತ್ಕಾರ್ಯಜನಕಂ ಪ್ರತಿ ಪೂರ್ವವೃತ್ತಿತ್ವಂ ಗೃಹೀತ್ವೈವ ಯಸ್ಯ ಯತ್ಕಾರ್ಯಂ ಪ್ರತಿ ಪೂರ್ವವೃತ್ತಿತ್ವಂ ಗೃಹ್ಯತೇ ತಸ್ಯ ತತ್ಕಾರ್ಯಂ ಪ್ರತ್ಯನ್ಯಥಾಸಿದ್ಧತ್ವಮ್ । ಯಥಾ ಕುಲಾಲಪಿತುರ್ಘಟಂ ಪ್ರತಿ । ತಸ್ಯ ಹಿ ಕುಲಾಲಪಿತೃತ್ವೇನ ಘಟಂ ಪ್ರತಿ ಜನಕತ್ವೇ ಏವಾನ್ಯಥಾಸಿದ್ಧಿಃ । ಕುಲಾಲತ್ವೇನ ಜನಕತ್ವೇ ತ್ವಿಷ್ಟಾಪತ್ತೇಃ, ಕುಲಾಲಮಾತ್ರಸ್ಯ ಘಟಂ ಪ್ರತಿ ಜನಕತ್ವಾತ್ ||**

'ಜನಕಂ'—ಎಂಬುದರಿಂದ ನಾಲ್ಕನೆಯ ಅನ್ಯಥಾಸಿದ್ಧವನ್ನು ತೋರಿಸುತ್ತಾನೆ. ಯಾವ ಕಾರ್‍ಯದ ಕಾರಣವನ್ನು ಕುರಿತು ಪೂರ್ವಭಾವವು ತಿಳಿದ ಮೇಲೆಯೇ ಯಾವುದಕ್ಕೆ (ಅಂದರೆ ಕುಂಬಾರನ ತಂದೆ) ಯಾವ ಕಾರ್‍ಯವನ್ನು ಕುರಿತು ಪೂರ್ವಭಾವವು ಜ್ಞಾತವಾಗುವುದೋ ಅದಕ್ಕೆ ಆ ಕಾರ್‍ಯವನ್ನು ಕುರಿತು ಅನ್ಯಥಾಸಿದ್ಧತ್ವ ಬರುತ್ತದೆ ಒಂದು ಕಾರ್‍ಯವನ್ನು ಕುರಿತು ಪೂರ್ವವೃತ್ತಿಯೆಂದು ತಿಳಿದಮೇಲೆ ಅದು ಇನ್ನೊಂದು ಕಾರ್‍ಯವನ್ನು ಕುರಿತು ಪೂರ್ವವೃತ್ತಿಯೆಂದು ಜ್ಞಾನ ಬಂದರೆ ಆಗ ಅದು ನಾಲ್ಕನೆಯ ಅನ್ಯಥಾಸಿದ್ಧವಾಗುತ್ತದೆ. ಕುಂಬಾರನ ತಂದೆ ಘಟವನ್ನು ಕುರಿತು ಕಾರಣವೆಂದರೆ ಈ ನಾಲ್ಕನೆಯ ಅಸಿದ್ಧತ್ವ ಬರುತ್ತದೆ. ಕುಂಬಾರನ ತಂದೆಯು ಕುಂಬಾರನಿಗೆ ಕಾರಣ (ಅವನಿಂದ ಪೂರ್ವವೃತ್ತಿ) ವೆಂದು ತಿಳಿದಮೇಲೆಯೇ ಘಟಕಾರಣ (ಘಟ ಪೂರ್ವವೃತ್ತಿ] ವೆಂದು ತಿಳಿಯುವುದರಿಂದ ಈ ಲಕ್ಷಣ ಅವನಲ್ಲಿ ಬರುತ್ತದೆ. ಸ್ವಜನ್ಯತಾ ನಿರೂಪಿತ ಜನಕತಾನಿರೂಪಿತಜನಕತಾವತ್ವಂ' ಎಂದು ಲಕ್ಷಣ. ಸ್ವಜನ್ಯ–ಘಟ. ಜನ್ಯತಾ ಘಟದಲ್ಲಿದೆ. ಜನ್ಯತಾನಿರೂಪಿತ ಜನಕತಾ ಕುಲಾಲನಲ್ಲಿದೆ. ತನ್ನಿರೂಪಿತ ಜನಕತಾ ಕುಲಾಲನ ತಂದೆಯಲ್ಲಿದೆ ಕೆಲವರು 'ಕಾಲಿಕಸಂಬಂಧಾವಚ್ಛಿನ್ನಕಾರಣತ್ವಂ' ಎಂದು

ಲಕ್ಷಣ ಹೇಳುತ್ತಾರೆ. ಯಾವ ಎರಡು ವಸ್ತುಗಳಿಗೆ ಕಾರ್ಯಕಾರಣಭಾವ ತೋರುತ್ತದೆಯೋ ಅವುಗಳ ಅಭಾವಗಳಿಗೆ ಪ್ರಯೋಜ್ಯಪ್ರಯೋಜಕ ಭಾವ ತೋರುತ್ತದೆ. ದಂಡಘಟಗಳಿಗೆ ಕಾರ್ಯಕಾರಣಭಾವವಿದ್ದರೆ ದಂಡಾಭಾವಘಟಾಭಾವಗಳಿಗೆ ಪ್ರಯೋಜ್ಯ ಪ್ರಯೋಜಕಭಾವವಿರುತ್ತದೆ. ಹಾಗೆ ಮೂಲದಲ್ಲಿ 'ಯಾವುದರಪೂರ್ವಭಾವಗೃಹೀತವಾಗದೆಯೇ ಯಾವುದರ ಪೂರ್ವಭಾವವು ಗೃಹೀತವಾಗುವುದಿಲ್ಲವೋ' ಎಂದು ಅಭಾವ ಮುಖದಿಂದ ಹೇಳಿರುವುದರಿಂದ ಅವುಗಳಿಗೆ ಪ್ರಯೋಜ್ಯ ಪ್ರಯೋಜಕಭಾವ ತೋರುತ್ತದೆ. ಪರಿಷ್ಕೃತ ಲಕ್ಷಣ. "ಯತ್ಕಾರ್ಯಜನಕ ನಿರೂಪಿತ ನಿಯತಪೂರ್ವವೃತ್ತಿತ್ವ ಪ್ರಕಾರಕ ಜ್ಞಾನೋತ್ತರಕಾಲೀನ ಯತ್ಕಾರ್ಯ ನಿರೂಪಿತನಿಯತಪೂರ್ವವೃತ್ತಿತ್ವ ಪ್ರಕಾರಕ ಗ್ರಹೀಯವಿಶೇಷ್ಯತ್ವಮ್" 'ಕುಲಾಲಜನಕಃ ಕುಲಾಲಪೂರ್ವವೃತ್ತಿಃ' ಎಂಬ ಜ್ಞಾನ ವುಂಟಾಗಿರಬೇಕು. ಕುಲಾಲ ಜನಕತ್ವೇನ ಕಾರಣವೆಂದರೆ ಕುಲಾಲನಿಗೆ ಕಾರಣ ವೆಂಬ ಜ್ಞಾನ ಬಂದಿರುತ್ತದೆ. ಹೀಗೆ ಲಕ್ಷಣ ಹೇಳಿದರೆ ಹಿಂದಿನ (೩ನೇಯ) ಲಕ್ಷಣಕ್ಕೂ ಇದಕ್ಕೂ ವ್ಯತ್ಯಾಸವೇನು ? ಎರಡೂ ಒಂದೇ ಆಗುತ್ತದೆ ಎಂದು ಆಶಂಕಿಸ ಬಹುದು. ಆದರೆ ಸ್ವಲ್ಪ ವ್ಯತ್ಯಾಸವಿದ್ದೇ ಇದೆ. ಹಿಂದಿನ ಅನ್ಯಥಾಸಿದ್ಧ ಫಲಾನನುಗುಣವಾಗಿದೆ. ಎಂದೂ ಕಾರ್ಯಜನಕವಾಗುವುದಿಲ್ಲ. ಇದು ಫಲಾನುಗುಣವಾಗಿದೆ. 'ಕುಲಾಲಜನಕನು ಕುಲಾಲಜನಕತ್ವ ರೂಪದಿಂದ ಘಟಕ್ಕೆ ಕಾರಣವೆಂದರೆ ಆಗ ಅನ್ಯಥಾಸಿದ್ಧನಾಗುತ್ತಾನೆ. ಕುಲಾಲತ್ವರೂಪದಿಂದ ಜನಕನೆಂದರೆ ಆಗ ಅನ್ಯಥಾಸಿದ್ಧನಲ್ಲ. ಆಗ ಘಟಕಾರಣತ್ವ ಅವನಲ್ಲಿ ಸಂಭವಿಸುತ್ತದೆ.

## ಐದನೇಯ ಅನ್ಯಥಾಸಿದ್ಧ

**ಅತಿರಿಕ್ತಮಥಾಪಿ ಯದ್ಭವೇನ್ನಿಯತಾವಶ್ಯಕಪೂರ್ವಭಾವಿನಃ ॥ ೨೦ ॥**

**ಪಂಚಮಮನ್ಯಥಾಸಿದ್ಧಮಾಹ–ಅತಿರಿಕ್ತಮಿತಿ । ಅವಶ್ಯಕ್ಲೃಪ್ತನಿಯತ ಪೂರ್ವವರ್ತಿನ ಏವ ಕಾರ್ಯಸಂಭವೇ ತದ್ಭಿನ್ನಮನ್ಯಥಾಸಿದ್ಧಮಿತ್ಯರ್ಥಃ ॥ ಅತ ಏವ ಪ್ರತ್ಯಕ್ಷೇ ಮಹತ್ತ್ವಂ ಕಾರಣಮ್, ಅನೇಕ ದ್ರವ್ಯತ್ವಮನ್ಯಥಾ ಸಿದ್ಧಮ್ । ತತ್ರ ಹಿ ಮಹತ್ತ್ವಮವಶ್ಯಂ ಕ್ಲಪ್ತಂ ತೇನಾನೇಕದ್ರವ್ಯತ್ವ ಮನ್ಯಥಾಸಿದ್ಧಮ್ । ಸ ಚ ವೈಪರೀತ್ಯೇ ಕಿಂ ವಿನಿಗಮಕಮಿತಿ ವಾಚ್ಯಮ್? ಮಹತ್ತ್ವಜಾತೇಃ ಕಾರಣತಾವಚ್ಛೇದಕತ್ವೇ ಲಾಘವಾತ್ ॥ ೨೦ ॥**

ಐದನೆಯ ಅನ್ಯಥಾಸಿದ್ಧವನ್ನು ತೋರಿಸುತ್ತಾನೆ. 'ಅತಿರಿಕ್ತಂ—ಇತಿ. ಆವಶ್ಯಕಕ್ಲೃಪ್ತನಿಯತ ಪೂರ್ವವರ್ತಿಯಾಗಿರುವುದರಿಂದಲೇ ಕಾರ್ಯಸಂಭವಿಸುವಾಗ ಅದಕ್ಕಿಂತ ಬೇರೆಯಾಗಿರುವುದೆಲ್ಲಾ ಅನ್ಯಥಾಸಿದ್ಧವಾಗುತ್ತದೆ. ನಿಯತವೆಂದರೆ ವ್ಯಾಪಕ. ಆವಶ್ಯಕವೆಂದರೆ ಯಾವುದಿಲ್ಲವಾದರೆ ಕಾರ್ಯವಾಗುವುದಿಲ್ಲವೋ ಅದು. ನಿಯತ, ಆವಶ್ಯಕ, ಪೂರ್ವಭಾವೀ ಇವುಗಳಿಗೆ ಕರ್ಮಧಾರಯ. 'ನಿಯತಾವಶ್ಯಕಪೂರ್ವಭಾವಿ

ಭಿನ್ನತ್ವಂ' ಲಕ್ಷಣ. ಪರಿಷ್ಕೃತಲಕ್ಷಣ.—'ಪ್ರಕೃತಕಾರ್ಯನಿರೂಪಿತಲಘುಧರ್ಮಾವಚ್ಛಿನ್ನನಿಯತಪೂರ್ವವೃತ್ತಿತಾವದ್ಭಿನ್ನತ್ವಮ್' ಪ್ರಕೃತಕಾರ್ಯ—ಘಟಃ ಘಟನಿರೂಪಿತ ಪೂರ್ವವೃತ್ತಿತಾ. ರಾಸಭಾದಿಗಳಲ್ಲಿಯೂ ಇದೆ. ರಾಸಭದಲ್ಲಿ ನಿಯತಪೂರ್ವವೃತ್ತಿತ್ವವಿಲ್ಲ. ದಂಡರೂಪಾದಿಗಳಲ್ಲಿ ನಿಯತಪೂರ್ವವೃತ್ತಿತ್ವ ಬಂದರೂ ಲಘುಧರ್ಮಾವಚ್ಛಿನ್ನತ್ವವಿಲ್ಲ. ರಾಸಭ ( ಕತ್ತೆ ) ದಲ್ಲಿ ಸಮನ್ವಯ. ಕೆಲವು ಘಟವನ್ನು ಕುರಿತು ರಾಸಭವು ಕಾರಣವಾಗಬಹುದು. ಒಬ್ಬ ಕುಂಬಾರನು ಮಣ್ಣನ್ನು ರಾಸಭದ ಮೇಲೆ ಹೇರಿ ತರುವುದಾದರೆ ಘಟಕ್ಕೆ ದಂಡಕಾರಣವಾದಂತೆ ರಾಸಭವೂ ಕಾರಣವಾಗಬಹುದು. ಆಗ ತತ್‌ಘಟನಿರೂಪಿತಲಘುಧರ್ಮಾವಚಿನ್ನಪೂರ್ವವೃತ್ತಿತ್ವ ಬರುತ್ತದೆ. ಆದರೆ ಎಲ್ಲಾ ಘಟವನ್ನು ಕುರಿತು ಅದು ಕಾರಣವಲ್ಲ ಯಾವದ್ಘಟವ್ಯಕ್ತಿಯನ್ನು ಕುರಿತು ದಂಡ ಕಾರಣತ್ವಕ್ಕೇ ವ್ಯಾಪಕತ್ವವಿದೆ. ಯತ್ರಯತ್ರ ಘಟಃ ತತ್ರ ದಂಡಾದಿಃ, ನತು ರಾಸಭಾದಿಃ ರಾಸಭದಲ್ಲಿರುವ ಕಾರಣತೆಗೆ ವ್ಯಾಪಕತ್ವವಿಲ್ಲ. ಅಂದರೆ ಅದು ವ್ಯಭಿಚರಿತವಾಗುತ್ತದೆ. ಹೀಗಿರುವಾಗ ಯಾವ ಘಟಕ್ಕೆ ರಾಸಭಕಾರಣವೆಂದು ಹೇಳಬಹುದೋ ಅಲ್ಲಿಯೂ ನಿಯತವಾದ ದಂಡಾದಿಗಳಿಂದಲೇ ಕಾರ್ಯನಿರ್ವಾಹವಾಗುವಾಗ ಆಕಸ್ಮಿಕವಾಗಿ ಬಂದ ರಾಸಭಕ್ಕೆ ಕಾರಣತ್ವ ಹೇಳಬೇಕಾಗಿಲ್ಲ. ಅದು ಅನ್ಯಥಾಸಿದ್ಧ. ಹೀಗೆ ನಿಯತ ಪದದಿಂದ ರಾಸಭವೂ, ಆವಶ್ಯಕಪದದಿಂದ ಆಕಾಶವೂ, ಪೂರ್ವವೃತ್ತಿಪದದಿಂದ ಘಟವೂ, ಘಟವನ್ನು ಕುರಿತು ಅನ್ಯಥಾಸಿದ್ಧವಾಗುತ್ತವೆ. ಘಟತ್ವಾವಚ್ಛಿನ್ನಕಾರ್ಯತಾನಿರೂಪಿತ ಕಾರಣತಾ ಅವುಗಳಲ್ಲಿ ಸಂಭವಿಸುವುದಿಲ್ಲ. ಈ ಐದನೆಯ ಅನ್ಯಥಾಸಿದ್ಧಿಲಕ್ಷಣವು ಹಿಂದೆ ಹೇಳಿದ ನಾಲ್ಕರಲ್ಲಿಯೂ ಸಂಭವಿಸುವುದರಿಂದ ಅವೆಲ್ಲವೂ ಇದರಿಂದಲೇ ಗತಾರ್ಥವಾಗುವಾಗ ಬೇರೆ ಹೇಳಿರುವುದೇಕೆ ? ಎಂದು ಶಂಕೆ ಬರುತ್ತದೆ. ನಿಯತಾವಶ್ಯಕ ಪೂರ್ವಭಾವಿಯಿಂದಲೇ ಕಾರ್ಯನಿರ್ವಾಹವಾಗುವಾಗ ಅವುಗಳಿಗಿಂತ ಬೇರೆಯಾಗಿರುವುದು ಕಾರಣವಲ್ಲವೆಂದರೆ ದಂಡಾದಿಗಳಿಂದಲೇ ಘಟಾದಿಕಾರ್ಯನಿರ್ವಾಹವಾಗುವಾಗ ದಂಡತ್ವ, ದಂಡರೂಪ, ಆಕಾಶ, ಕುಂಬಾರನ ತಂದೆ ಇವೆಲ್ಲಾ ದಂಡಾದಿಭಿನ್ನಗಳಾಗುವುದರಿಂದ ಅನ್ಯಥಾಸಿದ್ಧಗಳಾಗುತ್ತವೆ. ಇವುಗಳನ್ನು ಬೇರೆ ಹೇಳಿದ್ದು ವ್ಯರ್ಥವೆಂದು ಕಂಡರೂ ಶಿಷ್ಯನು ವಿಶದವಾಗಿತಿಳಿಯಲಿ ಎಂಬ ಉದ್ದೇಶದಿಂದ ಹೇಳಿರುವುದರಿಂದ ಇಲ್ಲಿ ದೋಷಶಂಕೆ ಮಾಡಬಾರದು.

ಇಲ್ಲಿ ಪ್ರಾಚೀನರು 'ಅನ್ಯತ್ರ ಕ್ಲಪ್ತನಿಯತಪೂರ್ವವೃತ್ತಿತಾವದ್ಭಿನ್ನತ್ವಮ್' ಎಂಬ ಲಕ್ಷಣ ಹೇಳುತ್ತಾರೆ. ಇದು ದೋಷಗ್ರಸ್ತವಾಗುವುದರಿಂದ ಅದನ್ನು ಬಿಟ್ಟು 'ಲಘುಧರ್ಮಾವ....ನ್ನತ್ವಂ' ಎಂದು ಲಕ್ಷಣ ಹೇಳಿದೆ. 'ಅತ ಏವ—' ಇತಿ. ಪ್ರಾಚೀನ ಲಕ್ಷಣವನ್ನು ಬಿಟ್ಟು ಈ ರೀತಿ ಪರಿಷ್ಕರಿಸಿ ಹೇಳಿರುವುದರಿಂದಲೇ ಪ್ರತ್ಯಕ್ಷಕ್ಕೆ ಮಹತ್ತ್ವವು ಕಾರಣವೆಂದೂ ಅನೇಕದ್ರವ್ಯತ್ವವು ಅನ್ಯಥಾಸಿದ್ಧವೆಂದೂ ಸಿದ್ಧವಾಗುತ್ತದೆ. ಮಹತ್ತ್ವವು ಅವಶ್ಯಕ್ಲಪ್ತನಿಯತಪೂರ್ವಭಾವಿಯಾಗಿರುತ್ತದೆ. ಆದುದರಿಂದ ಮಹತ್ತ್ವತ್ವಾವಚ್ಛಿನ್ನಂ ಕಾರಣಮ್' ಎಂದು ಸಿದ್ಧಾಂತ. ಅನೇಕದ್ರವ್ಯತ್ವವೆಂದರೆ ಅನೇಕದ್ರವ್ಯ

ಸಮವೇತತ್ವನ್. ಅಥವಾ ಅಣುಪರಿಮಾಣವದ್ವ್ಯಭಿನ್ನದ್ರವ್ಯತ್ವನ್. ಕೆಲವರು 'ಮಹತ್ತ್ವದ್ರವ್ಯತ್ವಉಭಯಾವಚ್ಛಿನ್ನತ್ವಂ ಅನೇಕದ್ರವ್ಯತ್ವಂ' ಎನ್ನುತ್ತಾರೆ. ನಮಗೆ ಪ್ರತ್ಯಕ್ಷವಾಗಬೇಕಾದರೆ ಮಹತ್ಪರಿಮಾಣವಿದ್ದರೆ ಸಾಕು. ಮಹತ್ತ್ವದ್ರವ್ಯತ್ವೋಭಯಾವಚ್ಛಿನ್ನತ್ವಜ್ಞಾನಬೇಕಾಗಿಲ್ಲ. ಅದು ಇಲ್ಲದಿದ್ದರೂ ಕೇವಲ ಮಹತ್ತ್ವದೃಷ್ಟವಾದರೆ ವಸ್ತುಪ್ರತ್ಯಕ್ಷವಾಗುತ್ತದೆ. ಅನೇಕದ್ರವ್ಯತ್ವವೇಕಾರಣವಾಗಲಿ, ಮಹತ್ತ್ವವು ಅನ್ಯಥಾಸಿದ್ಧವಾಗಲಿ ಎಂದು ವಿರುದ್ಧವಾಗಿ ಹೇಳಿದರೆ ದೋಷವೇನು ? ಎಂಬುದಕ್ಕೆ ಸಮಾಧಾನ ತೋರಿಸುತ್ತಾನೆ. 'ನಚ—' ಇತಿ. ವಿನಿಗಮಕ—ಈ ಪಕ್ಷವನ್ನೇ ಆಶ್ರಯಿಸಬೇಕೆಂಬುದರಲ್ಲಿ ಯುಕ್ತಿ. ಯುಕ್ತಿ ಇಲ್ಲವಾದರೆ ಯಾವ ಪಕ್ಷವನ್ನಾದರೂ ಆಶ್ರಯಿಸಬಹುದು. ಇಲ್ಲಿ ಮಹತ್ತ್ವವೇ ಕಾರಣವೆಂದು ಅಂಗೀಕರಿಸಿದರೆ ಕಾರಣತಾವಚ್ಛೇದಕಲಾಘವ ಬರುತ್ತದೆ. ಅನೇಕದ್ರವ್ಯತ್ವವು ಪ್ರತ್ಯಕ್ಷದಲ್ಲಿ ಕಾರಣವೆಂದರೆ ಅನೇಕದ್ರವ್ಯತ್ವತ್ವವು ಕಾರಣತಾವಚ್ಛೇದಕವಾಗುತ್ತದೆ. ಇದು ಮಹತ್ತ್ವತ್ವಕ್ಕಿಂತ ಗುರುವಾಗುತ್ತದೆ. ಲಾಘವದಲ್ಲಿ ಮೂರು ವಿಧಗಳಿವೆ. ಇಲ್ಲಿ ಮಹತ್ತ್ವತ್ವವು ಜಾತಿರೂಪವಾದುದರಿಂದ ಶರೀರಕೃತಲಾಘವ ಬರುತ್ತದೆ. ಈ ಲಾಘವವೇ ಮಹತ್ತ್ವತ್ವಕಾರಣವೆಂಬುದರಲ್ಲಿ ವಿನಿಗಮಕವಾಗುತ್ತದೆ.

ಅನೇಕದ್ರವ್ಯತ್ವವು ಪ್ರತ್ಯಕ್ಷಕ್ಕೆ ಕಾರಣವೆಂದರೆ ದ್ವ್ಯಣುಕವೂ ಪ್ರತ್ಯಕ್ಷವಾಗಬೇಕಾಗುತ್ತದೆ. ದ್ವ್ಯಣುಕದಲ್ಲಿ ಅಣುಪರಿಮಾಣವದ್ವ್ಯಭಿನ್ನದ್ರವ್ಯತ್ವರೂಪವಾದ ಅನೇಕದ್ರವ್ಯತ್ವವಿದೆ. ಆದುದರಿಂದ ಅದು ಎಲ್ಲಾ ಕಡೆಯಲ್ಲಿ ಕಾರಣವಾಗುವುದಿಲ್ಲ. ಮಹತ್ತ್ವಕ್ಕೆ ಕಾರಣತ್ವ ಹೇಳಿದರೆ ದ್ವ್ಯಣುಕದಲ್ಲಿ ಆಪರಿಮಾಣವಿಲ್ಲ. ಆದುದರಿಂದ ಪ್ರತ್ಯಕ್ಷವೂ ಇಲ್ಲ.

ಕೆಲವು ಕಡೆ (೨) ಉಪಸ್ಥಿತಿಕೃತವಾದ ಲಾಘವ ಬರುತ್ತದೆ. ಗಂಧವನ್ನು ಕುರಿತು ರೂಪಪ್ರಾಗಭಾವಕ್ಕಿಂತಲೂ ಗಂಧಪ್ರಾಗಭಾವವೇ ಕಾರಣವೆಂಬುದರಲ್ಲಿ ಉಪಸ್ಥಿತಿಕೃತಲಾಘವಬರುವುದರಿಂದ ಅದೇ ಕಾರಣವಾಗುತ್ತದೆ. ರೂಪಪ್ರಾಗಭಾವವು ಅನ್ಯಥಾಸಿದ್ಧವಾಗುತ್ತದೆ. ರೂಪಕ್ಕಿಂತಲೂ ಮೊದಲು ಗಂಧವೇ ಪ್ರಾಗಭಾವಕ್ಕೆ ಪ್ರತಿಯೋಗಿ ಎಂಬ ಜ್ಞಾನ ಮೊದಲು ಬರುತ್ತದೆ. ಹೀಗೆಯೇ ಘಟವನ್ನು ಕುರಿತು ದಂಡ ಕಾರಣವೆಂಬುದರಲ್ಲಿ (೩) ಸಂಬಂಧಕೃತಲಾಘವ ಬರುತ್ತದೆ. ದಂಡತ್ವಾದಿಗಳಿಗೆ ಸಂಬಂಧಕೃತಗೌರವಬರುವುದರಿಂದ ಕಾರಣತ್ವವಿಲ್ಲ. ದಂಡಕಾರಣವೆಂದರೆ ಕಾರಣತಾವಚ್ಛೇದಕಸಂಬಂಧವು ಸಂಯೋಗವಾಗುತ್ತದೆ. ಸಂಯೋಗಸಂಬಂಧದಿಂದ ಅದು ಘಟಕ್ಕೆಕಾರಣವಾಗುತ್ತದೆ. ದಂಡತ್ವಕಾರಣವೆಂದರೆ ಅಲ್ಲಿ ಸಂಬಂಧ ಸ್ವಸಮವಾಯಿಸಂಯೋಗಸಂಬಂಧವಾಗುತ್ತದೆ. (ಸ್ವಂ—ದಂಡತ್ವ. ಅದಕ್ಕೆ ಸಮವಾಯಿ—ದಂಡ. ಅದರ ಸಂಯೋಗದಿಂದ ಕಾರಣವಾಗುತ್ತದೆ.) ಸಂಬಂಧಲಾಘವದಿಂದ ದಂಡವೇ ಕಾರಣ. ದಂಡತ್ವಾದಿಗಳಲ್ಲಿ ಅವು ಅನ್ಯಥಾಸಿದ್ಧವಾಗುತ್ತವೆ. ಹೀಗೆ ಈ ಅನ್ಯಥಾಸಿದ್ಧಗಳಾಗದ ಕಾರ್ಯನಿಯತಪೂರ್ವವೃತ್ತಿಗಳಾಗಿ ಇರುವವುಗಳು ಕಾರಣ

ಗಳಾಗುತ್ತವೆ. ('ಅನ್ಯಥಾಸಿದ್ಧಿಶೂನ್ಯತ್ವೇ ಸತಿ ಕಾರ್ಯನಿಯತಪೂರ್ವವೃತ್ತಿತ್ವಮ್' ಕಾರಣಲಕ್ಷಣ.)

ಏತೇ ಪಂಚಾನ್ಯಥಾಸಿದ್ಧಾ ದಂಡತ್ವಾದಿಕಮಾದಿಮಮ್ ||
ಘಟಾದೌ ದಂಡರೂಪಾದಿ ದ್ವಿತೀಯಮಪಿ ದರ್ಶಿತಮ್ || ೨೧ ||
ತೃತೀಯಂ ತು ಭವೇದ್ವ್ಯೋಮ ಕುಲಾಲಜನಕೋಽಪರಃ ||
ಪಂಚಮೋ ರಾಸಭಾದಿಃ ಸ್ಯಾದೇತೇಷ್ವಾವಶ್ಯಕಸ್ತ್ವಸೌ || ೨೨ ||

ರಾಸಭಾದಿರಿತ । ಯದ್ಯಪಿ ಯತ್ಕಿಂಚಿದ್ಘಟವ್ಯಕ್ತಿಂ ಪ್ರತ ರಾಸಭಸ್ಯ ನಿಯತಪೂರ್ವವೃತ್ತಿತ್ವಮಸ್ತಿ, ತಥಾಪಿ ಘಟಜಾತೀಯಂಪ್ರತ ಸಿದ್ಧ ಕಾರಣಭಾವೈರ್ದಂಡಾದಿಭಿರೇವ ತದ್ವ್ಯಕ್ತೇರಪಿ ಸಂಭವೇ ರಾಸಭೋಽನ್ಯಥಾಸಿದ್ಧ ಇತಿಭಾವಃ । ಏತೇಷ್ವಿತಿ । ಏತೇಷು ಪಂಚಸ್ವನ್ಯಥಾಸಿದ್ಧೇಷು ಮಧ್ಯೇ ಪಂಚಮೋಽನ್ಯಥಾಸಿದ್ಧ ಆವಶ್ಯಕಃ, ತೇನೈವ ಪರೇಷಾಂ ಚರಿತಾರ್ಥತ್ವಾತ್ । ತಥಾಹಿ—ದಂಡಾದಿಭಿರವಶ್ಯಕ್ಲೃಪ್ತನಿಯತಪೂರ್ವವರ್ತಿಭಿರೇವ ಕಾರ್ಯಸಂಭವೇ ದಂಡತ್ವಾದಿಕಮನ್ಯಥಾಸಿದ್ಧಮ್ । ನ ಚ ವೈಪರೀತ್ಯೇ ಕಿಂ ವಿನಿಗಮಕಮಿತಿ ವಾಚ್ಯಮ್, ದಂಡತ್ವಸ್ಯ ಕಾರಣತ್ವೇ ದಂಡಘಟಿತಪರಂಪರಾಯಾಃ ಸಂಬಂಧಕಲ್ಪನೇ ಗೌರವಾತ್ । ಏವಮನ್ಯೇಷಾಮಪ್ಯನೇನೈವ ಚರಿತಾರ್ಥತ್ವಂ ಸಂಭವತೀತಿ || ೨೧, ೨೨ ||

ಕಾರಿಕೆಯಲ್ಲಿ ಕ್ರಮವಾಗಿ ಅನ್ಯಥಾಸಿದ್ಧಗಳು ಯಾವುದೆಂದು ತೋರಿಸುತ್ತಾನೆ. ಘಟರೂಪಕಾರ್ಯಕ್ಕೆ ಮೊದಲನೆಯ ಅನ್ಯಥಾಸಿದ್ಧ ದಂಡತ್ವ. ದಂಡರೂಪವು ಎರಡನೆಯ, ಆಕಾಶಾದಿಗಳು ಮೂರನೆಯ, ಕುಂಬಾರನ ತಂದೆ ನಾಲ್ಕನೆಯ, ಕತ್ತೆಯು ಐದನೆಯ ಅನ್ಯಥಾಸಿದ್ಧವಾಗುತ್ತದೆ. ರಾಸಭಾದಿಪದದಿಂದ ಗಾಡಿ ಮುಂತಾದವುಗಳನ್ನು ತೆಗೆದುಕೊಳ್ಳಬೇಕು. ಒಬ್ಬ ಕುಂಬಾರನು ಮಣ್ಣನ್ನು ಗಾಡಿಯಮೇಲೂ ತಂದು ಘಟಮಾಡಬಹುದು. ಆಗ ಗಾಡಿಯು ಘಟಕ್ಕೆ ಕಾರಣವೆಂದು ಹೇಳಬಾರದು. ದಂಡಚಕ್ರಾದಿಗಳಿಂದಲೇ ಸಂಭವಿಸುವಾಗ ಇವೆಲ್ಲಾ ಅನ್ಯಥಾ ಸಿದ್ಧಗಳಾಗುತ್ತವೆ. ಆದುದರಿಂದಲೇ ಐದನೆಯದು ಆವಶ್ಯಕವೆಂದು ಹೇಳಿದೆ. ಹಿಂದೆ ಹೇಳಿದಂತೆ ಐದನೆಯ ಲಕ್ಷಣವು ಉಳಿದ ನಾಲ್ಕರಲ್ಲಿಯೂ ಸಂಭವಿಸುವುದರಿಂದ ಇದೇ ಮುಖ್ಯವಾದದ್ದು. ರಾಸಭ, ಗಾಡಿ ಮುಂತಾದವುಗಳು ತದ್ಘಟವನ್ನು ಕುರಿತು ಕಾರಣಗಳಾಗಬಹುದು. ಅಂದರೆ ಯಾವ ಘಟವನ್ನು ಮಾಡಲು ಕುಂಬಾರನು ಮಣ್ಣನ್ನು ಇವುಗಳ ಮೂಲಕ ತಂದಿರುತ್ತಾನೆಯೋ ಆ ಘಟವನ್ನು ಕುರಿತು ಅವು ನಿಯತಪೂರ್ವಭಾವಿಗಳಾಗುವುದರಿಂದ ಕಾರಣತ್ವ ಲಕ್ಷಣ ಬರುತ್ತದೆ. ಆದರೆ ಘಟಸಾಮಾನ್ಯವನ್ನು ಕುರಿತು ಅವು ಕಾರಣಗಳಲ್ಲ. ಅಲ್ಲಿ ನಿಯತವಾದ ದಂಡಾದಿಗಳೇ ಕಾರಣಗಳಾಗುವುದರಿಂದ ರಾಸಭಾದಿಗಳು ತದ್ಘಟಸ್ಥಳ

ದಲ್ಲಿಯೂ ಅನ್ಯಥಾಸಿದ್ಧಗಳೇ ಆಗುತ್ತವೆ. ಪಂಚಮಾನ್ಯಥಾ ಸಿದ್ಧದಿಂದಲೇ ಇತರಗಳು ಗತಾರ್ಥಗಳಾಗುವುದರಿಂದ ಅದು ಮುಖ್ಯವಾಗಿದೆ. ಅವಶ್ಯನಿಯತ ಪೂರ್ವವೃತ್ತಿಯಾದ ದಂಡಾದಿಗಿಂತ ದಂಡತ್ವಾದಿಗಳು ಭಿನ್ನವಾಗಿವೆ. ದಂಡತ್ವಾದಿಗಳೇ ಕಾರಣವಾಗಲಿ, ದಂಡಾದಿಗಳು ಅನ್ಯಥಾ ಸಿದ್ಧವಾಗಲಿ ಎಂದು ವಿಪರೀತವಾಗಿ ಏಕೆ ಹೇಳಬಾರದು ? ಇದರಲ್ಲಿ ಇದೇ ಸ್ವೀಕಾರ ಮಾಡಬೇಕೆಂದು ವಿನಿಗಮಕವೇನು ? ಅಂದರೆ ಇದಕ್ಕೆ ಸಮಾಧಾನ ಹಿಂದೆಯೇ ಹೇಳಿದೆ. ಕಾರಣತಾಲಾಘವೇ ವಿನಿಗಮಕ. ದಂಡಾದಿಗಳು ಕಾರಣವೆಂಬುವರಲ್ಲಿ ಲಾಘವವಿದೆ. ದಂಡವು ಸಂಯೋಗ ಸಂಬಂಧದಿಂದ ಕಾರಣ ವಾಗುವುದರಿಂದ ಸಂಬಂಧಕೃತಲಾಘವವಿದೆ. ದಂಡದ ರೂಪ ಕಾರಣವೆಂದು ಹೇಳಿದರೆ ಸ್ವಸಮವಾಯಿಸಂಯೋಗ ಸಂಬಂಧ ಹೇಳಬೇಕಾದುದರಿಂದ ಸಂಬಂಧಗೌರವ ಬರುತ್ತದೆ. ಹೀಗೆ ಶರೀರ, ಕೃತ ಉಪಸ್ಥಿತಿಕೃತಲಾಘವಾದಿಗಳೂ ದಂಡಾದಿಗಳಿಗೆ ಕಾರಣತೆ ಹೇಳಲು ಪ್ರಯೋಜಕಗಳಾಗುತ್ತವೆ.

ಕಾರಣವು ಸಾಮಾನ್ಯವಾಗಿ ಎರಡುವಿಧ. ಕಾರ್ಯಮಾತ್ರವನ್ನು (ಸಾಮಾನ್ಯಕ್ಕೆ) ಕುರಿತು ಕಾರಣ ವೆಂದರೆ ಅದು ಸಾಧಾರಣಕಾರಣವಾಗುತ್ತದೆ. ಕಾಲಾದಿಗಳು ಕಾರ್ಯ ಸಾಮಾನಕ್ಕೆ ಕಾರಣಗಳಾಗುತ್ತವೆ. ಇವು ಸಾಧಾರಣಕಾರಣ. ಕಾರ್ಯವಿಶೇಷಕ್ಕೆ ಕಾರಣವೆಂದರೆ ಅದು ಅಸಾಧಾರಣ ಕಾರಣ. ಘಟಕ್ಕೆ ಕಪಾಲಸಂಯೋಗ, (ದಂಡಾದಿ ಗಳೂ)ಕಾರಣವೆಂದರೆ ಈ ಕಾರಣವು ಅಸಾಧಾರಣವಾಗುತ್ತದೆ. ಇದು ಸಮುದಾಯ ರೂಪವಾಗಿರುತ್ತದೆ. ದಂಡಾದಿಗಳಲ್ಲಿ ಒಂದು ಇಲ್ಲದಿದ್ದರೆ ಘಟರೂಪಕಾರ್ಯವಾಗಲಾರದು. ಇದನ್ನೇ ಕೆಲವು ಕಡೆ ದಂಡಚಕ್ರನ್ಯಾಯದಂತೆ ಎಂದು ವ್ಯವಹರಿಸುತ್ತಾನೆ. ಕೆಲವು ಕಾರಣ ಏಕವಿಶ್ರಾಂತವಾಗಿರುತ್ತದೆ. ಅಗ್ನಿಯನ್ನು ಕುರಿತು ತೃಣಾರಿಣಿ ಮಣಿಸಂಯೋಗ ಕಾರಣವಾಗುತ್ತದೆ. ಇದು ಏಕವಿಶ್ರಾಂತ. ತೃಣಾದಿಗಳಲ್ಲಿ ಒಂದು ಇದ್ದರೂ ಅಗ್ನಿ ಯಾಗುತ್ತದೆ. ಇದಕ್ಕೆ ತೃಣಾರಿಣಿ ಮಣಿನ್ಯಾಯವೆಂದು ವ್ಯವಹಾರ.

**ಸಮವಾಯಿ ಕಾರಣತ್ವಂ ದ್ರವ್ಯಸ್ಯೈವೇತಿ ವಿಜ್ಞೇಯಮ್ ||**

'ಸಮವಾಯಿಕಾರಣತ್ವಂ' ಇದು ಕೇವಲದ್ರವ್ಯದ ಸಾಧರ್ಮ್ಯವಾಗುತ್ತದೆ. 'ಸಮ ವಾಯಸಂಬಂಧಾವಚ್ಛಿನ್ನಕಾರ್ಯತಾನಿರೂಪಿತ ತಾದಾತ್ಮ್ಯಸಂಬಂಧಾವಚ್ಛಿನ್ನಕಾರಣತಾ' ಕೇವಲ ದ್ರವ್ಯದಲ್ಲಿ ಮಾತ್ರ ಬರುತ್ತದೆ.

**ಗುಣಕರ್ಮಮಾತ್ರವೃತ್ತಿ ಜ್ಞೇಯಮಥಾಪ್ಯಸಮವಾಯಿ ಹೇತು ತ್ವಮ್ || ೨೩ ||**

**ಗುಣಕರ್ಮೇತಿ । ಅಸಮವಾಯಿಕಾರಣತ್ವಂ ಗುಣಕರ್ಮ ಭಿನ್ನಾನಾಂ ವೈಧರ್ಮ್ಯಂ ನ ತು ಗುಣಕರ್ಮಣೋಃ ಸಾಧರ್ಮ್ಯಮಿತ್ಯತ್ರ ತಾತ್ಪರ್ಯಮ್ । ಅಥವಾ ಅಸಮವಾಯಿಕಾರಣವೃತ್ತಿ ಸತ್ತಾಭಿನ್ನಜಾತಿ**

**ಮತ್ವಂ ತದರ್ಥಃ। ತೇನ ಜ್ಞಾನಾದೀನಾಮಸಮವಾಯಿಕಾರಣತ್ವವಿರಹೇऽಪಿ ನ ಕ್ಷತಿಃ ॥ ೨೩ ॥**

'ಅಸಮವಾಯಿಕಾರಣತ್ವಂ' ಇದು ಗುಣಕರ್ಮಗಳಿಗೆ ಸಾಧರ್ಮ್ಯವೆಂದು ಕಾರಿಕೆಯಲ್ಲಿ ಹೇಳಿದೆ. ಗುಣಕರ್ಮಗಳು ಅಸಮವಾಯಿಕಾರಣಗಳಾಗಿರುತ್ತವೆ. ಆದರೆ ಜ್ಞಾನಾದಿ ಆತ್ಮವಿಶೇಷಗುಣಗಳು ಯಾವುದಕ್ಕೂ ಕಾರಣವಾಗುವುದಿಲ್ಲವೆಂದು ಹಿಂದೆ ಹೇಳಿದೆ. ಆಗ ಜ್ಞಾನಾದಿಗಳಲ್ಲಿ ಅಸಮವಾಯಿಕಾರಣತ್ವರೂಪ ಸಾಧರ್ಮ್ಯ ಬಾರದಿರುವುದರಿಂದ ಅವ್ಯಾಪ್ತವಾಗುತ್ತದೆ. ಆದುದರಿಂದ ಮೂಲದ ಅರ್ಥವನ್ನು ವೈಧರ್ಮ್ಯಪರವಾಗಿ ವ್ಯಾಖ್ಯಾನಮಾಡುತ್ತಾನೆ. 'ಅಸಮವಾ—' ಇತಿ. ಗುಣಕರ್ಮಗಳಿಗೆ ಭಿನ್ನವಾದ ದ್ರವ್ಯಸಾಮಾನ್ಯಾದಿಗಳ ವೈಧರ್ಮ್ಯ 'ಅಸಮವಾಯಿಕಾರಣತ್ವಂ' ಎಂದು ತಿಳಿಯಬೇಕು. ಅವು ಎಂದೂ ಅಸಮವಾಯಿಕಾರಣಗಳಾಗುವುದಿಲ್ಲ. ಸಾಧರ್ಮ್ಯತಾತ್ಪರ್ಯದಿಂದ ಇಲ್ಲಿ ಹೇಳಿಲ್ಲವಾದುದರಿಂದ ಜ್ಞಾನಾದಿಗಳಲ್ಲಿ ಇದು ಬಾರದಿದ್ದರೂ ದೋಷವಿಲ್ಲ. ಹೀಗೆ ಹೇಳಿದರೆ ಕ್ರಮಭಂಗವಾಗುತ್ತದೆ. ಸಾಧರ್ಮ್ಯ ಹೇಳುವಾಗ ಮಧ್ಯದಲ್ಲಿ ಒಂದು ವೈಧರ್ಮ್ಯ ಹೇಳುವುದು ಸಮಂಜಸವಾಗುವುದಿಲ್ಲ. ಅದಕ್ಕೋಸ್ಕರ ಜಾತಿಘಟಿತವಾಗಿ ಲಕ್ಷಣಪರಿಷ್ಕಾರ ಮಾಡುತ್ತಾನೆ. 'ಅಥವಾ—' ಇತಿ. ಅಸಮವಾಯಿಕಾರಣಂ—ರೂಪ ಸಂಯೋಗಾದಿ, ತದ್ವೃತ್ತಿಃ (ಅದರಲ್ಲಿರುವುದು) ಸತ್ತಾಭಿನ್ನಾಯಾಜಾತಿಃ ಗುಣತ್ವ, ಕರ್ಮತ್ವರೂಪಾಜಾತಿಃ, ತದ್ವತ್ತ್ವಂ ಅದು ಉಳ್ಳದ್ದು ಎಲ್ಲಾ ಗುಣಗಳೂ, ಕರ್ಮಗಳೂ ಆಗುತ್ತವೆ. ಜ್ಞಾನಾದಿಗಳಲ್ಲಿಯೂ ಗುಣತ್ವಜಾತಿ ಇರುವುದರಿಂದ ಅವ್ಯಾಪ್ತಿ ಬರುವುದಿಲ್ಲ. ಇಲ್ಲಿ ಕೇವಲ 'ಸತ್ತಾಭಿನ್ನಜಾತಿಮತ್ತ್ವಂ' ಎಂದು ಇಷ್ಟೇ ಹೇಳಿದರೆ ದ್ರವ್ಯಾದಿಗಳಲ್ಲಿಯೂ ಬರುತ್ತದೆ. ದ್ರವ್ಯತ್ವಜಾತಿ ಸತ್ತಾಭಿನ್ನವಾಗಿಯೂ ಸತ್ತಾವ್ಯಾಪ್ಯವಾಗಿಯೂ ಇದೆ. ಅಸಮವಾಯಿಕಾರಣವೃತ್ತಿ ಎಂದು ಹೇಳಿದರೆ ದ್ರವ್ಯತ್ವವನ್ನು ತೆಗೆದುಕೊಳ್ಳಲು ಬರುವುದಿಲ್ಲ. ಅದು ಅಸಮವಾಯಿಕಾರಣವೃತ್ತಿಯಲ್ಲ. (ಸಮವಾಯಿಕಾರಣದಲ್ಲಿದೆ.) ಸತ್ತಾಭಿನ್ನತ್ವ ವಿಶೇಷಣವನ್ನು ಜಾತಿಯಲ್ಲಿ ಕೊಡದಿದ್ದರೆ ಸತ್ತಾಜಾತಿಯೂ ಗುಣದಲ್ಲಿರುವುದರಿಂದ ಅದನ್ನು ತೆಗೆದುಕೊಂಡು ಅದು ದ್ರವ್ಯದಲ್ಲಿರುವುದರಿಂದ ಪುನಃ ಅತಿವ್ಯಾಪ್ತಿ ಬರುತ್ತದೆ. ಆದುದರಿಂದ ಸತ್ತಾಭಿನ್ನಜಾತಿ ಎಂದಿದೆ ಇಲ್ಲಿ ವೃತ್ತಿತ್ವ, ಮತ್ತು ಜಾತಿಮತ್ತ್ವವೂ (ಇರುವುದು, ಜಾತಿಯಿಂದಕೂಡಿರುವುದು) ಸಮವಾಯಸಂಬಂಧದಿಂದ ಎಂದು ತಿಳಿಯಬೇಕು. ಇಲ್ಲವಾದರೆ ಅಸಮವಾಯಿಕಾರಣದಲ್ಲಿ ಕಾಲಿಕಸಂಬಂಧದಿಂದ ದ್ರವ್ಯತ್ವವೂ ಇರುವುದರಿಂದ ಅದನ್ನು ತೆಗೆದುಕೊಂಡು ಪುನಃ ಅತಿವ್ಯಾಪ್ತಿ ಬರುತ್ತದೆ. ಪರಿಷ್ಕೃತಲಕ್ಷಣ. ಅಸಮವಾಯಿಕಾರಣನಿರೂಪಿತಸಮವಾಯಸಂಬಂಧಾವಚ್ಛಿನ್ನವೃತ್ತಿತಾಶ್ರಯಸತ್ತಾಭಿನ್ನಜಾತಿನಿಷ್ಠಸಮವಾಯ ಸಂಬಂಧಾವಚ್ಛಿನ್ನಆಧೇಯತಾನಿರೂಪಕತ್ವಮ್' ॥ ಎರಡನೆಯ ಆಧೇಯತಾದಲ್ಲಿ ಸಮವಾಯ ಹೇಳದಿದ್ದರೆ ಆಗ ಗುಣತ್ವವು ಕಾಲಿಕಸಂಬಂಧದಿಂದ ದ್ರವ್ಯದಲ್ಲಿ ಬರುವುದರಿಂದ ಪುನಃ ಅತಿವ್ಯಾಪ್ತಿ ಬರುತ್ತದೆ.

**ಅನ್ಯತ್ರ ನಿತ್ಯದ್ರವ್ಯೇಭ್ಯ ಆಶ್ರಿತತ್ವಮಿಹೋಚ್ಯತೇ ||**

**ನಿತ್ಯದ್ರವ್ಯಾಣಿ ಪರಮಾಣ್ವಾಕಾಶಾದೀನಿ ವಿಹಾಯಾಶ್ರಿತತ್ವಂ ಸಾಧರ್ಮ್ಯ ಮಿತ್ಯರ್ಥಃ | ಆಶ್ರಿತತ್ವಂ ತು ಸಮವಾಯಸಂಬಂಧೇನ ವೃತ್ತಿಮತ್ತ್ವಮ್ | ವಿಶೇಷತಯಾ ನಿತ್ಯಾನಾಮಪಿ ಕಾಲಾದೌ ವೃತ್ತೇಃ ||**

ಇಹ— ಏಳುಪದಾರ್ಥಗಳ ಮಧ್ಯದಲ್ಲಿ ನಿತ್ಯದ್ರವ್ಯೇಭ್ಯಃ ಅನ್ಯತ್ರ—ಅನಿತ್ಯದ್ರವ್ಯ ಮತ್ತು ಗುಣಗಳಿಗೆ 'ಆಶ್ರಿತತ್ವಂ' ಸಾಧರ್ಮ್ಯವಾಗುತ್ತದೆ. ಪೃಥಿವೀ, ಅಪ್, ತೇಜೋ ವಾಯುಗಳ ಪರಮಾಣುಗಳೂ ಆಕಾಶಾದಿಪಂಚಕಗಳೂ (ಒಟ್ಟಿಗೆ ಒಂಬತ್ತು) ನಿತ್ಯದ್ರವ್ಯ ಗಳು. ಅದಕ್ಕಿಂತ ಬೇರೆಯಾದ ದ್ರವ್ಯ ಅನಿತ್ಯದ್ರವ್ಯ. ನಿತ್ಯದ್ರವ್ಯಗಳು ಎಲ್ಲಿಯೂ ಆಶ್ರಯ ಹೊಂದಿಲ್ಲ. ಆದರೆ 'ಗಗನಂ ಅಸ್ತಿ ಎಂಬ ಪ್ರತೀತಿ ಇದೆ. ಕಾಲಿಕಸಂಬಂಧ ದಿಂದ ಅಥವಾ ದೈಶಿಕಸಂಬಂಧದಿಂದ ಎಲ್ಲವೂ ಎಲ್ಲದರಲ್ಲಿ ಇವೆ. ಕಾಲ ದೇಶಗಳು ವಿಶೇಷಣತಾಸಂಬಂಧದಿಂದ ( ಕಾಲಿಕ, ದೈಶಿಕ ) ಎಲ್ಲಾ ಪದಾರ್ಥಗಳಿಗೆ ಆಧಾರ ವಾಗಿವೆ. ಕಾಲಾದ್ವಾರಕಸಂಬಂಧವೆಂದರೆ 'ಸ್ವಾಧಿಕರಣಕಾಲವೃತ್ತಿತ್ವಂ', ದಿಗ್ ದ್ವಾರಕಸಂಬಂಧವೆಂದರೆ 'ಸ್ವಾಧಿಕರಣದೇಶವೃತ್ತಿತ್ವಂ' ಎಂದು ತಿಳಿಯಬೇಕು. ಆಗ ನಿತ್ಯದ್ರವ್ಯಗಳೂ ಕೂಡಾ ಈ ಎರಡುಸಂಬಂಧಗಳಿಂದ ವೃತ್ತಿಮತ್ತಾಗುತ್ತವೆ. ( ಇವೆ ಯೆಂದು ಹೇಳಲು ಬರುತ್ತದೆ. ) ಆದರೆ ಇಲ್ಲಿ ಕಾಲಿಕ ಅಥವಾದೈಶಿಕವ್ಯತಿರಿಕ್ತವಾದ ಸಮವಾಯಸಂಯೋಗಾದಿಸಂಬಂಧದಿಂದ ವೃತ್ತಿಮತ್ತ್ವವು ( ಆಶ್ರಿತತ್ವಂ ) ವಿವಕ್ಷಿತ ವಾಗಿದೆ. ವೃತ್ತಿನಿಯಾಮಕಗಳಾದ ಸಂಬಂಧವೆಂದರೆ ಸಂಯೋಗ, ಸಮವಾಯ ಸಂಬಂಧಗಳೆಂದು ಹಿಂದೆ ವಿವರಿಸಿದೆ. ಕಾಲಿಕಾದಿಸಂಬಂಧಗಳು ವೃತ್ತಿನಿಯಾಮಕ ಗಳಲ್ಲ. ಆಧೇಯತಾನಿಯಾಮಕಸಂಬಂಧಗಳಿಂದಲೇ ವೃತ್ತಿಮತ್ತ್ವವು ವಿವಕ್ಷಿತವಾದುದ ರಿಂದ ವಿಶೇಷಣತಾಸಂಬಂಧದಿಂದ ನಿತ್ಯಪದಾರ್ಥಗಳು ಕಾಲಾದಿಗಳಲ್ಲಿ ಇದ್ದರೂ ಅತಿವ್ಯಾಪ್ತಿ ಬರುವುದಿಲ್ಲ. ಆಧೇಯತಾನಿಯಾಮಕಗಳಾದ ಸಮವಾಯ, ಸಂಯೋಗ ಸಂಬಂಧಗಳಿಂದ ನಿತ್ಯದ್ರವ್ಯಗಳು ಎಲ್ಲಿಯೂ ಇಲ್ಲ. ಸಮವಾಯಸಂಯೋಗಾನ್ಯತರ ಸಂಬಂಧಾವಚ್ಛಿನ್ನವೃತ್ತಿತಾಶ್ರಯತ್ವಂ' ಎಂದು ಸಾಧರ್ಮ್ಯ.

**ಕ್ಷಿತ್ಯಾದೀನಾಂ ನವಾನಾಂತು ದ್ರವ್ಯತ್ವಗುಣಯೋಗಿತಾ || ೨೪ ||**

**ಇದಾನೀಂ ದ್ರವ್ಯಸ್ಯೈವ ವಿಶಿಷ್ಯ ಸಾಧರ್ಮ್ಯಂ ವಕ್ತುಮಾರಭತೇ— "ಕ್ಷಿತ್ಯಾದೀನಾಮ್—" ಇತಿ || ಸ್ಪಷ್ಟಮ್ || ೨೪ ||**

ತು ಶಬ್ದದಿಂದ ಪ್ರಕರಣಭೇದವನ್ನು ತೋರಿಸುತ್ತಾನೆ. ಈಗ ಕೇವಲ ದ್ರವ್ಯಭೇದ ಗಳಾದ ಪೃಥಿವ್ಯಾದಿಗಳಿಗೆ ಸಾಧರ್ಮ್ಯವನ್ನು ತೋರಿಸುತ್ತಾನೆ. 'ದ್ರವ್ಯತ್ವವತ್ವಂ', 'ಗುಣವತ್ತ್ವಂ' ಪೃಥಿವ್ಯಾದಿನವಕಗಳ ಸಾಧರ್ಮ್ಯ. ಇಲ್ಲಿಯೂ ಸಮವಾಯದಿಂದ

ದ್ರವ್ಯತ್ವವೈಶಿಷ್ಟ್ಯ, ಗುಣವೈಶಿಷ್ಟ್ಯವನ್ನು ತಿಳಿಯಬೇಕು. ಪೃಥಿವ್ಯಾದಿಗಳಲ್ಲಿ ದ್ರವ್ಯತ್ವವೂ ಗುಣವೂ ಸಮವಾಯದಿಂದ ಇದೆಯೆಂದರ್ಥ.

**ಕ್ಷಿತಿರ್ಜಲಂ ತಥಾ ತೇಜಃ ಪವನೋ ಮನ ಏವ ಚ ||**

**ಪರಾಪರತ್ವಮೂರ್ತತ್ವಕ್ರಿಯಾವೇಗಾಶ್ರಯಾ ಅಮೀ || ೨೫ ||**

**ಪೃಥಿವ್ಯಪ್ತೇಜೋ ವಾಯುಮನಸಾಂ ಪರತ್ವಾಪರತ್ವವತ್ವಂ, ಮೂರ್ತತ್ವಂ,ಕ್ರಿಯಾವತ್ತ್ವಂ ವೇಗವತ್ತ್ವಂ ಚ ಸಾಧರ್ಮ್ಯಮ್ || ನ ಚ ಯತ್ರ ಘಟಾದೌ ಪರತ್ವಮಪರತ್ವಂ ವಾ ನೋತ್ಪನ್ನಂ ತತ್ರಾವ್ಯಾಪ್ತಿರಿತಿ ವಾಚ್ಯಮ್, ಪರತ್ವಾದಿ ಸಮಾನಾಧಿಕರಣದ್ರವ್ಯತ್ವವ್ಯಾಪ್ಯಜಾತಿಮತ್ತ್ವಸ್ಯ ವಿವಕ್ಷಿತತ್ವಾತ್ । ಮೂರ್ತತ್ವಮಪಕೃಷ್ಟಪರಿಮಾಣವತ್ತ್ವಮ್, ತಚ್ಚ ತೇಷಾ ಮೇವ, ಗಗನಾದಿಪರಿಮಾಣಸ್ಯ ಕುತೋಽಪ್ಯಪಕೃಷ್ಟತ್ವಾಭಾವಾತ್ । ಪೂರ್ವ ವತ್ ಕರ್ಮವತ್ತ್ವಮ್, ಕರ್ಮಸಮಾನಾಧಿಕರಣದ್ರವ್ಯತ್ವವ್ಯಾಪ್ಯಜಾತಿ ಮತ್ತ್ವಮ್, ವೇಗವತ್ತ್ವಂ ವೇಗವದ್ವೃತ್ತಿದ್ರವ್ಯತ್ವವ್ಯಾಪ್ಯಜಾತಿಮತ್ತ್ವಂ ಚ ಬೋಧ್ಯಮ್ || ೨೪ ೨೫ ||**

ಪೃಥಿವೀ, ಅಪ್, ತೇಜಸ್ಸು, ವಾಯು, ಮನಸ್ಸು, ಈ ಐದರ ಸಾಧರ್ಮ್ಯ ಹೇಳು ತ್ತಾನೆ. ಪರತ್ವಾಪರತ್ವವತ್ವಂ, ಮೂರ್ತತ್ವಂ, ಕ್ರಿಯಾವತ್ತ್ವಂ, ವೇಗವತ್ತ್ವಂ, ಈ ನಾಲ್ಕು ಸಾಧರ್ಮ್ಯ. 'ನ ಚ—' ವಾಕ್ಯದಿಂದ ಅವ್ಯಾಪ್ತಿಯನ್ನಾಶಂಕಿಸಿ ಪರಿಹರಿಸು ತ್ತಾನೆ. ದಿಕ್ಕೃತವಾದ ಪರತ್ವ, ಅಪರತ್ವ, ಕಾಲಕೃತವಾದ ಪರತ್ವ, ಅಪರತ್ವ ಎಂದು ಪರತ್ವಾಪರತ್ವಗಳು ಎರಡು ವಿಧವಾಗಿವೆ. 'ಇದಮಸ್ಮಾತ್ ಸನ್ನಿಕೃಷ್ಟಮ್' ಇದು ಇದಕ್ಕಿಂತ ಹತ್ತಿರವಾಗಿದೆ ಎಂಬ ಅಪೇಕ್ಷಾಬುದ್ಧಿಯಿಂದ ಇದು ಹುಟ್ಟುತ್ತದೆ. 'ಅಯಮಸ್ಮಾತ್ ಕನಿಷ್ಠಃ' (ಇವನು ಇವನಿಂದ ಚಿಕ್ಕವನು, ಅಲ್ಪಕಾಲ ಸಂಬಂಧ ಉಳ್ಳವನು.) 'ಅಯಮಸ್ಮಾತ್ ಜ್ಯೇಷ್ಠಃ' (ಇವನು ಇವನಿಂದ ದೊಡ್ಡವನು.) ಈ ರೀತಿಯಾದ ಅಪೇಕ್ಷಾಬುದ್ಧಿಯು ಕಾಲಕೃತವಾದ ಪರತ್ವಾಪರತ್ವಕ್ಕೆ ಕಾರಣ. ಇವೆರಡೂ ಉತ್ಪನ್ನವಿನಷ್ಟಘಟದಲ್ಲಿ ಬರುವುದು ಹೇಗೆ? ಹುಟ್ಟಿ ಒಂದು ಕ್ಷಣವಿದ್ದರೆ ದೇಶಕೃತ ಕಾಲಕೃತಪರತ್ವಾಪರತ್ವ ಹೇಳಲುಸಾಧ್ಯ ಆದರೆ ಪೃಥಿವಿಯಾದ ಆ ಘಟದಲ್ಲಿ ಪರತ್ವಾ ಪರತ್ವವತ್ತ್ವರೂಪಸಾಧರ್ಮ್ಯ ಬಾರದಿರುವುದರಿಂದ ಅವ್ಯಾಪ್ತಿ ಬರುತ್ತದೆ. ಆಗ ಜಾತಿ ಘಟಿತಲಕ್ಷಣ ಹೇಳಬೇಕೆಂದು ಸಿದ್ಧಾಂತಿ ಉತ್ತರಿಸುತ್ತಾನೆ. 'ಪರತ್ವಾ'—ಇತಿ ಪರ ತ್ವಾದಿಸಮಾನಾಧಿಕರಣ—ಪರತ್ವಾಪರತ್ವಗಳು ಯಾವ ಅಧಿಕರಣದಲ್ಲಿ ಇರುತ್ತವೆಯೋ ಆ ಅಧಿಕರಣದಲ್ಲಿರುವ, ದ್ರವ್ಯತ್ವವ್ಯಾಪ್ಯಾ ಯಾ ಜಾತಿಃ—ದ್ರವ್ಯತ್ವಜಾತಿಗೆ ಸಾಕ್ಷಾತ್ ವ್ಯಾಪ್ಯವಾದ ಯಾವ ಜಾತಿ ಇದೆಯೋ, ಪ್ರಕೃತ ಪೃಥಿವೀತ್ವಜಾತಿ, (ಬೇರೆಕಡೆ ಜಲ ತ್ವಾದಿ.) ತದ್ವತ್ತ್ವಂ—ಅದು ಉಳ್ಳದ್ದು ಉತ್ಪನ್ನವಿನಷ್ಟಘಟವೂ ಆಗುತ್ತದೆ. ಅದರಲ್ಲಿ ಸಾಕ್ಷಾತ್ ಪರತ್ವಾಪರತ್ವ ಬಾರದಿದ್ದರೂ ಅದು ಇರತಕ್ಕ ಘಟಾದಿಗಳಲ್ಲಿರುವ ಪೃಥಿವೀತ್ವ

ಜಾತಿಯಿಂದ ಕೂಡಿರುವುದರಿಂದ ದೋಷವಿಲ್ಲ. ಕೇವಲ 'ದ್ರವ್ಯತ್ವವ್ಯಾಪ್ಯಜಾತಿಮತ್ತ್ವಂ' ಎಂದರೆ ದ್ರವ್ಯತ್ವವ್ಯಾಪ್ಯವಾದ ಆತ್ಮತ್ವ ಜಾತಿಯನ್ನು ತೆಗೆದುಕೊಂಡು ಅದು ಉಳ್ಳವನು ಆತ್ಮನಾಗುವುದರಿಂದ ಅತಿವ್ಯಾಪ್ತಿ ಬರುತ್ತದೆ. ಆದುದರಿಂದ "ಪರ.... ಸಮಾನಾಧಿಕರಣ" ಎಂದಿದೆ. ಸತ್ತಾ ಜಾತಿಯನ್ನು ತೆಗೆದುಕೊಂಡು ಪುನಃ ಆತ್ಮನಲ್ಲಿಯೇ ಅತಿವ್ಯಾಪ್ತಿ ಬರುವುದರಿಂದ 'ದ್ರವ್ಯತ್ವವ್ಯಾಪ್ಯಜಾತಿ' ಎಂದು ಹೇಳಿದೆ. ಸತ್ತಾಜಾತಿ ದ್ರವ್ಯತ್ವವ್ಯಾಪ್ಯವಲ್ಲ. ಮೂರ್ತತ್ವವೆಂದರೆ 'ಅಪಕೃಷ್ಟಪರಿಮಾಣವತ್ತ್ವಂ' ಎಂದು ಅದರ ಸ್ವರೂಪವನ್ನು ತೋರಿಸುತ್ತಾನೆ. ಆಕಾಶಾದಿ ಚತುಷ್ಟಯದಲ್ಲಿ ಇಲ್ಲದಿರುವ ಪರಿಮಾಣವಿರುವಿಕೆ. ಪರಿಚ್ಛಿನ್ನಪರಿಮಾಣವುಳ್ಳದ್ದು ಮೂರ್ತಪದಾರ್ಥ. ಆದುದರಿಂದ ಪರಮಾಣ್ವಾದಿಗಳಲ್ಲಿ ಅವ್ಯಾಪ್ತಿ ಬರುವುದಿಲ್ಲ. ಕ್ರಿಯಾಜನಕತಾವಚ್ಛೇದಕ ಜಾತಿವಿಶೇಷವೇ ಮೂರ್ತತ್ವವೆಂದು ನವೀನರೂ ಪರಿಚ್ಛಿನ್ನಪರಿಮಾಣ ಯೋಗವುಳ್ಳದ್ದು ಮೂರ್ತವೆಂದು ಪ್ರಾಚೀನರೂ ಹೇಳುತ್ತಾರೆ. ಈ ಮೂರ್ತತ್ವವು ಕ್ಷಿತ್ಯಾದಿಗಳಲ್ಲಿ ಮಾತ್ರ ಇರುವುದಲ್ಲದೆ ಗಗನಾದಿಗಳಲ್ಲಿಲ್ಲ. ಅವುಗಳಲ್ಲಿ ಯಾವಾಗಲೂ ಮಹತ್ಪರಿಮಾಣವೇ ಇರುತ್ತದೆ. 'ಕರ್ಮವತ್ತ್ವಂ' ಎಂಬಲ್ಲಿಯೂ ಜಾತಿ ಘಟಿತಲಕ್ಷಣಮಾಡಬೇಕು. ಕೆಲವು ಘಟಾದಿಗಳಲ್ಲಿ ಅಂದರೆ ಉತ್ಪನ್ನವಿನಷ್ಟಘಟದಲ್ಲಿ ಯಾವ ಕ್ರಿಯೆಯೂ ಇರುವುದಿಲ್ಲ. ಆದುದರಿಂದ ಕ್ರಿಯಾ ಉಳ್ಳದ್ದರಲ್ಲಿರುವ ದ್ರವ್ಯತ್ವವ್ಯಾಪ್ಯ ಜಾತಿಯಿಂದ ಕೂಡಿರುವುದೆಂದು ಹಿಂದಿನಂತೆ ಪರಿಷ್ಕರಿಸಿದೆ. 'ವೇಗವತ್—ಘಟಾದಿ. ತದ್ವೃತ್ತಿಃ (ಅದರಲ್ಲಿರುವುದು) ದ್ರವ್ಯತ್ವವ್ಯಾಪ್ಯಾಯಾಜಾತಿಃ, ಪೃಥಿವೀತ್ವಜಾತಿಃ ತದ್ವತ್ತ್ವಂ.' ಎಲ್ಲಾ ಪೃಥಿವಿಯಲ್ಲಿಯೂ ಬರುತ್ತದೆ.

**ಕಾಲಖಾತ್ಮದಿಶಾಂ ಸರ್ವಗತತ್ವಂ ಪರಮಂ ಮಹತ್ ||**

**ಕಾಲಾಕಾಶಾತ್ಮದಿಶಾಂ ಸರ್ವಗತತ್ವಂ, ಸರ್ವಮೂರ್ತಸಂಯೋಗಿತ್ವಂ ಪರಮಮಹತ್ತ್ವತ್ತ್ವಂ ಚ ಜಾತಿವಿಶೇಷಃ, ಅಪಕರ್ಷಾನಾಶ್ರಯ ಪರಿಮಾಣತ್ವಂ ವಾ ||**

ಕಾಲ, ಆಕಾಶ, ಆತ್ಮ, ದಿಕ್ ಈ ನಾಲ್ಕಕ್ಕೆ, 'ಸರ್ವಗತತ್ವಂ' 'ಪರಮಮಹತ್ತ್ವಂ' ಸಾಧರ್ಮ್ಯವಾಗುತ್ತದೆ. ಗತಶಬ್ದಕ್ಕೆ ಕ್ರಿಯಾ ಎಂದರ್ಥವಾದರೂ, ಆಕಾಶಾದಿಗಳಲ್ಲಿ ಕ್ರಿಯೆ ಇಲ್ಲದಿರುವುದರಿಂದ ಸಂಯೋಗಾರ್ಥ ಹೇಳಬೇಕು. ಸಂಯೋಗ ಸಂಬಂಧದಿಂದ ಸರ್ವಪದಾರ್ಥಗಳಲ್ಲಿ ಸಂಬಂಧಹೊಂದಿರುವುದು. ಅದನ್ನೇ 'ಸರ್ವಮೂರ್ತಸಂಯೋಗಿತ್ವಂ' ಎಂದು ವಿವರಿಸುತ್ತಾನೆ. ಆಕಾಶಾದಿಗಳಲ್ಲಿ ಮಹತ್ಪರಿಮಾಣವಿದೆ. 'ಅಪಕರ್ಷ'—ಎಂಬುದರಿಂದ, ಪರಿಷ್ಕೃತಲಕ್ಷಣ ತೋರಿಸಿರುತ್ತಾನೆ.

**ಕ್ಷಿತ್ಯಾದಿ ಪಂಚ ಭೂತಾನಿ**

**ಕ್ಷಿತ್ಯಾದೀತಿ || ಪೃಥಿವ್ಯಪ್ತೇಜೋ ವಾ ಯ್ವಾಕಾಶಾನಾಂ ಭೂತತ್ವಮ್ | ತಚ್ಚ ಬಹಿರಿಂದ್ರಿಯಗ್ರಾಹ್ಯವಿಶೇಷಗುಣವತ್ತ್ವಮ್ | ಅತ್ರ ಗ್ರಾಹ್ಯತ್ವಂ**

ಲೌಕಿಕಪ್ರತ್ಯಕ್ಷಸ್ವರೂಪಯೋಗ್ಯತ್ವಂ ಬೋಧ್ಯಮ್ । ತೇನ ಜ್ಞಾತೋ ಘಟಃ' ಇತ್ಯಾದಿಪ್ರತ್ಯಕ್ಷೇ ಜ್ಞಾನಸ್ಯಾಪ್ಯುಪನೀತಭಾನವಿಷಯತ್ವಾತ್ತದ್ವತಿ ಆತ್ಮನಿ ನಾತಿವ್ಯಾಪ್ತಿಃ ॥ ನವಾ ಪ್ರತ್ಯಕ್ಷಾವಿಷಯರೂಪಾದಿಮತಿ ಪರಮಾಣ್ವಾದಾವವ್ಯಾಪ್ತಿಃ ತಸ್ಯಾಪಿ ಸ್ವರೂಪಯೋಗ್ಯತ್ವಾತ್ । ಮಹತ್ತ್ವಲಕ್ಷಣಕಾರಣಾಂತರಾಸನ್ನಿಧಾನಾಚ್ಚ ನ ಪ್ರತ್ಯಕ್ಷಮ್ । ಅಥವಾ—ಆತ್ಮಾವೃತ್ತಿವಿಶೇಷಗುಣವತ್ತ್ವಂ ತತ್ತ್ವಮ್ ॥

ಪೃಥಿವೀ, ಅಪ್, ತೇಜಃ, ವಾಯುಃ, ಆಕಾಶ, ಈ ಐದಕ್ಕೆ 'ಭೂತತ್ವಂ' ಸಾಧರ್ಮ್ಯವಾಗುತ್ತದೆ. ಭೂತತ್ವ ಎಂದರೇನು ಎಂದು ತೋರಿಸುತ್ತಾನೆ. 'ತಚ್ಚ—' ಇತಿ. ಬಹಿರಿಂದ್ರಿಯಗಳು ಐದು. ಘ್ರಾಣ, ರಸನ, ಚಕ್ಷು, ತ್ವಕ್, ಶ್ರೋತ್ರವೆಂದು ಇವುಗಳ ಹೆಸರು. ತೇಷಾಂ ಗ್ರಾಹ್ಯಃ — ಈ ಐದು ಇಂದ್ರಿಯಗಳಿಗೆ ಗೋಚರವಾಗುವ (ವಿಷಯಗಳಾದ) ಯಃ ವಿಶೇಷಗುಣಃ — ಯಾವ ಗಂಧಾದಿವಿಶೇಷಗುಣವಿದೆಯೋ (ಕ್ರಮವಾಗಿ ಗಂಧ, ರಸ, ರೂಪ, ಸ್ಪರ್ಶ, ಶಬ್ದಗಳಾಗುತ್ತವೆ) ತದ್ವತ್ತ್ವಂ—ಆಗಂಧಾದಿ ವಿಶೇಷಗುಣವುಳ್ಳದ್ದು ಎಂದರ್ಥ. ಚಕ್ಷುರಾದಿ ಇಂದ್ರಿಯಗಳಿಂದ ಗ್ರಹಿಸಲ್ಪಡುವ ರೂಪಾದಿ ವಿಶೇಷಗುಣವಿಶಿಷ್ಟವಾದದ್ದು ಭೂತತ್ವವಾಗುತ್ತದೆ. ಪೃಥಿವಿಯಲ್ಲಿ ಗಂಧವೂ, ಜಲದಲ್ಲಿ ರಸವೂ, ವಾಯುವಿನಲ್ಲಿ ಸ್ಪರ್ಶವೂ, ಆಕಾಶದಲ್ಲಿ ಶಬ್ದವೂ ಇರುತ್ತದೆ. ಗುಣಗಳಲ್ಲಿ ಕೆಲವು ಸಾಮಾನ್ಯಗುಣಗಳೂ, ಕೆಲವು ವಿಶೇಷಗುಣಗಳೂ ಎಂದು ಮುಂದೆ ವಿವರಿಸುತ್ತಾನೆ. 'ಅತ್ರ—' ಇತಿ. ಬಹಿರಿಂದ್ರಿಯಗ್ರಾಹ್ಯ ಎಂಬಲ್ಲಿರುವ ಗ್ರಾಹ್ಯಪದಕ್ಕೆ 'ಜ್ಞಾನವಿಷಯತ್ವಂ. ಎಂದು ಸಾಮಾನ್ಯವಾದ ಅರ್ಥ ತೋರುತ್ತದೆ. ಆ ಅರ್ಥವನ್ನು ಸ್ವೀಕರಿಸಿದರೆ ಭೂತತ್ವಲಕ್ಷಣವು ಆತ್ಮನಲ್ಲಿ ಬರುವುದರಿಂದ ಅತಿವ್ಯಾಪ್ತವಾಗುತ್ತದೆ. ಆದುದರಿಂದ ಗ್ರಾಹ್ಯತ್ವಂ—'ಲೌಕಿಕಪ್ರತ್ಯಕ್ಷಸ್ವರೂಪಯೋಗ್ಯತ್ವಂ' ಎಂದು ಹೇಳಬೇಕು.

ಜ್ಞಾನ ಬರುವ ಕ್ರಮ ಹೀಗಿದೆ. ಮೊದಲು 'ಅಯಂ ಘಟಃ' (ಸಾಮಾನ್ಯವಾಗಿ ಇದು ಘಟ) ಎಂಬ ಜ್ಞಾನ ಬರುತ್ತದೆ. ಆಮೇಲೆ 'ಮಯಾ ಘಟಃ ಜ್ಞಾತಃ' (ಘಟಜ್ಞಾನವಾನಹಂ' ನನ್ನಿಂದ ಘಟವು ತಿಳಿಯಲ್ಪಟ್ಟಿದೆ.) ಎಂಬ ಜ್ಞಾನ ಹುಟ್ಟುತ್ತದೆ. ಯಾವ ವಿಶೇಷಣವೂ ತೋರದಿರುವ ಮೊದಲನೆಯ ಜ್ಞಾನಕ್ಕೆ ವ್ಯವಸಾಯಜ್ಞಾನವೆಂದೂ (ಇದು ಜ್ಞಾನವಿಷಯತಾಶ್ರಯವಾಗಿರುತ್ತದೆ.) ಎರಡನೆಯದಕ್ಕೆ ಅನುವ್ಯವಸಾಯ ಜ್ಞಾನವೆಂದೂ ಹೆಸರು. ಅನುವ್ಯವಸಾಯಜ್ಞಾನದಲ್ಲಿ ವ್ಯವಸಾಯಜ್ಞಾನವು ಪ್ರಕಾರವಾಗಿರುತ್ತದೆ.(ವಿಶೇಷಣಭಾವ ಹೊಂದಿರುತ್ತದೆ.) ಎರಡನೆಯ ಜ್ಞಾನಕ್ಕೆ ಮೊದಲನೆಯ ಜ್ಞಾನವೇ ವ್ಯಾವರ್ತಕವಾಗುತ್ತದೆ. ಇತರ ಜ್ಞಾನ ವೈಲಕ್ಷಣ್ಯ ಸಂಪಾದಕವು ಯಾವುದೋ ಅದು ವ್ಯಾವರ್ತಕ. ಅದೇ ವಿಶೇಷಣ. 'ಅಯಂ ಘಟಃ' ಎಂಬ ಮೊದಲನೆಯ ಜ್ಞಾನವು ಲೌಕಿಕಸಂಯೋಗ ಸಂನಿಕರ್ಷದಿಂದ ಚಕ್ಷುರಿಂದ್ರಿಯದಿಂದ ಉಂಟಾಗುತ್ತದೆ. ಆದರೂ, 'ಚಕ್ಷುಃ ಸಂಯುಕ್ತಮನಃ ಸಂಯುಕ್ತಾತ್ಮಸಮವೇತಜ್ಞಾನ

ವಿಷಯತ್ವ'ರೂಪ ಅಲೌಕಿಕವಾದ ಜ್ಞಾನಲಕ್ಷಣಾಪ್ರತ್ಯಾಸತ್ತಿಯಿಂದ (ಸಂಬಂಧದಿಂದ) ಘಟಾಂಶದಲ್ಲಿ ಪ್ರತ್ಯಕ್ಷರೂಪವಾಗಿ ತೋರುತ್ತದೆ. ಅಂದರೆ ಘಟವು ಚಕ್ಷುಗ್ರಾರ್ಹ್ಯವಾದಂತೆ ಘಟವಿಷಯಕಜ್ಞಾನವೂ ಚಕ್ಷುಗ್ರಾರ್ಹ್ಯವಾಗುತ್ತದೆ. ಈ ಜ್ಞಾನರೂಪವಿಶೇಷಗುಣ ವುಳ್ಳವನು ಆತ್ಮನಾಗುತ್ತಾನೆ. ಬಹಿರಿಂದ್ರಿಯ ಗ್ರಾಹ್ಯವಿಶೇಷಗುಣವೆಂದರೆ ಬಹಿರಿಂದ್ರಿಯ ವಾದ ನಯನದಿಂದ ಗ್ರಾಹ್ಯವಾದ ಈ ಜ್ಞಾನರೂಪವಿಶೇಷಗುಣವಾಗುತ್ತದೆ. 'ತದ್ವತ್ತ್ವಂ' ಆತ್ಮನಲ್ಲಿ ಬರುವುದರಿಂದ ಅತಿವ್ಯಾಪ್ತಿ. ಆತ್ಮನೂ ಭೂತಪದ ವಾಚ್ಯನಾಗಬೇಕಾಗು ತ್ತದೆ. ಈ ಜ್ಞಾನವು ನಯನಗ್ರಾಹ್ಯ ಹೇಗೆ ? ಎಂದರೆ ಹಿಂದೆ ಹೇಳಿದ ಅಲೌಕಿಕ ಸಂಬಂಧದಿಂದ ಸಂಭವಿಸುತ್ತದೆ. ಘಟಸಂಯುಕ್ತವಾದದ್ದು ನಯನ- ನಯನ ಸಂಯುಕ್ತವಾದದ್ದು ಮನಸ್ಸು. ಮನಃ ಸಂಯುಕ್ತವಾದವನು ಆತ್ಮಾ. ಅಲ್ಲಿ ಸಮ ವೇತಜ್ಞಾನ ಅಂದರೆ ಸಮವಾಯಸಂಬಂಧದಿಂದ ಇರುವ ಜ್ಞಾನ. 'ಜ್ಞಾತೋಘಟಃ' ಎಂಬ ಘಟಜ್ಞಾನವಿಷಯಕವಾದ ಅನುವ್ಯವಸಾಯಾತ್ಮಕವಾದ ಜ್ಞಾನ. ಈ ಜ್ಞಾನದಲ್ಲಿ ವಿಷಯವಾಗಿರುವುದು ಮೊದಲನೆಯ ವ್ಯವಸಾಯಾತ್ಮಕವಾದ ಘಟಜ್ಞಾನ. ಹೀಗೆ 'ಸ್ವಸಂಯುಕ್ತಮನಃ ಸಂಯುಕ್ತಆತ್ಮಸಮವೇತ ಜ್ಞಾನವಿಷಯತ್ವ' ರೂಪ ಅಲೌಕಿಕ ಸಂಬಂಧದಿಂದ ಬಹಿರಿಂದ್ರಿಯಗ್ರಾಹ್ಯತ್ವವು ಜ್ಞಾನಕ್ಕೆ ಸಂಭವಿಸುವುದರಿಂದ ತದ್ವಿಶಿಷ್ಟ ನಾದವನು ಆತ್ಮನಾಗುವುದರಿಂದ ಭೂತತ್ವಲಕ್ಷಣವು ಅತಿವ್ಯಾಪ್ತವಾಗುತ್ತದೆ. ಈಗ ಬಹಿರಿಂದ್ರಿಯಗ್ರಾಹ್ಯವೆಂದರೆ ಅಲೌಕಿಕಸಂನಿಕರ್ಷವಾದ ಜ್ಞಾನಲಕ್ಷಣ ಪ್ರತ್ಯಾಸತ್ತಿ ಯಿಂದ ಗ್ರಾಹ್ಯವಾಗಬಾರದು. ಅಂದರೆ ಕೇವಲ ಸಂಯೋಗಾದಿ ಲೌಕಿಕಸಂನಿಕರ್ಷ ಗಳಿಂದಲೇ ಗ್ರಾಹ್ಯವೆಂದು ಹೇಳುವುದರಿಂದ ಅತಿವ್ಯಾಪ್ತಿ ಬರುವುದಿಲ್ಲ. ಸಂಯೋಗಾದಿ ಲೌಕಿಕ ಸಂನಿಕರ್ಷದಿಂದ ಗ್ರಾಹ್ಯವಾದ ವಿಶೇಷಗುಣವೆಂದರೆ ರೂಪಾದಿಗಳೇ ಆಗುತ್ತವೆ. ತದ್ವಿಶಿಷ್ಟವಾದವುಗಳು ಅಂದರೆ ಪೃಥಿವ್ಯಾದಿಗಳೇ ಆಗುತ್ತವೆ. ಜ್ಞಾನವು ಬಹಿರಿಂದ್ರಿಯ ಗ್ರಾಹ್ಯವಾದರೂ ಅಲೌಕಿಕ ಜ್ಞಾನಲಕ್ಷಣಪ್ರತ್ಯಾಸತ್ತಿಯಿಂದ ಗ್ರಾಹ್ಯವಾಗುವುದರಿಂದ ಅದಕ್ಕೆ ಗ್ರಹಣವಿಲ್ಲ. 'ಲೌಕಿಕಂ ಯತ್ ಪ್ರತ್ಯಕ್ಷಂ—ಚಕ್ಷುರಾದಿ ಇಂದ್ರಿಯಗಳಿಂದ ಆಗುವ ಪ್ರತ್ಯಕ್ಷ. ತತ್‌ಸ್ವರೂಪಯೋಗ್ಯತ್ವಂ—ಆ ಪ್ರತ್ಯಕ್ಷದಲ್ಲಿ ವಿಷಯವಾಗಿ ತೋರು ವುದು ಎಂದರ್ಥ. ಬಹಿರಿಂದ್ರಿಯಜನ್ಯವಾದರೂ ಲೌಕಿಕವಾದ ಸಂಯೋಗ, ಸಂಯುಕ್ತ ಸಮವಾಯ ಇತ್ಯಾದಿ ಸಂನಿಕರ್ಷದಿಂದಲೇ ಅದು ಜನ್ಯವಾಗಿರಬೇಕೆಂದು ಗ್ರಾಹ್ಯಪದ ದಿಂದ ವಿವಕ್ಷಿತವಾದ ಅರ್ಥ. ಅಲೌಕಿಕ ಸಂನಿಕರ್ಷದಿಂದ ಜನ್ಯವಾಗಬಾರದು. ಹೀಗೆ ವಿವಕ್ಷಾಮಾಡಿರುವುದರಿಂದ 'ಜ್ಞಾತೋಘಟಃ' ಎಂಬ ಜ್ಞಾನವು ಉಪನೀತಭಾನ ವಿಷಯವಾದರೂ—ಅಲೌಕಿಕ ಜ್ಞಾನಲಕ್ಷಣ ಪ್ರತ್ಯಾಸತ್ತಿಯಿಂದ ಜ್ಞಾನವಿಷಯ ವಾದರೂ ಆ ಜ್ಞಾನವುಳ್ಳ ಆತ್ಮನಲ್ಲಿ ಅತಿವ್ಯಾಪ್ತಿ ಬರುವುದಿಲ್ಲ. ಪರಮಾಣುರೂಪಾದಿಗಳಿಗೆ ಪ್ರತ್ಯಕ್ಷವಿಲ್ಲವಾದುದರಿಂದ ಪರಮಾಣುವಿನಲ್ಲಿ ಭೂತತ್ವಲಕ್ಷಣವು ಅವ್ಯಾಪ್ತವಾಗುತ್ತ ದೆಂದು ಶಂಕಿಸುತ್ತಾನೆ. 'ನಚ'—ಇತಿ. ಪ್ರತ್ಯಕ್ಷಕ್ಕೆ ವಿಷಯವಾಗದಿರುವ ರೂಪವುಳ್ಳ ಪರಮಾಣ್ವಾದಿಗಳಲ್ಲಿ ಅವ್ಯಾಪ್ತಿ ಬರುತ್ತದೆಂದು ಶಂಕಿಸಬಾರದು. 'ಸ್ವರೂಪಯೋಗ್ಯ

ತ್ವಾತ್.' ಅತೀಂದ್ರಿಯಪರಮಾಣ್ವಾದಿಗಳ ರೂಪವು ಪ್ರತ್ಯಕ್ಷವಾಗದಿದ್ದರೂ, ಪ್ರತ್ಯಕ್ಷ ಸ್ವರೂಪಯೋಗ್ಯತೆಯು ಅದರಲ್ಲಿ ಇದ್ದೇ ಇದೆ. ಆದ್ದರಿಂದಲೇ ಅದರಿಂದಾದ ತ್ರಸ ರೇಣುವಿನ ರೂಪದ ಪ್ರತ್ಯಕ್ಷವಾಗುತ್ತದೆ. ಅರಣ್ಯದಲ್ಲಿರುವ ದಂಡವು ಘಟವನ್ನು ಹುಟ್ಟಿಸ ದಿದ್ದರೂ ಅದನ್ನು ತಂದು ಘಟವನ್ನು ಮಾಡಬಹುದು. ಆದುದರಿಂದ ಘಟೋತ್ಪಾದನ ಯೋಗ್ಯತೆ ಅದರಲ್ಲಿದೆ. ಅದರಂತೆ ಇಲ್ಲಿ ಪ್ರತ್ಯಕ್ಷಸ್ವರೂಪಯೋಗ್ಯತಾ ಇರುವುದರಿಂದ ಪರಮಾಣ್ವಾದಿಗಳಲ್ಲಿಯೂ 'ಬಹಿರಿ....ಗುಣವತ್ತ್ವ'ರೂಪ ಭೂತತ್ವಲಕ್ಷಣವು ಬಂದೇ ಬರುತ್ತದೆ. ಸ್ವರೂಪಯೋಗ್ಯತೆ ಇದ್ದರೆ ಪರಮಾಣು ಪ್ರತ್ಯಕ್ಷ ಏಕೆ ಆಗಬಾರದು ? ಎಂದು ಶಂಕಿಸಿದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಮಹತ್ತ್ವ—' ಇತಿ. ಕಾರಣಸಾಮಗ್ರಿಯು ಪರಿಪೂರ್ಣವಾಗಿದ್ದರೆ ಆಗ ಕಾರ್ಯವಾಗುವುದು. ಪ್ರತ್ಯಕ್ಷವಾಗಲು ಕೇವಲ ರೂಪವೊಂದಿದ್ದರೆ ಸಾಲದು. ಮಹತ್ಪರಿಮಾಣರೂಪವಾದ ಇನ್ನೊಂದು ಕಾರಣವೂ ಬೇಕು. ಪರಮಾಣುವಿನಲ್ಲಿ ಮಹತ್ತ್ವರೂಪ ಬೇರೆ ಕಾರಣವಿಲ್ಲದಿರುವುದ ರಿಂದ ಪ್ರತ್ಯಕ್ಷವಾಗುವುದಿಲ್ಲ.

ಹೀಗೆ ಹೇಳಿದರೂ ಚಕ್ಷುರಿಂದ್ರಿಯದಲ್ಲಿರುವ ರೂಪಾದಿಗಳಲ್ಲಿ ಪ್ರತ್ಯಕ್ಷಸ್ವರೂಪ ಯೋಗ್ಯತೆಯೇ ಇಲ್ಲ. ಹೀಗಿರುವಾಗ ಭೂತತ್ವಲಕ್ಷಣ ಅಲ್ಲಿ ಬರುವುದು ಹೇಗೆ ? ಅದ ಕ್ಕೋಸ್ಕರ ಬೇರೆ ರೀತಿಯಿಂದ ಭೂತತ್ವಪರಿಷ್ಕಾರವನ್ನು ತೋರಿಸುತ್ತಾನೆ. 'ಅಥವಾ' —ಇತಿ. ಆತ್ಮಾವೃತ್ತಯಃ ಯೇ ವಿಶೇಷಗುಣಾಃ ತದ್ವತ್ತ್ವಂ, ಆತ್ಮನಲ್ಲಿ ಇಲ್ಲದಿರುವ ಯಾವ ವಿಶೇಷಗುಣಗಳಿವೆಯೋ (ಅಂದರೆ ಜ್ಞಾನಾದಿಗಳಿಗಿಂತ ಬೇರೆಯಾದ ರೂಪಾದಿ ಗಳು) ಅವುಗಳಿಂದ ಕೂಡಿರುವುದು ಭೂತವೆಂದರೆ ಆಗ ಎಲ್ಲಿಯೂ ಅವ್ಯಾಪ್ತಿ ಬರುವುದಿಲ್ಲ.

**ಚತ್ವಾರಿ ಸ್ಪರ್ಶನಂತಿ ಹಿ || ೨೬ ||**

ಚತ್ವಾರೀತಿ । ಪೃಥಿವ್ಯಪ್ತೇಜೋವಾಯೂನಾಂ ಸ್ಪರ್ಶವತ್ತ್ವಂ || ೨೬ ||

ಪೃಥಿವೀ, ಅಪ್, ತೇಜ, ವಾಯುಗಳಲ್ಲಿ ಸ್ಪರ್ಶವಿರುವುದರಿಂದ 'ಸ್ಪರ್ಶವತ್ತ್ವಂ' ಇವುಗಳ ಸಾಧರ್ಮ್ಯವಾಗುತ್ತದೆ.

**ದ್ರವ್ಯಾರಂಭಕತ್ವ ಚತುರ್ಷು ಸ್ಯಾತ್—**

**ಪೃಥಿವ್ಯಪ್ತೇಜೋವಾಯುಷು ಚತುರ್ಷು ದ್ರವ್ಯಾರಂಭಕತ್ವಮ್ । ನ ಚ ದ್ರವ್ಯಾನಾರಂಭಕೇ ಘಟಾದಾವವ್ಯಾಪ್ತಿಃ, ದ್ರವ್ಯಸಮವಾಯಿಕಾರಣ ವೃತ್ತಿದ್ರವ್ಯತ್ವವ್ಯಾಪ್ಯಜಾತಿಮತ್ತ್ವಸ್ಯ ವಿವಕ್ಷಿತತ್ವಾತ್ ||**

ದ್ರವ್ಯಾರಂಭಕವೆಂದರೆ ದ್ರವ್ಯಸಮವಾಯಿಕಾರಣವೆಂದರ್ಥ. ಘಟಾದಿಗಳು ಅಂತ್ಯಾವಯವಿಯಾದುದರಿಂದ ಅವುಗಳಿಂದ ಒಂದು ಕಾರ್ಯವಾಗುವುದಿಲ್ಲ. ಆದುದರಿಂದ 'ದ್ರವ್ಯಸಮವಾಯಿಕಾರಣತ್ವರೂಪ ಧರ್ಮವು ಅಲ್ಲಿ ಬಾರದಿರುವುದರಿಂದ ಅವ್ಯಾಪ್ತಿ

ಬರುತ್ತದೆ. ಅದಕ್ಕೋಸ್ಕರ ಜಾತಿಘಟಿತಲಕ್ಷಣ ಮಾಡಿ ತೋರಿಸುತ್ತಾನೆ. ದ್ರವ್ಯಸ್ಯ ಕಾರ್ಯದ್ರವ್ಯವಾದ ಘಟಾದಿಗಳಿಗೆ ಯತ್ಸಮವಾಯಿಕಾರಣಂ—ಯಾವುದು ಸಮವಾಯಿ ಕಾರಣವೋ, (ಕಪಾಲದ್ವಯ) ತದ್ವೃತ್ತಿಃ—ಅದರಲ್ಲಿರುವ, ದ್ರವ್ಯತ್ವವ್ಯಾಪ್ಯಾ ಯಾ ಜಾತಿಃ—ದ್ರವ್ಯತ್ವಕ್ಕೆ ಸಾಕ್ಷಾದ್ವ್ಯಾಪ್ಯವಾದ ಪೃಥಿವೀತ್ವಾದಿ ಜಾತಿಗಳು. ತಾದೃಶ ಜಾತಿಮತ್ತ್ವಂ—ಆ ಜಾತಿಯುಳ್ಳದ್ದು ಎಲ್ಲಾ ಪೃಥಿವ್ಯಾದಿಗಳಾಗುತ್ತವೆ. ಘಟವು ಸಮವಾಯಿಕಾರಣವಾಗದಿದ್ದರೂ, ಸಮವಾಯಿಕಾರಣಗಳಲ್ಲಿರುವ ಪೃಥಿವೀತ್ವ ಜಾತಿಯಿಂದ ಕೂಡಿರುವುದರಿಂದ ದ್ರವ್ಯಾರಂಭಕತ್ವ ಬಂದಂತಾಗುತ್ತದೆ.

—ಅಥಾಕಾಶಶರೀರಿಣಾಮ್ ||

**ಅವ್ಯಾಪ್ಯವೃತ್ತಿಃ ಕ್ಷಣಿಕೋ ವಿಶೇಷಗುಣ ಇಷ್ಯತೇ || ೨೭ ||**

**ಆಕಾಶ ಶರೀರಿಣಾಮಿತಿ || ಆಕಾಶಾತ್ಮನಾಮವ್ಯಾಪ್ಯವೃತ್ತಿಕ್ಷಣಿಕ ವಿಶೇಷಗುಣವತ್ತ್ವಂ ಸಾಧರ್ಮ್ಯಮಿತ್ಯರ್ಥಃ || ಆಕಾಶಸ್ಯ ವಿಶೇಷಗುಣಃ ಶಬ್ದಃ, ಸ ಚಾವ್ಯಾಪ್ಯವೃತ್ತಿಃ | ಯದಾ ಕಿಂಚಿದವಚ್ಛೇದನ ಶಬ್ದ ಉತ್ಪದ್ಯತೇ ತದನ್ಯಾವಚ್ಛೇದೇನ ತದಭಾವಸ್ಯಾಪಿ ಸತ್ತ್ವಾತ್ ||**

ಶರೀರೀ ಅಂದರೆ ಆತ್ಮಾ. ಆಕಾಶ ಮತ್ತು ಆತ್ಮ ಈ ಎರಡಕ್ಕೆ 'ಅವ್ಯಾಪ್ಯವೃತ್ತಿ ವಿಶೇಷಗುಣವತ್ವಂ' 'ಕ್ಷಣಕವಿಶೇಷಗುಣವತ್ತ್ವಂ' ಎಂದು ಸಾಧರ್ಮ್ಯ. ಅವ್ಯಾಪ್ಯ ವರ್ತತೇ ಇತಿ ಅವ್ಯಾಪ್ಯವೃತ್ತಿಃ, ಕ್ಷಣೇ ಭವಃ ಕ್ಷಣಿಕಃ ಬುದ್ಧ್ಯಾದಿಗಳನ್ನು ವಿಶೇಷಗುಣವೆಂದು ಮುಂದೆ ಹೇಳುತ್ತಾನೆ. 'ಸ್ವಾತ್ಯಂತಾಭಾವಸಮಾನಾಧಿಕರಣತ್ವಂ' ಅವ್ಯಾಪ್ಯವೃತ್ತಿತ್ವಮ್. ಸ್ವ ಅಂದರೆ ವಿಶೇಷಗುಣ. ಸ್ವಪ್ರತಿಯೋಗಿಕಾತ್ಯಂತಾಭಾವ—ತನ್ನ ಅತ್ಯಂತಾಭಾವ. ಅದಕ್ಕೆ ಯಾವುದು ಅಧಿಕರಣವೋ ಅಲ್ಲಿ ಇರುವುದು. 'ಸ್ವಾಧಿಕರಣವೃತ್ತ್ಯಭಾವಪ್ರತಿಯೋಗೀ' ಎಂದು ಫಲಿತವಾಗುತ್ತದೆ. ತಾನು ಇದ್ದಲ್ಲಿ ತನ್ನ ಅತ್ಯಂತಾಭಾವವೂ ಇರುತ್ತದೆ. ಕಪಿಸಂಯೋಗವು ಅವ್ಯಾಪ್ಯವೃತ್ತಿಯಾದ ಗುಣ. (ಇದು ವಿಶೇಷಗುಣವಲ್ಲ.) ವೃಕ್ಷದ ಅಗ್ರಭಾಗದಲ್ಲಿ ಕಪಿಸಂಯೋಗವಿದ್ದರೆ ಅದೇ ಮರದ ಮೂಲಭಾಗದಲ್ಲಿ ಕಪಿಸಂಯೋಗದ ಅಭಾವವೂ ಇರುತ್ತದೆ. ಆದುದರಿಂದ ಅದು ಅವ್ಯಾಪ್ಯವೃತ್ತಿಯಾಗುತ್ತದೆ. ಹಾಗೆಯೇ ಶಬ್ದರೂಪ ವಿಶೇಷಗುಣವು ಆಕಾಶದ ಘಂಟಾಪ್ರದೇಶದಲ್ಲಿ ಇದ್ದರೆ ಅದೇ ಆಕಾಶದ ಇನ್ನೊಂದು ಪ್ರದೇಶದಲ್ಲಿ ಇರುವುದಿಲ್ಲ. ಆಕಾಶರೂಪ ಏಕಾಧಿಕರಣದಲ್ಲಿ ಶಬ್ದವೂ, ಶಬ್ದದ ಅತ್ಯಂತಾಭಾವವೂ ಇರುವುದರಿಂದ ಶಬ್ದವು ಅವ್ಯಾಪ್ಯವೃತ್ತಿ ವಿಶೇಷಗುಣವಾಗುತ್ತದೆ. ಇದನ್ನೇ 'ಯದಾ ಕಿಂಚಿತ್'—ವಾಕ್ಯದಿಂದ ವಿವರಿಸುತ್ತಾನೆ. ಘಂಟಾವಚ್ಛೇದದಿಂದ ಆಕಾಶದಲ್ಲಿ ಶಬ್ದವಿದ್ದರೂ ಅದೇ ಕಾಲದಲ್ಲಿ ಅನ್ಯಾವಚ್ಛೇದದಿಂದ ಶಬ್ದಾಭಾವವೂ ಇರುತ್ತದೆ. ಹೀಗೆ ಅವ್ಯಾಪ್ಯವೃತ್ತಿ ವಿಶೇಷಗುಣವುಳ್ಳವುಗಳು ಆಕಾಶಾತ್ಮಗಳಾಗುತ್ತವೆ.

ಕ್ಷಣಿಕತ್ವಂ ಚ ತೃತೀಯಕ್ಷಣವೃತ್ತಿಧ್ವಂಸಪ್ರತಿಯೋಗಿತ್ವಂ । ಯೋಗ್ಯವಿಭುವಿಶೇಷ ಗುಣಾನಾಂ ಸ್ವೋತ್ತರವರ್ತಿಗುಣನಾಶ್ಯತ್ವಾತ್ಪ್ರಥಮಶಬ್ದಸ್ಯ ದ್ವಿತೀಯಶಬ್ದೇನ ನಾಶಃ । ಏವಂ ಜ್ಞಾನಾದೀನಾಮಪಿ, ಜ್ಞಾನಾದಿಕಂ ಯದಾತ್ಮನಿ ವಿಭೌಶರೀರಾ ದ್ಯವಚ್ಛೇದೇನೋತ್ಪದ್ಯತೇ ತದಾ ಘಟಾದ್ಯವಚ್ಛೇದೇನ ತದಭಾವೋ ಸ್ತ್ಯೇವ । ಏವಂ ಜ್ಞಾನಾದಿಕಮಪಿ ಕ್ಷಣದ್ವಯಾವಸ್ಥಾಯಿ । ಇತ್ಥಂ ಚಾವ್ಯಾಪ್ಯವೃತ್ತಿ ವಿಶೇಷಗುಣವತ್ತ್ವಂ ಚಾರ್ಥಃ । ಪೃಥಿವ್ಯಾದೌ ರೂಪಾದಿವಿಶೇಷಗುಣೋಽಸ್ತೀ ತ್ಯತೋಽವ್ಯಾಪ್ಯವೃತ್ತೀತ್ಯುಕ್ತಮ್ । ಪೃಥಿವ್ಯಾದೌ ಅವ್ಯಾಪ್ಯವೃತ್ತಿಃ ಸಂಯೋ ಗಾದಿರಸ್ತೀತ್ಯತೋ ವಿಶೇಷಗುಣೇತ್ಯುಕ್ತಮ್ ॥

ಬೌದ್ಧರು ಎಲ್ಲಾ ಪದಾರ್ಥಗಳೂ ಕ್ಷಣಿಕವೆನ್ನುತ್ತಾರೆ. ಅವರು ಹೇಳುವ ಕ್ಷಣಿಕತ್ವ ವನ್ನು ಇಲ್ಲಿ ಅಂಗೀಕರಿಸುವುದಿಲ್ಲ. ಕ್ಷಣಿಕತ್ವದ ಪರಿಷ್ಕಾರ ತೋರಿಸುತ್ತಾನೆ. 'ತೃತೀಯ —' ಇತಿ. ಮೂರನೆಯ ಕ್ಷಣದಲ್ಲಿ ಅಂದರೆ ವಿಶೇಷಗುಣ ಹುಟ್ಟಿದ ಮೇಲಿನ ಮೂರನೇ ಕ್ಷಣದಲ್ಲಿ ಇರುವ ಯಾವ ಧ್ವಂಸವಿದೆಯೋ ಅಂದರೆ ಆ ಗುಣದ ಧ್ವಂಸ. ಅದರ ಪ್ರತಿ ಯೋಗಿಯೆಂದರೆ ಅದೇ ವಿಶೇಷಗುಣವಾಗುತ್ತದೆ. ಯೋಗ್ಯವಿಭುವಿಶೇಷಗುಣಗಳ ಉತ್ಪತ್ತಿನಾಶನಿಯಮವನ್ನು ತೋರಿಸುತ್ತಾನೆ. 'ಯೋಗ್ಯ—' ಇತಿ. 'ಪ್ರತ್ಯಕ್ಷವಿಷ ಯತಾವಚ್ಛೇದಕಧರ್ಮವಿಶೇಷಃ' ಯೋಗ್ಯತ್ವಮ್. ಪ್ರತ್ಯಕ್ಷವಾಗಲು ಯೋಗ್ಯವಾದ ಗುಣಗಳೆಂದು ತಾತ್ಪರ್ಯ. ವಿಭು—ಪ್ರಕೃತ ಆಕಾಶಾತ್ಮಗಳು. ಪ್ರತ್ಯಕ್ಷಯೋಗ್ಯ ಗಳಾದ ಆತ್ಮಾಕಾಶಗಳ ಶಬ್ದಾದಿವಿಶೇಷಗುಣಗಳು ಮೊದಲನೆಯ ಕ್ಷಣದಲ್ಲಿ ಹುಟ್ಟುತ್ತವೆ. ಎರಡನೆಯ ಕ್ಷಣದಲ್ಲಿ ಇರುತ್ತವೆ (ಅವುಗಳ ಸ್ಥಿತಿ). ಮೂರನೆಯ ಕ್ಷಣದಲ್ಲಿ ನಾಶವಾಗು ತ್ತವೆಂದು ತಾರ್ಕಿಕರ ಸಿದ್ಧಾಂತ. ಮೂರನೆಯ ಕ್ಷಣದಲ್ಲಿ ವಿನಾಶವಾಗುವ ಸ್ವಭಾವ ವುಳ್ಳವುಗಳೇ ಕ್ಷಣಿಕಗಳು. ಈ ಗುಣಗಳು ಯಾವಾಗಲೂ ತಮ್ಮಿಂದ ಮುಂದೆ ಹುಟ್ಟಿದ ಗುಣಗಳಿಂದ ನಾಶಹೊಂದುತ್ತವೆ. ಮೂರನೆಯ ಕ್ಷಣದಲ್ಲಿ ಹುಟ್ಟಿದ ಇನ್ನೊಂದು ಗುಣ ದಿಂದ ಎರಡನೆಯ ಕ್ಷಣದಲ್ಲಿರುವ ಗುಣಗಳು ನಾಶಹೊಂದುತ್ತವೆ. ಶಬ್ದದಂತೆ ಜ್ಞಾನವೂ ಅವ್ಯಾಪ್ಯವೃತ್ತಿ ಮತ್ತು ಕ್ಷಣಿಕವೆಂದು ತೋರಿಸುತ್ತಾನೆ. 'ಏವಂ—' ಇತಿ. ಆದಿಪದ ದಿಂದ ಇಚ್ಛಾದಿಗಳನ್ನು ತೆಗೆದುಕೊಳ್ಳಬೇಕು. ಯೋಗ್ಯವೆಂದುದರಿಂದ ಧರ್ಮ, ಅಧರ್ಮ, ಭಾವನಾರೂಪಸಂಸ್ಕಾರ, ಇವುಗಳನ್ನು ಬಿಡಬೇಕು. ಅವು ಪ್ರತ್ಯಕ್ಷಯೋಗ್ಯವಾಗದಿರು ವುದರಿಂದ ಅಯೋಗ್ಯಗಳು. 'ಜ್ಞಾನಾದಿಕಂ—' ಇತಿ. ಜ್ಞಾನಾದಿಗಳು ಯಾವಾಗ ಆತ್ಮನಿ—ಜೀವಾತ್ಮನಲ್ಲಿ, ವಿಭೌ—ಸರ್ವಮೂರ್ತದ್ರವ್ಯಸಂಯುಕ್ತನಾದವನಲ್ಲಿ, ಶರೀರಾ ದ್ಯವಚ್ಛೇದೇನ—ಶರೀರಪ್ರದೇಶದಿಂದ, ಉತ್ಪದ್ಯತೇ — ಹುಟ್ಟುತ್ತವೆಯೋ, ತದಾ— ಅದೇ ಕಾಲದಲ್ಲಿ, ಘಟಾದ್ಯವಚ್ಛೇದೇನ—ಘಟಾದಿಪ್ರದೇಶದಿಂದ, ತದಭಾವಃ—ಜ್ಞಾನಾ ದ್ಯಭಾವಗಳು, ಅಸ್ತ್ಯೇವ—ಇದ್ದೇ ಇರುತ್ತವೆ. ಸಂಯೋಗದಂತೆ ಜ್ಞಾನವೂ ಕೂಡಾ ಒಂದೇ ಅಧಿಕರಣದಲ್ಲಿ ತಾನೂ, ತನ್ನ ಅಭಾವವೂ ಇರುವುದರಿಂದ ಅವ್ಯಾಪ್ಯವೃತ್ತಿ

ಯಾಗುತ್ತದೆ. ಇವೂ ಕೂಡಾ ಎರಡು ಕ್ಷಣದಲ್ಲಿ ಮಾತ್ರ ಇರುವುದರಿಂದ, ತೃತೀಯ ಕ್ಷಣಧ್ವಂಸಪ್ರತಿಯೋಗಿ ಆಗುವುದರಿಂದ ಕ್ಷಣಿಕಗಳಾಗುತ್ತವೆ. ಉಕ್ತವಾದ ಸಾಧರ್ಮ್ಯದ ದಳಕೃತ್ಯವನ್ನು ತೋರಿಸುತ್ತಾನೆ. 'ಪೃಥಿವ್ಯಾದೌ—' ಇತಿ. ಕೇವಲ 'ವಿಶೇಷ ಗುಣತ್ವಂ' ಎಂದರೂ ಪೃಥಿವ್ಯಾದಿಗಳಲ್ಲಿ ರೂಪಾದಿವಿಶೇಷಗುಣಗಳಿರುವುದರಿಂದ ಅಲ್ಲಿ ಅತಿವ್ಯಾಪ್ತವಾಗುತ್ತದೆ. ಅದಕ್ಕೋಸ್ಕರ ಅವ್ಯಾಪ್ಯವೃತ್ತಿಯಾದ ವಿಶೇಷಗುಣಗಳಿರಬೇಕೆಂದು ಹೇಳಿದೆ. ರೂಪಾದಿಗಳು ಅವ್ಯಾಪ್ಯವೃತ್ತಿಗಳಲ್ಲ. ಅವು ಸಂಪೂರ್ಣವಸ್ತುವಿನಲ್ಲಿ ಇರುತ್ತವೆ. ಕೇವಲ 'ಅವ್ಯಾಪ್ಯವೃತ್ತಿಗುಣವತ್ತ್ವಂ' ಎಂದರೂ ಪೃಥಿವ್ಯಾದಿಗಳಲ್ಲಿಯೇ ಅತಿವ್ಯಾಪ್ತಿ ಬರುತ್ತದೆ. ಸಂಯೋಗವು ಅವ್ಯಾಪ್ಯವೃತ್ತಿಯಾಗಿ ಅಲ್ಲಿದೆ. ಆದರೆ ಅದು ವಿಶೇಷಗುಣವಲ್ಲ. ಆದುದರಿಂದ ವಿಶೇಷಗುಣವೆಂದು ಹೇಳಿದೆ. ಹೀಗೆ ಎರಡೂ ಪದಗಳು ಸಾರ್ಥಕಗಳಾಗಿವೆ.

ನ ಚ ರೂಪಾದೀನಾಮಪಿ ಕದಾಚಿತ್ ತೃತೀಯಕ್ಷಣೇ ನಾಶಸಂಭವಾತ್ ಕ್ಷಣಿಕವಿಶೇಷಗುಣವತ್ತ್ವಂ ಕ್ಷಿತ್ಯಾದಾವತಿವ್ಯಾಪ್ತಮಿತಿ ವಾಚ್ಯಮ್, ಚತುಃಕ್ಷಣವೃತ್ತಿಜನ್ಯಾವೃತ್ತಿಜಾತಿಮದ್ವಿಶೇಷಗುಣವತ್ತ್ವಸ್ಯ ತದರ್ಥತ್ವಾತ್ । ಅಪೇಕ್ಷಾಬುದ್ಧಿಃ ಕ್ಷಣತ್ರಯಂ ತಿಷ್ಠತಿ, ಕ್ಷಣಚತುಷ್ಟಯಂ ತು ನ ಕಿಮಪಿ ಜನ್ಯಜ್ಞಾನಾದಿಕಂ ತಿಷ್ಠತಿ। ರೂಪತ್ವಾದಿಕಂ ತು ಕ್ಷಣಚತುಷ್ಟಯಸ್ಥಾಯಿನ್ಯಪಿ ರೂಪಾದೌ ವರ್ತತ ಇತಿ ತದ್ವ್ಯುದಾಸಃ । ಈಶ್ವರಜ್ಞಾನಸ್ಯ ಚತುಃಕ್ಷಣವೃತ್ತಿತ್ವಾತ್ ಜ್ಞಾನತ್ವಸ್ಯ ತದ್ವೃತ್ತಿತ್ವಾಜ್ಜನ್ಯೇತ್ಯುಕ್ತಮ್ । ಯದ್ಯಾಕಾಶಜೀವಾತ್ಮನೋಃ ಸಾಧರ್ಮ್ಯಂ ತದಾ ಜನ್ಯೇತಿ ನದೇಯಮ್, ದ್ವೇಷತ್ವಾದಿಕಮಾದಾಯ ಲಕ್ಷಣಸಮನ್ವಯಾತ್ । ಪರಮಮಹತ್ತ್ವಸ್ಯ ತಾದೃಶಗುಣತ್ವಾಚ್ಚ ಚತುರ್ಥಕ್ಷಣೇ ದ್ವಿತ್ವಾದೀನಾಮಪಿ ನಾಶಾಭ್ಯುಪಗಮಾತ್, ದ್ವಿತ್ವಾದೀನಾಮಪಿ ತಥಾತ್ವಾತ್ತದ್ವಾರಣಾಯ ವಿಶೇಷೇತಿ । ತ್ರಿಕ್ಷಣವೃತ್ತಿತ್ವಂ ವಾ ವಾಚ್ಯಮ್ । ದ್ವೇಷತ್ವಾದಿಕಮಾದಾಯಾತ್ಮನಿ ಲಕ್ಷಣಸಮನ್ವಯಃ ।। ೨೭ ।।

'ಕ್ಷಣಿಕವಿಶೇಷಗುಣವತ್ತ್ವಂ' ಎಂಬ ಎರಡನೆಯ ಸಾಧರ್ಮ್ಯದ ಪರಿಷ್ಕಾರ ತೋರಿಸುತ್ತಾನೆ. ಕೆಲವು ರೂಪಾದಿಗಳು ಹುಟ್ಟಿ ಮೂರನೇ ಕ್ಷಣದಲ್ಲಿಯೇ ನಾಶಹೊಂದುತ್ತವೆ. ಆಗ ಅಂತಹ ರೂಪಾದಿವಿಶೇಷಗುಣಗಳನ್ನು ಸ್ವೀಕರಿಸಿದರೆ ಪೃಥಿವ್ಯಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಕ್ಷಣಿಕವಿಶೇಷಗುಣವೆಂದರೆ ಮೂರನೆಯ ಕ್ಷಣದಲ್ಲಿ ನಾಶವಾಗುವ ರೂಪಾದಿಗಳು. ಅವುಗಳು ಉಳ್ಳದ್ದು ಪೃಥಿವ್ಯಾದಿಗಳಾಗುತ್ತವೆ. ಆದುದರಿಂದ ಚತುಃಕ್ಷಣ....ಗುಣವತ್ತ್ವಂ' ಎಂದು ಪರಿಷ್ಕರಿಸಿ ಹೇಳಬೇಕು. ಹೀಗೆ ಹೇಳಿದರೆ ರೂಪಾದಿಗಳನ್ನು ತೆಗೆದುಕೊಳ್ಳಲಾಗುವುದಿಲ್ಲ. ಚತುಃಕ್ಷಣವೃತ್ತೀನಿ ಯಾನಿ ಜನ್ಯಾನಿ— ನಾಲ್ಕು ಕ್ಷಣಗಳಲ್ಲಿರುವ ಯಾವ ಜನ್ಯಪದಾರ್ಥಗಳಿವೆಯೋ, ಅಂದರೆ ಘಟಾದಿಗಳು, ಹಾಗೆಯೇ

ರೂಪಾದಿಗಳು, ತೇಷು ಅವೃತ್ತಿಃ ಯಾ ಜಾತಿಃ—ಅವುಗಳಲ್ಲಿ ಇಲ್ಲದಿರುವ ಯಾವ ಜಾತಿ ಇದೆಯೋ ಅಂದರೆ ಶಬ್ದತ್ವ, ಜ್ಞಾನತ್ವಾದಿ ಜಾತಿಗಳು. ತಾದೃಶಜಾತಿಮಾನ್ ಯೋವಿಶೇಷಗುಣಃ — ಆ ಶಬ್ದತ್ವಾದಿಜಾತಿಯುಳ್ಳ ವಿಶೇಷಗುಣಗುಣಗಳು ಅಂದರೆ ಶಬ್ದ ಜ್ಞಾನಾದಿ ವಿಶೇಷಗುಣಗಳಾಗುತ್ತವೆ. ತದ್ವತ್ತ್ವಂ — ಆ ವಿಶೇಷಗುಣವುಳ್ಳವುಗಳು ಅಂದರೆ ಆಕಾಶ ಆತ್ಮಗಳೇ ಆಗುತ್ತವೆ. ಹೀಗೆ ವಿವಕ್ಷಾಮಾಡಿರುವುದರಿಂದ ಪೃಥಿವ್ಯಾದಿಗಳಲ್ಲ ಅತಿವ್ಯಾಪ್ತಿ ಬರುವುದಿಲ್ಲ. ರೂಪಾದಿಗಳು ಚತುಃಕ್ಷಣವೃತ್ತಿಜನ್ಯಾವೃತ್ತಿಗಳಾಗುವುದಿಲ್ಲ. ಚತುಃಕ್ಷಣ ಎಂದು ಹೇಳಿರುವುದು ಕೇವಲ ನಾಲ್ಕೇ ಕ್ಷಣವೆಂದಲ್ಲ. ಅಧಿಕ ಕಾಲಕ್ಕೆ ಅದು ಉಪಲಕ್ಷಣ. ಅಧಿಕಕಾಲದಲ್ಲಿರುವ ಜನ್ಯವಾದ ವಸ್ತುವಿನಲ್ಲಿ ಇಲ್ಲದಿರುವ ಜಾತಿಯುಳ್ಳ ವಿಶೇಷ ಗುಣಗಳಿಂದ ಕೂಡಿರುವುದು ಎಂದರ್ಥ. ಹೀಗೆ ಪರಿಷ್ಕೃತಲಕ್ಷಣದ ದಳಕೃತ್ಯವನ್ನು ತೋರಿಸುತ್ತಾನೆ. ಮೊದಲು ಅಪೇಕ್ಷಾಬುದ್ಧಿಯ ಕಾಲವನ್ನು ತೋರಿಸುತ್ತಾನೆ. 'ಅಪೇಕ್ಷಾ—' ಇತಿ. 'ಅಯಮೇಕಃ ಅಯಮೇಕಃ ಇಮೌ ದ್ವೌ' ಈ ರೀತಿಯಾದ ದ್ವಿತ್ವವಿಷಯಕಜ್ಞಾನಕ್ಕೆ ಅಪೇಕ್ಷಾಬುದ್ಧಿಯೆಂದು ಹೆಸರು. ಇದು ಮಾತ್ರ ಮೂರು ಕ್ಷಣ ಇರುತ್ತದೆ. ಇದನ್ನು ಬಿಟ್ಟರೆ ಇನ್ನಾವ ಜ್ಞಾನವೂ ಮೂರು ಕ್ಷಣದ ವರೆಗೆ ಇರುವುದೇ ಇಲ್ಲ. ಎರಡು ಕ್ಷಣವಿದ್ದು ಮೂರನೇ ಕ್ಷಣದಲ್ಲಿ ನಾಶವಾಗುತ್ತವೆ. ಅಪೇಕ್ಷಾಬುದ್ಧಿಯು ನಾಲ್ಕನೇ ಕ್ಷಣದಲ್ಲಿ ನಾಶವಾಗುತ್ತದೆ. ಯಾವ ಜನ್ಯಜ್ಞಾನವಾದರೂ ನಾಲ್ಕು ಕ್ಷಣದ ವರೆಗೆ ಇರುವುದೇ ಇಲ್ಲ.

ರೂಪತ್ವಾದಿ ಜಾತಿಗಳು ಅಧಿಕಕಾಲದಲ್ಲಿರುವ (ನಾಲ್ಕು ಕ್ಷಣದ ಮೇಲೆ ಇರುವ) ರೂಪಾದಿಗಳಲ್ಲಿರುವುದರಿಂದ ಅವುಗಳನ್ನು ತೆಗೆದುಕೊಂಡು ಪೃಥಿವ್ಯಾದಿಗಳಲ್ಲಿ ಅತಿವ್ಯಾಪ್ತಿ ಹೇಳಲು ಸಾಧ್ಯವಿಲ್ಲ. ಇದನ್ನೇ 'ರೂಪತ್ವಾ—' ವಾಕ್ಯದಿಂದ ಹೇಳಿರುತ್ತಾನೆ. 'ಚತುಃಕ್ಷಣವೃತ್ತಿ' ಎಂಬ ಪದ ಕೊಟ್ಟಿರುವುದರಿಂದ ಪೃಥಿವ್ಯಾದಿಗಳಲ್ಲಿ ಅತಿವ್ಯಾಪ್ತಿ ಬರುವುದಿಲ್ಲ. 'ಚತುಃಕ್ಷಣವೃತ್ತ್ಯವೃತ್ತಿಜಾತಿ....ಣವತ್ತ್ವಂ' ಎಂದು ಹೇಳಿದರೂ ಪೃಥಿವ್ಯಾದಿಗಳಲ್ಲಿ ಅತಿವ್ಯಾಪ್ತಿ ನಿವಾರಣೆಯಾಗುತ್ತದೆ. ಪುನಃ ಜನ್ಯಾವೃತ್ತಿ ಎಂದುದೇಕೆ ಅಂದರೆ ಈಶ್ವರಜ್ಞಾನ ಸಂಗ್ರಹಕ್ಕೋಸ್ಕರ ಜನ್ಯಪದವನ್ನು ಹೇಳಿರುತ್ತಾನೆ. ಈಶ್ವರಜ್ಞಾನವೂ ಕೂಡಾ ನಾಲ್ಕು ಕ್ಷಣಗಳಿಗಿಂತ ಅಧಿಕಕಾಲದಲ್ಲಿ ಇರುತ್ತದೆ. ಜನ್ಯಪದ ಕೊಡದಿದ್ದರೆ ಈಶ್ವರನಲ್ಲಿ ಅವ್ಯಾಪ್ತಿ ಬರುತ್ತದೆ. ಚತುಃಕ್ಷಣವೃತ್ತಿ ಅಂದರೆ ಈಶ್ವರಜ್ಞಾನ. ತದವೃತ್ತಿಜಾತಿಮದ್ವಿಶೇಷಗುಣವೆಂದರೆ ಈಶ್ವರಜ್ಞಾನವನ್ನು ತೆಗೆದುಕೊಳ್ಳಲು ಸಾಧ್ಯವಿಲ್ಲ. ಅದು ತದ್ವೃತ್ತಿಜಾತಿಮದ್ವಿಶೇಷಗುಣವಾಗುತ್ತದೆ. ಅದುದರಿಂದ ಜನ್ಯಾವೃತ್ತಿ ಎಂದು ಹೇಳಿದೆ. ಈಶ್ವರಜ್ಞಾನವು ಚತುಃಕ್ಷಣವೃತ್ತಿಯಾಗಿ ಜನ್ಯವಾಗುವುದಿಲ್ಲ ಜನ್ಯಾವೃತ್ತಿಯಾದ ಜಾತಿಯಿಂದ ಈಶ್ವರಜ್ಞಾನತ್ವವನ್ನು ತೆಗೆದುಕೊಂಡರೆ ಅದು ಉಳ್ಳದ್ದು ಈಶ್ವರೀಯ ಜ್ಞಾನ. ಅದು ಉಳ್ಳದ್ದು ಈಶ್ವರನಾಗುತ್ತಾನೆ. ಹೀಗೆ ಹೇಳಿರುವುದರಿಂದ ಇದು ಆಕಾಶ ಜೀವೇಶ್ವರ ಈ ಮೂರರ ಸಾಧರ್ಮ್ಯವೂ ಆಗುತ್ತದೆ.

ಕಾರಿಕೆಯಲ್ಲಿ ಶರೀರೀಪದದಿಂದ ಶರೀರೋಪಲಕ್ಷಿತನಾದ ಜೀವನೇ ವಿವಕ್ಷಿತನಾದರೆ

ಆಗ ಜನ್ಯಪದವನ್ನು ಕೊಡಬೇಕಾಗಿಲ್ಲವೆಂದು ಹೇಳುತ್ತಾನೆ. 'ಯದ್ವಾಕಾಶ'—ಇತಿ. 'ಚತುಃಕ್ಷಣವೃತ್ತ್ಯವೃತ್ತಿ ಜಾತಿಮದ್ವಿಶೇಷಗುಣವತ್ತ್ವಂ' ಎಂದು ಜನ್ಯಾವೃತ್ತಿಪದ ಸೇರಿಸದೇ ಲಾಘವದಿಂದ ಹೇಳಿದರೂ ದೋಷ ಬರುವುದಿಲ್ಲ. ಚತುಃಕ್ಷಣವೃತ್ತೀನಿ ಯಾನಿ ಘಟಾದೀನಿ ರೂಪಾದೀನಿ ಚ—ನಾಲ್ಕುಕ್ಷಣದವರೆಗಿರುವವುಗಳೆಂದರೆ ಘಟಾದಿಗಳು ಅಥವಾ ರೂಪಾದಿಗಳು. ತದವೃತ್ತಿಃ ಯಾ ಜಾತಿಃ—ಆ ಘಟಾದಿಗಳಲ್ಲಿ ಅಥವಾ ರೂಪಾದಿಗಳಲ್ಲಿ ಇಲ್ಲದಿರುವ ಜಾತಿಯೆಂದರೆ ದ್ವೇಷತ್ವಾದಿ ಜಾತಿಗಳು. ತಾದೃಶಜಾತಿಮಾನ್ ಯೋ ವಿಶೇಷಗುಣಃ—ದ್ವೇಷಾದಿ (ಶಬ್ದ) ವಿಶೇಷಗುಣಗಳಾಗುತ್ತವೆ. ಅದು ಉಳ್ಳದ್ದು ಜೀವಾತ್ಮಾ ಆಕಾಶ ಈ ಎರಡೇ ಆಗುತ್ತವೆ. ಜ್ಞಾನತ್ವವು ವೃತ್ತ್ಯವೃತ್ತಿಯಾಗದಿದ್ದರೂ ಅದನ್ನು ಪ್ರಕೃತ ತೆಗೆದುಕೊಳ್ಳದೆ ದ್ವೇಷತ್ವಾದಿಗಳನ್ನೇ ತೆಗೆದುಕೊಂಡು ಸಮನ್ವಯ ಮಾಡಬೇಕು. ಪೃಥಿವ್ಯಾದಿಗಳಲ್ಲಿ ಚತು....ವೃತ್ತ್ಯವೃತ್ತಿಜಾತಿಮದ್ವಿಶೇಷಗುಣ ಬರುವುದಿಲ್ಲ. ಆದುದರಿಂದ ಅತಿವ್ಯಾಪ್ತಿ ಇಲ್ಲ. ||

'ಜಾತಿಮದ್ವಿಶೇಷಗುಣವತ್ತ್ವಂ' ಎಂಬಲ್ಲಿ ವಿಶೇಷಪದಕ್ಕೆ ಸಾರ್ಥಕ್ಯ ತೋರಿಸುತ್ತಾನೆ. 'ಪರಮಮಹತ್ತ್ವ'—ಇತಿ. 'ಚತುಃ—ಜನ್ಯಾವೃತ್ತಿ ಜಾತಿ' ಎಂದರೆ ಪರಮಮಹತ್ವತ್ತ್ವ ಜಾತಿಯಾಗುತ್ತದೆ. ಘಟಾದಿ ಜನ್ಯದಲ್ಲಿ ಇಲ್ಲದಿರುವ ಜಾತಿಯೆಂದರೆ ಪರಮಮಹತ್ವತ್ತ್ವಜಾತಿ. ಆ ಜಾತಿಯುಳ್ಳ ಗುಣವೆಂದರೆ ಪರಮಮಹತ್ತ್ವಗುಣ. ಅದು ಉಳ್ಳದ್ದು ಆಕಾಶ ಹೇಗೋ ಹಾಗೆಯೇ ಕಾಲವಾಗುತ್ತದೆ. ಆಗ ಕಾಲದಲ್ಲಿ ಲಕ್ಷಣವು ಅತಿವ್ಯಾಪ್ತವಾಗುವುದರಿಂದ ವಿಶೇಷಗುಣವೆಂದು ಹೇಳಿದೆ. ಪರಮಮಹತ್ತ್ವವು ವಿಶೇಷಗುಣವಲ್ಲ. ಸಾಮಾನ್ಯಗುಣವಾದುದರಿಂದ ಅದನ್ನು ತೆಗೆದುಕೊಳ್ಳಲು ಸಾಧ್ಯವಿಲ್ಲ. ಹೀಗೆಯೇ ದ್ವಿತ್ವಾದಿಗಳನ್ನು ತೆಗೆದುಕೊಂಡು ಘಟಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಚತುಃಕ್ಷಣದಲ್ಲಿರುವ ಘಟಾದಿಗಳಲ್ಲಿ ಇಲ್ಲದಿರುವ ಜಾತಿಯೆಂದರೆ ದ್ವಿತ್ವತ್ವಾದಿಗಳು. ಆ ಜಾತಿಯುಳ್ಳ ಗುಣ ಎಂದರೆ ದ್ವಿತ್ವಾದಿ. ಅದು ಉಳ್ಳದ್ದು ಘಟವಾಗುತ್ತದೆ. ವಿಶೇಷಗುಣವೆಂದರೆ ದ್ವಿತ್ವವು ವಿಶೇಷ ಗುಣವಾಗದಿರುವುದರಿಂದ ಅದಕ್ಕೆ ಗ್ರಹಣವಿಲ್ಲ. ಅದು ಸಾಮಾನ್ಯಗುಣ. 'ತಥಾತ್ವಾತ್—' 'ಚತುಃಕ್ಷಣವೃತ್ತಿಜನ್ಯಾವೃತ್ತಿಜಾತಿಮದ್ಗುಣತ್ವಾತ್' ಎಂದು ತಿಳಿಯಬೇಕು. ಉಪಸ್ಥಿತಿಕೃತವಾದ ಲಾಘವವನ್ನು ನೋಡಿ ಲಕ್ಷಣವನ್ನು ಬೇರೆ ತೋರಿಸುತ್ತಾನೆ. 'ತ್ರಿಕ್ಷಣ'—ಇತಿ. ಹೇಗೂ ಜ್ಞಾನತ್ವಾದಿಗಳನ್ನು ಇಲ್ಲಿ ತೆಗೆದುಕೊಳ್ಳುವುದಿಲ್ಲ. ದ್ವೇಷತ್ವಾದಿಗಳನ್ನು ತೆಗೆದುಕೊಂಡು ಸಮನ್ವಯವೆಂದು ಹೇಳಿದೆ. ದ್ವೇಷಾದಿಗಳು ಹೇಗೂ ಎರಡುಕ್ಷಣದ ಮೇಲೆ ಇರುವುದೇ ಇಲ್ಲ. ಆಗ ಚತುಕ್ಷಣವೃತ್ತಿ ಎಂಬ ಪದದ ಸ್ಥಾನದಲ್ಲಿ ತ್ರಿಕ್ಷಣವೃತ್ತಿ ಎಂದು ಹೇಳಿದರೆ ಲಾಘವವಿದೆ. 'ತ್ರಿಕ್ಷಣವೃತ್ತಿ ಜನ್ಯಾವೃತ್ತಿ ಜಾತಿಮದ್ವಿಶೇಷಗುಣವತ್ತ್ವಂ' ಎಂದು ಲಕ್ಷಣವಾಗುತ್ತದೆ. ತ್ರಿಕ್ಷಣದಲ್ಲಿರುವ ಜನ್ಯವೆಂದರೆ ಘಟಾದಿ. ಅಲ್ಲಿ ಇಲ್ಲದಿರುವ ಜಾತಿ ಎಂದರೆ ದ್ವೇಷತ್ವಾದಿಗಳು (ಶಬ್ದತ್ವ). ಅದು ಉಳ್ಳ ವಿಶೇಷಗುಣವೆಂದರೆ ದ್ವೇಷ ಶಬ್ದಾದಿವಿಶೇಶಗುಣ. ಅದು ಉಳ್ಳದ್ದು ಆಕಾಶಜೀವಾತ್ಮವಾಗುತ್ತವೆ.

## (ಕಾ) ರೂಪದ್ರವತ್ವಪ್ರತ್ಯಕ್ಷಯೋಗಿನಃ ಪ್ರಥಮಾಸ್ತ್ರಯಃ ॥

ಪೃಥಿವ್ಯಪ್ತೇಜಸಾಂ ರೂಪವತ್ತ್ವಂ, ದ್ರವತ್ವವತ್ತ್ವಂ, ಪ್ರತ್ಯಕ್ಷವಿಷಯತ್ವಂ ಚೇತ್ಯರ್ಥಃ । ನಚ ಚಕ್ಷುರಾದೀನಾಂ ಭರ್ಜನಕಪಾಲಸ್ಥವಹ್ನೇ ರೂಷ್ಮಣಶ್ಚ ರೂಪವತ್ತ್ವೇ ಕಿಂ ಮಾನಮಿತಿ ವಾಚ್ಯಮ್, ತತ್ರಾಪಿ ತೇಜಸ್ತ್ವೇನ ರೂಪಾನುಮಾನಾತ್ । ಏವಂ ವಾಯ್ವಾನೀತ ಪೃಥಿವೀ ಜಲತೇಜೋಭಾಗಾನಾಮಪಿ ಪೃಥಿವೀತ್ವಾದಿನಾ ರೂಪಾನುಮಾನಂಬೋಧ್ಯಮ್ । ನ ಚ ಘಟಾದೌ ದ್ರುತಸುವರ್ಣಾದಿಭಿನ್ನೇ ತೇಜಸಿ ಚ ದ್ರವತ್ವವತ್ತ್ವಮವ್ಯಾಪ್ತಮಿತಿ ವಾಚ್ಯಂ, ದ್ರವತ್ವವದ್ವೃತ್ತಿದ್ರವ್ಯತ್ವ ವ್ಯಾಪ್ಯಜಾತಿಮತ್ತ್ವಸ್ಯ ವಿವಕ್ಷಿತತ್ವಾತ್ । ಘೃತಜತು ಪ್ರಭೃತಿಷು ಪೃಥಿವೀಷು, ಜಲೇಷು, ದ್ರುತಸುವರ್ಣಾದೌ ತೇಜಸಿ ಚ ದ್ರವತ್ವಸತ್ವಾತ್, ತತ್ರ ಚ ಪೃಥಿವೀತ್ವಾದಿಸತ್ವಾತ್ತದಾದಾಯ ಸರ್ವತ್ರ ಲಕ್ಷಣಸಮನ್ವಯಃ । ನ ಚ ಪ್ರತ್ಯಕ್ಷವಿಷಯತ್ವಂ ಪರಮಾಣ್ವಾದೌ ಅವ್ಯಾಪ್ತಮತಿವ್ಯಾಪ್ತಂ ಚ ರೂಪಾದಾವಿತಿ ವಾಚ್ಯಮ್ । ಚಾಕ್ಷುಷಪ್ರತ್ಯಕ್ಷವಿಷಯವೃತ್ತಿದ್ರವ್ಯತ್ವವ್ಯಾಪ್ಯಜಾತಿಮತ್ತ್ವಸ್ಯ ವಿವಕ್ಷಿತತ್ವಾತ್ । ಅತ್ರಾತಿವ್ಯಾಪ್ತಿವಾರಣಾಯ ಚಾಕ್ಷುಷೇತಿ ॥

ಕಾರಿಕೆಯಲ್ಲಿ ಯೋಗಪದ ದ್ವಂದ್ವಾಂತದಲ್ಲಿ ಹೇಳಿರುವುದರಿಂದ ಅದಕ್ಕೆ ಪ್ರತ್ಯೇಕ ಸಂಬಂಧ ಹೇಳಬೇಕು. ರೂಪಯೋಗಿತ್ವಂ, ದ್ರವತ್ವಯೋಗಿತ್ವಂ, ಪ್ರತ್ಯಕ್ಷಯೋಗಿತ್ವಂ ಎಂದು ಈ ಮೂರು ಪೃಥಿವೀ, ಅಪ್, ತೇಜಸ್ಸು ಈ ಮೂರರ ಸಾಧರ್ಮ್ಯವಾಗುತ್ತದೆ. ರೂಪವುಳ್ಳದ್ದು, ದ್ರವತ್ವವುಳ್ಳದ್ದು ಈ ಮೂರು ಪದಾರ್ಥಗಳು. ಪ್ರತ್ಯಕ್ಷಕ್ಕೆ ವಿಷಯಗಳೂ ಆಗುತ್ತವೆ. ಚಕ್ಷುರಾದಿಗಳಲ್ಲಿ ಅವ್ಯಾಪ್ತಿಯನ್ನು ಆಶಂಕಿಸುತ್ತಾನೆ. 'ನಚ'— ಇತಿ. ಚಕ್ಷುರಿಂದ್ರಿಯ, ಹುರಿಯುವಬಾಣಲೆಯಲ್ಲಿರುವ ಅಗ್ನಿ, ಸೆಖೆ ಈ ಮೂರೂ ತೇಜಸ್ಸಿನಲ್ಲಿ ಸೇರುತ್ತವೆ. ರೂಪವತ್ತ್ವಂ ಸಾಧರ್ಮ್ಯ ಹೇಳಿದರೆ ಈ ಮೂರರಲ್ಲಿ ಯಾವ ರೂಪವೂ ತೋರದಿರುವುದರಿಂದ ಅವ್ಯಾಪ್ತಿ ಬರುತ್ತದೆ. 'ತತ್ರಾಪಿ'—ಇತಿ. ಅಲ್ಲಿ ರೂಪ ತೋರದಿದ್ದರೂ ಅನುಮಾನಪ್ರಮಾಣದಿಂದ ರೂಪವಿದೆಯೆಂದು ತಿಳಿಯಬೇಕು. ಅನುಮಾನಾಕಾರ. "ನಯನೇಂದ್ರಿಯಂ—ರೂಪವತ್—ತೇಜಸ್ತ್ವಾತ್ ॥ ಸೂರ್ಯವತ್ । ಭರ್ಜನಕಪಾಲಸ್ಥವಹ್ನಿಃ—ರೂಪವಾನ್—ತೇಜಸ್ತ್ವಾತ್। ಉಷ್ಮಾ—ರೂಪವಾನ್—ತೇಜಸ್ತ್ವಾತ್ ।" ತೇಜಸ್ತ್ವಜಾತಿ ಅವುಗಳಲ್ಲಿರುವುದರಿಂದ ರೂಪವಿದೆಯೆಂದು ತಿಳಿಯಬೇಕು. 'ಏವಂ'—ಇತಿ. ಹೀಗೆಯೇ ಅನುಮಾನದಿಂದ ಬೇರೆ ಸ್ಥಳಗಳಲ್ಲಿಯೂ ಅವ್ಯಾಪ್ತಿಯನ್ನು ನಿರಾಕರಣೆಮಾಡಿಕೊಳ್ಳಬೇಕೆಂದು ಸೂಚಿಸುತ್ತಾನೆ. ಗಾಳಿಯು ಪೃಥಿವೀಪರಮಾಣುಗಳನ್ನು ತರುತ್ತದೆ. ಜಲಕಣಗಳನ್ನೂ ತೇಜೋಭಾಗಗಳನ್ನೂ ಆಗಾಗ ತರುತ್ತದೆ. ವಾಯುವಿನಿಂದ ತರಲ್ಪಟ್ಟ ಆ ಪೃಥಿವ್ಯಾದಿಭಾಗಗಳಲ್ಲಿ ರೂಪತೋರದಿದ್ದರೂ ಹಿಂದಿನಂತೆ ಪೃಥಿವೀತ್ವಾದಿ ಹೇತುವಿನಿಂದ ರೂಪವನ್ನು ಸಾಧಿಸಬೇಕು. "ವಾಯ್ವಾನೀತಃ ಪೃಥಿವೀಭಾಗಃ—ರೂಪವಾನ್—ಪೃಥಿವೀತ್ವಾತ್ । ಘಟವತ್ ॥

ವಾ–ಜಲಭಾಗಃ—ರೂಪವಾನ್—ಜಲತ್ವಾತ್ । ತಟಾಕಸ್ಥ ಜಲವತ್ ॥ ವಾ–ವಹ್ನಿ ಭಾಗಃ–ರೂಪವಾನ್–ತೇಜಸ್ತ್ವಾತ್ । ಮಹಾನಸೀಯ ವಹ್ನಿವತ್ ॥' ಹೀಗೆ ಈ ಅನುಮಾನಗಳಿಂದ ಅವುಗಳಲ್ಲಿ ರೂಪಸಿದ್ಧಿಯಾಗುತ್ತದೆ. 'ದ್ರವತ್ವವತ್ತ್ವಂ' ಎಂಬ ಸಾಧರ್ಮ್ಯದಲ್ಲಿಯೂ ಅವ್ಯಾಪ್ತಿಯನ್ನಾಶಂಕಿಸಿ ಜಾತಿಘಟಿತಲಕ್ಷಣದಿಂದ ಪರಿಹಾರ ಮಾಡುತ್ತಾನೆ. 'ನಚ'—ಇತಿ. ಘಟಪಟಾದಿಗಳಲ್ಲಿಯೂ, ಕರಗಿದ ಚಿನ್ನವನ್ನು ಬಿಟ್ಟು ಉಳಿದ ತೇಜಃಸ್ಸುಗಳಲ್ಲಿಯೂ ದ್ರವತ್ವ ತೋರುವುದಿಲ್ಲ. ದ್ರವತ್ವವತ್ತ್ವಸಾಧರ್ಮ್ಯ ಅಲ್ಲಿ ಇಲ್ಲದಿರುವುದರಿಂದ ಅವ್ಯಾಪ್ತಿ ಬರುತ್ತದೆ. ಆಗ ಜಾತಿಘಟಿತಲಕ್ಷಣ ಮಾಡಬೇಕೆಂದು ತೋರಿಸುತ್ತಾನೆ. 'ದ್ರವತ್ವವ'—ಇತಿ. ದ್ರವತ್ವವುಳ್ಳದ್ದು ತುಪ್ಪ ಮುಂತಾದ ಪೃಥಿವಿಗಳು. ಅಲ್ಲಿರುವ ಜಾತಿಯೆಂದರೆ ಪೃಥಿವೀತ್ವ ಜಾತಿ. ಅದು ದ್ರವ್ಯತ್ವವ್ಯಾಪ್ಯವಾಗಿದೆ. ಅದು ಉಳ್ಳದ್ದು ಎಂದರೆ ತುಪ್ಪ ಮುಂತಾದವುಗಳು ಹೇಗೋ ಹಾಗೆಯೇ ಘಟಾದಿಗಳೂ ಆಗುತ್ತವೆ. ಸತ್ತಾಜಾತಿ ತೆಗೆದುಕೊಂಡು ಅತಿವ್ಯಾಪ್ತಿ ಬರುವುದರಿಂದ ದ್ರವ್ಯತ್ವವ್ಯಾಪ್ಯವಾದ ಜಾತಿ ಎಂದು ಹೇಳಿದೆ. (ದ್ರವತ್ವವತ್ ದ್ರುತಸುವರ್ಣಂ ತತ್ರವರ್ತತೇ ಯಾ ದ್ರವ್ಯತ್ವಸಾಕ್ಷಾದ್ವ್ಯಾಪ್ಯಾ ಜಾತಿಃ ತೇಜಸ್ತ್ವರೂಪಾ ಜಾತಿಃ ತದ್ವತ್ವಂ ದ್ರುತಸುವರ್ಣಭಿನ್ನತೇಜಸ್ಯಪಿ ವರ್ತತೇ ಇತಿ ಸಮನ್ವಯಃ) ತಾನೇ ಸಮನ್ವಯಮಾಡಿ ತೋರಿಸುತ್ತಾನೆ. ಘೃತ ಇತಿ. ಘೃತಾದಿಗಳಲ್ಲಿಯೂ ಜಲದಲ್ಲಿಯೂ, ಕರಗಿದ ಚಿನ್ನದಲ್ಲಿಯೂ ದ್ರವತ್ವವಿರುವುದು ಪ್ರತ್ಯಕ್ಷಸಿದ್ಧವಾಗಿದೆ. ಅಲ್ಲಿ ಕ್ರಮವಾಗಿ ಪೃಥಿವೀತ್ವ, ಜಲತ್ವ, ತೇಜಸ್ತ್ವ ಜಾತಿಗಳಿವೆ. ಈ ಜಾತಿಗಳು ಸಾಮಾನ್ಯ ಪೃಥಿವ್ಯಾದಿಗಳಲ್ಲಿರುವುದರಿಂದ ದೋಷ ಬರುವುದಿಲ್ಲ.

ಮೂರನೆಯ 'ಪ್ರತ್ಯಕ್ಷವಿಷಯತ್ವಂ' ಎಂಬ ಸಾಧರ್ಮ್ಯದಲ್ಲಿ ಅವ್ಯಾಪ್ತಿ ತೋರಿಸುತ್ತಾನೆ. 'ನಚ—' ಇತಿ. ಪರಮಾಣುವು ಪ್ರತ್ಯಕ್ಷಗೋಚರವಲ್ಲ. ಅಲ್ಲಿ ಪ್ರತ್ಯಕ್ಷ ವಿಷಯತ್ವವು ಬಾರದಿರುವುದರಿಂದ ಅವ್ಯಾಪ್ತಿಯೂ, ಲಕ್ಷ್ಯವಲ್ಲದ ರೂಪಾದಿ ಗುಣಗಳಲ್ಲಿ ಪ್ರತ್ಯಕ್ಷವಿಷಯತ್ವ ಬರುವುದರಿಂದ ಅತಿವ್ಯಾಪ್ತಿಯೂ ಬರುತ್ತದೆ. ಅದ ಕ್ಕೋಸ್ಕರ ಇಲ್ಲಿಯೂ ಜಾತಿಘಟಿತಲಕ್ಷಣದಿಂದಲೇ ಪರಿಹಾರ ತೋರಿಸುತ್ತಾನೆ. 'ಚಾಕ್ಷುಷ ಪ್ರತ್ಯಕ್ಷ—' ಇತಿ. ಪ್ರತ್ಯಕ್ಷವೆಂದರೆ ಚಾಕ್ಷುಷಲೌಕಿಕವಾದ ಪ್ರತ್ಯಕ್ಷ. (ನಯನದಿಂದಉಂಟಾಗುವ ಪ್ರತ್ಯಕ್ಷ) ತಸ್ಯ ವಿಷಯಾ ಯೇ ಘಟಾದಯಃ—ಕಣ್ಣಿಗೆ ಗೋಚರವಾಗುವ ಯಾವ ಘಟಾದಿಗಳಿವೆಯೋ, ತೇಷು ವೃತ್ತಿಃ ಯಸ್ಯಾಃ ಸಾ, ದ್ರವ್ಯತ್ವ ವ್ಯಾಪ್ಯಾ ಜಾತಿಃ—ಆ ಘಟಾದಿಗಳಲ್ಲಿರುವ ಯಾವ ದ್ರವ್ಯತ್ವಸಾಕ್ಷಾತ್‌ವ್ಯಾಪ್ಯವಾದ ಜಾತಿ ಅಂದರೆ ಪೃಥಿವೀತ್ವ, ಜಲತ್ವ, ತೇಜಸ್ತ್ವಜಾತಿಗಳು. ತಾದೃಶಜಾತಿಮತ್ತ್ವಂ—ಆಜಾತಿ ಉಳ್ಳದ್ದು ಪರಮಾಣುಗಳೂ ಆಗುತ್ತವೆ. ರೂಪಾದಿಗಳಲ್ಲಿ ದ್ರವ್ಯತ್ವವ್ಯಾಪ್ಯವಾದ ಜಾತಿ ಇಲ್ಲ. (ಗುಣತ್ವವ್ಯಾಪ್ಯವಾದ ರೂಪತ್ವಾದಿಜಾತಿಗಳಿವೆ.) ಆದುದರಿಂದ ಎಲ್ಲಿಯೂ ದೋಷ ಬರುವುದಿಲ್ಲ. ಕೇವಲ ಪ್ರತ್ಯಕ್ಷವಿಷಯವೆಂದರೆ ಆತ್ಮನಲ್ಲಿ ಅತಿವ್ಯಾಪ್ತಿ ಬರುತ್ತದೆ. ಘಟವು ಕಣ್ಣಿಗೆ ಗೋಚರವಾಗುವಂತೆ ಆತ್ಮನು ಮಾನಸಪ್ರತ್ಯಕ್ಷಕ್ಕೆ ಗೋಚರನಾಗುವುದ

ರಿಂದ ಅಲ್ಲಿರುವ ದ್ರವ್ಯತ್ವವ್ಯಾಪ್ಯವಾದ ಜಾತಿ ಎಂದರೆ ಆತ್ಮತ್ವಜಾತಿಯಾಗುತ್ತದೆ. ಅದು ಉಳ್ಳವನು ಆತ್ಮನಾಗುತ್ತಾನೆ. ಚಾಕ್ಷುಷಪದಹಾಕಿದರೆ ಆತ್ಮನು ನಯನಕ್ಕೆ ಗೋಚರ ನಾಗುವುದಿಲ್ಲ. ಚಾಕ್ಷುಷಪ್ರತ್ಯಕ್ಷವಿಷಯತ್ವವು ಅವನಲ್ಲಿ ಸಂಭವಿಸುವುದಿಲ್ಲ.

**ಗುರುಣೀ ದ್ವೇ** ರಸವತೀ—

ಗುರುಣೀ ಇತಿ । ಗುರುತ್ವವತ್ತ್ವಂ ರಸವತ್ತ್ವಂ ಪೃಥಿವೀ ಜಲಯೋರಿತ್ಯರ್ಥಃ । ನ ಚ ಘ್ರಾಣೇಂದ್ರಿಯಾದೀನಾಂ ವಾಯ್ವಾನೀತಪಾರ್ಥಿವಾದಿಭಾಗಾನಾಂ ಚ ರಸಾದಿ ಮತ್ತ್ವೇ ಕಿಂ ಮಾನಮಿತಿ ವಾಚ್ಯಮ್, ತತ್ರಾಪಿ ಪೃಥಿವೀತ್ವಾದಿನಾ ತದನು ಮಾನಾತ್ ॥

ಕಾರಿಕೆಯಲ್ಲಿ ದ್ವೇ ಅಂದರೆ ಪೃಥಿವೀಜಲಗಳೆರಡನ್ನು ತೆಗೆದುಕೊಳ್ಳಬೇಕು. ರಸವೂ, ಗುರುತ್ವವೂ ಇವೆರಡರಲ್ಲಿರುವುದರಿಂದ 'ರಸವತ್ತ್ವಂ' 'ಗುರುತ್ವವತ್ತ್ವಂ, ಎಂದು ಸಾಧರ್ಮ್ಯವಾಗುತ್ತದೆ. ಗುರುತ್ವವೇ ಅಸಮವಾಯಿಕಾರಣವಾಗಿರುವ ಪತನತ್ವವೂ ಇದರಿಂದ ಉಪಲಕ್ಷಿತವಾಗುತ್ತದೆ. 'ನ ಚ—' ಗ್ರಂಥದಿಂದ ಅವ್ಯಾಪ್ತಿಯನ್ನು ಆಶಂಕಿಸುತ್ತಾನೆ. ಘ್ರಾಣೇಂದ್ರಿಯವು ಪಾರ್ಥಿವವೆಂದು ಹೇಳುತ್ತಾನೆ. ಅಲ್ಲಿ ಯಾವ ರಸತೋರುತ್ತದೆ ? ಗಾಳಿಯಿಂದ ಪೃಥಿವೀಜಲಪರಮಾಣುಗಳು ವಯ್ಯಲ್ಪಡುತ್ತವೆ. ಅಲ್ಲಿಯೂ ಈ ಸಾಧರ್ಮ್ಯ ಬರುವುದಿಲ್ಲ. ಅದಕ್ಕೋಸ್ಕರ ಹಿಂದಿನಂತೆ ಅನುಮಾನದಿಂದ ರಸಾದಿಗಳನ್ನು ಸಾಧಿಸಬೇಕು. ''ಘ್ರಾಣೇಂದ್ರಿಯಂ—ರಸಾದಿಮತ್—ಪೃಥಿವೀ ತ್ವಾತ್ । ಜಂಬೀರಫಲವತ್ ।'' ಇತ್ಯಾದಿ ಅನುಮಾನಾಕಾರವನ್ನು ಹಿಂದಿನಂತೆ ತಿಳಿಯಬೇಕು.

**ದ್ವಯೋಃ ನೈಮಿತ್ತಿಕೋ ದ್ರವಃ ॥ ೨೮ ॥**

ದ್ವಯೋರಿತಿ । ಪೃಥಿವೀತೇಜಸೋರಿತ್ಯರ್ಥಃ । ನ ಚ ನೈಮಿತ್ತಿಕದ್ರವತ್ವವತ್ತ್ವಂ ಘಟಾದೌ ವಹ್ನ್ಯಾದೌ ಅವ್ಯಾಪ್ತಮಿತಿ ವಾಚ್ಯಮ್ ; ನೈಮಿತ್ತಿಕದ್ರವತ್ವಸಮಾ ನಾಧಿಕರಣದ್ರವ್ಯತ್ವವ್ಯಾಪ್ಯಜಾತಿಮತ್ತ್ವಸ್ಯ ವಿವಕ್ಷಿತತ್ವಾತ್ ॥

ಪೃಥಿವೀ ತೇಜಸ್ಸುಗಳಿಗೆ 'ನೈಮಿತ್ತಿಕದ್ರವತ್ವವತ್ತ್ವಂ' ಸಾಧರ್ಮ್ಯವಾಗುತ್ತದೆ. ಸಾಮಾನ್ಯದ್ರವತ್ವಜಲದಲ್ಲಿ ಇದೆ. ಈ ಎರಡರಲ್ಲಿ ನಿಮಿತ್ತಾಂತರದಿಂದ ದ್ರವತ್ವವುಂಟಾ ಗುತ್ತದೆ. ಇಲ್ಲಿಯೂ ಘಟಾದಿಗಳಲ್ಲಿ ನೈಮಿತ್ತಿಕದ್ರವತ್ವ ತೋರದಿರುವುದರಿಂದ ಅವ್ಯಾಪ್ತಿ ಬರುವುದರಿಂದ ಜಾತಿಘಟಿತಲಕ್ಷಣ ತೋರಿಸಿರುತ್ತಾನೆ. ನೈಮಿತ್ತಿಕದ್ರವತ್ವವಿರುವುದು ಘೃತಲಾಕ್ಷಾದಿ. ಅಲ್ಲಿರುವ ದ್ರವ್ಯತ್ವದಿಂದ ಸಾಕ್ಷಾತ್ ವ್ಯಾಪ್ಯವಾದ ಜಾತಿಯೆಂದರೆ ಪೃಥಿವೀತ್ವಜಾತಿ. ಅದು ಉಳ್ಳದ್ದು ಘಟಾದಿಗಳಾಗುತ್ತವೆ. ತತ್ಸಮಾನಾಧಿಕರಣ ಅಂದರೆ ತದಧಿಕರಣವೃತ್ತಿ ಎಂದರ್ಥ.

**ಆತ್ಮಾನೋ ಭೂತವರ್ಗಾಶ್ಚ ವಿಶೇಷಗುಣಯೋಗಿನಃ ||**

ಪೃಥಿವ್ಯಪ್ತೇಜೋವಾಯ್ವಾಕಾಶಾತ್ಮನಾಂ ವಿಶೇಷಗುಣವತ್ತ್ವಮಿತ್ಯರ್ಥಃ ||

ಪೃಥಿವೀ, ಅಪ್, ತೇಜಃ, ವಾಯು ಆಕಾಶ ಈ ಐದು ಭೂತಗಳಿಗೂ, ಆತ್ಮನಿಗೂ 'ವಿಶೇಷಗುಣವತ್ತ್ವಂ' ಸಾಧರ್ಮ್ಯವಾಗುತ್ತದೆ. ಈ ಆರರಲ್ಲಿಯೇ ವಿಶೇಷ ಗುಣಗಳಿರುತ್ತವೆ. 'ಬುದ್ಧ್ಯಾದಿಷಟ್ಕಂ ಸ್ಪರ್ಶಾಂತಾಃ ಸ್ನೇಹಃ ಸಾಂಸಿದ್ಧಿಕೋದ್ರವಃ || ಅದೃಷ್ಟಭಾವನಾ ಶಬ್ದಾ ಅಮೀ ವೈಶೇಷಿಕಾ ಗುಣಾಃ' || ಎಂದು ಮುಂದೆ ವಿಶೇಷ ಗುಣಾದಿಗಳನ್ನು ಹೇಳುತ್ತಾನೆ. ||

**ಯದುಕ್ತಂ ಯಸ್ಯ ಸಾಧರ್ಮ್ಯಂ ವೈಧರ್ಮ್ಯಮಿತರಸ್ಯ ತತ್ || ೨೯ ||**

ಜ್ಞೇಯತ್ವಾದಿಕಂ ವಿಹಾಯೇತಿ ಬೊಧ್ಯವಮ್ | ತತ್ತು ನ ಕಸ್ಯಾಪಿ ವೈಧರ್ಮ್ಯಂಕೇವಲಾನ್ವಯಿತ್ವಾತ್ ||

ಹೀಗೆ ಸಾಧರ್ಮ್ಯವನ್ನು ಹೇಳಿ ವೈಧರ್ಮ್ಯವನ್ನೂ ಈ ಕ್ರಮದಿಂದಲೇ ತಿಳಿಯ ಬೇಕೆಂದು ತಿಳಿಸುತ್ತಾನೆ. ಯಾವುದಕ್ಕೆ ಯಾವ ಸಾಧರ್ಮ್ಯ ಹೇಳಿದೆಯೋ, ಅದು ಉಳಿದವುಗಳಿಗೆ ವೈಧರ್ಮ್ಯವೆಂದು ತಿಳಿಯಬೇಕು. ದ್ರವ್ಯಾದಿಮೂರಕ್ಕೆ 'ಸತ್ತಾವತ್ತ್ವಂ' ಸಾಧರ್ಮ್ಯವಾದರೆ ದ್ರವ್ಯಾದಿ ಮೂರನ್ನು ಬಿಟ್ಟು ಉಳಿದ ಸಾಮಾನ್ಯಾದಿಗಳಿಗೆ ಅದು ವೈಧರ್ಮ್ಯವಾಗುತ್ತದೆ. ಆದರೆ ಜ್ಞೇಯತ್ವಂ, ಅಭಿಧೇಯತ್ವಂ, ವಾಚ್ಯತ್ವಂ, ಪ್ರಮೇಯ ತ್ವಂ, ಇವು ಮಾತ್ರ ಯಾವುದಕ್ಕೂ ವೈಧರ್ಮ್ಯವಾಗುವುದಿಲ್ಲ. ಎಲ್ಲವೂ ಜ್ಞೇಯ ಪ್ರಮೇಯಗಳಾದುದರಿಂದ ಜ್ಞೇಯವಾಗದಿರುವುದು ಒಂದೂ ಇಲ್ಲ. ಇದೇ ಕೇವಲಾನ್ವಯಿ. 'ಅತ್ಯಂತಾಭಾವಾಪ್ರತಿಯೋಗಿತ್ವಂ' ಇದರ ಲಕ್ಷಣ. ಯಾವುದರ ಅತ್ಯಂತಾಭಾವ ಹೇಳಲು ಸಾಧ್ಯವಿಲ್ಲವೋ ಅದು ಕೇವಲಾನ್ವಯಿ. ಪದಾರ್ಥಗಳೆಲ್ಲವೂ ನಮಗೆ ಜ್ಞೇಯವಾಗದಿದ್ದರೂ, ನಮ್ಮ ಜ್ಞಾನಕ್ಕೆ ವಿಷಯವಾಗದಿದ್ದರೂ ಯೋಗಿಗಳಿಗೆ ಜ್ಞೇಯ ವಾಗಿಯೇ ಇರುತ್ತವೆ. ಅಥವಾ ಈಶ್ವರಜ್ಞಾನವಿಷಯವಾಗಿರುತ್ತವೆ. ಎಲ್ಲಾ ಪದಾರ್ಥಗಳೂ ಅಭಿಧಾವ್ಯಾಪಾರಕ್ಕೆ ವಿಷಯಗಳಾದುದರಿಂದ ಅಭೀಧೇಯಗಳು. ಪ್ರಮಾವಿಷಯವಾದುದರಿಂದ ಪ್ರಮೇಯಗಳು. ಆದುದರಿಂದ ಜ್ಞೇಯತ್ವಾದಿಗಳನ್ನು ಬಿಟ್ಟು ಉಳಿದ ಸಾಧರ್ಮ್ಯಗಳು ಮಾತ್ರ ವೈಧರ್ಮ್ಯಗಳೂ ಆಗುತ್ತವೆ || ೨೯ ||

**ಸ್ಪರ್ಶಾದಯೋಽಷ್ಟೌ ವೇಗಾಖ್ಯಾಃ ಸಂಸ್ಕಾರೋ ಮರುತೋ ಗುಣಾಃ ||**
**ಸ್ಪರ್ಶಾದ್ಯಷ್ಟೌ ರೂಪವೇಗೌ ದ್ರವತ್ವಂ ತೇಜಸೋ ಗುಣಾಃ || ೩೦ ||**
**ಸ್ಪರ್ಶಾದಯೋಽಷ್ಟೌ ವೇಗಶ್ಚ ಗುರುತ್ವಂ ಚ ದ್ರವತ್ವಕಮ್ |**
**ರೂಪಂ ರಸಸ್ತಥಾ ಸ್ನೇಹೋ ವಾರಿಣ್ಯೇತೇ ಚತುರ್ದಶ || ೩೧ ||**
**ಸ್ನೇಹಹೀನಾ ಗಂಧಯುತಾಃ ಕ್ಷಿತಾವೇತೇ ಚತುರ್ದಶ ||**

**ಬುದ್ಧ್ಯಾದಿಷಟ್ಕಂ ಸಂಖ್ಯಾದಿಪಂಚಕಂ ಭಾವನಾ ತಥಾ ॥ ೩೨ ॥**
**ಧರ್ಮಾಧರ್ಮೌಗುಣಾ ಏತೇ ಹ್ಯಾತ್ಮನಃ ಸ್ಯುಶ್ಚತುರ್ದಶ ॥**
**ಸಂಖ್ಯಾದಿಪಂಚಕಂ ಕಾಲದಿಶೋಃ ಶಬ್ದಶ್ಚ ತೇ ಚ ಖೇ ॥೩೩ ॥**
**ಸಂಖ್ಯಾದಯಃ ಪಂಚ ಬುದ್ಧಿರಿಚ್ಛಾ ಯತ್ನೋಽಪಿ ಚೇಶ್ವರೇ ॥**
**ಪರಾಪರತ್ವೇ ಸಂಖ್ಯಾದ್ಯಾಃ ಪಂಚ ವೇಗಶ್ಚ ಮಾನಸೇ ॥ ೩೪ ॥**

ತೇ ಚ ಖೇ ಆಕಾಶೇ ॥ ೩೦–೩೪ ॥

ಈಗ ಆಯಾ ದ್ರವ್ಯಗಳಲ್ಲಿರುವ ಗುಣಗಳನ್ನು ತೋರಿಸುತ್ತಾನೆ. ಸ್ಪರ್ಶ, ಸಂಖ್ಯಾ ಪರಿಮಾಣ, ಪೃಥಕ್ತ್ವ, ಸಂಯೋಗ, ವಿಭಾಗ, ಪರತ್ವ,ಅಪರತ್ವ ಈ ಎಂಟೂ, ವೇಗ ವೆಂಬ ಸಂಸ್ಕಾರವೂ ಹೀಗೆ ಒಂಬತ್ತು, ವಾಯುವಿನಲ್ಲಿರುವ ಗುಣಗಳು. ಹೀಗೆ ಸ್ಪರ್ಶಾದಿ ಎಂಟು, ವೇಗ, ಗುರುತ್ವ, ದ್ರವತ್ವ, ರೂಪ, ರಸ, ಈ ಹದಿನಾಲ್ಕು ಜಲದ ಗುಣಗಳು. ಪೃಥಿವಿಯಲ್ಲಿಯೂ ಇದೇ ಹದಿನಾಲ್ಕುಗುಣಗಳು ಆದರೆ ಸ್ನೇಹ ಸ್ಥಾನದಲ್ಲಿ ಗಂಧ ಹೇಳಬೇಕು. ಬುದ್ಧಿ, ಸುಖ, ದುಃಖ, ಇಚ್ಛಾ, ದ್ವೇಷ, ಯತ್ನ, ಈ ಆರೂ, ಸಂಖ್ಯಾ, ಪರಿಮಾಣ, ಪೃಥಕ್ತ್ವ, ಸಂಯೋಗ, ವಿಭಾಗ, ಈ ಐದೂ ಭಾವನಾರೂಪ, ಸಂಸ್ಕಾರ, ಧರ್ಮ, ಅಧರ್ಮ. ಹೀಗೆ ಹದಿನಾಲ್ಕು ಆತ್ಮನ ಗುಣಗಳು. ಕಾಲ ಮತ್ತು ದಿಕ್ಕುಗಳಲ್ಲಿ ಸಂಖ್ಯಾದಿ ಐದೇ ಗುಣಗಳು ಇರುತ್ತವೆ. ಆಕಾಶದಲ್ಲಿ ಸಂಖ್ಯಾದಿ ಐದು ಮತ್ತು ಶಬ್ದ ಸೇರಿ ಆರು ಗುಣಗಳಿವೆ. ಈಶ್ವರನಲ್ಲಿ ಸಂಖ್ಯಾದಿ ಐದು, ಬುದ್ಧಿ, ಇಚ್ಛಾ, ಪ್ರಯತ್ನ ಹೀಗೆ ಎಂಟು ಗುಣಗಳು. ಪರತ್ವ, ಅಪರತ್ವ, ವೇಗರೂಪ ಸಂಸ್ಕಾರ, ಸಂಖ್ಯಾದಿಪಂಚಕ ಒಟ್ಟಿಗೆ ಎಂಟುಗುಣಗಳು ಮನಸ್ಸಿನಲ್ಲಿವೆ. ಅಣುತ್ವ, ಮಹತ್ವವಿರುದ್ಧವಾದುದರಿಂದ, ಸಂಖ್ಯಾಬುದ್ಧೀಚ್ಛಾಪ್ರಯತ್ನಸುಖವೆಂಬ ಕೇವಲ ಐದು ಗುಣಗಳು ಮಾತ್ರ ಈಶ್ವರನಲ್ಲಿದೆಯೆಂದು ನವೀನರಮತ. ಈ ಸಂಖ್ಯಾನಿಯಮವನ್ನು ಪ್ರಾಚೀನರ ಕಾರಿಕೆಯ ಅನುಸಾರವಾಗಿ ಹೇಳಿರುವುದರಿಂದ ಮೊದಲು ಪೃಥಿವೀಗುಣ ಏಕೆ ಹೇಳಿಲ್ಲವೆಂದು ಆಕ್ಷೇಪಿಸಬಾರದು. ಪ್ರಾಚೀನರು ಹೀಗೆ ಹೇಳಿರುತ್ತಾರೆ.

ವಾಯೋರ್ನವೈಕಾದಶ ತೇಜಸೋಗುಣಾ ಜಲಕ್ಷಿತಿಪ್ರಾಣಭೃತಾಂ ಚತುರ್ದಶ ॥
ದಿಕ್ಕಾಲಯೋಃ ಪಂಚ ಷಡೇವ ಚಾಂಬರೇ ಮಹೇಶ್ವರೇಷ್ಟೌ ಮನಸಸ್ತಥೈವ ಚ ॥

ಸಾಧರ್ಮ್ಯವೈಧರ್ಮ್ಯವನ್ನು ಹೇಳಿ ಈಗ ಪ್ರತ್ಯೇಕವಾಗಿ ಪೃಥಿವ್ಯಾದಿಸ್ವರೂಪವನ್ನು ಹೇಳುತ್ತಾನೆ.

**ತತ್ರ ಕ್ಷಿತಿರ್ಗಂಧಹೇತುಃ—**

ಗಂಧಹೇತುರಿತಿ । ಗಂಧಸಮವಾಯಿಕಾರಣಮಿತ್ಯರ್ಥಃ । ಯದ್ಯಪಿ ಗಂಧವತ್ತ್ವಮಾತ್ರಂ ಲಕ್ಷಣಮುಚಿತಮ್,—ತಥಾಪಿ ಪೃಥಿವೀತ್ವಜಾತೌ ಪ್ರಮಾಣೋಪನ್ಯಾಸಾಯ

ಕಾರಣತ್ವಮುಪನ್ಯಸ್ತಮ್ । ತಥಾಹಿ—ಪೃಥಿವೀತ್ವಂ ಹಿ ಗಂಧಸಮವಾಯಿ ಕಾರಣತಾವಚ್ಛೇದಕತಯಾ ಸಿದ್ಧ್ಯತಿ । ಅನ್ಯಥಾ ಗಂಧತ್ವಾವಚ್ಛಿನ್ನಸ್ಯಾಕಸ್ಮಿಕತ್ವಾಪತ್ತೇಃ । ನ ಚ ಪಾಷಾಣಾದೌ ಗಂಧಾಭಾವಾದ್ಗಂಧವತ್ತ್ವಮವ್ಯಾಪ್ತಮಿತಿ ವಾಚ್ಯಮ್, ತತ್ರಾಪಿ ಗಂಧಸತ್ವಾತ್ । ಅನುಪಲಭ್ಧಿಸ್ತ್ವನುತ್ಕಟತ್ವೇನಾಪ್ಯುಪಪದ್ಯತೇ । ಕಥಮನ್ಯಥಾ ತದ್ಭಸ್ಮನಿ ಗಂಧ ಉಪಲಭ್ಯತೇ । ಭಸ್ಮನೋ ಹಿ ಪಾಷಾಣಧ್ವಂಸಜನ್ಯತ್ವಾತ್ ಪಾಷಾಣೋಪಾದಾನೋಪಾದೇಯತ್ವಂ ಸಿದ್ಧ್ಯತಿ । ಯದ್ದ್ರವ್ಯಂ ಯದ್ದ್ರವ್ಯಧ್ವಂಸಜನ್ಯಂ ತತ್ ತದುಪಾದಾನೋಪಾದೇಯಮಿತಿ ವ್ಯಾಪ್ತಿಃ । ದೃಷ್ಟಂ ಚೈತತ್ ಖಂಡಪಟೇ ಮಹಾಪಟಧ್ವಂಸಜನ್ಯೇ । ಇತ್ಥಂ ಚ ಪಾಷಾಣಪರಮಾಣೋಃ ಪೃಥಿವೀತ್ವಾತ್ ತಜ್ಜನ್ಯಸ್ಯ ಪಾಷಾಣಸ್ಯಾಪಿ ಪೃಥಿವೀತ್ವಮ್ । ತಥಾ ಚ ತಸ್ಯಾಪಿ ಗಂಧವತ್ತ್ವೇ ಬಾಧಕಾಭಾವಃ ॥

ಗಂಧಹೇತುಃ ಎಂಬುದಕ್ಕೆ ಗಂಧಕಾರಣವೆಂದು ಸಾಮಾನ್ಯವಾಗಿ ಹೇಳಿದರೆ ಕಾಲಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಕಾಲಿಕಾಸಂಬಂಧದಿಂದ ಕಾಲವೂ, ದೈಶಿಕಸಂಬಂಧದಿಂದ ದೇಶವೂ ಕಾರ್ಯಸಾಮಾನ್ಯವನ್ನುಕುರಿತುಕಾರಣವಾಗುತ್ತದೆ. ಆದುದರಿಂದ ಗಂಧಸಮವಾಯಿಕಾರಣವೆಂದು ಹೇಳಿದೆ. ಸಮವಾಯದಿಂದ ಗಂಧವನ್ನು ಕುರಿತು ತದಾತ್ಮ್ಯದಿಂದ ಪೃಥಿವೀ ಕಾರಣ. 'ಸಮವಾಯಸಂಬಂಧಾವಚ್ಛಿನ್ನಕಾರ್ಯತಾನಿರೂಪಿತ ತಾದಾತ್ಮ್ಯಸಂಬಂಧಾವಚ್ಛಿನ್ನ ಕಾರಣತಾಶ್ರಯತ್ವಂ' ಪೃಥಿವೀಲಕ್ಷಣವಾಗುತ್ತದೆ. ಕಾಲಾದಿಗಳು ಕಾಲಿಕಸಂಬಂಧದಿಂದ ಕಾರಣವಾಗುವುದರಿಂದ ಅಲ್ಲಿ ಲಕ್ಷಣ ಬರುವುದಿಲ್ಲ. ಸುರಭ್ಯಸುರಭಿಕಪಾಲಾರಬ್ಧವಾದ ನಿರ್ಗಂಧಘಟದಲ್ಲಿ ಲಕ್ಷಣ ಅವ್ಯಾಪ್ತವಾಗುವುದರಿಂದ ಅಲ್ಲಿ ಜಾತಿಘಟಿತ ಲಕ್ಷಣ ಮಾಡಬೇಕು. 'ಗಂಧವದ್ವೃತ್ತಿದ್ರವ್ಯತ್ವವ್ಯಾಪ್ಯಜಾತಿಮತ್ತ್ವಂ' ಎಂದು ಲಕ್ಷಣ ಹೇಳಿದರೆ ಎಲ್ಲಿಯೂ ದೋಷ ಬರುವುದಿಲ್ಲ. ಗಂಧವುಳ್ಳವುಗಳು ಕಪಾಲಾದಿಗಳು. ಅಲ್ಲಿರುವ ದ್ರವ್ಯತ್ವವ್ಯಾಪ್ಯಜಾತಿಯೆಂದರೆ ಪೃಥಿವೀತ್ವಜಾತಿ. ಇದು ಉಳ್ಳದ್ದು ಎಲ್ಲಾ ಘಟಾದಿಗಳಾಗುತ್ತವೆ. ಆದಿಕ್ಷಣದಲ್ಲಿರುವ ಘಟದಲ್ಲಿ ಗಂಧವಿಲ್ಲದಿದ್ದರೂ ಪೃಥಿವೀತ್ವಜಾತಿ ಇದ್ದೇ ಇರುತ್ತದೆ. 'ಗಂಧವತ್ತ್ವಂ' (ಗಂಧವುಳ್ಳದ್ದು) ಎಂದು ಲಾಘವಲಕ್ಷಣ ಹೇಳುವುದನ್ನು ಬಿಟ್ಟು ಗಂಧ ಸಮವಾಯಿಕಾರಣವಾದದ್ದೆಂದು ಗುರುಲಕ್ಷಣವನ್ನಂಗೀಕರಿಸಿದ್ದಕ್ಕೆ ಸಾರ್ಥಕ್ಯ ತೋರಿಸುತ್ತಾನೆ. 'ಯದ್ಯಪಿ—' ಇತಿ. 'ಗಂಧವತ್ತ್ವಂ' ಎಂದು ಲಘುಲಕ್ಷಣ ಹೇಳಬಹುದಿತ್ತು. ಆದರೆ ಇದರಿಂದ ಪೃಥಿವೀತ್ವಜಾತಿ ಸಿದ್ಧವಾಗುವುದಿಲ್ಲ. ಪೃಥಿವೀತ್ವರೂಪವಾದಜಾತಿ ಇದೆಯೆಂಬುದರಲ್ಲಿ ಪ್ರಮಾಣವನ್ನು ತೋರಿಸಲು ಗುರುವಾದ ಲಕ್ಷಣವನ್ನಾಶ್ರಯಿಸಿರುತ್ತಾನೆ. 'ತಥಾಹಿ—' ಎಂಬುದರಿಂದ ಜಾತಿಸಿದ್ಧಿಪ್ರಕಾರವನ್ನು ತೋರಿಸುತ್ತಾನೆ. ಗಂಧಸಮವಾಯಿಕಾರಣತಾವಚ್ಛೇದಕರೂಪದಿಂದ ಪೃಥಿವೀತ್ವವು ಸಿದ್ಧವಾಗುತ್ತದೆ. 'ಸಮವಾಯಸಂಬಂಧಾವಚ್ಛಿನ್ನಗಂಧತ್ವಾವಚ್ಛಿನ್ನ ಗಂಧನಿಷ್ಠಕಾರ್ಯತಾನಿರೂಪಿತಾ, ತಾದಾತ್ಮ್ಯಸಂಬಂಧಾವಚ್ಛಿನ್ನ

ಪೃಥಿವೀನಿಷ್ಠಾ ಸಮವಾಯಿಕಾರಣತಾ—ಕಿಂಚಿದ್ಧರ್ಮಾವಚ್ಛಿನ್ನಾ—ಕಾರಣತ್ವಾತ್ । ಕಪಾಲಗತಕಾರಣತಾವತ್" ॥ ಕಪಾಲದಲ್ಲಿ ಘಟನಿರೂಪಿತಕಾರಣತಾ ಇದೆ. ಅದು ಕಪಾಲತ್ವಾವಚ್ಛಿನ್ನವಾಗಿದೆ. ಅದರಂತೆ ಪೃಥಿವಿಯಲ್ಲಿ ಗಂಧಕಾರ್ಯನಿರೂಪಿತಕಾರಣತಾ ಇರುವುದರಿಂದ ಅದು ಪೃಥಿವೀತ್ವಧರ್ಮದಿಂದ ಕೂಡಿರುತ್ತದೆಂದು ಹೇಳಬೇಕು. ಕಾರಣತೆಯು ಯಾವಾಗಲೂ ನಿರವಚ್ಛಿನ್ನವಾಗಿರುವುದಿಲ್ಲ. ಇತರಕಾರಣತಾವ್ಯಾವೃತ್ತಿಗೋಸ್ಕರ ಅಲ್ಲಿ ಅವಚ್ಛೇದಕಧರ್ಮವೊಂದನ್ನು ಸ್ವೀಕರಿಸಲೇಬೇಕು. ಪೃಥಿವಿಯಲ್ಲಿರುವ ಕಾರಣತೆಯಲ್ಲಿ ಪೃಥಿವೀತ್ವವೇ ಅವಚ್ಛೇದಕವಾಗುತ್ತದೆ. ಕಾರಣತಾ ಪೃಥಿವೀತ್ವಾವಚ್ಛಿನ್ನವಾಗುತ್ತದೆ. ಹೀಗೆ ಅನುಮಾನದಿಂದ ಪೃಥಿವೀತ್ವಜಾತಿಯು ಸಿದ್ಧವಾಗುತ್ತದೆ. ಸಿದ್ಧವಾಗುವ ಧರ್ಮವು ಯಾವಾಗಲೂ ಜಾತಿರೂಪವಾಗಿಯೂ ಏಕವಾಗಿಯೂ, ಅವಚ್ಛೇದಕವಾಗಿಯೂ ಲಾಘವದಿಂದ ಸಿದ್ಧಿಸುತ್ತದೆ. 'ಅನ್ಯಥಾ—' ಇತಿ. ಗಂಧತ್ವಾವಚ್ಛಿನ್ನಕಾರ್ಯವನ್ನು ಕುರಿತು ಪೃಥಿವಿಗೆ ಹೇತುತ್ವವನ್ನು ಸ್ವೀಕರಿಸದಿದ್ದರೆ ಗಂಧರೂಪ ಕಾರ್ಯವು ಆಕಸ್ಮಿಕವಾಗಬೇಕಾಗುತ್ತದೆ.—ಕಾರಣವಿಲ್ಲದೇ ಹುಟ್ಟಿದೆಯೆಂದಾಗುತ್ತದೆ. ಆದರೆ ಲೋಕದಲ್ಲಿ ಕಾರಣವಿಲ್ಲದೆ ಯಾವ ಕಾರ್ಯವೂ ಹುಟ್ಟುವುದಿಲ್ಲ. ಆದ್ದರಿಂದ ಗಂಧಕ್ಕೆ ಕಾರಣ ಪೃಥಿವೀ ಎಂದು ಒಪ್ಪಲೇಬೇಕು. ಕಾರಣವಾದ ಮೇಲೆ ಅದರಲ್ಲಿ ಕಾರಣತಾ ಇದೆ. ಈ ಕಾರಣತೆಗೆ ಇತರಕಾರಣತಾವೈಲಕ್ಷಣ್ಯಸಿದ್ಧಿಗೋಸ್ಕರ ಒಂದು ಅವಚ್ಛೇದಕಧರ್ಮವನ್ನು ಅಂಗೀಕರಿಸಬೇಕು. ಅದೇ ಜಾತಿರೂಪವಾದ ಪೃಥಿವೀತ್ವ ಧರ್ಮ. ಗಂಧವನ್ನು ಕುರಿತು ಪೃಥಿವೀತ್ವರೂಪದಿಂದ ಕಾರಣತ್ವವನ್ನು ಅಂಗೀಕರಿಸದಿದ್ದರೆ ಜಲಾದಿಗಳೂ ಗಂಧಕಾರಣಗಳಾಗಲಿ ಎಂದು ಶಂಕಿಸಬಹುದು. ಹೇಗೆ ಕಾರ್ಯತಾವಚ್ಛೇದಕವು ಗಂಧತ್ವವೂ, ಕಾರಣತಾವಚ್ಛೇದಕವು ಪೃಥಿವೀತ್ವವೂ ಸಿದ್ಧವಾದ ಮೇಲೆ ಎಲ್ಲಿಯೂ ದೋಷಕ್ಕೆ ಅವಕಾಶವಿಲ್ಲ. ಇದನ್ನೇ ಸಾಧಿಸುವುದಕೋಸ್ಕರ ಗುರು ಲಕ್ಷಣವು ಮೂಲದಲ್ಲಿ ಹೇಳಿದೆ.

'ಗಂಧವತ್ತ್ವಂ' ಲಕ್ಷಣಕ್ಕೆ ಪಾಷಾಣಾದಿಗಳಲ್ಲಿ ಅವ್ಯಾಪ್ತಿಯನ್ನಾಶಂಕಿಸುತ್ತಾನೆ. 'ನಚ—' ಇತಿ. ಪಾಷಾಣಾದಿಗಳಲ್ಲಿ ಯಾವ ಗಂಧವೂ ತೋರದಿರುವುದರಿಂದ ಗಂಧವತ್ತ್ವಲಕ್ಷಣವು ಅಲ್ಲಿ ಬಾರದಿರುವುದರಿಂದ ಅವ್ಯಾಪ್ತಿ ಬರುತ್ತದೆಂದು ಆಶಂಕಿಸಬಾರದು. 'ತತ್ರಾಪಿ—ಇತಿ. ಪೃಥಿವೀತ್ವರೂಪ ಹೇತುವಿನಿಂದ ಅಲ್ಲಿಯೂ ಗಂಧವಿದೆಯೆಂದು ಅನುಮಾನದಿಂದ ಸಿದ್ಧವಾಗುತ್ತದೆ. ಗಂಧಸತ್ವಾತ್—ಪೃಥಿವೀತ್ವೇನ ಗಂಧಾನುಮಾನಾತ್. "ಪಾಷಾಣಾದಿ:—ಗಂಧವಾನ್–ಪೃಥಿವೀತ್ವಾತ್ । ಘಟವತ್ ।" ಅನುಮಾನಾಕಾರ. ಗಂಧಸಮವಾಯಿಕಾರಣತಾವಚ್ಛೇದಕವಾದ ಪೃಥಿವೀತ್ವಧರ್ಮವಿದ್ದ ಮೇಲೆ ಅದರಲ್ಲಿ ಗಂಧವಿದ್ದೇ ಇರಬೇಕು. ಹಾಗಾದರೆ ಮೂಗಿನಿಂದ ಮೂಸಿನೋಡಿದರೂ ಅಲ್ಲಿ ಗಂಧವು ಲಬ್ಧವಾಗುವುದಿಲ್ಲ. ಗಂಧವಿದೆಯೆಂದು ಹೇಳುವುದು ಹೇಗೆ ? ಎಂಬ ಶಂಕೆಗೆ ಸಮಾಧಾನ ತೋರಿಸುತ್ತಾನೆ. 'ಅನುಪಲ—' ಇತಿ. ಅನುತ್ಕಟವಾದ ಅಂದರೆ ಅನುದ್ಭೂತವಾದ (ಒಡೆದು ತೋರದಿರುವ) ಗಂಧವಿರುವುದರಿಂದ ಉಪಲಬ್ಧವಾಗುವುದಿಲ್ಲ. ಈ ವಿಷಯದಲ್ಲಿ

ಯುಕ್ತಿ ತೋರಿಸುತ್ತಾನೆ. 'ಕಥಂ'—ಇತಿ. ಪಾಷಾಣದಲ್ಲಿ ಗಂಧವನ್ನು ಅಂಗೀಕರಿಸ ದಿದ್ದರೆ ಅದರ ಭಸ್ಮದಲ್ಲಿ ಗಂಧ ತೋರುವುದು ಹೇಗೆ ?

ಪಾಷಾಣದ ಭಸ್ಮದಲ್ಲಿ ಗಂಧವಿದೆಯೆಂದು ಘ್ರಾಣೇಂದ್ರಿಯದಿಂದ ತಿಳಿಯಬಹುದು. ಇದು ಪ್ರತ್ಯಕ್ಷ ಪ್ರಮಾಣದಿಂದ ಸಿದ್ಧವಾಗಿದೆ. ಅಲ್ಲಿ ಗಂಧವಿರುವುದರಿಂದ ಪೃಥಿವೀತ್ವ ವಿದೆಯೆಂದು ಅಂಗೀಕರಿಸಬೇಕು. ಭಸ್ಮದಲ್ಲಿ ಗಂಧವಿದ್ದ ಮೇಲೆ ಭಸ್ಮಾರಂಭಕಾವಯವ ದಲ್ಲಿಯೂ ಗಂಧವಿರುವುದರಿಂದ ಪೃಥಿವೀತ್ವ ಇರುತ್ತದೆ. ಭಸ್ಮಾರಂಭಕಾವಯವಗಳೆ (ಭಸ್ಮವನ್ನು ಹುಟ್ಟಿಸುವ ಅವಯವಗಳು) ಪಾಷಾಣಾರಂಭಕಾವಯವಗಳಾದುದರಿಂದ ಪಾಷಾಣದಲ್ಲಿಯೂ ಪೃಥಿವೀತ್ವ ಸಿದ್ಧವಾಗುವುದರಿಂದ ಅಲ್ಲಿ ಗಂಧವೂ ಸಿದ್ಧಿಸುತ್ತದೆ. ಪೃಥಿವೀತ್ವ ಇದ್ದಲ್ಲಿ ಗಂಧ ಇದ್ದೇ ಇದೆಯೆಂದು (ಪೃಥಿವೀತ್ವಸಾಮಾನಾಧಿಕರಣ್ಯವು ಗಂಧಕ್ಕೆ ಇದೆ) ಹಿಂದಿನ ಅನುಮಾನದಿಂದಲೇ ತಿಳಿದಿದೆ.

ಇದನ್ನೇ 'ಭಸ್ಮನೋ'—ವಾಕ್ಯಗಳಿಂದ ವಿವರಿಸುತ್ತಾನೆ. ಪಾಷಾಣಕ್ಕೆ ಯಾವುದು ಉಪಾದಾನವೋ ಅಂದರೆ ಸಮವಾಯಿಕಾರಣವೋ ಅವರ ಉಪಾದೇಯತ್ವ ಅಂದರೆ ಕಾರ್ಯತ್ವ ಸಿದ್ಧವಾಗುತ್ತದೆ. ಪಾಷಾಣಕ್ಕೆ ಆರಂಭಕವಾದ ಸಮವಾಯಿಕಾರಣ ಪಾರ್ಥಿವಾ ವಯವಗಳು. ಈ ಪಾರ್ಥಿವಾವಯವಗಳಿಂದಲೇ ಭಸ್ಮವೂ ಹುಟ್ಟಿದೆ. ಈ ವಿಷಯ ದಲ್ಲಿ ವ್ಯಾಪ್ತಿ ತೋರಿಸುತ್ತಾನೆ. 'ಯದ್ದ್ರವ್ಯಂ'—ಇತಿ. ಯದ್‌ದ್ರವ್ಯಂ—ಭಸ್ಮಾದಿ ದ್ರವ್ಯವು, ಯತ್‌ದ್ರವ್ಯಧ್ವಂಸಜನ್ಯಂ—ಪಾಷಾಣಾದಿದ್ರವ್ಯಧ್ವಂಸದಿಂದಜನ್ಯವೋ ತತ್ —ಭಸ್ಮಾದಿದ್ರವ್ಯವು, ತದುಪಾದಾನೋಪಾದೇಯಮ್—ಪಾಷಾಣಾದಿದ್ರವ್ಯಕ್ಕೆ ಯಾವುದು ಉಪಾದಾನವೋ ಅಂದರೆ ಪೃಥಿವೀ ಪರಮಾಣ್ವಾದಿಗಳು, ಅದರ ಉಪಾ ದೇಯವು—ಅದರ ಕಾರ್ಯವಾಗಿದೆ, ಅನುಮಾನಾಕಾರ. ಪಾಷಾಣಃ—ಪೃಥಿವೀ-ಪಾರ್ಥಿವ ಪರಮಾಣ್ವಾರಬ್ಧದ್ರವ್ಯತ್ವಾತ್ । ಘಟವತ್ ॥ ಉಕ್ತವಾದ ವ್ಯಾಪ್ತಿಯನ್ನು ದೃಷ್ಟಾಂತದಿಂದ ಸ್ಪಷ್ಟಪಡಿಸುತ್ತಾನೆ. 'ದೃಷ್ಟಂ—' ಇತಿ. ಮಹಾಪಟ (ದೊಡ್ಡ ವಸ್ತ್ರ)ದ ಧ್ವಂಸದಿಂದ ಜನ್ಯವಾದ ಖಂಡಪಟವು ಮಹಾಪಟಕ್ಕೆ ಉಪಾದಾನಕಾರಣ ವಾದ ತಂತುಗಳಿಂದ ಹುಟ್ಟಿದೆ. ಹಾಗೆ ಪಾಷಾಣಧ್ವಂಸದಿಂದ ಹುಟ್ಟಿದ ಪಾಷಾಣ ಭಸ್ಮವೂ ಕೂಡ ಪಾಷಾಣದ ಸಮವಾಯಿಕಾರಣವಾದ ಪಾರ್ಥಿವಪರಮಾಣುಗಳಿಂದ ಹುಟ್ಟಿದೆ. 'ಇತ್ಥಂ ಚ'—ಇತಿ. ದೃಷ್ಟಾಂತವನ್ನು ದಾರ್ಷ್ಟಾಂತದಲ್ಲಿ ಸಂಗಮನ ಮಾಡುತ್ತಾನೆ. (೧) ಮಹಾಪಟವು ತನಗೆ ಸಮವಾಯಿಕಾರಣಗಳಾದ ಅವಯವ ಗಳಾದ ತಂತುಗಳಿಂದ ಹುಟ್ಟಿದೆ, ಅದರಿಂದ ಹುಟ್ಟಿದ ಖಂಡಪಟವೂ ಕೂಡಾ ಆ ಅವ ಯವಗಳಿಂದಲೇ ಹುಟ್ಟಿದೆ ಇವೆರಡಕ್ಕೆ ಬೇರೆ ಬೇರೆ ಸಮವಾಯಿಕಾರಣಗಳಿಲ್ಲ. ಎರಡೂ ತಂತೂಪಾದಾನಜನ್ಯತ್ವಧರ್ಮಾವಚ್ಛಿನ್ನಗಳಾಗಿವೆ. ಹೀಗೆಯೇ ಪಾಷಾಣವು ಪೃಥಿವೀಪರಮಾಣುಜನ್ಯವಾದುದರಿಂದ ಪೃಥಿವೀತ್ವಧರ್ಮದಿಂದ ಕೂಡಿದೆ, ಪಾರ್ಥಿವ ವಾಗಿದೆ. ಪೃಥಿವೀಪರಮಾಣುವಿನಲ್ಲಿ ಗಂಧವಿರುವುದರಿಂದ ಪಾಷಾಣದಲ್ಲಿಯೂ ಗಂಧ ವಿದೆಯೆಂದು ಸಿದ್ಧವಾಗುತ್ತದೆ. ಪಾಷಾಣದಲ್ಲಿ ಗಂಧವಿಲ್ಲವಾದರೆ ಅದರ ಭಸ್ಮದಲ್ಲಿ

ಎಂದೂ ಗಂಧವು ಉಪಲಬ್ಧವಾಗುತ್ತಿರಲಿಲ್ಲ. ಕಾರಣದಲ್ಲಿ ಇಲ್ಲದಿರುವ ಗುಣವು ಕಾರ್ಯದಲ್ಲಿ ಎಂದೂ ತೋರುವುದಿಲ್ಲ. ಕಾರ್ಯಗುಣಗಳನ್ನು ಕುರಿತು ಕಾರಣದ ಗುಣಗಳು ಅಸಮವಾಯಿಕಾರಣಗಳಾಗುತ್ತವೆಯೆಂದು ಹಿಂದೆ ಹೇಳಿದೆ. ಆದುದರಿಂದ ಪಾಷಾಣದಲ್ಲಿ ಗಂಧವಿದೆಯೆಂದು ಸಿದ್ಧವಾಗುತ್ತದೆ.

**ನಾನಾರೂಪವತೀ ಮತಾ ||**

ನಾನಾರೂಪೇತಿ || ಶುಕ್ಲನೀಲಾದಿಭೇದೇನ ನಾನಾಜಾತೀಯಂ ರೂಪಂ ಪೃಥಿವ್ಯಾಮೇವ ವರ್ತತೇ ನ ತು ಜಲಾದೌ, ತತ್ರ ಶುಕ್ಲಸ್ಯೈವ ಸತ್ವಾತ್ | ಪೃಥಿವ್ಯಾಂತು ಏಕಸ್ಮಿನ್ನಪಿ ಧರ್ಮಿಣಿ ಪಾಕವಶೇನ ನಾನಾರೂಪಸಂಭವಾತ್ | ನಚ ಯತ್ರ ನಾನಾರೂಪಂ ನೋತ್ಪನ್ನಂ ತತ್ರಾಽವ್ಯಾಪ್ತಿರಿತಿ ವಾಚ್ಯಮ್, ರೂಪದ್ವಯವದ್ವೃತ್ತಿದ್ರವ್ಯತ್ವವ್ಯಾಪ್ಯಜಾತಿಮತ್ತ್ವಸ್ಯ, ರೂಪನಾಶವದ್ವೃತ್ತಿದ್ರವ್ಯತ್ವವ್ಯಾಪ್ಯಜಾತಿಮತ್ತ್ವಸ್ಯ ವಾ ವಾಚ್ಯತ್ವಾತ್, ವೈಶೇಷಿಕನಯೇ ಪೃಥಿವೀಪರಮಾಣೌ ರೂಪನಾಶಸ್ಯ ರೂಪಾಂತರಸ್ಯ ಚ ಸತ್ವಾತ್ | ನ್ಯಾಯನಯೇ ಘಟಾದಾವಪಿ ತತ್ಸತ್ವಾಲ್ಲಕ್ಷಣಸಮನ್ವಯಃ ||

ನಾನಾರೂಪವತ್ವಂ 'ಇದು ಪೃಥಿವಿಯ ಇನ್ನೊಂದು ಲಕ್ಷಣ. ಶುಕ್ಲನೀಲ ಮುಂತಾದ ನಾನಾರೂಪಗಳು ಕೇವಲ ಪೃಥಿವಿಯಲ್ಲಿ ಮಾತ್ರ ಇರುತ್ತವೆ. ಜಲಾದಿಗಳಲ್ಲಿ ನಿಯತವಾದ ಶುಕ್ಲರೂಪವೊಂದೇ ಇದೆ. ಪೃಥಿವಿಯಲ್ಲಿ ಒಂದೊಂದು ಪದಾರ್ಥದಲ್ಲಿಯೂ ಪಾಕದಿಂದ ನಾನಾರೂಪಗಳುಂಟಾಗುತ್ತವೆ. ವಿಜಾತೀಯವಾದ ತೇಜಃ ಸಂಯೋಗಕ್ಕೆ ಪಾಕವೆಂದು ಹೆಸರು. ಘಟಾದಿ ಪೃಥಿವಿಯಲ್ಲಿ ನಾನಾರೂಪ ಉಂಟಾಗದೇ ಇರುವುದರಿಂದ ಅವ್ಯಾಪ್ತಿಯನ್ನಾಶಂಕಿಸಿ ಸಮಾಧಾನ ತೋರಿಸುತ್ತಾನೆ. 'ನಚ'— ಇತಿ. 'ರೂಪದ್ವಯವಂತಃ ಯೇ ಪಟಾದ್ಯಾಃ (ಎರಡು ರೂಪವುಳ್ಳ ಯಾವ ವಸ್ತ್ರಾದಿಗಳಿವೆಯೋ,) ತೇಷು ವೃತ್ತಿಃ ಯಸ್ಯಾಃ | ದ್ರವ್ಯತ್ವಸ್ಯ ಸಾಕ್ಷಾತ್ ವ್ಯಾಪ್ಯಾ ಯಾ ಜಾತಿಃ (ದ್ರವ್ಯತ್ವ ವ್ಯಾಪ್ಯವಾದ ಜಾತಿ) ಪೃಥಿವೀತ್ವಮ್. ತಾದೃಶಜಾತಿಮತ್ತ್ವಂ.' ಈ ಪೃಥಿವೀತ್ವ ಜಾತಿಯು ನಾನಾರೂಪವುಳ್ಳ ಪೃಥಿವಿಯಲ್ಲಿರುವುದರಿಂದ ಆ ಜಾತಿಯುಳ್ಳದ್ದು ಒಂದು ರೂಪವುಳ್ಳ ಘಟಾದಿಗಳೂ ಆಗುತ್ತವೆ. ಇಂತಹ ಸ್ಥಳದಲ್ಲಿ ಯಾವಾಗಲೂ ಜಾತಿಘಟಿತಲಕ್ಷಣಮಾಡುವುದರಿಂದ ದೋಷವಾರಣೆಯಾಗುತ್ತದೆ. 'ರೂಪದ್ವಯವದ್ವೃತ್ತಿ'—ಎಂಬ ಈ ಲಕ್ಷಣವು ಉಪಸ್ಥಿತಿಕೃತಗೌರವದಿಂದ ಕೂಡಿದೆ. ಅಪೇಕ್ಷಾಬುದ್ಧಿವಿಷಯರೂಪವಾದ ದ್ವಿತ್ವದಿಂದ ಕೂಡಿರುವುದರಿಂದ ಗುರುಭೂತವಾಗುತ್ತದೆ. ಆದುದರಿಂದ ಲಕ್ಷಣಾಂತರವನ್ನು ತೋರಿಸುತ್ತಾನೆ. 'ರೂಪನಾಶವತ್'— ಇತಿ. ಹಿಂದಿನಂತೆ ಪೃಥಿವೀತ್ವಜಾತಿಯೇ ಆಗುವುದರಿಂದ ಅದನ್ನು ತೆಗೆದುಕೊಂಡು ಲಕ್ಷಣಸಮನ್ವಯ. ಘಟಮಾಡುವಾಗ ಹಸಿಯಾಗಿರುವಾಗ ಕಪ್ಪಾಗಿರುತ್ತದೆ. ಪಾಕದಿಂದ ಅಂದರೆ ವಿಲಕ್ಷಣತೇಜಃ ಸಂಯೋಗದಿಂದ ಹಿಂದೆ ಇದ್ದ ಶ್ಯಾಮರೂಪವು ನಷ್ಟವಾಗಿ

ಕೆಂಪುಬಣ್ಣ ಉಂಟಾಗುತ್ತದೆ. ಇದು ಲೋಕಪ್ರಸಿದ್ಧವಾಗಿದೆ. ಈ ಪಾಕವಿಷಯದಲ್ಲಿ ಮತಭೇದವನ್ನು ತೋರಿಸುತ್ತಾನೆ. 'ವೈಶೇಷಿಕ'—ಇತಿ. ವೈಶೇಷಿಕರು ಪೀಲುಪಾಕ ವಾದಿಗಳು. ಇವರು ಪಾಕದಿಂದ ಪೃಥಿವೀಪರಮಾಣುಗಳಲ್ಲಿಯೇ ಪೂರ್ವರೂಪನಾಶ ವಾಗಿ, ರೂಪಾಂತರವು ಹುಟ್ಟುತ್ತೆಂದು ಅಂಗೀಕರಿಸುತ್ತಾರೆ. ನೈಯಾಯಿಕರು ಪರ ಮಾಣುವಿನಲ್ಲಿ ಪಾಕವನ್ನು ಒಪ್ಪುವುದಿಲ್ಲ. ಪರಮಾಣುಜನ್ಯವಾದ ಘಟಾವಯವ ದಲ್ಲಿಯೇ ಪಾಕವುಂಟಾಗಿ ಅದರಿಂದಲೇ ಪೂರ್ವರೂಪನಾಶ, ಉತ್ತರರೂಪೋತ್ಪತ್ತಿ ಯನ್ನು ಅಂಗೀಕರಿಸುತ್ತಾರೆ. ಗುಣನಿರೂಪಣ ಗ್ರಂಥದಲ್ಲಿ ಇದನ್ನು ವಿವರಿಸುತ್ತಾನೆ. ಘಟಾದಿಪದಾರ್ಥಗಳೇ ರೂಪನಾಶವುಳ್ಳವುಗಳು. ಅವುಗಳಲ್ಲಿರುವ ದ್ರವ್ಯತ್ವಸಾಕ್ಷಾತ್ ವ್ಯಾಪ್ಯವಾದ ಜಾತಿ—ಪೃಥಿವೀತ್ವ. ಆ ಜಾತಿಯುಳ್ಳದ್ದು ಎಲ್ಲಾ ಪೃಥಿವಿಗಳಾಗುತ್ತವೆ. ಇದೇ 'ನಾನಾರೂಪವತ್ತ್ವಂ' ಲಕ್ಷಣದಿಂದ ವಿವಕ್ಷಿತವಾಗಿದೆ. ರೂಪನಾಶವೆಂದರೆ ರೂಪ ಧ್ವಂಸ.

**ಷಡ್ವಿಧಸ್ತು ರಸಸ್ತತ್ರ**

ಷಡ್ವಿಧ ಇತಿ ॥ ಮಧುರಾದಿಭೇದೇನ ಯಃ ಷಡ್ವಿಧೋ ರಸಃ ಸ ಪೃಥಿವ್ಯಾಮೇವ । ಜಲೇ ಚ ಮಧುರ ಏವ ರಸಃ ॥ ಅತ್ರಾಪಿ ಪೂರ್ವವತ್ ರಸಧ್ವಯವದ್ವೃತ್ತಿ ದ್ರವ್ಯತ್ವ ವ್ಯಾಪ್ಯಜಾತಿಮತ್ತ್ವಂ ಲಕ್ಷಣಾರ್ಥೋಽವಸೇಯಃ ॥

'ಷಡ್ವಿಧರಸವತ್ತ್ವಂ' ಎಂದು ಪೃಥಿವಿಗೆ ಇನ್ನೊಂದು ಲಕ್ಷಣ. ಮಧುರ, ಲವಣ ಇತ್ಯಾದಿ ಆರು ರಸಗಳನ್ನು ಮುಂದೆ ಹೇಳುತ್ತಾನೆ. ಈ ಆರುರಸಗಳು ಪೃಥಿವಿಯಲ್ಲಿ ಮಾತ್ರ ಇರುತ್ತವೆ. ಇಲ್ಲಿಯೂ ಮಾವಿನಹಣ್ಣು ಮುಂತಾದ ಪೃಥಿವಿಯಲ್ಲಿ ಆರುರಸ ತೋರದಿದ್ದರೆ ಅಲ್ಲಿ ಅವ್ಯಾಪ್ತಿ ಬರುವುದರಿಂದ ಹಿಂದಿನಂತೆ ಜಾತಿಘಟಿತ ಲಕ್ಷಣಮಾಡಿ ಪರಿಹಾರಮಾಡಬೇಕೆಂದು ತಿಳಿಸುತ್ತಾನೆ. 'ಅತ್ರಾಪಿ'—ಎಲ್ಲಿ ಆರು ರಸಗಳಿವೆಯೋ ಅಲ್ಲಿರುವ ದ್ರವ್ಯತ್ವವ್ಯಾಪ್ಯವಾದ ಪೃಥಿವೀತ್ವ ಜಾತಿಯಿಂದ ಕೂಡಿರುವುದೆಂದು ಲಕ್ಷಣಾ ತಾತ್ಪರ್ಯ. ॥

**ಗಂಧಸ್ತು ದ್ವಿವಿಧೋ ಮತಃ ॥ ೩೫ ॥**

ಗಂಧಸ್ತ್ವಿತಿ॥ ದ್ವಿವಿಧ ಇತಿ। ವಸ್ತುಸ್ಥಿತಿಮಾತ್ರಂ ನ ತು ದ್ವಿವಿಧಗಂಧವತ್ತ್ವಂ ಲಕ್ಷಣಂ ದ್ವಿವಿಧತ್ವಸ್ಯ ವ್ಯರ್ಥತ್ವಾತ್ । ದ್ವೈವಿಧ್ಯಂ ಚ ಸೌರಭಾಽಸೌರಭಭೇದೇನ ಬೋಧ್ಯಮ್ ॥ ೩೫ ॥

ಪೃಥಿವಿಯಲ್ಲಿ ಸುರಭಿ, ಅಸುರಭಿ (ಪರಿಮಳ, ಕೆಟ್ಟವಾಸನೆ) ಎಂಬ ಎರಡು ವಿಧ ವಾದ ಗಂಧವಿದೆ. ಹಿಂದೆ ಹೇಳಿರುವುದೆಲ್ಲಾ ಲಕ್ಷಣವಾದುದರಿಂದ 'ದ್ವಿವಿಧಗಂಧವತ್ತ್ವಂ'

ಎಂಬುದೂ ಲಕ್ಷಣವಾಕ್ಯವೆಂದು ಭ್ರಮಿಸಬಾರದು. ಗಂಧವಿರುವುದು ಪೃಥಿವಿಯಲ್ಲಿ ಮಾತ್ರವಲ್ಲದೆ ಇನ್ನಾವುದರಲ್ಲಿಯೂ ಇಲ್ಲ. ಆಗ 'ಗಂಧಹೇತುಃ' 'ಗಂಧವತ್ತ್ವಂ' ಎಂದು ಹಿಂದೆಯೇ ಲಕ್ಷಣ ಹೇಳಿದೆ. ಅದರಿಂದಲೇ ಗತಾರ್ಥವಾಗುವುದರಿಂದ ಪುನಃ ಹೇಳಬೇಕಾಗಿಲ್ಲ. ವಸ್ತುಸ್ಥಿತಿಕಥನ—ಪೃಥಿವಿಯಲ್ಲಿ ಸ್ವಾಭಾವಿಕವಾಗಿ ಎರಡು ರೀತಿಯಾದ ಗಂಧವಿದೆ ಎಂದು ಸೂಚಿಸುವುದು.

**ಸ್ಪರ್ಶಸ್ತಸ್ಯಾಸ್ತು ವಿಜ್ಞೇಯೋ ಹ್ಯನುಷ್ಣಾಶೀತಪಾಕಜಃ ॥**

ತಸ್ಯಾಃ ಪೃಥಿವ್ಯಾ ಇತಿ । ಅನುಷ್ಣಾಶೀತಸ್ಪರ್ಶವತ್ತ್ವಂ ವಾಯೋರಪಿ ವರ್ತತ ಇತ್ಯುಕ್ತಂ ಪಾಕಜ ಇತಿ । ಇತ್ಥಂ ಚ ಪೃಥಿವ್ಯಾಃ ಸ್ಪರ್ಶೋಽನುಷ್ಣಾಶೀತ ಇತಿ ಜ್ಞಾಪನಾರ್ಥಂ ತದುಕ್ತಮ್ । ವಸ್ತುತಸ್ತು ಪಾಕಜಸ್ಪರ್ಶವತ್ತ್ವಮಾತ್ರಂ ಲಕ್ಷಣಮ್ ಅಧಿಕಸ್ಯ ವೈಯರ್ಥ್ಯಾತ್ । ಯದ್ಯಪಿ ಪಾಕಜಸ್ಪರ್ಶಃ ಪಟಾದೌ ನಾಸ್ತಿ, ತಥಾಪಿ ಪಾಕಜಸ್ಪರ್ಶವದ್ವೃತ್ತಿದ್ರವ್ಯತ್ವವ್ಯಾಪ್ಯಜಾತಿಮತ್ತ್ವಮರ್ಥೋಽ ಬೋಧ್ಯಃ ॥

ಕಾರಿಕೆಯಲ್ಲಿ ತಸ್ಯಾಃ ಎಂಬುದಕ್ಕೆ ಪೃಥಿವಿಯ ಎಂದರ್ಥ. ಇದರ ಸ್ಪರ್ಶ ಗುಣವು ಅನುಷ್ಣಾಶೀತಪಾಕಜವಾಗಿದೆ. ಅನುಷ್ಣಶ್ಚಾಸೌಅಶೀತಶ್ಚ. ಅನುಷ್ಣಾಶೀತಶ್ಚಾಸೌ ಪಾಕಜಶ್ಚ, ಅನುಷ್ಣಾಶೀತಪಾಕಜಃ । ಉಷ್ಣವೂ ಅಲ್ಲದ ಶೀತವೂ ಅಲ್ಲದ ಪಾಕದಿಂದ ಉಂಟಾದ ಸ್ಪರ್ಶವು ಪೃಥಿವಿಯಲ್ಲಿದೆ. ಹಿಂದಿನಂತೆ ಇದೂ ಲಕ್ಷಣವಾಗುತ್ತದೆ. 'ಪಾಕಜ ಸ್ಪರ್ಶವತ್ವಂ' ಎಂದು ಫಲಿತವಾಗುತ್ತದೆ. ಅನುಷ್ಣಾಶೀತಸ್ಪರ್ಶವು ವಾಯುವಿನಲ್ಲಿ ಇರುವುದರಿಂದ ಪಾಕಜವೆಂದು ಹೇಳಿದೆ. ಅಲ್ಲಿ ಪಾಕದಿಂದ ಉಂಟಾಗ ತಕ್ಕ ಅನುಷ್ಣಾಶೀತ ಸ್ಪರ್ಶವಿಲ್ಲ. ಪಾಕಜಸ್ಪರ್ಶವುಳ್ಳದ್ದೆಂದರೆ ಲಘುಭೂತಲಕ್ಷಣವಾಗುತ್ತದೆ. ಈ ಲಕ್ಷಣವೂ ಪಟಾದಿಗಳಲ್ಲಿ ಅವ್ಯಾಪ್ತವಾಗುತ್ತದೆ. ಪಟದಲ್ಲಿ ಪಾಕವುಂಟಾದರೆ ನಾಶವೇ ಆಗುತ್ತದೆ. ಹೀಗಿರುವಾಗ ಅದರಲ್ಲಿ ಪಾಕಜಸ್ಪರ್ಶಬರುವುಧು ಹೇಗೆ ? ಅದಕ್ಕೋಸ್ಕರ ಇಲ್ಲಿಯೂ ಜಾತಿಘಟಿತಲಕ್ಷಣ ಮಾಡಬೇಕು 'ಪಾಕಜಸ್ಪರ್ಶ' —ಇತಿ. ಪಾಕಜಸ್ಪರ್ಶವುಳ್ಳವುಗಳು ಘಟಾದಿಗಳು ಅಲ್ಲಿರುವ ದ್ರವ್ಯತ್ವವ್ಯಾಪ್ಯಜಾತಿಯೆಂದರೆ ಪೃಥಿವೀತ್ವಜಾತಿ. ಇದು ಉಳ್ಳದ್ದು ಘಟಾದಿಗಳು ಹೇಗೋ ಹಾಗೆಯೇ ಪಟಾದಿಗಳೂ ಆಗುತ್ತವೆ.

**ನಿತ್ಯಾನಿತ್ಯಾ ಚ ಸಾ ದ್ವೇಧಾ ನಿತ್ಯಾ ಸ್ಯಾದಣುಲಕ್ಷಣಾ ॥ ೩೬ ।**
**ಅನಿತ್ಯಾ ತು ತದನ್ಯಾ ಸ್ಯಾತ್ಸೈವಾವಯವಯೋಗಿನೀ ॥**

ಸಾ ಪೃಥಿವೀ ದ್ವಿವಿಧಾ ನಿತ್ಯಾ ಅನಿತ್ಯಾ ಚೇತ್ಯರ್ಥಃ ಅಣುಲಕ್ಷಣಾ ಪರಮಾಣುರೂಪಾ ಪೃಥಿವೀ ನಿತ್ಯಾ । ತದನ್ಯಾ ಪರಮಾಣುಭಿನ್ನಾ ಪೃಥಿವೀ ದ್ವ್ಯಣುಕಾದಿರೂಪಾ

ಸರ್ವಾಪ್ಯನಿತ್ಯೇತ್ಯರ್ಥಃ । ಸೈವ ಅನಿತ್ಯಾ ಪೃಥಿವ್ಯೇ ವಾವಯವವತೀತ್ಯರ್ಥಃ ॥

ಉಕ್ತಲಕ್ಷಣದಿಂದ ಕೂಡಿದ ಪೃಥಿವಿಯು ನಿತ್ಯಾ, ಅನಿತ್ಯಾ ಎಂದು ಎರಡುವಿಧ ವಾಗಿದೆ. ಪರಮಾಣುರೂಪವಾದ ಪೃಥಿವಿಯು ನಿತ್ಯವಾಗಿದೆ. ಪರಮಾಣುಗಿಂತ ಬೇರೆಯಾದ ದ್ವ್ಯಣುಕಾದಿರೂಪವಾದ ಪೃಥಿವಿಯು ಅನಿತ್ಯವಾಗುತ್ತದೆ. ಅವಯವ ಗಳಿಂದ ಕೂಡಿರುವುದರಿಂದ ಇದು ಅನಿತ್ಯವಾಗುತ್ತದೆ.

ನನು–ಅವಯವಿನಿ ಕಿಂ ಮಾನಂ ? ಪರಮಾಣುಪುಂಜೈರೇವೋಪಪತ್ತೇಃ । ನ ಚ ಪರಮಾಣೂನಾಮತೀಂದ್ರಿಯತ್ವಾದ್ ಘಟಾದೇಃ ಪ್ರತ್ಯಕ್ಷಂ ನ ಸ್ಯಾದಿತಿ ವಾಚ್ಯಮ್, ಏಕಸ್ಯ ಪರಮಾಣೋರಪ್ರತ್ಯಕ್ಷತ್ವೇಽಪಿ ತತ್ಸಮೂಹಸ್ಯ ಪ್ರತ್ಯಕ್ಷ ತ್ವಾತ್ । ಯಥೈಕಸ್ಯ ಕೇಶಸ್ಯ ದೂರೇ ಅಪ್ರತ್ಯಕ್ಷತ್ವೇಽಪಿ ತತ್ಸಮೂಹಸ್ಯ ಪ್ರತ್ಯಕ್ಷತ್ವಮ್ । ನ ಚೈಕೋ ಘಟಃ ಸ್ಥೂಲ ಇತಿ ಬುದ್ಧೇರನುಪಪತ್ತಿರಿತಿ ವಾಚ್ಯಮ್, ಏಕೋ ಮಹಾನ್ ಧಾನ್ಯ ರಾಶಿರಿತಿವದುಪಪತ್ತೇಃ । ಮೈವಮ್, ಪರಮಾಣೋರತೀಂದ್ರಿಯತ್ವೇನ ತತ್ಸಮೂಹಸ್ಯಾಪಿ ಪ್ರತ್ಯಕ್ಷಾಯೋಗ್ಯತ್ವಾತ್ । ದೂರಸ್ಥಕೇಶಸ್ತು ನಾತೀಂದ್ರಿಯಃ, ಸನ್ನಿಧಾನೇ ತಸ್ಯೈವ ಪ್ರತ್ಯಕ್ಷತ್ವಾತ್ ॥

ಬೌದ್ಧಮತಾನುಯಾಯಿಗಳ ಆಶಂಕೆಯನ್ನು ತೋರಿಸುತ್ತಾನೆ. 'ನನು–' ಇತಿ. ಅವಯವ ವಿಶಿಷ್ಟವಾದ ಘಟಾದಿವಸ್ತುಗಳಿವೆಯೆಂಬುದರಲ್ಲಿ ಯಾವ ಪ್ರಮಾಣವೂ ಇಲ್ಲ. ವಿಲಕ್ಷಣ ಸಂಸ್ಥಾನವಿಶಿಷ್ಟವಾದ ಪರಮಾಣುಗಳಿಂದಲೇ 'ಅಯಂಘಟಃ' ಎಂಬ ಪ್ರತೀತಿ ಸಿದ್ಧವಾಗುತ್ತದೆ. 'ನಚ—' ಎಂಬುದರಿಂದ ಸಿದ್ಧಾಂತಿಯ ಆಶಂಕೆಯನ್ನು ಬೌದ್ಧನೇ ಮಾಡುತ್ತಾನೆ. ಪರಮಾಣುಪುಂಜವೇ (ಸಮುದಾಯ) ಘಟವಾದರೆ (ಅದು ತನ್ನ ಅವಯವಗಳಿಂದ ಆಗದಿದ್ದರೆ) ಪರಮಾಣುಗಳು ಇಂದ್ರಿಯಕ್ಕೆ ಗೋಚರವಾಗದಿರುವುದ ರಿಂದ, ತತ್ಸಮುದಾಯರೂಪವಾದ ಘಟವೂ ಪ್ರತ್ಯಕ್ಷವಾಗದೇ ಹೋಗಬೇಕೆಂದು ಆಶಂ ಕಿಸಬಾರದು. ಒಂದು ಪರಮಾಣು ಅತಿಸೂಕ್ಷ್ಮವಾಗಿರುವುದರಿಂದ ಪ್ರತ್ಯಕ್ಷಗೋಚರ ವಾಗದಿದ್ದರೂ, ಅದರ ಸಮುದಾಯವು ಕಣ್ಣಿಗೆ ತೋರಿಯೇ ತೋರುತ್ತದೆ. ಆದ್ದರಿಂದ ಘಟಪ್ರತ್ಯಕ್ಷವಾಗುವುದರಲ್ಲಿ ಯಾವ ಅನುಪಪತ್ತಿಯೂ ಇಲ್ಲ. ಇದನ್ನೇ ದೃಷ್ಟಾಂ ದಿಂದ ವಿಶದಪಡಿಸುತ್ತಾನೆ. 'ಯಥಾ—' ಇತಿ. ಒಂದು ಕೂದಲು ದೂರದಲ್ಲಿರುವಾಗ ತೋರದಿದ್ದರೂ ಅದರ ಸಮುದಾಯ ತೋರಿಯೇತೋರುತ್ತದೆ. ಅದರಂತೆ ಘಟಪ್ರತ್ಯಕ್ಷ ವೆಂದು ತಿಳಿಯಬೇಕು. ಪುನಃ ಸಿದ್ಧಾಂತಿಯ ಆಶಂಕೆ ತೋರಿಸುತ್ತಾನೆ. 'ನ ಚ—' ಇತಿ. ಘಟವು ಪರಮಾಣುಸಮುದಾಯರೂಪವಾದರೆ 'ಒಂದು ಘಟ ತುಂಬಾ ದೊಡ್ಡದು' ಎಂದು ಹೇಳುವುದು ಹೇಗೆ ? ಅಂದರೆ — 'ಒಂದು ದೊಡ್ಡ ಧಾನ್ಯರಾಶಿ' ಎಂಬ ವ್ಯವಹಾರದಂತೆ ಇದು ಸಮಂಜಸವಾಗುತ್ತದೆ. ಅನೇಕ ಕಾಳಿನ ಸಮುದಾಯ ಒಂದು ಧಾನ್ಯದ ರಾಶಿ ಎನ್ನುತ್ತಾರೆ. ಹೀಗೆ ಸಂಯೋಗವಿಶೇಷವೇ ಮಹತ್ತ್ವಕ್ಕೆ

ಕಾರಣವಾಗಿದೆ. ಇದರಿಂದ ಪರಮಾಣುಪುಂಜ ಸೂಕ್ಷ್ಮವಾಗಿದ್ದರೂ 'ಮಹಾನ್ ಘಟಃ' ಎಂಬ ಪ್ರತೀತಿ ಬರುತ್ತದೆ. ಆದುದರಿಂದ ಪರಮಾಣುಗಳಿಗಿಂತ ಬೇರೆಯಾಗಿ ಪದಾರ್ಥೋತ್ಪತ್ತಿಗೆ ಅವಯವಗಳನ್ನು ಕಲ್ಪಿಸಬೇಕಾಗಿಲ್ಲವೆಂದು ಬೌದ್ಧಸಿದ್ಧಾಂತ.

ಸಿದ್ಧಾಂತಿಯು ಸಮಾಧಾನ ತೋರಿಸುತ್ತಾನೆ. 'ನೈವಮ್—' ಇತಿ. ಪರಮಾಣುವು ಯಾವಾಗಲೂ ಅತೀಂದ್ರಿಯ—ಇಂದ್ರಿಯಕ್ಕೆ ಗೋಚರವಾಗುವುದಿಲ್ಲ. ಇದು ಆದ್ಯವಯವವಾಗಿ, ಅತಿಸೂಕ್ಷ್ಮವಾಗಿ, ನಿರವಯವವಾಗಿ, ನಿತ್ಯವಾಗಿರುತ್ತದೆ. 'ಮೂರ್ತತ್ವೇಸತಿ ನಿರವಯವತ್ತ್ವಂ' ಪರಮಾಣುಲಕ್ಷಣ. ಹೀಗಿರುವಾಗ ಅದರ ಸಮೂಹವೂ ಕೂಡಾ ಅತೀಂದ್ರಿಯವೇ ಆಗಬೇಕು. ದೃಷ್ಟಾಂತ ಹೇಳಿರುವುದು ವಿಷಮವಾಗುತ್ತದೆ. ಒಂದು ಕೂದಲು ದೂರದಲ್ಲಿ ತೋರುವುದಿಲ್ಲವಾದರೂ ಅತೀಂದ್ರಿಯವಲ್ಲ. ದೂರತ್ವದೋಷದಿಂದ ತೋರುವುದಿಲ್ಲ. ಅದೇ ಒಂದು ಕೂದಲನ್ನು ಹತ್ತಿರದಲ್ಲಿ ತಂದು ನೋಡಿದರೆ ಪ್ರತ್ಯಕ್ಷಗೋಚರವಾಗುತ್ತದೆ. ಸ್ವಭಾವದಿಂದ ಪರಮಾಣುವಿನಂತೆ ಅತೀಂದ್ರಿಯವಲ್ಲ. ಆದುದರಿಂದ ಕೇಶದೃಷ್ಟಾಂತದಿಂದ ಪರಮಾಣುಪುಂಜವಾದವನ್ನು ಪುಷ್ಟೀಕರಿಸುವುದು ಸಮಂಜಸವಲ್ಲ.

ನ ಚ ತದಾನೀಮದೃಶ್ಯಪರಮಾಣುಪುಂಜಾತ್ ದೃಶ್ಯಪರಮಾಣುಪುಂಜಸ್ಯೋತ್ಪನ್ನತ್ವಾನ್ನ ಪ್ರತ ಕ್ಷತ್ವೇ ವಿರೋಧ ಇತಿ ವಾಚ್ಯಮ್, ಅದೃಶ್ಯಸ್ಯ ದೃಶ್ಯಾನುಪಾದಾನತ್ವಾತ್ । ಅನ್ಯಥಾಚಕ್ಷುರೂಷ್ಮಾದಿಸಂತತೇರಪಿ ಕದಾಚಿತ್ ದೃಶ್ಯತ್ವಪ್ರಸಂಗಾತ್ । ನಚಾತಿತಪ್ತತೈಲಾದೌ ಕಥಮದೃಶ್ಯದಹನಸಂತತೇರ್ದೃಶ್ಯದಹನೋತ್ಪತ್ತಿರಿತಿ ವಾಚ್ಯಮ್ । ತತ್ರ ತದಂತಃಪಾತಿಭಿರ್ದೃಶ್ಯದಹನಾವಯವೈಃ ಸ್ಥೂಲದಹನೋತ್ಪತ್ತೇರುಪಗಮಾತ್ । ನ ಚಾದೃಶ್ಯೇನ ದ್ವ್ಯಣುಕೇನ ಕಥಂ ದೃಶ್ಯತ್ರಸರೇಣೋರುತ್ಪತ್ತಿರಿತಿ ವಾಚ್ಯಮ್, ಯತೋ ನ ದೃಶ್ಯತ್ವಮದೃಶ್ಯತ್ವಂ ವಾ ಕಸ್ಯಚಿತ್ಸ್ವಭಾವಾದಾಚಕ್ಷ್ಮಹೇ । ಕಿಂತುಮಹತ್ತ್ವೋದ್ಭೂತರೂಪಾದಿಕಾರಣಸಮುದಾಯವಶಾತ್ ದೃಶ್ಯತ್ವಂ ತದಭಾವೇ ಚಾದೃಶ್ಯತ್ವಮ್ । ತಥಾಚ ತ್ರಸರೇಣೋರ್ಮಹತ್ತ್ವಾತ್ಪ್ರತ್ಯಕ್ಷತ್ವಂ ನ ತು ದ್ವ್ಯಣುಕಾದೇಸ್ತದಭಾವಾತ್ । ನ ಹಿ ತ್ವನ್ಮತೇಽಪಿ ಸಂಭವತೀದಂ ಪರಮಾಣೌ ಮಹತ್ತ್ವಾಭಾವಾತ್ ॥

ಬೌದ್ಧಮತವನ್ನೇ ವಿಶದಪಡಿಸಿ ಖಂಡಿಸುತ್ತಾನೆ. 'ನಚ—' ಇತಿ. ತದಾನೀಂ—ಕಾರ್ಯೋತ್ಪತ್ತಿಕಾಲದಲ್ಲಿ, ಅದೃಶ್ಯಪರಮಾಣುಪುಂಜಾತ್ — ಪ್ರತ್ಯಕ್ಷಕ್ಕೆ ಅಯೋಗ್ಯಗಳಾದ ಪರಮಾಣುಸಮುದಾಯದಿಂದ, ದೃಶ್ಯಪರಮಾಣುಪುಂಜಸ್ಯ — ಪ್ರತ್ಯಕ್ಷಕ್ಕೆ ಯೋಗ್ಯಗಳಾದ ಪರಮಾಣುಸಮುದಾಯವು ಹುಟ್ಟುವುದರಿಂದ, ಪ್ರತ್ಯಕ್ಷವಾಗುವುದರಲ್ಲಿ ಯಾವ ತೊಂದರೆಯೂ ಇಲ್ಲವೆಂದು ಹೇಳಬಾರದು. 'ಅದೃಶ್ಯಸ್ಯ—' ಇತಿ. ಅದೃಶ್ಯವು ಎಂದೂ ದೃಶ್ಯಕ್ಕೆ ಕಾರಣವಾಗುವುದಿಲ್ಲ. ಕಾರ್ಯಧರ್ಮ ಯಾವಾಗಲೂ ಕಾರಣಧರ್ಮ

ವನ್ನು ಅನುಸರಿಸಿಯೇ ಉಂಟಾಗುತ್ತದೆ. ಕಾರಣ ಅದೃಶ್ಯವಾದರೆ ಕಾರ್ಯವೂ ಅದೃಶ್ಯವಾಗಬೇಕೆಂದು ತಾತ್ಪರ್ಯ. ಅನ್ಯಥಾ — ಅದೃಶ್ಯವು ದೃಶ್ಯಕ್ಕೆ ಕಾರಣವಾಗುತ್ತದೆಯೆಂದರೆ ಚಕ್ಷುರಿಂದ್ರಿಯಸಮುದಾಯವೂ, ಊಷ್ಮಾ — ಸೆಖೆಯ ಸಮುದಾಯವೂ ಪ್ರತ್ಯಕ್ಷವಿಷಯವಾಗಬೇಕಾಗುತ್ತದೆ. ಆದರೆ ಚಕ್ಷುರಿಂದ್ರಿಯವೂ ಸೆಖೆಯೂ ಎಂದೂ ನಯನೇಂದ್ರಿಯಗೋಚರವಾಗುವುದಿಲ್ಲ. 'ನಚಾತಿತಪ್ತ—' ಇತಿ. ಅದೃಶ್ಯದಿಂದ ದೃಶ್ಯ ಹುಟ್ಟುವುದಿಲ್ಲವೆಂದು ಹೇಳುವುದಾದರೆ ಚೆನ್ನಾಗಿ ಕಾಯಿಸಿದ ಎಣ್ಣೆಯಲ್ಲಿ ಅದೃಶ್ಯದಹನದಿಂದ ಕಣ್ಣಿಗೆ ಕಾಣುವ ಬೆಂಕಿ ಹುಟ್ಟುವುದು ಹೇಗೆ? ಕಾದ ಎಣ್ಣೆಯಲ್ಲಿ ಅದೃಶ್ಯವಾದ ಬೆಂಕಿಯ ಕಣಗಳು ಇರುತ್ತವೆ. ಆಗ ಸ್ವಲ್ಪ ನೀರು ಎರಚಿದರೆ ಕಣ್ಣಿಗೆ ಕಾಣುವ ಬೆಂಕಿ ಏಳುತ್ತದೆ. ಆದುದರಿಂದ ಅದೃಶ್ಯದಿಂದ ಕೆಲವು ಕಡೆ ದೃಶ್ಯವಾಗುತ್ತದೆಂದು ಪೂರ್ವಪಕ್ಷೀಯ ಆಕ್ಷೇಪ. ಆದರೆ ಇದು ಸರಿಯಲ್ಲ. ಅಲ್ಲಿ ದೃಶ್ಯವಾದ ಅಗ್ನಿಯ ಅವಯವಗಳಿಂದಲೇ ಸ್ಥೂಲವಾದ ಅಗ್ನಿಯುಂಟಾಗಿದೆ. ಅದೃಶ್ಯದಿಂದ ಹುಟ್ಟಲೇ ಇಲ್ಲ. ಆದುದರಿಂದ ದೃಶ್ಯಕ್ಕೆ ಅದೃಶ್ಯ ಕಾರಣವಾಗುತ್ತದೆಂಬ ವಾದವು ಅಪ್ರಾಮಾಣಿಕವೇ. ಪುನಃ ಆಕ್ಷೇಪಿಸಿ ಸಮಾಧಾನ ತೋರಿಸುತ್ತಾನೆ. 'ನಚ —' ಇತಿ. ದ್ವ್ಯಣುಕವು ಎಂದೂ ಪ್ರತ್ಯಕ್ಷಗೋಚರವಾಗುವುದಿಲ್ಲ. ಆದುದರಿಂದ ಅದು ಅದೃಶ್ಯ. ಅದರಿಂದ ಹುಟ್ಟಿದ ತ್ರಸರೇಣುವು ಪ್ರತ್ಯಕ್ಷವಾಗುವುದರಿಂದ ದೃಶ್ಯವಾಗುತ್ತದೆ. ಹೀಗಿರುವಾಗ ಅದೃಶ್ಯವು ದೃಶ್ಯಕ್ಕೆ ಉಪಾದಾನಕಾರಣವಾಗುವುದಿಲ್ಲವೆಂಬ ನೈಯಾಯಿಕನ ಮಾತು ಅಸಂಗತವಲ್ಲವೇ? ಎಂದು ಬೌದ್ಧನು ಆಶಂಕಿಸಬಹುದು. ಸಿದ್ಧಾಂತಿಯ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಾನೆ. ಒಂದು ವಸ್ತುವಿನ ದೃಶ್ಯತ್ವ, ಅದೃಶ್ಯತ್ವವು ಸ್ವಭಾವದಿಂದ ಬರುವುದಿಲ್ಲ. ಮಹತ್ತ್ವ ಉದ್ಭೂತರೂಪಾದಿಕಾರಣಸಮುದಾಯವಿದ್ದರೆ ದೃಶ್ಯತ್ವ ಸಂಭವಿಸುತ್ತದೆ. ತದ್ಭಿನ್ನವಾದುದು ಅದೃಶ್ಯ. ತ್ರಸರೇಣುವಿನಲ್ಲಿ ಮಹತ್ತ್ವಾದಿಗಳಿರುವುದರಿಂದ ಪ್ರತ್ಯಕ್ಷಯೋಗ್ಯವಾಗಿ ದೃಶ್ಯವಾಗಿದೆ. ದ್ವ್ಯಣುಕದಲ್ಲಿ ಮಹತ್ತ್ವಾದಿಗಳು ಇಲ್ಲ. ಆದುದರಿಂದ ಅದು ಅದೃಶ್ಯ ಅಂದರೆ ಪ್ರತ್ಯಕ್ಷಾಗೋಚರವಾಗಿದೆ. ಇದರಿಂದ ದರ್ಶನಯೋಗ್ಯತ್ವವಾಗಲೀ ಅದರ್ಶನಯೋಗ್ಯತ್ವವಾಗಲೀ ಪದಾರ್ಥದ ಸ್ವಾಭಾವಿಕಧರ್ಮವಲ್ಲವೆಂದು (ಸ್ವರೂಪಸಂಬಂಧಾವಚ್ಛಿನ್ನಧರ್ಮವಲ್ಲ) ಸಿದ್ಧವಾಗುತ್ತದೆ. ಮಹತ್ತ್ವಾದಿಕಾರಣಕಲಾಪಹೇತುವಳ್ಳದ್ದು ದೃಶ್ಯವೂ, ಕಾರಣಕಲಾಪವಿಲ್ಲದಿರುವುದು ಅದೃಶ್ಯವೂ ಆಗುತ್ತದೆ. ಕಾರಣಕಲಾಪದಲ್ಲಿ ಆಲೋಕವೂ ಸೇರುತ್ತದೆ. ಹೀಗಿರುವಾಗ ಬೌದ್ಧರ ಪರಮಾಣುಪುಂಜವಲ್ಲಿ ಮಹತ್ತ್ವಾದಿಕಾರಣಕಲಾಪವಿಲ್ಲದಿರುವುದರಿಂದ ದರ್ಶನಯೋಗ್ಯತ್ವ ಬರುವುದು ಹೇಗೆ? ದೃಶ್ಯತ್ವವಿಲ್ಲದ ಮೇಲೆ ಪರಮಾಣುಪುಂಜವಾದ ಘಟಕ್ಕೆ 'ಅಯಂ ಘಟಃ' ಇತ್ಯಾದಿ ಲೌಕಿಕವ್ಯವಹಾರ ಕೂಡುವುದು ಹೇಗೆ? ಆದುದರಿಂದ ಪರಮಾಣುಪುಂಜವೇ ಘಟಾದಿಗಳು. ಅದಕ್ಕೋಸ್ಕರ ಅವಯವಕಲ್ಪನಾ ಬೇಡವೆಂಬ ಬೌದ್ಧನ ವಾದ ಸಮಂಜಸವಲ್ಲ. ಪರಮಾಣುಗಳಲ್ಲಿ ಮಹತ್ವವಿಲ್ಲದಿರುವುದರಿಂದ ಪರಮಾಣುಪುಂಜರೂಪವಾದ ಘಟವು

ಪ್ರತ್ಯಕ್ಷಗೋಚರವಾಗಲಾರದು ಎಂಬುದಕ್ಕೆ ಸಮಂಜಸವಾದ ಉತ್ತರವನ್ನು ಬೌದ್ಧನು ಕೊಡಲಾರನು.

ಇತ್ಥಂ ಚಾವಯವಸಿದ್ಧೌ ತೇಷಾಮುತ್ಪಾದವಿನಾಶಯೋಃ ಪ್ರತ್ಯಕ್ಷಸಿದ್ಧತ್ವಾದನಿತ್ಯತ್ವಮ್ । ತೇಷಾಂ ಚಾವಯವಾವಯವಧಾರಾಯಾ ಅನಂತತ್ವೇ ಮೇರುಸರ್ಷಪಯೋರಪಿ ಸಾಮ್ಯಪ್ರಸಂಗಃ । ಅತಃ ಕ್ವಚಿದ್ವಿಶ್ರಾಮೋ ವಾಚ್ಯಃ ! ಯತ್ರ ತು ವಿಶ್ರಾಮಸ್ತಸ್ಯಾನಿತ್ಯತ್ವೇಽಸಮವೇತ ಭಾವಕಾರ್ಯೋತ್ಪತ್ತಿಪ್ರಸಂಗ ಇತಿ ತಸ್ಯ ನಿತ್ಯತ್ವಮ್ । ಮಹತ್ಪರಿಮಾಣತಾರತಮ್ಯಸ್ಯ ಗಗನಾದೌ ವಿಶ್ರಾಂತತ್ವಮಿವಾಣುಪರಿಮಾಣತಾರತಮ್ಯಸ್ಯಾಪಿ ಕ್ವಚಿದ್ವಿಶ್ರಾಂತತ್ವಮಸ್ತೀತಿ ತಸ್ಯ ಪರಮಾಣುತ್ವಸಿದ್ಧಿಃ । ನ ಚ ತ್ರಸರೇಣಾವೇವವಿಶ್ರಾಮೋಽಸ್ತ್ವಿತಿ ವಾಚ್ಯಮ್, ತ್ರಸರೇಣುಃ ಸಾವಯವಃ ಚಾಕ್ಷುಷದ್ರವ್ಯತ್ವಾತ್ ಘಟವದಿತ್ಯನುಮಾನೇನ ತದವಯವಸಿದ್ಧೌ, ತ್ರಸರೇಣೋರವಯವಾಃ ಸಾವಯವಾಃ ಮಹದಾರಂಭಕತ್ವಾತ್ ಕಪಾಲವದಿತ್ಯನುಮಾನೇನ ತದವಯವಸಿದ್ಧೇಃ । ನಚೇದಮಪ್ರಯೋಜಕಂ, ಅಪಕೃಷ್ಟಮಹತ್ತ್ವಂ ಪ್ರತ್ಯನೇಕದ್ರವ್ಯತ್ವಸ್ಯ ಪ್ರಯೋಜಕತ್ವಾತ್ । ನಚೈವಂ ಕ್ರಮೇಣ ತದವಯವಧಾರಾಪಿ ಸಿದ್ಧ್ಯೇದಿತಿ ವಾಚ್ಯಮ್, ಅನವಸ್ಥಾಭಯೇನ ತದಸಿದ್ಧೇಃ ॥

'ಇತ್ಥಂ—' ಇತಿ. ಪರಮಾಣುವಿನಲ್ಲಿ ಮಹತ್ತ್ವಾದಿಗಳು ಇಲ್ಲದಿರುವುದರಿಂದ ಪರಮಾಣು ಪುಂಜರೂಪವಾದ ಘಟಕ್ಕೆ ಪ್ರತ್ಯಕ್ಷತ್ವಕೂಡದಿರುವುದರಿಂದ ಪರಮಾಣುಗಳಿಗಿಂತ ಅತಿರಿಕ್ತವಾದ ಅವಯವಿಪದಾರ್ಥವೊಂದಿದೆ ಎಂದು ಸಿದ್ಧವಾದ ಮೇಲೆ, ಅವಯವಗಳಿಂದ ಕೂಡಿದ ಘಟಾದಿಗಳಿಗೆ ಉತ್ಪತ್ತಿವಿನಾಶಗಳು ಪ್ರತ್ಯಕ್ಷಸಿದ್ಧವಾದುದರಿಂದ ಅವು ಅನಿತ್ಯವೆಂದು ಸಿದ್ಧವಾಗುತ್ತದೆ. 'ಯಜ್ಜನ್ಯಂ ತದನಿತ್ಯಂ' ಎಂಬ ವ್ಯಾಪ್ತಿಯೇ ಇದಕ್ಕೆ ಸಾಧಕ. ಘಟಾದಿಗಳ ಅವಯವಕಲ್ಪನೆಗೆ ಒಂದು ವಿಶ್ರಾಂತಿ ಹೇಳಬೇಕು. ಇಲ್ಲವಾದರೆ ಅಜಗಜವ್ಯತ್ಯಾಸವಿರುವ ಮೇರುಪರ್ವತಕ್ಕೂ, ಸಾಸಿವೆಗೂ ಏನೂ ವ್ಯತ್ಯಾಸವಿಲ್ಲವೆಂದಾಗುತ್ತದೆ. 'ಸಾಮ್ಯಪ್ರಸಂಗಃ'—ಪರಿಮಾಣತಾರತಮ್ಯವಿಲ್ಲದೇಹೋಗಬೇಕಾಗುತ್ತದೆ. ಮೇರುವಿನ ಅವಯವವಿಭಾಗಗಳನ್ನೂ ಮಾಡುತ್ತಾ ಹೋಗುವುದು. ಅತಿ ಚಿಕ್ಕದಾದ ಸಾಸಿವೆಯ ಅವಯವವಿಭಾಗವನ್ನೂ ಮಾಡುತ್ತಾ ಹೋಗುವುದು. ವಿಶ್ರಾಂತಿ ಒಂದು ಕಡೆ ಹೇಳದಿದ್ದರೆ ಆಗ ಎರಡರ ಪರಿಣಾಮಕ್ಕೂ ಕಾರಣವಾದ ಅವಯವಸಂಖ್ಯೆ ಒಂದೇ ಆಗುವುದರಿಂದ ಒಂದೇ ಪರಿಮಾಣವಾಗಿ ಎರಡೂ ಸಮವಾಗಬೇಕಾಗುತ್ತದೆ. ವಿಶ್ರಾಂತಿ ಹೇಳದಿದ್ದರೆ ಎರಡರ ಅವಯವಗಳೂ ಅನಂತಗಳಾಗಿ ಸಮವಾಗುತ್ತವೆ. ಆದುದರಿಂದ ಅವಯಧಾರೆಗೆ ಎಲ್ಲಿಯಾದರೂ ಒಂದು ಸ್ಥಳದಲ್ಲಿ ವಿಶ್ರಾಂತಿ ಹೇಳಲೇಬೇಕು. ಅದೇ ನಿತ್ಯವಾದ ನಿರವಯವವಾದ ಪರಮಾಣು.

ಒಂದು ಪದಾರ್ಥದಲ್ಲಿ ವಿಶ್ರಾಂತಿ ಹೇಳುವುದಾದರೆ ಅದು ನಿತ್ಯವಾದ, ನಿರವಯವ

ವಾದ ಪದಾರ್ಥವೆಂದು ಏಕೆ ಸ್ವೀಕರಿಸಬೇಕು ? ಎಂದು ಶಂಕಿಸಿದರೆ ಅದಕ್ಕೆ ನಿತ್ಯತ್ವ ವನ್ನು ಸಾಧಿಸುತ್ತಾನೆ. 'ಯತ್ರತು—' ಇತಿ. ಎಲ್ಲಿ ವಿಶ್ರಾಂತಿ ಹೇಳುತ್ತೀರೋ ಅದು ಅನಿತ್ಯವಾದರೆ ಆಗ ಅಸಮವೇತವಾದ ಭಾವಕಾರ್ಯವಾಗುತ್ತದೆಂದು ಒಪ್ಪಬೇಕಾಗುತ್ತದೆ. ಆದರೆ ಇದು ಲೋಕದಲ್ಲಿ ಇಲ್ಲ. ಆದುದರಿಂದ ಅದು ನಿತ್ಯವೆಂದು ಅಂಗೀಕರಿಸಬೇಕು.

ಅವಯವಧಾರೆಯ ವಿಶ್ರಾಂತಿಗೆ ಆಶ್ರಯವಾದ ವಸ್ತುವು ಅನಿತ್ಯವಾದರೆ, ಆಗ ಅದ ಕ್ಕೊಂದು ಸಮವಾಯಿಕಾರಣ ಹೇಳಬೇಕು. ಭಾವಕಾರ್ಯವೆಂದಮೇಲೆ ಅದಕ್ಕೆ ಸಮ ವಾಯಿಕಾರಣವಿರಲೇಬೇಕು. ಆದರೆ ಅದಕ್ಕೆ ಕಾರಣ ಒಪ್ಪಲಿಲ್ಲ. ಕಾರಣ ಒಪ್ಪಿದರೆ ಪುನಃ ಅನವಸ್ಥೆ ಬರುತ್ತದೆ. ಕಾರಣ ಅಂಗೀಕರಿಸದಿದ್ದರೆ ಆಗ ಸಮವಾಯಿಕಾರಣವಿಲ್ಲದೆ ಭಾವಕಾರ್ಯ ಹುಟ್ಟಿದೆಯೆನ್ನಬೇಕು. ನಿಯಮವನ್ನು ಉಲ್ಲಂಘಿಸಿದಂತಾಗುವುದರಿಂದ ಅದು ನಿತ್ಯವೆನ್ನಬೇಕು. ಅದೇ ಪರಮಾಣು. ಅದಕ್ಕಿಂತ ವ್ಯತಿರಿಕ್ತವಾದ ಅವಯವಿಯು ಅನಿತ್ಯವಾಗುತ್ತದೆ.

ಇನ್ನೊಂದು ರೀತಿಯಿಂದ ಪರಮಾಣುಸಿದ್ಧಿಯನ್ನು ತೋರಿಸುತ್ತಾನೆ. 'ಮಹತ್ಪರ'—ಇತಿ. ತ್ರಸರೇಣುವನ್ನಾರಂಭಿಸಿ ಆಕಾಶದವರೆಗೆ ಮಹತ್ಪರಿಮಾಣಕ್ಕೆ ಹೆಚ್ಚುಕಡಿಮೆ ಲೋಕದಲ್ಲಿ ಕಂಡಿದೆ. ಮಹತ್ಪರಿಮಾಣಕ್ಕೆ ಕೊನೇ ಎಲ್ಲೆ ಆಕಾಶವಾಗು ತ್ತದೆ. ಹೀಗೆ ತರತಮಭಾವವನ್ನಾಶ್ರಯಿಸಿ ಕೊನೆಗೆ ಆಕಾಶದಲ್ಲಿ (ಆದಿಪದದಿಂದ ಕಾಲದಿಗಾದಿ) ವಿಶ್ರಾಂತಿ ಹೇಳಿದಂತೆ ಕಡಿಮೆ ಪರಿಮಾಣವಾದ ಅಣುಪರಿಮಾಣಕ್ಕೂ ತರತಮಭಾವದಿಂದ ನೆಲ್ಲಿಕಾಯಿಯನ್ನಾರಂಭಿಸಿ ಚಿಕ್ಕ ಚಿಕ್ಕ ಪದಾರ್ಥದಲ್ಲಿ ಆಶ್ರಯ ತೋರಿಸುತ್ತಾ ಕೊನೆಗೊಂದು ಎಲ್ಲೆ ತೋರಿಸಬೇಕು. ಈ ಆಕಾಶಕ್ಕಿಂತ ಮಹತ್ಪರಿ ಮಾಣವುಳ್ಳದ್ದು ಬೇರೆ ಇಲ್ಲವೆಂದಂತೆ ಅಣು ಪರಿಮಾಣಕ್ಕೆ ಕೊನೆಯ ವಿಶ್ರಾಂತಿ ಇದು; ಇದಕ್ಕಿಂತ ಅಣುಪರಿಮಾಣವುಳ್ಳದ್ದು ಬೇರೊಂದಿಲ್ಲವೆಂದು ಹೇಳಬೇಕು. ಯಾವುದು ಅಣುಪರಿಮಾಣಕ್ಕೆ ಕೊನೆಯ ಅವಧಿಯೋ, ಅದಕ್ಕಿಂತ ಅಣು ಬೇರೆ ಯಾವುದು ಇಲ್ಲವೋ ಅದೇ ಪರಮಾಣು. ಇದಕ್ಕಿಂತ ಅಲ್ಪವಾದದ್ದು ಬೇರೆ ಯಾವುದೂ ಇಲ್ಲ.

ತ್ರಸರೇಣುವೇ ಪರಮಾಣುವಾಗಲಿ. ಅದಕ್ಕಿಂತಲೂ ಸೂಕ್ಷ್ಮವಾದ ಪರಮಾಣು ಕಲ್ಪನೆಯಿಂದ ಪ್ರಯೋಜನವೇನು ? ಎಂದು ಶಂಕಿಸಿದರೆ ತ್ರಸರೇಣು ಸಾವಯವ ವಾದುದರಿಂದ ಅಣುಪರಿಮಾಣಕ್ಕೆ ಅದು ಕೊನೆಯ ಅವಧಿಯಾಗುವುದಿಲ್ಲವೆಂದು ಅನು ಮಾನದಿಂದ ಸಾಧಿಸುತ್ತಾನೆ. 'ತ್ರಸರೇಣುಃ—ಸಾವಯವಃ—ಚಾಕ್ಷುಷದ್ರವ್ಯತ್ವಾತ್ | ಘಟವತ್ ||' ಘಟವು ಕಣ್ಣಿಗೆ ಗೋಚರಿಸುವುದರಿಂದ ಹೇಗೆ ಸಾವಯವವೋ ಹಾಗೆ ತ್ರಸರೇಣುವೂ ಕಣ್ಣಿಗೆ ಗೋಚರವಾಗದಿರುವುದರಿಂದ ಸಾವಯವಪದಾರ್ಥವಾಗಿದೆ. 'ಯತ್ ಚಾಕ್ಷುಷಂ ತತ್ಸಾವಯವಂ' ಎಂದು ವ್ಯಾಪ್ತಿ. ಕಣ್ಣಿಗೆ ತೋರುವುದೆಲ್ಲಾ ಅವ ಯವಗಳಿಂದ ಕೂಡಿರುತ್ತದೆ. ಇದರಿಂದ ತ್ರಸರೇಣು ಸಾವಯವವಾಗುವುದರಿಂದ ಅಣು ಪರಿಮಾಣವು ತಸರೇಣುಗಿಂತ ಅದರ ಅವ್ರಯವದಲ್ಲಿ ಉತ್ಕೃಷ್ಟವಾಗಿದೆಯೆಂದು ತಿಳಿಯು

ತ್ತದೆ. ಆದುದರಿಂದ ತ್ರಸರೇಣುಕೊನೆಯ ಅವಧಿಯಾಗುವುದಿಲ್ಲ. ಅದರ ಅವಯವಗಳೇ ಕೊನೆಯ ಅವಧಿಗಳಾಗಬಹುದು. ಅದರ ಅವಯವ ಎಂದರೆ ದ್ವ್ಯಣುಕ. ಇದೇ ಕೊನೆ ವಿಶ್ರಾಂತಿಯಾಗಲಿ ಎಂದರೆ ಇದೂ ಆಗಲಾರದೆಂದು ಅನುಮಾನದಿಂದ ಸಿದ್ಧ ಪಡಿಸುತ್ತಾನೆ. 'ತ್ರಸರೇಣೋಃ—'. 'ಯಾವುದು ಮಹತ್ಪರಿಮಾಣವುಳ್ಳ ಕಾರ್ಯಕ್ಕೆ ಜನಕವಾದ ಅವಯವವಾಗುವುದೋ ಅದೂ ಸಾವಯವವಾಗಿರುತ್ತದೆ' ಎಂದು ವ್ಯಾಪ್ತಿ. ಕಪಾಲವು ಮಹತ್ಪರಿಮಾಣವುಳ್ಳ ಘಟಕ್ಕೆ ಆರಂಭಕವಾಗುವುದರಿಂದ ಸಾವಯವವಾದಂತೆ ದ್ವ್ಯಣುಕವೂ ಮಹತ್ಪರಿಮಾಣವುಳ್ಳ ತ್ರಸರೇಣುವಿಗೆ ಆರಂಭಕವಾದುದರಿಂದ ಸಾವಯವ ವೆಂದು ಸಿದ್ಧವಾಗುತ್ತದೆ. ಹೀಗೆ ತ್ರಸರೇಣು, ದ್ವ್ಯಣುಕಗಳೆರಡೂ ಸಾವಯವಗಳೆಂದು ಸಿದ್ಧವಾದ ಮೇಲೆ ಅಣುಪರಿಮಾಣಕ್ಕೆ ಅಲ್ಲಿ ವಿಶ್ರಾಂತಿಹೇಳಲು ಸಾಧ್ಯವಿಲ್ಲ. ದ್ವ್ಯಣು ಕಾವಯವಗಳಾದ ಪರಮಾಣುಗಳಲ್ಲಿಯೇ ವಿಶ್ರಾಂತಿ ಹೇಳಬೇಕು.

ಸಾವಯವತ್ವಸಾಧಕ ಅನುಮಾನಕ್ಕೆ ಅಪ್ರಯೋಜಕತ್ವ ಶಂಕೆ ಮಾಡುತ್ತಾನೆ. 'ನಚ'—ಇತಿ. ಅನುಕೂಲತರ್ಕವಿಲ್ಲವೆಂದು ಶಂಕಿಸುವುದಕ್ಕೆ ಅಪ್ರಯೋಜಕತ್ವಶಂಕೆ ಯೆಂದು ಹೆಸರು. 'ಹೇತುಸ್ತಿಷ್ಠತು, ಸಾಧ್ಯಂ ಮಾಸ್ತು' ಎಂದು ಆಕ್ಷೇಪಿಸುವುದು. ತ್ರಸರೇಣುರೂಪಪಕ್ಷದಲ್ಲಿ ಚಾಕ್ಷುಷದ್ರವ್ಯತ್ವರೂಪಹೇತುವಿರಲಿ. ಸಾವಯವತ್ವರೂಪ ಸಾಧ್ಯವಿಲ್ಲದೇ ಹೋಗಲಿ ಎಂದು ಆಕ್ಷೇಪಿಸಿದರೆ ಹೇತುವ್ಯಭಿಚರಿತವೆಂದಾಗುತ್ತದೆ. ಸಾಧ್ಯಬೇಡವೆಂದರೆ ಸಾಧ್ಯವಿಲ್ಲದಿರುವಲ್ಲಿಯೂ ಹೇತುವಿದೆಯೆಂದಾಗುತ್ತದೆ. ಆಗ ಅದಕ್ಕೆ ಬಾಧಕರೂಪವಾಗಿ ಅನುಕೂಲತರ್ಕ ಹೇಳಬೇಕು. ಸಾವಯವತ್ವವಿಲ್ಲವಾದರೆ ಆಗ ಅಲ್ಲಿ ಚಾಕ್ಷುಷದ್ರವ್ಯತ್ವವೂ ಇಲ್ಲದೇ ಹೋಗಬೇಕಾಗುತ್ತದೆಂದು ಅನುಕೂಲತರ್ಕ ವನ್ನು ಹೇಳಬೇಕು. ಚಾಕ್ಷುಷದ್ರವ್ಯತ್ವವಿಲ್ಲದ ಆಕಾಶಾದಿಗಳು ಎಂದೂ ಸಾವಯವ ಗಳಾಗಿಲ್ಲ.

ಮೂರುದ್ವ್ಯಣುಕಗಳಿಂದ ಒಂದು ತ್ರ್ಯಣುಕವಾಗುತ್ತದೆಂದು ನ್ಯಾಯಸಿದ್ಧಾಂತ. ತ್ರ್ಯಣುಕವು ಹೀಗೆ ಅನೇಕ ಅವಯವಗಳಿಂದ ಹುಟ್ಟುವ ದ್ರವ್ಯವಾದುದರಿಂದ ಅದರಲ್ಲಿ ಅಪಕೃಷ್ಟಮಹತ್ತ್ವವುಂಟಾಗುತ್ತದೆ. ಅಪಕೃಷ್ಟಮಹತ್ತ್ವವಿರಬೇಕಾದರೆ ಅನೇಕಾವ ಯವಿಜನ್ಯದ್ರವ್ಯತ್ವವಿರಬೇಕು. ಇವುಗಳಿಗೆ ಕಾರ್ಯಕಾರಣಭಾವನಿಯತವಾಗಿದೆ. ಈಗ ಸಾವಯವತ್ವವನ್ನು ಒಪ್ಪದಿದ್ದರೆ ಈ ಕಾರ್ಯಕಾರಣಭಾವಕ್ಕೆ ಭಂಗಬರಬೇಕಾಗುತ್ತದೆ. ಆದುದರಿಂದ ತ್ರ್ಯಣುಕಕ್ಕೆ ಸಾವಯವತ್ವವನ್ನು ಒಪ್ಪಲೇಬೇಕು. ಅಪ್ರಯೋಜಕತ್ವ ಶಂಕೆಗೆ ಅವಕಾಶವಿಲ್ಲ.

ದ್ವ್ಯಣುಕದಲ್ಲಿಯೂ ಅವಯವಧಾರೆಗೆ ವಿಶ್ರಾಂತಿ ಹೇಳಲು ಸಾಧ್ಯವಿಲ್ಲ. ಅದು ಮಹದಾರಂಭಕಾವಯವವಾದುದರಿಂದ ಕಪಾಲಾದಿಗಳಂತೆ ಸಾವಯವವಾಗಿಯೇ ಇರು ತ್ತದೆ. ದ್ವ್ಯಣುಕವು ಮಹತ್ಪರಿಮಾಣವುಳ್ಳ ತ್ರಸರೇಣುವಿಗೆ ಆರಂಭಕವೆಂದು ಹಿಂದೆ ಹೇಳಿದೆ. ದ್ವ್ಯಣುಕಾವಯವಗಳೂ ಸಾವಯವಗಳಾಗಲಿ ಎಂದು ಶಂಕಿಸಬಾರದು. ಆಗ ಅನವಸ್ಥೆ ಬರುತ್ತದೆ. ವಿಶ್ರಾಂತಿ ಎಲ್ಲಿ! ಹಿಂದೆ ಹೇಳಿದಂತೆ ಮೇರುಸರ್ಷಪ ಒಂದೇ

ಆಗಬೇಕಾಗುತ್ತದೆ. ದ್ವ್ಯಣುಕದಲ್ಲಿ ಮಹತ್ತ್ವ ಇಲ್ಲದಿರುವುದರಿಂದ ದ್ವ್ಯಣುಕಾವಯವಗಳು ಮಹದಾರಂಭಕಗಳಾಗುವುದಿಲ್ಲ. ಎರಡು ಪರಮಾಣುಗಳಿಂದ ಒಂದು ದ್ವ್ಯಣುಕವಾಗುತ್ತದೆಂದು ಸಿದ್ಧಾಂತ. ದ್ವ್ಯಣುಕಾವಯವಗಳು ಮಹದಾರಂಭಕಗಳಾಗದಿರುವುದರಿಂದ ಸಾವಯವಗಳಾಗುವುದಿಲ್ಲ. ದ್ವ್ಯಣುಕವು ಅನೇಕಾವಯವಗಳಿಂದ ಹುಟ್ಟುತ್ತದೆ. ಅನೇಕಾವಯವಿಜನ್ಯವಲ್ಲ. ಅನೇಕಾವಯವಿಜನ್ಯವಾಗದಿರುವುದರಿಂದ ಅದರಲ್ಲಿ ಅಪಕೃಷ್ಟಮಹತ್ತ್ವವೂ ಇರುವುದಿಲ್ಲ. ಹೀಗೆ ದ್ವ್ಯಣುಕಾವಯವಗಳು ನಿರವಯುಗಳಾದುದರಿಂದ ಅವೇ ಪರಮಾಣುಗಳೆಂದೂ ಅವುಗಳೇ ಅಣುಪರಿಮಾಣಕ್ಕೆ ಕೊನೆಯ ಅವಧಿಯೆಂದೂ ತಿಳಿಯಬೇಕು. ||

**ಸಾ ಚ ತ್ರಿಧಾ ಭವೇದ್ದೇಹಮಿಂದ್ರಿಯಂ ವಿಷಯಸ್ತಥಾ || ೩೭ ||**

ಸಾ ಚೇತಿ | ಸಾ ಕಾರ್ಯರೂಪಾ ಪೃಥಿವೀ ತ್ರಿಧೇತ್ಯರ್ಥಃ | ಶರೀರೇಂದ್ರಿಯವಿಷಯಭೇದಾದಿತ್ಯರ್ಥಃ || ೩೭ ||

ಪೃಥಿವೀತ್ವವುಳ್ಳ ಅನಿತ್ಯ ಪೃಥಿವಿಯು ಶರೀರ, ಇಂದ್ರಿಯ, ವಿಷಯವೆಂದು ಮೂರುವಿಧವಾಗಿದೆ. ಅನಿತ್ಯವೆಂದರೆ ಕಾರ್ಯರೂಪವಾದ ಪೃಥಿವಿಯೆಂದರ್ಥ.

**ಯೋನಿಜಾದಿ ಭವೇದ್ದೇಹಮ್—**

ತತ್ರ ದೇಹಮುದಾಹರತಿ–ಯೋನಿಜಮಯೋನಿಜಂಚೇತ್ಯರ್ಥಃ | ಯೋನಿಜಮಪಿ ದ್ವಿವಿಧಮ್–ಜರಾಯುಜಮಂಡಜಂಚ | ಜರಾಯುಜಂ ಮಾನುಷಾದೀನಾಮ್| ಅಂಡಜಂ ಸರ್ಪಾದೀನಾಮ್ | ಅಯೋನಿಜಂ ಸ್ವೇದಜೋದ್ಭಿಜಾದಿಕಮ್ | ಸ್ವೇದಜಾಃ ಕೃಮಿದಂಶಾದ್ಯಾಃ | ಉದ್ಭಿಜಾಸ್ತರುಗುಲ್ಮಾದ್ಯಾಃ | ನಾರಕಿಣಾಂ ಶರೀರಮಪ್ಯಯೋನಿಜಮ್ | ನ ಚ ಮಾನುಷಾದಿಶರೀರಾಣಾಂ ಪಾರ್ಥಿವತ್ವೇ ಕಿಂ ಮಾನಮಿತಿ ವಾಚ್ಯಮ್ ಗಂಧಾದಿಮತ್ತ್ವಸ್ಯೈವ ಪ್ರಮಾಣತ್ವಾತ್ | ನ ಚ ಕ್ಲೇದೋಷ್ಮಾದೇರುಪಲಂಭಾದಾಪ್ಯತ್ವಾದಿಕಮಪಿ ಸ್ಯಾದಿತಿ ವಾಚ್ಯಮ್, ತಥಾ ಸತಿ ಜಲತ್ವಪೃಥಿವೀತ್ವಾದಿನಾ ಸಂಕರಪ್ರಸಂಗಾತ್ | ನ ಚ ತರ್ಹಿ ಜಲೀಯತ್ವಾದಿಕಮೇವಾಸ್ತು ನ ತು ಪಾರ್ಥಿವತ್ತ್ವಮಿತಿ ವಾಚ್ಯಮ್, ಕ್ಲೇದಾದೀನಾಂ ವಿನಾಶೇಽಪಿ ಶರೀರತ್ವೇನ ಪ್ರತ್ಯಭಿಜ್ಞಾನಾದ್ಗಂಧಾದ್ಯುಪಲಬ್ಧೇಶ್ಚ ಪೃಥಿವೀತ್ವಸಿದ್ಧೇಃ | ತೇನ ಪಾರ್ಥಿವಾದಿಶರೀರೇ ಜಲಾದೀನಾಂ ನಿಮಿತ್ತತ್ವಮಾತ್ರಂ ಬೋಧ್ಯಮ್ | ಶರೀರತ್ವಂ ತು ನ ಜಾತಿಃ ಪೃಥಿವೀತ್ವಾದಿನಾ ಸಾಂಕರ್ಯಾತ್, ಕಿಂತು ಚೇಷ್ಟಾಶ್ರಯತ್ವಮ್ | ವೃಕ್ಷಾದೀನಾಮಪಿ ಚೇಷ್ಟಾಸತ್ವಾನ್ನಾವ್ಯಾಪ್ತಿಃ ||

ಪಾರ್ಥಿವಶರೀರವನ್ನು ವಿಭಾಗಮಾಡಿ ತೋರಿಸುತ್ತಾನೆ. 'ಯೋನಿಜಂ—' ಇತಿ.

ಶುಕ್ಲಶೋಣಿತಗಳ ಪರಸ್ಪರ ಮೇಲನದಿಂದ ಉಂಟಾಗುವ ಶರೀರಕ್ಕೆ ಯೋನಿಜವೆಂದೂ, ತದ್ಭಿನ್ನವಾದ ಶರೀರಕ್ಕೆ ಅಯೋನಿಜವೆಂದೂ ಹೆಸರು. ಯೋನಿಜದ ಎರಡು ಭೇದಗಳಲ್ಲಿ ಜರಾಯುಜವೆಂದರೆ ಜರಾಯುವಿನಿಂದ ಕೂಡಿರುವುದು. ಗರ್ಭಕ್ಕೆ ಸುತ್ತಿರುವ ಚರ್ಮಪುಟಕಕ್ಕೆ ಜರಾಯುವೆಂದು ಹೆಸರು. ಮಾನುಷಾದಿ ಎಂಬಲ್ಲಿ ಆದಿಪದದಿಂದ ದೇವರ್ಷಿ ಮುಂತಾದವರ ಶರೀರವನ್ನು ತೆಗೆದುಕೊಳ್ಳಬೇಕು. ಅವರ ಶರೀರವೂ ಧರ್ಮಸಹಿತವಾದ ಅಣುಗಳಿಂದ ಆಗುತ್ತದೆಂದು ಭಾಷ್ಯದಲ್ಲಿ ಹೇಳಿದೆ. 'ಸ್ವೇದಜ—' ಇತಿ. ಬೆವರು ಮುಂತಾದವುಗಳಿಂದ ಹುಟ್ಟತಕ್ಕವುಗಳು. ಬೆವರಿನಿಂದ ಕ್ರಿಮಿ, ತಿಗಣೆ ಮುಂತಾದುವುಗಳು ಹುಟ್ಟುತ್ತವೆ. ನೆಲಕೆ ಬಿಟ್ಟು ಹುಟ್ಟುವವುಗಳು ಉದ್ಭಿಜಗಳು, ಗಿಡಬಳ್ಳಿ ಮುಂತಾದುವುಗಳು. ನರಕವಾಸಿಶರೀರವೂ ಅಯೋನಿಜವೇ. ಅಧರ್ಮವಿಶೇಷಸಹಿತ ಅಣುಗಳಿಂದ ನಾರಕಿಗಳ ಶರೀರವಾಗುತ್ತದೆಂದು ಹೇಳಿದೆ. ಅಲ್ಪಜಂತುವಿನ ಶರೀರವೂ ಹೀಗೆಯೇ ಆಗುತ್ತದೆ. 'ನಚ—' ಇತಿ. ಮನುಷ್ಯ ಮುಂತಾದವರ (ಆದಿಪದದಿಂದ ಪಶುಮೃಗಾದಿಗಳ) ಶರೀರವು ಪಾರ್ಥಿವವೆಂಬುದರಲ್ಲಿ ಪ್ರಮಾಣವೇನು? ಎಂದು ಶಂಕಿಸುತ್ತಾನೆ. 'ಮಾನುಷಾದಿ ಶರೀರಂ-ಪಾರ್ಥಿವಂ ಗಂಧವತ್ತ್ವಾತ್' ಎಂಬ ಅನುಮಾನದಿಂದ ಪಾರ್ಥಿವವೆಂದು ಸಿದ್ಧವಾಗುತ್ತದೆ. ಗಂಧವುಳ್ಳದ್ದು ಪೃಥಿವಿಯಾದುದರಿಂದ ಶರೀರದಲ್ಲಿ ಗಂಧ ಉಪಲಬ್ಧವಾಗುವುದರಿಂದ ಪಾರ್ಥಿವವೆಂದು ತಿಳಿಯಬೇಕು. 'ನಚ—' ಇತಿ. ಗಂಧವಿರುವುದರಿಂದ ಪೃಥಿವೀ ಎಂದು ಹೇಳುವುದಾದರೆ ಕ್ಲೇದ — ಸುರಿಯುವುದು (ಬೆವರು) ಇರುವುದರಿಂದ ಜಲೀಯ (ಜಲಸಂಬಂಧವಾದ)ವೆಂದಾಗಲಿ. ಊಷ್ಮ— ಪಾಕವಿಶೇಷ (ಸೆಖೆ) ಇರುವುದರಿಂದ ತೈಜಸವಾಗಲಿ ಎಂದು ಆಶಂಕಿಸಬಾರದು. 'ತಥಾಸತಿ'—ಹಾಗೆ ಹೇಳುವುದಾದರೆ ಜಲತ್ವಪೃಥಿವೀತ್ವಾದಿಗಳಿಂದ ಶರೀರತ್ವಕ್ಕೆ ಸಾಂಕರ್ಯ ಬರುತ್ತದೆ. ಪರಸ್ಪರ ಅಸಮಾನಾಧಿಕರಣವುಳ್ಳವುಗಳಿಗೆ ಒಂದು ಕಡೆ ಸಮಾವೇಶ ಬಂದರೆ ಸಾಂಕರ್ಯ ಬರುತ್ತದೆಂದು ಹಿಂದೆ ಹೇಳಿದೆ. ಪೃಥಿವೀತ್ವವನ್ನು ಬಿಟ್ಟು ಶರೀರತ್ವವು ಜಲ, ತೇಜಸ್ಸು ವಾಯುಗಳ ಶರೀರಗಳಲ್ಲಿಯೂ ಶರೀರತ್ವವನ್ನು ಬಿಟ್ಟು ಪೃಥಿವೀತ್ವವು ಘಟಾದಿಗಳಲ್ಲಿಯೂ ಬರುತ್ತದೆ. ಮಾನುಷ ಶರೀರದಲ್ಲಿ ಪೃಥಿವೀತ್ವ, ಶರೀರತ್ವ ಎರಡೂ ಬರುತ್ತದೆ. ಹೀಗೆ ಸಾಂಕರ್ಯ ದೋಷ ಬಂದರೆ ಪೃಥಿವೀತ್ವಾದಿಗಳು ಜಾತಿಯಾಗದೇ ಹೋಗಬೇಕಾಗುತ್ತದೆ. ಜಾತಿಬಾಧಕಸಂಕರ ದೋಷ ಭಯದಿಂದ ಜಲೀಯತ್ವಾದಿ ಶಂಕೆ ಮಾಡಬಾರದು. 'ನಚ—' ಇತಿ. ಹಾಗಾದರೆ ಕ್ಲೇದವಿರುವುದರಿಂದ ಜಲೀಯವೇ ಆಗಲಿ, ಪಾರ್ಥಿವತ್ವ ಬೇಡವೆಂದು ಆಶಂಕಿಸಬಾರದು. 'ಕ್ಲೇದಾದೀನಾಂ' —ಇತಿ. (ಪಾರ್ಥಿವ ಶರೀರದಲ್ಲಿ) ಕ್ಲೇದಾದಿಗಳು ನಾಶವಾದಾಗ ಶರೀರವೆಂದೇ ಪ್ರತ್ಯಭಿಜ್ಞಾ ಬರುತ್ತದೆ. ಪೂರ್ವದಲ್ಲಿ ನೋಡಿದ್ದನ್ನು ಈಗ ಪುನಃ ನೋಡಿದಾಗ ಅದೇ ಇದೆಂದು ಬರುವ ಜ್ಞಾನಕ್ಕೆ ಪ್ರತ್ಯಭಿಜ್ಞೆಯೆಂದು ಹೆಸರು. ಕ್ಲೇದಾದಿಗಳಿಲ್ಲದಿದ್ದರೂ 'ಅದೇ ಇದು ಚೈತ್ರನ ಶರೀರ' 'ಅದೇ ಇದು ಮೈತ್ರನ ಶರೀರ' ಎಂಬ ಜ್ಞಾನ (ಪ್ರತಿಸಂಧಾನ) ಬರುವುದರಿಂದ ಶರೀರತ್ವ ಜ್ಞಾತವಾಗುತ್ತದೆ. ಆ ಶರೀರ

ನಾಶವಾಗುವವರೆಗೆ ಗಂಧತೋರುವುದರಿಂದ ಮಾನುಷಾದಿಶರೀರವು ಪಾರ್ಥಿವಶರೀರ ವೆಂದು ಸಿದ್ಧವಾಗುತ್ತದೆ. 'ತೇನ—' ಇತಿ. ಪಾರ್ಥಿವಶರೀರದಲ್ಲಿ ಜಲಾದಿಗಳಭಾಗ ವಿರುವುದರಿಂದ ಕ್ಲೇದಾದಿಗಳೂ ಉಪಲಬ್ಧವಾಗುತ್ತವೆ. ಜಲನಿಮಿತ್ತವಾಗಿಯೇ ಕ್ಲೇದ ವಲ್ಲದೆ ಜಲೀಯಶರೀರವಾದುದರಿಂದ ಕ್ಲೇದವಲ್ಲ.

ಶರೀರತ್ವವು ಜಾತಿಯಲ್ಲ. ಹಿಂದೆ ಹೇಳಿದಂತೆ ಪೃಥಿವೀತ್ವಾದಿಗಳಿಂದ ಸಾಂಕರ್ಯ ಬರುತ್ತದೆ. ಶರೀರತ್ವವಿಲ್ಲದ ಘಟಾದಿಗಳಲ್ಲಿ ಪೃಥಿವೀತ್ವವೂ, ಪೃಥಿವೀತ್ವವಿಲ್ಲದ ವರು ಣಾದಿಶರೀರದಲ್ಲಿ ಶರೀರತ್ವವೂ ಇದ್ದು ಪ್ರಕೃತ ಮನುಷ್ಯಾದಿಶರೀರದಲ್ಲಿ ಎರಡೂ ಬರು ವುದರಿಂದ ಸಾಂಕರ್ಯ ಬರುವುದರಿಂದ ಶರೀರತ್ವವು ಜಾತಿಯಾಗುವುದಿಲ್ಲ. ಶರೀರದ ಲಕ್ಷಣತೋರಿಸುತ್ತಾನೆ. 'ಚೇಷ್ಟಾಶ್ರ—' ಇತಿ. 'ಚೇಷ್ಟಾತ್ವಂ' ಎಂಬುದು ಜಾತಿ ವಿಶೇಷ. 'ಅಯಂ ಚೇಷ್ಟತೇ' ಎಂಬ ಪ್ರತ್ಯಕ್ಷಪ್ರತೀತಿಯಿಂದ ಇದು ಸಿದ್ಧವಾಗುತ್ತದೆ. ಹಿತಾಽಹಿತಪ್ರಾಪ್ತಿಪರಿಹಾರಾರ್ಥಕವಾದ ಕ್ರಿಯೆಗೆ ಚೇಷ್ಟಾ ಎಂದು ಹೆಸರು. ಆದ್ದ ರಿಂದ ಘಟಾದಿಯಲ್ಲಿ ಅತಿವ್ಯಾಪ್ತಿಗೆ ಅವಕಾಶವಿಲ್ಲ. ಇಂತಹ ಕ್ರಿಯಾವಿಶೇಷವಾದ ಚೇಷ್ಟೆಗೆ ಆಶ್ರಯವಾದದ್ದು ಶರೀರ.

ನಚ ವೃಕ್ಷಾದೇಃ ಶರೀರತ್ವೇ ಕಿಂಮಾನಮಿತಿ ವಾಚ್ಯಮ್, ಆಧ್ಯಾತ್ಮಿಕವಾಯುಸಂಬಂ ಧಸ್ಯ ಪ್ರಮಾಣತ್ವಾತ್ । ತತ್ರೈವ ಕಿಂಮಾನಮಿತಿ ಚೇದ್ಭಗ್ನ ಕ್ಷತಸಂರೋಹಣಾ ದಿನಾ ತದನುಮಾನಾತ್ । ಯದಿ ಹಸ್ತಾದೌ ಶರೀರವ್ಯವಹಾರೋ ನ ಭವತಿ ತದನ್ತ್ಯಾವಯವಿತ್ವೇನ ವಿಶೇಷಣೀಯಮ್ ॥ ನಚ ಯತ್ರ ಶರೀರೇ ಚೇಷ್ಟಾ ನ ಜಾತಾ ತತ್ರಾವ್ಯಾಪ್ತಿರಿತಿ ವಾಚ್ಯಮ್, ತಾದೃಶೇ ಪ್ರಮಾಣಾಭಾವಾತ್ ॥

ಶರೀರಪೃಥಿವಿಯಲ್ಲಿ ವೃಕ್ಷಾದಿಗಳು ಸೇರುತ್ತವೆಯೆಂದು ಹೇಳಿದೆ. ಅವುಗಳಿಗೆ ಶರೀರವಿದೆಯೆಂಬುದರಲ್ಲಿ ಪ್ರಮಾಣವೇನು ? ಎಂದು ಶಂಕಿಸಬಹುದು. ಅದಕ್ಕೆ ತಾನಾಗಿ ಶಂಕಾಮಾಡಿ ಸಮಾಧಾನ ತೋರಿಸುತ್ತಾನೆ. 'ನಚ—' ಇತಿ. ಆಧ್ಯಾತ್ಮಿಕವಾಯು ಸಂಬಂಧವಿರುವುದರಿಂದ ಇವುಗಳಿಗೆ ಶರೀರವಿದೆಯೆಂದು ತಿಳಿಯಬೇಕು. 'ವೃಕ್ಷಾದಿ–ಶರೀರಂ–ಆಧ್ಯಾತ್ಮಿಕವಾಯುಸಂಬಂಧಾತ್' ಎಂಬ ಅನುಮಾನದಿಂದ ಶರೀರಪೃಥಿವಿ ಯೆಂದು ಸಿದ್ಧವಾಗುತ್ತದೆ. 'ವೃಕ್ಷಾದಿಃ–ಆಧ್ಯಾತ್ಮಿಕವಾಯುಸಂಬಂಧವಾನ್–ಭಗ್ನ ಕ್ಷತ ಸಂರೋಹಾದಿಮತ್ತ್ವಾತ್ ಅಸ್ಮದಾದಿಶರೀರವತ್.' ಅನುಮಾನದಿಂದ ಆ ವಾಯು ಸಂಬಂಧವಿದೆಯೆಂದೂ ಸಿದ್ಧವಾಗುತ್ತದೆ. ವೃಕ್ಷಾದಿಗಳನ್ನು ತುಂಡರಿಸಿದರೆ ಪುನಃ ಚಿಗುರುತ್ತವೆ. ಆದ್ದರಿಂದ ಅವುಗಳಲ್ಲಿ ಪ್ರಾಣವಾಯುವಿದೆಯೆಂದು ತಿಳಿಯಬೇಕು. ಪ್ರಾಣವಾಯುವಿದ್ದಮೇಲೆ ಶರೀರವಿದ್ದೇ ಇರಬೇಕು. ಅದು ಶರೀರಾಶ್ರಯವೆಂದು ಲೋಕಸಿದ್ಧವಾಗಿದೆ. ಸ್ಪಷ್ಟವಾದ ಚೇಷ್ಟಾದಿಗಳು ವೃಕ್ಷಾದಿಗಳಲ್ಲಿ ತೋರದಿರುವುದರಿಂದ ಸಾಮಾನ್ಯರಿಗೆ ಅದು ಶರೀರಿಯಲ್ಲವೆಂದು ತಿಳಿಯುತ್ತದೆ. ಶಾಸ್ತ್ರದಲ್ಲಿ ಅವು ಶರೀರಿಗಳೆಂದು ಹೇಳಿದೆ. "ಶರೀರಜೈಃ ಕರ್ಮದೋಷೈರ್ಯಾತಿ ಸ್ಥಾವರತಾಂ ನರಃ । ಅಂತಃ ಸಂಜ್ಞಾ

ಭವಂತ್ಯೇತೇ ಸುಖದುಃಖಸಮನ್ವಿತಾಃ” ಇತ್ಯಾದಿ ವಚನಗಳಿಂದ ಸ್ಪಷ್ಟವಾಗಿದೆ. ‘ಯದಿ—’ ಇತಿ. ‘ಚೇಷ್ಟಾಶ್ರಯತ್ವಂ’ ಶರೀರಲಕ್ಷಣವಾದರೆ ಚೇಷ್ಟೆಯು ಹಸ್ತಾದಿಗಳಲ್ಲಿಯೂ ಇರುತ್ತದೆ. ಆದರೆ ಹಸ್ತಾದಿಗಳಲ್ಲಿ ಶರೀರವ್ಯವಹಾರವಿಲ್ಲ. ಅದಕ್ಕೋಸ್ಕರ ‘ಅಂತ್ಯಾವಯವಿತ್ವಂ’ ಎಂದು ಹೆಚ್ಚಾಗಿ ಸೇರಿಸಬೇಕು. ‘ಅಂತ್ಯಾವಯವಿತ್ವೇ ಸತಿ ಚೇಷ್ಟಾಶ್ರಯಃ’ ಶರೀರಮ್, ಎಂದು ಲಕ್ಷಣವಾಗುತ್ತದೆ. ‘ದ್ರವ್ಯಾಂತರಾನಾರಂಭಕತ್ವಂ’ ಅಂತ್ಯಾವಯವಿಯ ಲಕ್ಷಣ. ಯಾವುದು ಇನ್ನೊಂದು ಪದಾರ್ಥಕ್ಕೆ ಕಾರಣವಾಗುವುದಿಲ್ಲವೋ ಅದೇ ಅಂತ್ಯಾವಯವಿ. ಘಟಾದಿಗಳೂ ಇನ್ನೊಂದು ಪದಾರ್ಥಕ್ಕೆ ಕಾರಣಗಳಾಗದಿರುವುದರಿಂದ ಅಂತ್ಯಾವಯವಿಗಳಾಗುವುದರಿಂದ ಅಲ್ಲಿ ಅತಿವ್ಯಾಪ್ತಿ ವಾರಣೆಗೋಸ್ಕರ ಚೇಷ್ಟಾಶ್ರಯತ್ವವೆಂಬ ದಳವನ್ನೂ ಹೇಳಬೇಕು. ಹಸ್ತ ಪಾದಾದಿಗಳಲ್ಲಿ ಚೇಷ್ಟಾಶ್ರಯತ್ವವು ಬರುವುದರಿಂದ ಅಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ ‘ಅಂತ್ಯಾವಯವಿತ್ವೇ ಸತಿ’ ಎಂದು ಹೇಳಬೇಕು. ‘ನಚ’—ಇತಿ. ಕೆಲವು ಶರೀರದಲ್ಲಿ ಚೇಷ್ಟಾಶ್ರಯತ್ವವು ಬರುವುದಿಲ್ಲವೆಂದು ಕೆಲವರು ಆಶಂಕಿಸುತ್ತಾರೆ. ಆದರೆ ಅದು ಸರಿಯಲ್ಲ. ಅಲ್ಲಿ ಚೇಷ್ಟೆ ಯಾವುದಾದರೂ ಇದ್ದೇ ಇರುತ್ತದೆ. ಚೇಷ್ಟೆ ಇಲ್ಲದ ಶರೀರವಿದೆಯೆಂಬುದರಲ್ಲಿ ಪ್ರಮಾಣವೇ ಇಲ್ಲ. ಪ್ರಯತ್ನದಿಂದ ಉಂಟಾಗುವುದೇ ಚೇಷ್ಟೆ. (ವ್ಯಾಪಾರ)

ಅಥವಾ ಚೇಷ್ಟಾವದಂತ್ಯಾವಯವಿವೃತ್ತಿದ್ರವ್ಯತ್ವವ್ಯಾಪ್ಯಜಾತಿಮತ್ವಂ, ಅಂತ್ಯಾವಯವಿಮಾತ್ರವೃತ್ತಿಚೇಷ್ಟಾವದ್ವೃತ್ತಿಜಾತಿಮತ್ತ್ವಂ ವಾ ತತ್ । ಮಾನುಷತ್ವ ಚೈತ್ರತ್ವಜಾತಿಮಾದಾಯ ಲಕ್ಷಣಸಮನ್ವಯಃ । ನ ಚ ನೃಸಿಂಹಶರೀರೇ ಕಥಂ ಲಕ್ಷಣಸಮನ್ವಯಃ ? ತತ್ರ ನೃಸಿಂಹತ್ವಸ್ಯೈಕವೃತ್ತಿತಯಾ ಜಾತಿತ್ವಾಭಾವಾಜ್ಜಲೀಯತೈಜಸಶರೀರವೃತ್ತಿತಯಾ ದೇವತ್ವಸ್ಯಾಪಿ ಜಾತಿತ್ವಾಭಾವಾದಿತಿ ವಾಚ್ಯಮ್, ಕಲ್ಪಭೇದೇನ ನೃಸಿಂಹಶರೀರಸ್ಯ ನಾನಾತ್ವೇನ ನೃಸಿಂಹತ್ವಜಾತ್ಯಾ ಲಕ್ಷಣಸಮನ್ವಯಾತ್ ॥

ಚೇಷ್ಟೆಇಲ್ಲದ ಶರೀರವೇ ಇಲ್ಲವೆಂದು ಹೇಳಿದೆ. ಆದರೆ ಮೃತಶರೀರದಲ್ಲಿ ಯಾವ ಚೇಷ್ಟೆ ಇದೆ. ಅಲ್ಲಿ ಶರೀರದಲಕ್ಷಣ ಅವ್ಯಾಪ್ತವಾಗುತ್ತದೆ. ಅದಕ್ಕೋಸ್ಕರ ‘ಅಥವಾ’—ಎಂದು ಕಲ್ಪಾಂತರವನ್ನು ತೋರಿಸುತ್ತಾನೆ. ಜಾತಿಘಟಿತಲಕ್ಷಣದಿಂದ ಅವ್ಯಾಪ್ತಿ ವಾರಿತವಾಗುತ್ತದೆ. ‘ಚೇಷ್ಟಾವಾಂಶ್ಚಾಸೌ ಅಂತ್ಯಾವಯವೀ ಚ. ಚೇಷ್ಟಾವದಂತ್ಯಾವಯವೀ. ತತ್ರ ವೃತ್ತಿಃ ಯಸ್ಯಾಃ ಸಾ. ಸಾಚಾಸೌ ದ್ರವ್ಯತ್ವವ್ಯಾಪ್ಯಾಜಾತಿಃ ತಾದೃಶಜಾತಿಮತ್ತ್ವಂ’ ಎಂದು ಲಕ್ಷಣ. ಚೇಷ್ಟೆಯುಳ್ಳ ಅಂತ್ಯಾವಯವಿಯಾದ ಯಾವ ಜೀವಿಸುವ ಶರೀರವಿದೆಯೋ ಅಲ್ಲಿರುವ ದ್ರವ್ಯತ್ವವ್ಯಾಪ್ಯಜಾತಿಯೆಂದರೆ ಮನುಷ್ಯತ್ವ, ಅಥವಾ ಚೈತ್ರತ್ವಜಾತಿ. ಅದು ಉಳ್ಳದ್ದು ಮೃತಶರೀರವೂ ಆಗುತ್ತದೆ ಆದುದರಿಂದ ಶರೀರಲಕ್ಷಣವು ಎಲ್ಲಿಯೂ ಅವ್ಯಾಪ್ತವಾಗುವುದಿಲ್ಲ.

ಹೀಗೆ ಜಾತಿಘಟಿತಲಕ್ಷಣಮಾಡಿದರೆ ಮೃತಶರೀರದಲ್ಲಿ ಶರೀರಲಕ್ಷಣಬಂದರೂ

ಘಟಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಘಟಾದಿಗಳು ಶರೀರವಲ್ಲ. ದ್ರವ್ಯತ್ವವ್ಯಾಪ್ಯ ಜಾತಿಯೆಂದರೆ ಪೃಥಿವೀತ್ವಜಾತಿಯೂ ಆಗುವುದರಿಂದ ಅದು ಉಳ್ಳದ್ದು ಎಂದರೆ ಹೇಗೆ ಶರೀರವಾಗುತ್ತದೋ ಹಾಗೆ ಘಟಾದಿಗಳೂ ಆಗುತ್ತವೆ. ಈ ಅತಿವ್ಯಾಪ್ತಿವಾರಣೆಮಾಡಲು 'ವಾ' ಎಂದು ಬೇರೊಂದು ಲಕ್ಷಣ ಹೇಳುತ್ತಾನೆ. ಅಂತ್ಯಾವಯವಿಮಾತ್ರವೃತ್ತಿಃ ಯಾ ಚೇಷ್ಟಾವದ್ವೃತ್ತಿಜಾತಿಃ ತಾದೃಶಜಾತಿಮತ್ತ್ವಮ್. ಕೇವಲ ಅಂತ್ಯಾವಯವಿಯಲ್ಲಿ ಇದ್ದು ಚೇಷ್ಟೆಯುಳ್ಳಪದಾರ್ಥದಲ್ಲಿರುವ ಜಾತಿಯೆಂದರೆ ಮನುಷ್ಯತ್ವಾದಿಜಾತಿಯೇ ಆಗುತ್ತದೆ. ಪೃಥಿವೀತ್ವಜಾತಿಯು ಚೇಷ್ಟಾವದ್ವೃತ್ತಿಯಾದರೂ, ಅಂತ್ಯಾವಯವಿಮಾತ್ರ ವೃತ್ತಿಯಾಗುವುದಿಲ್ಲ. ದ್ರವ್ಯಾರಂಭಕಗಳಾದ ಕಪಾಲಾದಿಗಳಲ್ಲಿಯೂ ಇರುವುದರಿಂದ ಅದನ್ನು ತೆಗೆದುಕೊಳ್ಳಬಾರದು. ವ್ಯಕ್ತ್ಯಭೇದವು ಜಾತಿಬಾಧಕವಾಗುವುದರಿಂದ ನೃಸಿಂಹ ಶರೀರವು ಬಂದಾದುದರಿಂದ ಅದರಲ್ಲಿ ಅವ್ಯಾಪ್ತಿಯನ್ನಾಶಂಕಿಸಿ ಪರಿಹರಿಸುತ್ತಾನೆ. 'ನಚ —' ಇತಿ. ನೃಸಿಂಹಶರೀರದಲ್ಲಿ ಈ ಲಕ್ಷಣಸಮನ್ವಯ ಮಾಡುವುದು ಹೇಗೆ? ನೃಸಿಂಹತ್ವವು ಒಂದೇ ವ್ಯಕ್ತಿಯಲ್ಲಿರುವುದರಿಂದ ಜಾತಿಯಲ್ಲ. ದ್ರವ್ಯತ್ವವ್ಯಾಪ್ಯಜಾತಿಪದದಿಂದ ಅದನ್ನು ಸ್ವೀಕರಿಸಲು ಶಕ್ಯವಿಲ್ಲ. ಹಾಗಾದರೆ ದೇವತ್ವವನ್ನು ತೆಗೆದುಕೊಂಡು ಸಮನ್ವಯ ಮಾಡಬಹುದು ಎಂದರೆ ಸಾಂಕರ್ಯದಿಂದ ಅದೂ ಜಾತಿಯಲ್ಲವೆಂದು ತೋರಿಸುತ್ತಾನೆ. 'ಜಲೀಯ—' ಇತಿ. ದೇವತ್ವವನ್ನು ಬಿಟ್ಟರೆ ತೈಜಸತ್ವವು ಸುವರ್ಣದಲ್ಲಿಯೂ, ತೈಜಸತ್ವವನ್ನು ಬಿಟ್ಟರೆ ದೇವತ್ವವು ಜಲೀಯದೇವರಾದ ವರುಣಾದಿಗಳಲ್ಲಿಯೂ ಇದ್ದು ಅವೆರಡೂ ತೈಜಸದೇವರಾದ ಸೂರ್ಯಾದಿಗಳಲ್ಲಿ ಬರುವುದರಿಂದ, ದೇವತ್ವವು ಜಾತಿಯಾಗಲು ಸಾಂಕರ್ಯಬಾಧಬರುತ್ತದೆ. ಆದುದರಿಂದ ದೇವತ್ವಜಾತಿಯಿಂದ ಸಮನ್ವಯಮಾಡಲು ಸಾಧ್ಯವಿಲ್ಲ. 'ಕಲ್ಪಭೇದೇನ—' ಇತಿ. ಸಮಾಧಾನ ತೋರಿಸುತ್ತಾನೆ. ನೃಸಿಂಹತ್ವವೆಂಬುದು ಜಾತಿಯೇ ಆಗುತ್ತದೆ. ಕಲ್ಪಭೇದದಿಂದ ನೃಸಿಂಹಶರೀರಗಳು ಅನೇಕವಾಗುತ್ತವೆ. ಅನೇಕವ್ಯಕ್ತಿಗತವಾಗುವುದರಿಂದ ವ್ಯಕ್ತ್ಯಭೇದರೂಪ ಜಾತಿಭಾದಕ ಬರುವುದಿಲ್ಲ. ದ್ರವ್ಯತ್ವವ್ಯಾಪ್ಯಜಾತಿಯೆಂದರೆ ನೃಸಿಂಹತ್ವಜಾತಿ. ಅದು ಉಳ್ಳದ್ದು ನೃಸಿಂಹ ಶರೀರವಾಗುವುದರಿಂದ ಶರೀರಲಕ್ಷಣ ಅಲ್ಲಿ ಅವ್ಯಾಪ್ತವಾಗುವುದಿಲ್ಲ. ನವೀನರಮತದಲ್ಲಿ ಸಾಂಕರ್ಯವು ಜಾತಿಬಾಧಕವಾಗದಿರುವುದರಿಂದ ಅವರಮತದಲ್ಲಿ ದೇವತ್ವಜಾತಿಯಿಂದ ಸಮನ್ವಯವಾಗುವುದರಿಂದ ಕಲ್ಪಭೇದದಿಂದ ನಾನಾತ್ವವನ್ನು ಒಪ್ಪದಿದ್ದರೂ ದೋಷ ವಿಲ್ಲ.

### ಇಂದ್ರಿಯಂ ಘ್ರಾಣಲಕ್ಷಣಮ್—

ಇಂದ್ರಿಯಮಿತಿ । ಘ್ರಾಣೇಂದ್ರಿಯಂ ಪಾರ್ಥಿವಮಿತ್ಯರ್ಥಃ । ಪಾರ್ಥಿವತ್ವಂ ಕಥಮಿತಿ ಚೇದಿತ್ಥಮ್ । ಘ್ರಾಣೇಂದ್ರಿಯಂ ಪಾರ್ಥಿವಂ ರೂಪಾದಿಷು ಮಧ್ಯೇ ಗಂಧಸ್ಯೈವ ವ್ಯಂಜಕತ್ವಾತ್ । ಕುಂಕುಮಗಂಧಾಭಿವ್ಯಂಜಕಗೋಘೃತವತ್ । ನ ಚ ದೃಷ್ಟಾಂತೇ ಸ್ವಕೀಯರೂಪಾದಿ ವ್ಯಂಜಕತ್ವಾದಸಿದ್ಧಿರಿತಿ ವಾಚ್ಯಮ್, ಪರ

ಕೀಯರೂಪಾದ್ಯವ್ಯಂಜಕತ್ವಸ್ಯ ತದರ್ಥತ್ವಾತ್ । ನ ಚ ನವ ಶರಾವಗಂಧ ವ್ಯಂಜಕಜಲೇಽನೈಕಾಂತಿಕತ್ವಮಿತಿ ವಾಚ್ಯಮ್, ತಸ್ಯ ಸಕ್ತುರಸಾಭಿವ್ಯಂಜಕ ತ್ವಾತ್ । ಯದ್ವಾ ಪರಕೀಯೇತಿ ನ ದೇಯಂ ವಾಯೂಪನೀತಸುರಭಿಭಾಗಸ್ಯ ದೃಷ್ಟಾಂತತ್ವಸಂಭವಾತ್ । ನ ಚ ಘ್ರಾಣೇಂದ್ರಿಯಸನ್ನಿಕರ್ಷಸ್ಯ ಗಂಧಮಾತ್ರ ವ್ಯಂಜಕತ್ವಾತ್ತತ್ರ ವ್ಯಭಿಚಾರ ಇತಿ ದ್ರವ್ಯತ್ವೇ ಸತೀತಿ ವಿಶೇಷಣಾತ್ ॥

ಶರೀರ ಪೃಥಿವಿಯನ್ನು ಹೇಳಿ ಇಂದ್ರಿಯಪೃಥಿವಿಯನ್ನು ನಿರೂಪಿಸುತ್ತಾನೆ. ಘ್ರಾಣೇಂದ್ರಿಯವಾದ ಮೂಗು ಪಾರ್ಥಿವಾಗುತ್ತದೆ. 'ಆತ್ಮಾನ್ಯತ್ವೇ ಸತಿ ಜ್ಞಾನಕಾರಣ ಮನಃ ಸಂಯೋಗಾಶ್ರಯತ್ವಂ ಇಂದ್ರಿಯತ್ವಂ' ಎಂದು ಇಂದ್ರಿಯದ ಸಾಮಾನ್ಯಲಕ್ಷಣ. ಜ್ಞಾನಕ್ಕೆ ಕಾರಣವಾಗಿ ಮನಸ್ಸಿನ ಸಂಯೋಗವುಳ್ಳದ್ದು ಇಂದ್ರಿಯ. ಘ್ರಾಣೇಂದ್ರಿ ಯಕ್ಕೆ ಪಾರ್ಥಿವತ್ತ್ವಸಾಧಕ ಅನುಮಾನ ತೋರಿಸುತ್ತಾನೆ. 'ಘ್ರಾಣೇಂದ್ರಿಯಂ— ಪಾರ್ಥಿವಂ—ರೂಪಾದಿಷುಮಧ್ಯೇಗಂಧಸ್ಯೈವಾಭಿವ್ಯಂಜಕತ್ವಾತ್.' ಅನುಮಾನಾ ಕಾರ. 'ಕುಂಕುಮ'—ಎಂಬುದು ದೃಷ್ಟಾಂತ. ಯದ್ಯತ್ ರೂಪಾದಿಷು ಮಧ್ಯೇ ಗಂಧಸ್ಯೈವಾಭಿವ್ಯಂಜಕಂ ತತ್ತತ್ ಪಾರ್ಥಿವಂ ದೃಷ್ಟಂ ಯಥಾ ಕುಂಕು....ಘೃತವತ್ ರೂಪಾದಿಗಳ ಮಧ್ಯದಲ್ಲಿ ಯಾವುದು ಗಂಧವನ್ನು ಮಾತ್ರ ವ್ಯಕ್ತಪಡಿಸುವುದೋ ಅದು ಪಾರ್ಥಿವವಾಗುತ್ತದೆ. ಗೋಘೃತವು ಕುಂಕುಮರಸದಲ್ಲಿರುವ ಗಂಧವನ್ನು ಮಾತ್ರ ಅಭಿವ್ಯಕ್ತಪಡಿಸುವುದರಿಂದ ಪಾರ್ಥಿವವೆಂದು ಲೋಕಸಿದ್ಧವಾಗಿದೆ. ಕುಂಕುಮಕೇಸರಿಗೆ ತುಪ್ಪಹಾಕಿ ತಿಕ್ಕಿದರೆ ಅದರ ಪರಿಮಳ ಹೆಚ್ಚಾಗುತ್ತದೆ. ಅದರಂತೆ ಘ್ರಾಣೇಂದ್ರಿಯವು ರಸಾದಿಮಧ್ಯದಲ್ಲಿ ಈ ಗಂಧವನ್ನು ಮಾತ್ರ ವ್ಯಕ್ತಪಡಿಸುವುದರಿಂದ ಪಾರ್ಥಿವವಾಗು ತ್ತದೆ. ರೂಪಾದಿಷು ಎಂಬಲ್ಲಿ ಸಪ್ತಮಿಗೆ ಘಟಕತ್ವಂ ಅರ್ಥಃ ಅದನ್ನೇ 'ಮಧ್ಯೇ' ಎಂದು ತೋರಿಸಿದ್ದಾನೆ. ಆದಕ್ಕೆ ಏವಕಾರಾರ್ಥವಾದ ಗಂಧೇತರವಿಷಯಕಜ್ಞಾನಾಽಜನಕತ್ವ ದಲ್ಲಿ ಘಟಕವಾದ ಗಂಧೇತರದಲ್ಲಿ ಅನ್ವಯ. ರೂಪರಸಗಂಧಸ್ಪರ್ಶಘಟಕವಾದ ಯಾವ ಗಂಧಕ್ಕಿಂತ ಬೇರೆಯಾದ ರೂಪಾದಿಗಳಿವೆಯೋ ತದ್ವಿಷಯಕಜ್ಞಾನಾಜನಕವಾಗಿ (ಆ ಜ್ಞಾನವನ್ನು ಹುಟ್ಟಿಸದೆ) ಗಂಧವಿಷಯಕಜ್ಞಾನಜನಕವಾಗಿದೆಯೆಂದರ್ಥ.

ಘ್ರಾಣೇಂದ್ರಿಯಂ, ಪಾರ್ಥಿವಂ ಎಂದು ಅನುಮಿತಿ. ಇಧು ಘ್ರಾಣೇಂದ್ರಿಯ ತ್ವಾವಚ್ಛಿನ್ನೋದ್ದೇಶ್ಯತಾ ನಿರೂಪಿತ ತಾದಾತ್ಮ್ಯಸಮವಾಯಾನ್ಯ ತರಸಂಬಂಧಾವಚ್ಛಿನ್ನ ಪಾರ್ಥಿವತ್ವಾವಚ್ಛಿನ್ನಪಾರ್ಥಿವನಿಷ್ಠವಿಧೇಯತಾಕವಾಗಿದೆ. (ವಿಧೇಯತಾ ನಿರೂಪಕ ವಾದದ್ದು.) ಅನುಮಿತಿಯಲ್ಲಿ ಘ್ರಾಣೇಂದ್ರಿಯವು ಉದ್ದೇಶ್ಯ. ಪಾರ್ಥಿವತ್ವವು ವಿಧೇಯ ವೆಂದರ್ಥ. ಈ ಅನುಮಿತಿಗೆ 'ಪಾರ್ಥಿವವ್ಯಾಪ್ಯ ಗಂಧಾಭಿವ್ಯಂಜಕತ್ವವತ್-ಘ್ರಾಣೇಂ ದ್ರಿಯಂ' ಎಂಬ ಪರಾಮರ್ಶಜ್ಞಾನವು ಕಾರಣ. ಈ ಪರಾಮರ್ಶದಲ್ಲಿ ಘ್ರಾಣೇಂದ್ರಿಯವು ವಿಶೇಷ್ಯ. ಗಂಧಾಭಿವ್ಯಂಜಕತ್ವವತ್ತ್ವ ಪ್ರಕಾರ. ಗಂಧಾಭಿವ್ಯಂಜಕತ್ವವತ್ತ್ವದಲ್ಲಿ ಪಾರ್ಥಿವವ್ಯಾಪ್ತಿಪ್ರಕಾರ. ಆಗ 'ಪಾರ್ಥಿವನಿಷ್ಠವ್ಯಾಪ್ತಿಪ್ರಕಾರತಾ ನಿರೂಪಿತಾ ಯಾ

ರೂಪಾದಿವಿಶಿಷ್ಟಮಧ್ಯಗಂಧೀಯಾಭಿವ್ಯಂಜಕತ್ವಾವಚ್ಛಿನ್ನಾ ಪ್ರಕಾರತಾ, ತನ್ನಿರೂಪಿತಾ ಯಾ ಘ್ರಾಣೇಂದ್ರಿಯತ್ವಾವಚ್ಛಿನ್ನಾ ವಿಶೇಷ್ಯತಾ, ತಾದೃಶ ವಿಶೇಷ್ಯತಾಶಾಲಿನಿರ್ಣಯಃ ಪರಾಮರ್ಶತ್ವೇನ ರೂಪೇಣ ಕಾರಣಂ' ಎಂದಾಗುತ್ತದೆ.) ಹೇತ್ವಸಿದ್ಧಿಯನ್ನಾಶಂಕಿಸಿ ನಿರಾಕರಿಸುತ್ತಾನೆ. 'ನಚ'—ಇತಿ. ದೃಷ್ಟಾಂತದಲ್ಲಿ ಗೋವಿನತುಪ್ಪವು ಕುಂಕುಮದ ಗಂಧಕ್ಕೆ ಅಭಿವ್ಯಂಜಕವಾದುದರಿಂದ ಪಾರ್ಥಿವನೆಂದಿದೆ. ಅಲ್ಲಿ ಅದು ಕೇವಲ ಗಂಧಾಭಿ ವ್ಯಂಜಕವಾಗಿಲ್ಲ. ತನ್ನ ಸ್ವರೂಪನನ್ನೂ ವ್ಯಕ್ತಪಡಿಸುವುದರಿಂದ ರೂಪವ್ಯಂಜಕವೂ ಆಗುವುದರಿಂದ ಅಸಿದ್ಧವಾಗುತ್ತದೆ. ಹೇತುವು ಹೇತುತಾವಚ್ಛೇದಕಧರ್ಮರಹಿತ ವಾದರೆ ಅಸಿದ್ಧವಾಗಿ ಸಾಧ್ಯಸಾಧನೆಯಲ್ಲಿ ಅಸಮರ್ಥವಾಗುತ್ತದೆ.

ಆಗ ರೂಪಾದಿಗಳ ಮಧ್ಯದಲ್ಲಿ ಗಂಧಮಾತ್ರಾಭಿವ್ಯಂಜಕವೆಂಬುದಕ್ಕೆ ಪರಕೀಯ ರೂಪಾದ್ಯವ್ಯಂಜಕವೆಂದು ಅರ್ಥಕಲ್ಪಿಸುವುದರಿಂದ ಈ ದೋಷವಾರಿತವಾಗುತ್ತದೆ. ಪ್ರಕೃತ ಗೋಘೃತವು ಸ್ವಕೀಯರೂಪವ್ಯಂಜಕವಾದರೂ ಪರಕೀಯವಾದ ಕುಂಕುಮಾದಿ ಗಳ ರೂಪವ್ಯಂಜಕವಾಗುವುದಿಲ್ಲ. ಗಂಧಾಭಿವ್ಯಂಜಕವಾಗಿ ತನ್ನರೂಪ ವ್ಯಕ್ತಪಡಿಸಿದರೂ ಇತರ ರೂಪವನ್ನು ತಿಳಿಸಿಕೊಡಬಾರದು ಎಂದು ತಾತ್ಪರ್ಯ. ಘ್ರಾಣೇಂದ್ರಿಯವು ಹೀಗಾದುದರಿಂದ ಪಾರ್ಥಿವವಾಗುತ್ತದೆ. ಪುನಃ ಹೇತುವಿಗೆ ವ್ಯಭಿಚಾರವನ್ನು ಶಂಕಿಸಿ ಸಮಾಧಾನ ತೋರಿಸುತ್ತಾನೆ. 'ನಚ'—ಇತಿ. ಪ್ರಕೃತ ಸಾಧ್ಯ ಪಾರ್ಥಿವತ್ವ. ಹೇತು—'ರೂಪಾದಿಷುಮಧ್ಯೇಗಂಧಸ್ಯೈವಾಭಿವ್ಯಂಜಕತ್ವಾತ್' ಎಂದು ಹೇಳಿದೆ. ಈ ಹೇತು ಸಾಧ್ಯವಿಲ್ಲದ ಜಲದಲ್ಲಿ ಬರುವುದರಿಂದ ವ್ಯಭಿಚರಿತವಾಗುತ್ತದೆ. ಹೊಸತಾದ ಮಡಕೆಯಲ್ಲಿ ನೀರು ಹಾಕಿದರೆ ಆ ನೀರು ಆ ಹೊಸ ಮಡಕೆಯಲ್ಲಿರುವ ಗಂಧವನ್ನೂ ವ್ಯಕ್ತಪಡಿಸುತ್ತದೆ. ಜಲದಲ್ಲಿ ಹೇತು ಬಂದಿರುವುದರಿಂದ ವ್ಯಭಿಚಾರ ಬರುತ್ತದೆಂದು ಆಶಂಕೆ. ಆದರೆ ವಿಚಾರಿಸದೆ ಈ ಶಂಕೆ ಮಾಡಿದೆ. ಹೇತುವಿನಲ್ಲಿ ಏವಕಾರ ಹಾಕಿರು ವುದರಿಂದ ಗಂಧೇತರವನ್ನು ಅಭಿವ್ಯಂಜನ ಮಾಡದೆ ಗಂಧವನ್ನು ಮಾತ್ರ ಅಭಿವ್ಯಂಜನ ಮಾಡಬೇಕೆಂದು ಹೇಳಿದೆ. ಜಲದಲ್ಲಿ ನವಶರಾವದಗಂಧಾಭಿವ್ಯಂಜಕತ್ವವಿದ್ದರೂ, ಗಂಧ ಕ್ಕಿಂತ ಬೇರೆಯಾದ ರಸಾಭಿವ್ಯಂಜಕತ್ವವೂ ಇದೆ. ಸಕ್ತು (ಹುರಿಹಿಟ್ಟು) ವಿನಲ್ಲಿರುವ ರಸಾಭಿವ್ಯಂಜಕತ್ವವಿರುವುದರಿಂದ ಗಂಧಮಾತ್ರಾಭಿವ್ಯಂಜಕತ್ವ ಬರುವುದಿಲ್ಲ. ಆದುದ ರಿಂದ ವ್ಯಭಿಚಾರವಿಲ್ಲ.

ಪರಕೀಯರೂಪಾದಿಗಳಿಗೆ ವ್ಯಂಜಕವಾಗದೆ ಗಂಧಾಭಿವ್ಯಂಜಕವಾಗಿರಬೇಕೆಂದು ಹೇಳಿದೆ. ಇಲ್ಲಿ ಪರಕೀಯ ವಿಶೇಷಣ ಕೊಡುವುದರಿಂದ ಗೌರವ ಬರುತ್ತದೆಂದು ಲಾಘವ ಲಕ್ಷಣವನ್ನು ಹೇಳುತ್ತಾನೆ. 'ಯದ್ವಾ'—ಇತಿ. ಗೋಘೃತವನ್ನು ದೃಷ್ಟಾಂತ ವಾಗಿ ಹೇಳಿದ್ದರಿಂದ ಅಲ್ಲಿ ಅಸಿದ್ಧಿ ನಿವಾರಣೆಗೆ ಪರಕೀಯ ವಿಶೇಷ ಹೇಳಿದ್ದನು. ಈಗ ವಾಯೂಪನೀತಸುರಭಿಭಾಗವನ್ನು ದೃಷ್ಟಾಂತವಾಗಿ ಅಂಗೀಕರಿಸಿದ್ದರಿಂದ ಪರಕೀಯ ವೆಂದು ಹೇಳಬೇಕಾಗಿಲ್ಲ. ಗಾಳಿಯಿಂದ ತರಲ್ಪಟ್ಟ ಪಾರ್ಥಿವದ ಪರಿಮಳದ ಭಾಗ

(ಪರಮಾಣು) ವು ಕೇವಲ ಗಂಧಾಭಿವ್ಯಂಜಕವಾಗುತ್ತದೆ. ಗಂಧೇತರ್ರೂಪಾದಿಗಳನ್ನು ವ್ಯಕ್ತಪಡಿಸುವುದಿಲ್ಲ. ಈಗ ಯಾವ ದೋಷಕ್ಕೂ ಅವಕಾಶವಿಲ್ಲ.

ಬೇರೆ ರೀತಿಯಿಂದ ವ್ಯಭಿಚಾರ ಶಂಕೆ ತೋರಿಸುತ್ತಾನೆ. 'ನಚ'—ಇತಿ. ಘ್ರಾಣೇಂದ್ರಿಯವು ಹೇಗೆ ಗಂಧವನ್ನು ಮಾತ್ರ ಗ್ರಹಣ ಮಾಡುವುದೋ ಹಾಗೆಯೇ ಘ್ರಾಣೇಂದ್ರಿಯದ ಸಂನಿಕರ್ಷವೂ ರೂಪಾದಿಗಳಲ್ಲಿ ಗಂಧವನ್ನು ಮಾತ್ರ ವ್ಯಕ್ತಪಡಿಸಿರುವುದರಿಂದ ಆ ಸಂನಿಕರ್ಷದಲ್ಲಿ ಹೇತುವಿಗೆ ವ್ಯಭಿಚಾರ ಬರುತ್ತದೆ. ಅದಕ್ಕೋಸ್ಕರ—'ದ್ರವ್ಯತ್ವೇಸತಿ ರೂಪಾದಿಷು ಮಧ್ಯೇ ಗಂಧಸ್ಯೈವ ಅಭಿವ್ಯಂಜಕತ್ವಾತ್' ಎಂದು ಹೇತುವನ್ನು ಪರಿಷ್ಕರಿಸಬೇಕು. ದ್ರವ್ಯತ್ವವಿಶಿಷ್ಟವಾಗಿ ಹೇಳಿದ್ದರಿಂದ ಘ್ರಾಣೇಂದ್ರಿಯ ಸಂನಿಕರ್ಷವು ಗಂಧಮಾತ್ರಾಭಿವ್ಯಂಜಕವಾಗಿದ್ದರೂ ದ್ರವ್ಯವಲ್ಲ. ಸಂಯೋಗರೂಪವಾದುದರಿಂದ ಅದು ಗುಣ. 'ದ್ರವ್ಯತ್ವೇಸತಿ' ಎಂದು ಸೇರಿಸಿದುದರಿಂದ ದೋಷವಾರಣೆಯಾಗುತ್ತದೆ.

**ವಿಷಯೋ ದ್ವ್ಯಣುಕಾದಿಶ್ಚ ಬ್ರಹ್ಮಾಂಡಾಂತ ಉದಾಹೃತಃ ॥ ೩೮ ॥**

ವಿಷಯ ಇತಿ ! ಉಪಭೋಗಸಾಧನಂ ವಿಷಯಃ । ಸರ್ವಮೇವ ಹಿ ಕಾರ್ಯಜಾತಮದೃಷ್ಟಾಧೀನಮ್ । ಯತ್ಕಾರ್ಯಂ ಯದದೃಷ್ಟಾಧೀನಂ ತತ್ತದುಪಭೋಗಂ ಸಾಕ್ಷಾತ್ ಪರಂಪರಯಾ ವಾ ಜನಯತ್ಯೇವ । ನಹಿ ಬೀಜಪ್ರಯೋಜನಂ ವಿನಾ ಕಸ್ಯಚಿದುತ್ಪತ್ತಿರಸ್ತಿ । ತೇನ ದ್ವ್ಯಣುಕಾದಿ ಬ್ರಹ್ಮಾಂಡಾಂತಂ ಸರ್ವಮೇವ ವಿಷಯೋ ಭವತಿ । ಶರೀರೇಂದ್ರಿಯಯೋರ್ವಿಷಯತ್ವೇಽಪಿ ಪ್ರಕಾರಾಂತರೋಪನ್ಯಾಸಃ ಶಿಷ್ಯಬುದ್ಧಿ ವೈಶದ್ಯಾರ್ಥಃ ॥ ೩೮ ॥

ವಿಷಯ ಪೃಥಿವಿಯನ್ನು ತೋರಿಸುತ್ತಾನೆ. ವಿಷಯ—ಇತಿ. ಸುಖ ಅಥವಾ ದುಃಖದ ಸಾಕ್ಷಾತ್ಕಾರಕ್ಕೆ (ಅನುಭವ) ಉಪಭೋಗವೆಂದು ಹೆಸರು. ಇದಕ್ಕೆ ಪ್ರಯೋಜಕ. ಸಾಕ್ಷಾತ್ ಯಾ ಪರಂಪರಯಾ ಕಾರಣವಾದುದೆಲ್ಲವೂ ವಿಷಯವಾಗುತ್ತವೆ. ದ್ವ್ಯಣುಕವು ಪರಂಪರಯಾ ಕಾರಣವಾಗುತ್ತದೆ. ದ್ವ್ಯಣುಕವನ್ನು ಆರಂಭಿಸಿ ಬ್ರಹ್ಮಾಂಡದವರೆಗೆ ಇರುವವುಗಳೆಲ್ಲವೂ ಪಾರ್ಥಿವ ವಿಷಯಗಳು. ಕಾರ್ಯಸಾಮಾನ್ಯವನ್ನು ಕುರಿತು ಅದೃಷ್ಟವು ಕಾರಣವಾದುದರಿಂದ ಅದೃಷ್ಟಾಧೀನದಾಗಿ ಕಾರ್ಯವೆಲ್ಲಾ ಭೋಗಸಾಧನವಾಗುತ್ತವೆ. ಯಾವನಿಗೆ ಅದೃಷ್ಟವಿದೆಯೋ ತದಧೀನವಾಗಿ ಆ ಕಾರ್ಯವು ಸಾಕ್ಷಾತ್ತಾಗಿ, ಅಥವಾ ಪರಂಪರೆಯಿಂದ ಸುಖದುಃಖಗಳನ್ನು ಕೊಡುತ್ತದೆ. ಕಾರಣ ಪ್ರಯೋಜನಗಳಿಲ್ಲದೆ ಯಾವ ಕಾರ್ಯವೂ ಆಗುವುದಿಲ್ಲ. ಶರೀರ ಮತ್ತು ಇಂದ್ರಿಯವೂ ವಿಷಯದಲ್ಲಿಯೇ ಸೇರುವಾಗ ಅವುಗಳನ್ನು ಬೇರೆ ಹೇಳಿದುದೇಕೆ ? ಎಂಬ ಶಂಕೆಗೆ ಸಮಾಧಾನ ತೋರಿಸುತ್ತಾನೆ. 'ಶಿಷ್ಯ'—ಇತಿ. ಶಿಷ್ಯರು ವಿಶದವಾಗಿ ತಿಳಿದಿರಲೆಂದು ಬೇರೆ ಬೇರೆಯಾಗಿ ಹೇಳಿರುತ್ತಾನೆ.

ಮೂರಕ್ಕೂ ಹೀಗೆ ನಿಷ್ಕೃಷ್ಟವಾದ ಲಕ್ಷಣವನ್ನು ತಿಳಿಯಬೇಕು. 'ಗಂಧವತ್ತ್ವೇ ಸತಿ ಭೋಗಾಯತನತ್ವಂ' ಪಾರ್ಥಿವಶರೀರದ ಲಕ್ಷಣ. ಗಂಧವತ್ತ್ವೇಸತಿ ಗಂಧಜ್ಞಾನ ಕರಣತ್ವಂ' ಪಾರ್ಥಿವೇಂದ್ರಿಯದ ಲಕ್ಷಣ. 'ಗಂಧವತ್ತ್ವೇ ಸತಿ ಉಪಭೋಗಸಾಧನತ್ವಂ' ಪಾರ್ಥಿವ ವಿಷಯದ ಲಕ್ಷಣ. ಜಲಾದಿಗಳ ಭೇದದಲ್ಲಿಯೂ ಹೀಗೆಯೇ ತಿಳಿಯಬೇಕು.

**ವರ್ಣಃ ಶುಕ್ಲೋ ರಸ್ಪರ್ಶೌ ಜಲೇ ಮಧುರಶೀತಲೌ ||**
**ಸ್ನೇಹಸ್ತತ್ರ ದ್ರವತ್ವಂ ತು ಸಾಂಸಿದ್ಧಿಕಮುದಾಹೃತಮ್ || ೩೯ ||**

ಜಲಂ ನಿರೂಪಯತಿ—ವರ್ಣಃ ಶುಕ್ಲ ಇತಿ। ಸ್ನೇಹಸಮವಾಯಿಕಾರಣತಾವಚ್ಛೇದಕತಯಾ ಜಲತ್ವಜಾತಿಃ ಸಿದ್ಧ್ಯತಿ। ಯದ್ಯಪಿ ಸ್ನೇಹತ್ವಂ ನಿತ್ಯಾऽನಿತ್ಯವೃತ್ತಿತಯಾ ನ ಕಾರ್ಯತಾವಚ್ಛೇದಕಮ್, ತಥಾಪಿ ಜನ್ಯ ಸ್ನೇಹತ್ವಂ ತಥಾ ಬೋಧ್ಯಮ್। ಅಥ ಪರಮಾಣೌ ಜಲತ್ವಂ ನ ಸ್ಯಾತ್ತತ್ರ ಜನ್ಯ ಸ್ನೇಹಾಭಾವಾತ್, ನಿತ್ಯಸ್ಯ ಸ್ವರೂಪ ಯೋಗ್ಯತ್ವೇಫಲಾವಶ್ಯಂಭಾವನಿಯಮಾದಿತಿ ಚೇನ್ನ, ಜನ್ಯಸ್ನೇಹಜನಕತಾವಚ್ಛೇದಕತಯಾ ಜನ್ಯಜಲತ್ವಜಾತೇಃಸಿದ್ಧೌ, ತದವಚ್ಛಿನ್ನಜನಕತಾವಚ್ಛೇದಕತಯಾ ಜಲತ್ವಜಾತಿಸಿದ್ಧೇಃ ||

'ಸರ್ವವಾಕ್ಯಂ ಸಾವಧಾರಣಮ್' ಎಂಬ ನ್ಯಾಯದಂತೆ ಕಾರಿಕೆಯಲ್ಲಿ 'ಜಲೇ ಶುಕ್ಲ ಏವ ವರ್ಣಃ, ಮಧುರ ಏವ ರಸಃ, ಶೀತ ಏವ ಸ್ಪರ್ಶಃ, ಜಲೇ ಏವ ಸ್ನೇಹಃ, ಎಂದು ಏವಕಾರ ಸೇರಿದಂತೆ ಹೇಳಬೇಕು. ಆಗ 'ಅಭಾಸ್ವರಶುಕ್ಲಮಾತ್ರರೂಪವತ್ತ್ವಂ' 'ಶೀತಮಾತ್ರಸ್ಪರ್ಶವತ್ತ್ವಂ' 'ಸ್ನೇಹವತ್ತ್ವಂ' 'ಸಾಂಸಿದ್ಧಿಕದ್ರವತ್ವವತ್ತ್ವಂ' ಎಂದು ಜಲದ ನಾನಾ ಲಕ್ಷಣ ಹೇಳಿದಂತಾಗುತ್ತದೆ. ಇತರ ರೂಪವಾಗಲೀ, ಸ್ಪರ್ಶವಾಗಲೀ ಇಲ್ಲವೆಂದು ಮುಂದೆ ವಿಶದಪಡಿಸುತ್ತಾನೆ. ಜಲತ್ವಜಾತಿಯಲ್ಲಿ ಪ್ರಮಾಣ ತೋರಿಸುತ್ತಾನೆ. 'ಸ್ನೇಹ—ಇತಿ ||

ಕಾರಣತಾವಚ್ಛೇದಕರೂಪವಾಗಿ ಜಲತ್ವಧರ್ಮಸಿದ್ಧಿಯಾಗುವಾಗ ಲಾಘವ ಜ್ಞಾನದಿಂದ ಬಾಧಕವಿಲ್ಲದಿರುವುದರಿಂದ ಅದು ಜಾತಿಯಾಗುತ್ತದೆ. ಕಾರ್ಯಕಾರಣಭಾವ ಹಿಂದಿನಂತೆ ತಿಳಿಯಬೇಕು.—'ಸಮವಾಯಿಸಂಬಂಧಾವಚ್ಛಿನ್ನ ಕಾರ್ಯತಾನಿರೂಪಿತಾ. ತಾದಾತ್ಮ್ಯಸಂಬಂಧಾವಚ್ಛಿನ್ನಾಯಾ ಜಲನಿಷ್ಠಾ ಸಮವಾಯಿಕಾರಣತಾ ಸಾ—ಕಿಂಚಿದ್ಧರ್ಮಾವಚ್ಛಿನ್ನಾ—ಕಾರಣತ್ವಾತ್। ಘಟಗತಕಾರ್ಯತಾನಿರೂಪಿತ ದಂಡವೃತ್ತಿಕಾರಣತಾವತ್.' ಇದರಿಂದ ಜಲತ್ವಜಾತಿ ಸಿದ್ಧವಾಗುತ್ತದೆ. ವಿವರಣೆ ಹಿಂದೆ ಹೇಳಿದೆ. ಜಲಪರಮಾಣುವಿನಲ್ಲಿರುವ ಸ್ನೇಹವು ಹುಟ್ಟುವುದಿಲ್ಲ. ಅದು ನಿತ್ಯ. ನಿತ್ಯಸ್ನೇಹದಲ್ಲಿರುವ ಸ್ನೇಹತ್ವವು ಕಾರ್ಯತಾವಚ್ಛೇದಕವಾಗುವುದಿಲ್ಲ. ಆಗ ಹಿಂದೆ ಹೇಳಿದ ಕಾರ್ಯಕಾರಣ ಭಾವದಿಂದ ಜಲತ್ವಜಾತಿಸಿದ್ಧಿಸುವುದು ಹೇಗೆ ? ಎಂದು ಶಂಕಿಸುತ್ತಾನೆ. 'ಯದ್ಯಪಿ—' ಇತಿ. ಜಲಪರಮಾಣುವಿನಲ್ಲಿರುವ ಸ್ನೇಹವು ನಿತ್ಯವೃತ್ತಿಯಾಗಿಯೂ,

ಜಲದ್ವ್ಯಣುಕಾದಿಗಳಲ್ಲಿರುವುದು ಅನಿತ್ಯವೃತ್ತಿಯಾಗಿಯೂ ಇರುವುದರಿಂದ ಕಾರ್ಯತಾವಚ್ಛೇದಕವಾಗಲಾರದು. ಆದರೂ ಕೇವಲ ಸ್ನೇಹತ್ವ ಕಾರ್ಯತಾವಚ್ಛೇದಕವಲ್ಲ. ದ್ವ್ಯಣುಕಾದಿಗಳಲ್ಲಿರುವ ಸ್ನೇಹವೇ ಕಾರ್ಯವಾದುದರಿಂದ ಜನ್ಯಸ್ನೇಹತ್ವವು ಕಾರ್ಯತಾವಚ್ಛೇದಕವಾಗುತ್ತದೆ. ಸ್ನೇಹದಪೂರ್ವದಲ್ಲಿ ಜನ್ಯ ಎಂದು ಹೆಚ್ಚು ಸೇರಿಸಿಕೊಳ್ಳಬೇಕು. ಜನ್ಯಸ್ನೇಹಕ್ಕೆ ದ್ವ್ಯಣುಕಾದಿಗಳು ಸಮವಾಯಿಕಾರಣವಾಗುವುದರಿಂದ ಅಲ್ಲಿ ಕಾರಣತಾವಚ್ಛೇದಕರೂಪದಿಂದ ಜಲತ್ವ ಜಾತಿಸಿದ್ಧವಾಗುತ್ತದೆ.

ಹಾಗಾದರೂ ಈ ಧರ್ಮವು ಪರಮಾಣುವಿನಲ್ಲಿ ಬಾರದಿರುವುದರಿಂದ ಅಸಿದ್ಧಿ ಬರುತ್ತದೆಂದು ಆಶಂಕಿಸುತ್ತಾನೆ. 'ಅಥ—' ಇತಿ. ಪರಮಾಣುವಿನಲ್ಲಿ ಜನ್ಯಸ್ನೇಹವಿಲ್ಲದಿರುವುದರಿಂದ ಅಲ್ಲಿ ಕಾರಣತಾವಚ್ಛೇದಕರೂಪದಿಂದ ಸಿದ್ಧವಾದ ಜಲತ್ವವೂ ಬರಲಾರದು. ಆದ್ದರಿಂದ ಅಸಿದ್ಧಿದೋಷ ಬರುತ್ತದೆ. 'ನಿತ್ಯಸ್ಯ—' ಇತಿ. ಪ್ರಕಾರಾಂತರದಿಂದ ಇದು ಸಿದ್ಧವಾಗುತ್ತದೆಂದು ಕೆಲವರ ಮತ. ಅರಣ್ಯದಲ್ಲಿರುವ ದಂಡವು ಘಟವನ್ನು ಹುಟ್ಟಿಸಿಕೊಡದಿದ್ದರೂ ಅದರಲ್ಲಿ ಕಾರಣತಾವಚ್ಛೇದಕವಾದ ದಂಡತ್ವಧರ್ಮ ಇದ್ದೇ ಇದೆ. ಅರಣ್ಯದಿಂದ ತಂದುಮಾಡಿದರೆ ಆಗುತ್ತದೆ. ಇದಕ್ಕೆ ಸ್ವರೂಪಯೋಗ್ಯತ್ವವೆನ್ನುತ್ತಾರೆ. ಫಲೋಪಧಾಯಕವೆಂದರೆ ಅವಶ್ಯಕಾರ್ಯ ಆಗಿಯೇತೀರಬೇಕು. ಹೀಗೆ ಪರಮಾಣುವಿನಲ್ಲಿ ಜನ್ಯಸ್ನೇಹವಿಲ್ಲದಿದ್ದರೂ ಅದರಲ್ಲಿ ಸ್ನೇಹೋತ್ಪತ್ತಿಯೋಗ್ಯತಾ ಇದ್ದೇ ಇದೆ. ಆದುದರಿಂದ ಜಲತ್ವಧರ್ಮವು ಬರಬಹುದು ಎಂದರೆ ಇಲ್ಲಿ ಅದು ಸಂಭವಿಸಲಾರದು. ನಿತ್ಯವಾದ ಜಲಪರಮಾಣುವಿಗೆ ಸ್ನೇಹೋತ್ಪತ್ತಿಯೋಗ್ಯತ್ವವಿರುವುದರಿಂದ ಎಂದಾದರೂ ಜನ್ಯಸ್ನೇಹವುಂಟಾಗಲೇ ಬೇಕು. ಅರಣ್ಯದಂಡವಾದರೆ ಅನಿತ್ಯವಾದುದರಿಂದ ಅದರಿಂದ ಎಂದಾದರೂ ಘಟವಾಗಲೇಬೇಕೆಂಬ ನಿಯಮವಿಲ್ಲ. ತಂದು ಮಾಡುವುದರೊಳಗೆ ನಾಶವಾಗಬಹುದು. ಪರಮಾಣುವಾದರೋ ನಿತ್ಯ. ಇಂದಲ್ಲವಾದರೆ ಎಂದಾದರೂ ( ಫಲ— ) ಜನ್ಯಸ್ನೇಹವಾಗಲೇಬೇಕು. ಆದರೆ ಅದರಿಂದ ಜನ್ಯಸ್ನೇಹೋತ್ಪತ್ತಿ ಇಲ್ಲ. ಅದಕ್ಕೋಸ್ಕರ ಸಿದ್ಧಾಂತತೋರಿಸುತ್ತಾನೆ. 'ಚೇತ್‌ನ—' ಇತಿ. ಹಿಂದೆ ಹೇಳಿದ ಕಾರ್ಯಕಾರಣಭಾವದಲ್ಲಿ ಕಾರ್ಯತಾವಚ್ಛೇದಕ, ಕಾರಣತಾವಚ್ಛೇದಕ ಈ ಎರಡರಲ್ಲಿಯೂ ಜನ್ಯಪದ ಸೇರಿಸಬೇಕು. 'ಜನ್ಯಸ್ನೇಹತ್ವಾವಚ್ಛಿನ್ನಂ ಪ್ರತಿ ಜನ್ಯಜಲತ್ವಾವಚ್ಛಿನ್ನಂಕಾರಣಮ್' ಕಾರಣತಾವಚ್ಛೇದಕರೂಪವಾಗಿ ಜನ್ಯಜಲತ್ವಜಾತಿ ಸಿದ್ಧವಾಗುತ್ತದೆ. ಇದು ಜನ್ಯಜಲದಲ್ಲಿ ಮಾತ್ರ ಇರುತ್ತದೆ. 'ತದವಚ್ಛಿನ್ನ—' ಇತಿ. ಜನ್ಯಜಲತ್ವಾವಚ್ಛಿನ್ನಕಾರಣತಾವಚ್ಛೇದಕರೂಪದಿಂದ ಜಲತ್ವಜಾತಿ ಸಿದ್ಧವಾಗುತ್ತದೆ. ಜನ್ಯಜಲತ್ವಾವಚ್ಛಿನ್ನವೇ ಕಾರ್ಯ. "ಸಮವಾಯ ಸಂಬಂಧಾವಚ್ಛಿನ್ನಜನ್ಯಜಲತ್ವಾವಚ್ಛಿನ್ನಜನ್ಯಜಲನಿಷ್ಠಕಾರ್ಯತಾನಿರೂಪಿತ, ತಾದಾತ್ಮ್ಯ ಸಂಬಂಧಾವಚ್ಛಿನ್ನಾಯಾ ಶುದ್ಧಜಲನಿಷ್ಠಾ ಸಮವಾಯಿಕಾರಣತಾ, ಸಾ ಕಿಂಚಿದ್ಧರ್ಮಾವಚ್ಛಿನ್ನಾ—ಕಾರಣತ್ವಾತ್ । ದಂಡವೃತ್ತಿಕಾರಣತಾವತ್ ॥ ಹಿಂದೆ ಜನ್ಯಸ್ನೇಹನಿಷ್ಠಕಾರ್ಯತಾಧರ್ಮದಿಂದ ಕಾರಣತಾನುಮಾನ ಮಾಡಿ ಜನ್ಯಜಲದಲ್ಲಿ ಕಾರಣತಾವಚ್ಛೇದಕವಾದ ಜಲತ್ವಜಾತಿಯನ್ನು

ಸಾಧಿಸಿದರೆ ಇಲ್ಲಿ ಜನ್ಯಜಲದಲ್ಲಿರುವ ಕಾರ್ಯತಾಧರ್ಮದಿಂದ ನಿತ್ಯಜಲ (ಪರಮಾಣು) ದಲ್ಲಿ ಕಾರಣತಾನುಮಾನ ಮಾಡಿ ಶುದ್ಧ ಜಲದಲ್ಲಿ ಜಲತ್ವಜಾತಿ ಸಿದ್ಧಿ ಮಾಡಿದೆ.

ಶುಕ್ಲ ರೂಪಮೇವ ಜಲಸ್ಯೇತಿ ದರ್ಶಯಿತುಮುಕ್ತಂ ವರ್ಣಃ ಶುಕ್ಲ ಇತಿ ॥ ನ ತು ಶುಕ್ಲರೂಪವತ್ತ್ವಂ ಲಕ್ಷಣಮ್ । ಅಥವಾ ನೈಮಿತ್ತಿಕದ್ರವತ್ವವದವೃತ್ತಿ ರೂಪವದ್ವೃತ್ತಿ ದ್ರವ್ಯತ್ವಸಾಕ್ಷಾದ್ವ್ಯಾಪ್ಯಜಾತಿಮತ್ತ್ವಮ್, ಅಭಾಸ್ವರಶುಕ್ಲೇತರ ರೂಪಾಸಮಾನಾಧಿಕರಣರೂಪವದ್ವೃತ್ತಿದ್ರವ್ಯತ್ವಸಾಕ್ಷಾದ್ವ್ಯಾಪ್ಯಜಾತಿಮತ್ವಂ ವಾ ತದರ್ಥಃ । ತೇನ ಸ್ಫಟಿಕಾದೌನಾತಿವ್ಯಾಪ್ತಿಃ ॥

ಶುಕ್ಲರೂಪವುಳ್ಳದ್ದು ಎಂದು ಜಲದಲಕ್ಷಣ ಹೇಳುವುದಾದರೆ ಪೃಥಿವೀತೇಜಸ್ಸುಗಳಲ್ಲಿಯೂ ಬಿಳಿಬಣ್ಣವಿರುವುದರಿಂದ ಅತಿವ್ಯಾಪ್ತವಾಗುತ್ತದೆ. ಆದುದರಿಂದ ಅದು ಲಕ್ಷಣವಲ್ಲ. ನೀರಿನಲ್ಲಿ ಕೇವಲ ಶುಕ್ಲ ರೂಪವಿದೆಯೆಂದು ತೋರಿಸಲು ಮಾತ್ರ ಹೇಳಿದೆ. ಲಕ್ಷಣವಾಕ್ಯವಾಗಬೇಕಾದರೆ ಪರಿಷ್ಕರಿಸಿ ಹೇಳಬೇಕೆಂದು ತೋರಿಸುತ್ತಾನೆ. 'ಅಥವಾ'—ಇತಿ. ನೈಮಿತ್ತಿಕದ್ರವತ್ವವುಳ್ಳದ್ದು ಪೃಥಿವೀ. (ತೇಜಸ್ಸು) ತತ್ರ ಅವೃತ್ತಿ —ಅಲ್ಲಿ ಇಲ್ಲದಿರುವುದು, ರೂಪವದ್ವೃತ್ತಿಃ—ರೂಪವುಳ್ಳದ್ದರಲ್ಲಿ ಇರುವುದು, ದ್ರವ್ಯತ್ವ ಸಾಕ್ಷಾದ್ವ್ಯಾಪ್ಯಾಯಾ ಜಾತಿಃ ತದ್ವತ್ತ್ವಮ್—ದ್ರವ್ಯತ್ವದಿಂದ ವ್ಯಾಪ್ಯವಾದ ಜಾತಿಯೆಂದರೆ ಜಲತ್ವವೇ ಆಗುತ್ತದೆ. ಅದು ಉಳ್ಳದ್ದು ಜಲ. ಶುಕ್ಲರೂಪದಂತೆ ನೀರಿಗೆ ರಸ, ಸ್ನೇಹ, ದ್ರವ್ಯತ್ವಗಳೂ ಕೂಡಾ ನಿಯತಧರ್ಮಗಳಾಗಿವೆ. ಈ ಲಕ್ಷಣಕ್ಕೆ ಸ್ಫಟಿಕದಲ್ಲಿ ಅತಿವ್ಯಾಪ್ತಿ ಬರುವುದರಿಂದ ಕಲ್ಪಾಂತರ ತೋರಿಸುತ್ತಾನೆ. 'ಅಭಾಸ್ವರ'—ಇತಿ. ಅಭಾಸ್ವರ ಶುಕ್ಲವೆಂದರೆ ಇತರ ಪ್ರಕಾಶಕವಾಗದಿರುವ ಶುಕ್ಲವರ್ಣ. ಅದಕ್ಕಿಂತ ಬೇರೆಯಾದ ರೂಪಗಳು ಅಂದರೆ ನೀಲಪೀತಾದಿಗಳು ಹಾಗೆಯೇ ಭಾಸ್ವರಶುಕ್ಲವೂ ಆಗುತ್ತದೆ. ತದಸಮಾನಾಧಿಕರಣವೆಂದರೆ ಆ ನೀಲಾದಿಗಳ ಅಧಿಕರಣಕ್ಕಿಂತ ಭಿನ್ನವಾದ ಅಧಿಕರಣವುಳ್ಳ ರೂಪ. ಆ ರೂಪವುಳ್ಳದ್ದು ಜಲವೇ. ರೂಪವದ್ವೃತ್ತಿಃ—ಜಲದಲ್ಲಿರುವ, ದ್ರವ್ಯತ್ವಸಾಕ್ಷಾತ್‌ವ್ಯಾಪ್ಯಾಯಾಜಾತಿಃ, ತದ್ವತ್ವಂ— ಜಲತ್ವಜಾತಿಯುಳ್ಳದ್ದು ಜಲವಾಗುತ್ತದೆ. ಸ್ಫಟಿಕವು ಅಸಮಾನಾಧಿಕರಣರೂಪವತ್ತಾಗುವುದಿಲ್ಲ. ಇತರ ರೂಪಸಮಾನಾಧಿಕರಣವೇ ಆಗುತ್ತದೆ.

ರಸಸ್ಪರ್ಶಾವಿತಿ । ಜಲಸ್ಯ ಮಧುರ ಏವ ರಸಃ ಶೀತ ಏವ ಸ್ಪರ್ಶಃ । ತಿಕ್ತರಸವವದವೃತ್ತಿ ಮಧುರವದ್ವೃತ್ತಿ ದ್ರವ್ಯತ್ವಸಾಕ್ಷಾದ್ವ್ಯಾಪ್ಯಜಾತಿಮತ್ತ್ವಂ ತದರ್ಥಃ, ತೇನ ಶರ್ಕರಾದೌ ನಾತಿವ್ಯಾಪ್ತಿಃ । ಶೀತೇತರ ಸ್ಪರ್ಶವದವೃತ್ತಿ ಸ್ಪರ್ಶವದ್ವೃತ್ತಿ ದ್ರವ್ಯತ್ವಸಾಕ್ಷಾದ್ವ್ಯಾಪ್ಯ ಜಾತಿಮತ್ವಂ ತದರ್ಥಃ । ನನು ಶುಕ್ಲರೂಪವತ್ತ್ವಮೇವೇತಿಕುತಃ, ಕಾಲಿಂದೀಜಲಾದೌ ನೀಲಿಮೋಪಲಬ್ಧೇರಿತಿ ಚೇನ್ನ, ನೀಲಜನಕತಾವಚ್ಛೇದಿಕಾಯಾಃ ಪೃಥಿವೀತ್ವಜಾತೇರಭಾವಾಜ್ಜಲೇ ನೀಲರೂಪಾ

ಸಂಭವಾತ್ । ಕಾಲಿಂದೀಜಲೇ ನೀಲತ್ವಪ್ರತೀತಿರಾಶ್ರಯೌಪಾಧಿಕೀ । ಅತ ಏವ ವಿಯತಿ ವಿಕ್ಷೇಪೇ ಧವಲಿಮೋಪಲಬ್ಧಿಃ ।

ಜಲದಲ್ಲಿ ಕೇವಲ ಮಧುರರಸವಿರುತ್ತದೆ. ಮಧುರರಸವುಳ್ಳದ್ದು ಜಲವೆಂದು ಲಕ್ಷಣ ಹೇಳಿದರೆ ಕಲ್ಲುಸಕ್ಕರೆ ಮುಂತಾದ ಪೃಥಿವಿಯಲ್ಲಿ ಅತಿವ್ಯಾಪ್ತಿ ಬರುತ್ತದೆ. ಅದಕ್ಕೋಸ್ಕರ ಜಾತಿಘಟಿತಲಕ್ಷಣ ಮಾಡುತ್ತಾನೆ. 'ತಿಕ್ತರ'—ಇತಿ. ತಿಕ್ತರಸವತೀ —ಕಹಿರಸವುಳ್ಳದ್ದು ಪೃಥಿವೀ. ತಸ್ಯಾಂ ಅವೃತ್ತಿರ್ಯಾ ಮಧುರರಸವತಿ(ಜಲೇ) ವೃತ್ತಿಃ (ವರ್ತನಂ) ಯಸ್ಯಾಃ ಸಾ—ಆ ಪೃಥಿವಿಯಲ್ಲಿ ಇಲ್ಲದೆ ಮಧುರರಸವುಳ್ಳ ಜಲದಲ್ಲಿರುವ ಜಾತಿ. ಅದು ದ್ರವ್ಯತ್ವದಿಂದ ಸಾಕ್ಷಾತ್ವ್ಯಾಪ್ಯವಾಗಿರಬೇಕು. ಅಂದರೆ ಅದು ಜಲತ್ವವೇ ಆಗಿರುತ್ತದೆ. ಸಕ್ಕರೆ ಮುಂತಾದವುಗಳಲ್ಲಿ ಮಧುರಸವಿದ್ದರೂ ಅದರಲ್ಲಿ ತಿಕ್ತರಸವದ ವೃತ್ತಿ ಜಾತಿ ಇಲ್ಲ. ತಿಕ್ತರಸವದ್ವೃತ್ತಿಯಾದ ಪೃಥಿವೀತ್ವ ಜಾತಿಯೇ ಅಲ್ಲಿ ಇರುತ್ತದೆ. ಆದುದರಿಂದ ಅತಿವ್ಯಾಪ್ತಿ ಇಲ್ಲ. ಹೀಗೆಯೇ 'ಶೀತಸ್ಪರ್ಶವತ್ತ್ವಂ' ಎಂಬುದಕ್ಕೂ ಅತಿ ವ್ಯಾಪ್ತಿವಾರಣೆಗೋಸ್ಕರ ಜಾತಿಘಟಿತಲಕ್ಷಣ ಪರಿಷ್ಕಾರ ಮಾಡಬೇಕು. ಶೀತೇತರ ಸ್ಪರ್ಶವತೀ—ಪೃಥಿವೀ, ಅಲ್ಲಿ ಇಲ್ಲದ, ಸ್ಪರ್ಶವದ್ವೃತ್ತಿಯಾದ ಜಾತಿಯೆಂದರೆ ಹಿಂದಿ ನಂತೆ ಜಲತ್ವಜಾತಿ. ಅದು ಉಳ್ಳದ್ದು ಜಲ.

ನೀರಿನಲ್ಲಿ ಶುಕ್ಲರೂಪ ಮಾತ್ರ ಇದೆಯೆಂಬುದು ಹೇಗೆ? ಇತರ ರೂಪಗಳೂ ತೋರುವುದರಿಂದ ಹಿಂದೆ ಹೇಳಿರುವುದು ಸರಿಯಲ್ಲವೆಂದು ಪೂರ್ವಪಕ್ಷಿಯು ಶಂಕಿಸು ತ್ತಾನೆ. 'ನನು'—ಇತಿ. ಯಮುನೆಯ ನೀರು ಕಪ್ಪಾಗಿ ತೋರುವುದರಿಂದ ನೀಲ ರೂಪವೂ ಇದೆಯೆಂದು ಅಂಗೀಕರಿಸಬೇಕು; ಎಂದು ಶಂಕಿಸಿದರೆ ಸಮಾಧಾನ ತೋರಿಸು ತ್ತಾನೆ. 'ಚೇನ್ನ'—ಇತಿ. ಜಲದಲ್ಲಿ ನೀಲರೂಪವಿಲ್ಲ. ಏಕೆಂದರೆ ನೀಲರೂಪ ಜನಕತಾವಚ್ಛೇದಕವಾದ ಪೃಥಿವೀತ್ವವು ಅಲ್ಲಿಲ್ಲ. ನೀಲರೂಪನಿಷ್ಠಾಯಾ ಜನ್ಯತಾ— ಕಾರ್ಯತಾ. ತಾದೃಶಕಾರ್ಯತಾನಿರೂಪಿತಾ ಯಾ ಕಾರಣತಾ — ಪೃಥಿವೀನಿಷ್ಠಾ ಕಾರಣತಾ, ತದವಚ್ಛೇದಕಂ ಪೃಥಿವೀತ್ವಂ. ಇದು ಜಾತಿ ಈ ಜನಕತಾವಚ್ಛೇದಕ ವಾದ ಪೃಥಿವೀತ್ವಜಾತಿಯು ಜಲದಲ್ಲಿಲ್ಲದಿರುವುದರಿಂದ ನೀಲರೂಪವೂ ಇಲ್ಲ. ನೀಲ ರೂಪಕ್ಕೆ ಕಾರಣ ಪೃಥಿವೀ. ಹಾಗಾದರೆ ಯಮುನೆಯ ನೀರಲ್ಲಿ ನೀಲರೂಪ ತೋರು ವುದು ಹೇಗೆ? ಅಂದರೆ ಆಶ್ರಯೋಪಾಧಿಯಿಂದ ಅಲ್ಲಿ ನೀಲರೂಪ ತೋರುತ್ತದೆ. ಸ್ವಸ ಮವಾಯಿಸಂಯೋಗ ಸಂಬಂಧದಿಂದ ಪೃಥಿವಿಯಲ್ಲಿರುವ ನೀಲರೂಪವು ಅಲ್ಲಿ ತೋರು ತ್ತದೆ. ಸ್ವಂ—ನೀಲರೂಪ ಅದರ ಸಮವಾಯಿ ಅಂದರೆ ಪೃಥಿವೀ ಅದರ ಸಂಯೋಗ ನೀರಿಗಿರುವುದರಿಂದ ನೀರು ಕಪ್ಪಾಗಿ ತೋರುತ್ತದೆ, ನೀರಿನಲ್ಲಿ ಸ್ವಾಭಾವಿಕವಾದ ನೀಲ ರೂಪವಿಲ್ಲ. 'ಅತಏವ'—ಇತಿ. ಸ್ವಾಭಾವಿಕ ನೀಲರೂಪವಿಲ್ಲದಿರುವುದರಿಂದ ಯಮು ನೆಯ ನೀರನ್ನು ಮೇಲೆ ಆಕಾಶಕ್ಕೆ ಚಲ್ಲಿದರೆ ಬೆಳ್ಳಗಾಗಿಯೇ ತೋರುತ್ತದೆ. ಹರಿಯು

ವಾಗ ಕೆಳಗಿನ ಮಣ್ಣು ಕಪ್ಪಾದುದರಿಂದ ಅದರ ಮೇಲೆ ಹರಿಯುವುದರಿಂದ ನೀರೂ ಕಪ್ಪಾಗಿ ತೋರುತ್ತದೆ.

ಅಥ ಜಲೇ ಮಾಧುರ್ಯೇ ಕಿಂ ಮಾನಮ್, ನಹಿ ಪ್ರತ್ಯಕ್ಷೇಣ ಕೋऽಪಿರಸಸ್ತತ್ರಾನುಭೂಯತೇ ॥ ನ ಚ ನಾರಿಕೇಲಜಲಾದೌ ಮಾಧುರ್ಯಮುಪಲಭ್ಯತ ಏವೇತಿ ವಾಚ್ಯಮ್, ತಸ್ಯಾಶ್ರಯೌಪಾಧಿಕತ್ವಾತ್ । ಅನ್ಯಥಾ ಜಂಬೀರರಸಾದಾವಾಮ್ಲಾದ್ಯುಪಲಬ್ಧೇರಾಮ್ಲಾದಿಮತ್ತ್ವಮಪಿ ಸ್ಯಾದಿತಿ ಚೇನ್ನ, ಹರೀತಕ್ಯಾದಿಭಕ್ಷಣಸ್ಯ ಜಲರಸವ್ಯಂಜಕತ್ವಾತ್ । ನ ಚ ಹರೀತಕ್ಯಾಮೇವ ಜಲೋಷ್ಮಸಂಯೋಗಾದ್ರಸಾಂತರೋತ್ಪತ್ತಿರಿತಿ ವಾಚ್ಯಮ್, ಕಲ್ಪನಾ ಗೌರವಾತ್ । ಪೃಥಿವೀತ್ವಸ್ಯಾಮ್ಲಾದಿಜನಕತಾವಚ್ಛೇದಕತ್ವಾಚ್ಚ ಜಲೇ ನಾಮ್ಲಾದಿಕಮ್ । ಜಂಬೀರರಸಾದೌ ತ್ವಾಶ್ರಯೌಪಾಧಿಕೀ ತಥಾ ಪ್ರತೀತಿಃ । ಏವಂ ಜನ್ಯಶೀತಸ್ಪರ್ಶಜನಕತಾವಚ್ಛೇದಕಂ ಜನ್ಯಜಲತ್ವಮ್, ತದವಚ್ಛಿನ್ನಜನಕತಾವಚ್ಛೇದಕಂ ತು ಜಲತ್ವಂ ಬೋಧ್ಯಮ್ । ಘೃಷ್ಟಚಂದನಾದೌ ತು ಶೈತ್ಯೋಪಲಬ್ಧಿಶ್ಚಂದನಾಂತರ್ವರ್ತಿಶೀತತರಸಲಿಲಸ್ಯೈವ । ತೇಜಸಂಯೋಗಾಜ್ಜಲೇ ಉಷ್ಣಪ್ರತೀತಿರೌಪಾಧಿಕೀ ಸ್ಫುಟೈವ । ತತ್ರ ಪಾಕಾಸಂಭವಾತ್ ॥

ಜಲದಲ್ಲಿ ಮಧುರರಸವಿದೆಯೆಂಬುದರಲ್ಲಿ ಪ್ರಮಾಣವೇನೆಂದು ಆಶಂಕಿಸಿ ಸಮಾಧಾನ ಹೇಳುತ್ತಾನೆ. 'ಅಥ'—ಇತಿ. ನೀರಿನಲ್ಲಿ ಮಧುರರಸವಿದೆಯೆಂಬುದರಲ್ಲಿ ಪ್ರಮಾಣವೇನು ? ಪ್ರತ್ಯಕ್ಷದಿಂದ (ರಾಸನ) ಜಲದಲ್ಲಿ ಯಾವ ರಸವೂ ತಿಳಿಯುವುದಿಲ್ಲ. ದ್ರಾಕ್ಷಿ, ಕಬ್ಬು, ಎಳೆನೀರು ಮುಂತಾದವುಗಳಲ್ಲಿ ಮಾಧುರ್ಯತೋರುವುದರಿಂದ ಮಧುರ ರಸ ಇದೆಯೆಂದರೆ ಅದು ಆಶ್ರಯೌಪಾಧಿಕವೆನ್ನುತ್ತಾರೆ. ಹಿಂದಿನಂತೆ ಸ್ವಸಮವಾಯಿ ಸಂಯೋಗಸಂಬಂಧದಿಂದ ಪಾರ್ಥಿವಭಾಗದಲ್ಲಿರುವ ಮಧುರರಸವೇ ಜಲದಲ್ಲಿರುತ್ತದೆ. ಸ್ವಂ—ಮಧುರರಸ. ಅದರ ಸಮವಾಯ ಪೃಥಿವೀಭಾಗ. ಅದರ ಸಂಯೋಗ ಜಲಕ್ಕೆ ಇದೆ. ಸ್ವಾಭಾವಿಕಮಾಧುರ್ಯ ಜಲದಲ್ಲಿ ಇಲ್ಲ. ಈ ವಿಷಯದಲ್ಲಿಯೇ ಪರಪಕ್ಷದಲ್ಲಿ ಬಾಧಕವನ್ನು ತೋರಿಸುತ್ತಾ ಸ್ವಪಕ್ಷಸಾಧಕತರ್ಕವನ್ನು ತೋರಿಸುತ್ತಾನೆ. 'ಅನ್ಯಥಾ—' ಇತಿ. ಆಶ್ರಯೌಪಾಧಿಕವೆಂದು ಒಪ್ಪದಿದ್ದರೆ ನಿಂಬೆಯರಸದಲ್ಲಿ ಹುಳಿಯೂ ಉಪಲಬ್ಧವಾಗುವುದರಿಂದ ನೀರಿನಲ್ಲಿ ಹುಳಿಯೂ ಇದೆಯೆಂದು ಒಪ್ಪಬೇಕಾಗುತ್ತದೆ. ಹೀಗೆ ಆಕ್ಷೇಪಿಸಬಾರದೆಂದು ತೋರಿಸುತ್ತಾನೆ. 'ಚೇನ್ನ—' ಇತಿ. ಅಳಲೇಕಾಯಿಯ ಭಕ್ಷಣವು ಜಲದಲ್ಲಿರುವ ಮಾಧುರ್ಯರಸಕ್ಕೆ ಅಭಿವ್ಯಂಜಕವಾಗುತ್ತದೆ. ನೀರಿನಲ್ಲಿ ಅನುದ್ಭೂತವಾದ ಮಧುರರಸವಿರುತ್ತದೆ. ಅಳಲೇಕಾಯಿಯನ್ನಾಗಲೀ ನೆಲ್ಲೀಕಾಯಿಯನ್ನಾಗಲೀ ತಿಂದರೆ ಆಗ ನಾಲಿಗೆಯಲ್ಲಿರುವ ದೋಷವಾರಣೆಯಾಗಿ ಅದರಿಂದ ನೀರಿನಲ್ಲಿರುವ ಮಧುರರಸವು ಸ್ಪಷ್ಟವಾಗಿ ತಿಳಿಯುತ್ತದೆ. ಇದ್ದುದನ್ನು ವ್ಯಕ್ತಪಡಿಸುವುದೇ ಅಭಿವ್ಯಂಜಕ. ಹರೀತಕಿಯು ಜಲದಲ್ಲಿರುವ ಮಾಧುರ್ಯಕ್ಕೆ ಅಭಿವ್ಯಂಜಕವಾಗುತ್ತದೆ.

'ನಚ'—ಎಂಬುದರಿಂದ ಆಶಂಕಿಸಿ ಸಮಾಧಾನ ತೋರಿಸುತ್ತಾನೆ. ಹರೀತಕಿಯಲ್ಲಿಯೇ ನೀರು ಮತ್ತು ಸೆಖೆಯ ಸಂಯೋಗದಿಂದ ಮಾಧುರ್ಯರಸವುಂಟಾಗುತ್ತದೆಂದು ಏಕೆ ಹೇಳಬಾರದು ? ಎಂದು ಶಂಕಿಸುವವನ ಅಭಿಪ್ರಾಯ. ಅದು ಹರೀತಕಿಯ ರಸವಲ್ಲದೆ ಜಲದ ಮಧುರರಸವಲ್ಲವೆಂದು ಅವರ ಮತ.

ಇದು ಕಲ್ಪನಾಗೌರವವೆಂದು ಸಿದ್ಧಾಂತಿಯ ಮತ. ಹರೀತಕಿಯಲ್ಲಿಯೇ ರಸಾಂತರೋತ್ಪತ್ತಿಯನ್ನಂಗೀಕರಿಸಿದರೆ ಗೌರವ ಬರುತ್ತದೆ. ಫಲಾದಿಗಳಲ್ಲಿ ಪೂರ್ವರಸನಾಶವಾಗಿ ರಸಾಂತರಹುಟ್ಟಬೇಕಾದರೆ ವಿಲಕ್ಷಣತೇಜಃಸಂಯೋಗರೂಪ ಪಾಕವಿಶೇಷವು ಕಾರಣ ಈಗ ಹರೀತಕೀ ದೃಷ್ಟಾಂತದಿಂದ ಪಾಕವಲ್ಲದೆ ಜಲಸಂಯೋಗವೂ ಕಾರಣವೆಂದು ಅಧಿಕಕಾರ್ಯಕಾರಣಭಾವವನ್ನು ಒಪ್ಪಬೇಕಾಗುತ್ತದೆ. ತೇಜಃ ಸಂಯೋಗ, ಜಲಸಂಯೋಗ ಹೀಗೆ ಎರಡು ಕಾರಣಗಳನ್ನು ಒಪ್ಪಬೇಕಾಗುವುದರಿಂದ ಗೌರವ. ಜಲದಲ್ಲಿರುವ ಮಧುರರಸಕ್ಕೇ ಅಭಿವ್ಯಂಜಕವಾದದ್ದು ಹರೀತಕೀ ಎಂದರೆ ಆಗ ಗೌರವವಿಲ್ಲ. ಆದುದರಿಂದ ಜಲದಲ್ಲಿ ಅವ್ಯಕ್ತವಾದ ಮಧುರರಸ ಇದ್ದೇ ಇದೆ. ಅದು ಹರೀತಕ್ಯಾದಿ ಅಭಿವ್ಯಂಜಕ ಸಾಮಗ್ರಿಗಳಿಂದ ಅಭಿವ್ಯಕ್ತವಾಗುತ್ತದೆ ಎಂದು ತಿಳಿಯಬೇಕು.

ಜಲದಲ್ಲಿ ಮಧುರರಸವಿರುವುದಾದರೆ ನಿಂಬೆಯರಸದಲ್ಲಿ ಹುಳಿಯು ಪ್ರತ್ಯಕ್ಷವಾಗಿ ತೋರುವಾಗ ನೀರಿನಲ್ಲಿ ಹುಳಿ ಇಲ್ಲವೆಂದು ಅಪಲಾಪ ಮಾಡುವುದು ಹೇಗೆ ? ಅಂದರೆ ಅದಕ್ಕೆ ಸಮಾಧಾನ ಹೇಳುತ್ತಾನೆ. 'ಪೃಥಿವೀತ್ವಸ್ಯ'—ಇತಿ. "ಆಮ್ಲರಸನಿಷ್ಠಜನ್ಯತಾನಿರೂಪಿತಾ ಯಾ ಪೃಥಿವಿನಿಷ್ಠಾ ಜನಕತಾ. ತದವಚ್ಛೇದಕಂ ಪೃಥಿವೀತ್ವಂ". ಇದು ಜಲದಲ್ಲಿ ಇಲ್ಲದಿರುವುದರಿಂದ ಜಲದಲ್ಲಿ ಅದರ ಕಾರ್ಯವಾದ ಹುಳಿರಸವೂ ಇಲ್ಲ. ಅದು ಜಲತ್ವ ಸಮಾನಾಧಿಕರಣವಲ್ಲ. ಜಲತ್ವ ಇದ್ದಲ್ಲಿ ಇರುವ ಗುಣವಲ್ಲ. ಪೃಥಿವೀತ್ವ ಇದ್ದಲ್ಲಿ ಇರುವ ಗುಣ. ಹಿಂದಿನಂತೆ ಸ್ವಸಮವಾಯಿ ಸಂಯೋಗ ಸಂಬಂಧದಿಂದ ಪೃಥಿವಿಯಲ್ಲಿರುವ ಆಮ್ಲರಸವು ಜಲದಲ್ಲಿ ತೋರುವುದರಿಂದ ಔಪಾಧಿಕವಾಗುತ್ತದೆ. ಆಶ್ರಯೋಪಾಧಿಯಿಂದ ನೀರಿನಲ್ಲಿ ಹುಳಿ ತೋರುತ್ತದೆ.

ಜಲತ್ವ ಜಾತಿ ಸಿದ್ಧಿಯಲ್ಲಿ ಪ್ರಮಾಣಾಂತರವನ್ನು ತೋರಿಸುತ್ತಾನೆ. 'ಏವಂಚ'—ಇತಿ. 'ಜನ್ಯಶೀತಸ್ಪರ್ಶನಿಷ್ಠಜನ್ಯತಾನಿರೂಪಿತಾ ಯಾ ಜನಕತಾ ಸಾ—ಕಿಂಚಿದ್ಧರ್ಮಾವಚ್ಛಿನ್ನಾ—ಕಾರಣತಾತ್ವಾತ್. ದಂಡನಿಷ್ಠಕರಣತಾವತ್., ಈ ಅನುಮಾನದಿಂದ ಅವಚ್ಛೇದಕರೂಪವಾಗಿ ಜನ್ಯಜಲತ್ವಸಿದ್ಧವಾದ ಮೇಲೆ—ಜನ್ಯಜಲತ್ವಾವಚ್ಛಿನ್ನಕಾರ್ಯತಾನಿರೂಪಿತ ಕಾರಣತಾವಚ್ಛೇದಕರೂಪವಾಗಿ ಶುದ್ಧ ಜಲತ್ವವು ಸಿದ್ಧವಾಗುತ್ತದೆ. ನಿರವಚ್ಛಿನ್ನಜನಕತಾ ಎಲ್ಲಿಯೂ ಇರುವುದಿಲ್ಲ. ಶೀತಸ್ಪರ್ಶವುಳ್ಳದ್ದು ಜಲವೆಂದರೆ ಚಂದನಾದಿಪೃಥಿವಿಯಲ್ಲಿಯೂ ಶೀತಸ್ಪರ್ಶ ಉಪಲಬ್ಧವಾಗುವುದರಿಂದ ಲಕ್ಷಣವು ಅತಿವ್ಯಾಪ್ತವಾಗುತ್ತದೆಂದು ಶಂಕಿಸುತ್ತಾನೆ. 'ಘೃಷ್ಟ'—ಇತಿ. ಚನ್ನಾಗಿ ತೇದ ಗಂಧದಲ್ಲಿ ಶೈತ್ಯ ಉಪಲಬ್ಧವಾದರೂ ಅದು ವಾಸ್ತವವಾಗಿ ಗಂಧದ ಶೈತ್ಯವಲ್ಲ. ತೇದ ಗಂಧದ ಮಧ್ಯದಲ್ಲಿರುವ ನೀರಿನ ಕಣಗಳ ಶೈತ್ಯವೇ ಅದು. ಸ್ವಸಮವಾಯಿಸಂಯೋಗಸಂಬಂಧ

ದಿಂದ ಜಲಗತ ಶೀತ ಸ್ಪರ್ಶವು ಗಂಧದಲ್ಲಿ ತೋರುವುದರಿಂದ ಗಂಧ ಶೀತವೆಂದು ತೋರುತ್ತದೆ. ಹೀಗೆ ನೀರಿನಲ್ಲಿ ಶೀತಸ್ಪರ್ಶ ಒಂದಲ್ಲವೆ ಉಷ್ಣಾದಿಸ್ಪರ್ಶಗಳಿಲ್ಲ. ಎಲ್ಲಿಯಾದರೂ ಬಿಸಿ ತೋರುವುದಾದರೆ ಅದು ನೀರಿನ ಗುಣವಲ್ಲ. ತೇಜಃ ಸಂಯೋಗದಿಂದ ಜಲವಲ್ಲಿ ಉಷ್ಣವು ಪ್ರತೀತವಾಗುವುದರಿಂದ ಹಿಂದಿನಂತೆ ಆಶ್ರಯೋಪಾಧಿಕವಾಗಿದೆ. ಜಲದಲ್ಲಿ ಪಾಕವಿಲ್ಲ. ತೇಜಃ ಕಣಗಳಲ್ಲಿರುವ ಬಿಸಿಯು ತೇಜಃ ಕಣಸಂಯೋಗದಿಂದ ಜಲದಲ್ಲಿ ತೋರುತ್ತದೆ.

ಸ್ನೇಹಸ್ತತ್ರೇತಿ । ಘೃತಾದಾವಪಿ ತದಂತರ್ವರ್ತಿ ಜಲಸ್ಯೈವ ಸ್ನೇಹಃ, ಜಲಸ್ಯ ಸ್ನೇಹ ಸಮವಾಯಿಕಾರಣತ್ವಾತ್ । ತೇನ ಜಲೇ ಏವ ಸ್ನೇಹ ಇತಿ ಮಂತವ್ಯಮ್ । ದ್ರವ್ಯತ್ವಮಿತಿ । ಸಾಂಸಿದ್ಧಿಕದ್ರವತ್ವತ್ವಂ ಜಾತಿವಿಶೇಷಃ ಪ್ರತ್ಯಕ್ಷಸಿದ್ಧಃ, ತದವಚ್ಛಿನ್ನ ಜನಕತಾವಚ್ಛೇದಕಮಪಿ ತದೇವೇತಿ ಭಾವಃ । ತೈಲಾದಾವಪಿ ಜಲಸ್ಯ ದ್ರವತ್ವಂ ಸ್ನೇಹಪ್ರಕರ್ಷೇಣ ಚ ದಹನಾನುಕೂಲ್ಯಮಿತಿ ವಕ್ಷ್ಯತಿ ॥ ೩೯ ॥

ಸ್ನೇಹಗುಣವುಳ್ಳದ್ದು ಜಲ. ತುಪ್ಪದಲ್ಲಿ ಸ್ನೇಹ ತೋರಿದರೂ ಅದು ವಾಸ್ತವಿಕವಾಗಿ ಅದರ ಗುಣವಲ್ಲ. ತುಪ್ಪದಮಧ್ಯದಲ್ಲಿರುವ ಜಲಸ್ನೇಹವೇ ತುಪ್ಪದಲ್ಲಿ ತೋರುವುದರಿಂದ ಹಿಂದಿನಂತೆ ಆಶ್ರಯೌಪಾಧಿಕವಾಗಿದೆ. ಸ್ನೇಹಕ್ಕೆ ಸಮವಾಯಿಕಾರಣವೇ ಜಲವೆಂದು ಹಿಂದೆ ಹೇಳಿದೆ. ಸ್ವಸಮವಾಯಿಸಂಯೋಗಸಂಬಂಧದಿಂದ ಸ್ನೇಹವು ತುಪ್ಪದಲ್ಲಿದೆ. ಆದುದರಿಂದ ನೀರಿನಲ್ಲಿ ಮಾತ್ರ ಸ್ನೇಹವಿರುವುದು. ಪೃಥಿವ್ಯಾದಿಗಳಲ್ಲಿಲ್ಲ. ಸಾಂಸಿದ್ಧಿಕದ್ರವತ್ವವುಳ್ಳದ್ದು ಜಲ. ಸಾಂಸಿದ್ಧಿಕ ದ್ರವತ್ವತ್ವವು ಜಾತಿ. ಸಾಂಸಿದ್ಧಿಕ ದ್ರವತ್ವತ್ವಾವಚ್ಛಿನ್ನಾಸಾಂಸಿದ್ಧಿಕದ್ರವತ್ವನಿಷ್ಠಜನ್ಯತಾ ನಿರೂಪಿತಾ ಯಾ ಜನಕತಾ, ತಾದೃಶಜನಕತಾವಚ್ಛೇದಕಂಜಲತ್ವಮ್. ಹೀಗೆ ಜಲತ್ವಜಾತಿಯು ಹಿಂದಿನಂತೆ ಸಿದ್ಧವಾಗುತ್ತದೆ. ನೀರಿನಗುಣವು ಸ್ನೇಹವಾದರೆ ಎಣ್ಣೆಯಲ್ಲಿ ಆಶ್ರಯೋಪಾಧಿಯಿಂದ ಸ್ನೇಹ ತೋರುವುದಾದರೆ ಎಣ್ಣೆಯಿಂದ ದೀಪ ಉರಿಯುವುದು ಹೇಗೆ ? ಎಂಬ ಶಂಕೆಗೆ ಸಮಾಧಾನ ತೋರಿಸುತ್ತಾನೆ. 'ತೈಲಾದಾವಪಿ'—ಇತಿ. ತೈಲದಲ್ಲಿ ದಹನಾನುಕೂಲವಾದ ಪ್ರಕೃಷ್ಟ ಸ್ನೇಹವಿದೆ. ದಹನಪ್ರತಿಕೂಲಧರ್ಮವಾದ ದ್ರವತ್ವವು ಅಲ್ಪವಾಗಿದೆ. ಆದುದರಿಂದ ಯಾವ ದೋಷಕ್ಕೂ ಅವಕಾಶವಿಲ್ಲ. ಇದನ್ನು ವಿವರವಾಗಿ ಸ್ನೇಹರೂಪಗುಣ ನಿರೂಪಣದಲ್ಲಿ ಹೇಳುತ್ತಾನೆ. ॥ ೩೯ ॥

**ನಿತ್ಯತಾದಿ ಪ್ರಥಮವತ್ಕಿಂತು ದೇಹಮಯೋನಿಜಮ್ ॥**
**ಇಂದ್ರಿಯಂ ರಸನಂ ಸಿಂಧುರ್ಹಿಮಾದಿರ್ವಿಷಯೋಮತಃ ॥ ೪೦ ॥**

ಪ್ರಥಮವದಿತಿ ॥ ಪೃಥಿವ್ಯಾ ಇವೇತ್ಯರ್ಥಃ । ತಥಾಹಿ—ಜಲಂ ದ್ವಿವಿಧಂ ನಿತ್ಯಮನಿತ್ಯಞ್ಚ । ಪರಮಾಣುರೂಪಂ ನಿತ್ಯಂ, ದ್ವ್ಯಣುಕಾದಿಕಂ ಸರ್ವಮನಿತ್ಯಮವಯವ

ಸಮವೇತಂ ಚ । ಅನಿತ್ಯಮಪಿ ತ್ರಿವಿಧಂ ಶರೀರೇಂದ್ರಿಯ ವಿಷಯಭೇದಾತ್ । ಪೃಥಿವೀತೋ ಯೋ ವಿಶೇಷಸ್ತಮಾಹ । ಕಿಂತ್ವಿತಿ ! ದೇಹಮಯೋನಿಜಮ್ ಅಯೋನಿಜಮೇವೇತ್ಯರ್ಥಃ । ಜಲೀಯಂ ಶರೀರಂವರುಣಲೋಕೇ ಪ್ರಸಿದ್ಧಮ್॥

ನಿತ್ಯಾನಿತ್ಯತ್ವಭೇದಗಳು ಪೃಥಿವಿಯಂತೆಯೇ ತಿಳಿಯಬೇಕು. ಅದನ್ನೇ ತೋರಿಸುತ್ತಾನೆ. 'ಜಲಂ'—ಇತಿ. ನಿತ್ಯ ಅನಿತ್ಯವೆಂದು ಜಲವು ಎರಡು ವಿಧ. ಜಲ ಪರಮಾಣು ನಿತ್ಯ. ಜಲದ್ವ್ಯಣುಕಾದಿಗಳು ಅನಿತ್ಯ. ಇವು ಯಾವಾಗಲೂ ತಮ್ಮ ಅವಯವಗಳಲ್ಲಿ ಸಮವಾಯ ಸಂಬಂಧದಿಂದ ಇರುತ್ತವೆ. ಅನಿತ್ಯವೂ ಮೂರುವಿಧ. ಪೃಥಿವಿಗಿಂತ ಇಲ್ಲಿ ವಿಶೇಷ ಹೇಳಲು 'ಕಿಂತು' ಎಂದು ಆರಂಭಿಸಿದ್ದಾನೆ. ಇಲ್ಲಿ ಶರೀರವು ಕೇವಲ ಅಯೋನಿಜವಾಗಿರುತ್ತದೆ. ಜಲೀಯ ಶರೀರವಾದರೂ ಪಾರ್ಥಿವ ಭಾಗದಿಂದ ಕೂಡಿಯೇ ಇರುವುದರಿಂದ ಭೋಗಾಯತನವಾಗುತ್ತದೆ. ಜಲೀಯಭಾಗ ಅರ್ಧವಾದರೆ ಇತರ ನಾಲ್ಕರ ಎಂಟನೆಯ ಒಂದು ಭಾಗ ಸೇರಿರುತ್ತದೆ. ಇತರ ಶರೀರಗಳಲ್ಲಿಯೂ ಹೀಗೆಯೇ ತಿಳಿಯಬೇಕು. ಈ ಶರೀರವು ವರುಣನ ಲೋಕ (ಜಲಾಭಿಮಾನಿದೇವತೆ) ಹಲ್ಲಿ ಪ್ರಸಿದ್ಧವಾಗಿರುತ್ತದೆ.

ಇಂದ್ರಿಯಮಿತಿ । ಜಲೀಯಮಿತ್ಯರ್ಥಃ । ತಥಾಹಿ—ರಸನಂ ಜಲೀಯಂ ಗಂಧಾದ್ಯವ್ಯಂಜಕತ್ವೇ ಸತಿ ರಸವ್ಯಂಜಕತ್ವಾತ್ । ಸಕ್ತುರಸಾಭಿವ್ಯಂಜಕೋದಕವತ್ । ರಸನೇಂದ್ರಿಯಸನ್ನಿಕರ್ಷೇ ವ್ಯಭಿಚಾರವಾರಣಾಯ ದ್ರವ್ಯತ್ವಂ ದೇಯಮ್ । ವಿಷಯಂ ದರ್ಶಯತಿ—ಸಿಂಧುರಿತಿ । ಸಿಂಧುಃ ಸಮುದ್ರಃ । ಹಿಮಂ ತುಷಾರಃ । ಆದಿಪದಾತ್ ಸರಿತ್ಕಾಸಾರಕರಕಾದಿಃ ಸರ್ವೋಽಪಿ ಗ್ರಾಹ್ಯಃ । ನಚ ಹಿಮಕರಕಯೋಃ ಕಠಿನತ್ವಾತ್ ಪಾರ್ಥಿವತ್ವಮಿತಿ ವಾಚ್ಯಮ್, ಊಷ್ಮಣಾ ವಿಲೀನಸ್ಯ ತಸ್ಯ ಜಲತ್ವಸ್ಯ ಪ್ರತ್ಯಕ್ಷಸಿದ್ಧತ್ವಾತ್ । ಯದ್‌ದ್ರವ್ಯಂ ಯದ್ದ್ರವ್ಯಧ್ವಂಸಜನ್ಯಂ ಇತಿ ವ್ಯಾಪ್ತೇರ್ಜಲೋಪಾದಾನೋಪಾದೇಯತ್ವಸಿದ್ಧೇಃ । ಅದೃಷ್ಟ ವಿಶೇಷೇಣ ದ್ರವತ್ವ ಪ್ರತಿರೋಧಾತ್ಕರಕಾಯಾಃ ಕಾಠಿಣ್ಯಪ್ರತ್ಯಯಸ್ಯ ಭ್ರಾಂತಿತ್ವಾತ್

ರಸನೇಂದ್ರಿಯವು ಜಲಸಂಬಂಧಿಯಾಗಿರುತ್ತದೆ. ಇದು ಜಲೀಯವೆಂಬುದರಲ್ಲಿ ಅನುಮಾನಪ್ರಮಾಣ ತೋರಿಸುತ್ತಾನೆ. 'ರಸನಂ'—ಇತಿ. ರಸನಂ—ಜಲೀಯಂ—ಗಂಧಾದ್ಯವ್ಯಂಜಕತ್ವೇ ಸತಿ ರಸವ್ಯಂಜಕತ್ವಾತ್ । ಸಕ್ತುರಸಾಭಿವ್ಯಂಜಕೋದಕವತ್. ಇದು ದೃಷ್ಟಾಂತ. ಯದ್ ಗಂಧಾದ್ಯವ್ಯಂಜಕತ್ವೇ ಸತಿ ರಸವ್ಯಂಜಕಂ ತತ್ ಜಲೀಯಮ್. ಯಥಾ ಸಕ್ತುರಸಾಭಿವ್ಯಂಜಕಮ್ ಉದಕಂ ಜಲೀಯಮ್ ॥ ಯಾವುದು ಗಂಧಾದಿಗಳನ್ನು ವ್ಯಕ್ತಪಡಿಸದೆ ಕೇವಲ ರಸವನ್ನು ವ್ಯಕ್ತಪಡಿಸುವುದೋ ಅದು ಜಲೀಯವಾಗುತ್ತದೆ. ನೀರಿನ ಸ್ವಭಾವವೇ ರಸವನ್ನು ಅಭಿವ್ಯಕ್ತಪಡಿಸುವುದು. ಸಕ್ತುವಿಗೆ (ಹುರಿಹಿಟ್ಟು) ನೀರು ಹಾಕಿ ಕಲಿಸಿದರೆ ಆಗ ಅಲ್ಲಿರುವ ರಸವು ವ್ಯಕ್ತವಾಗಿ ತೋರುತ್ತದೆ.

ಅದರಂತೆ ರಸನೇಂದ್ರಿಯವು ಗಂಧಾದಿಗಳನ್ನು ತೋರಿಸಿಕೊಡದೆ ಕೇವಲ ರಸವನ್ನು ವ್ಯಕ್ತ ಪಡಿಸುವುದರಿಂದ ಜಲೀಯವಾಗುತ್ತದೆ. ಕೇವಲ ರಸವ್ಯಂಜಕವೆಂದರೆ ಮನಸ್ಸಿನಲ್ಲಿ ಅತಿ ವ್ಯಾಪ್ತಿ ಬರುತ್ತದೆ. ಅದಕ್ಕೋಸ್ಕರ 'ಗಂಧಾದ್ಯವ್ಯಂಜಕತ್ವೇಸತಿ' ಎಂದಿದೆ. ಮನಸ್ಸು ಗಂಧಾಧಿಗಳನ್ನೂ ತೋರಿಸಿಕೊಡುತ್ತದೆ.

ಸಮುದ್ರಾದಿಗಳು ವಿಷಯರೂಪ ಜಲಗಳಾಗುತ್ತವೆ. ಕರಕವೆಂದರೆ ಮಂಜುಗಡ್ಡೆ. ಕಾಠಿಣ್ಯಗುಣವುಳ್ಳವುಗಳು ಪೃಥಿವಿಯಾಗುವುದರಿಂದ ಕರಕದಲ್ಲಿ ಕಾಠಿಣ್ಯವಿರುವುದರಿಂದ ಜಲವೆಂದು ಹೇಗೆ ತಿಳಿಯುವುದು ಎಂಬ ಶಂಕೆಗೆ ಸಮಾಧಾನ ತೋರಿಸುತ್ತಾನೆ. 'ಊಷ್ಮಣಾ'—ಬಿಸಿಯಿಂದ ಅದು ಕರಗಿದರೆ ನೀರೆಂದು ಅದು ತಾನಾಗಿ ತಿಳಿಯುತ್ತದೆ. ಕರಗಿದಾಗ ನೀರಾದಮೇಲೆ ಗಟ್ಟಿಯಾಗಿರುವಾಗಲೂ ಜಲವೇ ಆಗಬೇಕೆಂದು ಹಿಂದೆ ಹೇಳಿದ ವ್ಯಾಪ್ತಿಯಿಂದ ಸ್ಥಿರಪಡಿಸುತ್ತಾನೆ. 'ಯದ್ ದ್ರವ್ಯಂ'—ಇತಿ. ಯದ್‌ದ್ರವ್ಯಂ ಯಾವ ಜಲರೂಪದ್ರವ್ಯವು, ಯದ್ದ್ರವ್ಯಧ್ವಂಸಜನ್ಯಂ-ಹಿಮಕರಕಾದಿದ್ರವ್ಯಧ್ವಂಸದಿಂದ ಹುಟ್ಟುವುದೋ, ತತ್—ಆ ಜಲರೂಪದ್ರವ್ಯವು, ತದುಪಾದಾನೋಪಾದೇಯಮ್— ಆಕರಕಾದಿದ್ರವ್ಯಕ್ಕೆ ಯಾವುದು ಉಪಾದಾನ ಕಾರಣವಾಗಿದೆಯೋ ಅದೇ ಉಪಾದಾನ ಕಾರಣವಾಗಿರುವುದಾಗಿರುತ್ತದೆ. (ಎರಡೂ ಒಂದೇ ಉಪಾದಾನಕಾರಣದಿಂದ ಹುಟ್ಟು ತ್ತವೆ.) ಈ ವ್ಯಾಪ್ತಿಯಿಂದ ಕರಕಾದಿಗಳೂ ಜಲವೇ ಎಂದು ಸಿದ್ಧವಾಗುತ್ತದೆ. ಯಾವ ದ್ವ್ಯಣುಕಾದಿಗಳಿಂದ ಕರಕವಾಗುವುದೋ ಅದೇ ದ್ವ್ಯಣುಕಾದಿಗಳು ಜಲಕ್ಕೂ ಕಾರಣ ವಾಗುತ್ತವೆ. ಎರಡೂ ಒಂದೇ ಕಾರಣದಿಂದ ಹುಟ್ಟಿದಮೇಲೆ ಎರಡೂ ಸಜಾತೀಯ ಗಳೇ ಆಗುತ್ತವೆ. ಕರಕಾದಿಗಳಲ್ಲಿ ವಾಸ್ತವವಾದ ಕಾಠಿಣ್ಯಗುಣವಿದ್ದಿದ್ದರೆ ಅವು ಪಾರ್ಥಿವಗಳಾಗುತ್ತಿದ್ದುವು. ಆದರೆ ವಾಸ್ತವಕಾಠಿಣ್ಯ ಅವುಗಳಲ್ಲಿ ಇಲ್ಲ. ಜೀವನ ಅದೃಷ್ಟದಿಂದ ಅಲ್ಲಿ ದ್ರವತ್ವಪ್ರತಿಬದ್ಧವಾಗಿ ಕಾಠಿಣ್ಯ ತೋರುತ್ತದೆಂದು ಸಾಂಪ್ರದಾಯಿ ಕರ ಮತ. ಭಾಷ್ಯಕಾರರು ಇದನ್ನೇ ವ್ಯಕ್ತಪಡಿಸಿರುತ್ತಾರೆ.

**ಉಷ್ಣಃ ಸ್ಪರ್ಶಸ್ತೇಜಸಸ್ತು ಸ್ಯಾದ್ರೂಪಂ ಶುಕ್ಲಭಾಸ್ವರಮ್**
**ನೈಮಿತ್ತಿಕಂ ದ್ರವತ್ವಂ ತು ನಿತ್ಯತಾದಿ ಚ ಪೂರ್ವವತ್ ॥ ೪೧ ॥**

ತೇಜೋ ನಿರೂಪಯತಿ-'ಉಷ್ಣಃಸ್ಪರ್ಶ'—ಇತ್ಯಾದಿನಾ ॥ ಉಷ್ಣತ್ವಂ ಸ್ಪರ್ಶನಿಷ್ಠೋ ಜಾತಿವಿಶೇಷಃ ಪ್ರತ್ಯಕ್ಷಸಿದ್ಧಃ । ಇತ್ಥಂ ಚ ಜನ್ಯೋಷ್ಣಸ್ಪರ್ಶಸಮವಾಯಿಕಾರಣ ತಾವಚ್ಛೇದಕಂ ತೇಜಸ್ತ್ವಂ ಜಾತಿವಿಶೇಷಃ । ತಸ್ಯ ಪರಮಾಣುವೃತ್ತಿತ್ವಂ ತು ಜಲಸ್ಯೇವಾನುಸಂಧೇಯಮ್ । ನ ಚೋಷ್ಣಸ್ಪರ್ಶವತ್ತ್ವಂ ಚಂದ್ರಕಿರಣಾದಾವ ವ್ಯಾಪ್ತಮಿತಿ ವಾಚ್ಯಮ್, । ತತ್ರಾಪ್ಯುಷ್ಣತ್ವಸ್ಯ ಸತ್ವಾತ್ । ಕಿಂತು ತದಂತಃ ಪಾತಿ ಜಲಸ್ಪರ್ಶೇನಾಭಿಭವಾದ ಗ್ರಹಃ ! ರೂಪಮಿತ್ಯಾದಿ । ವೈಶ್ವಾನರೇ ಮರ ಕತಕಿರಣಾದೌ ಚ ಪಾರ್ಥಿವರೂಪೇಣಾಭಿಭವಾತ್ ಶುಕ್ಲರೂಪಾಗ್ರಹಃ ॥

ಉಷ್ಣಸ್ಪರ್ಶವಿರುವುದು ತೇಜಸ್ಸು. ತ್ವಗಿಂದ್ರಿಯದಿಂದ ಉಷ್ಣಸ್ಪರ್ಶವು ಗೃಹೀತವಾಗುವುದರಿಂದ 'ಯೇನೇಂದ್ರಿಯೇಣ'—ನ್ಯಾಯದಿಂದಉಷ್ಣಸ್ಪ ರ್ಶರೂಪಜಾತಿಯೂ ಗೃಹೀತವಾಗುತ್ತದೆ. ಇದನ್ನೇ ಪ್ರತ್ಯಕ್ಷಸಿದ್ಧವೆಂದು ಹೇಳಿರುತ್ತಾನೆ. ಉಷ್ಣತ್ವಜಾತಿ ಸಿದ್ಧವಾದ ಮೇಲೆ ತದವಚ್ಛಿನ್ನಕಾರ್ಯವಾದ ಉಷ್ಣಸ್ಪರ್ಶಕ್ಕೆ ಸಮವಾಯಿಕಾರಣರೂಪವಾಗಿ ತೇಜಸ್ಸು ಸಿದ್ಧವಾಗುತ್ತದೆ. 'ಉಷ್ಣತ್ವಾವಚ್ಛಿನ್ನಜನ್ಯೋಷ್ಣಸ್ಪರ್ಶನಿಷ್ಠಜನ್ಯತಾನಿರೂಪಿತಾ ಯಾ ತೇಜೋನಿಷ್ಠಾ ಕಾರಣತಾ. ತದವಚ್ಛೇದಕಂ ತೇಜಸ್ತ್ವಂ, ಎಂದು ಹಿಂದಿನಂತೆ ತಿಳಿಯಬೇಕು. ಇಲ್ಲಿಯೂ ಜನ್ಯೋಷ್ಣಸ್ಪರ್ಶಕ್ಕೆ ಕಾರಣ ಜನ್ಯತೇಜಸ್ಸೇ ಆಗುವುದರಿಂದ ಜನ್ಯತೇಜಸ್ಸಿನಲ್ಲಿ ತೇಜಸ್ತ್ವಜಾತಿಸಿದ್ಧವಾದರೂ, ನಿತ್ಯತೇಜಃಪರಮಾಣುಗಳಲ್ಲಿ ಅದು ಸಿದ್ಧವಾಗಲಾರದು. ಆದಕ್ಕೋಸ್ಕರ ಜಲದಲ್ಲಿ ಹೇಳಿದಂತೆಯೇ ಇಲ್ಲಿಯೂ ನಯನಮಾಡಬೇಕು. ಅಂದರೆ ಜನ್ಯೋಷ್ಣಸ್ಪರ್ಶಜನಕತಾವಚ್ಛೇದಕರೂಪವಾಗಿ ಜನ್ಯತೇಜಸ್ತ್ವಸಿದ್ಧವಾದ ಮೇಲೆ, ಜನ್ಯತೇಜಸ್ತ್ವಾವಚ್ಛಿನ್ನ ಜನ್ಯತಾನಿರೂಪಿತ ಜನಕತಾವಚ್ಛೇದಕರೂಪವಾಗಿ ತೇಜಸ್ತ್ವಜಾತಿಸಿದ್ಧವಾಗುತ್ತದೆ. ಇದು ತೇಜಃ ಪರಮಾಣುಗಳಲ್ಲಿಯೂ ಇರುತ್ತದೆ.

'ಉಷ್ಣಸ್ಪರ್ಶವತ್ತ್ವಂ' ತೇಜಸ್ಸಿನಲಕ್ಷಣವೆಂದರೆ ಚಂದ್ರಕಿರಣ, ರತ್ನಕಿರಣಾದಿ ತೇಜಸ್ಸುಗಳಲ್ಲಿ ಉಷ್ಣಸ್ಪರ್ಶ ತೋರದಿರುವುದರಿಂದ ಅವ್ಯಾಪ್ತಿಯನ್ನಾಶಂಕಿಸಿ ಸಮಾಧಾನ ತೋರಿಸುತ್ತಾನೆ. 'ನಚ'—ಇತಿ. ಅಲ್ಲಿ ಉಷ್ಣಸ್ಪರ್ಶ ತೋರದಿರುವುದರಿಂದ ಅವ್ಯಾಪ್ತಿಯನ್ನಾಶಂಕಿಸಿ ಸಮಾಧಾನ ತೋರಿಸುತ್ತಾನೆ. 'ನಚ—' ಇತಿ. ಅಲ್ಲಿ ಉಷ್ಣಸ್ಪರ್ಶತೋರದಿರುವುದರಿಂದ ಅವ್ಯಾಪ್ತಿಯನ್ನು ಆಶಂಕಿಸಬಾರದು. ಅಲ್ಲಿಯೂ ಉಷ್ಣಸ್ಪರ್ಶವಿದೆ. ಹಾಗಾದರೆ ಏಕೆ ತ್ವಗಿಂದ್ರಿಯದಿಂದ ಉಪಲಬ್ಧವಾಗುವುದಿಲ್ಲ? ಅಂದರೆ ಆ ಕಿರಣಗಳಲ್ಲಿ ಸೇರಿರುವ ಜಲಪರಮಾಣುಗಳ ಶೀತಸ್ಪರ್ಶದಿಂದ ಉಷ್ಣಸ್ಪರ್ಶವು ಅಭಿಭೂತವಾಗಿದೆ. 'ಬಲವತ್ಸಜಾತೀಯಗ್ರಹಣಕೃತಮಗ್ರಹಣಂ' ಅಭಿಭವಃ. ಬಲವತ್ತಾದ ಜಲದಶೀತಸಂಬಂಧಸ್ಪರ್ಶದಿಂದ ಉಷ್ಣಸ್ಪರ್ಶದ ಅನುಭವವಾಗುವುದಿಲ್ಲ. ಹೀಗೆಯೇ ರತ್ನಕಿರಣಾದಿಗಳಲ್ಲಿಯೂ ತಿಳಿಯಬೇಕೆಂದು ತೋರಿಸುತ್ತಾನೆ. 'ಏವಂ'—ಇತಿ. ರತ್ನಕಿರಣಾದಿಗಳಲ್ಲಿ ಪೃಥಿವೀಭಾಗದ ರೂಪಾದಿ ಸಂಬಂಧದಿಂದ ಉಷ್ಣಸ್ಪರ್ಶವಾಗಲೀ, ಭಾಸ್ಕರ ಶುಕ್ಲರೂಪವಾಗಲೀ ತೋರುವುದಿಲ್ಲ. ಕಣ್ಣು ತೈಜಸವಾದರೂ ಅದರಲ್ಲಿ ಅನುತ್ಕಟವಾದ (ಅನಭಿವ್ಯಕ್ತ) ಉಷ್ಣಸ್ಪರ್ಶವಿರುವುದರಿಂದ ಅದರಲ್ಲಿ ಉಷ್ಣಸ್ಪರ್ಶದ ಜ್ಞಾನವಾಗುವುದಿಲ್ಲ. ಉದ್ಭೂತ—ಉತ್ಕಟವಾಗಿದ್ದರೇ ಅದರ ಅನುಭವವಾಗುತ್ತದೆ. 'ವೈಶ್ವಾನರೇ'—ಇತಿ. ಬೆಂಕಿಯಲ್ಲಿಯೂ, ಮರಕತಾದಿ ರತ್ನಗಳಲ್ಲಿಯೂ ಪೃಥಿವೀಭಾಗದ ರೂಪದ ಸಂಬಂಧದಿಂದ ಶುಕ್ಲರೂಪದ ಜ್ಞಾನವುಂಟಾಗುವುದಿಲ್ಲ. ಅಲ್ಲಿರುವ ಶುಕ್ಲರೂಪವು ಅಭಿಭೂತವಾಗಿದೆ.

ಅಥ—ತದ್ರೂಪಾಗ್ರಹೇ ಧರ್ಮಿಣೋಽಪಿ ಚಾಕ್ಷುಷತ್ವಂ ನ ಸ್ಯಾದಿತಿ ಚೇನ್ನ! ಅನ್ಯ

ದೀಯರೂಪೇಣಾಪಿ ಧರ್ಮಿಣೋ ಗ್ರಹಸಂಭವಾತ್, ಶಂಖಸ್ಯೇವ ಪಿತ್ತ ಪೀತಿಮ್ನಾ । ವಹ್ನೇಸ್ತು ಶುಕ್ಲರೂಪಂ ನಾಭಿಭೂತಂ, ಕಿಂತು ತದೀಯಂ ಶುಕ್ಲತ್ವ ಮಭಿಭೂತಮಿತ್ಯನ್ಯೇ । ನೈಮಿತ್ತಿಕಮಿತಿ । ಸುವರ್ಣಾದಿರೂಪೇ ತೇಜಸಿ ತತ್ಸ ತ್ವಾತ್ । ನ ಚ ನೈಮಿತ್ತಿಕದ್ರವತ್ವಂ ದಹನಾದಾವವ್ಯಾಪ್ತಂ ಘೃತಾದಾವತಿ ವ್ಯಾಪ್ತಂಚೇತಿ ವಾಚ್ಯಂ, ಪೃಥಿವ್ಯವೃತ್ತಿನೈಮಿತ್ತಿಕದ್ರವತ್ವವದ್ವೃತ್ತಿ ದ್ರವ್ಯತ್ವ ಸಾಕ್ಷಾದ್ವ್ಯಾಪ್ಯಜಾತಿಮತ್ತ್ವಸ್ಯ ವಿವಕ್ಷಿತತ್ವಾತ್ । ಪೂರ್ವವದಿತಿ । ಜಲಸ್ಯೇ ವೇತ್ಯರ್ಥಃ । ತಥಾಹಿ—ತತ್ ದ್ವಿವಿಧಂ, ನಿತ್ಯಮನಿತ್ಯಂ ಚ । ನಿತ್ಯಂ ಪರ ಮಾಣುರೂಪಂ, ತದನ್ಯದನಿತ್ಯಂ, ಅವಯವಿ ಚ । ತಚ್ಚ ತ್ರಿಧಾ-ಶರೀರೇಂದ್ರಿಯ ವಿಷಯಭೇದಾತ್ । ಶರೀರಮಯೋನಿಜಮೇವ । ತಚ್ಚ ಸೂರ್ಯಲೋಕಾದೌ ಪ್ರಸಿದ್ಧಮ್ ॥೪೧॥

ದ್ರವ್ಯದ ಚಾಕ್ಷುಷಪ್ರತ್ಯಕ್ಷವಾಗಬೇಕಾದರೆ ಸ್ವಗತೋದ್ಭೂತರೂಪವು ಕಾರಣ ವಾದುದರಿಂದ ಪ್ರಕೃತ ಅಗ್ನ್ಯಾದಿಗಳ ಶುಕ್ಲಭಾಸ್ವರರೂಪವು ಪಾರ್ಥಿವಭಾಗದ ರೂಪ ದಿಂದ ತಿರಸ್ಕೃತವಾಗುವುದಾದರೆ ಅವುಗಳ ರೂಪ ತೋರದಿರುವುದರಿಂದ ಅವುಗಳ ಪ್ರತ್ಯಕ್ಷ ವಾಗದೇ ಹೋಗಬೇಕು. ಆದರೆ ಪ್ರತ್ಯಕ್ಷ ಆಗುತ್ತದೆ. ಇದು ಹೇಗೆ ? ಎಂದು ಆಶಂಕಿಸಿ ಸಮಾಧಾನ ತೋರಿಸುತ್ತಾನೆ. 'ತದ್ರೂಪಾ'—ಇತಿ. ಅಗ್ನಿಯರೂಪಗೃಹೀತವಾಗ ದಿದ್ದರೆ ಧರ್ಮಿ ಅಂದರೆ ಅಗ್ನಿಯ ಚಾಕ್ಷುಷಪ್ರತ್ಯಕ್ಷವೂ ಆಗುವುದಿಲ್ಲವೆಂದು ಶಂಕಿಸ ಬಾರದು. ಇತರರೂಪತೋರಿದರೂ ಆಗ ಅದರ ಪ್ರತ್ಯಕ್ಷವಾಗಿಯೇ ಆಗುತ್ತದೆ. ಆದುದ ರಿಂದ ದ್ರವ್ಯಸಾಕ್ಷಾತ್ಕಾರವಾಗಬೇಕಾದರೆ ಸ್ವಗತರೂಪಸಾಕ್ಷಾತ್ಕಾರವಾಗಬೇಕೆಂಬ ನಿಯಮವಿಲ್ಲ. 'ದ್ರವ್ಯಚಾಕ್ಷುಷಂ ಪ್ರತಿ ಉದ್ಭೂತರೂಪಂ ಕಾರಣಮ್' ಎಂದು ನಿಯಮ. ರೂಪ ಯಾವುದರದ್ದೇ ಆಗಲಿ ತೋರಿದರೆ ಇಲ್ಲ. 'ಪೀತಃ ಶಂಖಃ' ಎಂಬ ಪ್ರತ್ಯಕ್ಷವಾಗುತ್ತದೆಯಷ್ಟೆ. ಅಲ್ಲಿ ಶಂಖದ ಶುಕ್ಲರೂಪವು ಅಭಿಭೂತವಾಗಿದ್ದರೂ ನೇತ್ರ ಗತವಾದ ಪೀತದ್ರವ್ಯ ಸಂಬಂಧದಿಂದ ಪೀತಪ್ರತ್ಯಕ್ಷವಾಗಿ ಅದರಿಂದ ಶಂಖ ಪ್ರತ್ಯಕ್ಷವಾಗು ತ್ತದೆ. ಹಾಗೆ ಪಾರ್ಥಿವಭಾಗದ ರೂಪಸಂಬಂಧದಿಂದ ಅಗ್ನ್ಯಾದಿಗಳ ಪ್ರತ್ಯಕ್ಷವಾಗು ವುದರಲ್ಲಿ ಯಾವ ದೋಷವೂ ಇಲ್ಲ. ಇಲ್ಲಿ ಮತಭೇದವನ್ನು ತೋರಿಸುತ್ತಾನೆ. 'ವಹ್ನೇಸ್ತು'—ಇತಿ. ಪಾರ್ಥಿವರೂಪದಿಂದ ಅಗ್ನಿಯಲ್ಲಿರುವ ಶುಕ್ಲರೂಪವು ಅಭಿಭೂತ ವಾಗುವುದಿಲ್ಲ. ಶುಕ್ಲರೂಪದಲ್ಲಿರುವ ಶುಕ್ಲತ್ವಜಾತಿಯು ತಿರೋಹಿತವಾಗುತ್ತದೆಂದು ಅವರ ಮತ. ಸ್ವಸಮವಾಯಿ ಸಮವಾಯಿ ಸಂಯುಕ್ತಸಮವೇತತ್ವ ಸಂಬಂಧದಿಂದ ಪೀತತ್ವಜಾತಿಯಿಂದ ಶುಕ್ಲತ್ವವು ಅಭಿಭೂತವಾಗುತ್ತದೆ. ಸ್ವಂ—ಪೀತತ್ವಂ. ತತ್ಸಮ ವಾಯಿ—ಪೀತರೂಪ. ತತ್ಸಮವಾಯಿ—ಪಾರ್ಥಿವಭಾಗ. ತತ್ಸಂಯುಕ್ತ—ವಹ್ನಿ. ತತ್ಸಮವೇತತ್ವ—ಶುಕ್ಲತ್ವಕ್ಕಿದೆ. 'ನೈಮಿತ್ತಿಕದ್ರವತ್ವವತ್ತ್ವಂ' ಎಂದು ತೇಜಸ್ಸಿನ ಎರಡನೆಯ ಲಕ್ಷಣ. ಸುವರ್ಣಾದಿ ತೇಜಸ್ಸಿನಲ್ಲಿ ನೈಮಿತ್ತಿಕದ್ರವತ್ವವು ಸ್ಪಷ್ಟವಾಗಿ ತೋರುತ್ತದೆ. ಕೆಲವು ತೇಜಸ್ಸಿನಲ್ಲಿ ಯಾವ ದ್ರವತ್ವವೂ ತೋರದಿರುವುದರಿಂದ ಅವ್ಯಾ

ಪ್ತ್ಯಾದಿ ದೋಷವನ್ನಾಶಂಕಿಸಿ ಪರಿಹರಿಸುತ್ತಾನೆ. 'ನಚ'—ಇತಿ. ಅಗ್ನಿಯಲ್ಲಿ ದ್ರವತ್ವ ತೋರದಿರುವುದರಿಂದ ಅವ್ಯಾಪ್ತಿ. ಆದುದರಿಂದ ಲಕ್ಷಣವಾಗುವುದು ಹೇಗೆ ? ಎಂದು ಶಂಕಿಸಬಾರದು. ಜಾತಿಘಟಿತಲಕ್ಷಣದಿಂದ ಈ ದೋಷವು ವಾರಿತವಾಗುತ್ತದೆ. 'ಪೃಥಿವ್ಯ....ಜಾತಿಮತ್ವಂ' ಎಂದು ಲಕ್ಷಣ. ಪೃಥಿವ್ಯವೃತ್ತಿಃ (ಪೃಥಿವ್ಯಾಂ ಅವೃತ್ತಿಃ) ಪೃಥಿವಿಯಲ್ಲಿ ಇಲ್ಲದಿರುವ, ನೈಮಿತ್ತಿಕ ದ್ರವತ್ವವತಿ ವೃತ್ತಿಃ ಯಸ್ಯಾ ಸಾಃ ನೈಮಿತ್ತಿಕ ದ್ರವತ್ವವದ್ವೃತ್ತಿ—ನೈಮಿತ್ತಿಕದ್ರವತ್ವವಿರುವ ತೇಜಸ್ಸಿನಲ್ಲಿರುವ, ದ್ರವ್ಯತ್ವಸ್ಯ ಸಾಕ್ಷಾತ್ ವ್ಯಾಪ್ಯಾ ಯಾ ಜಾತಿಃ—ದ್ರವ್ಯತ್ವದಿಂದ ವ್ಯಾಪ್ಯವಾದ ತೇಜಸ್ತ್ವಜಾತಿ. ಅದು ಉಳ್ಳದ್ದು ಸಕಲ ತೇಜಸ್ಸುಗಳಾಗುತ್ತವೆ. ಪೃಥಿವ್ಯವೃತ್ತಿಯೆಂದುದರಿಂದ ಘೃತದಲ್ಲಿ ಅತಿವ್ಯಾಪ್ತಿ ಬರುವುದಿಲ್ಲ.

ನಿತ್ಯ, ಅನಿತ್ಯವೆಂದು ತೇಜಸ್ಸು ಎರಡು ವಿಧ. ಪರಮಾಣುರೂಪಗಳಾದ ತೇಜಸ್ಸು ನಿತ್ಯ. ದ್ವ್ಯಣುಕಾದಿಗಳು ಅನಿತ್ಯ. ಆದುದರಿಂದಲೇ ಅವಯವಗಳಿಂದ ಕೂಡಿರುತ್ತದೆ. ಈ ಅನಿತ್ಯ ತೇಜಸ್ಸೂ ಹಿಂದಿನಂತೆ ಮೂರು ವಿಧ. ಜಲದಂತೆ ಶರೀರರೂಪತೇಜಸ್ಸು ಅಯೋನಿಜವೆಂದು ತಿಳಿಯಬೇಕು. ಅದು ಸೂರ್ಯಲೋಕಾದಿಗಳಲ್ಲಿ ಪ್ರಸಿದ್ಧವಾಗಿದೆ.

**ಇಂದ್ರಿಯಂ ನಯನಂ ವಹ್ನಿ ಸ್ವರ್ಣಾದಿರ್ವಿಷಯೋ ಮತಃ ॥**

ಅತ್ರ ಯೋ ವಿಶೇಷಸ್ತಮಾಹ—ನನು ಚಕ್ಷುಷಸ್ತೈಜಸತ್ವೇ ಕಿಂ ಮಾನಮಿತಿಚೇತ್, ಚಕ್ಷುಸ್ತೈಜಸಂ ಪರಕೀಯಸ್ಪರ್ಶಾದ್ಯವ್ಯಂಜಕತ್ವೇ ಸತಿ ಪರಕೀಯ ರೂಪವ್ಯಂಜಕತ್ವಾತ್, ಪ್ರದೀಪವತ್ । ಪ್ರದೀಪಸ್ಯ ಸ್ವೀಯಸ್ಪರ್ಶವ್ಯಂಜಕತ್ವಾದತ್ರ ದೃಷ್ಟಾಂತೇಽವ್ಯಾಪ್ತಿವಾರಣಾಯ ಪ್ರಥಮಂ ಪರಕೀಯೇತಿ । ಘಟಾದೇಃ ಸ್ವೀಯ ರೂಪವ್ಯಂಜಕತ್ವಾದ್ವ್ಯಭಿಚಾರವಾರಣಾಯ ದ್ವಿತೀಯಂಪರಕೀಯೇತಿ । ಅಥವಾ ಪ್ರಭಾಯಾ ದೃಷ್ಟಾಂತತ್ವಸಂಭವಾದಾದ್ಯಂ ಪರಕೀಯೇತಿ ನ ದೇಯಮ್ । ಚಕ್ಷುಃಸನ್ನಿಕರ್ಷೇ ವ್ಯಭಿಚಾರವಾರಣಾಯ ದ್ರವ್ಯತ್ವಂ ದೇಯಮ್ ॥

ನಯನೇಂದ್ರಿಯವು ತೈಜಸ. ಅಗ್ನಿ, ಸುವರ್ಣ ಮುಂತಾದವುಗಳು ವಿಷಯ ರೂಪವಾದ ತೇಜಸ್ಸು. ನಯನ ತೈಜಸವೆಂಬುದರಲ್ಲಿ ಹಿಂದಿನಂತೆ ಅನುಮಾನಪ್ರಮಾಣ ತೋರಿಸುತ್ತಾನೆ. 'ಚಕ್ಷುಃ—ತೈಜಸಂ–ಪರಕೀಯಸ್ಪರ್ಶಾದ್ಯವ್ಯಂಜಕತ್ವೇ ಸತಿ, ಪರಕೀಯರೂಪವ್ಯಂಜಕತ್ವಾತ್. ಪ್ರದೀಪವತ್ (ದೃಷ್ಟಾಂತ) 'ಯತ್ ಪರಕೀಯ ಸ್ಪರ್ಶಾದ್ಯವ್ಯಂಜಕತ್ವೇ ಸತಿ ,ಪರಕೀಯರೂಪವ್ಯಂಜಕಂ ತತ್ ತೈಜಸಂ' ಎಂದು ದೀಪದಲ್ಲಿ ವ್ಯಾಪ್ತಿ ಪ್ರಸಿದ್ಧವಾಗಿದೆ. ದೀಪವು ಇತರ ವಸ್ತುಗಳ ಸ್ಪರ್ಶಾದಿಗುಣಗಳನ್ನು ತೋರಿಸಿಕೊಡದೆ ಇತರ ವಸ್ತುಗಳ ರೂಪವನ್ನು ಮಾತ್ರ ತೋರಿಸಿಕೊಡುತ್ತದೆ. ಹೇತುವನ್ನು ಅಷ್ಟು ದೊಡ್ಡದಾಗಿ ಹೇಳಿರುವುದಕ್ಕೆ ಪ್ರಯೋಜನವನ್ನು ತೋರಿಸುತ್ತಾನೆ. ಮೊದಲನೆಯ 'ಪರಕೀಯ' ಪದವನ್ನು ಸೇರಿಸದೆ ಕೇವಲ 'ಸ್ಪರ್ಶಾದ್ಯವ್ಯಂಜಕತ್ವೇ ಸತಿ' ಎಂದು

ಹೇಳಿದ್ದರೆ ದೃಷ್ಟಾಂತವಾದ ದೀಪದಲ್ಲಿ ಅವ್ಯಾಪ್ತಿ ಬರುತ್ತದೆ. ದೀಪವು ತನ್ನ ಸ್ಪರ್ಶವನ್ನು ವ್ಯಕ್ತಪಡಿಸುತ್ತಾ ಇತರರೂಪವನ್ನು ತೋರಿಸಿಕೊಡುತ್ತದೆ. ಸ್ಪರ್ಶಾದ್ಯವ್ಯಂಜಕವಾಗಿಲ್ಲ. ಪರಕೀಯ ಸ್ಪರ್ಶಾದಿ ಅವ್ಯಂಜಕವೆಂದರೆ ಸ್ವೀಯಸ್ಪರ್ಶವ್ಯಂಜಕವಾದರೂ ದೋಷವಿಲ್ಲ. ಎರಡನೆಯ 'ಪರಕೀಯ' ಪದವನ್ನು ಹೇಳದಿದ್ದರೆ ಘಟಾದಿಗಳಲ್ಲಿ ವ್ಯಭಿಚಾರ. ಘಟಾದಿಗಳು ಪರಕೀಯಸ್ಪರ್ಶಾದಿಗಳನ್ನು ತೋರಿಸಿಕೊಡದೆ ಸ್ವೀಯರೂಪಾಭಿವ್ಯಂಜಕಗಳಾಗಿವೆ. ಪರಕೀಯರೂಪವ್ಯಂಜಕವೆಂದರೆ ಆಗ ಘಟಾದಿಗಳಲ್ಲಿ ಬರುವುದಿಲ್ಲ. ಅವು ಇತರ ವಸ್ತುಗಳ ರೂಪವ್ಯಂಜಕಗಳಲ್ಲ.

ಹೇತುವಿನಲ್ಲಿ ಶರೀರಕೃತಲಾಘವವನ್ನು ಅಂಗೀಕರಿಸಿ ಸ್ವರೂಪಾಂತರವನ್ನು ತೋರಿಸುತ್ತಾನೆ. 'ಅಥವಾ'—ಇತಿ. ಪ್ರದೀಪದೃಷ್ಟಾಂತದ ಸ್ಥಾನದಲ್ಲಿ 'ಪ್ರಭಾವತ್' ಎಂದು ದೃಷ್ಟಾಂತವನ್ನು ಹೇಳಿದರೆ ಆಗ ಮೊದಲನೆಯ ಪರಕೀಯ ಪದ ಹೇಳಬೇಕಾಗಿಲ್ಲ. 'ಸ್ಪರ್ಶಾದ್ಯವ್ಯಂಜಕತ್ವೇ ಸತಿ ಪರಕೀಯರೂಪವ್ಯಂಜಕತ್ವಾತ್' ಎಂದು ಹೇತುವಾಗುತ್ತದೆ. ಬೆಳಕು ದೃಷ್ಟಾಂತ. ಇದು ತನ್ನ ಸ್ಪರ್ಶವನ್ನಾಗಲೀ ಇತರ ಸ್ಪರ್ಶವನ್ನಾಗಲೀ ವ್ಯಕ್ತಪಡಿಸುವುದಿಲ್ಲ. ಕೇವಲ ಇತರ ರೂಪವನ್ನು ಮಾತ್ರ ತಿಳಿಸಿಕೊಡುತ್ತದೆ. ಹಾಗಾದರೂ ಹೇತುವಿನಲ್ಲಿ ವ್ಯಭಿಚಾರದೋಷ ಬಂದೇ ಬರುತ್ತದೆ. ನಯನವು ಹೇಗೆ ರೂಪವ್ಯಂಜಕವೋ ಹಾಗೆಯೇ ಘಟ ಚಕ್ಷುಃಸಂಯೋಗವೂ ರೂಪವ್ಯಂಜಕವಾಗುತ್ತದೆ. ಆದುದರಿಂದ ಘಟನಯನಸಂಯೋಗದಲ್ಲಿ ಈ ಹೇತು ಬರುವುದರಿಂದ ವ್ಯಭಿಚಾರ ದೋಷ ಬರುತ್ತದೆ. ಸಂಯೋಗದಲ್ಲಿ ತೈಜಸತ್ವರೂಪ ಸಾಧ್ಯವಿಲ್ಲ. ಆದಕ್ಕೋಸ್ಕರ 'ದ್ರವ್ಯತ್ವೇ ಸತಿ' ಎಂದು ಹೆಚ್ಚಾಗಿ ಹೇಳಬೇಕು. 'ದ್ರವ್ಯತ್ವೇ ಸತಿ, ಸ್ಪರ್ಶಾದ್ಯವ್ಯಂಜಕತ್ವೇ ಸತಿ ಪರಕೀಯರೂಪವ್ಯಂಜಕತ್ವಾತ್' ಎಂದು ಹೇತುವಾಗುತ್ತದೆ. ಹೀಗೆ ಹೇಳಿದರೆ ಚಕ್ಷುಃಸನ್ನಿಕರ್ಷ—ಸಂಯೋಗವು ಸ್ಪರ್ಶಾದ್ಯವ್ಯಂಜಕವಾಗಿ ಪರಕೀಯ ರೂಪವ್ಯಂಜಕವಾದರೂ ದ್ರವ್ಯವಲ್ಲ. ಅದು ಗುಣ. ಆದುದರಿಂದ ಅಲ್ಲಿ ವ್ಯಭಿಚಾರ ಬರುವುದಿಲ್ಲ. ಚಕ್ಷುರಿಂದ್ರಿಯವು ಹೀಗೆ ದ್ರವ್ಯವಾಗಿ ಪರಕೀಯರೂಪವ್ಯಂಜಕವಾದುದರಿಂದ ತೈಜಸವಾಗುತ್ತದೆ.

ವಿಷಯಂ ದರ್ಶಯತಿ—ವಹ್ನಿರಿತಿ ॥ ನನು ಸುವರ್ಣಸ್ಯ ತೈಜಸತ್ವೇ ಕಿಂ ಮಾನಮಿತಿ ಚೇನ್ನ, ಸುವರ್ಣಂ ತೈಜಸಮಸತಿ ಪ್ರತಿಬಂಧಕೇ ಅತ್ಯಂತಾನಲಸಂಯೋಗೇಪ್ಯನುಚ್ಛಿದ್ಯಮಾನ ಜನ್ಯದ್ರವತ್ವಾತ್ ಯನ್ನೈವಂ ತನ್ನೈವಂ, ಯಥಾ ಪೃಥಿವೀತಿ । ನ ಚಾಪ್ರಯೋಜಕಂ, ಪೃಥಿವೀದ್ರವತ್ವಸ್ಯ ಜನ್ಯಜಲದ್ರವತ್ವಸ್ಯ ಚಾತ್ಯಂತಾಗ್ನಿಸಂಯೋಗನಾಶ್ಯತ್ವಾತ್ ! ನನು—ಪೀತಿಮಗುರುತ್ವಾಶ್ರಯಸ್ಯ ಪಾರ್ಥಿವಭಾಗಸ್ಯಾಪಿ ತದಾನೀಂ ದ್ರುತತ್ವಾತ್ತೇನ ವ್ಯಭಿಚಾರ ಇತಿ ಚೇನ್ನ, ಜಲಮಧ್ಯಸ್ಥಮಸೀಕ್ಷೋದವತ್ತಸ್ಯಾದ್ರುತತ್ವಾತ್ । ಅಪರೇತು—ಪೀತಿಮಾಶ್ರಯಸ್ಯ ಅತ್ಯಂತಾಗ್ನಿಸಂಯೋಗೇಽಪಿ ಪೂರ್ವರೂಪಾಪರಾವೃತ್ತಿದರ್ಶನಾತ್ ತತ್ಪ್ರತಿ

ಬಂಧಕಂ ವಿಜಾತೀಯದ್ರವದ್ರವ್ಯಂ ಕಲ್ಪ್ಯತೇ ! ತಥಾಹಿ—ಅತ್ಯಂತಾಗ್ನಿ ಸಂಯೋಗೀ ಪೀತಿಮಗುರುತ್ವಾಶ್ರಯಃ—ವಿಜಾತೀಯ ರೂಪಪ್ರತಿಬಂಧಕ ದ್ರವ ದ್ರವ್ಯಸಂಯುಕ್ತಃ—ಅತ್ಯಂತಾಗ್ನಿ ಸಂಯೋಗೇ ಸತ್ಯಪಿ ಪೂರ್ವರೂಪವಿಜಾತೀಯ ರೂಪಾನಧಿಕರಣತ್ವಾತ್, ಜಲಮಧ್ಯಸ್ಥಪೀತಪಟವತ್ । ತಸ್ಯ ಚ ಪೃಥಿವೀಜಲ ಭಿನ್ನಸ್ಯ ತೇಜಸ್ತ್ವನಿಯಮಾತ್ ॥

ತೈಜಸ ವಿಷಯವನ್ನು ತೋರಿಸುತ್ತಾನೆ. 'ವಹ್ನಿಃ'—ಇತಿ. ಈ ವಿಷಯವು ನಾಲ್ಕು ವಿಧವೆಂದು ಹೇಳಿದೆ. ವಹ್ನ್ಯಾದಿಗಳು ಭೌಮ ವಿಷಯ. ವಿದ್ಯುತ್ (ಮಿಂಚು) ಮುಂತಾದವುಗಳು ದಿವ್ಯ ವಿಷಯ. ಭುಕ್ತವಾದುದು ಜೀರ್ಣವಾಗುವುದಕ್ಕೆ ಸಾಧಕ ವಾದ ತೇಜಸ್ಸು ಉದರ್ಯವಾಗುತ್ತದೆ. ಸುವರ್ಣಾದಿಗಳು ಆಕರಜ ವಿಷಯ. ಇವು ಗಳನ್ನು ಆದಿ ಪದದಿಂದ ಹೇಳಿರುತ್ತಾನೆ.

ಸುವರ್ಣವು ತೈಜಸವೆಂಬುದರಲ್ಲಿ ಪ್ರಮಾಣವೇನು ಎಂದು ಆಶಂಕಿಸುತ್ತಾನೆ. 'ನನು,—ಇತಿ. ಆಕ್ಷೇಪಿಸುವವನಿಗೆ ಇದು ಪೃಥಿವೀ ಎಂದೇ ಅಭಿಪ್ರಾಯ. 'ಸುವರ್ಣಂ—ಪಾರ್ಥಿವಂ—ನೈಮಿತ್ತಿಕದ್ರವತ್ವವತ್ತ್ವಾತ್, ಜತುವತ್' ಎಂಬ ಅನು ಮಾನದಿಂದ ಪಾರ್ಥಿವತ್ತ್ವ ಸಿದ್ಧವಾಗುತ್ತದೆ. ಅರಗಿನಲ್ಲಿ ನೈಮಿತ್ತಿಕದ್ರವತ್ವವಿರುವುದ ರಿಂದ ಹೇಗೆ ಅದು ಪಾರ್ಥಿವವೋ ಅದರಂತೆ ಚಿನ್ನದಲ್ಲಿ ನೈಮಿತ್ತಿಕದ್ರವತ್ವವಿರುವುದರಿಂದ ಅದು ಪಾರ್ಥಿವವಾಗಲಿ ಎಂದು ಅವನ ಆಕ್ಷೇಪ. ಇದು ಸರಿಯಲ್ಲವೆಂದು ತೋರಿಸು ತ್ತಾನೆ. 'ನ'—ಇತಿ. 'ಸುವರ್ಣಂ—ತೈಜಸಂ—ಅಸತಿ ಪ್ರತಿಬಂಧಕೇ ಅತ್ಯಂತಾ ನಲಸಂಯೋಗೇಽಪ್ಯನುಚ್ಛಿದ್ಯಮಾನಜನ್ಯದ್ರವತ್ವಾತ್.' ಎಂದು ಅನುಮಾನ ಪ್ರಮಾಣ ದಿಂದ ತೈಜಸತ್ವ ಸಿದ್ಧವಾಗುತ್ತದೆ. ಅನ್ವಯದೃಷ್ಟಾಂತವಿಲ್ಲವಾದುದರಿಂದ ವ್ಯತಿರೇಕ ದೃಷ್ಟಾಂತ ತೋರಿಸುತ್ತಾನೆ. 'ಯನ್ನೈವಂ'—ಇತಿ. ಸುವರ್ಣ ಪಕ್ಷ ತೇಜಸ್ತ್ವ ಸಾಧ್ಯ. 'ಅಸತಿ,—ಇತ್ಯಾದಿ ಹೇತು. ಪ್ರತಿಬಂಧಕದ ಸಂಬಂಧವಿಲ್ಲದಿರುವಾಗ ಅಧಿಕಾಗ್ನಿ ಸಂಯೋಗವಾದರೂ ನಾಶವಾಗದ ಜನ್ಯ ದ್ರವತ್ವವಿರುವುದರಿಂದ ಅದು ತೇಜಸ್ಸಾಗುತ್ತದೆ. ಚಿನ್ನವನ್ನು ಎಷ್ಟು ಕರಗಿಸಿದರೂ ಅದು ಎಂದೂ ನಾಶವಾಗುವು ದಿಲ್ಲ. ಕರಗಿ ನೀರಾಗಿರುತ್ತದೆ. ವ್ಯತಿರೇಕ ದೃಷ್ಟಾಂತ ಪೃಥಿವೀ. ಯನ್ನೈವಂ— ಯಾವುದು ಪ್ರತಿಬಂಧಕಯಾವುದೂ ಇಲ್ಲದಿರುವಾಗ ಅಧಿಕಾಗ್ನಿಸಂಯೋಗವಾದಾಗ ನಾಶವಾಗದ ದ್ರವತ್ವಾಧಿಕರಣವು ಆಗುವುದಿಲ್ಲವೋ (ದ್ರವತ್ವವು ಅಲ್ಲಿ ನಾಶವಾಗು ವುದೋ) ತನ್ನೈವಂ—ಅದು ತೈಜಸವಾಗುವುದಿಲ್ಲ. ಅರಗು, ತುಪ್ಪ ಮುಂತಾದ ಪೃಥಿವಿಗಳು ಪ್ರತಿಬಂಧಕವಿಲ್ಲದಿರುವಾಗ ಅಧಿಕವಾಗಿ ಅಗ್ನಿ ಸಂಯೋಗ ಹೊಂದಿದರೆ ಆಗ ಅಲ್ಲಿ ದ್ರವತ್ವವು ನಾಶವಾಗುತ್ತದೆ. ಆದುದರಿಂದ ಅವು ತೈಜಸವಾಗುವುದಿಲ್ಲ. ಚಿನ್ನ ವಾದರೋ ಇದಕ್ಕೆ ವಿರುದ್ಧವಾದ ಸ್ವಭಾವವುಳ್ಳದ್ದಾದುದರಿಂದ ಅಂದರೆ ಎಷ್ಟು ಬೆಂಕಿ ಹಾಕಿ ದರೂ ನಾಶವಾಗದ ದ್ರವತ್ವದಿಂದ ಕೂಡಿರುವುದರಿಂದ ತೈಜಸವಾಗುತ್ತದೆ. ಜಲಮಧ್ಯ

ದಲ್ಲಿ ತುಪ್ಪದ ಕೊಡವಿಟ್ಟು ಎಷ್ಟು ಕಾಯಿಸಿದರೂ ಅಲ್ಲಿ ದ್ರವತ್ವ ನಾಶವಾಗುವುದಿಲ್ಲ. ಅಲ್ಲಿ ವ್ಯಭಿಚಾರವಾರಣೆಗೋಸ್ಕರ, 'ಅಸತಿ ಪ್ರತಿಬಂಧಕೇ ಸತಿ' ಎಂದಿದೆ. ಯಾವ ಪ್ರತಿಬಂಧಕವೂ ಇರಬಾರದೆಂಬುದರಿಂದ, ಜಲಮಧ್ಯದಲ್ಲಿರುವುದೇ ಪ್ರತಿಬಂಧಕವಾಗುವುದರಿಂದ ಅಲ್ಲಿ ವ್ಯಭಿಚಾರ ಬರುವುದಿಲ್ಲ.

ಈ ಅನುಮಾನವು ಅಪ್ರಯೋಜಕವಾಗಲೆಂದು ಶಂಕಿಸುತ್ತಾನೆ. 'ನಚ'—ಸುವರ್ಣ ಪಕ್ಷದಲ್ಲಿ 'ಅಸತಿಪ್ರತಿ,—ಇತ್ಯಾದಿ ಹೇತುವಿರಲಿ. ಸಾಧ್ಯವಾದ ತೈಜಸವು ಇಲ್ಲದಿರಲಿ ಬಾಧಕತರ್ಕವಿಲ್ಲದಿರುವುದರಿಂದ ಅಪ್ರಯೋಜಕವಾಗಲಿ ಎಂದು ಆಕ್ಷೇಪ. ಸಾಧ್ಯಬೇಡವೆಂದರೆ ಸಾಧ್ಯವಿಲ್ಲದಿರುವಲ್ಲಿ ಹೇತು ಬಂದಂತಾಗುವುದರಿಂದ ಹೇತು ವ್ಯಭಿಚಾರಿಯಾಗುತ್ತದೆಂದು ತಾತ್ಪರ್ಯ. ಇದಕ್ಕೆ ಅನುಕೂಲತರ್ಕಬಾಧಕವಿದೆಯೆಂದು ತೋರಿಸುತ್ತಾನೆ. 'ಪೃಥಿವೀ,—ಇತಿ.' ಘೃತಾದಿಗಳಲ್ಲಿಯೂ ಜನ್ಯಜಲದಲ್ಲಿಯೂ ದ್ರವತ್ವವಿದೆ. ಅತ್ಯಂತಾಗ್ನಿಸಂಯೋಗವಾದರೆ ಅದು ನಾಶವಾಗುತ್ತದೆ. ಸುವರ್ಣದ ದ್ರವತ್ವವಾದರೋ ಎಷ್ಟು ಅಗ್ನಿಸಂಯೋಗವಾದರೂ ನಾಶವಾಗುವುದಿಲ್ಲ. ಆದುದರಿಂದ ಹೀಗೆ ಅನುಕೂಲತರ್ಕ ಹೇಳಲು ಸಾಧ್ಯ. 'ಸುವರ್ಣಂ ತೈಜಸಂ ನ ಸ್ಯಾತ್, ತರ್ಹಿ ಅತ್ಯಂತಾನಲಸಂಯೋಗಾನಾಶ್ಯದ್ರವತ್ವಧರ್ಮಾವಚ್ಛಿನ್ನಮಪಿನ ಸ್ಯಾತ್' (ಸಾಧ್ಯವಿಲ್ಲದಿದ್ದರೆ ಹೇತುವೂ ಇರಲಾರದು ಎಂದರ್ಥ). ಹೀಗೆ ಅನುಕೂಲತರ್ಕವಿರುವುದರಿಂದ ಅಪ್ರಯೋಜಕತ್ವಶಂಕೆಗೆ ಅವಕಾಶವಿಲ್ಲ. ಅನುಮಾನದಿಂದ ತೈಜಸತ್ವಸಿದ್ಧವಾದ ಮೇಲೆ ಶ್ರುತಿಪ್ರಮಾಣದಿಂದಲೂ ಇದು ದೃಢವಾಗುತ್ತದೆ. 'ಅಗ್ನೇರಪತ್ಯಂಪ್ರಥಮಂ 'ಹಿರಣ್ಯಂ,—ಇತ್ಯಾದ್ಯಾಗಮಗಳೂ ಸುವರ್ಣ ತೈಜಸವೆಂದು ಹೇಳುತ್ತವೆ.

ಪುನಃ ಅನುಮಾನದಲ್ಲಿ ವ್ಯಭಿಚಾರವನ್ನು ಆಶಂಕಿಸುತ್ತಾನೆ. 'ನನು'—ಇತಿ. ಪೀತಸ್ಯ ಭಾವಃ ಪೀತಿಮಾ. ಗುರೋರ್ಭಾವಃ ಗುರುತ್ವಮ್. ಇವೆರಡೂ ತೇಜಸ್ಸಿನಲ್ಲಿಲ್ಲ. ಆದುದರಿಂದ ಪೃಥಿವೀಧರ್ಮಗಳು. ಈ ಪೀತಿಮಗುರುತ್ವಗಳಿಗೆ ಆಶ್ರಯವಾದ ಪೃಥಿವೀಭಾಗವೂ ಆಗ ಕರಗುವುದರಿಂದ ಅದು ನಾಶವಾಗದಿರುವುದರಿಂದ ಅಲ್ಲಿ ಹೇತು ಬರುತ್ತದೆ. ಸಾಧ್ಯಾಭಾವವಿದ್ದಲ್ಲಿ ಹೇತು ಬಂದರೆ ಆಗ ವ್ಯಭಿಚಾರ. ಪ್ರಕೃತ ತೈಜಸತ್ವರೂಪ ಸಾಧ್ಯವಿಲ್ಲದ ಪೃಥಿವೀರೂಪ ಅಧಿಕರಣದಲ್ಲಿ ಈ ಹೇತು ಬರುವುದರಿಂದ ವ್ಯಭಿಚರಿತವಾಗುತ್ತದೆ. 'ನ' ಎಂಬುದರಿಂದ ಸಮಾಧಾನ ತೋರಿಸುತ್ತಾನೆ, ಜಲಮಧ್ಯದಲ್ಲಿ ಮಸಿಯ ಪುಡಿ ಹಾಕಿ ಕುದಿಸಿದರೆ ನೀರು ದ್ರವವಾಗಿ ಕುದಿಯುವಂತೆ ಮಸೀಕ್ಷೋದವೂ ದ್ರವಿಸುವಂತೆ ತೋರುತ್ತದೆ. ಆದರೆ ಮಸಿಯಪುಡಿ ಕರಗಿ ಕುದಿಯುವುದಿಲ್ಲ. ನೀರಿನ ಜೊತೆಯಲ್ಲಿರುವುದರಿಂದ ಕರಗಿದಂತೆ ತೋರುತ್ತದೆ. ಆದುದರಿಂದ ಭ್ರಾಂತಿ. ಅದರಂತೆ ಅಧಿಕಾಗ್ನಿ ಸಂಯೋಗದಿಂದ ಸುವರ್ಣವು ಕರಗಿ ಕುದಿಯುವಾಗ ಅದರ ಮಧ್ಯದಲ್ಲಿರುವ ಪೀತಿಮ, ಗುರುತ್ವಗಳಿಗೆ ಆಶ್ರಯವಾದ ಪಾರ್ಥಿವ ಭಾಗವೂ ಕರಗಿ ಕುದಿಯುವಂತೆ ತೋರುವುದರಿಂದ ಭ್ರಾಂತಿಯಾಗುತ್ತದೆ. ವಾಸ್ತವ ದ್ರವಣ ಅದರಲ್ಲಿಲ್ಲ.

ಇನ್ನು ಕೆಲವರು ಪ್ರಕಾರಾಂತರದಿಂದ ಸಮಾಧಾನ ಹೇಳುತ್ತಾರೆ. 'ಅಪರೇ'—

ಇತಿ. ಪೀತಿಮಾಶ್ರಯವಾದ ಪಾರ್ಥಿವ ಭಾಗಕ್ಕೆ ಅತ್ಯಂತಾಗ್ನಿ ಸಂಯೋಗವಾದರೂ ಪೂರ್ವರೂಪವಾದ ಪೀತಿಮಕ್ಕೆ (ಹಳದಿ ಬಣ್ಣ) ವ್ಯತ್ಯಾಸವಿಲ್ಲದೆ ಯಾವಾಗಲೂ ಅದೇ ತೋರುವುದರಿಂದ ಪರಾವರ್ತನಂ—ಪರಾವೃತ್ತಿಃ, ತಸ್ಯಾಃ ದರ್ಶನಂ, ಪರಾವೃತ್ತಿದರ್ಶನಂ (ವ್ಯತ್ಯಸ್ತವಾಗಿ ತೋರುವುದು) ನ ಪರಾವೃತ್ತಿದರ್ಶನಂ ಅಪರಾವೃತ್ತಿದರ್ಶನಂ, ತಸ್ಮಾತ್. ಪೂರ್ವ ರೂಪ ಪರಾವೃತ್ತಿಗೆ ಪ್ರತಿಭಂಧಕವಾದ ವಿಜಾತೀಯ ದ್ರವತ್ವ ವಿರುವ ಒಂದು ದ್ರವ್ಯವು ಅನುಮಿತವಾಗುತ್ತದೆ. ಅಗ್ನಿ ಸಂಯೋಗವಾಯಿತೆಂದರೆ ಪೃಥಿವಿಯಲ್ಲಿರುವ ರೂಪವು ಮೊದಲಿನದ್ದಕ್ಕಿಂತ ಬೇರೆಯಾಗಿಯೇ ಆಗುತ್ತದೆ. ಇಲ್ಲಿ ಎಷ್ಟು ಅಗ್ನಿ ಸಂಯೋಗವಾದರೂ ಹಳದಿಬಣ್ಣಕ್ಕೆ ವ್ಯತ್ಯಾಸವೇ ಆಗುವುದಿಲ್ಲ. ಆದುದ ರಿಂದ ಸುವರ್ಣದಲ್ಲಿ ವಿಜಾತೀಯದ್ರವತ್ವದಿಂದ ಕೂಡಿದ ದ್ರವ್ಯತ್ವವಿದೆಯೆಂದು ಊಹಿಸ ಲ್ಪಡುತ್ತದೆ.

ಕಲ್ಪನಾ ಪ್ರಕಾರವನ್ನೇ ತೋರಿಸುತ್ತಾನೆ. 'ತಥಾಹಿ'—ಇತಿ. 'ಅತ್ಯಂತಾಗ್ನಿ ಸಂಯೋಗೇ ಪೀತಿಮಗುರುತ್ವಾಶ್ರಯಃ, ಪಕ್ಷ. 'ವಿಜಾತೀಯರೂಪಪ್ರತಿಬಂಧಕದ್ರವ ದ್ರವ್ಯಸಂಯುಕ್ತತ್ವ, ಸಾಧ್ಯ. 'ಅತ್ಯಂತಾಗ್ನಿಸಂಯೋಗೇ ಸತ್ಯಪಿ ಪೂರ್ವರೂಪ ವಿಜಾತೀಯ ರೂಪಾನಧಿಕರಣತ್ವಾತ್' ಹೇತು. ಜಲಮಧ್ಯಸ್ಥಪೀತಪಟವತ್' ದೃಷ್ಟಾಂತ. ಪೂರ್ವರೂಪವೆಂದರೆ ಪೀತರೂಪ. ಅದಕ್ಕೆ ವಿಜಾತೀಯರೂಪ—ಶ್ಯಾಮ ರೂಪ. ಅದಕ್ಕೆ ಅನಧಿಕರಣ—ಅನಾಶ್ರಯವೆಂದರ್ಥ.

ಅತ್ಯಂತ ಜ್ವಲಿತವಾದ ಅಗ್ನಿಯಲ್ಲಿ ಸುವರ್ಣಪಿಂಡವನ್ನು ಹಾಕಿದರೆ ಅದು ಕರಗಿ ನೀರಾಗುತ್ತದೆ. ಅದರಲ್ಲಿ ಸೇರಿರುವ ಪಿತವರ್ಣವಿರುವ ಪಾರ್ಥಿವಭಾಗವೂ ದ್ರವಿಸು ವಂತೆ ತೋರುತ್ತದೆ. ಆದರೆ ಪೃಥಿವಿಯಲ್ಲಿರುವ ರೂಪ, ರಸ, ಗಂಧ ಸ್ಪರ್ಶಗಳು ಪಾಕಜ ಗಳೂ ಅನಿತ್ಯಗಳೂ ಆಗಿರುತ್ತವೆಯೆಂದು ಹಿಂದೆ ಹೇಳಿವೆ. ಪೃಥಿವೀಭಾಗಕ್ಕೆ ವಿಲಕ್ಷಣ ತೇಜಃ ಸಂಯೋಗವಾದಾಗ ಅದರ ಪೂರ್ವರೂಪ ಹೋಗಿ ವಿಜಾತೀಯವಾದ ಇನ್ನೊಂದು ರೂಪವುಂಟಾಗುತ್ತದೆ. ಘಟ ಹಸಿಯಾದಾಗ ಕಪ್ಪಾಗಿದ್ದರೆ ಅಗ್ನಿಸಂಯೋಗ ವಾದ ಮೇಲೆ ಕೆಂಪಾಗುತ್ತದೆ. ಆದರೆ ಸುವರ್ಣ ಮಧ್ಯದಲ್ಲಿರುವ ಪೃಥಿವೀಭಾಗದ ಪೀತವರ್ಣವು ಎಷ್ಟು ಅಗ್ನಿ ಸಂಪರ್ಕವಾದರೂ ಹಾಗೆಯೇ ಇರುತ್ತದೆ. ಆದುದರಿಂದ ಅಲ್ಲಿ ಪಾರ್ಥಿವಭಾಗದರೂಪ ವ್ಯತ್ಯಾಸವಾಗದಂತೆ ಮಾಡುವ, ಅಂದರೆ ಅಧಿಕವಹ್ನಿ ಸಂಯೋಗವಾದರೂ ಪೂರ್ವರೂಪ ಪರಾವೃತ್ತಿಗೆ ಪ್ರತಿಬಂಧಕವಾದ ಒಂದು ದ್ರವ್ಯವಿದೆ ಯೆಂದು ಕಲ್ಪಿಸಬೇಕು. ಆ ದ್ರವ್ಯವು ಅನುಚ್ಛಿದ್ಯಮಾನದ್ರವತ್ವದಿಂದ ಕೂಡಿರುವುದ ರಿಂದ ಪೃಥಿವಿಯಾಗುವುದಿಲ್ಲ. ಅಗ್ನಿನಾಶ್ಯವಾಗದಿರುವುದರಿಂದ ಜಲವಲ್ಲ. ಅರ್ಥಾತ್ ಪೃಥಿವೀಜಲಕ್ಕಿಂತ ಮೂರನೆಯದಾದ ತೇಜೋರೂಪದ್ರವವೇ ಆಗುತ್ತದೆ.

ನವೀನತಾರ್ಕಿಕರು ಸುವರ್ಣವನ್ನು ತೈಜಸವೆಂದು ಅಂಗೀಕರಿಸುವುದಿಲ್ಲ. ಅದು

ಪಾರ್ಥಿವವೇ ಎಂದು ಅವರ ಮತ. 'ಪೀತಂ ಸುವರ್ಣಂ' ಎಂಬ ಪ್ರತ್ಯಕ್ಷವುಂಟಾಗುವುದರಿಂದ ಭ್ರಮತ್ವಕಲ್ಪನೆ ಸಮಂಜಸವಲ್ಲವೆಂದು ಹೇಳುತ್ತಾರೆ.

ಹೀಗೆ ತೇಜೋಗ್ರಂಥ ಮುಗಿದಿದೆ.

**ಅಪಾಕಜೋಽನುಷ್ಣಾಶೀತಸ್ಪರ್ಶಸ್ತು ಪವನೇ ಮತಃ ॥ ೪೨ ॥**
**ತಿರ್ಯಗ್ಗಮನವಾನೇಷ ಜ್ಞೇಯಃ ಸ್ಪರ್ಶಾದಿಲಿಂಗಕಃ ।**
**ಪೂರ್ವನ್ನಿತ್ಯತಾದ್ಯುಕ್ತಂ ದೇಹವ್ಯಾಪಿ ತ್ವಗಿಂದ್ರಿಯಮ್ ॥ ೪೩ ॥**

ವಾಯುಂ ನಿರೂಪಯತಿ—ಅಪಾಕಜ ಇತಿ । ಅನುಷ್ಣಾಶೀತಸ್ಪರ್ಶಸ್ಯ ಪೃಥಿವ್ಯಾಮಪಿ ಸತ್ತ್ವಾದುಕ್ತಮಪಾಕಜ ಇತಿ । ಅಪಾಕಜಸ್ಪರ್ಶಸ್ಯ ಜಲಾದಾವಪಿ ಸತ್ತ್ವಾದುಕ್ತಮನುಷ್ಣಾಶೀತ ಇತಿ । ತೇನ ವಾಯವೀಯೋ ವಿಜಾತೀಯಃ ಸ್ಪರ್ಶೋ ದರ್ಶಿತಃ । ತಜ್ಜನಕತಾವಚ್ಛೇದಕಂ ವಾಯುತ್ವಮಿತಿ ಭಾವಃ । ಏಷ ವಾಯುಃ ಸ್ಪರ್ಶಾದಿಲಿಂಗಕಃ ವಾಯುರ್ಹಿ ಸ್ಪರ್ಶಶಬ್ದಧೃತಿಕಂಪೈರನುಮೀಯತೇ, ವಿಜಾತೀಯಸ್ಪರ್ಶೇನ ವಿಲಕ್ಷಣಶಬ್ದೇನ ತೃಣಾದೀನಾಂ ಧೃತ್ಯಾ ಶಾಖಾದೀನಾಂ ಕಂಪೇನ ಚ ವಾಯೋರನುಮಾನಾತ್ । ಯಥಾ ಚ ವಾಯೋರ್ನ ಪ್ರತ್ಯಕ್ಷಂ ತಥಾಗ್ರೇ ವಕ್ಷ್ಯತೇ ॥

'ಅಪಾಕಜ—' ಇತ್ಯಾದಿಗಳಿಂದ ಕಾರಿಕೆಯಲ್ಲಿ ವಾಯುಲಕ್ಷಣ ತೋರಿಸುತ್ತಾನೆ. 'ಅಪಾಕಜಾನುಷ್ಣಾಶೀತಸ್ಪರ್ಶವತ್ತ್ವಂ' ಎಂದು ವಾಯುಲಕ್ಷಣ. ಪದಕೃತ್ಯವನ್ನು ತಾನೇ ವಿಶದಪಡಿಸುತ್ತಾನೆ. 'ಅನುಷ್ಣಾ—' ಇತಿ. ಸ್ಪರ್ಶಕ್ಕೆ ಎರಡು ವಿಶೇಷಣ ಹೇಳಿದೆ. ಕೇವಲ ಅನುಷ್ಣಾಶೀತಸ್ಪರ್ಶವುಳ್ಳದ್ದೆಂದರೆ ಪೃಥಿವಿಯೂ ಆಗುವುದರಿಂದ ಅತಿವ್ಯಾಪ್ತಿ ಬರುತ್ತದೆ. ಅಪಾಕಜವಾದ ಅನುಷ್ಣಾಶೀತಸ್ಪರ್ಶವೆಂದರೆ ಪೃಥಿವಿಯ ಸ್ಪರ್ಶ ಅಪಾಕಜವಾಗುವುದಿಲ್ಲ. ಅದು ಯಾವಾಗಲೂ ಪಾಕಜವಾಗುವುದರಿಂದ ಅಲ್ಲಿ ಅತಿವ್ಯಾಪ್ತಿ ಬರುವುದಿಲ್ಲ. ಕೇವಲ ಅಪಾಕಜಸ್ಪರ್ಶವುಳ್ಳದ್ದೆಂದರೆ ಜಲದಲ್ಲಿ ಅತಿವ್ಯಾಪ್ತಿ ಬರುತ್ತದೆ. ಜಲದಲ್ಲಿ ಪಾಕಜಸ್ಪರ್ಶವಿಲ್ಲ. ಆದುದರಿಂದ ಅನುಷ್ಣಾಶೀತವೆಂದೂ ಹೇಳಿದೆ. ಆಗ ಜಲದಲ್ಲಿ ಅಪಾಕಜಸ್ಪರ್ಶವಿದ್ದರೂ ಅನುಷ್ಣಾಶೀತಸ್ಪರ್ಶವಿಲ್ಲದಿರುವುದರಿಂದ, ಅದರಲ್ಲಿ ಕೇವಲ ಶೀತಸ್ಪರ್ಶವಿರುವುದರಿಂದ ಅತಿವ್ಯಾಪ್ತಿ ಬರುವುದಿಲ್ಲ. ಅನುಷ್ಣಾಶೀತವೆಂದರೆ ಅವ್ಯಕ್ತವಾದ ಶೀತೋಷ್ಣವೆಂದರ್ಥ. ಪೃಥಿವೀಜಲಗಳ ಸ್ಪರ್ಶಕ್ಕಿಂತ ವಿಲಕ್ಷಣವಾಗಿರುವ ಈ ಸ್ಪರ್ಶವು ಕೇವಲ ವಾಯುವಿನಲ್ಲಿ ಮಾತ್ರವಿರುವುದರಿಂದ ಲಕ್ಷಣವು ನಿರ್ದುಷ್ಟವಾಗುತ್ತದೆ. ಈ ವಿಜಾತೀಯಸ್ಪರ್ಶಕ್ಕೆ ಜನಕತಾವಚ್ಛೇದಕವಾಗಿ ವಾಯುತ್ವಜಾತಿಯು ಸಿದ್ಧವಾಗುತ್ತದೆ. 'ವಿಜಾತೀಯಾನುಷ್ಣಾಶೀತಸ್ಪರ್ಶನಿಷ್ಠಜನ್ಯತಾ ನಿರೂಪಿತಾ ಯಾ ಜನಕತಾ ಸಾ—ಕಿಂಚಿದ್ಧರ್ಮಾವಚ್ಛಿನ್ನಾ—ಕಾರಣತಾತ್ವಾತ್ । ದಂಡನಿಷ್ಠಘಟಕರಣತಾವತ್' ಇತ್ಯಾದ್ಯನುಮಾನವನ್ನು ಹಿಂದಿನಂತೆಯೇ ತಿಳಿಯಬೇಕು. ಕಾರಣತೆಯು

ನಿರವಚ್ಛಿನ್ನವಾಗಿರುವುದಿಲ್ಲ. ಯಾವ ಧರ್ಮದಿಂದ ಕೂಡಿರುವುದೋ ಅದೇ ಅವಚ್ಛೇದಕವಾಗಿ ಜಾತಿಯಾಗಿರುತ್ತದೆ. ಶಬ್ದವಿಶೇಷಕ್ಕೆ ನಿಮಿತ್ತಕಾರಣತಾವಚ್ಛೇದಕವಾಗಿಯೂ ವಾಯುತ್ವಜಾತಿ ಸಿದ್ಧವಾಗುತ್ತದೆ.

ಈ ವಾಯು ತಿರ್ಯಗ್ಗಮನವುಳ್ಳದ್ದು. ಗಾಳಿಯು ಸ್ಪರ್ಶ, ಧೃತಿ, ಕಂಪ, ಶಬ್ದಗಳಿಂದ ಸಾಧಿಸಲ್ಪಡುತ್ತದೆ. ಸ್ಪರ್ಶಾದಿಗಳೇ ಅಂಗವಾಗಿ ಉಳ್ಳದ್ದು ವಾಯು. ಭಾರವಾದ ದ್ರವ್ಯವು ಬೀಳದಿರುವುದಕ್ಕೆ ಧೃತಿಯೆಂದು ಹೆಸರು. ಒಂದೊಂದರಿಂದಲೇ ಅನುಮಾನ ಹೇಳುತ್ತಾನೆ. ಸ್ಪರ್ಶದಿಂದ ಅನುಮಾನಕ್ರಮ. ಯೋಽಯಂ ರೂಪವದ್ದ್ರವ್ಯಾಸಮವೇತಸ್ಪರ್ಶಃ ಸಃ—ಕ್ವಚಿದಾಶ್ರಿತಃ—ಸ್ಪರ್ಶತ್ವಾತ್ । ಪೃಥಿವಿಸಮವೇತಸ್ಪರ್ಶವತ್ । ರೂಪವ ದ್ದ್ರವ್ಯಗಳು ಪೃಥಿವೀ, ಅಪ್ ತೇಜಸ್ಸುಗಳು. ಈ ಮೂರರಲ್ಲಿ ಸಮವಾಯದಿಂದ ಇಲ್ಲದಿರುವ ವಿಜಾತೀಯ ಸ್ಪರ್ಶವು ಒಂದು ದ್ರವ್ಯವನ್ನು ಆಶ್ರಯಿಸಿಯೇ ಇರಬೇಕು. ಪೃಥಿವಿಯಲ್ಲಿ ಸಮವಾಯದಿಂದ ಸ್ಪರ್ಶಗುಣವಿದೆ. ಸ್ಪರ್ಶಗುಣವಾದ ಮೇಲೆ ಆಧಾರವಿಲ್ಲದೆ ಇರಲಾರದು. ಪೃಥಿವ್ಯಾದಿಗಳಲ್ಲಿ ಸಂಭವಿಸದಿರುವುದರಿಂದ ಆ ದ್ರವ್ಯವು ವಾಯುವೇ ಆಗುತ್ತದೆ. ಪೃಥಿವ್ಯಾದಿ ಸ್ಪರ್ಶದಲ್ಲಿ ಸಿದ್ಧಸಾಧನ ದೋಷವಾರಣೆಗೋಸ್ಕರ ರೂಪವದ್ದ್ರವ್ಯಾಸಮವೇತವೆಂದಿದೆ. ಪೃಥಿವ್ಯಾದಿಗಳ ಸ್ಪರ್ಶವು ರೂಪದ್ದ್ರವ್ಯದಲ್ಲಿಯೇ ಇರುವುದರಿಂದ ಅಸಮವೇತವಾಗುವುದಿಲ್ಲ. 2) ಅಸತಿ ರೂಪವದ್ದ್ರವ್ಯಾಭಿಘಾತೇ ಯೋಽಯಂ ಪರ್ಣಾದಿಷು ಶಬ್ದಸಂತಾನಃ ಸಃ ಸ್ಪರ್ಶವದ್ವೇಗವದ್ದ್ರವ್ಯಸಂಯೋಗಜನ್ಯಃ—ಅವಿಭಜ್ಯಮಾನಾವಯವದ್ರವ್ಯಸಂಬಂಧಿಶಬ್ದಸಂತಾನತ್ವಾತ್ । ದಂಡಾಭಿಹತಭೇರೀಶಬ್ದಸಂತಾನವತ್ ॥ ರೂಪವದ್ದ್ರವ್ಯದ ಹೊಡೆತವಿಲ್ಲದೇ ಪರ್ಣಾದಿಗಳಲ್ಲಿ ಶಬ್ದವಾಗುತ್ತದೆ. ಅಲ್ಲಿ ಅವಯವವಿಭಾಗವೂ ಆಗದೇ ಶಬ್ದವಾಗುವುದರಿಂದ ಅದು ಒಂದು ಸ್ಪರ್ಶವುಳ್ಳ, ವೇಗವುಳ್ಳ ದ್ರವ್ಯ ಸಂಯೋಗದಿಂದ ಹುಟ್ಟಿದೆಯೆಂದು ಸಿದ್ಧವಾಗುತ್ತದೆ. ಆ ದ್ರವ್ಯವೇ ವಾಯುವು. ಪೃಥಿವ್ಯಾದಿಗಳ ಹೊಡೆತದಿಂದ ಉಂಟಾದ ಶಬ್ದ ಸಂತಾನದಲ್ಲಿ ಸಿದ್ಧಸಾಧನವಾರಣೆಗೋಸ್ಕರ 'ಅಸತಿ'—ಇತ್ಯಾದಿ ಸತ್ಯಂತ ಹೇಳಿದೆ. ವಿಭಾಗದಿಂದಲೂ ಶಬ್ದವಾಗುವುದರಿಂದ ಅಲ್ಲಿ ವ್ಯಭಿಚಾರವಾರಣೆಗೋಸ್ಕರ ಹೇತುವಿನಲ್ಲಿ 'ಅವಿಭಜ್ಯಮಾನ' ಎಂದು ಹೇಳಿದೆ. 3) ನಭಸಿ ತೃಣತೂಲವಿಮಾನಾದೀನಾಂ ಧೃತಿ'—ಸ್ಪರ್ಶವದ್ವೇಗವದ್ದ್ರವ್ಯಸಂಯೋಗಹೇತುಕಾ—ಅಸ್ಮದಾದ್ಯನಧಿಷ್ಠಿತದ್ರವ್ಯಧೃತಿತ್ವಾತ್ ॥ ನೌಕಾಧೃತಿವತ್ । ನೌಕಾಧಾರಣವು ಜಲದ್ರವ್ಯದಿಂದ ಎಂದು ಸಿದ್ಧವಾಗದೆ. ಹಾಗೆ ಆಕಾಶದಲ್ಲಿ ತೃಣಾದಿಗಳ ಧಾರಣೆ ಮಾಡುವವರ್‍ಯಾರು. ಅದೇ ವಾಯುವೆಂದು ಸಿದ್ಧವಾಗುತ್ತದೆ. ಕೇವಲ ದ್ರವ್ಯಧೃತಿಯನ್ನು ಹೇತುವಾಗಿ ಹೇಳಿದರೆ ಪ್ರಯತ್ನಪೂರ್ವಕವಾದ ಆತ್ಮಸಂಯೋಗ ಹೇತುಕ ಧೃತಿಯಲ್ಲಿ ವ್ಯಭಿಚಾರ ಬರುತ್ತದೆ. ಅದಕ್ಕೋಸ್ಕರ 'ಅಸ್ಮದಾದ್ಯನಧಿಷ್ಠಿತ'ವೆಂದು ವಿಶೇಷಣ ಹೇಳಿದೆ. ಶಾಖಾದಿಕಂಪದಿಂದ ಅನುಮಾನ. 4) ರೂಪವದ್ದ್ರವ್ಯಾಭಿಘಾತಮಂತರೇಣ ತೃಣೇ ಕರ್ಮ—ಸ್ಪರ್ಶವದ್ವೇಗವದ್ದ್ರವ್ಯಾಘಾತಜನ್ಯಂ—ವಿಜಾತೀಯಕರ್ಮತ್ವಾತ್ । ನದೀಪೂರಾಹತಕಾಶಾದಿಕರ್ಮವತ್. ಇದಿಯ

ಪ್ರವಾಹದ ವೇಗದಿಂದ ಮಧ್ಯದಲ್ಲಿರುವ ದರ್ಭೆ, ಝುಂಡು ಮುಂತಾದ ಹುಲ್ಲುಗಳು ಅಲ್ಲಾಡುತ್ತವೆ. ಹಾಗೆ ಭೂಮಿಯ ಮೇಲಿರುವ ಹುಲ್ಲು ಅಲ್ಲಾಡಲು ಕಾರಣವೇನು ? ರೂಪವದ್ದ್ರವ್ಯದ ಹೊಡೆತವಾಗಲಿಲ್ಲ. ಆದುದರಿಂದ ಆ ತೃಣಾದಿಗಳಲ್ಲಿರುವ ಕಂಪಕ್ಕೆ ಕಾರಣಭೂತವಾದ ಒಂದು ದ್ರವ್ಯವು ಅನುಮಿತವಾಗುತ್ತದೆ. ಅದೇ ವಾಯು. ಹೀಗೆ ಈ ನಾಲ್ಕು ಅನುಮಾನಗಳಿಂದ ವಾಯು ಸಿದ್ಧವಾಗುತ್ತದೆ. ಇದು ಪ್ರತ್ಯಕ್ಷ ವಿಷಯ ಏಕೆ ಆಗುವುದಿಲ್ಲವೆಂದು ಆತ್ಮ ನಿರೂಪಣ ಮಾಡುವಾಗ ಹೇಳುತ್ತಾನೆ. 'ನದೃಷ್ಟಾನಾಂ ಸ್ಪರ್ಶ ಇತ್ಯದೃಷ್ಟಲಿಂಗೋ ವಾಯುಃ' ವೈಶೇಷಿಕ ಸೂತ್ರ. ಈ ವಿಜಾತೀಯ ಸ್ಪರ್ಶವು ಪ್ರತ್ಯಕ್ಷಭೂತವಾದ ಪೃಥಿವ್ಯಪ್ತೇಜಸ್ಸುಗಳಲ್ಲಿ ಇರುವುದಿಲ್ಲ. ಆದುದರಿಂದ ಅದೃಷ್ಟ ವಿಶೇಷವ್ಯಾಪ್ತಿಕವಾದದ್ದೇ ಲಿಂಗವಾಗಿರುತ್ತದೆ. ಇಚ್ಛಾದಿಗಳಿಂದ ಆತ್ಮನನ್ನು ಊಹಿಸಿ ದಂತೆ ವಾಯುವನ್ನೂ ತಿಳಿಯಬೇಕೆಂದರ್ಥ. ಅನುಮಾನದಿಂದ ಒಂದು ದ್ರವ್ಯ ಸಿದ್ಧ ವಾದ ಮೇಲೆ 'ಪ್ರಾಣಾದ್ವಾಯುರಜಾಯತ' ಇತ್ಯಾದಿ ಶ್ರುತಿಗಳಿಂದ ಅದರ ಹೆಸರು ವಾಯುವೆಂದು ನಿರ್ಣೀತವಾಗುತ್ತದೆ.

ಪೂರ್ವವದಿತಿ । ವಾಯುರ್ದ್ವಿವಿಧೋ ನಿತ್ಯೋಽನಿತ್ಯಶ್ಚ । ಪರಮಾಣುರೂಪೋ ನಿತ್ಯ ಸ್ತದನ್ಯೋಽನಿತ್ಯೋಽವಯವಸಮವೇತಶ್ಚ । ಸೋಽಪಿ ತ್ರಿವಿಧಃ, ಶರೀರೇಂದ್ರಿಯ ವಿಷಯಭೇದಾತ್ । ತತ್ರ ಶರೀರಮಯೋನಿಜಂ ಪಿಶಾಚಾದೀನಾಮ್ । ಪರಂತು ಜಲೀಯತೈಜಸವಾಯವೀಯ ಶರೀರಾಣಾಂ ಪಾರ್ಥಿವಭಾಗೋಪ ಷ್ಟಂಭಾದುಪಭೋಗಕ್ಷಮತ್ವಂ, ಜಲಾದೀನಾಂ ಪ್ರಾಧಾನ್ಯಾಜ್ಜಲೀಯತ್ವಾದಿಕ ಮಿತಿ । ಅತ್ರ ಯೋ ವಿಶೇಷಸ್ತಮಾಹ—ದೇಹವ್ಯಾಪೀತಿ । ಶರೀರವ್ಯಾಪಕಂ ಸ್ಪರ್ಶಗ್ರಾಹಕ ಮಿಂದ್ರಿಯಂ ತ್ವಕ್ । ತಚ್ಚ ವಾಯವೀಯಂ ರೂಪಾದಿಷು ಮಧ್ಯೇ ಸ್ಪರ್ಶಸ್ಯೈವಾಭಿವ್ಯಂಜಕತ್ವಾತ್, ಅಂಗಸಂಗಿಸಲಿಲಶೈತ್ಯಾಭಿವ್ಯಂಜಕ ವ್ಯಜನಪವನವತ್ ॥ ೪೨–೪೩ ॥

ನಿತ್ಯಾನಿತ್ಯತ್ವವನ್ನು ಹಿಂದಿನಂತೆ ತಿಳಿಯಬೇಕೆಂಬುದನ್ನು ವಿಶದಪಡಿಸುತ್ತಾನೆ. 'ವಾಯುಃ'—ಇತಿ । ಪರಮಾಣು ರೂಪವಾದ ವಾಯುವು ನಿತ್ಯ. ಅದಕ್ಕಿಂತ ಬೇರೆ ಯಾದ ದ್ವ್ಯಣುಕಾದಿಗಳೆಲ್ಲವೂ ಅನಿತ್ಯ. ಆದುದರಿಂದ ತಮ್ಮ ಅವಯವಗಳಲ್ಲಿ ಸಮ ವಾಯದಿಂದ ಇರುತ್ತವೆ. ಶರೀರ, ಇಂದ್ರಿಯ, ವಿಷಯಭೇದದಿಂದ ಪುನಃ ಇದು ಮೂರು ವಿಧವಾಗುತ್ತದೆ. ಶರೀರವು ಜಲಾದಿಗಳಂತೆ ಕೇವಲ ಅಯೋನಿಜವಾಗಿರುತ್ತದೆ. ಪಿಶಾಚಾದಿಗಳ ಶರೀರವು ಅಯೋನಿಜ. ಇದು ವಾಯುಲೋಕದಲ್ಲಿ ಪ್ರಸಿದ್ಧವಾಗಿದೆ.

ಈ ವಾಯವೀಯ ಶರೀರದಲ್ಲಿ ಕರಚರಣಾದಿಗಳು ಯಾವುವೂ ಇಲ್ಲದಿರುವುದರಿಂದ ಜೀವರಿಗೆ ಭೋಗಸಾಧನವಾಗುವುದು ಹೇಗೆ ಎಂಬ ಶಂಕೆಗೆ ಸಮಾಧಾನ ತೋರಿಸು ತ್ತಾನೆ. 'ಪರಂತು'—ಇತಿ. ವಾಯವೀಯ ಶರೀರಕ್ಕೆ ಪಾರ್ಥಿವಾಂಶದ ಸಂಯೋಗ ವಿರುವುದರಿಂದ ಭೋಗಾಯತನವಾಗಲು ತೊಂದರೆ ಇಲ್ಲ. ಜಲೀಯಾದಿ ಶರೀರ

ದಲ್ಲಿಯೂ ಈ ಸಮಾಧಾನವನ್ನೇ ಹೇಳಬೇಕು. ಹಿಂದೆ ಈ ವಿಷಯ ಹೇಳಿದೆ. ಜಲೀಯಾದಿ ಆಯಾಯ ಭಾಗಗಳು ಹೆಚ್ಚಾದುದರಿಂದ ಆಯಾಯ ಹೆಸರಿನಿಂದ ಕರೆಯಲ್ಪಡುತ್ತದೆ. ಪಾರ್ಥಿವ ಭಾಗದ ಸಹಾಯದಿಂದಲೇ ಅವು ಭೋಗ ಸಾಧನವಾಗುತ್ತವೆ. ತ್ವಗಿಂದ್ರಿಯವು ವಾಯವೀಯವಾಗುತ್ತದೆ. ಅದರ ವಿಶೇಷವನ್ನು ತೋರಿಸುತ್ತಾನೆ. 'ಅತ್ರ'—ಇತಿ. ಚರ್ಮದಲ್ಲಿ ಈ ಇಂದ್ರಿಯವಿರುತ್ತದೆ. "ಶರೀರವ್ಯಾಪಕತ್ವೇ ಸತಿ ಸ್ಪರ್ಶಗ್ರಾಹಕತ್ವೇಸತಿ ಇಂದ್ರಿಯತ್ವಂ" ಎಂದು ತ್ವಗಿಂದ್ರಿಯದ ಲಕ್ಷಣ. ಇದು ಸ್ಪಾರ್ಶನ ಪ್ರತ್ಯಕ್ಷವನ್ನು ಹುಟ್ಟಿಸುವುದರಿಂದ 'ಸ್ಪಾರ್ಶನತ್ವಾವಚ್ಛಿನ್ನ ಕಾರ್ಯತಾ ನಿರೂಪಿತ ಕಾರಣತ್ವವು ಇದರಲ್ಲಿದೆ. ಕೇವಲ 'ಇಂದ್ರಿಯತ್ವಂ' ಎಂದರೆ ಚಕ್ಷುರಾದಿ ಇಂದ್ರಿಯಗಳಲ್ಲಿ ಅತಿವ್ಯಾಪ್ತಿ. 'ಸ್ಪರ್ಶಗ್ರಾಹಕತ್ವಂ' ಇಷ್ಟು ಮಾತ್ರ ಹೇಳಿದರೆ ಕಾಲಾದಿಗಳಲ್ಲಿ ಅತಿವ್ಯಾಪ್ತಿ. ಆದುದರಿಂದ ಇಂದ್ರಿಯತ್ವಂ ಎಂದು ಹೇಳಬೇಕು. ತ್ವಗಿಂದ್ರಿಯವು ವಾಯುವೀಯವೆಂಬುದರಲ್ಲಿ ಅನುಮಾನ ಪ್ರಮಾಣ ತೋರಿಸುತ್ತಾನೆ. 'ತ್ವಗಿಂದ್ರಿಯಂ ವಾಯವೀಯಂ—ರೂಪಾದಿಮಧ್ಯೇಸ್ಪರ್ಶಸ್ಯೈವಾಭಿವ್ಯಂಜಕತ್ವಾತ್. 'ಅಂಗಸಂಗಿ'—ಇತ್ಯಾದಿ ದೃಷ್ಟಾಂತ. ಬೀಸಣಿಗೆಯ ಗಾಳಿಯು ಅವಯವ ಸಂಬಂಧವಾದ ಸ್ವೇದ ಜಲದ ಶೈತ್ಯವನ್ನು (ಶೀತಸ್ಪರ್ಶ) ವ್ಯಕ್ತಪಡಿಸುವುದರಿಂದ ಅದು ಹೇಗೆ ವಾಯವೀಯವೋ ಅದರಂತೆ ತ್ವಗಿಂದ್ರಿಯವು ಸ್ಪರ್ಶಮಾತ್ರಾಭಿವ್ಯಂಜಕವಾದುದರಿಂದ ವಾಯವೀಯವಾಗುತ್ತದೆ. 'ರೂಪಾದಿಮಧ್ಯೇ ಯತ್ ಸ್ಪರ್ಶಸ್ಯೈವಾಭಿವ್ಯಂಜಕಂ (ಗ್ರಾಹಕಂ) ತತ್ ವಾಯವೀಯಂ' ಎಂದು ವ್ಯಾಪ್ತಿ ಪ್ರಸಿದ್ಧವಾಗಿದೆ. ತ್ವಗಿಂದ್ರಿಯ ಸಂಯೋಗದಲ್ಲಿ ಅತಿವ್ಯಾಪ್ತಿ ವಾರಣೆಗೋಸ್ಕರ 'ದ್ರವ್ಯತ್ವೇ ಸತಿ' ಎಂದು ಹಿಂದಿನಂತೆ ಹೇತು ಶರೀರದಲ್ಲಿ ಸೇರಿಸಬೇಕು. ತ್ವಗಿಂದ್ರಿಯವು ಸ್ಪರ್ಶವನ್ನು ತಿಳಿಸಿಕೊಟ್ಟಂತೆ ಸ್ಪರ್ಶದಲ್ಲಿರುವ ಜಾತಿಯನ್ನೂ 'ಯೇನೇಂದ್ರಿಯೇಣ'—ನ್ಯಾಯದಿಂದ ತಿಳಿಸಿಕೊಡುವುದರಿಂದ ಸ್ಪರ್ಶ ಮಾತ್ರ ಅಭಿವ್ಯಂಜಕವೆಂದರೆ ಅಸಿದ್ಧಿದೋಷ ಬರುತ್ತದೆ. ಅದಕ್ಕೋಸ್ಕರ ರೂಪಾದಿಮಧ್ಯದಲ್ಲಿ ಎಂದಿದೆ. ರೂಪಾದಿ ಗುಣಗಳಲ್ಲಿ ಇದು ಸ್ಪರ್ಶಮಾತ್ರಾಭಿವ್ಯಂಜಕವೆಂದುದರಿಂದ ದೋಷವಿಲ್ಲ. ಮನಸ್ಸಿನಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ 'ಸ್ಪರ್ಶಸ್ಯೈವ'—ಎಂದು ಏವಕಾರ ಹೇಳಿದೆ. ಮನಸ್ಸು ಕೇವಲ ಸ್ಪರ್ಶವ್ಯಂಜಕವಲ್ಲ. ರೂಪಾದಿಸಕಲವ್ಯಂಜಕವೂ ಆಗುತ್ತದೆ. ||

**ಪ್ರಾಣಾದಿಸ್ತು ಮಹಾವಾಯುಪರ್ಯಂತೋ ವಿಷಯೋ ಮತಃ ||**

ವಿಷಯಂ ದರ್ಶಯತಿ—ಪ್ರಾಣಾದಿರಿತಿ । ಯದ್ಯಪ್ಯನಿತ್ಯೋವಾಯುಶ್ಚತುರ್ವಿಧಃ । ತಸ್ಯ ಚತುರ್ಥೀ ವಿಧಾ ಪ್ರಾಣಾದಿರಿತ್ಯುಕ್ತಮಾಕರೇ । ತಥಾಪಿ ಸಂಕ್ಷೇಪಾದತ್ರ ತ್ರೈವಿಧ್ಯಮುಕ್ತಮ್ । ಪ್ರಾಣಸ್ತ್ವೇಕ ಏವ ಹೃದಾದಿನಾನಾಸ್ಥಾನವಶಾನ್ಮುಖನಿರ್ಗಮಾದಿನಾನಾಕ್ರಿಯಾವಶಾಚ್ಚ ನಾನಾಸಂಜ್ಞಾಂ ಲಭತ ಇತಿ ||

**|| ಇತಿ ವಾಯುಗ್ರಂಥಃ ||**

ಪ್ರಾಣವಾಯುವನ್ನಾರಂಭಿಸಿ ಮಹಾವಾಯುವಿನವರೆಗಿರುವುದೆಲ್ಲಾ ವಿಷಯ ವಾಯುವಾಗುತ್ತದೆ. ಭಾಷ್ಯಾದಿಗ್ರಂಥದಲ್ಲಿ ಪ್ರಾಣಾದಿಗಳನ್ನು ನಾಲ್ಕನೆಯ ವಿಧವಾಗಿ ಪರಿಗಣಿಸಿರುವಾಗ ಮೂರುವಿಧವೆಂದು ಹೇಳಿದುದು ಹೇಗೆ ? ಎಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ತಥಾಪಿ—' ಇತಿ. ಸಂಕ್ಷೇಪವಾಗಿ ಹೇಳಬೇಕಾದುದರಿಂದ ಮೂರೇ ಎಂದು ಇಲ್ಲಿ ಹೇಳಿದೆ. ಮಹಾವಾಯುವೆಂದರೆ ಪ್ರಳಯಕಾಲದವಾಯು. ಪ್ರಾಣವಾಯು ಒಂದೇ ಆದರೂ, ಆಯಾಯಸ್ಥಾನೋಪಾಧಿಗಳಿಂದಲೂ, ಮುಖನಿರ್ಗಮ ನಾದಿಕ್ರಿಯಾರೂಪಉಪಾಧಿಗಳಿಂದಲೂ ಐದು ಪ್ರಕಾರವನ್ನು ಹೊಂದುತ್ತದೆ. ಇದನ್ನೇ ಅಮರದಲ್ಲಿ ಹೀಗೆ ಹೇಳಿರುತ್ತಾನೆ. 'ಹೃದಿ ಪ್ರಾಣೋ ಗುದೇಽಪಾನಃ ಸಮಾನೋ ನಾಭಿಸಂಸ್ಥಿತಃ || ಉದಾನಃ ಕಂಠದೇಶೇ ಸ್ಯಾದ್ವ್ಯಾನಃ ಸರ್ವಶರೀರಗಃ ||' ಮುಖ ನಾಸಿಕಗಳಿಂದ ನಿಷ್ಕ್ರಮಪ್ರವೇಶವಿರುವುದರಿಂದ ಪ್ರಾಣವಾಗುತ್ತದೆ. ಮಲಾದಿಗಳನ್ನು ಕೆಳಗೆ ಒಯ್ಯುವುದರಿಂದ ಅಪಾನಃ. ಆಹಾರದ ಜೀರ್ಣಕ್ಕೋಸ್ಕರ ಜಠರಾಗ್ನಿಯನ್ನು ಪ್ರಜ್ವಲನಗೊಳಿಸುವುದರಿಂದ ಸಮಾನಃ. ಅನ್ನಾದಿಗಳನ್ನು ಮೇಲಕ್ಕೆ ಒಯ್ಯುವುದರಿಂದ ಉದಾನ. ನಾಡಿಮುಖದಲ್ಲಿ ವ್ಯಾಪಿಸಿರುವುದರಿಂದ ವ್ಯಾನನೆಂದು ಆಯಾಯಾ ವ್ಯಾಪಾರಗಳಿಂದಲೂ ಬೇರೆಯಾಗಿ ತಿಳಿಯಬೇಕು.

ಹೀಗೆ ವಾಯುಗ್ರಂಥ ಮುಗಿದಿದೆ.

**ಆಕಾಶಸ್ಯ ತು ವಿಜ್ಞೇಯಃ ಶಬ್ದೋ ವೈಶೇಷಿಕೋ ಗುಣಃ || ೪೪ ||**

ಆಕಾಶಂ ನಿರೂಪಯತಿ—ಆಕಾಶಸ್ಯೇತಿ | ಆಕಾಶಕಾಲದಿಶಾಮೇಕೈಕವ್ಯಕ್ತಿತ್ವಾದಾ ಕಾಶತ್ವಾದಿಕಂ ನ ಜಾತಿಃ | ಕಿಂ ತು ಆಕಾಶತ್ವಂ ಶಬ್ದಾಶ್ರಯತ್ವಮ್ | ವೈಶೇಷಿಕ ಇತಿ ಕಥನಂ ತು ವಿಶೇಷಗುಣಾಂತರವ್ಯವಚ್ಛೇದಾಯ | ಏತೇನ ಪ್ರಮಾಣಮಪಿ ದರ್ಶಿತಮ್ | ತಥಾಹಿ— ಶಬ್ದೋ ವಿಶೇಷಗುಣಃ ಚಕ್ಷುರ್ಗ್ರಹಣಾಯೋಗ್ಯ ಬಹಿರಿಂದ್ರಿಯಗ್ರಾಹ್ಯ ಜಾತಿಮತ್ತ್ವಾತ್, ಸ್ಪರ್ಶವತ್ | ಶಬ್ದೋ ದ್ರವ್ಯಸಮ ವೇತೋ ಗುಣತ್ವಾತ್ ಸಂಯೋಗವತ್, ಇತ್ಯನುಮಾನೇನ ಶಬ್ದಸ್ಯ ದ್ರವ್ಯಸಮ ವೇತತ್ವೇ ಸಿದ್ಧೇ, ಶಬ್ದಃ ನ ಸ್ಪರ್ಶವದ್ವಿಶೇಷಗುಣಃ ಅಗ್ನಿಸಂಯೋಗಾಽಸಮ ವಾಯಿಕಾರಣಕತ್ವಾಭಾವೇ ಸತ್ಯಕಾರಣಗುಣಪೂರ್ವಕಪ್ರತ್ಯಕ್ಷತ್ವಾತ್ ಸುಖ ವತ್ | ಪಾಕಜರೂಪಾದೌ ವ್ಯಭಿಚಾರವಾರಣಾಯ ಸತ್ಯಂತಮ್ | ಪಟರೂ ಪಾದೌ ವ್ಯಭಿಚಾರವಾರಣಾಯಾಽಕಾರಣಗುಣಪೂರ್ವಕೇತಿ | ಜಲಪರಮಾಣು ರೂಪಾದೌ ವ್ಯಭಿಚಾರವಾರಣಾಯಪ್ರತ್ಯಕ್ಷೇತಿ | ಶಬ್ದೋ ನ ದಿಕ್ಕಾಲಮನಸಾಂ ಗುಣಃ ವಿಶೇಷಗುಣತ್ವಾತ್ | ನಾತ್ಮವಿಶೇಷಗುಣಃ ಬಹಿರಿಂದ್ರಿಯಗ್ರಾಹ್ಯತ್ವಾ ದ್ರೂಪವತ್ | ಇತ್ಥಂ ಚ ಶಬ್ದಾಧಿಕರಣಂ ನವಮಂ ದ್ರವ್ಯಂ ಗಗನನಾಮಕಂ ಸಿಧ್ಯತಿ | ನ ಚ ವಾಯ್ವವಯವೇಷು ಸೂಕ್ಷ್ಮಶಬ್ದಕ್ರಮೇಣ ವಾಯೌ ಕಾರಣ

ಗುಣಪೂರ್ವಕಃ ಶಬ್ದ ಉತ್ಪದ್ಯತಾಮಿತಿ ವಾಚ್ಯಮ್ । ಅಯಾವದ್ದ್ರವ್ಯ ಭಾವಿತ್ವೇನ ವಾಯುವಿಶೇಷಗುಣತ್ವಾಭಾವಾತ್ ॥

ವಿಶೇಷ ಏವ ವೈಶೇಷಿಕಃ ಆಕಾಶಕ್ಕೆ ಶಬ್ದವೊಂದೇ ವಿಶೇಷಗುಣವಲ್ಲದೆ ಬೇರೆ ಇಲ್ಲವೆಂದರ್ಥ. 'ಸಮವಾಯೇನ ಶಬ್ದಾಧಿಕರಣತ್ವಂ' ಆಕಾಶದ ಲಕ್ಷಣ. ಸಮವಾಯ ಸಂಬಂಧದಿಂದ ಶಬ್ದಕ್ಕೆ ಆಶ್ರಯವಾದುದು ಆಕಾಶ. ಕಾಲಿಕಾದಿ ಸಂಬಂಧದಿಂದ ಕಾಲಾದಿಗಳು ಆಶ್ರಯವಾದರೂ ದೋಷವಿಲ್ಲ. 'ಶಬ್ದವತ್ತ್ವಂ' ಎಂದು ಹೇಳಿದರೆ ಯಾವಾಗಲೂ ಶಬ್ದವಿರಬೇಕಾಗುತ್ತದೆ. ಆಗ ಯಾವಾಗಲೂ ಆಕಾಶದಲ್ಲಿ ಶಬ್ದ ಉಪಲಬ್ಧವಾಗದಿರುವುದರಿಂದ ಅಸಂಭವ ದೋಷ ಬರುತ್ತದೆ. ಅದಕ್ಕೋಸ್ಕರ ಶಬ್ದಕ್ಕೆ ಆಶ್ರಯವೆಂದು ಹೇಳಿದೆ.

ಲಾಘವದಿಂದ ಕಾಲತ್ವಾದಿಗಳಿಗೂ ಜಾತಿತ್ವವಿಲ್ಲವೆಂದು ತೋರಿಸುತ್ತಾನೆ. 'ಆಕಾಶ'—ಇತಿ. 'ಆಕಾಶತ್ವಂ, ಕಾಲತ್ವಂ, ದಿಕ್ತ್ವಂ' ಈ ಮೂರೂ ಏಕವ್ಯಕ್ತಿಗತವಾದುದರಿಂದ ಜಾತಿಯಾಗುವುದಿಲ್ಲ. ಏಕವ್ಯಕ್ತಿಗತಧರ್ಮಕ್ಕೆ ಜಾತಿಬಾಧಕತ್ವವನ್ನು ಹಿಂದೆ ಹೇಳಿದೆ. ಅನೇಕ ಸಮವೇತವಾದರೇ ಆ ಧರ್ಮವು ಜಾತಿಯಾಗುತ್ತದೆ. ಆಕಾಶತ್ವಾದಿಗಳು ಉಪಾಧಿಗಳಾಗುತ್ತವೆ. 'ಸ್ವಪ್ರತಿಯೋಗಿಕ ಭೇದಾಸಮಾನಾಧಿಕರಣ ಧರ್ಮವತ್ತ್ವಂ' ಏಕತ್ವದ ಲಕ್ಷಣ. ಸ್ವ—ಆಕಾಶಃ ಆಕಾಶವೇ ಪ್ರತಿಯೋಗಿಯಾಗಿರುವ ಭೇದವೆಂದರೆ ಅನ್ಯೋನ್ಯಾಭಾವ. ಅದಕ್ಕೆ ಅಸಮಾನಾಧಿಕರಣವಾದ ಧರ್ಮವೆಂದರೆ ಆಕಾಶತ್ವಂ. ಅದು ಉಳ್ಳದ್ದು ಆಕಾಶ. ಆಕಾಶ ಪ್ರತಿಯೋಗಿಕ ಭೇದವು ಆಕಾಶದಲ್ಲಿ ಬರುವುದಿಲ್ಲ. 'ಪೃಥಿವೀ ಆಕಾಶೋನ' ಎಂದು ಪೃಥಿವಿಯಲ್ಲಿ ಬರಬಹುದು. ಅಲ್ಲಿ ಆಕಾಶತ್ವ ಧರ್ಮವಿಲ್ಲ. ಹೀಗೆ ಆಕಾಶತ್ವವು ಸ್ವಪ್ರತಿಯೋಗಿಕ ಭೇದಾಸಮಾನಾಧಿಕರಣಕವಾಗುತ್ತದೆ.

ವೈಶೇಷಿಕಗುಣವೆಂದುದರಿಂದ ಆಕಾಶದಲ್ಲಿ ಶಬ್ದವೊಂದೇ ವಿಶೇಷಗುಣವೆಂದು ತಿಳಿಯುತ್ತದೆ. ರೂಪ, ರಸ, ಗಂಧ, ಸ್ಪರ್ಶಗಳೆಂಬ ನಾಲ್ಕು ವಿಶೇಷಗುಣ ಇಲ್ಲವೆಂದು ತಿಳಿಸಲು ಹಾಗೆ ಹೇಳಿದೆ. ಇದರಿಂದ ಆಕಾಶವಿದೆಯೆಂಬುದರಲ್ಲಿ ಪ್ರಮಾಣವನ್ನೂ ತೋರಿಸಿದಂತಾಗುತ್ತದೆ. 'ತಥಾಹಿ'—ಎಂಬುದರಿಂದ ಅನುಮಾನ ಪ್ರಮಾಣವನ್ನು ತೋರಿಸುತ್ತಾನೆ. ಮೊದಲು ಶಬ್ದವು ವಿಶೇಷಗುಣವೆಂಬುದನ್ನು ಸಾಧಿಸುತ್ತಾನೆ. ಶಬ್ದ ಪಕ್ಷ. ವಿಶೇಷ ಗುಣ ಸಾಧ್ಯ. 'ಚಕ್ಷುರ್ಗ'—ಇತ್ಯಾದಿ ಪಂಚಮ್ಯಂತ ವಾಕ್ಯವು ಹೇತು. ಸ್ಪರ್ಶವತ್ ದೃಷ್ಟಾಂತ. ಯಾವುದು ಚಕ್ಷುರ್ಗ್ರಹಣಕ್ಕೆ ಯೋಗ್ಯವಾಗದೇ ಬಹಿರಿಂದ್ರಿಯದಿಂದ ಗ್ರಾಹ್ಯವಾದ ಜಾತಿಯುಳ್ಳದ್ದೋ ಅದು ವಿಶೇಷ ಗುಣವೆಂದು ವ್ಯಾಪ್ತಿ. ಸ್ಪರ್ಶಗುಣ ಹಾಗಾದುದರಿಂದ ದೃಷ್ಟಾಂತ. ಪ್ರಕೃತ ಚಕ್ಷುರ್ಗ್ರಹಣಾಯೋಗ್ಯಾ, ಬಹಿರಿಂದ್ರಿಯಗ್ರಾಹ್ಯಾ ಚ ಯಾ ಜಾತಿಃ—ಶಬ್ದತ್ವರೂಪಾಜಾತಿಃ, ತಾದೃಶಜಾತಿಮತ್ತ್ವಂ— ಆಜಾತಿಯುಳ್ಳದ್ದು ಶಬ್ದ. ಚಕ್ಷುರ್ಗ್ರಹಣಾಯೋಗ್ಯಾ —

ಚಾಕ್ಷುಷಸಾಕ್ಷಾತ್ಕಾರಕ್ಕೆ ವಿಷಯವಾಗದೆ ಇರುವುದು ಎಂದರ್ಥ. ಶಬ್ದತ್ವಂ ನಯನೇಂದ್ರಿಯ ಗ್ರಾಹ್ಯವಲ್ಲ. ಅದು ಶ್ರಾವಣ ಪ್ರತ್ಯಕ್ಷ ವಿಷಯ. ಘಟಾದಿಗಳಲ್ಲಿ ವ್ಯಭಿಚಾರವಾರಣೆಗೋಸ್ಕರ ಚಕ್ಷುರ್ಗ್ರಹಣಾಯೋಗ್ಯವಿಶೇಷಣ ಹೇಳಿದೆ. ಘಟಾದಿಗಳು ಚಾಕ್ಷುಷಸಾಕ್ಷಾತ್ಕಾರಕ್ಕೆ ವಿಷಯುಗಳೇ ಆಗಿರುತ್ತವೆ. ಆತ್ಮನು ಚಕ್ಷುರ್ಗ್ರಹಣ ಯೋಗ್ಯನಲ್ಲ. ಅಲ್ಲಿ ವ್ಯಭಿಚಾರವಾರಣೆಗೋಸ್ಕರ ಬಹಿರಿಂದ್ರಿಯಗ್ರಾಹ್ಯವೆಂದು ಹೇಳಿದೆ. ರಸತ್ವಾದಿಗಳಲ್ಲಿ ವ್ಯಭಿಚಾರವಾರಣೆಗೋಸ್ಕರ ಜಾತಿಮತ್ತ್ವಾತ್ ಎಂದು ಹೇಳಿದೆ. ರಸತ್ವದಲ್ಲಿ ಬೇರೊಂದು ಜಾತಿಯಿಲ್ಲ. ಈ ಅನುಮಾನದಿಂದ ಶಬ್ದವು ಗುಣವೆಂದು ಸಿದ್ಧವಾದ ಮೇಲೆ ಎರಡನೆಯ ಅನುಮಾನದಿಂದ ಅದಕ್ಕೆ ದ್ರವ್ಯಾಶ್ರಿತತ್ವವನ್ನು (ಅದು ದ್ರವ್ಯವನ್ನಾಶ್ರಯಿಸಿದೆ) ಸಾಧಿಸುತ್ತಾನೆ.

'ಶಬ್ದಃ—' ಇತಿ. ಗುಣತ್ವಹೇತುವಿನಿಂದ ಶಬ್ದಪಕ್ಷದಲ್ಲಿ ದ್ರವ್ಯಸಮವೇತತ್ವವು ಸಾಧಿತವಾಗುತ್ತದೆ. ದ್ರವ್ಯದಲ್ಲಿ ಸಮವಾಯಸಂಬಂಧದಿಂದ ಇರುವುದು ದ್ರವ್ಯಸಮವೇತ. ಯಾವುದು ಗುಣವೋ ಅದು ಸಮವಾಯದಿಂದ ದ್ರವ್ಯಾಶ್ರಿತವಾಗಿರುತ್ತದೆ. ಎಂದು ಸಂಯೋಗಾದಿಗುಣಗಳಲ್ಲಿ ವ್ಯಾಪ್ತಿಯು ಪ್ರಸಿದ್ಧವಾಗಿದೆ. ಕರದಂಡಸಂಯೋಗವು ಸಮವಾಯದಿಂದ ಕರದಂಡರೂಪದ್ರವ್ಯಗಳನ್ನು ಆಶ್ರಯಿಸಿರುತ್ತದೆ. ಅದರಂತೆ ಶಬ್ದವೂ ಗುಣವಾದುದರಿಂದ ಸಮವಾಯಸಂಬಂಧದಿಂದ ಒಂದು ದ್ರವ್ಯವನ್ನು ಆಶ್ರಯಿಸಿರುತ್ತದೆ. ಗುಣವೇ ಅಲ್ಲವೆಂದು ಹೇತ್ವಸಿದ್ಧಿಶಂಕೆ ಬಂದರೆ ಅದರವಾರಣೆಗೋಸ್ಕರ ಹಿಂದೆ ಹೇಳಿದ ಅನುಮಾನವನ್ನು ಆಶ್ರಯಿಸಬೇಕು. ಪೂರ್ವಾನುಮಾನದಿಂದ ಶಬ್ದದಲ್ಲಿ ಗುಣತ್ವ ಸಾಧಿತವಾದುದರಿಂದ ಇಲ್ಲಿನ ಹೇತ್ವಸಿದ್ಧಿಶಂಕೆಯು ಅದರಿಂದ ವಾರಣೆಯಾಗುತ್ತದೆ. ಇತ್ಥಂಚ—ಈ ಅನುಮಾನದಿಂದ, ಶಬ್ದಕ್ಕೆ, ದ್ರವ್ಯಸಮವೇತತ್ವೇ—ಸಮವಾಯದಿಂದ ದ್ರವ್ಯಾಶ್ರಿತತ್ವವು ಸಿದ್ಧೇ— ಅನುಮಿತವಾದ ಮೇಲೆ, ಪರಿಶೇಷಾನುಮಾನದಿಂದ ಆಕಾಶವನ್ನು ಸಾಧಿಸಬೇಕೆಂದರ್ಥ. ಪರಿಶೇಷಾನುಮಾನ. 'ಶಬ್ದಃ—' ಇತ್ಯಾದಿ. 'ಚತ್ವಾರಿ ಸ್ಪರ್ಶವಂತಿ ಹಿ' ಎಂದು ಹೇಳಿರುವುದರಿಂದ ಪೃಥಿವೀಜಲತೇಜೋವಾಯುಗಳು. ಸ್ಪರ್ಶವುಳ್ಳವುಗಳು. ಶಬ್ದವು ಸ್ಪರ್ಶವುಳ್ಳ ಈ ಪೃಥಿವ್ಯಾದಿಗಳ ಗುಣವಾಗುವುದಿಲ್ಲ. ಶಬ್ದವೇ ಪಕ್ಷ. ಪೃಥಿವ್ಯಾದಿಸಂಬಂಧಿತ್ವೇನ ವಿಶೇಷಗುಣತ್ವಾಭಾವ ಸಾಧ್ಯ. 'ಅಗ್ನಿ—' ಇತ್ಯಾದಿ ಹೇತು. ಅಗ್ನಿಸಂಯೋಗವೇ ಅಸಮವಾಯಿಕಾರಣವು ಯಾವುದಕ್ಕೆ ಇದೆಯೋ ಅದು ಅಗ್ನಿಸಂ....ಣಕ. ತಸ್ಯಭಾವಃ ಅಗ್ನಿ....ಕತ್ವಂ. ತಸ್ಯ ಅಭಾವಃ, ಅಗ್ನಿಸಂ....ಕತ್ವಾಭಾವಃ, ಇದು ಹೇತುವಿಗೆ ವಿಶೇಷಣ. ಅಗ್ನಿಸಂಯೋಗವು ಅಸಮವಾಯಿಕಾರಣವಾಗಿ ಇಲ್ಲದಿರುವುದು. ಅಕಾರಣಗುಣಪೂರ್ವಕಪ್ರತ್ಯಕ್ಷತ್ವಾತ್. ಕಾರಣಗುಣಪೂರ್ವಕಂ ಪ್ರತ್ಯಕ್ಷಂ ಯಸ್ಯ. ತತ್ ಕಾರಣಗುಣಪೂರ್ವಕಪ್ರತ್ಯಕ್ಷಮ್. ತನ್ನಭವತಿ ಇತಿ ಅಕಾರ....ಕ್ಷಂ ತಸ್ಯ ಭಾವಃ ತಸ್ಮಾತ್. ಅಕಾ....ಕ್ಷತ್ವಾತ್ ॥ ಅಕಾರಣಗುಣಪೂರ್ವಕತ್ವೇ ಸತಿ ಪ್ರತ್ಯಕ್ಷತ್ವಾತ್ ಎಂದು ತಾತ್ಪರ್ಯ. 'ಯದಗ್ನಿಸಂಯೋಗಾಸಮವಾಯಿಕಾರಣಕತ್ವಾಭಾವವಿಶಿಷ್ಟಾಕಾರಣ

ಗುಣಪೂರ್ವಕಪ್ರತ್ಯಕ್ಷಂ ತನ್ನ ಸ್ಪರ್ಶವದ್ವಿಶೇಷಗುಣಃ' ಎಂದು ವ್ಯಾಪ್ತಿ. ಯಾವುದು ಅಗ್ನಿಸಂಯೋಗರೂಪವಾದ ಅಸಮವಾಯಿಕಾರಣದಿಂದ ಹುಟ್ಟಿರದೆ ತನ್ನ ಕಾರಣದ ಗುಣ ಪೂರ್ವಕವಾಗಿ ಪ್ರತ್ಯಕ್ಷವಾಗುವುದಿಲ್ಲವೋ ಅದು ಪೃಥಿವ್ಯಾದಿಸ್ಪರ್ಶವದ್ದ್ರವ್ಯಗಳ ವಿಶೇಷ ಗುಣವಾಗುವುದಿಲ್ಲ. ಹೇತುವಿನಲ್ಲಿ ಎರಡುಭಾಗವಿದೆ. ಅಲ್ಲಿ 'ಅಗ್ನಿ—' ಇತ್ಯಾದಿ. ವಿಶೇಷಣ ಹೇಳದೆ ಕೇವಲ 'ಅಕಾರ—' ಇತ್ಯಾದಿ ವಿಶೇಷ್ಯಭಾಗವನ್ನು ಮಾತ್ರ ಹೇಳಿದರೆ ಪಾಕಜರೂಪಾದಿಗಳಲ್ಲಿ ವ್ಯಭಿಚಾರ ಬರುತ್ತದೆ. ಪೃಥಿವಿಯಲ್ಲಿ ಪಾಕದಿಂದ ಉಂಟಾಗುವ ರೂಪ, ರಸ, ಗಂಧ, ಸ್ಪರ್ಶ ಈ ನಾಲ್ಕರಲ್ಲಿ ಅಕಾರಣಗುಣಪೂರ್ವಕ ಪ್ರತ್ಯಕ್ಷತ್ವ ಸಂಭವಿಸುತ್ತದೆ. ಪಾಕಜರೂಪಾದಿ ಪ್ರತ್ಯಕ್ಷವಾಗಬೇಕಾದರೆ ಅದರ ಕಾರಣದ ರೂಪಾದಿ ಪ್ರತ್ಯಕ್ಷವಾಗಬೇಕಾಗಿಲ್ಲ. ಆದುದರಿಂದ ಅಕಾರ....ತ್ಯಕ್ಷವಿಷಯತ್ವ ಅಲ್ಲಿ ಬರುತ್ತದೆ. ಆದರೆ ಅಲ್ಲಿ 'ಅಗ್ನಿಸಂಯೋಗಾಸಮವಾಯಿಕಾರಣಕತ್ವಾಭಾವವಿಲ್ಲ. ಅಗ್ನಿಸಂಯೋಗವೇ (ಪಾಕ) ಅಸಮವಾಯಿಕಾರಣವಾಗಿರುತ್ತದೆ. ಹೀಗೆ ಅಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ ವಿಶೇಷದಳ ಹೇಳಬೇಕು. ಕೇವಲ ವಿಶೇಷಣ ಭಾಗ ವನ್ನು ಮಾತ್ರ ಹೇಳಿದರೆ ಪಟರೂಪಾದಿಗಳಲ್ಲಿ ವ್ಯಭಿಚಾರ ಬರುತ್ತದೆ. ಪಟರೂಪವು ಪಾಕದಿಂದ ಆಗುವುದಿಲ್ಲ. ವಿಲಕ್ಷಣತೇಜಃ ಸಂಯೋಗರೂಪವಾದ ಪಾಕವು ಅಲ್ಲಿ ಉಂಟಾದರೆ ಪಟವು ಸುಟ್ಟುಹೋಗಬೇಕಾಗುತ್ತದೆ. ಅಗ್ನಿಸಂಯೋಗಾಸಮವಾಯಿ ಕಾರಣಕತ್ವಾಭಾವವು ಪಟ ರೂಪದಲ್ಲಿ ಸಂಭವಿಸುವುದರಿಂದ ಅತಿವ್ಯಾಪ್ತಿ. ಇದನ್ನು ಹೋಗಲಾಡಿಸಲು ಅಕಾರಣ ಗುಣಪೂರ್ವಕ ಪ್ರತ್ಯಕ್ಷತ್ವರೂಪ ವಿಶೇಷ್ಯದಳ ಹೇಳಬೇಕು. ಪಟರೂಪಾದಗಳು ಕಾರಣ ಗುಣಪೂರ್ವಕ ಪ್ರತ್ಯಕ್ಷವಾಗುವುದರಿಂದ ಅಕಾ....ಕ್ಷತ್ವವು ಅಲ್ಲಿ ಬರುವುದಿಲ್ಲ. ಪೃಥಿವಿಯಲ್ಲಿರುವ ಅಪಾಕಜವಾದ ರೂಪಾದಿಗಳೆಲ್ಲಾ ಕಾರಣ ಗುಣೋತ್ಪನ್ನಗಳು. ಪಾಕದಿಂದ ಹುಟ್ಟುವುದಿಲ್ಲ. "ಕಾರಗುಣೋತ್ಪನ್ನತ್ವಂ ನಾಮ ಸ್ವಾಶ್ರಯ ಸಮವಾಯಿಸಮವೇತ ಗುಣಜನ್ಯತ್ವಮ್". ಸ್ವಂ— ಪಟರೂಪ. ಸ್ವಾಶ್ರಯಃ—ಪಟ. ಅದಕ್ಕೆ ಸಮವಾಯಿ—ತಂತು. ಅಲ್ಲಿ ಸಮವೇತವಾದಗುಣ ವೆಂದರೆ ತಂತುರೂಪ. ತಜ್ಜನ್ಯತ್ವವು ಪಟರೂಪದಲ್ಲಿದೆ. ಅಸಮವಾಯಿಕಾರಣವಾದ ತಂತುರೂಪದಿಂದ ಪಟರೂಪ ಹುಟ್ಟುತ್ತದೆಂದರ್ಥ. ಅಲ್ಲಿ ಅಗ್ನಿಸಂಯೋಗಾಸಮವಾಯಿ ಕಾರಣಕತ್ವ ಬರುವುದರಿಂದ ಅತಿವ್ಯಾಪ್ತಿ. ಇದಕ್ಕೋಸ್ಕರ 'ಅಕಾರ....ತ್ವಾತ್' ಎಂದು ವಿಶೇಷ್ಯದಳ ಹೇಳಿದೆ. ಪಟರೂಪಾದಿಗಳಲ್ಲಿ ಕಾರಣ—ತ್ವವೇ ಇರುವುದರಿಂದ ವಿಶೇಷ್ಯ ದಳ ಬರುವುದಿಲ್ಲ. ಹೀಗೆ ವ್ಯಭಿಚಾರವಾರಣೆಗೋಸ್ಕರ ಎರಡು ದಳಗಳನ್ನೂ ಹೇಳ ಬೇಕು. 'ಜಲಪರ'—ಇತಿ. ಜಲಪರಮಾಣುಗಳ ರೂಪದಲ್ಲಿ 'ಅಗ್ನಿಸಂಯೋಗಾ ಸಮವಾಯಿಕಾರಣಕತ್ವಾಭಾವವಿಶಿಷ್ಟ ಅಕಾರಣ ಗುಣ ಪೂರ್ವಕತ್ವ' ಧರ್ಮ ಸಂಭವಿಸುವುದರಿಂದ ಪೂರ್ಣ ಹೇತುವಿಗೆ ವ್ಯಬಿಚಾರ ಬರುವುದರಿಂದ 'ಪ್ರತ್ಯಕ್ಷತ್ವಾತ್' ಎಂದು ಹೇಳಿದೆ. ಜಲಪರಮಾಣು ರೂಪದಲ್ಲಿ ಪ್ರತ್ಯಕ್ಷವಿಷಯತ್ವವಿಲ್ಲದಿರುವುದರಿಂದ ಹೇತು ವ್ಯಭಿಚರಿತವಾಗುವುದಿಲ್ಲ.

ಪೃಥಿವ್ಯಾದಿ ನಾಲ್ಕು ದ್ರವ್ಯಗಳು ಸ್ಪರ್ಶವುಳ್ಳವುಗಳು. ಪೃಥಿವಿಯಲ್ಲಿ ಗಂಧವೂ, ಜಲದಲ್ಲಿ ಶೀತಸ್ಪರ್ಶವೂ, ತೇಜಸ್ಸಿನಲ್ಲಿ ಉಷ್ಣಸ್ಪರ್ಶವೂ, ವಾಯುವಿನಲ್ಲಿ ಅನುಷ್ಣಾಶೀತ ಸ್ಪರ್ಶವೂ ವಿಶೇಷಗುಣವಾಗಿರುತ್ತದೆ. ಈ ಎಲ್ಲಾ ವಿಶೇಷ ಗುಣಗಳ ಪ್ರತ್ಯಕ್ಷವು ಕಾರಣಗುಣ ಪೂರ್ವಕವಾಗಿಯೇ ಆಗುತ್ತದೆ. ಶಬ್ದ ಪ್ರತ್ಯಕ್ಷ ಮಾತ್ರ ಇವುಗಳ ಪ್ರತ್ಯಕ್ಷದಂತೆ ಆಗುವುದಿಲ್ಲ. ಗಂಧಾದಿಗಳಂತೆ ಇದರ ಪ್ರತ್ಯಕ್ಷವಾಗಿದ್ದರೆ ಈ ಶಬ್ದವು ಪೃಥಿವ್ಯಾದಿಗಳ ಗುಣವೇ ಆಗಬೇಕಾಗುತ್ತದೆ. ಆದರೆ ಈ ಶಬ್ದವು ಅಗ್ನಿಸಂಯೋಗಾ ಸಮವಾಯಿಕಾರಣಕತ್ವಾ ಭಾವವಿಶಿಷ್ಟಾಕಾರಣಗುಣ ಪೂರ್ವಕಪ್ರತ್ಯಕ್ಷತ್ವಧರ್ಮದಿಂದ ಕೂಡಿರುವುದರಿಂದ ಸ್ಪರ್ಶವುಳ್ಳ ಪದಾರ್ಥಗಳ ವಿಶೇಷಗುಣವಾಗುವುದಿಲ್ಲ. ಅವುಗಳಿಂದ ವಿಲಕ್ಷಣವಾಗಿ ದ್ರವ್ಯದ ಗುಣವಾಗುತ್ತದೆ.

ಸ್ಪರ್ಶವುಳ್ಳ ಪೃಥಿವ್ಯಾದಿ ಚತುಷ್ಟಯದ ಗುಣವಾಗದಿದ್ದರೆ ದಿಕ್ಕಾಲಗಳ ಗುಣ ವಾಗಲಿ ಎಂದು ಶಂಕಿಸುವವನಿಗೆ ಸಮಾಧಾನ ಹೇಳುತ್ತಾನೆ. 'ಶಬ್ದಃ ನ'—ಇತಿ. ದಿಕ್, ಕಾಲ, ಮನಸ್ಸುಗಳಲ್ಲಿ ಯಾವ ವಿಶೇಷಗುಣವೂ ಇಲ್ಲ. ಇದು ವಿಶೇಷಗುಣ ವಾದುದರಿಂದಲೇ ಆ ಮೂರರ ಗುಣವಾಗುವುದಿಲ್ಲ. ಲೌಕಿಕ ಸಂಯುಕ್ತಸಮವಾಯಾದಿ ಸಂಬಂಧದಿಂದ ಇಂದ್ರಿಯಗ್ರಾಹ್ಯವಾಗಿಯೂ, ಎರಡು ಇಂದ್ರಿಯಗಳಿಂದ ಅಗ್ರಾಹ್ಯ ವಾಗಿಯೂ, ಗುಣತ್ವವ್ಯಾಪ್ಯಜಾತಿಯುಳ್ಳದ್ದು ವಿಶೇಷಗುಣವೆಂದು ಮುಂದೆ ವಿವರಿಸು ತ್ತಾನೆ. ಆತ್ಮನ ಗುಣವಾಗುವುದಿಲ್ಲವೆಂದು ಅನುಮಾನದಿಂದ ವ್ಯಕ್ತಪಡಿಸುತ್ತಾನೆ. 'ನ ಆತ್ಮ'—ಇತ್ಯಾದಿ. ರೂಪವು ಬಹಿರಿಂದ್ರಿಯ ಜನ್ಯ ಪ್ರತ್ಯಕ್ಷ ವಿಷಯವಾದಂತೆ ಶಬ್ದವೂ ಬಹಿರಿಂದ್ರಿಯ ಜನ್ಯಪ್ರತ್ಯಕ್ಷ ವಿಷಯವಾದುದರಿಂದ ಆತ್ಮನ ಗುಣವಾಗುವುದಿಲ್ಲ ಆತ್ಮನ ವಿಶೇಷ ಗುಣಗಳಾದ ಇಚ್ಛಾದಿಗಳು ಎಂದೂ ಬಹಿರಿಂದ್ರಿಯಗಳಿಗೆ (ನಯ ನಾದಿ ಪಂಚಕ) ಗೋಚರವಾಗುವುದಿಲ್ಲ. ಅದೂ ಅಲ್ಲದೆ ಶಬ್ದವು ಆತ್ಮನ ಗುಣವಾದರೆ ಕಿವುಡನೂ ಶಬ್ದವನ್ನು ಕೇಳಬೇಕಾಗುತ್ತದೆ. ಆದುದರಿಂದ ಆತ್ಮ ಗುಣವಲ್ಲ.

'ಇತ್ಥಂಚ'—ಇತಿ. ಪರಿಶೇಷಾನುಮಾನದಿಂದ ಶಬ್ದಾಧಿಕರಣವಾಗಿ (ಆಶ್ರಯ) ಒಂಬತ್ತನೆಯ ಆಕಾಶರೂಪದ್ರವ್ಯವು ಸಿದ್ಧವಾಗುತ್ತದೆ. "ಪ್ರಸಕ್ತಪ್ರತಿಷೇಧೇಽನ್ಯತ್ರಾ ಪ್ರಸಂಗಾಚ್ಛಿಷ್ಯಮಾಣೇ ಸಂಪ್ರತ್ಯಯಃ ಪರಿಶೇಷಃ" ಎಲ್ಲೆಲ್ಲಿ ಪ್ರಾಪ್ತಿಸಂಭಾವನೆ ಇದೆಯೋ ಅಲ್ಲಿ ಎಲ್ಲಾ ಸ್ಥಳದಲ್ಲಿಯೂ ನಿಷೇಧಮಾಡಿದ ಮೇಲೆ, ಪ್ರಸಕ್ತಿ ಇಲ್ಲದಲ್ಲಿ ಬಾರದೇ ಇರುವುದರಿಂದ ಶೇಷ ವಿಷಯದಲ್ಲಿ ಅನುಮಿತಿಯನ್ನು ಹುಟ್ಟಿಸಿ ಕೊಡುವುದೇ ಪರಿಶೇಷಾನುಮಾನ. ಅದು ಹೀಗೆ ಸಿದ್ಧವಾಗುತ್ತದೆ. 'ಶಬ್ದಃ—ಪೃಥಿವ್ಯಾದ್ಯಷ್ಟದ್ರವ್ಯಾತಿ ರಿಕ್ತದ್ರವ್ಯಾಶ್ರಿತಃ — ಅಷ್ಟದ್ರವ್ಯಾನಾಶ್ರಿತತ್ವೇಸತಿ ದ್ರವ್ಯಾಶ್ರಿತತ್ವಾತ್' ಯನ್ನೈವಂ ತನ್ನೈವಮ್.

ಶಬ್ದವು ಒಂದು ಗುಣವೆಂದು ಸಿದ್ಧವಾದ ಮೇಲೆ ಅದಕ್ಕೆ ಆಶ್ರಯವಾಗಿ ಒಂದು ದ್ರವ್ಯ ಇದ್ದೇ ತೀರಬೇಕು. ದ್ರವ್ಯವಿಲ್ಲದೆ ಗುಣ ಸ್ವತಂತ್ರವಾಗಿ ಇರುವುದಿಲ್ಲ. ರೂಪಾದಿ ಗಳಂತೆ ಈ ಶಬ್ದವಿಲ್ಲವೆಂದು ಪೂರ್ವಾನುಮಾನದಿಂದ ಸಿದ್ಧವಾಗಿದೆ. ಅದರಿಂದ ಪೃಥಿ

ವ್ಯಾದಿಗಳ ಗುಣವಾಗುವುದಿಲ್ಲವೆಂದೂ ಅದರಿಂದ ತಿಳಿದಿದೆ. ಗುಣಕರ್ಮಗಳು ಗುಣಕ್ಕೆ ಆಶ್ರಯವಾಗುವುದಿಲ್ಲ. ಆದುದರಿಂದ ಪೃಥಿವ್ಯಾದಿ ಎಂಟುದ್ರವ್ಯಗಳಿಗಿಂತ ಬೇರೆಯಾದ ಒಂದು ದ್ರವ್ಯವು ಶಬ್ದರೂಪಗುಣಕ್ಕೆ ಸಮವಾಯಸಂಬಂಧದಿಂದ ಆಶ್ರಯವಾಗಿದೆ. ಅದೇ ಆಕಾಶರೂಪವಾದ ಒಂಬತ್ತನೆಯ ದ್ರವ್ಯವಾಗುತ್ತದೆ. 'ಶಬ್ದೋನ ಸ್ಪರ್ಶವತ್'—ಎಂಬ ಅನುಮಾನವಲ್ಲಿ ಬಾಧ, ಸ್ವರೂಪಾಸಿದ್ಧಿಯನ್ನು ಶಂಕಿಸುತ್ತಾನೆ. 'ನಚ ವಾಯು'—ಇತಿ. ಪಕ್ಷದಲ್ಲಿ ಸಾಧ್ಯವೇ ಬಾರದಿದ್ದರೆ ಬಾಧ ಹೇತುತಾವಚ್ಛೇದಕವು ಹೇತುವಿನಲ್ಲಿ ಬಾರದಿದ್ದರೆ ಸ್ವರೂಪಾಸಿದ್ಧವಾಗುತ್ತದೆ.

ವಾಯುವಿನ ಅವಯವಗಳಲ್ಲಿ ಸೂಕ್ಷ್ಮಶಬ್ದ ಹುಟ್ಟುವ ಕ್ರಮದಿಂದ ಕಾರಣಗುಣಪೂರ್ವಕವಾಗಿ ವಾಯುವಿನಲ್ಲಿಯೇ ಶಬ್ದವುಂಟಾಗಲಿ ಎಂದು ಆಕ್ಷೇಪ. ಆಗ ಸ್ಪರ್ಶವತ್ತಾದ ವಾಯುವಿನ ವಿಶೇಷಗುಣವಾಗುವುದರಿಂದ 'ನ ಸ್ಪರ್ಶವದ್ವಿಶೇಷಗುಣಃ' ಎಂದು ಸಾಧಿಸಿದರೆ (ತದಭಾವ) ಬಾಧ ಬರುತ್ತದೆ. ಹೀಗೆ ಆಶಂಕಾಮಾಡಬಾರದೆಂದು ತೋರಿಸುತ್ತಾನೆ. 'ಅಯಾವದ್ದ್ರ'—ಇತಿ. ಶಬ್ದವು ಯಾವದ್ದ್ರವ್ಯಭಾವಿಯಾಗದಿರುವುದರಿಂದ ವಾಯುವಿನಲ್ಲಿ ಶೇಷಗುಣವಾಗುವುದಿಲ್ಲ. 'ಯಾವದ್ದ್ರವ್ಯಸ್ಥಿತಿಕಾಲಸ್ಥಿತಿಕತ್ವಂ ಯಾವದ್ದ್ರವ್ಯಭಾವಿತ್ವಮ್' ತನಗೆ ಆಶ್ರಯವಾದ ದ್ರವ್ಯವು ಎಲ್ಲಿಯವರೆಗೆ ಇರುತ್ತದೆಯೋ ಅಲ್ಲಿಯವರೆಗೆ ಇರುವ ಗುಣಕ್ಕೆ ಯಾವದ್ದ್ರವ್ಯಭಾವಿಯೆಂದು ಹೆಸರು. ಪೃಥಿವ್ಯಾದಿಗಳಲ್ಲಿ ಗಂಧ ಹುಟ್ಟಿದರೆ ಆ ಪೃಥಿವಿ ಇರುವ ಕಾಲದವರೆಗೆ ಗಂಧವೂ ಇರುತ್ತದೆ. ದ್ರವ್ಯನಾಶವಾದ ಮೇಲೇ ನಾಶವಾಗುತ್ತದೆ. ಶಬ್ದಮಾತ್ರ ಯಾವದ್ದ್ರವ್ಯಭಾವಿಯಲ್ಲ. ತನ್ನ ಆಶ್ರಯವಾದ ಆಕಾಶದಲ್ಲಿ ಹುಟ್ಟುತ್ತದೆ ನಾಶವಾಗುತ್ತದೆ. ಶಬ್ದನಾಶವಾಗುವಾಗ ಆಶ್ರಯವಾದ ಆಕಾಶ ನಾಶವಾಗುವುದಿಲ್ಲ. ವಾಯುಗುಣವಾದರೆ ಇದು ನಷ್ಟವಾದರೆ ವಾಯುವೂ ನಷ್ಟವಾಗಬೇಕು. ಆದರೆ ಹೀಗೆ ಆಗುವುದಿಲ್ಲ. ಆದುದರಿಂದ ಸ್ಪರ್ಶವತ್ತಾದ ಪೃಥಿವಿ ಜಲ, ತೇಜಸ್ಸು, ವಾಯುರೂಪಗಳಾದ ನಾಲ್ಕು ದ್ರವ್ಯಗಳ ಗುಣವೂ ಆಗುವುದಿಲ್ಲ.

ಆಕಾಶ ನೀಲವಾಗಿದೆ, ಆಕಾಶದಲ್ಲಿ ಪಕ್ಷಿ ಹಾರುತ್ತದೆ. ಇತ್ಯಾದಿ ಚಾಕ್ಷುಷಪ್ರತ್ಯಕ್ಷವೇ ಪ್ರಮಾಣವಾಗಿರುವಾಗ ಈ ಅನುಮಾನದಿಂದ ಏಕೆ ಸಾಧಿಸಬೇಕು ? ಎಂದು ಕೆಲವರು ಆಕ್ಷೇಪಿಸಬಹುದು. ಆದರೆ ಅದು ಭ್ರಾಂತಿ. ಏನೂ ಇಲ್ಲದಿದ್ದರೆ ನೀಲವಾಗಿ ತೋರುವುದು ಸ್ವಾಭಾವಿಕ. ಹಕ್ಕಿ ಹಾರುವುದರಿಂದ ಆಲೋಕ (ಬೆಳಕು) ಪ್ರತ್ಯಕ್ಷವಾಗುವುದಲ್ಲದೆ ಆಕಾಶದ ಪ್ರತ್ಯಕ್ಷವಲ್ಲ. ಚಾಕ್ಷುಷಪ್ರತ್ಯಕ್ಷವಾಗಬೇಕಾದರೆ ಮಹತ್ತ್ವೋದ್ಭೂತರೂಪವಿರಬೇಕು. ಆಕಾಶದಲ್ಲಿ ರೂಪವಿಲ್ಲ. ಆದುದರಿಂದ ಅನುಮಾನದಿಂದಲೇ ಆಕಾಶಸಿದ್ಧವಾಗಿದೆ.

**ಇಂದ್ರಿಯಂ ತು ಭವೇಚ್ಛ್ರೋತ್ರಮೇಕಃ ಸನ್ನಪ್ಯುಪಾಧಿತಃ ॥**

ತತ್ರ ಶರೀರಸ್ಯ ವಿಷಯಸ್ಯ ಚಾಭಾವಾದಿಂದ್ರಿಯಂ ದರ್ಶಯತಿ—ಇಂದ್ರಿಯಮಿತಿ ।

ಸನ್ನಾಪ್ಯಕಾಶಂ ಲಾಘವಾದೇಕಂ ಸಿದ್ಧಂ ಶ್ರೋತ್ರಂ ತು ಪುರುಷಭೇದೇನ ಭಿನ್ನಂ ಕಥಮಾಕಾಶಂ ಸ್ಯಾದಿತಿ ಚೇತ್ತತ್ರಾಹ—ಏಕಃ ಸನ್ನಪೀತ್ಯಾದಿ । ಆಕಾಶ ಏಕಃ ಸನ್ನಪಿ ಉಪಾಧೇಃ ಕರ್ಣಶಷ್ಕುಲ್ಯಾದೇರ್ಭೇದಾದ್ಭಿನ್ನಂ ಶ್ರೋತ್ರಾತ್ಮಕಂ ಭವತೀತ್ಯರ್ಥಃ ॥

ಶರೀರ, ವಿಷಯಗಳಾದ ಆಕಾಶವಿಲ್ಲದಿರುವುದರಿಂದ ಇಂದ್ರಿಯಾಕಾಶವನ್ನು ತೋರಿಸುತ್ತಾನೆ. ಶ್ರವಣೇಂದ್ರಿಯವೇ ಆಕಾಶ. ಶ್ರೂಯತೇ ಅನೇನ ಇತಿ ಶ್ರೋತ್ರಮ್. ಆಕಾಶವೊಂದಾದ ಮೇಲೆ ಶ್ರೋತ್ರೇಂದ್ರಿಯಗಳು ಪ್ರತಿಪುರುಷರಲ್ಲಿಯೂ ಬೇರೆಯಾದುದರಿಂದ ಆಕಾಶವಾಗುವುದು ಹೇಗೆ ? ಎಂಬ ಆಶಂಕೆಗೆ ಸಮಾಧಾನ ತೋರಿಸುತ್ತಾನೆ. 'ಏಕಃಸನ್'—ಇತಿ. ಆಕಾಶ ಒಂದಾದರೂ ಉಪಾಧಿಭೇದದಿಂದ ಭಿನ್ನಭಿನ್ನವಾಗಿ ತೋರುತ್ತದೆ. ಶಷ್ಕುಲೀವಕರ್ಣಃ ಕರ್ಣಶಷ್ಕುಲೀ ಕರ್ಣಶಷ್ಕುಲೀವಿವರಾವಚ್ಛಿನ್ನವಾದದ್ದು ಆಕಾಶ. ಚಕ್ಕುಲಿಯಂತೆ ತೋರುವ ಚರ್ಮಪಿಂಡದ ಮಧ್ಯೆ ನಿರವಕಾಶದಲ್ಲಿ ಶ್ರೋತ್ರಾಕಾಶವಿರುತ್ತದೆ.

ಆಕಾಶ ಒಂದಾದುದಲ್ಲದೆ ವಿಭು ನಿತ್ಯವೂ ಆಗಿದೆ. ಶಬ್ದವು ಎಲ್ಲಾಕಡೆ ಆಗುವುದರಿಂದಲೂ, ಸರ್ವಮೂರ್ತದ್ರವ್ಯಸಂಯೋಗವಿರುವುದರಿಂದಲೂ ವಿಭುವಾಗಿದೆ. ಆದುದರಿಂದಲೇ ನಿತ್ಯ. ಉಪಾಧಿಭೇದದಿಂದ ಘಟಾಕಾಶ, ಮಠಾಕಾಶ ಇತ್ಯಾದಿ ಭೇದಗಳು ಪ್ರತೀತವಾಗುತ್ತವೆ. ಆಕಾಶಃ ಸಂಭೂತಃ' ಇತ್ಯಾದಿ ಶ್ರುತಿಯಲ್ಲಿ ಸಂಭೂತಪದಕ್ಕೆ ಉತ್ಪತ್ತಿ ಅರ್ಥವಲ್ಲ. ಅಭಿವ್ಯಕ್ತವಾಗುತ್ತದೆಯೆಂದರ್ಥ. ಜೀವನ ಅದೃಷ್ಟದಿಂದ ಅಲ್ಲಿ ಇಂದ್ರಿಯಭೇದಮಾತ್ರ ಇರುತ್ತದೆ. 'ಶಬ್ದಜ್ಞಾನಜನಕಂ ಇಂದ್ರಿಯಂ ಶ್ರೋತ್ರಮ್' ಯಾವ ಇಂದ್ರಿಯವು ರೂಪಾದಿಮಧ್ಯದಲ್ಲಿ ಯಾವ ಗುಣಗ್ರಾಹಕವಾಗುತ್ತದೆಯೋ ಆ ಇಂದ್ರಿಯವು ಆ ಗುಣದಿಂದ ಕೂಡಿರುತ್ತದೆ, ಎಂಬ ವ್ಯಾಪ್ತಿ ಇರುವುದರಿಂದ ಶಬ್ದಗ್ರಾಹಕವಾಗುವುದರಿಂದ ಶಬ್ದಗುಣಕವಾಗುತ್ತದೆ. ಸಮವಾಯದಿಂದ ಶಬ್ದಸಮವಾಯಿಕಾರಣವೇ ಆಕಾಶ. ಆದುದರಿಂದ ಶ್ರೋತ್ರೇಂದ್ರಿಯವೂ ಆಕಾಶವಾಗುತ್ತದೆ.

ಆಕಾಶಗ್ರಂಥ ಮುಗಿದಿದೆ.

**ಜನ್ಯಾನಾಂ ಜನಕಃ ಕಾಲೋ ಜಗತಾಮಾಶ್ರಯೋಮತಃ ॥ ೪೫ ॥**

ಕಾಲಂ ನಿರೂಪಯತಿ—ಜನ್ಯಾನ್ಯಾಮಿತಿ ॥ ತತ್ರ ಪ್ರಮಾಣಂ ದರ್ಶಯಿತುಮಾಹ ಜಗತಾಮಿತಿ ! ತಥಾಹಿ—ಇದಾನೀಂ ಘಟಃ ಇತ್ಯಾದಿಪ್ರತೀತಿಃ ಸೂರ್ಯಪರಿಸ್ಪಂದಾದಿಕಂಯದಾ ವಿಷಯೀಕರೋತಿ ತದಾ ಸೂರ್ಯಪರಿಸ್ಪಂದಾದಿನಾ ಘಟಾದೇಃ ಸಂಬಂಧೋವಾಚ್ಯಃ, ಸ ಚ ಸಂಬಂಧಃ ಸಂಯೋಗಾದಿರ್ನ ಸಂಭವತೀತಿ ಕಾಲ ಏವ ತತ್ಸಂಬಂಧಃ ಘಟಕಃ ಕಲ್ಪ್ಯತೇ । ಇತ್ಥಂ ಚ ತಸ್ಯಾಶ್ರಯತ್ವಮಪಿ ಸಮ್ಯಕ್ ॥ ೪೫ ॥

ಕ್ರಮಪ್ರಾಪ್ತವಾದುದರಿಂದ ಕಾಲಲಕ್ಷಣ ಹೇಳುತ್ತಾನೆ. ಜನ್ಯಾನಾಂ—ಕಾರ್ಯಾಣಾಮ್ ಕಾರ್ಯಸಾಮಾನ್ಯವನ್ನು ಕುರಿತು ಕಾಲವು ನಿಮಿತ್ತಕಾರಣವಾಗುತ್ತದೆ. ಕಾಲದಲ್ಲಿ ಸಮವಾಯದಿಂದ ಕಾರ್ಯ ಹುಟ್ಟದಿರುವುದರಿಂದ ಸಮವಾಯಿಕಾರಣವಾಗುವುದಿಲ್ಲ. ದ್ರವ್ಯವಾದುದರಿಂದ ಅಸಮವಾಯಿಕಾರಣ ಆಗುವುದೂ ಇಲ್ಲ. ಪರಿಶೇಷದಿಂದ ನಿಮಿತ್ತಕಾರಣವೆಂದು ತಿಳಿಯಬೇಕು. 'ಕಾರ್ಯತ್ವಾವಚ್ಛಿನ್ನಂ ಪ್ರತಿ ಕಾಲಿಕ ಸಂಬಂಧಾವಚ್ಛೇದೇನ ನಿಮಿತ್ತಕಾರಣತ್ವಂ ಕಾಲತ್ವಂ' ಎಂದು ಲಕ್ಷಣ. 'ಕಾಲಿಕ ಸಂಬಂಧಾವಚ್ಛಿನ್ನಕಾರ್ಯತ್ವಾವಚ್ಛಿನ್ನಾ ಯಾ ಕಾರ್ಯತಾ, ತನ್ನಿರೂಪಿತಾ ಯಾ ತಾದಾತ್ಮ್ಯ ಸಂಬಂಧಾವಚ್ಛಿನ್ನಾಧಿಕರಣತಾ, ತಾದೃಶಾಧಿಕರಣತಯಾ ನಿಮಿತ್ತ ಕಾರಣತ್ವಂ ಕಾಲತ್ವಂ' ಎಂದು ಬಿಡಿಸಿ ಹೇಳಬೇಕು. 'ತತ್ರ'—ಇತಿ. ಕಾಲವಿದೆ ಯೆಂಬುದರಲ್ಲಿ ಅನುಮಾನ ಪ್ರಮಾಣ ತೋರಿಸುತ್ತಾನೆ. 'ಜಗತಾಂ ಆಶ್ರಯಃ' ಎಂಬುದರಿಂದ ಸರ್ವಾಧಿಕರಣವಾಗಿ ಕಾಲವೆಂಬ ದ್ರವ್ಯವು ಸಿದ್ಧವಾಗುತ್ತದೆ. ಅದಕ್ಕೆ ಪೂರ್ವಭಾವಿಯಾಗಿ ಪೀಠಿಕೆ ರಚಿಸುತ್ತಾನೆ. 'ತಥಾಹಿ'—ಇತಿ. 'ಇದಾನೀಂ ಘಟಃ ಅಸ್ತಿ ಈಗ ಘಟವಿದೆ' ಎಂಬ ಜ್ಞಾನವು ಸೂರ್ಯಪರಿಸ್ಪಂದನನ್ನು ಅಂದರೆ ಸೂರ್ಯನ ಗತಿ ರೂಪ ಕ್ರಿಯೆಯನ್ನು ವಿಷಯೀಕರಿಸುತ್ತದೆ. ಆಗ ಜನ್ಯವಾದ ಘಟಾದಿಗಳಿಗೂ ಸೂರ್ಯನ ಕ್ರಿಯೆಗೂ ಒಂದು ಸಂಬಂಧವನ್ನು ಹೇಳಬೇಕು. ಆ ಸಂಬಂಧ ಸಂಯೋಗ ಸಮವಾಯಾದಿಗಳು ಆಗುವುದಿಲ್ಲ. ಸಂಬಂಧವಿಲ್ಲದೇ ಆ ರೀತಿಯಾದ ವ್ಯವಹಾರ ಕೂಡುವುದಿಲ್ಲ. ಅರ್ಥಾತ್ ಆ ಸಂಬಂಧವು ಸ್ವಾಶ್ರಯತಪನಸಂಯೋಗಿ ಸಂಯೋಗರೂಪವಾಗುತ್ತದೆ. ಈ ಸಂಬಂಧ ಘಟಕವಾಗಿ ಒಂದು ಪದಾರ್ಥ ಸಿದ್ಧವಾಗುತ್ತದೆ. ಅದೇ ಕಾಲವೆಂದು ಅನುಮಿತವಾಗುತ್ತದೆ.

ಸ್ವಂ—ಸೂರ್ಯಕ್ರಿಯಾ. ಅದಕ್ಕೆ ಆಶ್ರಯ ಸೂರ್ಯ. ತತ್ಸಂಯೋಗವುಳ್ಳದ್ದು ಕಾಲ. ಅದರ ಸಂಯೋಗ (ಕಾಲಿಕ ಸಂಬಂಧದಿಂದ) ಘಟಾದಿಗಳಲ್ಲಿರುತ್ತದೆ. ಈ ಸಂಬಂಧದಲ್ಲಿ ಘಟಕವಾದದ್ದು ಕಾಲವೇ ಆಗುತ್ತದೆ. ಅದಕ್ಕೆ 'ಸ್ವಸಮವಾಯಿ ಸಂಯುಕ್ತ ಸಂಯೋಗ' ಸಂಬಂಧವೆಂದೂ ಕರೆಯುತ್ತಾರೆ. ಸ್ವಂ—ಸೂರ್ಯಕ್ರಿಯಾ. ಅದಕ್ಕೆ ಸಮವಾಯಿ—ಸೂರ್ಯ. ತತ್ಸಂಯುಕ್ತವಾದದ್ದು ಕಾಲ. ಅದರೊಡನೆ ಘಟಾದಿಗಳಿಗೆ ಸಂಬಂಧವಿರುತ್ತದೆ. 'ದ್ರವ್ಯಯೋರೇವ ಸಂಯೋಗಃ' ಎಂದು ನಿಯಮ.

'ಕಾಲಃ ಸರ್ವವಾನ್' ಎಂಬ ಪ್ರತೀತಿ ಇರುವುದರಿಂದ ಸರ್ವಕ್ಕೂ ಅಧಿಕರಣ ರೂಪವಾಗಿ ಕಾಲ ಸಿದ್ಧವಾಗುತ್ತದೆ. || ೪೫ ||

**ಪರಾಪರತ್ವಧೀಹೇತುಃ ಕ್ಷಣಾದಿಃ ಸ್ಯಾದುಪಾಧಿತಃ ||**

ಪ್ರಮಾಣಾಂತರಂ ದರ್ಶಯತಿ । ಪರಾಪರತ್ವೇತಿ । ಪರತ್ವಾಪರತ್ವಬುದ್ಧೇರಸಾಧಾರಣಂ ನಿಮಿತ್ತಂ ಕಾಲ ಏವ । ಪರತ್ವಾಪರತ್ವಯೋ ರಸಮವಾಯಿಕಾರಣ ಸಂಯೋಗಾಶ್ರಯೋ ಲಾಘವಾದತಿರಿಕ್ತಃ ಕಾಲ ಏವ ಕಲ್ಪ್ಯತೇ ಇತಿ ಭಾವಃ । ನನ್ವೇಕಸ್ಯ

ಕಾಲಸ್ಯ ಸಿದ್ಧೌ ಕ್ಷಣದಿನಮಾಸವರ್ಷಾದಿಸಮಯಭೇದೋ ನಸ್ಯಾದತ ಆಹ— ಕ್ಷಣಾದಿರಿತಿ । ಕಾಲಸ್ತ್ವೇಕೋಽಪಿ ಉಪಾಧಿಭೇದಾತ್ ಕ್ಷಣಾದಿವ್ಯವಹಾರ ವಿಷಯಃ । ಉಪಾಧಿಸ್ತು ಸ್ವಜನ್ಯವಿಭಾಗಪ್ರಾಗಭಾವಾವಚ್ಛಿನ್ನಂ ಕರ್ಮ, ಪೂರ್ವ ಸಂಯೋಗಾವಚ್ಛಿನ್ನವಿಭಾಗೋ ವಾ, ಪೂರ್ವಸಂಯೋಗನಾಶಾವಚ್ಛಿನ್ನೋತ್ತರ ಸಂಯೋಗಪ್ರಾಗಭಾವೋ ವಾ, ಉತ್ತರಸಂಯೋಗಾವಚ್ಛಿನ್ನಂ ಕರ್ಮವಾ ! ನ ಚೋತ್ತರಸಂಯೋಗಾನಂತರಂ ಕ್ಷಣವ್ಯವಹಾರೋ ನ ಸ್ಯಾದಿತಿ ವಾಚ್ಯಂ, ಕರ್ಮಾಂತರಸ್ಯಾಪಿ ಸತ್ವಾದಿತಿ । ಮಹಾಪ್ರಲಯೇ ಕ್ಷಣವ್ಯವಹಾರೋ ಯದ್ಯಸ್ತಿ ತದನಾಯತ್ಯಾ ಧ್ವಂಸೇನೋಪಪಾದನೀಯ ಇತಿ । ದಿನಾದಿ ವ್ಯವಹಾರಸ್ತುತ ತ್ತತ್ಕ್ಷಣಕೂಟೈರೇವೇತಿ ।।

'ಪರತ್ವಾಪರ—' ಇತಿ. ಪರತ್ವಾಪರತ್ವಬುದ್ಧಿಗೆ ಅಸಾಧಾರಣಕಾರಣ ಕಾಲ ವೆಂದರ್ಥ. 'ಅಯಮಸ್ಮಾತ್ ಜ್ಯೇಷ್ಠಃ' ಎಂದು ಹಿರಿಯನಲ್ಲಿ ಪರತ್ವಪ್ರತ್ಯಯ. 'ಅಯಮಸ್ಮಾತ್‌ಕನಿಷ್ಠಃ' ಎಂದು ಕಿರಿಯನಲ್ಲಿ ಅಪರತ್ವಪ್ರತ್ಯಯ. ಎರಡು ಜ್ಞಾನ ಗಳೂ ಪರತ್ವಾಪರತ್ವರೂಪಗುಣ ಜ್ಞಾನಾಧೀನವಾಗಿ ಬರುತ್ತದೆ. 'ಪರತ್ವಾಪರತ್ವೇ— ಅಸಮವಾಯಿಕಾರಣಜನ್ಯೇ—ಭಾವಕಾರ್ಯತ್ವಾತ್ । ಘಟವತ್. ಘಟವು ಭಾವಕಾರ್ಯ ವಾದುದರಿಂದ ಕಪಾಲದ್ವಯಸಂಯೋಗರೂಪ ಅಸಮವಾಯಿಕಾರಣದಿಂದ ಹೇಗೆ ಹುಟ್ಟು ವುದೋ ಅದರಂತೆ ಈ ಪರತ್ವಾಪರತ್ವಗಳೂ ಕೂಡಾ ಒಂದು ಅಸಮವಾಯಿಕಾರಣದಿಂದ ಹುಟ್ಟವೆ. ಇವುಗಳ ಅಸಮವಾಯಿಕಾರಣವೆಂದರೆ ಕಾಲಪಿಂಡಸಂಯೋಗವಾಗುತ್ತದೆ. ಪರತ್ವಾಪರತ್ವಗಳಿಗೆ ಅಸಮವಾಯಿಕಾರಣವಾದ ಸಂಯೋಗಕ್ಕೆ ಆಶ್ರಯರೂಪವಾಗಿ ಕಾಲವು ಸಿದ್ಧಿಸುತ್ತದೆ.

ವಸ್ತುಸಾಮಾನ್ಯವನ್ನು ಕುರಿತು ಕಾಲವು ನಿಮಿತ್ತಕಾರಣವಾದರೂ ಅದು ದ್ರವ್ಯ ವಾದುದರಿಂದ ತನ್ನಲ್ಲಿರುವ ದ್ವಿತ್ವ, ಸಂಯೋಗಾದಿಗುಣವನ್ನು ಕುರಿತು ಸಮವಾಯಿ ಕಾರಣವೂ ಆಗುತ್ತದೆ. ಆದುದರಿಂದ ಸರ್ವತ್ರ ಕಾಲಿಕಸಂಬಂಧದಿಂದ ನಿಮಿತ್ತಕಾರಣ ವೆಂದು ಹಿಂದೆ ಹೇಳಿ ಇಲ್ಲಿ ಸಂಯೋಗಕ್ಕೆ ಸಮವಾಯಿಕಾರಣವೆಂದುದು ಹೇಗೆಂದು ಆಶಂಕಿಸಬಾರದು. ಈ ಪಿಂಡ ಸಂಯೋಗಕ್ಕೆ ಆಕಾಶದಿಕ್ಕುಗಳು ಆಶ್ರಯವೆಂದರೆ ಪ್ರತಿಜೀ ವಾತ್ಮರೊಡನೆ ಸಂಬಂಧಹೇಳಲು ವಿನಿಗಮನಾ ಇಲ್ಲದಿರುವುದರಿಂದ ಸಂಭವಿಸುವುದಿಲ್ಲ. ಆತ್ಮಮನಸ್ಸು ಹೇಳೋಣವೆಂದರೆ ಅವು ಅನಂತವಾದುದರಿಂದ ಗೌರವದೋಷ ಬರುತ್ತದೆ. ಆದುದರಿಂದ ಲಾಘವದಿಂದ ಅತಿರಿಕ್ತವಾಗಿ ಒಂದಾದ ಕಾಲರೂಪದ್ರವ್ಯವೇ ಆಶ್ರಯ ವೆನ್ನಬೇಕು.

ಕಾಲವು ಒಂದಾದರೆ ವಿರುದ್ಧವಾದ ಕ್ಷಣ, ದಿನ, ಮಾಸಾದಿವ್ಯವ್ಯಹಾರ. ಉಂಟಾಗುವುದು ಹೇಗೆ ? ಎಂದು ಆಶಂಕಿಸುತ್ತಾನೆ. 'ನನು—' ಇತಿ. ಸಮಯ ಭೇದಃ—ಸಮಯದವ್ಯವಹಾರಭೇದ. ಇಂದು ಬರುತ್ತಾನೆ. ನಾಳೆ ಬರುತ್ತಾನೆ.

ಬರುವ ವರ್ಷ ಆಗುತ್ತದೆ—ಇತ್ಯಾದಿ ಕಾಲವಿಷಯಕವ್ಯವಹಾರ ಪರಸ್ಪರವಿರುದ್ಧವಾಗಿರುತ್ತದೆ. ಅದಕ್ಕೆ ಸಮಾಧಾನ. 'ಕ್ಷಣಾದಿಃ—' ಇತಿ. ಕಾಲ ಒಂದಾದರೂ ಉಪಾಧಿಭೇದದಿಂದ ಕ್ಷಣದಿನಾದಿ ನಾನಾವ್ಯವಹಾರಭೇದವುಂಟಾಗುತ್ತದೆ. ಆ ಉಪಾಧಿಯಾವುದು ? ಎಂಬ ಜಿಜ್ಞಾಸೆಗೆ ಸಮಾಧಾನ ತೋರಿಸುತ್ತಾನೆ. ಉಪಾಧಿಸ್ತು' ಇತಿ. ಮೂರ್ತದ್ರವ್ಯಗಳಲ್ಲಿರುವ ಕ್ರಿಯೆಯೇ ಈ ಉಪಾಧಿಯಾಗುತ್ತದೆ. ಮೊದಲನೆಯ ಕ್ಷಣದ ಉಪಾಧಿ. 'ಸ್ವಜನ್ಯ—' ಇತಿ. ಸ್ವಪದದಿಂದ ಮೂರ್ತದ್ರವ್ಯದಲ್ಲಿರುವ ಕ್ರಿಯೆಯನ್ನು ತೆಗೆದುಕೊಳ್ಳಬೇಕು.

ಮೊದಲು ಕ್ರಿಯೆಯುಂಟಾಗುತ್ತದೆ. ಅದರಿಂದ ವಿಭಾಗ. ವಿಭಾಗದಿಂದ ಪೂರ್ವದೇಶಸಂಯೋಗದ ನಾಶ. ಆಮೇಲೆ ಉತ್ತರದೇಶಸಂಯೋಗ. ಹೀಗೆ ನಿಯಮ. ಮೊದಲು ಕ್ರಿಯೆ ಉಂಟಾದಾಗ ಆ ಕ್ರಿಯೆಯಿಂದ ಎರಡನೆಯ ಕ್ಷಣದಲ್ಲಿ ವಿಭಾಗವಾಗಬೇಕು. ಆಗ ಆ ವಿಭಾಗದ ಪ್ರಾಗಭಾವವು ಮೊದಲನೆಯ ಕ್ಷಣದಲ್ಲಿ ಇರುತ್ತದೆ. ಆಗ ಆ ಕ್ರಿಯೆಯು ಸ್ವಜನ್ಯವಿಭಾಗ ಪ್ರಾಗಭಾವ ವಿಶಿಷ್ಟವಾಗುತ್ತದೆ. ( ತನ್ನಿಂದ ಆಗುವ ವಿಭಾಗದ ಪ್ರಾಗಭಾವದಿಂದ ಕೂಡಿರುವುದು ) ಇದನ್ನೇ 'ಸ್ವಜನ್ಯ ವಿಭಾಗಪ್ರಾಗಭಾವಾವಚ್ಛಿನ್ನಂ ಕರ್ಮ' ಎಂದಿರುತ್ತಾನೆ. ಕರ್ಮ ಕ್ರಿಯೆ ಎಲ್ಲಾ ಪರ್ಯಾಯಪದಗಳು. ಹೀಗೆ ಕ್ರಿಯೆಯಿಂದ ಮುಂದೆ ಆಗುವ ವಿಭಾಗದ ಪ್ರಾಗಭಾವದಿಂದ ಕೂಡಿರುವ ಕ್ರಿಯಾನುಕೂಲಕವಾಗಿ ಕಾಲದಲ್ಲಿ ಪ್ರಥಮಕ್ಷಣ ವ್ಯವಹಾರವುಂಟಾಗುತ್ತದೆ. ಕ್ರಿಯಾ ಮತ್ತು ಅದರಿಂದಾಗುವ ವಿಭಾಗದಪ್ರಾಗಭಾವ ಇವರೆಡೂ ಯಾವ ಒಂದು ಕಾಲದಲ್ಲಿರುವುವೋ ಆ ಕಾಲಕ್ಕೇ ಪ್ರಥಮಕ್ಷಣವೆಂದು ಹೆಸರು. ಹೀಗೆ ಕ್ರಿಯಾ ಉಪಾಧಿಯಾಗುತ್ತದೆ. ಈ ಕ್ರಿಯೋಪಲಕ್ಷಿತಕಾಲವೇ ಮೊದಲನೆಯ ಕ್ಷಣ ವೆಂದು ತಾತ್ಪರ್ಯ.

ದ್ವಿತೀಯಕ್ಷಣದ ಉಪಾಧಿ.— 'ಪೂರ್ವ—' ಇತಿ. ಮೂರ್ತದ್ರವ್ಯಕ್ಕೆ ಯಾವ ಪೂರ್ವದೇಶದ ಸಂಯೋಗವಿದೆಯೋ, ಆ ಸಂಯೋಗಾವಚ್ಛಿನ್ನವಾದ ( ಸಂಯೋಗದಿಂದ ಕೂಡಿದ ) ಕ್ರಿಯಾದಿಂದ ಹುಟ್ಟಿದ ವಿಭಾಗ ಅಂದರೆ ಸಂಯೋಗ ಪೂರ್ವಕವಾದ ಯಾವ ವಿಭಾಗವಿದೆಯೋ ಅದು ಎರಡನೆಯಕ್ಷಣದ ಉಪಾಧಿ. 'ಪೂರ್ವಸಂಯೋಗಾವಚ್ಛಿನ್ನವಿಭಾಗೋಪಲಕ್ಷಿತಕಾಲವೇ ದ್ವಿತೀಯಕ್ಷಣ' 'ಸ್ವಜನ್ಯ ವಿಭಾಗನಾಶ್ಯಪೂರ್ವಸಂಯೋಗವಿಶಿಷ್ಟಸ್ವಜನ್ಯವಿಭಾಗಃ' ಎಂದು ಪರಿಷ್ಕೃತಲಕ್ಷಣ. ಸ್ವಂ—ಕ್ರಿಯಾ. ಅದರಿಂದ ಜನ್ಯವಾದುದು ವಿಭಾಗ. ಆ ವಿಭಾಗದಿಂದ ನಾಶ ವಾಗುವ ಯಾವ ಪೂರ್ವಸಂಯೋಗವಿದೆಯೋ ತದ್ವಿಶಿಷ್ಟವಾದ (ಪೂರ್ವಸಂಯೋಗದಿಂದ ಕೂಡಿದ) ಸ್ವಜನ್ಯ ವಿಭಾಗ—ಕ್ರಿಯಾಜನ್ಯವಾದ ವಿಭಾಗವೆಂದರ್ಥ.

ಮೂರನೆಯಕ್ಷಣದಉಪಾಧಿ— 'ಪೂರ್ವಸಂ—' ಇತಿ. ಪೂರ್ವದೇಶದಲ್ಲಿರುವ ಯಾವ ಮೂರ್ತದ್ರವ್ಯದ ಸಂಯೋಗವಿದೆಯೋ ಆ ಸಂಯೋಗದ ನಾಶದಿಂದ ಕೂಡಿದ ಉತ್ತರದೇಶಸಂಯೋಗದ ಪ್ರಾಗಭಾವವೇ ಮೂರನೆಯ ಕ್ಷಣದ ಉಪಾಧಿ. ಮೊದಲ

ನೆಯ ಕ್ಷಣದಲ್ಲಿ ಆಗುವ ಕ್ರಿಯೆಯಿಂದ ಎರಡನೆಯಕ್ಷಣದಲ್ಲಿ ಹುಟ್ಟಿನ ವಿಭಾಗದಿಂದ ಮೂರನೆಯ ಕ್ಷಣದಲ್ಲಿ ಪೂರ್ವದೇಶದಲ್ಲಿರುವಸಂಯೋಗವು ನಾಶವಾಗುತ್ತದೆ. ಅದೇ ಮೂರನೆಯ ಕ್ಷಣದಲ್ಲಿ ನಾಲ್ಕನೇಕ್ಷಣದಲ್ಲಿ ಉಂಟಾಗುವ ಉತ್ತರದೇಶದ ಸಂಯೋಗದ ಪ್ರಾಗಭಾವವೂ ಇರುತ್ತದೆ. ಪೂರ್ವಸಂಯೋಗನಾಶಾವಚ್ಛಿನ್ನೋತ್ತರ ಸಂಯೋಗ ಪ್ರಾಗಭಾವೋಪಲಕ್ಷಿತ ಕಾಲವೇ ತೃತೀಯಕ್ಷಣವೆಂದು ತಿಳಿಯಬೇಕು.

ಪ್ರಾಗಭಾವದ ಪ್ರತಿಯೋಗಿಯನ್ನು ಹುಟ್ಟಿಸುವ ಕಾರಣ ಸಮುದಾಯವೇ ಪ್ರಾಗ ಭಾವಕ್ಕೆ ನಾಶವಾಗುತ್ತದೆ. ನಾಲ್ಕನೇ ಕ್ಷಣದಲ್ಲಿ ಉತ್ತರದೇಶದಲ್ಲಿ ಉಂಟಾಗುವ ಸಂಯೋಗವೇ ಆ ಸಂಯೋಗೋತ್ಪತ್ತಿ ಕ್ಷಣದಲ್ಲಿ ಪ್ರಾಗಭಾವನನ್ನು ನಾಶಮಾಡುತ್ತದೆ. ಆಗ ಉತ್ತರದೇಶಸಂಯೋಗದ ಪ್ರಾಗಭಾವವು ಮೂರನೆಯ ಕ್ಷಣದವರೆಗೆ ಮಾತ್ರ ಇರುತ್ತದೆ. ಅದಕ್ಕಿಂತಲೂ ಅಧಿಕಕಾಲ ಇರುವುದಿಲ್ಲ.

ನಾಲ್ಕನೆಯ ಕ್ಷಣದ ಉಪಾಧಿ—'ಉತ್ತರ'—ಇತಿ. ಉತ್ತರದೇಶ ಸಂಯೋಗ ವಿಶಿಷ್ಟವಾದ ಕ್ರಿಯೆಯೇ ನಾಲ್ಕನೇ ಕ್ಷಣದ ಉಪಾಧಿ. ಪ್ರಥಮಕ್ಷಣದಲ್ಲಿ ಘಟದಲ್ಲಿ ಕ್ರಿಯೆ ಉಂಟಾಗುತ್ತದೆ. ಎರಡನೆಯ ಕ್ಷಣದಲ್ಲಿ ಕ್ರಿಯೆಯಿಂದ ಉಂಟಾಗುವ, ಘಟದ ಪೂರ್ವದೇಶದಿಂದ ಉಂಟಾಗುವ ವಿಭಾಗ. ಮೂರನೆಯ ಕ್ಷಣದಲ್ಲಿ ಕ್ರಿಯಾಜನ್ಯ ವಿಭಾಗದಿಂದ ಘಟದ ಪೂರ್ವದೇಶ ಸಂಯೋಗ ನಾಶ. ನಾಲ್ಕನೆಯ ಕ್ಷಣದಲ್ಲಿ ಕ್ರಿಯೆಯಿಂದ ಘಟಕ್ಕೆ ಉತ್ತರದೇಶ ಸಂಯೋಗವಾಗುತ್ತದೆ. ಈ ಉತ್ತರದೇಶ ಸಂಯೋಗವೇ ತನಗೆ ಜನಕವಾದ ಕ್ರಿಯೆಗೆ ನಾಶಕವಾಗುತ್ತದೆ. ಆ ಕ್ರಿಯೆಯು ಐದನೇಕ್ಷಣದಲ್ಲಿ ಇರುವುದಿಲ್ಲ. ನಾಲ್ಕನೆಯ ಕ್ಷಣದಲ್ಲಿದ್ದರೂ ಉತ್ತರದೇಶ ಸಂಯೋಗರೂಪ ವಿಶೇಷಣ ವಿಶಿಷ್ಟವಾಗಿರುತ್ತದೆ. ಉತ್ತರದೇಶ ಸಂಯೋಗಾವಚ್ಛಿನ್ನ ಕ್ರಿಯೋಪಲಕ್ಷಿತ ಕಾಲವೇ ನಾಲ್ಕನೆಯ ಕ್ಷಣವಾಗುತ್ತದೆ.

ಉತ್ತರದೇಶ ಸಂಯೋಗವಾದೊಡನೆಯೇ ಐದನೆಯ ಕ್ಷಣದಲ್ಲಿ ಕ್ರಿಯೆಯು ನಷ್ಟವಾಗುವುದರಿಂದ ಐದನೆಯ ಕ್ಷಣದಲ್ಲಿ ವ್ಯವಹಾರಕ್ಕೆ ಯಾವ ಉಪಾಧಿಯು ಇಲ್ಲದಿರುವುದರಿಂದ ಪಂಚಮಕ್ಷಣದಲ್ಲಿ ಕ್ಷಣ ವ್ಯವಹಾರ ಇಲ್ಲದೇ ಹೋಗಬೇಕಾಗುತ್ತದೆಂದು ಆಶಂಕಿಸುತ್ತಾನೆ. 'ನಚ'—ಇತಿ. ಇದಕ್ಕೆ ಸಮಾಧಾನ. 'ಕರ್ಮಾಂತರ'—ಇತಿ. ನಾಲ್ಕನೆಯ ಕ್ಷಣದಲ್ಲಿ ಕ್ರಿಯೆ ನಷ್ಟವಾದರೂ ಅದೇ ಘಟಾದಿಮೂರ್ತದ್ರವ್ಯದಲ್ಲಿ ಇನ್ನೊಂದು ಕ್ರಿಯೆ ಹುಟ್ಟುತ್ತದೆ. ಆ ಕ್ರಿಯೆಯಿಂದ ಹಿಂದಿನಂತೆ ಕ್ಷಣಾದಿವ್ಯವಹಾರ ಸಿದ್ಧಿಸಲು ಯಾವ ತೊಂದರೆಯೂ ಇಲ್ಲ.

ಇಷ್ಟು ಪರಿಷ್ಕರಿಸಿದರೂ ಈ ಲಕ್ಷಣವು ಮಹಾಪ್ರಲಯರೂಪಕ್ಷಣದಲ್ಲಿ ಅವ್ಯಾಪ್ತವಾಗುತ್ತದೆ. ಅಲ್ಲಿ ಯಾವ ಕ್ರಿಯೆಯೂ ಇಲ್ಲದಿರುವುದರಿಂದ ಕ್ರಿಯೋಪಾಧಿಯಿಂದ ವ್ಯವಹರಿಸುವುದು ಹೇಗೆ ? ಎಂದು ಶಂಕಿಸುತ್ತಾನೆ. 'ಮಹಾಪ್ರಲಯೇ'—ಇತಿ. ಸರ್ವಕಾರ್ಯಧ್ವಂಸರೂಪವಾದ ಮಹಾಪ್ರಲಯದಲ್ಲಿ ಕ್ಷಣಾದಿವ್ಯವಹಾರವಿಲ್ಲವೆಂದೇ ಸಿದ್ಧಾಂತಿಗಳ ಮತ. ಅಲ್ಲಿಯೂ ಕ್ಷಣ ವ್ಯವಹಾರ ಹೇಳಲೇ ಬೇಕೆಂದಿದ್ದರೆ ಆಗ ಗತ್ಯಂತರ

ವಿಲ್ಲದೆ ಪದಾರ್ಥ ಧ್ವಂಸವೇ ಕ್ಷಣಾತ್ಮಕಕಾಲಕ್ಕೆ ಉಪಾಧಿಯಾಗುತ್ತದೆಂದು ಹೇಳಬೇಕು.

ಕ್ಷಣಾದಿವ್ಯವಹಾರ ಹೀಗೆ ಸಿದ್ಧವಾದರೂ ದಿನಾದಿವ್ಯವಹಾರಸಿದ್ಧಿಸುವುದು ಹೇಗೆ ? ಎಂಬುದಕ್ಕೆ ಸಮಾಧಾನ ತೋರಿಸುತ್ತಾನೆ. 'ದಿನಾದಿ,—ಇತಿ. ತತ್ತತ್ಕ್ಷಣಕೂಟೈಃ —ಆಯಾಯ ಕ್ಷಣ ಸಮುದಾಯಗಳಿಂದ ದಿನಾದಿವ್ಯವಹಾರ ಸಿದ್ಧಿಸುತ್ತದೆ. ದಿನಾದಿ ಸಮುದಾಯದಿಂದ ಮಾಸವೂ, ಮಾಸ ಸಮುದಾಯದಿಂದ ವರ್ಷವೂ ಆಗುತ್ತದೆಂದು ಆದಿಪದದಿಂದ ತಿಳಿಯಬೇಕು.

ಮಹಾಪ್ರಲಯ ಕ್ರಮವು ಶಾಸ್ತ್ರದಲ್ಲಿ ಹೀಗೆ ನಿರೂಪಿತವಾಗಿದೆ. ಪೃಥಿವಿಯು ನೀರಿನಲ್ಲಿ ಲಯ ಹೊಂದುತ್ತದೆ. ನೀರು ತೇಜಸ್ಸಿನಲ್ಲಿಯೂ, ತೇಜಸ್ಸು ವಾಯುವಿನಲ್ಲಿಯೂ ವಾಯು ಆಕಾಶದಲ್ಲಿಯೂ. ಆಕಾಶವು ಮಹಾಪ್ರಕೃತಿಯಲ್ಲಿಯೂ ಅದು ಪರಮಾತ್ಮನಲ್ಲಿಯೂ ಲೀನವಾಗುತ್ತದೆ.

'ಅತೀತಾದಿವ್ಯವಹಾರಹೇತುಃ ಕಾಲಃ' ಎಂದು ಕಾಲಲಕ್ಷಣ ಇತರ ಗ್ರಂಥದಲ್ಲಿ ಹೇಳಿದೆ. 'ವರ್ತಮಾನಪ್ರಾಗಭಾವಪ್ರತಿಯೋಗಿತ್ವಂ' ಭವಿಷ್ಯತ್ತ್ವಮ್' ಧ್ವಂಸಪ್ರಾಗಭಾವಾನಧಿಕರಣಕಾಲವೃತ್ತಿತ್ವಂ' ವರ್ತಮಾನತ್ವಮ್. ವರ್ತಮಾನಧ್ವಂಸಪ್ರತಿಪ್ರತಿಯೋಗಿತ್ವಂ' ಅತೀತತ್ವವೆಂದು ಲಕ್ಷಣ ಹೇಳುತ್ತಾರೆ. ಇದು ನನ್ನ ತರ್ಕಸಂಗ್ರಹ ವ್ಯಾಖ್ಯಾನದಲ್ಲಿ ವಿಸ್ತೃತವಾಗಿದೆ.

ಅಧಿಕ ಸೂರ್ಯಪರಿಸ್ಪಂದ (ಕ್ರಿಯಾ) ವಿಶಿಷ್ಟ ಪಿಂಡ ಜ್ಞಾನದಿಂದ ಕಾಲಿಕಪರತ್ವವೂ, ಅಲ್ಪತರ ಸೂರ್ಯಪರಿಸ್ಪಂದ ವಿಶಿಷ್ಟಪಿಂಡಜ್ಞಾನದಿಂದ ಕಾಲಿಕ ಅಪರತ್ವವೂ ಹುಟ್ಟುತ್ತದೆಂದು ತಿಳಿಯಬೇಕು. ಇಲ್ಲಿ ಪರಿಸ್ಪಂದ—ಕ್ರಿಯಾ ವಿಶೇಷಣ, ಪಿಂಡವು ವಿಶೇಷ್ಯ. ಈ ಎರಡರ ಸಂಬಂಧ ಘಟಕವಾಗಿ ಸಿದ್ಧವಾಗುವ ಪದಾರ್ಥವೇ ಕಾಲವಾಗುತ್ತದೆ. ||

ಕಾಲಗ್ರಂಥ ಮುಗಿದಿದೆ

**ದೂರಾಂತಿಕಾದಿಧೀ ಹೇತುರೇಕಾ ನಿತ್ಯಾ ದಿಗುಚ್ಯತೇ || ೪೯ ||**

ದಿಶಂ ನಿರೂಪಯತಿ ದೂರಾಂತಿಕೇತಿ । ದೂರತ್ವಂಮಂತಿಕತ್ವಂ ಚ ದೈಶಿಕಪರತ್ವಮಪರತ್ವಂ ಬೋಧ್ಯಮ್ । ತದ್‌ಬುದ್ಧೇರಸಾಧಾರಣಂ ಬೀಜಂ ದಿಗೇವ । ದೈಶಿಕ ಪರತ್ವಾಪರತ್ವಯೋರಸಮವಾಯಿಕಾರಣ ಸಂಯೋಗಾಶ್ರಯತಯಾ ಲಾಘವಾದೇಕಾ ದಿಕ್ ಸಿಧ್ಯತೀತಿ ಭಾವಃ || ೪೯ ||

'ಇದಮಸ್ಮಾತ್ ದೂರಂ' 'ಇದಂನೇದಿಷ್ಠಂ' (ಇದು ಇವಕ್ಕಿಂತ ದೂರವಾಗಿದೆ, ಇದು ಹತ್ತಿರವಾಗಿದೆ) ಎಂಬ ಬುದ್ಧಿಗೆ ಅಸಾಧಾರಣನಿಮಿತ್ತಕಾರಣವಾದದ್ದು ದಿಕ್ಕು. ದೂರವೆಂದರೇನು ? ಹತ್ತಿರವೆಂದರೇನು ? ಎಂಬ ಶಂಕೆಗೆ ಸಮಾಧಾನ ತೋರಿಸುತ್ತಾನೆ.

'ದೂರತ್ವಂ'—ಇತಿ. ದೇಶಕೃತವಾದ ಪರತ್ವಕ್ಕೆ ದೂರವೆಂದು ವ್ಯವಹಾರ. ಸಮೀಪದಲ್ಲಿರುವ ಘಟಾದಿಮೂರ್ತ ದ್ರವ್ಯಕ್ಕಿಂತ ದೂರದೇಶದಲ್ಲಿರುವ ಘಟಾದಿಗಳಲ್ಲಿ ದೈಶಿಕ ಪರತ್ವವಿರುತ್ತದೆ. ಹಾಗೆಯೇ ದೂರದೇಶದಲ್ಲಿರುವ ಘಟಾದಿಗಳಿಗಿಂತ ಹತ್ತಿರ ದೇಶದಲ್ಲಿರುವ ಘಟಾದಿ ದ್ರವ್ಯಗಳಲ್ಲಿ ದೈಶಿಕವಾದ ಅಪರತ್ವ ಇರುತ್ತದೆ. ಈ ದೈಶಿಕ ಪರತ್ವ, ಅಪರತ್ವಗಳಿಗೆ ಅಸಮವಾಯಿಕಾರಣವಾದ ಸಂಯೋಗಕ್ಕೆ ಆಶ್ರಯವಾಗಿ ಒಂದು ದಿಕ್ ರೂಪ ದ್ರವ್ಯವು ಸಿದ್ಧವಾಗುತ್ತದೆ. ಅನುಮಾನಾಕಾರ—ದೈಶಿಕೇ ಪರತ್ವಾಪರತ್ವೇ—ಅಸಮವಾಯಿಕಾರಣಜನ್ಯೇ—ಜನ್ಯಗುಣತ್ವಾತ್—ಘಟನಿಷ್ಠರೂಪವತ್ ॥ ಘಟದ ರೂಪವು ಜನ್ಯಗುಣವಾದುದರಿಂದ ಹೇಗೆ ಕಪಾಲರೂಪವಾದ ಅಸಮವಾಯಿಕಾರಣದಿಂದ ಹುಟ್ಟಿದೆಯೋ ಅದರಂತೆ ಈ ದೈಶಿಕ ಪರತ್ವಾಪರತ್ವಗುಣಗಳೂ ಒಂದು ಅಸಮವಾಯಿಕಾರಣದಿಂದ ಹುಟ್ಟಿವೆ. ಯಾವ ಮೂರ್ತ ದ್ರವ್ಯದಲ್ಲಿ ಪರತ್ವಾಪರತ್ವಗುಣಗಳು ಹುಟ್ಟುತ್ತವೆಯೋ, ಆ ದ್ರವ್ಯಕ್ಕೆ ಯಾವ ದ್ರವ್ಯದೊಡನೆ ಸಂಯೋಗವಿದೆಯೋ ಆ ಸಂಯೋಗವೇ ಅಸಮವಾಯಿಕಾರಣವಾಗುತ್ತದೆ. ಆ ಸಂಯೋಗಕ್ಕೆ ಆಶ್ರಯವಾದ ದ್ರವ್ಯವೇ ದಿಕ್ಕು ಎಂದು ತಿಳಿಯಬೇಕು. ದಿಗ್ವಸ್ತು ಸಂಯೋಗವೇ ಅಸಮವಾಯಿಕಾರಣ.

ದಿಕ್ಕಿನ ಪರಿಷ್ಕೃತ ಲಕ್ಷಣ—'ದೈಶಿಕವಿಶೇಷಣತಾಸಂಬಂಧಾವಚ್ಛಿನ್ನ ಕಾರ್ಯತ್ವಾವಚ್ಛಿನ್ನ ಕಾರ್ಯತಾನಿರೂಪಿತತಾದಾತ್ಮ್ಯಸಂಬಂಧಾವಚ್ಛಿನ್ನನಿಮಿತ್ತಕಾರಣತಾಶ್ರಯತ್ವಮ್'

"ಇತ ಇದಮಿತಿ ಯತಸ್ತದ್ದಿಶ್ಯಂ ಲಿಂಗಮ್" (ವೈ. ೨-೨-೧೦) ಎಂದು ಸೂತ್ರ. ಅನುಮಾನಾಂತರದಿಂದಲೂ ಇದು ಸಿದ್ಧವಾಗುತ್ತದೆ. ಇದಂ ದೂರ ಮಿತಿ ಪ್ರತ್ಯಯಃ, ಇದಂ ಸಮೀಪಮಿತಿ ಪ್ರತ್ಯಯಶ್ಚ—ಪೃಥಿವ್ಯಾದ್ಯಷ್ಟದ್ರವ್ಯಾತಿರಿಕ್ತದ್ರವ್ಯಸಂಬಂಧಪ್ರಯುಕ್ತಂ—ಪರತ್ವಾಪರತ್ವ ಹೇತುಕತ್ವಾತ್ । ಕಾಲಿಕ ಪರತ್ವಾಪರತ್ವವತ್ ॥ ಅರ್ಥ ಸುಲಭವಾಗಿದೆ. ದಿಕ್ಕೂ ಕೂಡ ಕಾರ್ಯಸಾಮಾನ್ಯವನ್ನು ಕುರಿತು ಸಾಧಾರಣನಿಮಿತ್ತಕಾರಣವಾಗುತ್ತದೆ.

**ಉಪಾಧಿಭೇದಾದೇಕಾಪಿ ಪ್ರಾಚ್ಯಾದಿವ್ಯಪದೇಶ ಭಾಕ್ ॥**

ನನ್ವೇಕ್ಕೈವ ದಿಗ್ ಯದಿ ತದಾ ಪ್ರಾಚೀಪ್ರತೀಚ್ಯಾದಿ ವ್ಯವಹಾರಃ ಕಥಮುಪಪದ್ಯತಾಮಿತ್ಯತ ಆಹ—ಉಪಾಧಿಭೇದಾದಿತಿ । ಯತ್ಪುರುಷಸ್ಯ ಉದಯಗಿರಿಸನ್ನಿಹಿತಾ ಯಾ ದಿಕ್ ಸಾ ತಸ್ಯ ಪ್ರಾಚೀ । ಏವಮುದಯಗಿರಿ ವ್ಯವಹಿತಾ ಯಾ ದಿಕ್ ಸಾ ಪ್ರತೀಚೀ । ಏವಂ ಯತ್ಪುರುಷಸ್ಯ ಸುಮೇರುಸನ್ನಿಹಿತಾ ಯಾ ದಿಕ್ ಸೋದೀಚೀ। ತದ್ವ್ಯವಹಿತಾ ತ್ವವಾಚೀ । ಸರ್ವೇಷಾಮೇವ ವರ್ಷಾಣಾಂ ಮೇರುರುತ್ತರತಃ ಸ್ಥಿತಃ 'ಇತಿ ನಿಯಮಾತ್ ॥'

ದಿಕ್ ಒಂದೇ ಆದರೆ ಪೂರ್ವಪಶ್ಚಿಮಾದಿವ್ಯವಹಾರ ಹೇಗೆ ? ಎಂಬುದಕ್ಕೆ ಸಮಾಧಾನ ತೋರಿಸುತ್ತಾನೆ. 'ಉಪಧಿಭೇಧಾತ್'—ಇತಿ. ಆಯಾಯ ಉಪಾಧಿಭೇದದಿಂದ

ದಿಕ್ಕು ಒಂದಾದರೂ ಪೂರ್ವಾದಿವ್ಯವಹಾರವನ್ನು ಹೊಂದುತ್ತದೆ ಎಂದರ್ಥ. ಆಯಾಯ ಉಪಾಧಿಯನ್ನು ತೋರಿಸುತ್ತಾನೆ. 'ಯತ್ಪುರುಷಸ್ಯ'—ಇತಿ. ಪುರುಷನೆಂಬುದು ಪದಾರ್ಥಮಾತ್ರಕ್ಕೆ ಉಪಲಕ್ಷಣ. ಉದಯಾಚಲಕ್ಕೆ ಸನ್ನಿಹಿತವಾದ ದಿಕ್ಕು ಪೂರ್ವ. ಯಾರಲ್ಲಿರುವ ಉದಯಗಿರಿ ಸಂಯುಕ್ತ ಸಂಯೋಗಕ್ಕಿಂತ ಯಾರಲ್ಲಿ ಕಡಿಮೆಯಾಗಿ ಉದಯಗಿರಿ ಸಂಯೋಗವಿದೆಯೋ ಅದು ಪೂರ್ವ. ಪ್ರಾಗಸ್ಯಾಮಂಚತಿ ಸೂರ್ಯಃ ಇತಿ ಪ್ರಾಚೀ ಮೈಸೂರಿಗಿಂತ ಮದ್ರಾಸು ಪೂರ್ವ. ಮದ್ರಾಸಿಗೆ ಅಲ್ಪತರ ಸಂಯೋಗ ವಿದೆ. ಹೀಗೆ ಇದಕ್ಕೆ ವಿರುದ್ಧವಾಗಿದ್ದರೆ (ವಿಪ್ರಕೃಷ್ಟ—ದೂರವಾಗಿದ್ದರೆ) ಪಶ್ಚಿಮ ಎಂಬ ವ್ಯವಹಾರ. ಮೈಸೂರಿಗಿಂತ ಮಂಗಳೂರು ಪಶ್ಚಿಮ. 'ಪ್ರಾತಿಕೂಲ್ಯೇನ ಅಸ್ಯಾಮಂಚತಿ ಸೂರ್ಯಃ' ಇತಿ ಪ್ರತೀಚೀ ॥ ಹೀಗೆಯೇ ಸುಮೇರು ಸಮೀಪವಾದರೆ ಆ ಮೂರ್ತ ದ್ರವ್ಯಕ್ಕೆ ಉತ್ತರವಾಗುತ್ತದೆ. 'ಉದಕ್ ಅಸ್ಯಾಮಂಚತಿ ಸೂರ್ಯಃ ಇತಿ ಉದೀಚೀ. ರಾಮೇಶ್ವರದಿಂದ ಕಾಶೀ ಉತ್ತರ ಎಂದರೆ ಕಾಶಿಗೆ ಸುಮೇರುವಿನ ಅಲ್ಪತರ ಸಂಯೋಗ ವಿದೆ. ಸಮೇರು ವಿಪ್ರಕೃಷ್ಟವಾಗಿದ್ದರೆ ದಕ್ಷಿಣವೆಂಬ ವ್ಯವಹಾರ. 'ಅವಾಗ್ ಅಸ್ಯಾಮಂಚತಿ ಸೂರ್ಯಃ' ಇತಿ ಅವಾಚೀ. ಕಾಶಿಯಿಂದ ರಾಮೇಶ್ವರ ದಕ್ಷಿಣವೆಂಬಲ್ಲಿ ರಾಮೇಶ್ವರಕ್ಕೆ ವಿಪ್ರಕೃಷ್ಟಸಂಯೋಗವಿದೆ. 'ಸರ್ವೇಷಾಂ'—ಇತಿ. ಮೇರುಪರ್ವತವೆಂಬುದು ಎಲ್ಲದಕ್ಕೂ ಉತ್ತರದಲ್ಲಿದೆಯೆಂದು ಶಾಸ್ತ್ರವಚನವೇ ಪ್ರಮಾಣ. ಈ ವಿಷಯದಲ್ಲಿ ವೈಶೇಷಿಕ ಸೂತ್ರ.

'ಆದಿತ್ಯ ಸಂಯೋಗಾದ್‌ಭೂತ ಪೂರ್ವಾಚ್ಚ ಭವಿಷ್ಯತೋ ಭೂತಾಚ್ಚ ಪ್ರಾಚೀ'
'ತಥಾ ದಕ್ಷಿಣಾ ಪ್ರತೀಚ್ಯುದೀಚೀ ಚ ॥'
"ಏತೇನ ದಿಗಂತರಾಲಾನಿ ವ್ಯಾಖ್ಯಾತಾನಿ" (ವೈ–೨–೨–೧೪,೧೫,೧೬ ॥'

ಸೂರ್ಯೋದಯ ಸನ್ನಿಹಿತವಾದ ದಿಕ್ಕು ಪೂರ್ವ. ಅದಕ್ಕೆ ವ್ಯವಹಿತವಾದ ದಿಕ್ಕು ಪಶ್ಚಿಮ. ಪೂರ್ವಾಭಿಮುಖವಾಗಿ ನಿಂತವನ ಎಡ ಪಾರ್ಶ್ವದ ದಿಕ್ಕು ಉತ್ತರ. ಬಲಪಾರ್ಶ್ವದ ದಿಕ್ಕು ದಕ್ಷಿಣ. ಎಲ್ಲಿಂದ ಕೆಳಗೆ ಬೀಳುವುದೋ ಅದು ಊರ್ಧ್ವ. ಎಲ್ಲಿ ಬೀಳುವುದೋ ಅದು ಕೆಳಗೆ (ಅಧಃ) ಹೀಗೆ ವಿದಿಕ್ಕುಗಳನ್ನೂ ಆಯಾಯ ಉಪಾಧಿಯಿಂದ ತಿಳಿಯಬೇಕು. ಕೆಲವರು ದಿಕ್ಕಾಲಗಳು ಈಶ್ವರನಿಗಿಂತ ಬೇರೆಯಲ್ಲವೆಂದು ಅಂಗೀಕರಿಸುತ್ತಾರೆ. ಆದರೆ ಇದು ಸರ್ವತಾರ್ಕಿಕ ಸಂಮತವಲ್ಲ.

'ದಿಗ್ಗ್ರಂಥ ಮುಗಿದಿದೆ'

**ಆತ್ಮೇಂದ್ರಿಯಾದ್ಯಧಿಷ್ಠಾತಾ ಕರಣಂ ಹಿ ಸಕರ್ತೃಕಮ್ ॥ ೪೭ ॥**

ಆತ್ಮಾನಂ ನಿರೂಪಯತಿ—ಆತ್ಮೇಂದ್ರಿಯಾದ್ಯಧಿಷ್ಠಾತೇತಿ । ಆತ್ಮತ್ವಜಾತಿಸ್ತು ಸುಖ ದುಃಖಾದಿ ಸಮವಾಯಿಕಾರಣತಾವಚ್ಛೇದಕತಯಾ ಸಿದ್ಧ್ಯತಿ । ಈಶ್ವರೇಽಪಿ ಸಾಜಾತಿರಸ್ತ್ಯೇವ । ಅದೃಷ್ಟಾದಿರೂಪಕಾರಣಾಭಾವಾನ್ನ ಸುಖದುಃಖಾ

ದ್ಯುತ್ಪತ್ತಿಃ । ನಿತ್ಯಸ್ಯ ಸ್ವರೂಪಯೋಗ್ಯತ್ವೇ ಫಲಾವಶ್ಯಂಭಾವ ಇತಿ ನಿಯಮ ಸ್ಯಾऽಪ್ರಯೋಜಕತ್ವಾತ್ । ಪರೇ ತು ಈಶ್ವರೇ ಸಾ ಜಾತಿರ್ನಾಸ್ತ್ಯೇವ ಪ್ರಮಾಣಾಭಾವಾತ್ । ನ ಚ ದಶಮದ್ರವ್ಯತ್ವಾಪತ್ತಿಃ, ಜ್ಞಾನವತ್ತ್ವೇನ ವಿಭಜ ನಾದಿತ್ಯಾಹುಃ ॥ ಇಂದ್ರಿಯಾದೀತಿ । ಇಂದ್ರಿಯಾಣಾಂ ಶರೀರಸ್ಯ ಚ ಪರಂ ಪರಯಾ ಚೈತನ್ಯ ಸಂಪಾದಕಃ । ಯದ್ಯಪ್ಯಾತ್ಮನಿ "ಅಹಂಜಾನೇ ಅಹಂಸುಖೀ" ಇತ್ಯಾದಿ ಪ್ರತ್ಯಕ್ಷ ವಿಷಯತ್ವಮಸ್ತ್ಯೇವ ತಥಾಪಿ ವಿಪ್ರತಿಪನ್ನಂ ಪ್ರತಿ ಪ್ರಥಮತ ಏವ ಶರೀರಾದಿಭಿನ್ನಸ್ತತ್ಪ್ರತೀತಿಗೋಚರ ಇತಿ ಪ್ರತಿಪಾದಯಿತುಂ ನಶಕ್ಯತ ಇತ್ಯತಃ ಪ್ರಮಾಣಾಂತರಂ ದರ್ಶಯತಿ । ಕರಣಮಿತಿ । ಕುಠಾರಾದೀನಾಂ ಛಿದಾದಿ ಕರಣಾನಾಂ ಕರ್ತಾರಮಂತರೇಣ ಫಲಾನುಪಧಾನಂ ದೃಷ್ಟಮ್ ! ಏವಂ ಚಕ್ಷುರಾದೀನಾಂ ಜ್ಞಾನಕರಣಾನಾಂ ಫಲೋಪಧಾನಮಪಿ ಕರ್ತಾರಮಂತರೇಣ ನೋಪಪದ್ಯತ ಇತ್ಯತಿರಿಕ್ತಃ ಕರ್ತಾ ಕಲ್ಪ್ಯತೇ ॥

ಕ್ರಮಪ್ರಾಪ್ತವಾದ ಆತ್ಮಸ್ವರೂಪವನ್ನು ತೋರಿಸುತ್ತಾನೆ. 'ಇಂದ್ರಿಯಾದ್ಯ ಧಿಷ್ಠಾತಾ'—ಇತಿ. ಅವಚ್ಛೇದಕತಾ ಸಂಬಂಧದಿಂದ ಇಂದ್ರಿಯಾದಿಗಳಿಗೆ ಚೈತನ್ಯವನ್ನು ತಂದು ಕೊಡುವವನು. ಆದಿಪದದಿಂದ ಶರೀರವನ್ನು ತೆಗೆದುಕೊಳ್ಳಬೇಕು. ಶರೀರ ಇಂದ್ರಿಯಗಳು ಅವಚ್ಛೇದಕವಾಗುತ್ತವೆ. ಆತ್ಮನು ಅವಚ್ಛೇದ್ಯ. 'ಇಂದ್ರಿಯಾದ್ಯಧಿಷ್ಠಾ ತೃತ್ವಂ' ಅಥವಾ 'ಸಮವಾಯೇನ ಜ್ಞಾನಾಧಿಕರಣತ್ವಂ' ಆತ್ಮನ ಲಕ್ಷಣವಾಗುತ್ತದೆ. ಕಾಲಿಕ ಸಂಬಂಧದಿಂದ ಜ್ಞಾನಕ್ಕೆ ಕಾಲವೂ ಅಧಿಕರಣವಾಗುವುದರಿಂದ ಸಮವಾಯ ದಿಂದ ಜ್ಞಾನಾಧಿಕರಣನು ಎಂದಿದೆ. ಜ್ಞಾನಾದಿಪದದಿಂದ ಇಚ್ಛಾದಿಗಳನ್ನು ತೆಗೆದು ಕೊಳ್ಳಬೇಕು. ಆತ್ಮತ್ವ ಜಾತಿಯಲ್ಲಿ ಪ್ರಮಾಣ ತೋರಿಸುತ್ತಾನೆ. 'ಆತ್ಮತ್ವ'—ಇತಿ. ದುಃಖಾದಿಪದದಿಂದ ಜ್ಞಾನೇಚ್ಛಾದಿಗಳನ್ನು ತೆಗೆದುಕೊಳ್ಳಬೇಕು. ಸಮವಾಯಸಂಬಂ ಧಾವಚ್ಛಿನ್ನಾ ಯಾ ಸುಖದುಃಖಾದಿನಿಷ್ಠಾ ಕಾರ್ಯತಾ, ತಾದೃಶಕಾರ್ಯತಾನಿರೂಪಿತಾ ಯಾ ಆತ್ಮನಿಷ್ಠಾ ಸಮವಾಯಿಕಾರಣತಾ ಸಾ ಕಿಂಚಿದ್ಧರ್ಮಾವಚ್ಛಿನ್ನಾ—ಕಾರಣತಾ ತ್ವಾತ್—ತಂತು ನಿಷ್ಠಕಾರಣತಾವತ್. ಸಮವಾಯದಿಂದ ಜ್ಞಾನವುಂಟಾಗಲು ಆತ್ಮನು ಕಾರಣ. ಕಾರಣತಾ ಅವನಲ್ಲಿದೆ. ಅದು ಒಂದು ಧರ್ಮದಿಂದ ಕೂಡಿರಬೇಕು. ಅದೇ ಆತ್ಮರೂಪವಾದ ಧರ್ಮ. ಅದು ಒಂದಾಗಿ ಜಾತಿ ರೂಪವಾಗಿದೆ. 'ಜ್ಞಾನತ್ವಾವ ಚ್ಛಿನ್ನಂ ಪ್ರತಿ ಆತ್ಮತ್ವಾವಚ್ಛಿನ್ನಂ ಕಾರಣಂ' ಎಂದು ಕಾರ್ಯಕಾರಣಭಾವ ಪ್ರಸಿದ್ಧ ವಾಗಿದೆ. ಆತ್ಮಪದಶಕ್ಯತಾವಚ್ಛೇದಕರೂಪವಾಗಿಯೂ ಆತ್ಮತ್ವಜಾತಿ ಸಿದ್ಧವಾಗುತ್ತದೆ.

ಈಶ್ವರನಲ್ಲಿ ಈ ಆತ್ಮತ್ವಜಾತಿ ಇಲ್ಲವೆಂದು ಆಶಂಕಿಸುವವನಿಗೆ ಸಮಾಧಾನ ಹೇಳು ತ್ತಾನೆ. 'ಈಶ್ವರೇ'—ಇತಿ. 'ಆತ್ಮಾವಾರೇ ದೃಷ್ಟವ್ಯಃ'—ಇತ್ಯಾದಿ ಶ್ರುತಿ ಪ್ರಾಮಾಣ್ಯ ದಿಂದ ಈಶ್ವರನಲ್ಲಿಯೂ ಈ ಆತ್ಮತ್ವಜಾತಿ ಇದೆಯೆಂದು ಸಿದ್ಧವಾಗುತ್ತದೆ. ಜೀವನಂತೆ ಅವನಲ್ಲಿಯೂ ಸುಖದುಃಖವುಂಟಾಗಲಿ ಎಂದರೆ ಸುಖದುಃಖವಾಗದಿರಲು ಕಾರಣ

ತೋರಿಸುತ್ತಾನೆ. 'ಅದೃಷ್ಟ—ಇತಿ. ಸುಖದುಃಖಾನುಭವಕ್ಕೆ ಅದೃಷ್ಟವೇ ಕಾರಣ. ಈಶ್ವರನಲ್ಲಿ ಈ ಅದೃಷ್ಟವಿಲ್ಲದಿರುವುದರಿಂದ ಸುಖಾದ್ಯುತ್ಪತ್ತಿಯೂ ಆಗುವುದಿಲ್ಲ. ಪ್ರಧಾನಕಾರಣವಿದ್ದರೂ ಸಹಕಾರಿಕಾರಣವಿಲ್ಲವಾದರೆ ಎಲ್ಲಿಯೂ ಕಾರ್ಯೋತ್ಪತ್ತಿಯಾಗ ಲಾರದು. ಆದುದರಿಂದ ಆತ್ಮತ್ವಜಾತಿ ಇದ್ದರೂ ಸುಖದುಃಖವಾಗಬೇಕೆಂಬ ನಿಯಮ ವಿಲ್ಲ.

ಆದರೂ ಆತ್ಮತ್ವ ಜಾತಿ ನಿತ್ಯವಾಗಿದೆ. ನಿತ್ಯಕ್ಕೆ ಸ್ವರೂಪಯೋಗ್ಯತಾ ಇರುವುದ ರಿಂದ ಎಂದಾದರೂ ಫಲವಾಗಲೇಬೇಕು. ಅರಣ್ಯದಲ್ಲಿರುವ ದಂಡ ಎಂದಾದರೂ ಘಟ ಕಾರಣವಾಗಬಹುದು. ಸ್ವರೂಪಯೋಗ್ಯತ್ವವಿದೆಯೆಂದರೆ ಹೀಗೆ ಹೇಳಬೇಕು. ಪ್ರಕೃತ ಈಶ್ವರನಲ್ಲಿ ಸುಖದುಃಖಾದಿಕಾರಣತಾವಚ್ಛೇದಕವಾದ ಆತ್ಮತ್ವಜಾತಿ ಇದ್ದಮೇಲೆ ಸುಖಾದಿಯೋಗ್ಯತಾ ಇರುವುದರಿಂದ ಎಂದಾದರೂ ಒಂದುದಿನ ಜೀವನಂತೆ ಸುಖ ದುಃಖಾದಿಗಳುಳ್ಳವನು ಆಗಲೇ ಬೇಕಷ್ಟೆ ಎಂಬ ಶಂಕೆಗೆ ಸಮಾಧಾನ ತೋರಿಸುತ್ತಾನೆ. 'ನಿತ್ಯಸ್ಯ'—ಇತಿ. ಫಲಸ್ವರೂಪಯೋಗ್ಯತಾ ಇದ್ದರೂ ಫಲವಾಗಲೇಬೇಕೆಂಬ ನಿಯಮ ವಿಲ್ಲ. ಕೆಲವು ಕಡೆ ಈ ನಿಯಮ ವ್ಯಭಿಚರಿತವಾಗುತ್ತದೆ. ಜಲಪರಮಾಣುಗಳಲ್ಲಿ ಸ್ನೇಹ ಯೋಗ್ಯತಾ ಇದ್ದರೂ ಅಲ್ಲಿ ಸ್ನೇಹ ಹುಟ್ಟುವುದಿಲ್ಲ. ಆದುದರಿಂದ ಸುಖದುಃಖಾದಿಗಳು ಈಶ್ವರನಲ್ಲಿ ಆಗಲೇಬೇಕೆಂಬ ನಿಯಮವಿಲ್ಲ.

'ಪರೇತು'—ಇತಿ. ಕೆಲವರು ಸುಖಕಾರಣತಾವಚ್ಛೇದಕರೂಪವಾಗಿ ಸಿದ್ಧವಾದ ಆತ್ಮತ್ವಜಾತಿಯು ಈಶ್ವರನಲ್ಲಿ ಇಲ್ಲವೆಂದೇ ಹೇಳುತ್ತಾರೆ. ಅದು ಇದೆಯೆಂಬುದರಲ್ಲಿ ಯಾವ ಪ್ರಮಾಣವೂ ಇಲ್ಲವೆನ್ನುತ್ತಾರೆ. ದ್ರವ್ಯವಿಭಾಜಕ ವಾಕ್ಯದಲ್ಲಿ ಆತ್ಮ ಪದದಿಂದ ಜೀವನನ್ನು ಮಾತ್ರ ತೆಗೆದುಕೊಳ್ಳುವುದಾದರೆ ಈಶ್ವರನು ಬೇರೆಯೆನ್ನುವುದಾದರೆ ಒಂಬತ್ತೇ ದ್ರವ್ಯವಾಗುವುದು ಹೇಗೆ ಈಶ್ವರನು ಹತ್ತನೇದ್ರವ್ಯವಾಗುವುದಿಲ್ಲವೇ ? ಎಂದು ಶಂಕಿಸಿ ಸಮಾಧಾನ ಹೇಳುತ್ತಾನೆ. 'ನಚ'—ವಿಭಾಜಕ ವಾಕ್ಯದಲ್ಲಿ ಆತ್ಮಪದವನ್ನು ತೆಗೆದುಹಾಕಿ 'ಜ್ಞಾನವತ್' ಎಂಬ ಪದವನ್ನು ಸೇರಿಸಿ ಹೇಳುತ್ತೇವೆ. 'ಜ್ಞಾನವತ್ತ್ವಂ' ಎಂದರೆ ಜೀವೇಶ್ವರರಿಬ್ಬರಿಗೂ ಲಕ್ಷಣವಾಗುತ್ತದೆ. ಸಮವಾಯಸಂಬಂಧದಿಂದ ಜ್ಞಾನವುಳ್ಳವನು ಈಶ್ವರನೂ ಆಗುತ್ತಾನೆ.

'ಇಂದ್ರಿಯಾದ್ಯಧಿಷ್ಠಾತಾ' ಎಂಬ ಮೂಲಕ್ಕೆ ವ್ಯಾಖ್ಯಾನ. 'ಇಂದ್ರಿಯಾಣಾಂ' —ಇತಿ. ಆದಿಪದದಿಂದ ಶರೀರಕ್ಕೆ ಗ್ರಹಣ. ಇಂದ್ರಿಯಗಳಿಗೆ ಜನಕತಾ ಸಂಬಂಧ ದಿಂದಲೂ, ಶರೀರಕ್ಕೆ ಅವಚ್ಛೇದಕತಾಸಂಬಂಧದಿಂದ ಆತ್ಮನು ಚೈತನ್ಯ ಸಂಪಾದಕನಾಗು ತ್ತಾನೆ. ಚೈತನ್ಯವೆಂದರೆ ಜ್ಞಾನವಿರುವಿಕೆ (ಜ್ಞಾನವತ್ತ್ವಮ್). ಇದರಿಂದ ಆತ್ಮನಲ್ಲಿ ಪ್ರಮಾಣತೋರಿಸಿದಂತಾಗುತ್ತದೆ. ಇಂದ್ರಿಯಾಣಿ, ಶರೀರಂಚ–ಜ್ಞಾತ್ರಧಿಷ್ಠಿತಾನಿ– ಅಚೇತನತ್ವೇ ಸತಿ ಜ್ಞಾನವತ್ತ್ವಾತ್ ॥ (ಜನಕತಾಸಂಬಂಧೇನ, ಅವಚ್ಛೇದಕತಾ ಸಂಬಂಧೇನ) ವಾಸ್ಯಾದಿವತ್ ॥ ಇಂದ್ರಿಯವಾಗಲೀ ಶರೀರವಾಗಲೀ ಅಚೇತನಪದಾರ್ಥ. ಇವು ಚೇತನಾಧಿಷ್ಠಿತವಾಗಿಯೇ ಕಾರ್ಯವನ್ನು ಮಾಡುತ್ತವೆ. 'ಅಹಂ ಸುಖೀ, ಅಹಂ

ದುಃಖೀ, ಅಹಂಜಾನಾಮಿ' ಇತ್ಯಾದಿ ಮಾನಸ ಪ್ರತ್ಯಕ್ಷದಲ್ಲಿ ವಿಷಯರೂಪನಾಗಿ ಆತ್ಮನು ಸಿದ್ಧನಾದರೂ, ಅಲ್ಲಿ 'ಅಹಂ' ಎಂಬುದರಿಂದ ಚಾರ್ವಾಕಾದಿಗಳು ಶರೀರವನ್ನೇ ಗ್ರಹಿಸುತ್ತಾರೆ. ಅಹಂಪದವಾಚ್ಯನು ಆತ್ಮನಾದರೂ ಅವನು ಶರೀರಾದ್ಯತಿರಕ್ತನಲ್ಲವೆಂದು ಚಾರ್ವಾಕಾದಿಗಳ ಮತ. ಆಗ ಅಹಂಪ್ರತೀತಿ ವಿಷಯ ಶರೀರವೆಂದಾಗುತ್ತದೆ. ಹೀಗೆ ವಿಪ್ರತಿಪನ್ನರಾದವರಿಗೆ ಶರೀರಾದಿಗಳಿಗಿಂತಲೂ ಬೇರೆಯಾದವನು ಅಹಂಪ್ರತೀತಿವಿಷಯನಾಗುತ್ತಾನೆ ಎಂದು ಮೊದಲು ತಿಳಿಸುವುದು ಕಷ್ಟ. 'ಅಹಂಸುಖೀ' ಎಂಬ ಪ್ರತ್ಯಕ್ಷದಲ್ಲಿ ವಿಷಯನಾದವನು ಆತ್ಮನೆಂದರೆ ಜಾಗ್ರತೆಯಾಗಿ ಅವರು ತಿಳಿಯಲಾರರು. ಅವರಿಗೆ ಶರೀರವೇ ಅಲ್ಲಿ ವಿಷಯವಾಗಿದೆಯೆಂಬ ಮೂಢಭ್ರಾಂತಿ ಬಲವಾಗಿರುತ್ತದೆ. ಅದನ್ನು ಹೋಗಲಾಡಿಸಲು ಅನುಮಾನ ಪ್ರಮಾಣದಿಂದ ಶರೀರಾದ್ಯತಿರಿಕ್ತ ಆತ್ಮನನ್ನು ಸಿದ್ಧಪಡಿಸಬೇಕು. ಅದಕ್ಕೋಸ್ಕರ ಪ್ರಮಾಣಾಂತರವನ್ನು ತೋರಿಸುತ್ತಾನೆ· 'ಕರಣಂ' —ಇತಿ. ಕಾಷ್ಠಭೇದನದಲ್ಲಿ ಕೊಡಲಿ ಕರಣವಾಗಿದೆ. ಆದರೆ ಒಬ್ಬ ಕರ್ತೃ ಇಲ್ಲದೇ ಅದರಿಂದ ಭೇದರೂಪಫಲೋತ್ಪತ್ತಿ ಆಗಲಾರದು. ಹಾಗೆಯೇ ಚಕ್ಷುರಾದಿಕರಣಗಳೂ ಒಬ್ಬ ಕರ್ತೃಮೂಲಕ ತಮ್ಮ ವ್ಯಾಪಾರವನ್ನು ಹೊಂದಲು ಶಕ್ಯವಾಗುತ್ತವೆ. ಇದರಿಂದ ಅನುಮಾನ ಹೀಗೆ ಸಿದ್ಧವಾಗುತ್ತದೆ. 'ಚಕ್ಷುರಾದೀನಿ ಇಂದ್ರಿಯಾಣಿ (ರೂಪಾದ್ಯುಪಲಬ್ಧೌ) ಸಕರ್ತೃಕಾಣಿ—ಕರಣತ್ವಾತ್ । ಛಿದಾದಿಕ್ರಿಯಾ ಸಾಧಕಕುಠಾರಾದಿವತ್ ॥ ಒಬ್ಬ ಕರ್ತೃವಿನ ಮೂಲಕ ತಮ್ಮ ವ್ಯಾಪಾರವನ್ನು ಹೊಂದಲು ಸಮರ್ಥವಾಗುತ್ತವೆ ಎಂದಾದುದರಿಂದ ಆ ಕರ್ತೃವೇ (ಪ್ರೇರಕನೇ) ಕೊಡಲಿ ಮುಂತಾದವುಗಳಿಗೆ ಬಡಗಿಯಂತೆ ಆತ್ಮನೆಂದು ಸಿದ್ಧನಾಗುತ್ತಾನೆ. ಆತ್ಮನೇ ಇಂದ್ರಿಯ ಶರೀರಗಳ ಸಂಚಾಲಕನಾಗುತ್ತಾನೆ.

ನನು–ಶರೀರಸ್ಯೈವ ಕರ್ತೃತ್ವಮಸ್ತ್ವಿತ ಆಹ—

**ಶರೀರಸ್ಯ ನ ಚೈತನ್ಯಂಮೃತೇಷು ವ್ಯಭಿಚಾರತಃ ॥**
**ತಥಾತ್ವಂ ಚೇದಿಂದ್ರಿಯಾಣಾಮುಪಘಾತೇ ಕಥಂ ಸ್ಮೃತಿಃ ॥ ೪೮ ॥**

ನನು–ಚೈತನ್ಯಂ ಜ್ಞಾನಾದಿಕಮೇವ ಮುಕ್ತಾತ್ಮನಾಂ ತ್ವನ್ಮತ ಇವ ಮೃತಶರೀರಾಣಾಮಪಿ ತದಭಾವೇ ಕಾ ಕ್ಷತಿಃ, ಪ್ರಾಣಾಭಾವೇನ ಜ್ಞಾನಾಭಾವಸ್ಯಸಿದ್ಧೇರಿತಿ ಚೇನ್ನ, ಶರೀರಸ್ಯ ಚೈತನ್ಯೇ ಬಾಲ್ಯೇ ವಿಲೋಕಿತಸ್ಯ ಸ್ಥಾವಿರೇಸ್ಮರಣಾನುಪಪತ್ತೇಃ; ಶರೀರಾಣಾನುವಯವೋಪಚಯಾಽಪಚಯೈರುತ್ಪಾದವಿನಾಶಶಾಲಿತ್ವಾತ್ । ನ ಚ ಪೂರ್ವಶರೀರೋತ್ಪನ್ನಸಂಸ್ಕಾರೇಣ ದ್ವಿತೀಯಶರೀರೇ ಸಂಸ್ಕಾರ ಉತ್ಪದ್ಯತೇ ಇತಿ ವಾಚ್ಯಮ್, ಅನಂತಸಂಸ್ಕಾರ ಕಲ್ಪನೇ ಗೌರವಾತ್ ॥

ಕರ್ತೃ ಯಾರೋ ಅವನೇ ಆತ್ಮನೆಂದು ಹೇಳಿದೆ. ಈ ವಿಷಯದಲ್ಲಿ ದೇಹಾತ್ಮ

ವಾದಿಯಾದ ಚಾರ್ವಾಕನು ಆಶಂಕಿಸುತ್ತಾನೆ. 'ನನು—' ಇತಿ. ಶರೀರಕ್ಕಿಂತ ಬೇರೆಯಾಗಿ ಆತ್ಮನಿಗೆ ಕರ್ತೃತ್ವವನ್ನು ಏಕೆ ಹೇಳಬೇಕು. ಶರೀರವೇ ಕರ್ತೃ ಅಗಲಿ ಎಂದು ಆಶಂಕಿಸಿದರೆ ಕಾರಿಕೆಯಲ್ಲಿ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಶರೀರಸ್ಯ'—ಇತಿ. ಶರೀರವೇ ಚೈತನ್ಯಕ್ಕೆ ಆಶ್ರಯವೆಂದು ಹೇಳಲು ಸಾಧ್ಯವಿಲ್ಲ. ಹಾಗೆ ಹೇಳಿದರೆ ಮೃತಪುರುಷನಲ್ಲಿ ವ್ಯಭಿಚಾರ ಬರುತ್ತದೆ. ಮೃತ ಅಂದರೆ ಅಧ್ಯಾತ್ಮನಾಯುಸಂಬಂಧ ವಿಲ್ಲದೆ ಶವಭೂತವಾದ ಶರೀರ. ಈ ಮೃತಶರೀರದಲ್ಲಿ ಚೈತನ್ಯವಿರುವುದಿಲ್ಲ. ಚೈತನ್ಯವು ಶರೀರದ ಧರ್ಮವಾದರೆ ಎಲ್ಲಾ ಶರೀರದಲ್ಲಿಯೂ, ಮೃತಶರೀರದಲ್ಲಿಯೂ ಅದು ಇರ ಬೇಕು. ಆದುದರಿಂದ ಶರೀರವು ಚಕ್ಷುರಾದಿ ಇಂದ್ರಿಯಗಳಿಗೆ ಚೈತನ್ಯದಾಯಕನಾದ ಕರ್ತೃ ಆಗುವುದಿಲ್ಲ. ರೂಪಾದಿಗಳು ಉಪಲಬ್ಧವಾಗುವಂತೆ ಮೃತಶರೀರದಲ್ಲಿ ಚೈತನ್ಯವು ಉಪಲಬ್ಧವಾಗುವುದಿಲ್ಲ.

ಪುನಃ ಚಾರ್ವಾಕನು ಶಂಕಿಸುತ್ತಾನೆ. 'ನನು ಚೈತನ್ಯಂ—' ಇತಿ. ತಾರ್ಕಿಕ ಮತದಲ್ಲಿ ಮುಕ್ತಾತ್ಮನಲ್ಲಿ ಪ್ರಾಣವಿಲ್ಲದಿರುವುದರಿಂದ ಹೇಗೆ ಜ್ಞಾನಾದಿಗಳೂ ಇಲ್ಲವೋ ಹಾಗೆಯೇ ಮೃತಶರೀರದಲ್ಲಿ ಪ್ರಾಣವಿಲ್ಲದಿರುವುದರಿಂದ ಚೈತನ್ಯಾದಿಗಳು ಇರುವುದಿಲ್ಲ. ನಿನ್ನ ಮತದಲ್ಲಿ ಮುಕ್ತಾತ್ಮನಲ್ಲಿ ಜ್ಞಾನೇಚ್ಛಾಕೃತ್ಯಾದಿಗಳು ಇರುವುದಿಲ್ಲ. ನನ್ನ ಮತ ದಲ್ಲಿ ಮೃತಶರೀರದಲ್ಲಿ ಅವು ಇರುವುದಿಲ್ಲ. ಇವು ಉಭಯಸಮಾನವಾದುದರಿಂದ ಆಕ್ಷೇಪಿಸುವುದಕ್ಕೆ ಯಾವ ಕಾರಣವೂ ಇಲ್ಲ, ಎಂದು ಹೇಳಿದರೆ ಸಿದ್ಧಾಂತಿಯು ಸಮಾಧಾನ ಹೇಳುತ್ತಾನೆ. 'ನ' ಇತಿ. ಶರೀರವೇ ಚೇತನನಾದ ಆತ್ಮನೆಂದು ಒಪ್ಪುವುದಾದರೆ ಬಾಲ್ಯದಲ್ಲಿ ಅನುಭೂತವಾದ ಕ್ರಿಕೆಟ್ ಆಟದ ನೆನಪು ಮುಪ್ಪಿನಲ್ಲಿ ಬಾರದೇ ಹೋಗಬೇಕಾಗುತ್ತದೆ. ಆ ಅನುಭವಕ್ಕೆ ಆಶ್ರಯವಾದ ಬಾಲ್ಯ ಶರೀರವು ನಷ್ಟ ವಾಗಿದೆ. 'ಯಸ್ಯಾನುಭವಃ ತಸ್ಯೈವ ಸ್ಮೃತಿಃ' ಯಾರಿಗೆ ಅನುಭವವಾಗಿರುತ್ತದೋ ಅವನೇ ಸ್ಮರಣೆ ಹೊಂದುವುದೆಂದು ವ್ಯಾಪ್ತಿ ಲೋಕಪ್ರಸಿದ್ಧವಾಗಿದೆ. ಶರೀರವಾದರೋ ಕ್ಷಣಕ್ಷಣಕ್ಕೂ ಉಪಚಯಾಪಚಯಗಳಿಂದ ( ವೃದ್ಧಿಕ್ಷಯ ) ಬದಲಾಯಿಸುತ್ತಿರುತ್ತದೆ. ಬಾಲ್ಯಶರೀರವೇ ಬೇರೆ ವೃದ್ಧನ ಶರೀರವೇ ಬೇರೆ. ಹೀಗಿರುವಾಗ ಬಾಲ್ಯದಲ್ಲಿ ಅನು ಭೂತವಾದದ್ದು ವಾರ್ಧಕ್ಯದಲ್ಲಿ ನೆನಪು ಬರುವುದು ಹೇಗೆ ? ಹಾಗೆ ಸ್ಮರಣೆಯೇ ಬರುವು ದಿಲ್ಲವೆಂತಿಲ್ಲ. ವೃದ್ಧರು ತಮ್ಮ ಬಾಲ್ಯವನ್ನು ವರ್ಣಿಸುತ್ತಾರೆ. ಅದಕ್ಕೆ ಚಾರ್ವಾಕನ ಸಮಾಧಾನ ಸಮಂಜಸವಲ್ಲವೆಂದು ಅನುವಾದಮಾಡಿ ಖಂಡಿಸುತ್ತಾನೆ. 'ನಚ—' ಇತಿ. 'ಸ್ವಪ್ರಯೋಜ್ಯಸಂಸ್ಕಾರವತ್ತ್ವಸಂಬಂಧದಿಂದ ಬಾಲ್ಯಶರೀರದಲ್ಲಿ ಆದ ಅನುಭವ ದಿಂದ ಉಂಟಾದ ಸಂಸ್ಕಾರವು ವೃದ್ಧಶರೀರದಲ್ಲಿ ಬರುವುದರಿಂದ ಸ್ಮರಣೆ ಬರಲು ತೊಂದರೆ ಇಲ್ಲವೆಂದು ಹೇಳಬಾರದು. ಪೂರ್ವಶರೀರದಲ್ಲಿ ಆದ ಅನುಭವದಿಂದ ಸಂಸ್ಕಾರ ಹುಟ್ಟು ತ್ತದೆ. ಆ ಸಂಸ್ಕಾರದಿಂದ ಎರಡನೆಯ ಶರೀರದಲ್ಲಿ ಒಂದು ಸಂಸ್ಕಾರ ಹುಟ್ಟುತ್ತದೆ. ಹೀಗೆ ಪರಂಪರಯಾ ಸಂಸ್ಕಾರೋತ್ಪತ್ತಿಯನ್ನು ಅಂಗೀಕರಿಸಿದರೆ ಗೌರವ ಬರುತ್ತದೆ. ವೃದ್ಧಿಹ್ರಾಸದಿಂದ ಪ್ರತಿಕ್ಷಣವೂ ಶರೀರವು ಬೇರೆಯಾಗುತ್ತದೆ. ಆ ಪ್ರತಿಯೊಂದು

ಶರೀರವಲ್ಲಿಯೂ ಸಂಸ್ಕಾರ ಹುಟ್ಟುತ್ತದೆಂದು ಕಲ್ಪಿಸಬೇಕು. ಹೀಗೆ ಕಲ್ಪಿಸುವುದರಿಂದ ಅಧಿಕಗೌರವದೋಷ ಬರುತ್ತದೆ. ಆದರಿಂದ ದೇಹಕ್ಕಿಂತ ವ್ಯತಿರಿಕ್ತನಾಗಿ ಒಬ್ಬ ಆತ್ಮನನ್ನು ಅಂಗೀಕರಿಸಿ ಅನುಭವ ಅದರಿಂದಾದ ಸಂಸ್ಕಾರ ಇವುಗಳಿಗೂ, ಸ್ಮೃತಿಗೂ ಆಶ್ರಯನು ಅವನೇ ಎಂದು ಒಪ್ಪುವುದರಿಂದ ಲಾಘವ ಬರುತ್ತದೆ. ಆದುದರಿಂದ ದೇಹೇಂದ್ರಿಯಾದಿಗಳಿಗಿಂತ ಬೇರೆಯಾಗಿ ಚೇತನನಾದ ಆತ್ಮನು ಒಬ್ಬನಿದ್ದಾನೆಂದೂ ಅವನೇ ದೇಹೇಂದ್ರಿಯಗಳಿಗೆ ಚೈತನ್ಯಸಂಪಾದಕನೆಂದೂ ಸಿದ್ಧವಾಗುತ್ತದೆ ||

ಏವಂ ಶರೀರಸ್ಯ ಚೈತನ್ಯೇ ಬಾಲಕಸ್ಯ ಸ್ತನ್ಯಪಾನೇ ಪ್ರವೃತ್ತಿರ್ನಸ್ಯಾತ್, ಇಷ್ಟಸಾಧನತಾಜ್ಞಾನಸ್ಯ ತದ್ಧೇತುತ್ವಾತ್ತದಾನೀಮಿಷ್ಟ ಸಾಧನತಾಸ್ಮಾರಕಾಭಾವತ್ | ಮನ್ಮತೇತು—ಜನ್ಮಾಂತರಾನುಭೂತೇಷ್ಟಸಾಧನತ್ವಸ್ಯ ತದಾನೀಂ ಸ್ಮರಣಾದೇವ ಪ್ರವೃತ್ತಿಃ ನ|| ಚ ಜನ್ಮಾಂತರಾನುಭೂತಮನ್ಯವಪಿ ಸ್ಮರ್ಯತಾಮಿತಿ ವಾಚ್ಯಮ್, ಉದ್ಬೋಧಕಾಭಾವಾತ್ | ಅತ್ರ ತ್ವನಾಯತ್ಯಾ ಜೀವನಾದೃಷ್ಟಮೇವೋದ್ಬೋಧಕಂ ಕಲ್ಪ್ಯತೇ || ಇತ್ಥಂ ಚ—ಸಂಸಾರಸ್ಯಾನಾದಿತಯಾ ಆತ್ಮನೋಽನಾದಿತ್ವಸಿದ್ಧಾವನಾದಿಭಾವಸ್ಯ ನಾಶಾಸಂಭವಾನ್ನಿತ್ಯತ್ವಂ ಸಿದ್ಧ್ಯತೀತಿ ಬೋಧ್ಯಮ್ ||

ದೇಹಾತ್ಮವಾದದಲ್ಲಿ ದೋಷಾಂತರವನ್ನು ತೋರಿಸುತ್ತಾನೆ. 'ಏವಂ—' ಇತಿ. ಶರೀರವೇ ಚೈತನ್ಯಾಶ್ರಯನೆನ್ನುವುದಾದರೆ ಹುಟ್ಟಿದ ಮಗುವಿಗೆ ಸ್ತನ್ಯಪಾನದಲ್ಲಿ ಪ್ರವೃತ್ತಿಯುಂಟಾಗಲಾರದು. ಪ್ರವೃತ್ತಿಯುಂಟಾಗಬೇಕಾದರೆ ಇಷ್ಟಸಾಧನತಾ ಜ್ಞಾನವಿರಬೇಕು. 'ಇದುಮನುಇಷ್ಟಸಾಧನು' ಎಂಬ ಜ್ಞಾನನೇ ಇಷ್ಟಸಾಧನತಾಜ್ಞಾನ. ಸ್ತನ್ಯಪಾನಪ್ರವೃತ್ತಿಯಪೂರ್ವಕಾಲದಲ್ಲಿ ಇಷ್ಟಸಾಧನತಾಜ್ಞಾನಸ್ಮರಣೆಗೆ ಯಾವ ಕಾರಣವೂ ಇಲ್ಲ. 'ಇಷ್ಟಸಾಧನತಾಸ್ಮಾರಕಾಭಾವಾತ್' ಎಂಬಲ್ಲಿ 'ಇಷ್ಟಸಾಧನತ್ವಾನುಭಾವಕಾಭಾವಾತ್' ಎಂದು ಪಾಠಾಂತರವಿದೆ. ಇಷ್ಟಸಾಧನತಾವಿಷಯಕ ಜ್ಞಾನವುಂಟಾಗಬೇಕಾದರೆ ಪ್ರತ್ಯಕ್ಷಾನುಭವಜ್ಞಾನವಿರಬೇಕು. ಇಂದ್ರಿಯಸನ್ನಿಕರ್ಷವಿದ್ದರೇ ಪ್ರತ್ಯಕ್ಷಾನುಭವ ಬರುತ್ತದೆ. ಜನ್ಮಸಮಯದಲ್ಲಿ ಇವು ಯಾವುದೂ ಇಲ್ಲದಿರುವುದರಿಂದ ಪ್ರವೃತ್ತಿ ಬರಲಾರದು. 'ಸ್ಮಾರಕಾಭಾವಾತ್' ಎಂದಿದ್ದರೆ ಸ್ಮೃತಿಗೆ ಕಾರಣವಿಲ್ಲದಿರುವುದರಿಂದ ಎಂದು ಅರ್ಥಮಾಡಬೇಕು. ಅನುಭವವಾಗದಿದ್ದರೆ ಅದರಿಂದ ಸಂಸ್ಕಾರವೂ ಹುಟ್ಟುವುದಿಲ್ಲ. ಸಂಸ್ಕಾರವಿಲ್ಲದಿದ್ದರೆ ಸ್ಮೃತಿಯೂ ಹುಟ್ಟುವುದಿಲ್ಲ.

ಯಾವುದಾದರೊಂದು ವಿಷಯದಲ್ಲಿ ಇಷ್ಟ ಸಾಧನತಾ ಜ್ಞಾನವುಂಟಾಗದಿದ್ದರೆ ಆಗ ಅಲ್ಲಿ ಪ್ರವೃತ್ತಿಯೂ ಬರುವುದಿಲ್ಲ. ಆ ಪದಾರ್ಥ ಅನುಭೂತವಾಗದಿದ್ದರೆ ಅಲ್ಲಿ ಇಷ್ಟಸಾಧನತಾಜ್ಞಾನ ಹುಟ್ಟುವುದಿಲ್ಲ. ಅನುಭೂತವಾದ ಮೇಲೆ ಇದು ನನಗೆ ಇಷ್ಟದಾಯಕವಾದದ್ದು ಎಂಬ ಜ್ಞಾನ ಬರುತ್ತದೆ. ಪ್ರಕೃತದೇಹವೇ ಆತ್ಮನೆನ್ನುವುದಾದರೆ

ಮಗುವು ಎಂದೂ ಸ್ತನ್ಯಪಾನ ಮಾಡಿಲ್ಲವಾದುದರಿಂದ ಅದರಿಂದ ಸಂಸ್ಕಾರವುಂಟಾಗುವುದು ಹೇಗೆ ? ಸ್ತನ್ಯಪಾನವು ನನಗೆ ಇಷ್ಟವಾಗಿದೆ ಎಂಬ ಜ್ಞಾನ ಬರುವುದಾದರೂ ಹೇಗೆ ? ಇಷ್ಟಸಾಧನತಾಜ್ಞಾನವಿಲ್ಲದೇ ಹೋದರೆ ತಾಯಿಯ ಸ್ತನ್ಯಪಾನದಲ್ಲಿ ಪ್ರವೃತ್ತಿ ಬರುವುದು ಹೇಗೆ ? ಕಾರಣವಿಲ್ಲದೆ ಕಾರ್ಯವಾದಂತಾಗುತ್ತದೆ. ಇದಕ್ಕೆ ದೇಹಾತ್ಮವಾದಿಯು ಏನೂ ಉತ್ತರವನ್ನು ಕೊಡಲಾರನು. 'ಸಿದ್ಧಾಂತಿಯ ಮತದಲ್ಲಿಯೂ ಮಗುವಿಗೆ ಸ್ತನ್ಯಪಾನಪ್ರವೃತ್ತಿ ಬರುವುದು ಹೇಗೆ ? ಅನುಭವವಿಲ್ಲದಿರುವುದರಿಂದ ಸಂಸ್ಕಾರಾದಿಗಳು ಹುಟ್ಟಿರುವುದಿಲ್ಲ. ಈ ಪ್ರಶ್ನೆ ಉಭಯರಿಗೂ ಸಮಾನವೆಂದರೆ ಸಿದ್ಧಾಂತಿಯು ಸಮಾಧಾನ ತೋರಿಸುತ್ತಾನೆ. 'ಮನ್ಮತೇ'—ಇತಿ. ದೇಹಾತಿರಿಕ್ತವಾಗಿ ಆತ್ಮನು ಇರುವುದರಿಂದ ಜನ್ಮಾಂತರದಲ್ಲಿ ಇಷ್ಟಸಾಧನತ್ವವು ಅನುಭೂತವಾಗಿದೆ. ಅನೇಕ ಜನ್ಮಗಳಲ್ಲಿ ಸ್ತನ್ಯಪಾನ ಮಾಡಿ, 'ಸ್ತನ್ಯಪಾನಂ ಮದಿಷ್ಟಸಾಧನಂ' ಎಂಬ ಅನುಭವ ಬಂದಿರುತ್ತದೆ. ಈ ಜನ್ಮದಲ್ಲಿ ಸ್ತನ್ಯಪಾನದ ಅವ್ಯವಹಿತ ಪೂರ್ವಕಾಲದಲ್ಲಿ ಅದರ ಸ್ಮರಣೆ ಬರುವುದರಿಂದ ಸ್ತನ್ಯಪಾನದಲ್ಲಿ ಪ್ರವೃತ್ತಿಯುಂಟಾಗಲು ತೊಂದರೆ ಇಲ್ಲ.

ಇಷ್ಟಸಾಧನತಾಜ್ಞಾನದ ಸ್ಮರಣೆ ಬರುವುದಾದರೆ ಹಿಂದಿನ ಜನ್ಮದಲ್ಲಿ ಅನುಭೂತವಾದುದೆಲ್ಲಾ ಬಾಲಕನಿಗೆ ಸ್ಮರಣೆಯುಂಟಾಗಲಿ ಎಂದು ಶಂಕೆ ಬಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ನಚ—' ಇತಿ. ಸ್ಮರಣೆ ಬರಬೇಕಾದರೆ ಅನುಭವದಿಂದ ಉಂಟಾದ ಸಂಸ್ಕಾರವು ಉದ್ಬುದ್ಧವಾಗಬೇಕು. ಉದ್ಬೋಧಕರೂಪ ಕಾರಣವಿಲ್ಲವಾದರೆ ಸಂಸ್ಕಾರವಿದ್ದರೂ ಯಾವ ಸ್ಮರಣೆಯೂ ಬರುವುದಿಲ್ಲ. ದೇಹಕ್ಕಿಂತ ಆತ್ಮನು ಬೇರೆಯಾದರೆ ಆತನು ಜನ್ಮಾಂತರಗಳಲ್ಲಿ ಅನುಭವಿಸಿದ್ದೆಲ್ಲವನ್ನೂ ಸ್ಮರಿಸಲೇ ಬೇಕು ಎಂಬ ನಿಯಮವಿಲ್ಲ. ಪ್ರಕೃತ ಯಾವ ಉದ್ಬೋಧಕವೂ ಇಲ್ಲವಾದುದರಿಂದ ಜನ್ಮಾಂತರದಲ್ಲಿ ಅನುಭೂತವಾದ ವಿಷಯಸ್ಮರಣೆ ಯಾವುದೂ ಬರುವುದಿಲ್ಲ. ಸ್ತನ್ಯಪಾನದಲ್ಲಿ ಮಾತ್ರ ಅಗತಿಕಗತಿನ್ಯಾಯದಿಂದ ಜೀವನ ಅದೃಷ್ಟ—ಧರ್ಮಾಧರ್ಮಗಳು ಇಷ್ಟಸಾಧನತಾಜ್ಞಾನಸ್ಮರಣೆಗೆ ಉದ್ಬೋಧಕವಾಗುತ್ತವೆಂದು ತಿಳಿಯುತ್ತದೆ. ಅವನ ಅದೃಷ್ಟವೇ ಉದ್ಬೋದಕವೆಂದು ಕಲ್ಪಿಸದಿದ್ದರೆ ಸ್ತನ್ಯಪಾನದಲ್ಲಿ ಪ್ರವೃತ್ತಿಯೇ ಉಂಟಾಗಲಾರದು. ಈ ಜನ್ಮದಲ್ಲಿ ಸ್ತನ್ಯಪಾನವು ನನಗೆ ಇಷ್ಟಸಾಧನ'ವೆಂಬ ಅನುಭವ ಬಂದಿಲ್ಲ. ಹಿಂದಿನ ಜನ್ಮದ ಅನುಭವದಿಂದ ಉಂಟಾದ ಸಂಸ್ಕಾರಕ್ಕೆ ಉದ್ಬೋಧಕವಿಲ್ಲವಾದುದರಿಂದ ಸ್ಮರಣೆ ಬರುವಂತಿಲ್ಲ. ಹೀಗೆ ಸ್ತನ್ಯಪಾನದಲ್ಲಿ ಪ್ರವೃತ್ತಿ ಬಾರದೇ ಬಾಲಕನು ಬತ್ತಿದ ಕಂಠವುಳ್ಳವನಾಗಿ ಸಾಯಬೇಕಾಗುತ್ತದೆ. ಆದುದರಿಂದ ಗತಿಇಲ್ಲದೇ ಧರ್ಮಾಧರ್ಮಗಳೇ ಸ್ತನ್ಯಪಾನಪ್ರವೃತ್ತಿಗೆ ಅನುಕೂಲವಾದ ಇಷ್ಟಸಾಧನತ್ವ ಸ್ಮರಣೆಯಲ್ಲಿ ಉದ್ಬೋಧಕಗಳೆಂದು ಕಲ್ಪಿತವಾಗುತ್ತವೆ. ಹೀಗೆ ಉದ್ಬೋಧಕವಿದ್ದರೆ ಜನ್ಮಾಂತರಾನುಭೂತವಾದ ಇತರ ವಿಷಯಜ್ಞಾನವೂ ಬರಬಹುದು. ಪುರಾಣೇತಿಹಾಸಾದಿಗಳಲ್ಲಿ ಪೂರ್ವಜನ್ಮದಸ್ಮರಣೆ ಬಂದವರ ವಿಷಯ ಬೇಕಾದಷ್ಟು ವಿವೃತವಾಗಿದೆ. ಅದೃಷ್ಟದಿಂದ ಸ್ಮರಣೆ ಬಂದಮೇಲೆ ಸ್ತನ್ಯಪಾನದಲ್ಲಿ ಪ್ರವೃತ್ತಿಯುಂಟಾಗುತ್ತದೆ. ಹಿಂದಿನ ಜನ್ಮದ ಬಾಲ್ಯದಲ್ಲಿ ಹೇಗೆ ಪ್ರವೃತ್ತಿ

ಯೆಂದರೆ ಅದರ ಹಿಂದಿನ ಜನ್ಮದ ಅನುಭವವೆನ್ನಬೇಕು. ಹೀಗೆ ಕಲ್ಪಿಸುತ್ತಾ ಹೋದರೆ ಸಂಸಾರ ಅನಾದಿಯೆಂದು ಸಿದ್ಧವಾಗುವುದರಿಂದ ಆತ್ಮನೂ ಅನಾದಿಯೆಂದು ಸಿದ್ಧನಾಗುತ್ತಾನೆ. ಯಾವುದು ಜನ್ಯವಾದ ಭಾವವೋ ಅದು ವಿನಾಶಿ' ಎಂದು ವ್ಯಾಪ್ತಿ. ಆತ್ಮನು ಅನಾದಿಭಾವವಾದುದರಿಂದ ಜನ್ಯಭಾವತ್ವವಿಲ್ಲದಿರುವುದರಿಂದ ನಾಶ ಹೊಂದುವುದಿಲ್ಲ. 'ಆತ್ಮನಃ—' ಇತಿ. ಆತ್ಮನು ಅನಾದಿಯಾದುದರಿಂದ ಅನಾದಿಭಾವಕ್ಕೆ ನಾಶವಿಲ್ಲದಿರುವುದರಿಂದ ಆತ್ಮನು ಅವಿನಾಶಿ ಎಂದು ಸಿದ್ಧನಾಗುತ್ತಾನೆ. 'ಅವಿನಾಶೀ ವಾರೇಽಯಮಾತ್ಮಾ' (ಬೃಹ....ಉ.) ಎಂಬ ಶ್ರುತಿಯೂ ಈ ವಿಷಯದಲ್ಲಿ ಪ್ರಮಾಣ.

ಚಾರ್ವಾಕಮತದ ಸಾರಾಂಶ. ಪೃಥಿವೀ, ಅಪ್, ತೇಜ, ವಾಯು ಈ ನಾಲ್ಕು ಭೂತಗಳನ್ನು ಮಾತ್ರ ಇವರು ಅಂಗೀಕರಿಸಿರುತ್ತಾರೆ. ದೇಹವೇ ಆತ್ಮ. ಮದಶಕ್ತಿಯಂತೆ ನಾಲ್ಕು ಭೂತಗಳು ಒಟ್ಟಿಗೆ ಸೇರಿದರೆ ಚೈತನ್ಯ ತಾನಾಗಿ ಉಂಟಾಗುತ್ತದೆ. ಭೂತನಷ್ಟವಾದರೆ ಚೈತನ್ಯವೂ ನಷ್ಟವಾಗುತ್ತದೆ. ಪರಲೋಕವಿಲ್ಲ. ಕರ್ಮಫಲವಾದ ಪುಣ್ಯಪಾಪಗಳೂ ಇಲ್ಲ. ಪ್ರತ್ಯಕ್ಷ ಒಂದೇ ಪ್ರಮಾಣ. ಸ್ತ್ರೀ ಸುಖವೇ ಪರಮಪುರುಷಾರ್ಥ. ಜ್ವರಾದಿರೋಗಜದುಃಖವೇ ನರಕ. ರಾಜನೇ ಪರಮೇಶ್ವರ. ದೇಹನಾಶವೇ (ಮರಣವೇ) ಮುಕ್ತಿ. ಜ್ಞಾನದಿಂದ ಮುಕ್ತಿಯಲ್ಲ. ಆದುದರಿಂದ ಸಾಲಮಾಡಿಯಾದರೂ ತುಪ್ಪ ಮುಂತಾದವುಗಳನ್ನು ಪಡೆದು ದೇಹ ಬೆಳೆಸಿ ಸುಖಹೊಂದಬೇಕು. ಭಸ್ಮವಾಗುವ ದೇಹ ಎಂದೂ ವಾಪಸು ಬರುವುದಿಲ್ಲ. ಸ್ವಾರ್ಥಪರರಾದ ಧೂರ್ತಯಷಿ ಮುಂತಾದವರು ಲೋಕವನ್ನು ವಂಚಿಸುವುದಕ್ಕೋಸ್ಕರ ಸ್ವರ್ಗನರಕಾದಿಗಳನ್ನು ಕಲ್ಪಿಸಿ ಮೀಮಾಂಸಾದಿಶಾಸ್ತ್ರಗಳನ್ನು ಬರೆದಿಟ್ಟರು- ಅಗ್ನಿಹೋತ್ರ, ವೇದಾಧ್ಯಯನ, ಸಂನ್ಯಾಸ ಮುಂತಾದವುಗಳು ಬುದ್ಧಿಪೌರುಷವಿಲ್ಲದವರ ಜೀವನಯಾತ್ರಾಕ್ರಮವಾಗಿವೆ. ಇವೆಲ್ಲಾ ನಿಷ್ಫಲ. ಈ ದೇಹಾತ್ಮವಾದ ಮತವನ್ನು ದೇವಗುರುವಾದ ಬೃಹಸ್ಪತಿಯೇ ಪ್ರಚಾರ ಮಾಡಿದನೆಂದೂ, ಬೃಹಸ್ಪತಿಯೆಂಬ ಹೆಸರುಳ್ಳ ಬೇರೊಬ್ಬನು ರಚಿಸಿದನೆಂದೂ ಪ್ರವಾದವಿದೆ. ಮುಕ್ತಾವಳೀಕಾರನು ಸಿದ್ಧಾಂತಯುಕ್ತಿಯಿಂದ ಸಂಕ್ಷಿಪ್ತವಾಗಿ ಈ ಮತವನ್ನು ಖಂಡಿಸಿರುತ್ತಾನೆ. ಅದರ ಸಾರ.

ದೇಹವೇ ಆತ್ಮವಲ್ಲ. ದೇಹ ವ್ಯತಿರಿಕ್ತನಾಗಿ ಪುಣ್ಯಾಪುಣ್ಯಫಲವನ್ನನುಭವಿಸುವವನು ಬೇರೊಬ್ಬನಿದ್ದಾನೆ. ದೇಹವೇ ಆತ್ಮನಾಗುವುದಾದರೆ ಲೋಕದಲ್ಲಿ ರಾಜದರಿದ್ರನೆಂಬ ಭೇದವೇ ಇಲ್ಲದೇ ಹೋಗಬೇಕಾಗುತ್ತದೆ. ಅಧಿಕ ಪುಣ್ಯಕರ್ಮಗಳಿಂದ ಧನಿಕ, ರಾಜರಾಗುತ್ತಾರೆ. ಪಾಪಕರ್ಮಾಧಿಕ್ಯದಿಂದ ಕಡುಬಡವನಾಗುತ್ತಾನೆ. ಚಾರ್ವಾಕ ಮತದಲ್ಲಿ ಈ ಕಾರಣವಿಲ್ಲದಿರುವುದರಿಂದ ಈ ವ್ಯವಸ್ಥೆ ಇಲ್ಲದೇ ಅನವಸ್ಥೆಯುಂಟಾಗುತ್ತದೆ. ದೇಹಭಿನ್ನ ಆತ್ಮನನ್ನು ಒಪ್ಪದೇ ಹೋದರೆ ಬಾಲಕನಿಗೆ ಮೊದಲು ಸ್ತನ್ಯಪಾನದಲ್ಲಿ ಪ್ರವೃತ್ತಿಯುಂಟಾಗಲಾರದು. ಸ್ತನ್ಯಪಾನದಿಂದ ಸುಖವಾಗುತ್ತದೆ ಎಂಬ ಜ್ಞಾನವು ಮೊದಲು ಬಂದಿದ್ದರೆ ಆಗ ಪ್ರವೃತ್ತಿಗೆ ಕಾರಣವಿರುತ್ತದೆ. ಈ ಜನ್ಮದಲ್ಲಿ ಆ ಜ್ಞಾನ ಬಂದಿಲ್ಲ. ಪೂರ್ವಜನ್ಮದ ಜ್ಞಾನಸ್ಮರಣೆಯಿಂದ ಈಗ ಪ್ರವೃತ್ತಿ ಬರುತ್ತದೆಂದು ಹೇಳಲು

ಚಾರ್ವಾಕನು ಪೂರ್ವಜನ್ಮವನ್ನು ಒಪ್ಪುವುದಿಲ್ಲ. ಇಷ್ಟಸಾಧನತಾಜ್ಞಾನವಿದ್ದರೆ ಆಗ ಪ್ರವೃತ್ತಿ. ಅನುಭವ, ಸಂಸ್ಕಾರ, ಸ್ಮೃತಿ ಇವೆಲ್ಲವೂ ಒಂದೇ ಆಶ್ರಯದಲ್ಲಿದ್ದರೆ ಅಲ್ಲಿ ಪ್ರವೃತ್ತಿ ಬರುತ್ತದೆ. ಬಾಲಕನ ಸ್ತನ್ಯಪಾನ ಪ್ರವೃತ್ತಿಯಿಂದ ದೇಹಾತಿರಿಕ್ತನಾಗಿ ಜ್ಞಾನೇಚ್ಛಾದಿಗಳಿಗೆ ಆಶ್ರಯನಾಗಿ ಒಬ್ಬ ಆತ್ಮನಿದ್ದಾನೆಂದು ಸಿದ್ಧವಾಗುತ್ತದೆ. ಆತ್ಮನು ಸಿದ್ಧವಾದ ಮೇಲೆ ಜನ್ಮಾಂತರವನ್ನೂ ಅವಶ್ಯ ಒಪ್ಪಲೇಬೇಕು. ಸುಖದುಃಖಾದಿ ವೈಚಿತ್ರ್ಯವೂ ತನ್ನ ಕಾರಣವಾದ ಧರ್ಮಾಧರ್ಮಗಳಿಂದಲೇ ಉಂಟಾಗುತ್ತದೆ. ಇದೂ ಜನ್ಮಾಂತರ ಸಿದ್ಧಿಗೆ ಅನುಮಾಪಕವಾಗುತ್ತದೆ. ಐಹಿಕ ಸುಖವು ದುಃಖಮಿಶ್ರಿತವಾದುದರಿಂದ ಪುರುಷಾರ್ಥವಾಗಲಾರದು. ವೇದಗಳೂ ಕೂಡಾ ಈಶ್ವರಪ್ರೋಕ್ತವಾದುದರಿಂದ ಪ್ರಮಾಣಗಳಾಗುತ್ತವೆ. ಲೋಕೋಪಕಾರ ಪ್ರಯೋಜನವುಳ್ಳ ವ್ಯಾಸಾದಿಮಹರ್ಷಿಗಳು ಭ್ರಾಂತರೆಂದು ಹೇಳುವುದು ತಿಳಿಗೇಡಿತನವೇ. ಪ್ರತ್ಯಕ್ಷಪ್ರಮಾಣದಿಂದ ಅತಿರಿಕ್ತವಾಗಿ ಅನುಮಾನಾದಿಪ್ರಮಾಣಗಳನ್ನು ಅಂಗೀಕರಿಸಲೇ ಬೇಕು. ಪರಸ್ಥಳಕ್ಕೆ ಹೋದವನ ಪತ್ರದಿಂದ ಅವನು ಇದ್ದಾನೆಂದು ನಂಬುತ್ತೇವೆ. ಚಾರ್ವಾಕನ ಮತದಲ್ಲಿ ಅವನು ತೋರದಿರುವ್ರದರಿಂದ ಮೃತನೆಂದೇ ತಿಳಿಯಬೇಕಾಗುತ್ತದೆ. ಆದುದರಿಂದ ಚಾರ್ವಾಕಮತದಲ್ಲಿ ಯುಕ್ತಿಯಾಗಲೀ ಪ್ರಮಾಣವಾಗಲೀ ಯಾವುದೂ ಇಲ್ಲದಿರುವುದರಿಂದ ಆದರಕ್ಕೆ ಪಾತ್ರವಾಗಲಾರದು. ಕೇಳುವುದಕ್ಕೆ ಮನೋಹರವಾದುದರಿಂದ ಚಾರ್ವಾಕಶಬ್ದವು ಅನ್ವರ್ಥವಾಗಿದೆ. ಆದುದರಿಂದಲೇ ಇದಕ್ಕೆ ಲೋಕಾಯತವೆಂದು ಇನ್ನೊಂದು ಹೆಸರಿದೆ. ಲೋಕದಲ್ಲಿ ಆಯತವೆಂದರೆ ವಿಸ್ತೀರ್ಣ ಅಥವಾ ಪ್ರಸಿದ್ಧವಾದುದೆಂದರ್ಥ. ಅದನ್ನು ಪ್ರತಿಪಾದಿಸುವ ಶಾಸ್ತ್ರವೂ ಲೋಕಾಯತವಾಗುತ್ತದೆ. ಲೋಕಾಯತ ಶಾಸ್ತ್ರವನ್ನು ಓದುವವನಿಗೆ ಲೌಕಾಯತಿಕನೆಂದು ಹೆಸರು.

ನನು—ಚಕ್ಷುರಾದೀನಾಮೇವ ಜ್ಞಾನಾದಿಕಂ ಪ್ರತಿ ಕರಣತ್ವಂ ಕರ್ತೃತ್ವಂ ಚಾಸ್ತು ವಿರೋಧೇ ಸಾಧಕಾಭಾವಾದತ ಆಹ—ತಥಾತ್ವಮಿತಿ। ತಥಾತ್ವಂ ಚೈತನ್ಯಮಿತ್ಯರ್ಥಃ। ಉಪಘಾತೇ ನಾಶೇ ಸತಿ ಅರ್ಥಾಚ್ಚಕ್ಷುರಾದೀನಾಮೇವ। ಕಥಮಿತಿ। ಕಥಂ ಸ್ಮೃತಿಃ, ಪೂರ್ವಂ ಚಕ್ಷುಷಾ ಸಾಕ್ಷಾತ್ಕೃತಾನಾಂ ಚಕ್ಷುಷೋಽಭಾವೇ ಸ್ಮರಣಂ ನ ಸ್ಯಾತ್, ಅನುಭವಿತುರಭಾವಾತ್। ಅನ್ಯದೃಷ್ಟಸ್ಯಾನ್ಯೇನ ಸ್ಮರಣಾಸಂಭವಾತ್। ಅನುಭವಸ್ಮರಣಯೋಃ ಸಾಮಾನಾಧಿಕರಣ್ಯೇನ ಕಾರ್ಯಕಾರಣಭಾವಾದಿತಿ ಭಾವಃ ॥ ೪೮ ॥

ಚಾರ್ವಾಕರಲ್ಲೇ ಕೆಲವರು ಪುನಃ ಆಶಂಕಿಸುತ್ತಾರೆ. 'ನನು'—ಇತಿ. ಕಾಣಃ ಅಹಂ ಜಾನಾಮಿ 'ಕುರುಡನಾದ ನಾನು ತಿಳಿಯುತ್ತೇನೆ' ಎಂಬ ಜ್ಞಾನದಿಂದ ಇಂದ್ರಿಯಗಳೇ ಆತ್ಮನೆಂದು ತಿಳಿಯುತ್ತದೆ. ನಾನು ಎಂಬುದು ಶರೀರವಾಗದಿರಲಿ; ಆದರೆ ಚಕ್ಷುರಾದಿ ಇಂದ್ರಿಯಗಳೇ ಕರಣವೂ, ಕರ್ತೃವೂ ಆಗಲಿ. ಸಾಧಕವಾದುದು ಕರಣ. (ತಸ್ಯಭಾವಃ, ಕರಣತ್ವಂ) ಕ್ರಿಯಾನುಕೂಲ ಕೃತಿಮತ್ತ್ವಂ ಕರ್ತೃತ್ವಮ್ ॥ ವ್ಯಾಪಾರ

ವಾಗಬೇಕಾದರೆ ಕೃತಿಬೇಕು (ಪ್ರಯತ್ನ) ಜಾನಾತಿ, ಇಚ್ಛತಿ, ಯತತೇ. ಮೊದಲು ಒಂದು ವಸ್ತುವಿನ ಜ್ಞಾನ. ಆಮೇಲೆ ಅದರ ಇಚ್ಛೆ. ಆಮೇಲೆ ಅದನ್ನು ಹೊಂದುವ ಯತ್ನ. ಹೀಗೆ ಕ್ರಮವಿದೆ. ಈ ಎರಡು ಧರ್ಮಗಳೂ ಇಂದ್ರಿಯಕ್ಕೆ ಇರಲಿ. ಇಂದ್ರಿಯಗಳಿಗಿಂತ ಬೇರೆಯಾಗಿ ಆತ್ಮನನ್ನು ಏಕೆ ಅಂಗೀಕರಿಸಬೇಕು ? ಎಂದು ಪೂರ್ವ ಪಕ್ಷಿಯ ಅಭಿಪ್ರಾಯ. ಲೋಕದಲ್ಲಿ ಸಾಧನವೇ ಬೇರೆ, ಕರ್ತೃವೇ ಬೇರೆ. ಕಟ್ಟಿಗೆ ಒಡೆಯಲು ಕರಣ—ಕೊಡಲಿ. ಕರ್ತೃ—ಚೈತ್ರಾದಿ. ವಿರುದ್ಧವಾದ ಈ ಎರಡು ಧರ್ಮಗಳು (ಕರಣತ್ವ, ಕರ್ತೃತ್ವ) ಒಂದು ವಸ್ತುವಿನಲ್ಲಿ ಬರುವುದು ಹೇಗೆ ? ಅಂದರೆ ಅದಕ್ಕೆ ಪೂರ್ವಪಕ್ಷಿಯ ಸಮಾಧಾನ. 'ವಿರೋಧೇ'—ಇತಿ. ಇವು ಭಿನ್ನ ಭಿನ್ನ ಅಧಿಕರಣಗಳಲ್ಲಿಯೇ ಇರಬೇಕೆಂಬುದರಲ್ಲಿ ಯಾವ ಪ್ರಮಾಣವೂ ಇಲ್ಲ. ಯಾವುದಾದರೊಂದು ಪ್ರಮಾಣದಿಂದ ವಿರುದ್ಧವೆಂದು ತಿಳಿಯಬೇಕು. ಪ್ರಮಾಣದಿಂದಲೇ ಈ ಎರಡು ವಿರುದ್ಧಧರ್ಮಗಳು ಒಂದೆಡೆ ಸೇರಿವೆಯೆಂದು ಹೇಳುತ್ತೇನೆ. ಜೈನ ಸಿದ್ಧಾಂತದಲ್ಲಿ ಒಂದೇ ವಸ್ತುವಿನಲ್ಲಿ ಸದಸತ್‌ರೂಪವಿರುದ್ಧಸಮಾವೇಶ ಅಂಗಿಕೃತವಾಗಿದೆ. ಅದರಂತೆ ಬಾಧಕವಿಲ್ಲವೆಂದರೆ ಸಿದ್ಧಾಂತಿಯು ಅದನ್ನು ಖಂಡಿಸುತ್ತಾನೆ. 'ತಥಾತ್ವಂ'—ಇತಿ. ಇಂದ್ರಿಯಗಳಿಗೇ ಚೈತನ್ಯಧರ್ಮವಿರುವುದಾದರೆ, ಇಂದ್ರಿಯಗಳಿಗೇ ಕ್ರಿಯಾನುಕೂಲ ಕೃತಿ (ಯತ್ನ) ಉಳ್ಳವುಗಳಾದರೆ (ಕರ್ತೃಗಳು) ಆಗ ಉಪಘಾತೇ—ಇಂದ್ರಿಯನಾಶವಾದಾಗ, ಕಥಂ ಸ್ಮೃತಿಃ ?—ಸ್ಮೃತಿಯುಂಟಾಗುವುದು ಹೇಗೆ ? ಉಂಟಾಗದಿರಲು ಕಾರಣ ತೋರಿಸುತ್ತಾನೆ. 'ಅನುಭವಿತುರಭಾವಾತ್' ಜ್ಞಾನಾಧಿಕರಣನಾದ ಇಂದ್ರಿಯರೂಪ ಆತ್ಮನು ನಾಶ ಹೊಂದಿರುವನಷ್ಟೆ. ಇಂದ್ರಿಯವಿದ್ದಾಗ ಅನುಭವವಾಗಿತ್ತು. ಆ ಇಂದ್ರಿಯ ನಾಶವಾದ ಮೇಲೆ ಅನುಭವಿಸಿದವನೂ ನಷ್ಟವಾದುದರಿಂದ ಮುಂದೆ ಎಂದೂ ಸ್ಮೃತಿಯುಂಟಾಗಲಾರದು. ಆದರೆ ಕಣ್ಣಿದ್ದಾಗ ಅನುಭವಿಸಿದ ವಿಷಯವನ್ನು ಕಾರಣಾಂತರದಿಂದ ಕಣ್ಣು ನಾಶವಾದಾಗಲೂ ಸ್ಮರಿಸುತ್ತಾರೆ. ಅನುಭವಿಸದ ಪುರುಷನೇ ಸ್ಮರಿಸುವುದರಿಂದ ಇಂದ್ರಿಯಗಳು ಆತ್ಮನೆಂದು ಹೇಳಲು ಸಾಧ್ಯವಿಲ್ಲ.

ಮೊದಲು ನಯನೇಂದ್ರಿಯದಿಂದ ರೂಪಾದ್ಯನುಭವವಾಗಿರುತ್ತದೆ. ಕಾರಣಾಂತರದಿಂದ ನಯನವು ನಷ್ಟವಾಗುತ್ತದೆ. ಆದರೂ ಶ್ರೋತ್ರಾದಿ ಇಂದ್ರಿಯಗಳಿರುವುದರಿಂದ ಅವುಗಳಿಂದ ಕಾಲಾಂತರದಲ್ಲಿ ಸ್ಮೃತಿಯುಂಟಾಗಲು ತೊಂದರೆ ಇಲ್ಲವೆಂದರೆ ಅದಕ್ಕೆ ದೋಷ ಹೇಳುತ್ತಾನೆ. 'ಅನ್ಯದೃಷ್ಟಸ್ಯ'—ಇತಿ. ಒಬ್ಬನು ನೋಡಿದ್ದನ್ನು ಇನ್ನೊಬ್ಬನು ಸ್ಮರಿಸುವುದು ಎಲ್ಲಿಯೂ ಇಲ್ಲ. ಹೀಗೆ ಅಂಗೀಕರಿಸುವುದಾದರೆ ರಾಮನು ನೋಡಿದ್ದು ಕೃಷ್ಣನಿಗೆ ಸ್ಮರಣೆಯುಂಟಾಗಲಿ ಎಂದು ಕೇಳಬಹುದು. ಆದುದರಿಂದ ಅನುಭವ ಮತ್ತು ಸ್ಮರಣೆ ಇವೆರಡಕ್ಕೂ ಸಾಮಾನಾಧಿಕಾರಣ್ಯ ಹೇಳಬೇಕು. ಏಕಾಧಿಕರಣಸಂಬಂಧದಿಂದ ಏಕಾತ್ಮರೂಪಾಧಿಕರಣದಲ್ಲಿ ಸಮವಾಯಸಂಬಂಧಾವಚ್ಛಿನ್ನವೃತ್ತಿತ್ವವುಳ್ಳವುಗಳೂ ಅನುಭವಸ್ಮರಣಗಳು. ಅಂದರೆ ಸಮವಾಯಸಂಬಂಧದಿಂದ ಈ ಎರಡು ಜ್ಞಾನಗಳೂ ಒಂದೆ

ಅಧಿಕರಣದಲ್ಲಿ ಇರುತ್ತವೆ ಎಂದರ್ಥ. ಎಲ್ಲಿ ಅನುಭವವೋ ಅಲ್ಲಿಯೇ ಸ್ಮರಣೆಯೆಂಬ ನಿಯಮವಿದೆ. ಅನುಭವವು ಸಂಸ್ಕಾರ ಮೂಲಕವಾಗಿ ಸ್ಮೃತಿಗೆ ಕಾರಣವಾಗುತ್ತದೆ.

ಇಂದ್ರಿಯವೇ ಆತ್ಮವೆಂದರೆ ಇನ್ನೂ ಅನುಪಪತ್ತಿ ಬರುತ್ತದೆ. ಐದು ಇಂದ್ರಿಯಗಳೂ ಸೇರಿ ಸಮುದಾಯರೂಪದಿಂದ ಒಂದು ಶರೀರದಲ್ಲಿ ಆತ್ಮವೇ ? ಅಥವಾ ಪ್ರತಿಯೊಂದು ಇಂದ್ರಿಯವೂ ಆತ್ಮವಾಗಿ ಒಂದು ಶರೀರದಲ್ಲಿ ಅನೇಕ ಆತ್ಮರೇ ಎಂದು ಕೇಳಬೇಕು. ಇಂದ್ರಿಯಾತ್ಮವಾದಿಯು ಇದಕ್ಕೆ ಏನು ಉತ್ತರ ಕೊಡುತ್ತಾನೆ ? ಮೊದಲನೇ ಪಕ್ಷದಲ್ಲಿ ಪಂಚೇಂದ್ರಿಯಗಳಲ್ಲಿ ಶ್ರೋತ್ರೇಂದ್ರಿಯ ನಷ್ಟವಾದಾಗ ನಯನದಿಂದ ಶಬ್ದ ಸಾಕ್ಷಾತ್ಕಾರವಾಗಲಿ, ಅಥವಾ ಯಾವ ರೂಪಾದಿಪ್ರತ್ಯಕ್ಷವೂ ಉಂಟಾಗದಿರಲಿ. ಏಕೆಂದರೆ ಆತ್ಮನು ನಷ್ಟ ಹೊಂದಿರುತ್ತಾನಷ್ಟೆ. ಒಂದು ಶ್ರೋತ್ರ ನಷ್ಟವಾದಾಗ 'ಅಯಂ ಮೃತಃ' ಎಂಬ ಜ್ಞಾನ ಉಂಟಾಗಲಿ ಎಂಬ ಆಪತ್ತಿ ಬರುತ್ತದೆ. ಇದಕ್ಕೆ ಏನೂ ಉತ್ತರವಿಲ್ಲ. ದ್ವಿತೀಯಪಕ್ಷದಲ್ಲಿ ಹಲವು ದೋಷ ಬರುತ್ತದೆ. ನಾನಾ ಆತ್ಮರು ಒಂದು ಶರೀರದಲ್ಲಿರುವುದರಿಂದ ಅವರಿಗೆ ಸ್ವಾತಂತ್ರ್ಯವಿರುವುದರಿಂದ ಒಬ್ಬೊಬ್ಬರು ಒನ್ನೊಂದು ಕಾರ್ಯ ಮಾಡಲು ಪ್ರವರ್ತಿಸಿದರೆ ಶರೀರವು ಆ ಕಡೆ ಈ ಕಡೆ ಎಳೆಯಲ್ಪಟ್ಟು ನಷ್ಟವಾಗಬೇಕಾಗುತ್ತದೆ. ಅವು ಸ್ವತಂತ್ರವಲ್ಲ, ಅನ್ಯಾಧೀನವಾಗಿ ತಮ್ಮ ವ್ಯಾಪಾರವನ್ನು ಮಾಡುತ್ತವೆ ಎಂದರೆ ಆ ಅನ್ಯನೇ ನಾವು ಅಂಗೀಕರಿಸಿದ ಇಂದ್ರಿಯ ವ್ಯತಿರಿಕ್ತನಾದ ಆತ್ಮನೆಂದು ಸಿದ್ಧವಾಗುತ್ತದೆ. ಆತನೇ ಇಂದ್ರಿಯಗಳಿಗೆ ಚೈತನ್ಯಾಧಾಯಕನಾಗಿ ಕೊಡಲಿಯಲ್ಲಿ ಉದ್ಯಮನ ನಿಪತನ ವ್ಯಾಪಾರವನ್ನುಂಟುಮಾಡುವಂತೆ ತನಗೆ ಅಭಿಮತವಾದ ವಿಷಯದಲ್ಲಿ ಪ್ರೇರೇಪಿಸುತ್ತಾನೆ. 'ಕಾಣಃ ಅಹಂ' ಎಂಬ ಪ್ರತ್ಯಯವೇ ಇಂದ್ರಿಯಾತ್ಮವಾದದಲ್ಲಿ ಪ್ರಮಾಣವೆಂದು ಹಿಂದೆ ಹೇಳಿದೆ. ಅದು ಗೌಣ ವ್ಯವಹಾರವೆಂದು ತಿಳಿಯಬೇಕು. 'ಮಮದೇಹಃ' ಎಂಬಂತೆ 'ಮಮ ಇಂದ್ರಿಯಾಣಿ' ಎಂಬ ಜ್ಞಾನವು ಅದಕ್ಕೆ ಬಾಧಕವಾಗಿದೆ. ನನ್ನ ಇಂದ್ರಿಯವೆಂದರೆ ನಾನು ಎಂಬುವನು ಯಾರು ? ಆತನೇ ಆತ್ಮನೆಂದು ಸಿದ್ಧನಾಗುತ್ತಾನೆ. ಹೀಗೆ ಇಂದ್ರಿಯಾತ್ಮವಾದ ಖಂಡನವನ್ನು ತಿಳಿಯಬೇಕು.

**ಮನೋಽಪಿ ನ ತಥಾ ಜ್ಞಾನಾದ್ಯನಧ್ಯಕ್ಷಂ ತದಾ ಭವೇತ್ ॥**

ನನು—ಚಕ್ಷುರಾದೀನಾಂ ಚೈತನ್ಯಂ ಮಾಸ್ತು, ಮನಸಸ್ತು ನಿತ್ಯಸ್ಯ ಚೈತನ್ಯಂ ಸ್ಯಾದತ ಆಹ—ಮನೋಽಪೀತಿ । ನ ತಥಾ, ನ ಚೇತನಮ್ । ಜ್ಞಾನಾದೀತಿ । ಮನಸೋಽಣುತ್ವಾತ್ ಪ್ರತ್ಯಕ್ಷೇ ಚ ಮಹತ್ತ್ವಸ್ಯ ಹೇತುತ್ವಾನ್ಮನಸಿ ಜ್ಞಾನ ಸುಖಾದಿ ಸತ್ವೇ ತತ್ಪ್ರತ್ಯಕ್ಷಾನುಪಪತ್ತಿರಿತ್ಯರ್ಥಃ । ಯಥಾ ಮನಸೋಽಣುತ್ವಂ ತಥಾ ವಕ್ಷ್ಯತೇ ॥

ಮನಸ್ಸೇ ಆತ್ಮನೆಂಬ ಮತವನ್ನು ಆಶಂಕಿಸಿ ನಿರಾಸ ಮಾಡುತ್ತಾನೆ. 'ನನು'—ಇತಿ. ಇಂದ್ರಿಯಗಳು ಆತ್ಮನೆಂದರೆ ಅವು ನಾಶವಾದಾಗ ಜ್ಞಾನಾದಿಗಳುಂಟಾಗುವುದ

ರಿಂದ ದೋಷ ಬರುತ್ತದೆ. ಮನಸ್ಸು ನಿತ್ಯವೆಂದು ತಾರ್ಕಿಕರೂ ಅಂಗೀಕರಿಸುತ್ತಾರೆ. ಮನಸ್ಸು ಆತ್ಮ; ಅದೇ ಚೈತನ್ಯಕ್ಕೆ ಆಶ್ರಯವೆಂದು ಒಪ್ಪುವುದರಿಂದ ಹಿಂದಿನ ದೋಷ ಗಳಿಗೆ ಅವಕಾಶವಿಲ್ಲ. ಆದರೂ ಮನಸ್ಸೂ ಇಂದ್ರಿಯಗಳಂತೆಯೇ ಆತ್ಮನಾಗುವುದಿಲ್ಲ ವೆಂದು ಸಿದ್ಧಾಂತಿಯು ಸಮಾಧಾನ ತೋರಿಸುತ್ತಾನೆ. 'ನತಥಾ'—ಇತಿ. ಮನಸ್ಸು ಚೇತನವಲ್ಲ. ಅದಕ್ಕೆ ಕಾರಣ ತೋರಿಸುತ್ತಾನೆ. 'ಜ್ಞಾನಾದ್ಯ'—ಜ್ಞಾನಾದಿವಿಶೇಷ ಗುಣಗಳ 'ಜಾನೇ, ಇಚ್ಛಾಮಿ' (ತಿಳಿಯುತ್ತೇನೆ. ಇಚ್ಛಿಸುತ್ತೇನೆ.) ಇತ್ಯಾದಿ ರೂಪವಾದ ಪ್ರತ್ಯಕ್ಷವು ಬಾರದೇ ಹೋಗುತ್ತದೆ. ಏಕೆಂದರೆ ಮನಸ್ಸು ಅಣುವಾದುದರಿಂದ ಪ್ರತ್ಯಕ್ಷಕ್ಕೆ ಕಾರಣವೇ ಇಲ್ಲದೇ ಹೋಗಬೇಕಾಗುತ್ತದೆ.

ಮನಸ್ಸು ಅಣುಪರಿಮಾಣವುಳ್ಳದ್ದು. ಆದುದರಿಂದ ಅದರ ಪ್ರತ್ಯಕ್ಷವೇ ಇಲ್ಲ. ಹೀಗಿರುವಾಗ ಅದನ್ನು ಆಶ್ರಯಿಸಿರುವ ಸುಖಾದಿಗಳ ಪ್ರತ್ಯಕ್ಷ ಆಗುವುದು ಹೇಗೆ ? ಆದರೆ ಸುಖಾದಿಗಳನ್ನು ಪ್ರತಿಯೊಬ್ಬ ಆತ್ಮನೂ ತಿಳಿಯುತ್ತಾನೆ. ಸುಖಾದಿ ಪ್ರತ್ಯಕ್ಷ ಹೊಂದದ ಜೀವಿ ಇಲ್ಲ. ಪ್ರತ್ಯಕ್ಷವಾಗಬೇಕಾದರೆ ಮಹತ್ತ್ವವೂ ಒಂದು ಕಾರಣ. ಅದು ಮನಸ್ಸಿ ನಲ್ಲಿಲ್ಲದಿರುವುದರಿಂದ ಮನಸ್ಸು ಆತ್ಮನಾದರೆ ಅದರಲ್ಲಿರುವ ಸುಖಾದಿಪ್ರತ್ಯಕ್ಷಾನುಭವವು ಆಗದೇ ಹೋಗಬೇಕಾಗುತ್ತದೆ. ಮನಸ್ಸು ಅಣುವೆಂಬುದನ್ನು ಲಘನೇ ಕಾರಿಕೆಯಲ್ಲಿ ವಿವರಿಸುತ್ತಾನೆ. ಹೀಗೆ ಮನಸ್ಸು ಆತ್ಮವಲ್ಲವೆಂದು ತಿಳಿಯಬೇಕು.

ನನ್ವಸ್ತು—ವಿಜ್ಞಾನಮೇವಾತ್ಮಾ, ತಸ್ಯ ಸ್ವತಃ ಪ್ರಕಾಶರೂಪತ್ವಾಚ್ಚೇತನತ್ವಮ್, ಜ್ಞಾನ ಸುಖಾದಿಕಂತು ತಸ್ಯೈವಾಕಾರವಿಶೇಷಃ, ತಸ್ಯಾಪಿ ಭಾವತ್ವಾದೇವಕ್ಷಣಿಕತ್ವಮ್. ಪೂರ್ವಪೂರ್ವವಿಜ್ಞಾನಸ್ಯೋತ್ತರೋತ್ತರವಿಜ್ಞಾನಹೇತುತ್ವಾತ್ ಸುಷುಪ್ತಾವ ಪ್ಯಾಲಯವಿಜ್ಞಾನಧಾರಾ ನಿರಾಬಾಧೈವ, ಮೃಗಮದವಾಸನಾವಾಸಿತವಸನಇವ ಪೂರ್ವಪೂರ್ವವಿಜ್ಞಾನಜನಿತಸಂಸ್ಕಾರಾಣಾಮುತ್ತರೋತ್ತರವಿಜ್ಞಾನೇ ಸಂ ಕ್ರಾಂತತ್ವಾನ್ನಾನುಪಪತ್ತಿಃ ಸ್ಮರಣಾದೇರಿತಿ ಚೇನ್ನ, ತಸ್ಯ ಜಗದ್ವಿಷಯಕತ್ವೇ ಸರ್ವಜ್ಞತ್ವಾಪತ್ತಿಃ। ಯತ್ಕಿಂಚಿದ್ವಿಷಯಕತ್ವೇ ವಿನಿಗಮನಾವಿರಹಃ। ಸುಷು ಪ್ತಾವಪಿ ವಿಷಯಾವಭಾಸಪ್ರಸಂಗಾಚ್ಚ, ಜ್ಞಾನಸ್ಯ ಸವಿಷಯತ್ವಾತ್ ॥

ಕ್ಷಣಿಕವಿಜ್ಞಾನವಾದಿಯಾದ ಯೋಗಾಚಾರಮತವನ್ನು ತೋರಿಸಿ ಖಂಡಿಸುತ್ತಾನೆ. 'ನನು—' ಇತಿ. ವಿಜ್ಞಾನಪದಕ್ಕೆ ಕ್ಷಣಿಕವಿಜ್ಞಾನವೆಂದರ್ಥ. ಇವನ ಮತದಲ್ಲಿ ಎಲ್ಲಾವಸ್ತುಗಳೂ ವಿಜ್ಞಾನರೂಪವಾದರೂ ಈಗ ಆತ್ಮನಿರೂಪಣಪ್ರಕರಣವಾದುದರಿಂದ ಕ್ಷಣಿಕವಿಜ್ಞಾನವೇ ಆತ್ಮನೆಂದು ಹೇಳಿದೆ. ಇವನು ಪ್ರಮೇಯತ್ವಕ್ಕೆ ಅಥವಾ ಸತ್ವಕ್ಕೆ ವಿಜ್ಞಾನತ್ವವು ವ್ಯಾಪಕವೆಂದು ಅಂಗೀಕರಿಸಿರುತ್ತಾನೆ. ತಾರ್ಕಿಕಮತದಲ್ಲಿ ವ್ಯಾಪಕವಲ್ಲ. 'ದ್ವಿತೀಯಕ್ಷಣವೃತ್ತಿಧ್ವಂಸಪ್ರತಿಯೋಗಿತ್ವಂ ಕ್ಷಣಿಕತ್ವಮ್' (ಎರಡನೇಕ್ಷಣದಲ್ಲಿರುವ

ಧ್ವಂಸಕ್ಕೆ ಪ್ರತಿಯೋಗಿಯಾವುದೋ ಅದೇ ಕ್ಷಣಿಕ ) ಎಲ್ಲಾ ಪದಾರ್ಥಗಳೂ ಒಂದು ಕ್ಷಣ ಮಾತ್ರ ಇರುತ್ತವೆಯೆಂದು ಅವನ ಸಿದ್ಧಾಂತ.

ಈ ವಿಜ್ಞಾನವು ಪ್ರವೃತ್ತಿವಿಜ್ಞಾನ, ಆಲಯವಿಜ್ಞಾನವೆಂದು ಎರಡು ವಿಧ. 'ಅಯಂಘಟಃ' ( ಇದು ಘಟ, ಇದು ಪಟ ) ಎಂಬ ಜ್ಞಾನಕ್ಕೆ ಪ್ರವೃತ್ತಿವಿಜ್ಞಾನವೆಂದು ಹೆಸರು. 'ಅಹಮಹಂ' 'ಅಹಂಜಾನಾಮಿ' ಇತ್ಯಾದಿ ( ನಾನು ನಾನು, ನಾನು ತಿಳಿಯುತ್ತೇನೆ. ) ವಿಜ್ಞಾನಕ್ಕೆ ಆಲಯವಿಜ್ಞಾನವೆಂದು ಹೆಸರು. ಇದೇ ಆತ್ಮವೆಂದು ಅವನ ಮತ. ವಿಜ್ಞಾನ, ಬುದ್ಧಿ ಎಂದರೆ ಎಲ್ಲವೂ ಒಂದೇ. ಇದು ಜಡವಾದುದರಿಂದ ಅತ್ಮನಾಗುವುದು ಹೇಗೆ ? ಎಂಬ ಶಂಕೆಗೆ ಸಮಾಧಾನ ತೋರಿಸುತ್ತಾನೆ. 'ತಸ್ಯ—' ಇತಿ. ಇದು ಸ್ವತಃ ಪ್ರಕಾಶವಾದುದರಿಂದ ಚೇತನವಾಗಲು ತೊಂದರೆ ಇಲ್ಲ. ಸ್ವಪರವ್ಯವಹಾರದಲ್ಲಿ ಸ್ವಭಿನ್ನಪ್ರಕಾಶವನ್ನು ಅಪೇಕ್ಷಿಸದಿರುವುದೇ ಸ್ವತಃ ಪ್ರಕಾಶ. 'ಜ್ಞಾನಸುಖಾ—' ಇತಿ. ತುಶಬ್ದದಿಂದ ಪಕ್ಷಾಂತರವ್ಯಾವೃತ್ತಿಯು ಸೂಚಿತವಾಗುತ್ತದೆ. 'ಅಹಂ ಜಾನಾಮಿ' 'ಅಹಂ ಸುಖೀ' ಇತ್ಯಾದ್ಯಾಕಾರವಾದ ಜ್ಞಾನಸುಖಾದಿಗಳು ವಿಜ್ಞಾನದ ಆಕಾರವಿಶೇಷಗಳೇ ವಿನಾ ಬೇರೆಯಲ್ಲ. ವಿಜ್ಞಾನವೇ ಸುಖಾದಿರೂಪದಿಂದ ತೋರುತ್ತದೆಂದರ್ಥ. 'ಯತ್ ಸತ್ ತತ್ಕ್ಷಣಿಕಮ್' ಎಂದು ವ್ಯಾಪ್ತಿ. (ಯಾವುದು ಸತ್ತೋ—ಭಾವವೋ ಅದು ಕ್ಷಣಿಕ. ) ದೀಪಶಿಖಾ (ಜ್ವಾಲೆ) ಭಾವವಾದುದರಿಂದ ಕ್ಷಣಿಕವೆಂದು ಲೋಕಪ್ರಸಿದ್ಧವಾಗಿದೆ. ಕ್ಷಣಿಕವೆಂದರೆ ಪ್ರತಿಕ್ಷಣವೂ ಪರಿಣಾಮಹೊಂದುವುದೆಂದರ್ಥ. ದೀಪಜ್ವಾಲೆ ಹಾಗಿದೆ. ಹಾಗೆ ಸರ್ವ ವಸ್ತುವೂ ಭಾವವಾದುದರಿಂದ ಕ್ಷಣಿಕವಾಗುವುದರಿಂದ ವಿಜ್ಞಾನವೂ ಭಾವವಾದುದರಿಂದ ಕ್ಷಣಿಕವಾಗುತ್ತದೆ.

ಕ್ಷಣಿಕವಿಜ್ಞಾನವೇ ಆತ್ಮವಾದರೆ ಆಗ ಸುಷುಪ್ತಿಯಾಗಲಾರದು; ಏಕೆಂದರೆ ಪೂರ್ವ ವಿಜ್ಞಾನವು ಕ್ಷಣಿಕವಾದುದರಿಂದ ನಷ್ಟವಾಗಿರುತ್ತದೆ; ಇತರ ಜ್ಞಾನವು ಇರುವುದಿಲ್ಲ—ಅಂದರೆ ಇದಕ್ಕೆ ಸಮಾಧಾನ ಹೇಳುತ್ತಾನೆ. 'ಪೂರ್ವ—' ಇತಿ. 'ಪೂರ್ವಪೂರ್ವ ವಿಜ್ಞಾನನಿಷ್ಠಾ ಯಾ ಜನಕತಾ ತಾದೃಶ ಜನಕತಾನಿರೂಪಿತಾ ಯಾ ಜನ್ಯತಾ ಉತ್ತರೋತ್ತರ ವಿಜ್ಞಾನನಿಷ್ಠಾ, ತತ್ವಾತ್.' ಪೂರ್ವಪೂರ್ವವಿಜ್ಞಾನದಿಂದ ಉತ್ತರೋತ್ತರ ವಿಜ್ಞಾನ ಹುಟ್ಟುತ್ತಾ ಇರುವುದರಿಂದ ಆಲಯವಿಜ್ಞಾನ ಸಂತತಿಯು ಸುಷುಪ್ತಿಯಲ್ಲಿಯೂ ಇರುತ್ತದೆ. ಗಾಢ ನಿದ್ರಾವಸ್ಥೆಯಲ್ಲಿ ಮನಸ್ಸು ಪುರೀತನ್ನಾಡಿಯನ್ನು ಪ್ರವೇಶಿಸಿರುತ್ತದೆ. ಸುಷುಪ್ತಿಯಲ್ಲಿ ವಿಜ್ಞಾನೋತ್ಪಾದಕ ಸಾಮಗ್ರಿ ಯಾವುದೂ ಇರುವುದಿಲ್ಲ. ಆದರೂ ಪೂರ್ವಪೂರ್ವವಿಜ್ಞಾನವು ನಷ್ಟವಾಗಿ ಉತ್ತರೋತ್ತರವಿಜ್ಞಾನ ಹುಟ್ಟುತ್ತಿರುತ್ತದೆ. 'ಅಹಮಹಂ' ಎಂಬ ಆಲಯವಿಜ್ಞಾನಸಂತತಿಯು ಅನುವೃತ್ತವಾಗುತ್ತಿರುವುದರಿಂದ ಸುಷುಪ್ತಿಯಲ್ಲಿ ವಿಜ್ಞಾನರೂಪ ಆತ್ಮನಿರುವುದಿಲ್ಲವೆಂಬ ಶಂಕೆಗೆ ಅವಕಾಶವಿಲ್ಲ. ಪ್ರವೃತ್ತಿವಿಜ್ಞಾನ ಮಾತ್ರ ಆಗ ಹುಟ್ಟುವುದಿಲ್ಲ. ಆಲಯವಿಜ್ಞಾನ ಇದ್ದೇ ಇರುತ್ತದೆ.

ಆದರೂ ವಿಜ್ಞಾನಾತ್ಮವಾದಿಮತದಲ್ಲಿ ಅನುಪಪತ್ತಿ ಇದ್ದೇ ಇದೆ. ಈ ವಿಜ್ಞಾನವು ಕ್ಷಣಿಕವಾದುದರಿಂದ ಆ ವಿಜ್ಞಾನವನ್ನಾಶ್ರಯಿಸಿರುವ ವಿಜ್ಞಾನರೂಪಗಳೇ ಆದ ಸಂಸ್ಕಾರ

ಗಳೂ ಕ್ಷಣಿಕಗಳಾದುದರಿಂದ ನಾಶಹೊಂದಿರುತ್ತವೆ. ಸಂಸ್ಕಾರವಿಲ್ಲದೇ ಸ್ಮೃತಿಯುಂಟಾಗವುದು ಹೇಗೆ ? ಆದುದರಿಂದ ಯಾವ ಸ್ಮೃತಿಯೂ ಆಗಲಾರದು ಎಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಮೃಗಮದವಾಸನಾ—' ಇತಿ. ಒಂದು ವಸ್ತ್ರದ ಮಡಿಕೆಯಲ್ಲಿ ಕಸ್ತೂರಿ ಇಟ್ಟರೂ ಅದರ ಪರಿಮಳವು ವಸ್ತ್ರದ ಪ್ರತಿಯೊಂದುಪದರಿನಲ್ಲಿಯೂ ಸಂಕ್ರಾಂತವಾಗುತ್ತದೆ. ಅದರಂತೆ ಪೂರ್ವಪೂರ್ವವಿಜ್ಞಾನದಿಂದ ಹುಟ್ಟಿದ ಸಂಸ್ಕಾರಗಳು ಮುಂದೆ ಅದರಿಂದ ಉತ್ಪನ್ನವಾಗುವ ವಿಜ್ಞಾನಗಳಲ್ಲಿ ಸಂಕ್ರಾಂತವಾಗುತ್ತವೆ. ಸಂಸ್ಕಾರದೊಡನೆಯೇ ವಿಜ್ಞಾನ ಹುಟ್ಟುವುದರಿಂದ ಸ್ಮೃತಿಯುಂಟಾಗಲು ಯಾವ ತೊಂದರೆಯೂ ಇಲ್ಲ ಎಂದು ಪೂರ್ವಪಕ್ಷಿಯ ಮತ.

ಸಿದ್ಧಾಂತಿಯು ಇದಕ್ಕೆ ಸಮಾಧಾನ ಹೇಳುತ್ತಾನೆ. 'ನ'– ಇತಿ. ನೀನು ಕ್ಷಣಿಕ ವಿಜ್ಞಾನವೇ ಆತ್ಮನೆಂದು ಅದರ ಮೇಲೆ ಸಂಭವಿಸಬಹುದಾದ ಅನುಪಪತ್ತಿಗಳೆಲ್ಲವನ್ನೂ ಯುಕ್ತಿಯಿಂದ ಪರಿಹರಿಸಿದುದು ಸಮಂಜಸವಾಗಿದೆ. ಆದರೆ ಇಲ್ಲಿ ವಿಕಲ್ಪದ್ವಯವನ್ನು ಕಲ್ಪಿಸುತ್ತೇವೆ 'ಯತ್ ಜ್ಞಾನಂ ತತ್ ಸವಿಷಯಮ್' ಎಂದು ವ್ಯಾಪ್ತಿ. ಜ್ಞಾನವೆಂದಮೇಲೆ ಅದಕ್ಕೆ ವಿಷಯ ಇರಲೇಬೇಕು. ನಿನ್ನ ಕ್ಷಣಿಕವಿಜ್ಞಾನಕ್ಕೆ ಸರ್ವಪ್ರಪಂಚವೂ ವಿಷಯವೇ ? ಅಥವಾ ಯಾವುದೋ ಒಂದು ಪದಾರ್ಥವಿಷಯವೇ ? ಜಗತ್ತೇ ವಿಷಯವೆಂದರೆ ಆತ್ಮನು ಸರ್ವಜ್ಞನಾದುದರಿಂದ ಸರ್ವಜನರೂ ಸರ್ವವಿಷಯವನ್ನೂ ತಿಳಿಯಬೇಕಾಗುತ್ತದೆ. ಆದರೆ ನಾವು (ಜೀವಾತ್ಮರು) ಸರ್ವವಿಷಯ ತಿಳಿದವರಲ್ಲ. ಪ್ರಪಂಚದ ಅಲ್ಪ ವಿಷಯ ತಿಳಿದಿರುತ್ತೇವೆ. ಆದುದರಿಂದ ಮೊದಲನೇ ಪಕ್ಷ ಸಮಂಜಸವಲ್ಲ. ಯಾವುದೋ ಒಂದು ವಿಷಯವೆಂದರೆ ಆಗ ವಿನಿಗಮಕ ಯಾವುದು ? ಒಬ್ಬನು ಘಟವೇವಿಷಯವೆಂದರೆ ಇನ್ನೊಬ್ಬನು ಪಟವಿಷಯವೆನ್ನಬಹುದು. ಇದೇ ಪದಾರ್ಥವು ವಿಷಯವೆಂಬುದರಲ್ಲಿ ಯುಕ್ತಿ ಏನಿದೆ. ಮತ್ತು ಸುಷುಪ್ತಿಯಲ್ಲಿಯೂ ಜ್ಞಾನವಿರುವುದರಿಂದ ಜ್ಞಾನಸವಿಷಯಕವಾದುದರಿಂದ ಅಲ್ಲಿಯೂ ಯಾವುದಾದರೂ ಒಂದು ವಿಷಯ ತೋರಬೇಕಾಗುತ್ತದೆ. ಆಲಯ ವಿಜ್ಞಾನವು ಸುಷುಪ್ತಿಯಲ್ಲಿರುತ್ತದೆ ಎಂದು ನೀನು ಅಂಗೀಕರಿಸಿರುವಿ. ಅದು ಜ್ಞಾನವಾದುದರಿಂದ ಸುಷುಪ್ತಿಯಲ್ಲಿಯೂ ವಿಷಯಾವಭಾಸವಾಗುತ್ತದೆ. ಆದರೆ ಸುಷುಪ್ತಿಯಲ್ಲಿ ಯಾವ ವಿಷಯಸ್ಫುರಣೆಯೂ ಇರುವುದಿಲ್ಲವೆಂಬುದು ಸಕಲಾನುಭವ ಪ್ರಮಾಣದಿಂದ ಸಿದ್ಧವಾಗಿದೆ. ಆದುದರಿಂದ ಎರಡನೆಯ ಪಕ್ಷವೂ ಯುಕ್ತವಲ್ಲ.

ತದಾನೀಂ ನಿರಾಕಾರಾ ಚಿತ್ಸಂತತಿರನುವರ್ತತ ಇತಿ ಚೇನ್ನ, ತಸ್ಯಾಃ ಸ್ವಪ್ರಕಾಶತ್ವೇ ಪ್ರಮಾಣಾಭಾವಾತ್ । ಅನ್ಯಥಾ ಘಟಾದೀನಾಮಪಿ ಜ್ಞಾನತ್ವಾಪತ್ತಿಃ ನ ಚೇಷ್ಟಾಪತ್ತಿರ್ವಿಜ್ಞಾನವ್ಯತಿರಿಕ್ತವಸ್ತುನೋಽಭಾವಾದಿತಿ ವಾಚ್ಯಮ್, ಘಟಾದೇರನುಭೂಯಮಾನಸ್ಯಾಪಲಪಿತುಮಶಕ್ಯತ್ವಾತ್ । ಆಕಾರವಿಶೇಷ ಏವಾಽಯಂ ವಿಜ್ಞಾನಸ್ಯೇತಿ ಚೇತ್, ಕಿಮಯಮಾಕಾರೋಽತಿರಿಚ್ಯತೇ ವಿಜ್ಞಾನಾತ್ತರ್ಹಿ

ಸಮಾಯಾತಂ ವಿಜ್ಞಾನವ್ಯತಿರಿಕ್ತೇನ। ನಾತಿರಿಚ್ಯತೇ ಚೇತ್ತರ್ಹಿ ಸಮೂಹಾಲಂಬನೇ ನೀಲಾಕಾರೋಽಪಿ ಪೀತಾಕಾರಃ ಸ್ಯಾತ್, ಸ್ವರೂಪತೋ ವಿಜ್ಞಾನಸ್ಯಾಽವಿಶೇಷಾತ್ ||

ಬೌದ್ಧನು ಆಕ್ಷೇಪಕ್ಕೆ ಸಮಾಧಾನ ಹೇಳುತ್ತಾನೆ. 'ತದಾನೀಂ'—ಇತಿ. ಸುಷುಪ್ತಿಯಲ್ಲಿ ನಿರ್ವಿಷಯವಾದ ವಿಜ್ಞಾನಧಾರೆ ಅನುಸ್ಯೂತವಾಗುತ್ತದೆ. ಆದುದರಿಂದ ವಿಷಯಾವಭಾಸವಾಗಲಿ ಎಂದು ಆಕ್ಷೇಪಿಸುವುದು ಸರಿಯಲ್ಲ, ಅಂದರೆ ಇದು ಯುಕ್ತವಲ್ಲ. ತಸ್ಯಾಃ—ನಿರ್ವಿಷಯವಾದ ಚಿತ್ಸಂತತಿಯು, ಸ್ವಪ್ರಕಾಶತ್ವೇ—ಜ್ಞಾನಸ್ವರೂಪವೆಂಬುದರಲ್ಲಿ ಪ್ರಮಾಣವಿಲ್ಲ. ಜ್ಞಾನತ್ವ ಇದ್ದಲ್ಲಿ ವಿಷಯತಾ ಇದ್ದೇ ಇರುತ್ತದೆ. ನಿರ್ವಿಷಯವಾದರೆ ಅದು ಜ್ಞಾನವೇ ಆಗುವುದಿಲ್ಲ. ನಿರ್ವಿಷಯವಾದ ಚಿತ್ಸಂತತಿಯು ಸುಷುಪ್ತಿಯಲ್ಲಿ ಅನುವೃತ್ತವಾಗುತ್ತದೆಯೆಂಬುದರಲ್ಲಿ ಪ್ರಮಾಣವಿಲ್ಲ. ಪ್ರಮಾಣವಿಲ್ಲದೆ ಪ್ರಮೇಯವು ಸಿದ್ಧಿಸುವುದಿಲ್ಲ. ಪ್ರಮಾಣವಿಲ್ಲದೆ ವಸ್ತುಸಿದ್ಧವಾಗುತ್ತದೆ ಎಂದು ಅಂಗೀಕರಿಸುವುದಾದರೆ ಗಗನಕುಸುಮವೂ ಸಿದ್ಧವಾಗಲಿ. ವಿಷಯವಿಲ್ಲದಿರುವುದೂ ಜ್ಞಾನವಾಗುವುದಾದರೆ ಘಟಾದಿವಿಷಯಗಳೂ ಜ್ಞಾನವಾಗಲಿ. ಜ್ಞಾನಕ್ಕೆ ವಿಷಯವಾಗುವುದು ಬೇಡ. ಅವೂ ಜ್ಞಾನ ಸ್ವರೂಪವೇ ಆಗಲಿ. ಜಾಗ್ರದವಸ್ಥೆಯಲ್ಲಿ ಘಟಾದಿಗಳು ಬೇರೆ ಇವೆಯೆಂದು ಸ್ವೀಕರಿಸುವುದು ಬೇಡ. ಎಂದು ಬೌದ್ಧಮತವನ್ನು ಆಕ್ಷೇಪಿಸಿ ಸಮಾಧಾನ ಹೇಳುತ್ತಾನೆ. 'ನಚ'—ಇತಿ. ವಿಜ್ಞಾನವಾದಿಯಾದ ನನಗೆ ಅದಕ್ಕಿಂತ ಅತಿರಿಕ್ತವಾಗಿ ಘಟಾದಿಸತ್ತೆಯೂ ಅಭಿಮತವಲ್ಲ. ಪಟಾದಿ ಪದಾರ್ಥಗಳು ಪರಮಾರ್ಥ ಸತ್ತಾಗುವುದಿಲ್ಲ. ತೋರಿಕೆಗೆ ಮಾತ್ರ ಇರುವವುಗಳಾದುದರಿಂದ ಅವೂ ವಿಜ್ಞಾನಸ್ವರೂಪಗಳೇ ಆಗುತ್ತವೆ. ಆಕ್ಷೇಪದಿಂದ ನನ್ನ ಅಭೀಷ್ಟವನ್ನೇ ಹೇಳಿದಂತಾಯಿತು. ವಿಜ್ಞಾನಕ್ಕಿಂತ ವ್ಯತಿರಿಕ್ತವಾದ ವಸ್ತುವೇ ನನ್ನ ಮತದಲ್ಲಿ ಇಲ್ಲ. ಹೀಗಿರುವಾಗ 'ಘಟಾದಿಗಳೂ ವಿಜ್ಞಾನವಾಗಲಿ. ಜಾಗೃದವಸ್ಥೆಯಲ್ಲಿ ಅವು ಬೇರೆ ವಿಷಯರೂಪವಾಗವೇ ಇರಲಿ' ಎಂದು ಆಕ್ಷೇಪಿಸಿದರೆ ಅದು ನನಗೆ ಅನುಕೂಲವೇ ಆಗುತ್ತದೆ ಎಂದು ಬೌದ್ಧನಮತ.

ಆದರೆ ಇದು ಸಕಲಾನುಭವವಿರುದ್ಧವಾದ ವಾದ. 'ಅಯಂ ಘಟಃ,' 'ಅಯಂ ಪಟಃ' ಎಂದು ವಿಷಯಸ್ವರೂಪದಿಂದ ಘಟಾದಿಪದಾರ್ಥಗಳ ಸಕಲಾನುಭವವು ಗೋಚರವಾಗಿದೆ. ವಿಜ್ಞಾನಕ್ಕಿಂತ ಇವುಗಳಿಗೆ ಬೇರೆ ಸ್ವರೂಪವಿಲ್ಲವೆಂದರೆ ಘಟಾದಿಗಳಲ್ಲಿ 'ಇದಂ ವಿಜ್ಞಾನಮ್' ಎಂದೇ ಅನುಭವ ಬರಬೇಕು. ಆದರೆ ಎಲ್ಲರೂ ಇದು ಘಟವೆನ್ನುತ್ತಾರೆ, ವಿಜ್ಞಾನವೆಂದು ವ್ಯವಹರಿಸುವುದಿಲ್ಲ. ಆದುದರಿಂದ ವಿಜ್ಞಾನಕ್ಕಿಂತ ಬೇರೆಯಾಗಿ ಘಟಾದಿವಿಷಯಗಳಿರುತ್ತವೆ. ವಿಜ್ಞಾನಕ್ಕೆ ಅವು ವಿಷಯಗಳು. ಇದನ್ನು ಮರೆಮಾಚಲು ಯಾರಿಂದಲೂ ಸಾಧ್ಯವಿಲ್ಲ.

ಪುನಃ ಬೌದ್ಧನು ತನ್ನ ಅಭಿಪ್ರಾಯವನ್ನು ವಿವರಿಸುತ್ತಾನೆ. 'ಆಕಾರವಿಶೇಷಃ'—ಇತಿ. ಪಟವು ತಂತುಗಳ ಸ್ವರೂಪವಿಶೇಷ. ತಂತು ಸತ್ತೆಗೆ ಅತಿರಿಕ್ತವಾಗಿ ಪಟ

ಸತ್ತೆ ಇಲ್ಲ. ಆದರಂತೆ ಘಟಾದಿಪದಾರ್ಥಗಳು ಕ್ಷಣಿಕವಿಜ್ಞಾನದ ಒಂದು ಸ್ವರೂಪವಲ್ಲದೆ ಬೇರೆ ಇಲ್ಲ. ಆದುದರಿಂದ ದೋಷವಿಲ್ಲವೆಂದರೆ ಸಿದ್ಧಾಂತಿಯು ದೂಷಿಸುತ್ತಾನೆ. 'ಕಿಮಯಂ' — ಇತಿ. ಈ ಘಟಾದ್ಯಾಕಾರ ವಿಶೇಷವು ವಿಜ್ಞಾನಕ್ಕಿಂತ ಬೇರೆಯೇ ? ಅಥವಾ ಅಭಿನ್ನವೇ. (ಒಂದೇ) ಬೇರೆಯೆನ್ನುವುದಾದರೆ ಪ್ರತಿಜ್ಞಾಹಾನಿಯುಂಟಾಗುತ್ತದೆ. ಎಲ್ಲವೂ ವಿಜ್ಞಾನಸ್ವರೂಪವೆಂದು ಬೌದ್ಧನಮತವಷ್ಟೆ. ಈಗ ವಿಜ್ಞಾನಕ್ಕಿಂತ ಬೇರೆಯಾದದ್ದೆಂದು ಒಪ್ಪಿದರೆ ವಿರೋಧ ಬರುತ್ತದೆ. ಅಭಿನ್ನವೆಂದರೆ ಸಮೂಹಾಲಂಬನವಿಜ್ಞಾನದಲ್ಲಿ ನೀಲವೂ ಪೀತವಾಗಬೇಕಾಗುತ್ತದೆ. ನಾನಾಧರ್ಮ್ಯವಗಾಹಿಯಾದ ಒಂದು ಜ್ಞಾನಕ್ಕೆ ಸಮೂಹಾಲಂಬನಜ್ಞಾನವೆಂದು ಹೆಸರು. 'ನಾನಾವಿಶೇಷ್ಯತಾನಿರೂಪಿತ ನಾನಾಪ್ರಕಾರತಾಶಾಲಿಜ್ಞಾನತ್ವಂ' ಎಂದು ಪರಿಷ್ಕೃತಲಕ್ಷಣ. ಸಂಶಯದಲ್ಲಿ ನಾನಾಪ್ರಕಾರತಾ ಇದ್ದರೂ ಏಕವಿಶೇಷ್ಯತಾ ಇರುತ್ತದೆ. (ನಾನಾಪ್ರಕಾರತಾ ನಿರೂಪಿತ ಏಕ ವಿಶೇಷ್ಯತಾಶಾಲಿತ್ವಂ) 'ಇಮೇ ನೀಲಪೀತೆ ವಸ್ತ್ರೇ' ಎಂಬ ಜ್ಞಾನದಲ್ಲಿ ನೀಲಪೀತಧರ್ಮವಿಶಿಷ್ಟ ನೀಲಪೀತಾತ್ಮಕ ಅನೇಕ ಧರ್ಮಿವಿಷಯ ತೋರುವುದರಿಂದ ಸಮೂಹಾಲಂಬನವಾಗುತ್ತದೆ. ವಿಜ್ಞಾನಕ್ಕಿಂತ ವಿಷಯ ಬೇರೆಯಾದುದಲ್ಲವೆಂದರೆ ಆಗ ಯಾವ ವಿಜ್ಞಾನ ನೀಲವಿಷಯಕವಾಗಿದೆಯೋ, ಅದೇ ವಿಜ್ಞಾನವು ಪೀತವನ್ನೂ ವಿಷಯೀಕರಿಸುತ್ತದೆ. 'ತದಭಿನ್ನಾಭಿನ್ನಸ್ಯ ತದಭಿನ್ನತ್ವನಮ್' ಎಂದು ನಿಯಮ. ಪ್ರಕೃತ ನೀಲಾಕಾರ ಪೀತಾಕಾರಗಳು ಸಮೂಹಾಲಂಬನವಿಜ್ಞಾನಾಭಿನ್ನವಾಗಿವೆ. ಆಗ ನೀಲಾಕಾರಾಭಿನ್ನವಾದದ್ದು ವಿಜ್ಞಾನ. ವಿಜ್ಞಾನದಿಂದ ಅಭಿನ್ನವಾದದ್ದು ಪೀತಾಕಾರವಾಗುವುದರಿಂದ ಇದು ನೀಲಾಕಾರವಾಗಿಯೂ ತೋರಬೇಕಾಗುತ್ತದೆ. ನೀಲರೂಪದಲ್ಲಿ ಪೀತಜ್ಞಾನ ಬರಲಿ. 'ಇಮೇನೀಲಪೀತೇ' ಎಂಬಲ್ಲಿ 'ಇಮೇಪೀತೇ' ಅಥವಾ 'ಇಮೇನೀಲೇ' ಎಂಬ ಜ್ಞಾನವೇ ಬರಬೇಕಾದೀತು. ಇದಕ್ಕೆ ಕಾರಣತೋರಿಸುತ್ತಾನೆ. 'ಸ್ವರೂಪತಃ'— ಇತಿ. ಇವೆರಡೂ ವಿಜ್ಞಾನಸ್ವರೂಪಕ್ಕಿಂತ ಬೇರೆಯಾದುದಲ್ಲ. ಹೀಗೆ ಎಂದೂ ಲೋಕಾನುಭವವಿಲ್ಲವಾದುದರಿಂದ ವಿಜ್ಞಾನಾತ್ಮವಾದ ಸಮಂಜಸವಾಗುವುದಿಲ್ಲ.

ಅಪೋಹರೂಪೋ ನೀಲತ್ವಾದಿರ್ವಿಜ್ಞಾನಧರ್ಮ ಇತಿ ಚೇನ್ನ, ನೀಲತ್ವಾದೀನಾಂ ವಿರುದ್ಧಾನಾ ಮೇಕಸ್ಮಿನ್ನಸಮಾವೇಶಾತ್ । ಇತರಥಾ ವಿರೋಧಾವಧಾರಣಸ್ಯೈವ ದುರುಪಪಾದಾತ್ವಾತ್ । ನ ಚ ವಾಸನಾಸಂಕ್ರಮಃ ಸಂಭವತಿ, ಮಾತೃಪುತ್ರಯೋರಪಿ ವಾಸನಾಸಂಕ್ರಮ ಪ್ರಸಂಗಾತ್ । ನ ಚೋಪಾದಾನೋಪಾದೇಯಭಾವೋನಿಯಾಮಕ ಇತಿ ವಾಚ್ಯಮ್, ತದುತ್ಪಾದಕಾಭಾವಾತ್ । ಚಿತಾಮೇವೋತ್ಪಾದಕತ್ವೇ ತದಾನಂತ್ಯಪ್ರಸಂಗಃ ॥

ಬೌದ್ಧನ ಆಶಂಕೆ ತೋರಿಸುತ್ತಾನೆ. 'ಅಪೋಹ—' ಇತಿ. ನೀಲಾಕಾರಪೀತಾಕಾರವೆರಡೂ ಒಂದೇ. ಅವುಗಳ ಭೇದಪ್ರತೀತಿಯೂ ಪಾರಮಾರ್ಥಿಕವಲ್ಲ. ಅತದ್ವ್ಯಾ

ವ್ಯಕ್ತಿರೂಪದಿಂದ ಒಂದಾದರೂ ವಿಜ್ಞಾನಭಿನ್ನವಾಗಿ ನೀಲಪೀತಗಳು ಬೇರೆಯಾಗಿ ತೋರುತ್ತವೆ. 'ಘಟಃ' ಎಂದು ಕೇಳಿದೊಡನೆಯೇ ಎಲ್ಲಾಘಟಗಳಜ್ಞಾನವುಂಟಾಗುತ್ತದೆ. ಹಾಗೆಯೇ ಘಟಭಿನ್ನಗಳಾದ ಪಟಾದಿಗಳಿಂದ ವ್ಯಾವೃತ್ತಿಯೂ ತೋರುತ್ತದೆ. ಅತದ್ವ್ಯಾವೃತ್ತಿಗೆ ಅಪೋಹವೆಂದು ಹೆಸರು. ಅಘಟವ್ಯವಚ್ಛೇದರೂಪವೇ ಅಪೋಹರೂಪವಾಗುತ್ತದೆ. ಘಟಾದಿಗಳು ಕ್ಷಣಿಕವಾದುದರಿಂದ ಅವುಗಳಸ್ವರೂಪ ಹೇಳಲು ಸಾಧ್ಯವಿಲ್ಲ. ಆದುದರಿಂದ ಅಪೋಹರೂಪವಾಗಿ ತೋರುತ್ತವೆ ಎನ್ನಬೇಕು. ಘಟವೆಂದರೇನು ? ಅಂದರೆ ಅಘಟವ್ಯಾವೃತ್ತವಾದದ್ದು ಎಂದರ್ಥ. ಘಟವಲ್ಲದಿರುವ ಪಟಾದಿಗಳಿಂದ ಬೇರೆಯಾದದ್ದು. ಘಟಕ್ಕಿಂತಬೇರೆಯಾದದ್ದು. ಪಟಾದಿಸಕಲಪ್ರಪಂಚ ಆದಕ್ಕಿಂತ ಬೇರೆಯಾದದ್ದೆಂದರೆ ಘಟವಲ್ಲದೆ ಬೇರೆಯಾವುದೂ ಆಗುವುದಿಲ್ಲ. ಈ ಅಪೋಹವೂ ವಿಜ್ಞಾನದ ಒಂದು ಧರ್ಮವಿಶೇಷವೇ. ಪ್ರಕೃತಅನೀಲವ್ಯಾವೃತ್ತಿರೂಪವಾದ ಅಪೋಹರೂಪವು ( ನೀಲಾದಿಗಳೇ ) ಕ್ಷಣಿಕವಿಜ್ಞಾನದ ಧರ್ಮವಾಗುತ್ತದೆ. ನೀಲಾಕಾರವೆಂದರೆ ಅನೀಲವ್ಯಾವೃತ್ತವಾದದ್ದು. ಪೀತಾಕಾರವೆಂದರೆ ಅಪೀತವ್ಯಾವೃತ್ತರೂಪವಾದದ್ದು. ಇವುಗಳು ಅಭಿನ್ನಗಳಲ್ಲ. ಅಪೋಹರೂಪದಿಂದ ಇವೆರಡೂ ಭಿನ್ನವಾಗಿವೆ. ಇದು ಪಾರಮಾರ್ಥಿಕವಲ್ಲ. ಇದು ಸಾಂವೃತಿಕವೆಂದು ಬೌದ್ಧನ ಮತ. ಭೇದಕಲ್ಪನೆಗೆ ಕಲ್ಪಿತವಾದದ್ದೆಂದರ್ಥ.

ಸಿದ್ಧಾಂತಿಯು ಇದನ್ನು ನಿರಾಕರಿಸುತ್ತಾನೆ. 'ನ—' ಇತಿ. ವಿಜ್ಞಾನರೂಪವಾದ ಒಂದು ಧರ್ಮಿಯಲ್ಲಿ ವಿರುದ್ಧವಾದ ನೀಲತ್ವಾದಿಧರ್ಮಗಳ ಸಮಾವೇಶವಿರುವುದಿಲ್ಲ. ಅಸಮಾವೇಶವೆಂದರೆ ಸಾಮಾನಾಧಿಕರಣ್ಯಾಭಾವ ಎಂದರ್ಥ. ವಿರುದ್ಧಧರ್ಮಗಳಿಗೆ ಅಧಿಕರಣವಾಗುವುದಿಲ್ಲವೆಂದು ತಾತ್ಪರ್ಯ. ಅನೀಲವ್ಯಾವೃತ್ತವಾದ ನೀಲತ್ವಧರ್ಮವು ನೀಲದಲ್ಲಿ ಮಾತ್ರ, ಅಪೀತವ್ಯಾವೃತ್ತವಾದ ಪೀತತ್ವಧರ್ಮವು ಪೀತದಲ್ಲಿ ಮಾತ್ರ ಇರುತ್ತದೆ. ಹೀಗೆ ವಿರುದ್ಧವಾದ ಧರ್ಮಗಳು ಒಂದು ವಿಜ್ಞಾನದಲ್ಲಿ ಇರುವುದು ಹೇಗೆ ? ಇತರಥಾ—ವಿರುದ್ಧವಾದ ನೀಲತ್ವಾದಿಗಳಿಗೂ ಸಾಮಾನಾಧಿಕರಣ್ಯ ಹೇಳುವುದಾದರೆ ಈ ಪ್ರಪಂಚದಲ್ಲಿ ವಿರೋಧನಿಶ್ಚಯವೇ ಇಲ್ಲದಂತಾದೀತು. ಎಲ್ಲವೂ ಒಂದು ವಿಜ್ಞಾನದಲ್ಲಿರುವುದರಿಂದ ವಿರೋಧವನ್ನು ನಿಶ್ಚಯಿಸುವುದು ಹೇಗೆ ? ನಾವು ಸಮೂಹಾಲಂಬನದಲ್ಲಿ ನೀಲಾದಿಗಳನ್ನು ಕ್ರಮವಾಗಿ ಹೇಳುವುದೇ ಇಲ್ಲ. ಅಲ್ಲಿ ಚಿತ್ರಾಕಾರವೊಂದನ್ನೇ ಅಂಗೀಕರಿಸುತ್ತೇವೆಂದು ಬೌದ್ಧನು ಹೇಳುವುದಾದರೆ ಆಗ ವಾಸನಾಸಂಕ್ರಮವನ್ನು ದೂಷಿಸುತ್ತಾನೆ. 'ನವಾ—' ಇತಿ. ಕಸ್ತೂರಿಯ ಪರಿಮಳವು ವಸ್ತ್ರದ ಪದರುಗಳಲ್ಲಿ ಸಂಕ್ರಾಂತವಾದಂತೆ ಪೂರ್ವಪೂರ್ವವಿಜ್ಞಾನದಿಂದ ಉಂಟಾದ ಸಂಸ್ಕಾರವು ಉತ್ತರೋತ್ತರವಿಜ್ಞಾನಗಳಲ್ಲಿ ಸಂಕ್ರಾಂತವಾಗುವುದರಿಂದ ಸ್ಮರಣಾನುಪಪತ್ತಿ ನನ್ನಮತದಲ್ಲಿ ಇಲ್ಲವೆಂದು ಹಿಂದೆ ಹೇಳಿದುದು ಸರಿಯಲ್ಲ. ಹಾಗೆ ಸಂಕ್ರಾಂತವಾಗುವುದಾದರೆ ತಾಯಿಯಿಂದ ಅನುಭೂತವಾದ ವಿಷಯವು ಗರ್ಭದಲ್ಲಿರುವ ಪುತ್ರನಿಗೆ ಸ್ಮರಣೆಯುಂಟಾಗ

ಬೇಕಾಗುತ್ತದೆ. ಆದರೆ ತಾಯಿಯು ಅನುಭವಿಸಿರುವುದನ್ನು ಎಂದೂ ಮಕ್ಕಳು ಸ್ಮರಿಸು ವುದಿಲ್ಲ.

ಉಪಾದಾನದಿಂದ ಅನುಭೂತವಾದದ್ದೇ ಉಪಾದೇಯದಿಂದ ಸ್ಮರಿಸಲ್ಪಡುತ್ತದೆ. ಮಣ್ಣಿನಲ್ಲಿರುವ ಧರ್ಮ ಘಟದಲ್ಲಿ ಅನುವೃತ್ತವಾಗುತ್ತದೆ. ತಾಯಿಮಗನಿಗೆ ಉಪಾದಾ ನೋಪಾದೇಯಭಾವವಿಲ್ಲದಿರುವುದರಿಂದ ತಾಯಿಯ ಅನುಭವದ ಸ್ಮೃತಿ ಮಗನಿಗೆ ಬರುವುದಿಲ್ಲವೆಂದು ಬೌದ್ಧನು ಸಮಾಧಾನಹೇಳುವುದು ಸಮಂಜಸವಲ್ಲವೆಂದು ಸಿದ್ಧಾಂತಿ ನಿರಾಕರಿಸುತ್ತಾನೆ. 'ಸಂಕ್ರಮಾಸಂಭವಾತ್—' ಇತಿ. ವಾಸನಾ ಧರ್ಮವಾದುದ ರಿಂದ ಒಂದು ಧರ್ಮಿಯನ್ನಾಶ್ರಯಿಸಿರುತ್ತದೆ. ತನ್ನ ಧರ್ಮಿಯನ್ನು ಬಿಟ್ಟು ಬೇರೆಕಡೆ ಹೋಗಲು ಸಮರ್ಥವಾಗುವುದಿಲ್ಲ. ಕಸ್ತೂರಿಯ ಪರಮಾಣುಗಳೇ ಅದೃಷ್ಟದಿಂದ ಬಟ್ಟೆಯ ಪದರುಗಳಲ್ಲಿ ಸಂಯುಕ್ತವಾಗುವುದಲ್ಲದೆ, ಕೇವಲ ನಿರಾಧಾರವಾದ ಗಂಧವು ಅಲ್ಲಿ ಸಂಕ್ರಾಂತವಾಗುವುದಿಲ್ಲ. ಅದು ವಿಷಮದೃಷ್ಟಾಂತವಾಗುತ್ತದೆ.

ಸಂಕ್ರಮವೆಂದರೆ ಸಂಬಂಧವಲ್ಲ, ಉತ್ಪತ್ತಿಯೆಂದರ್ಥ. ಪೂರ್ವವಿಜ್ಞಾನದ ಸಂಸ್ಕಾರವು ಉತ್ತರವಿಜ್ಞಾನ ಹುಟ್ಟಿದಾಗ ಅದರೊಡನೆ ಹುಟ್ಟುತ್ತದೆ. ಪೂರ್ವವಿಜ್ಞಾನ ನಷ್ಟವಾದಂತೆ ಅದರ ಸಂಸ್ಕಾರವೂ ನಷ್ಟವಾಗಿ ಪುನಃ ವಿಜ್ಞಾನ ಹುಟ್ಟುವಂತೆ ಅದೂ ಹುಟ್ಟುತ್ತದೆ. ಆದುದರಿಂದ ದೋಷವಿಲ್ಲವೆಂದು ಬೌದ್ಧನ ಸಮಾಧಾನ. 'ಉತ್ತರ ಸ್ಮಿನ್—' ಇತಿ.

ಇದು ಅಸಂಗತವೆಂದು ಸಿದ್ಧಾಂತಿಯು ದೂಷಿಸುತ್ತಾನೆ. 'ನ'—ಇತಿ. ಉತ್ಪಾ ದಕ ಸಾಮಗ್ರಿ ಇಲ್ಲದೆ ಯಾವುದೂ ಹುಟ್ಟುವುದಿಲ್ಲ. ಪೂರ್ವವಿಜ್ಞಾನವೇ ಉತ್ಪಾದಕ ವಾಗುತ್ತದೆಂದರೆ ಅದು ಕ್ಷಣಿಕವಾದುದರಿಂದ ನಷ್ಟವಾಗಿದೆ. ಉತ್ತರಸಂಸ್ಕಾರಕ್ಕೆ ಅದು ಇಲ್ಲದೆ ಕಾರಣವಾಗುವುದು ಹೇಗೆ ? ಉತ್ತರಸಂಸ್ಕಾರ ಹುಟ್ಟುವಾಗಲೂ ಅದು ಇರುತ್ತ ದೆಂದು ಅಂಗೀಕರಿಸಿದರೆ ಆಗ ಕ್ಷಣಿಕತ್ವಭಂಗವುಂಟಾಗುತ್ತದೆ. ಬೌದ್ಧನ ಮತದಲ್ಲಿ ಎಲ್ಲವೂ ಕ್ಷಣಿಕವಾದುದುದರಿಂದ ವಿಜ್ಞಾನವು ಮೂರನೇಕ್ಷಣದಲ್ಲಿಯೂ ಇರುತ್ತದೆಂದರೆ ಆಗ ವಿರುದ್ಧವಾಗುತ್ತದೆ. ಆದುದರಿಂದ ವಾಸನಾಸಂಕ್ರಮವೆಂಬುದು ನಿರಾಧಾರವಾದದ್ದು. ಅದನ್ನು ನಿರೂಪಿಸಲು ಸಾಧ್ಯವೇ ಇಲ್ಲ.

ಇನ್ನೂ ಒಂದು ದೋಷ ಬರುತ್ತದೆಂದು ತೋರಿಸುತ್ತಾನೆ. 'ಚಿತಾಮೇವ'— ಇತಿ. ಪೂರ್ವವಿಜ್ಞಾನವು ಉತ್ತರಸಂಸ್ಕಾರವನ್ನು ಹುಟ್ಟಿಸುವುದು ಬೇಡ. ಮುಂದೆ ಹುಟ್ಟುವ ವಿಜ್ಞಾನವು ತಾನಾಗಿ ಸಂಸ್ಕಾರವನ್ನು ಹುಟ್ಟಿಸುತ್ತದೆ ಎಂದು ಹೇಳುವುದಾದರೆ ಆಗ ಸಂಸ್ಕಾರಗಳು ಅನಂತವಾಗಬೇಕಾಗುತ್ತವೆ. ಉತ್ಪಾದಕಗಳಾದ ವಿಜ್ಞಾನಗಳು ಅನಂತವಾದುದರಿಂದ ಅವುಗಳಿಂದ ಸಂಸ್ಕಾರಗಳೂ ಅನಂತವಾಗಿ ಹುಟ್ಟಬೇಕು. ಅನಂತ ಸಂಸ್ಕಾರಗಳಿಂದ ಅನಂತಸ್ಮೃತಿಗಳೂ ಉಂಟಾಗಬೇಕಾಗುತ್ತವೆ. ಆದುದರಿಂದ ಉತ್ತರ ವಿಜ್ಞಾನವೇ ಜನಕವೆಂಬ ವಾದವೂ ಸಮಂಜಸವಲ್ಲ.

ಕ್ಷಣಿಕವಿಜ್ಞಾನೇಽತಿಶಯವಿಶೇಷಃ ಕಲ್ಪ್ಯತ ಇತಿ ಚೇನ್ನ, ಮಾನಾಭಾವಾತ್ ಕಲ್ಪನಾ ಗೌರವಾಚ್ಚ । ಏತೇನ ಕ್ಷಣಿಕಶರೀರೇಷ್ವೇವ ಚೈತನ್ಯಮಪಿ ಪ್ರತ್ಯುಕ್ತಮ್, ಗೌರವಾದತಿಶಯೇ ಮಾನಾಭಾವಾಚ್ಚ । ಬೀಜಾದಾವಪಿ ಸಹಕಾರಿಸಮವಧಾನಾಽಸಮವಧಾನಾಭ್ಯಾಮೇವೋಪಪತ್ತೇಃ ಕುರ್ವದ್ರೂಪತ್ವಾಕಲ್ಪನಾಚ್ಚ ।

ಬೌದ್ಧನ ಸಮಾಧಾನ—'ಕ್ಷಣಿಕ'—ಇತಿ. ಕ್ಷಣಿಕವಿಜ್ಞಾನದಲ್ಲಿಯೇ ಅತಿಶಯ ವಿಶೇಷ—ಶಕ್ತಿವಿಶೇಷವನ್ನು ಕಲ್ಪಿಸುತ್ತೇವೆ. ಸ್ಮೃತಿರೂಪಕಾರ್ಯವುಂಟಾಗುವುದರಿಂದ ಅದರಿಂದ ಉತ್ತರವಿಜ್ಞಾನದಲ್ಲಿ ಒಂದು ಅಲೌಕಿಕವಾದ ಸಾಮರ್ಥ್ಯವಿದೆಯೆಂದು ಕಲ್ಪಿಸುತ್ತೇವೆ. ಕಾರ್ಯದಿಂದ ಕಾರಣ ನಿಶ್ಚಯಮಾಡುವುದು ಲೋಕದಲ್ಲಿ ಪ್ರಸಿದ್ಧವಾಗಿದೆ. ಈ ಶಕ್ತಿವಿಶೇಷದಿಂದ ಸ್ಮೃತಿಯುಂಟಾಗಲು ಯಾವ ತೊಂದರೆಯೂ ಇಲ್ಲ. ಎಂದರೆ, ಅದಕ್ಕೆ ಸಿದ್ಧಾಂತಿಯು ದೋಷಹೇಳುತ್ತಾನೆ. 'ನ—' ಇತಿ. 'ಮಾನಾಭಾವಾತ್' ಇತಿ. ಸ್ಮೃತಿರೂಪಕಾರ್ಯಾನುಕೂಲಶಕ್ತಿ ಕಲ್ಪನೆಯಲ್ಲಿ ಯಾವ ಪ್ರಮಾಣವೂ ಇಲ್ಲ. ಸ್ಮೃತಿರೂಪಕಾರ್ಯಾನುಪಪತ್ತಿಯೇ ಕಲ್ಪನೆಯಲ್ಲಿ ಪ್ರಮಾಣವೆನ್ನಬಹುದು. ಆದರೆ ಅನಂತಕ್ಷಣಿಕ ವಿಜ್ಞಾನಗಳಲ್ಲಿ ಅನಂತಶಕ್ತಿವಿಶೇಷಗಳನ್ನು ಕಲ್ಪಿಸಿದರೆ ಮಹಾಗೌರವ ಬರುತ್ತದೆ. ಅದಕ್ಕಿಂತ ವಿಜ್ಞಾನದಿಂದ ಬೇರೆಯಾದ ನಿತ್ಯವಾದ ಜ್ಞಾನಕ್ಕೆ ಅಧಿಕರಣ (ಆಶ್ರಯ)ನಾದ ಆತ್ಮನನ್ನು ಕಲ್ಪಿಸುವುದೇ ಲಾಘವ. 'ಕಲ್ಪನಾಗೌರವಾತ್'—ಇತಿ. ಶಕ್ತಿವಿಶೇಷವೆಂದರೆ ಅದೊಂದು ಪದಾರ್ಥ. ಅದೂ ನಿನ್ನಮತದಲ್ಲಿ ಕ್ಷಣಿಕವಾದುದರಿಂದ ಅನಂತಶಕ್ತಿ, ಅದರ ಪ್ರಾಗಭಾವ, ಇತ್ಯಾದಿಗಳನ್ನು ಹೇಳಬೇಕಾದುದರಿಂದ ಕಲ್ಪನಾಗೌರವ ಬರುತ್ತದೆ. ಅದೂ ಅಲ್ಲದೆ 'ಅವನೇ ಇವನು' ಎಂಬ ಪ್ರತ್ಯಭಿಜ್ಞೆಯು ಸಕಲರಿಗೂ ಬರುತ್ತದೆ. ಅನಂತವಿಜ್ಞಾನವೆಂದರೆ ಈ ಪ್ರತ್ಯಭಿಜ್ಞೆ ಬರಲಾರದು.

'ಏತೇನ—' ಇತಿ. ಪೂರ್ವೋಕ್ತಯುಕ್ತಿಗಳಿಂದಲೇ ಚೈತನ್ಯವು ಕ್ಷಣಿಕಶರೀರದ ಧರ್ಮವೆಂಬ ವಾದವೂ ಖಂಡಿತವಾದಂತೆಯೇ. (ಪ್ರತ್ಯುಕ್ತ—ಖಂಡಿತ). ಕ್ಷಣಿಕ ವಿಜ್ಞಾನವಾದದಲ್ಲಿಯೂ, ವಾಸನಾಸಂಕ್ರಮದಲ್ಲಿಯೂ ಹೇಗೆ ಅನುಪಪತ್ತಿರೂಪತರ್ಕದಿಂದ ಬಾಧವೋ ಹಾಗೆಯೇ ಕ್ಷಣಿಕಶರೀರವೇ ಚೇತನ (ಚೈತನ್ಯಕ್ಕೆ ಆಶ್ರಯ)ವೆಂಬ ವಾದವೂ ಯುಕ್ತಿಶೂನ್ಯವಾದುದರಿಂದ ಬಾಧಿತವಾಗುತ್ತದೆ.

ಬೌದ್ಧನ ಕುರ್ವದ್ರೂಪತ್ವವಾದವನ್ನೂ ಖಂಡಿಸುತ್ತಾನೆ. 'ಬೀಜಾದಾ'—ಇತಿ. ವಾಸನಾ ಸಂಕ್ರಾಂತಿಸಾಧನೆಗೋಸ್ಕರ ಬೌದ್ಧನು ಹೀಗೆ ವಾದಿಸುತ್ತಾನೆ. ಗದ್ದೆಯಲ್ಲಿ ಬಿತ್ತಿರುವ ಬೀಜದಿಂದಲೇ ಮೊಳಕೆ ಬರುತ್ತದೆ, ಅದೇ ಬೀಜವು ಕಣಜದಲ್ಲಿದ್ದರೆ ಅಂಕುರೋತ್ಪತ್ತಿಯಾಗುವುದಿಲ್ಲ. ಆದುದರಿಂದ ಅಂಕುರೋತ್ಪತ್ತಿಯನ್ನು ಕುರಿತು ಕುರ್ವದ್ರೂಪವು ಕಾರಣವೆಂದು ಅಂಗೀಕರಿಸಬೇಕು. ಕುರ್ವತ್—ಫಲೋನ್ಮುಖರೂಪ (ಫಲವನ್ನು ಹುಟ್ಟಿಸುವ ಶಕ್ತಿ). ಅದರಭಾವ ಕುರ್ವದ್ರೂಪ. ಕಾರ್ಯಜನಕತಾವಚ್ಛೇದಕವಾದ ಜಾತಿವಿಶೇಷವೆಂದರ್ಥ. 'ಯತ್ರಯತ್ರಕಾರ್ಯಜನಕತ್ವಂ ತತ್ರತತ್ರ ಕುರ್ವ

ದ್ರೂಪತ್ವಂ, ಯತ್ರ ಕುರ್ವದ್ರೂಪತ್ವಂ ತತ್ರ ಕಾರ್ಯಜನಕತ್ವಂ' ಎಂದು ಪರಸ್ಪರವ್ಯಾಪ್ತಿ ಇದೆ. ಕ್ಷಣಿಕಶರೀರದಲ್ಲಿಯೂ ಉತ್ತರೋತ್ತರಶರೀರದಲ್ಲಿ ಉಂಟಾಗುವ ವಾಸನೋತ್ಪಾದ ಕತ್ವರೂಪ (ಅದನ್ನು ಹುಟ್ಟಿಸುವ) ಕುರ್ವದ್ರೂಪತ್ವರೂಪ ಜಾತಿವಿಶೇಷವಿರುತ್ತದೆ. ಇದ ರಿಂದ ವಾಸನಾಸಂಕ್ರಮವಾಗಲು ತೊಂದರೆ ಇಲ್ಲ. ಬೀಜದಲ್ಲಿ ಕುರ್ವದ್ರೂಪತ್ವವಿರುವಂತೆ ಕ್ಷಣಿಕಶರೀರದಲ್ಲಿಯೂ ಕುರ್ವದ್ರೂಪತ್ವವಿರುತ್ತದೆ. ಕುರ್ವದ್ರೂಪತ್ವಕಾರಣದಿಂದ ಲೇ ಉತ್ತರೋತ್ತರವಾಸನಾಸಂಕ್ರಮವುಂಟಾಗುವುದರಿಂದ ದೋಷವಿಲ್ಲವೆಂದರೆ ನಿನ್ನ ದೃಷ್ಟಾಂತವೇ ದುಷ್ಟವಾಗಿದೆಯೆಂದು ಸಿದ್ಧಾಂತಿಯು ಖಂಡಿಸುತ್ತಾನೆ. ಬೀಜಾದಿಗಳಲ್ಲಿ ಅಂಕುರವುಂಟಾಗಲು ಕುರ್ವದ್ರೂಪತ್ವವನ್ನು ಅಂಗೀಕರಿಸಬೇಕಾದುದಿಲ್ಲ. ಅದನ್ನು ಕಲ್ಪಿಸುವುದು ವ್ಯರ್ಥವೆಂದು ತೋರಿಸುತ್ತಾನೆ. 'ಸಹಕಾರೀ—' ಇತಿ. ಭೂಮಿ, ನೀರು, ಗಾಳಿ ಮುಂತಾದ ಸಹಕಾರಿಕಾರಣಗಳಿಂದಲೇ ಅಂಕುರೋತ್ಪತ್ತಿಯಾಗುವಾಗ ಇತರ ಕಾರಣವೇಕೆ ? ಸಾನ್ನಿಧ್ಯವಿಶೇಷವೇ ಸಮವಧಾನ. ಕುಸೂಲದಲ್ಲಿ (ಕಣಜ) ಈ ಸಹ ಕಾರಿಕಾರಣ ಸಮಾವೇಶ ಇಲ್ಲದಿರುವುದರಿಂದ ಅಂಕುರೋತ್ಪತ್ತಿಯಾಗುವುದಿಲ್ಲ. ಆದುದರಿಂದ ಮಧ್ಯದಲ್ಲಿ ಕುರ್ವದ್ರೂಪತ್ವವನ್ನು ಕಲ್ಪಿಸುವುದು ನಿಷ್ಫಲವೇ. ಆಗ ಅದನ್ನು ಒಪ್ಪಿ ವಾಸನಾಸಂಕ್ರಾಂತಿ ಹೇಳಿರುವುದೂ ತಪ್ಪಾಗುತ್ತದೆ. ಕುರ್ವದ್ರೂಪತ್ವ ರೂಪಕಾರಣವಿಲ್ಲದ ಮೇಲೆ ಅದರಿಂದಾಗುವ ವಾಸನಾಸಂಕ್ರಾಂತಿರೂಪ ಕಾರ್ಯವೆಲ್ಲಿ ? ಇದರಿಂದ ವಿಜ್ಞಾನವಾದಿಯ ಮತದಲ್ಲಿ ದೋಷವೇ ಉಳಿಯುತ್ತದೆ.

ಉಪದೇಶಕನಾದ ಬುದ್ಧನು ಒಬ್ಬನಾದರೂ ಭಾವನಾಭೇದದಿಂದ ಭಿನ್ನಭಿನ್ನ ಅಭಿಪ್ರಾಯವುಳ್ಳವರು ಅವರ ಶಿಷ್ಯರು ನಾಲ್ಕು ಜನರು. ಅವರಲ್ಲಿ ಮಾಧ್ಯಮಿಕನೆಂಬ ವನು ಸರ್ವಶೂನ್ಯವಾದಿ. ಸತ್ ಯಾವುದಿದೆಯೋ ಅದೆಲ್ಲಾ ವಿನಾಶಹೊಂದುತ್ತದೆ. ಆದುದರಿಂದ ಎಲ್ಲವೂ ಶೂನ್ಯವೆಂದು ಭಾವಿಸಬೇಕು. ಪ್ರಾಪಂಚಿಕವ್ಯವಹಾರವೆಲ್ಲಾ ಸ್ವಪ್ನವ್ಯವಹಾರದಂತೆ ತೋರಿಕೆಗೆ ಇವೆ. ಒಂದೇ ವಸ್ತುವಿನಲ್ಲಿ ರುಚಿಭೇದ ಲೋಕ ಪ್ರಸಿದ್ಧವಾಗಿದೆ. ಒಂದು ಹೆಂಗಸಿನ ದೇಹವು ವಿರಕ್ತನಿಗೆ ಶವದಂತೆಯೂ, ಕಾಮಿಗೆ ಕಾಮಿನಿಯಾಗಿಯೂ, ನಾಯಿಗೆ ತಿನ್ನುವ ಪದಾರ್ಥವೆಂದೂ ತೋರುತ್ತದೆ. ಆದುದರಿಂದ 'ಸರ್ವಂ ಕ್ಷಣಿಕಂಕ್ಷಣಿಕಂ' 'ಸರ್ವಂ ದುಃಖಂ ದುಃಖಂ' 'ಸರ್ವಂ ಸ್ವಲಕ್ಷಣಂ ಸ್ವಲಕ್ಷಣಂ' 'ಸರ್ವಂ ಶೂನ್ಯಂ ಶೂನ್ಯಂ' ಎಂಬ ಭಾವನಾಚತುಷ್ಟಯದಿಂದ ಸಕಲ ವಾಸನಾನಿವೃತ್ತಿಯಾಗುವುದರಿಂದ ನಿರ್ವಾಣವಾಗುತ್ತದೆ. ಶೂನ್ಯತ್ವವೇ ನಿರ್ವಾಣ. ಇದಕ್ಕಿಂತ ಬೇರೆ ಹೊಂದಬೇಕಾದುದಿಲ್ಲವೆಂದು ಅವನ ಸಿದ್ಧಾಂತ.

ಯೋಗಾಚಾರನೆಂಬವನು ಸರ್ವಶೂನ್ಯಕ್ಕಿಂತ ಸ್ವಪ್ರಕಾಶರೂಪಕ್ಷಣಿಕ ವಿಜ್ಞಾನ ವನ್ನು ಅಂಗೀಕರಿಸಬೇಕೆನ್ನುತ್ತಾನೆ. ಇದನ್ನು ಒಪ್ಪದೇ ಹೋದರೆ ಈ ಜಗತ್ತು ಗಾಢಾಂಧ ಕಾರಾವೃತವಾಗಬೇಕಾಗುತ್ತದೆ. ಗ್ರಾಹ್ಯ ಗ್ರಾಹಕಗಳು (ವಿಷಯ ಘಟಾದಿ. ವಿಷಯೀ– ತಜ್ಞಾನ) ವಸ್ತುತಃ ಒಂದೇ ಆಗಿದ್ದರೂ ಒಂದೇ ಚಂದ್ರನು ಬೆರಳಿನಿಂದ ನೋಡಿದರೆ ಎರಡಾಗಿ ತೋರಿದಂತೆ ಬೇರೆಯಾಗಿ ತೋರುವುದು ಭ್ರಾಂತಿ. ಹಿಂದೆ ಹೇಳಿದ ಭಾವನಾ

ಚತುಷ್ಟಯದಿಂದ ನಾನಾ ವಿಷಯಾಕಾರವನ್ನು ಬಿಟ್ಟು ಶುದ್ಧವಾದ ಕ್ಷಣಿಕ ವಿಜ್ಞಾನೋದಯ ರೂಪವಾದ ಮೋಕ್ಷವುಂಟಾಗುತ್ತದೆ. ಕ್ಷಣಿಕವಿಜ್ಞಾನಕ್ಕಿಂತ ಬೇರೆ ಯಾದುದು ಯಾವುದೂ ಇಲ್ಲವೆಂದು ಅವನ ಮತ.

ಸೌತ್ರಾಂತಿಕರು ಮೂರನೆಯವರು. ಇವರು ನಮಗೆ ತೋರುವ ಘಟಪಟಾದಿ ಪದಾರ್ಥವನ್ನು ಒಪ್ಪುತ್ತಾರೆ. ಆದರೆ ಅದು ಪ್ರತ್ಯಕ್ಷವಲ್ಲ. ಜ್ಞಾನದಿಂದ ಅನುಮೇಯ ವಾಗಿರುತ್ತದೆ. ಭಾಷೆಯಿಂದ ದೇಶವು ಅನುಮೇಯ, ಆದರದಿಂದ ಸ್ನೇಹವು ಅನುಮೇಯ. ಅದರಂತೆ ಜ್ಞಾನಾಕಾರದಿಂದ ಅದು ಅನುಮಾನವಿಷಯವಾಗಿದೆ. ಜ್ಞಾನಾಕಾರದಿಂದ ಅನುಮೇಯವಾದ ಕ್ಷಣಿಕಬಾಹ್ಯಪದಾರ್ಥವೇ ಆತ್ಮವೆಂದು ಅವರ ಸಿದ್ಧಾಂತ. ಭಾವನಾಚತುಷ್ಟಯದಿಂದ ಸಂಪಾದಿಸುವುದೂ ಇದನ್ನೇ ಎಂದು ಅವರ ಮತ.

ನಾಲ್ಕನೆಯವನು ವೈಭಾಷಿಕ. ಇವನು ಬಾಹ್ಯಪ್ರತ್ಯಕ್ಷಾರ್ಥವಾದಿ. ಸೌತ್ರಾಂತಿಕನು ಬಾಹ್ಯಪದಾರ್ಥಗಳನ್ನು ಅನುಮೇಯವೆಂದಿರುತ್ತಾನೆ. ಇವನು ಬಾಧವಿಲ್ಲದಿರುವುದರಿಂದ ಪ್ರತ್ಯಕ್ಷವೆಂದೇ ಹೇಳುತ್ತಾನೆ. ಗ್ರಾಹ್ಯ, ಅಧ್ಯವಸಾಯವೆಂದು ಎರಡುಪದಾರ್ಥಗಳನ್ನು ಅಂಗೀಕರಿಸಿರುತ್ತಾನೆ. ನಿರ್ವಿಕಲ್ಪರೂಪವಾದ ಜ್ಞಾನವು ಕಲ್ಪನೆಗೆ ಅವಕಾಶವಿಲ್ಲದಿರುವುದರಿಂದ ಅಭ್ರಾಂತವಾಗಿರುತ್ತದೆ. ಇದೇ ಗಾಹ್ಯ (ಪ್ರತ್ಯಕ್ಷ ಪ್ರಮಾಣ) ಸವಿಕಲ್ಪರೂಪವಾದದ್ದು ಅಧ್ಯವಸಾಯ. ಇದು ಕಲ್ಪನಾರೂಪವಾದುದರಿಂದ ಅಪ್ರಮಾಣವೆಂದು ಇವರ ಮತ.

ಅಪ್ರಾಪ್ತಪ್ರಾಪ್ತಿಗೋಸ್ಕರ ಪ್ರಶ್ನೆಕೇಳುವುದು ಯೋಗವೆಂದೂ, ಗುರುವು ಹೇಳಿರುವುದನ್ನಂಗೀಕರಿಸುವುದು ಆಚಾರವೆಂದೂ ಪ್ರಸಿದ್ಧಿ. ಮೊದಲಿನವರು ಗುರೂಕ್ತಿಯನ್ನು ಒಪ್ಪಿರುವುದರಿಂದ ಉತ್ತಮರೂ ಪರ್ಯನುಯೋಗ (ಪ್ರಶ್ನೆಕೇಳುವುದು) ಮಾಡದಿರುವುದರಿಂದ ಅಧಮರೂ ಆಗಿ ಮಾಧ್ಯಮಿಕರಾದರು. ಭಾವನಾಚತುಷ್ಟಯವನ್ನೂ ಬಾಹ್ಯಾರ್ಥಶೂನ್ಯತ್ವವನ್ನೂ ಅಂಗೀಕರಿಸಿ ಮಧ್ಯೆ ಶೂನ್ಯತ್ವವನ್ನು ಅಂಗೀಕರಿಸಿದುದು ಹೇಗೆ ? ಎಂದು ಪರ್ಯನುಯೋಗಮಾಡಿರುವುದರಿಂದ ಯೋಗಾಚಾರರಾದರು. ಸೂತ್ರದ ಅಂತಃ—ರಹಸ್ಯವನ್ನು ಕೇಳಿರುವುದರಿಂದ ಸೌತ್ರಾಂತಿಕರಾದರು. ಸರ್ವಶೂನ್ಯತ್ವವನ್ನು ಮಾಧ್ಯಮಿಕನಿಗೂ, ಕ್ಷಣಿಕವಿಜ್ಞಾನರೂಪವನ್ನು ಯೋಗಾಚಾರನಿಗೂ, ಎರಡೂ ಸತ್ಯವೆಂದು ಸೌತ್ರಾಂತಕನಿಗೂ ಅವರವರ ಬುದ್ಧಿಗನುಸಾರವಾಗಿ ಬುದ್ಧನು ಉಪದೇಶಿಸಿದನು. ಅದನ್ನು ತಿಳಿಯದೆ ಇದು ಗುರುಗಳ ವಿರುದ್ಧಭಾಷೆಯೆಂದು (ಸೇಯಂ ಭಗವತೋ ವಿರುದ್ಧಾಭಾಷಾ) ವರ್ಣಿಸಿರುವುದರಿಂದ ವೈಭಾಷಿಕರೆಂದೂ ಹೆಸರಾಗಿದೆ. ನಾಲ್ಕುಮತಗಳಲ್ಲಿಯೂ ಸರ್ವಶೂನ್ಯತ್ವವೇ ಪರ್ಯವಸಾನ ಹೊಂದುತ್ತದೆ. ಯುಕ್ತಿಶೂನ್ಯವಾದುದರಿಂದ ಇದು ಅಗ್ರಾಹ್ಯವೆಂದು ತಾರ್ಕಿಕನ ಸಿದ್ಧಾಂತ. ಹೀಗೆ ಕ್ಷಣಿಕವಿಜ್ಞಾನವೇ ಆತ್ಮನೆಂಬ ಬೌದ್ಧಮತವು ನಿರಾಕರಿಸಲ್ಪಟ್ಟಿದೆ.

ಅಸ್ತು ತರ್ಹಿ ಕ್ಷಣಿಕವಿಜ್ಞಾನೇ ಗೌರವಾನ್ನಿತ್ಯವಿಜ್ಞಾನಮೇವಾತ್ಮಾ 'ಅವಿನಾಶೀವಾರೇಯ

ಮಾತ್ಮಾ' (ಬೃಹ-೫-೧೪)|' ಸತ್ಯಂ ಜ್ಞಾನಮನಂತಂಬ್ರಹ್ಮ' (ತೈತ್ತ-೩-೧) ಇತ್ಯಾದಿ ಶ್ರುತೇರಿತಿಚೇನ್ನ | ತಸ್ಯಸವಿಷಯಾತ್ಮಾಸಂಭವಸ್ಯ ದರ್ಶಿತತ್ವಾತ್' ನಿರ್ವಿಷಯಸ್ಯ ಜ್ಞಾನತ್ವೇ ಮಾನಾಭಾವಾತ್, ಸವಿಷಯತ್ವಸ್ಯಾಪ್ಯನನು ಭವಾತ್ | ಅತೋ ಜ್ಞಾನಾದಿಭಿನ್ನೋ ನಿತ್ಯ ಆತ್ಮೇತಿ ಸಿದ್ಧಮ್ |

ಯೋಗಾಚಾರಮತವು ದೂಷಿತವಾದುದರಿಂದ ನಿತ್ಯವಿಜ್ಞಾನಾತ್ಮವಾದಿಯಾದ ವೇದಾಂತಿಯು ಆಕ್ಷೇಪಿಸುತ್ತಾನೆ. 'ಅಸ್ತುತರ್ಹಿ—' ಇತಿ. ಕ್ಷಣಿಕವಿಜ್ಞಾನವೇ ಆತ್ಮನೆಂದು ಅಂಗೀಕರಿಸಿದರೆ ಅನಂತವಿಜ್ಞಾನಾದಿಗಳ ಕಲ್ಪನೆಯಿಂದ ಗೌರವ ಬರುತ್ತದೆ. ಆದುದರಿಂದ ನಿತ್ಯವಿಜ್ಞಾನವೇ ಆತ್ಮನೆಂದು ಅಂಗೀಕರಿಸಿದರೆ ಯಾವದೋಷವೂ ಇಲ್ಲ. ತ್ರಿಕಾಲದಲ್ಲಿಯೂ ಬಾಧವಿಲ್ಲದುದೇ ನಿತ್ಯ. ವಿಜ್ಞಾನವೆಂದರೆ ಸ್ವಪ್ರಕಾಶವಾದಚೈತನ್ಯ ಸತ್ ಚಿತ್ ಆನಂದರೂಪವಾದ ಬ್ರಹ್ಮವೇ ಆತ್ಮಾ. ಇದಕ್ಕಿಂತ ಬೇರೆ ಆತ್ಮವಿಲ್ಲ. ಇದಕ್ಕೆ ಶ್ರುತಿಪ್ರಮಾಣವೂ ಇದೆ. 'ಅವಿನಾಶೀ—' ಇತ್ಯಾದಿಬೃಹದಾರಣ್ಯಕದವಚನ ದಿಂದ ಆತ್ಮನು ನಿತ್ಯನೆಂದೂ, 'ಸತ್ಯಂಜ್ಞಾನಂ—' ಇತ್ಯಾದಿವಚನದಿಂದ ಚೈತನ್ಯಸ್ವರೂಪ ನೆಂದೂ ತಿಳಿಯುತ್ತದೆ. 'ಬೃಹತ್ವಾತ್, ಬೃಂಹಣತ್ವಾತ್ ಆತ್ಮಾ ಬ್ರಹ್ಮೇತಿ ಗೀಯತೇ ಇತ್ಯಾದಿವಚನದಿಂದ ತ್ರೈಕಾಲಾಬಾಧ್ಯವಾದ, ತ್ರಿವಿಧಪರಿಚ್ಛೇದರಹಿತವಾದ, ಚಿತ್ಸ್ವ ಭಾವವುಳ್ಳ ಬ್ರಹ್ಮವೇ ಆತ್ಮಾ. ಹೀಗೆ ಶ್ರುತಿಯೇ ಆತ್ಮನನ್ನು ನಿತ್ಯವಿಜ್ಞಾನಸ್ವರೂಪ ನೆಂದು ಹೇಳಿರುವುದರಿಂದ ಇದರ ಮೇಲೆ ಯಾವ ಆಕ್ಷೇಪವೂ ಇಲ್ಲವೆಂದು ವೇದಾಂತಿಗಳ ಮತ. 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬುದು ಬ್ರಹ್ಮನಸ್ವರೂಪ ಲಕ್ಷಣ ಹೇಳುವ ವಾಕ್ಯ. ಇದರಿಂದ ಅನಿತ್ಯವ್ಯಾವೃತ್ತವಾದದ್ದು ಬ್ರಹ್ಮವೆಂದು ತಿಳಿಯುತ್ತದೆ. 'ನ' ಇತ್ಯಾದಿಗಳಿಂದ ವೇದಾಂತಿಮತವನ್ನು ಖಂಡಿಸುತ್ತಾನೆ. ಆತ್ಮನು ವಿಜ್ಞಾನಸ್ವರೂಪ ನಾದರೆ ಬೌದ್ಧಮತದಲ್ಲಿ ತೋರಿಸಿದ ಅನುಪಪತ್ತಿಗಳೇ ಬರುವುದರಿಂದ ಯುಕ್ತವಲ್ಲ.

ನಿತ್ಯವಿಜ್ಞಾನವೇ ಆತ್ಮನೆಂದರೆ ಆ ನಿತ್ಯವಿಜ್ಞಾನವು ಸವಿಷಯಕವೇ ಅಥವಾ ನಿರ್ವಿಷಯಕವೇ ? ಸವಿಷಯಕವೆಂದರೆ ಅದರ ವಿಷಯ ಯಾವುದು ? ಸಕಲಜಗತ್ ವಿಷಯವೆಂದರೆ ಆಗ ಎಲ್ಲರೂ ಸರ್ವಜ್ಞರಾಗಬೇಕಾಗುತ್ತದೆ. ಯಾವುದೋ ಒಂದು ವಿಷಯವೆಂದರೆ ಆಗ ವಿನಿಗಮಕ ಯಾವುದೂ ಹೇಳಲು ಸಾಧ್ಯವಿಲ್ಲ. ಸುಷುಪ್ತಿ ಯಲ್ಲಿಯೂ ರೂಪಾದಿವಿಷಯಭಾನವಾಗಬೇಕು. ಆದರೆ ಅಲ್ಲಿ ಯಾವುದೂ ವಿಷಯ ವಾಗಿ ತೋರುವುದಿಲ್ಲ. ನಿರ್ವಿಷಯವೆಂದರೆ ಅದು ಜ್ಞಾನವೇ ಆಗಲಾರದು. ನಿರ್ವಿಷಯ ಜ್ಞಾನವೇ ಇಲ್ಲ. ವಿಷಯ ನಿರೂಪ್ಯವಾದದ್ದು ಜ್ಞಾನ ಇದು ಘಟದ ಜ್ಞಾನವೆಂದು ಅನುಭವ ಬಂದರೆ ಆಗ ಜ್ಞಾನಕ್ಕೆ ಘಟಾದಿಗಳೇ ವಿಷಯವಾಗಿರುತ್ತವೆ. ಘಟದ ಆತ್ಮ ನೆಂಬ ಅನುಭವವಿಲ್ಲ. ಜ್ಞಾನವು ವಿಷಯವನ್ನು ಪ್ರಕಾಶಿಸುತ್ತದೆ. ಘಟಾದಿ ವಿಷಯವು ಜ್ಞಾನ ಪ್ರಕಾಶ್ಯ. ವಿಷಯವು ಜ್ಞಾನವನ್ನು ನಿರೂಪಿಸುವುದರಿಂದ ಜ್ಞಾನನಿರೂಪಕವು ವಿಷಯ. ವಿಷಯ ನಿರೂಪ್ಯವಾದದ್ದು ಜ್ಞಾನ. ಹೀಗೆ ಜ್ಞಾನ ವಿಷಯಗಳಿಗೆ ಪ್ರಕಾಶ್ಯ

ಪ್ರಕಾಶಕ ಭಾವ ನಿರೂಪ್ಯನಿರೂಪಕ ಭಾವಸಂಬಂಧವಿರುತ್ತದೆ. 'ಸವಿಷಯತ್ವಸ್ಯಾಪ್ಯನುಭವಾತ್' ಎಂದು ಪಾಠವಿದೆ. ಆಗ ಪ್ರತಿ ಆತ್ಮನಲ್ಲಿಯೂ ಎಲ್ಲಾ ಜ್ಞಾನವೂ ಸವಿಷಯಕವಾಗಿಯೇ ಅನುಭೂತವಾಗುತ್ತದೆ ಎಂದರ್ಥ. ಹೀಗೆ ಜ್ಞಾನಸ್ವರೂಪವೆಂದರೆ ಅನುಪಪತ್ತಿ ಬರುವುದರಿಂದ ಜ್ಞಾನಾದಿಭಿನ್ನವಾಗಿ ಜ್ಞಾನಸುಖೇಚ್ಛಾದಿಗುಣವುಳ್ಳವನು ನಿತ್ಯನಾದ ಆತ್ಮನೆಂದು ಅಂಗೀಕರಿಸಬೇಕು. ಜ್ಞಾನವುಳ್ಳವನೇ ಆತ್ಮ.

ಸತ್ಯಂ ಜ್ಞಾನಮಿತಿ ಹಿ ಬ್ರಹ್ಮಪರಂ ಜೀವೇಷು ನೋಪಯುಜ್ಯತೇ । ಜ್ಞಾನಾಜ್ಞಾನಾ ಸುಖಿತ್ವಾದಿಭಿರ್ಜೀವಾನಾಂ ಭೇದಸಿದ್ಧೌ ಸುತರಾಮೀಶ್ವರ ಭೇದಃ । ಅನ್ಯಥಾ ಬಂಧಮೋಕ್ಷವ್ಯವಸ್ಥಾನುಪಪತ್ತೇಃ । ಯೋಽಪೀಶ್ವರಾಭೇದಬೋಧಕೋ ವೇದಃ । ಸೋಽಪಿತದಭೇದೇನ ತದೀಯತ್ವಂ ಪ್ರತಿಪಾದಯನ್ ಸ್ತೌತಿ । ಅಭೇದ ಭಾವನಯೈವ ಚ ಯತಿತವ್ಯಮಿತಿ ವದತಿ । ಅತ ಏವ 'ಸರ್ವ ಏವಾತ್ಮನಿ ಸಮರ್ಪಿತಾಃ' ಇತಿ ಶ್ರೂಯತೇ । ಮೋಕ್ಷದಶಾಯಾ ಮಜ್ಞಾನ ನಿವೃತ್ತಾವಭೇದೋ ಜಾಯತ ಇತ್ಯಪಿ ನ, ಭೇದಸ್ಯ ನಿತ್ಯತ್ವೇನ ನಾಶಾಽಯೋಗಾತ್ । ಭೇದಾನಾಶೇಽಪಿ ವ್ಯಕ್ತಿದ್ವಯಂ ಸ್ಥಾಸ್ಯತ್ಯೇವ । ನ ಚ ದ್ವಿತ್ವಮಪಿ ನಶ್ಯತಾಮಿತಿ ವಾಚ್ಯಮ್, ತವ ನಿರ್ಧರ್ಮಕೇ ಬ್ರಹ್ಮಣಿ ಸತ್ಯತ್ವಾಽಭಾವೇಽಪಿ ಸತ್ಯಸ್ವರೂಪಂ ತದಿತಿವತ್ ದ್ವಿತ್ವಾಭಾವೇಽಪಿ ವ್ಯಕ್ತಿದ್ವಯಾತ್ಮಕೌ ತಾವಿತಿ ಸುವಚತ್ವಾತ್ ॥

'ಸತ್ಯಂ ಜ್ಞಾನಂ'—ಎಂಬ ಶ್ರುತಿಯು ಅದ್ವೈತಬಹ್ಮಾತ್ಮ ಪಕ್ಷದಲ್ಲಿ ಪ್ರಮಾಣವಾಗಿ ಹೇಳಿರುವುದನ್ನು ಬೇರೆ ರೀತಿಯಿಂದ ವ್ಯಾಖ್ಯಾನಮಾಡಿ ತೋರಿಸುತ್ತಾನೆ. 'ಸತ್ಯಂ'—ಇತಿ. ಈ ಶ್ರುತಿಯು ಬ್ರಹ್ಮಸ್ವರೂಪವನ್ನು ಹೇಳುವುದಲ್ಲದೆ ಜೀವಸ್ವರೂಪ ನಿರ್ಣಾಯಕವಲ್ಲ.

ಜೀವ ಬ್ರಹ್ಮರಿಗೆ ಐಕ್ಯವಿರುವುದರಿಂದ ಈ ಶ್ರುತಿವಾಕ್ಯಕ್ಕೆ ಬೇರೆ ಅರ್ಥವನ್ನು ಕಲ್ಪಿಸಬಾರದು. ಜೀವನು ಜ್ಞಾನಭಿನ್ನನಾದರೆ ಈ ಶ್ರುತಿಗೆ ವಿರೋಧ ಬರುತ್ತದೆ ಎಂದರೆ ಜೀವಬ್ರಹ್ಮರಿಗೆ ಐಕ್ಯವೇ ಬಾಧಿತವೆಂದು ತೋರಿಸುತ್ತಾನೆ. 'ಸುಖಿತ್ವಾದಿಭಿ—' ಇತಿ. ಆದಿ ಪದದಿಂದ ದುಃಖಿತ್ವವನ್ನು ತೆಗೆದುಕೊಳ್ಳಬೇಕು. ಸುಖದುಃಖಾದಿಗಳಿಂದ ಜೀವಾತ್ಮರೇ ಅಸಂಖ್ಯಾತರಾಗಿ ಸಿದ್ಧವಾದ ಮೇಲೆ ಈಶ್ವರನು ಒಬ್ಬನೇ ಆದುದರಿಂದ ಏಕತ್ವಾನೇಕತ್ವಗಳಿಗೆ ಪರಸ್ಪರ ವಿರೋಧವಿರುವುದರಿಂದ ಅವರು ಅಭಿನ್ನರಲ್ಲ. ಈಶ್ವರನು ಸರ್ವಜ್ಞ, ಸರ್ವಶಕ್ತಿಯುಳ್ಳವನು, ಸರ್ವನಿಯಾಮಕ, ನಿತ್ಯಮುಕ್ತನು. ಜೀವನಾದರೋ ಅಲ್ಪಜ್ಞ. ಅಲ್ಪಶಕ್ತಿಯುಳ್ಳವನು, ದುಃಖಿ ನಿಯಾಮ್ಯ. ಹೀಗೆ ವಿರುದ್ಧಧರ್ಮವಿರುವ ಜೀವೇಶ್ವರರಿಗೆ ಐಕ್ಯಸಂಭವಿಸುವುದು ಹೇಗೆ ? 'ಜೀವೇಶೌ—ಭಿನ್ನೌ—ವಿರುದ್ಧಧರ್ಮಾಕ್ರಾಂತತ್ವಾತ್। ದಹನತುಹಿನವತ್' ಎಂದು ಅನುಮಾನದಿಂದ ಸಿದ್ಧವಾಗುತ್ತದೆ. ಹೀಗಿದ್ದರೂ ಒಂದೇ ಎಂದು ಹೇಳಿದರೆ ದಂಡ ತೋರಿಸುತ್ತಾನೆ. 'ಅನ್ಯಥಾ'—ಇತಿ. ಈಶ್ವರನಿಗೆ ಜೀವಸ್ವರೂಪ ಹೇಳುವುದಾದರೆ, ಜೀವರು ಈಶ್ವರಾಭಿನ್ನರಾದರೆ ಬಂಧಮೋಕ್ಷ

ವ್ಯವಸ್ಥಾಸಿದ್ಧಿಯಾಗಲಾರದು. ಒಬ್ಬನು ಸಂಸಾರಬದ್ಧನು, ಒಬ್ಬನು ಸಂಸಾರದಿಂದ ಮುಕ್ತನು ಎಂಬ ವ್ಯವಸ್ಥೆ ಸಿದ್ಧಿಸಲಾರದು. ಸರ್ವವೂ ಬ್ರಹ್ಮರೂಪವೆಂದಮೇಲೆ ಈ ವ್ಯವಸ್ಥೆಗೆ ಕಾರಣವೇನಿದೆ ?

ನಾನು ನನ್ನ ಅಭಿಪ್ರಾಯದಿಂದ ಹೇಳುವುದಿಲ್ಲ. 'ತತ್ತ್ವಮಸಿ' ಇತ್ಯಾದಿ ಶ್ರುತಿ ವಾಕ್ಯಗಳೇ ಜೀವಬ್ರಹ್ಮರಿಗೆ ಅಭೇದವನ್ನು ಉದ್ಘೋಷಿಸುತ್ತವೆ. 'ತತ್-ತ್ವಂ-ಅಸಿ' ಎಂದು ಛಾಂದೋಗ್ಯ ಉಪನಿಷತ್ತಿನಲ್ಲಿ ಹೇಳಿದ ಈ ವಾಕ್ಯದಲ್ಲಿ ಮೂರುಪದಗಳಿವೆ. ಪರೋಕ್ಷತ್ವಾದಿ ಧರ್ಮವಿಶಿಷ್ಟನಾದ ಈಶ್ವರನು ತತ್ಪದಕ್ಕೆ ಅರ್ಥ. ಅಪರೋಕ್ಷತ್ವಾದಿ ಧರ್ಮವಿಶಿಷ್ಟನಾದ ಜೀವನು ತ್ವಂಪದವಾಚ್ಯನು. ಇವೆರಡೂ ಸಮಾನವಿಭಕ್ತಿಕಗಳಾದುದರಿಂದ ಅಭೇದಾನ್ವಯಯೋಗ್ಯಗಳಾಗಿವೆ. ಆದರೆ ಎರಡು ಪದಗಳಿಂದ ತೋರುವ ಅರ್ಥಗಳಿಗೆ ಐಕ್ಯಹೇಳುವುದು ಅಸಾಧ್ಯವಾಗಿದೆ. ಆದರೆ ಪ್ರಮಾಣವಾದ ಶ್ರುತಿ ಅಭೇದವನ್ನು ಹೇಳುತ್ತಿದೆ. ಆಗ ಭಾಗತ್ಯಾಗಲಕ್ಷಣಾ ಮಾಡಬೇಕು. ತತ್ಪದದಲ್ಲಿರುವ ಸರ್ವಜ್ಞತ್ವ, ತ್ವಂಪದದಲ್ಲಿ ತೋರುವ ಅಲ್ಪಜ್ಞತ್ವ ಮೊದಲಾದ ವಿರುದ್ಧಧರ್ಮವನ್ನು ಬಿಡುವುದರಿಂದ ಚಿನ್ಮಾತ್ರಾಂಶದಲ್ಲಿ ಅಭೇದ ಸಮಂಜಸವಾಗುತ್ತದೆ. ಹೀಗೆ ಶ್ರುತಿಯೇ ಜೀವಬ್ರಹ್ಮರಿಗೆ ಐಕ್ಯ ಹೇಳುವಾಗ ವಿರೋಧಕ್ಕೆ ಅವಕಾಶವೆಲ್ಲಿ ? ಎಂದು ವೇದಾಂತಿಯು ಶಂಕಿಸಿದರೆ ಆಗ ತಾರ್ಕಿಕನು ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಯೋಽಪಿ—' ಇತಿ. ಈ ರೀತಿಯಾದ ಈಶ್ವರಾಭೇದಬೋಧಕ ಶ್ರುತಿಗಳೆಲ್ಲವೂ ಈಶ್ವರಾಭೇದವನ್ನು ಹೇಳುತ್ತಾ ತತ್ಸ್ವರೂಪವನ್ನೇ ಪ್ರತಿಪಾದಿಸುತ್ತಾ ಅರ್ಥವಾದ ರೂಪತ್ವವನ್ನು ಹೊಂದುತ್ತವೆ. ಈಶ್ವರ ಸಂಬಂಧಿಯಾದುದರಿಂದ ಸಾಕ್ಷಾದೀಶ್ವರನೆಂದೇ ಸ್ತುತಿಸುತ್ತದೆ. ವಾಸ್ತವ ಜೀವಬ್ರಹ್ಮೈಕ್ಯವನ್ನು ಹೇಳುವುದಿಲ್ಲ. ಈಶ್ವರಜೀವರಿಗೆ ನಿಯಾಮ್ಯ ನಿಯಾಮಕ ಭಾವಸಂಬಂಧ. ಈ ರೀತಿಯಾಗಿ ವೇದದಲ್ಲಿ ಅನೇಕಕಡೆ ಅಭೇದ ಹೇಳುವುದು ಅರ್ಥವಾದವೇ. 'ಆದಿತ್ಯೋ ಯೂಪಃ' ಎಂದು ಹೊಳೆಯುವ ಸಂಬಂಧದಿಂದ ಯೂಪಸ್ತಂಭವೇ ಸೂರ್ಯನೆಂದು ಹೇಳುತ್ತದೆ. ಆದರೆ ವಾಸ್ತವಭೇದ ಅಲ್ಲಿ ಪ್ರತ್ಯಕ್ಷಸಿದ್ಧವಾಗಿದೆ. ಹಾಗೆ ಹೇಳುವ ಉದ್ದೇಶವೇನು ? ಅಂದರೆ ಅಭೇದ ಭಾವನೆಯಿಂದ ಯತ್ನಿಸಬೇಕೆಂದು ತಿಳಿಸುವುದು. ಭಾವನಾ ಅಂದರೆ ಉಪಾಸನಾ—'ವಿಜಾತೀಯ ಪ್ರತ್ಯಯಾನಂತರಿತಃ ಸಮಾನಾಕಾರ ಪ್ರತ್ಯಯಪ್ರವಾಹಶ್ಚೇತಸೋನಿದಿಧ್ಯಾಸನಾಪರಪರ್ಯಾಯಾಭಿಧಃ' ಯಾವ ಇತರ ಜ್ಞಾನವಿಲ್ಲದೆ ಸಮಾನಾಕಾರವಾದ ಉಪಾಸ್ಯದೇವತಾಕಾರವಾದ ಮನೋವ್ಯಾಪಾರವೆಂದರ್ಥ. 'ವದತಿ—' ಇತಿ. ಈ ತಾತ್ಪರ್ಯಾರ್ಥವನ್ನು ಶ್ರುತಿಯು ಬೋಧಿಸುತ್ತದೆ ಎಂದರ್ಥ. ಆನಂದಬ್ರಹ್ಮನಲ್ಲಿ ಅತಿಶಯಾನುರಾಗವುಂಟಾಗಲು ಹಾಗೆ ಅಭೇದವನ್ನು ತಿಳಿಸುತ್ತದೆ. 'ಅತ ಏವ—' ಇತಿ. ಈಶ್ವರನಲ್ಲಿ ಪರಾನುರಕ್ತಿಸಂಪಾದನೆಗೋಸ್ಕರ ಅಭೇದವನ್ನು ಬೋಧಿಸುವುದರಿಂದ, 'ಸರ್ವೇ—ಇತಿ. ವಿವೇಕಿಯಾದ ಪುರುಷನು, ಸರ್ವಃ—ಪುತ್ರಶರೀರಾದಿಗಳನ್ನೂ ಮುಖ್ಯ ಆತ್ಮ ಸ್ವರೂಪವಾದ ತನ್ನನ್ನೂ ಆತ್ಮನಿ—ಪರಬ್ರಹ್ಮನಾದ ಈಶ್ವರನಲ್ಲಿ

ಸಮರ್ಪಯತಿ—ಬ್ರಹ್ಮಭಾವನೆಯಿಂದ ಉಪಾಸನಮಾಡುತ್ತಾನೆಂದರ್ಥ. ಹೀಗೆ ಶ್ರುತಿ ವಾಕ್ಯದಿಂದ ಶಾಬ್ದಬೋಧವಾದಮೇಲೆ ಅಭೇದ ಹೇಳುವುದು ಅಸಾಧ್ಯ.

ಭಟ್ಟಭಾಸ್ಕರಾದಿಗಳು ವ್ಯಾವಹಾರಿಕದಶೆಯಲ್ಲಿ ಭೇದವನ್ನೂ ಮುಕ್ತಿಯಲ್ಲಿ ಅಭೇದ ವನ್ನೂ ಹೇಳುತ್ತಾರೆ. ಅವರ ಮತವನ್ನಾಶಂಕಿಸಿ ಸಮಾಧಾನ ಹೇಳುತ್ತಾನೆ. 'ಮೋಕ್ಷ ದಶಾಯಾಂ'—ಇತಿ. ತತ್ವಜ್ಞಾನದ ಅವ್ಯವಹಿತೋತ್ತರ ಕಾಲದಲ್ಲಿ ಮಿಥ್ಯಾಜ್ಞಾನ ಹೊರಟು ಹೋದಮೇಲೆ ಜೀವಬ್ರಹ್ಮರಿಗೆ ಐಕ್ಯವುಂಟಾಗುತ್ತದೆಂದು ಹೇಳುವುದೂ ಸಮಂಜಸವಲ್ಲ. ಅದಕ್ಕೆ ಕಾರಣ ತೋರಿಸುತ್ತಾನೆ 'ಭೇದಸ್ಯ'—ಇತಿ. ಅನ್ಯೋನ್ಯಾ ಭಾವ ನಿತ್ಯವಾದುದರಿಂದ ಅದಕ್ಕೆ ನಾಶ ಸಂಭವಿಸುವುದಿಲ್ಲ, ಜೀವನು ಈಶ್ವರನಲ್ಲವೆಂಬ ಅನ್ಯೋನ್ಯಾಭಾವ ನಿತ್ಯವಾಗಿದೆ. 'ಭೇದನಾಶೇ—' ಇತಿ. ನಿನ್ನ ಮತದಂತೆ (ಅನ್ಯೋನ್ಯಾಭಾವವನ್ನು ಒಪ್ಪುವುದಿಲ್ಲ.) ಭೇದನಾಶವಾದರೂ ಜೀವಬ್ರಹ್ಮರೂಪ ವ್ಯಕ್ತಿದ್ವಯವು ಉಳಿದೇ ಉಳಿಯುತ್ತದೆ. ಅಪೇಕ್ಷಾ ಬುದ್ಧಿನಾಶವಾದಾಗ ದ್ವಿತ್ವನಾಶ ವಾಗುತ್ತದೆ ಆದರೆ ಅಲ್ಲಿ ವ್ಯಕ್ತಿದ್ವಯ ಇದ್ದೇ ಇರುತ್ತದೆ. ಅದರಂತೆ ಅಜ್ಞಾನನಾಶ ವಾದರೂ ವ್ಯಕ್ತಿದ್ವಯವಿರಲು ಯಾವ ಬಾಧಕವೂ ಇಲ್ಲ.

ವ್ಯಕ್ತಿದ್ವಯವಿದ್ದರೂ ಮೋಕ್ಷದಶೆಯಲ್ಲಿ ದ್ವಿತ್ವವಿರುವುದಿಲ್ಲ ಎಂದು ಆಶಂಕಿಸಿದರೆ ಅದಕ್ಕೂ ಸಮಾಧಾನ ತೋರಿಸುತ್ತಾನೆ. 'ನಚ—' ಇತಿ. ನಿನ್ನ ಮತದಲ್ಲಿ ಬ್ರಹ್ಮ ನಿರ್ಧರ್ಮಕ ಅಂದರೆ ನಿರ್ವಿಶೇಷನು. ಸಕಲಧರ್ಮಶೂನ್ಯನೆಂದ ಮೇಲೆ ಅವನಲ್ಲಿ ಸತ್ಯತ್ವಾಭಾವವು ಇದೆಯೆನ್ನಬೇಕು. ಸತ್ಯತ್ವಾಭಾವವಿರುವವನಾದರೂ ಸತ್ಸ್ವರೂಪ ನೆಂದು ನೀನು ಒಪ್ಪಿದಂತೆ ನಾನು ದ್ವಿತ್ವಧರ್ಮವಿಲ್ಲದಿದ್ದರೂ ಜೀವೇಶ್ವರರು ಬೇರೆ ಬೇರೆ ಸ್ವರೂಪವುಳ್ಳವರಾದುದರಿಂದ ವ್ಯಕ್ತಿದ್ವಯಸ್ವರೂಪರು ಎಂದು ಹೇಳುತ್ತೇನೆ. ಈ ವಿಷಯ ದಲ್ಲಿ ಸಮಾನಯೋಗಕ್ಷೇಮವಿರುವುದರಿಂದ ಪ್ರಶ್ನೆಗೆ ಅವಕಾಶವಿಲ್ಲ.

ಮಿಥ್ಯಾತ್ವಾಭಾವೋಽಧಿಕರಣಾತ್ಮಕಸ್ತತ್ರ ಸತ್ಯತ್ವಮಿತಿ ಚೇದೇಕತ್ವಾಭಾವೋ ವ್ಯಕ್ತಿ ದ್ವಯಾತ್ಮಕೋ ದ್ವಿತ್ವಮಿತ್ಯಪ್ಯುಚ್ಯತಾಮ್ । ಪ್ರತ್ಯೇಕಮೇಕತ್ವೇಽಪಿ ಪೃಥಿವೀಜಲ ಯೋರ್ನಗಂಧಃ ಇತಿವದುಭಯಂ ನೈಕಮಿತ್ಯಸ್ಯ ಸರ್ವಜನಸಿದ್ಧತ್ವಾತ್ । ಯೋಽಪಿ ತದಾನೀಮಭೇದಶ್ರುತಿಪಾದಕೋ ವೇದಃ ಸೋಽಪಿ ನಿರ್ದುಃಖತ್ವಾ ದಿನಾ ಸಾಮ್ಯಂ ಪ್ರತಿಪಾದಯತಿ । ಸಂಪದಾಧಿಕ್ಯೇ ಪುರೋಹಿತೋಽಯಂ ರಾಜಾಸಂವೃತ್ತ ಇತಿವತ್ । ಅತ ಏವ 'ನಿರಂಜನಃ ಪರಮಂ ಸಾಮ್ಯಮುಪೈತಿ' ಇತಿ ಶ್ರೂಯತೇ ॥

ವೇದಾಂತಿಯು ಆಶಂಕಿಸುತ್ತಾನೆ—ತಾರ್ಕಿಕನು ಹೇಳುವಂತೆ ಬ್ರಹ್ಮನಲ್ಲಿ ನಾವು ಸತ್ಯತ್ವವನ್ನು ಹೇಳುವುದಿಲ್ಲ. 'ಯಾವುದು ಮಿಥ್ಯೆಯೋ (ಸುಳ್ಳೊ) ಅದು ಅಸತ್' ಎಂದು ವ್ಯಾಪ್ತಿ. ಮಿಥ್ಯಾತ್ವಾಭಾವವೇ ಬ್ರಹ್ಮನಲ್ಲಿರುವ ಸತ್ಯತ್ವ. ಘಟನಾಶವೆಂದರೆ ಅಧಿಕರಣವಾದ ಮಣ್ಣಿನ ಸ್ವರೂಪವಾಗುತ್ತದೆ. ಹಾಗೆ ಕಲ್ಪಿತವಸ್ತುನಾಶವೆಂದರೆ ಅದು

ಅಧಿಕರಣಸ್ವರೂಪವಾಗುತ್ತದೆ. ಪ್ರಪಂಚ ಬ್ರಹ್ಮನಲ್ಲಿ ಕಲ್ಪಿತವಾದುದರಿಂದ ಅದರ ನಾಶವೆಂದರೆ ಬ್ರಹ್ಮ ಸ್ವರೂಪವೇ ಆಗುತ್ತದೆ. ಆದುದರಿಂದ ಸತ್ಯತ್ವಸ್ವರೂಪವೇ ಬೇರೆ ಎಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಏಕತ್ವಾಭಾವ'—ಇತಿ. ವೇದಾಂತಿಮತದಲ್ಲಿ ಮಿಥ್ಯಾಪ್ರಪಂಚಭಾವಕ್ಕೆ ಅಧಿಕರಣವಾದ ಬ್ರಹ್ಮವೇ ಸತ್ಸ್ವರೂಪ. ಇದಕ್ಕಿಂತ ಸತ್ಯತ್ವ ಬೇರೆ ಇಲ್ಲ. ಅದರಂತೆ ಏಕತ್ವಾಭಾವ ಸ್ವರೂಪವೇ ವ್ಯಕ್ತಿದ್ವಯಾತ್ಮಕವಾದ ದ್ವಿತ್ವವಲ್ಲದೆ ಬೇರೆ ಯಾವುದೂ ಅಲ್ಲ. ಸರ್ವಥಾ ಮೋಕ್ಷದಲ್ಲಿ ಜೀವಬ್ರಹ್ಮರಿಗೆ ಐಕ್ಯ ಹೇಳುವುದು ಅಸಾಧ್ಯ. ಇದನ್ನೇ ದೃಷ್ಟಾಂತದಿಂದ ಸಮರ್ಥಿಸುತ್ತಾನೆ. 'ಪ್ರತ್ಯೇಕಂ'—ಇತಿ. ಗಂಧ ಪೃಥಿವೀಗುಣ. ಜಲಗುಣವಲ್ಲ. ಆದರೆ 'ಪೃಥಿವೀ ಜಲಗಳಲ್ಲಿ ಗಂಧವಿಲ್ಲ' ಎಂದು ವ್ಯವಹಾರವಿದೆ. ಇದರಿಂದ ಪೃಥಿವಿಯಲ್ಲಿಯೂ ಗಂಧವಿಲ್ಲವೆಂದು ತಾತ್ಪರ್ಯವಲ್ಲ. ಪೃಥಿವಿಯಲ್ಲಿಯೇ ಗಂಧ ಇರುವುದು. ಪ್ರತ್ಯೇಕ ವ್ಯಕ್ತಿಗಳಲ್ಲಿ ಏಕತ್ವ ಇದ್ದರೂ (ಅಭೇದ) 'ಉಭಯಂ ನೈಕಂ' ಎಂದು ಪ್ರಸಿದ್ಧವಾಗಿದೆ. ಏಕತ್ವವದನ್ಯೋನ್ಯಾಭಾವವು ಉಭಯತ್ವ ರೂಪ ವ್ಯಾಸಜ್ಯ ವೃತ್ತಿಧರ್ಮಾವಚ್ಛಿನ್ನದಲ್ಲಿ ಬರುತ್ತದೆ. (ತದನುಯೋಗಿತಾಕವಾಗುತ್ತದೆ.) ಗಂಧಾತ್ಯಂತಾಭಾವವು ಪೃಥಿವೀಜಲತ್ವೋಭಯತ್ವ ರೂಪ ವ್ಯಾಸಜ್ಯವೃತ್ತಿ ಧರ್ಮಾವಚ್ಛಿನ್ನಾನುಯೋಗಿತಾಕವಾಗುತ್ತದೆ. ಅಭೇದಬೋಧಕ ಶ್ರುತಿಗೆ ತಾತ್ಪರ್ಯ ತೋರಿಸುತ್ತಾನೆ. 'ಯೋಽಪಿ'—ಇತಿ. ತದಾನೀಂ—ಮೋಕ್ಷ ಕಾಲದಲ್ಲಿ, ಅಭೇದ ಪ್ರತಿಪಾದಕಃ—ಜೀವಬ್ರಹ್ಮರಿಗೆ ಐಕ್ಯಪ್ರತಿಪಾದಕವಾದ, ವೇದಃ—'ಬ್ರಹ್ಮವೇದ ಬ್ರಹ್ಮೈವ ಭವತಿ' ಇತ್ಯಾದ್ಯಾಗಮಗಳು ಏನಿದೆಯೋ ಅದು ನಿರ್ದುಃಖತ್ವಾದಿನಾ—ನಿರ್ದುಃಖತ್ವಾದಿ ವಿಶಿಷ್ಟಾತ್ಮತ್ವರೂಪದಿಂದ ಸಾಮ್ಯಂ—ಬ್ರಹ್ಮಸಾಮ್ಯವನ್ನು ಅಭೇದರೂಪದಿಂದ ಪ್ರತಿಪಾದಿಸುತ್ತದೆ. ಅಭೇದಬೋಧನ ವಾಸ್ತವವಲ್ಲ. ಸಾಮ್ಯ ಬೋಧನವೇ ವಾಸ್ತವಿಕಾರ್ಥ.

ಸಾಮ್ಯಬೋಧನಾಭಿಪ್ರಾಯದಿಂದ ಏಕತ್ವ ಹೇಳುವ ವಿಷಯದಲ್ಲಿ ದೃಷ್ಟಾಂತ ತೋರಿಸುತ್ತಾನೆ. 'ಸಂಪದಾಧಿಕ್ಯೇ—' ಇತಿ. ಅಧಿಕಹಣವುಳ್ಳ ರಾಜಪುರೋಹಿತನು ರಾಜನಲ್ಲದಿದ್ದರೂ 'ಇವನು ರಾಜನು' ಎಂಬ ಅಮುಖ್ಯವ್ಯವಹಾರ ಲೋಕಪ್ರಸಿದ್ಧವಾಗಿದೆ. ಹಾಗೆಯೇ ಬ್ರಹ್ಮನಾಗದಿದ್ದರೂ ಮಿಥ್ಯಾಜ್ಞಾನನಿವೃತ್ತನಾದ ಜೀವನಲ್ಲಿ 'ಇವನೇ ಬ್ರಹ್ಮನು' ಎಂಬ ವ್ಯವಹಾರ ಸಂಗತವಾಗಿದೆ. ಇದಕ್ಕೆ ಉಪಷ್ಟಂಭಕವಾದ ಶ್ರುತಿಯನ್ನು ತೋರಿಸುತ್ತಾನೆ. 'ನಿರಂಜನಃ—' ಇತಿ. ದುಃಖರಹಿತನಾಗಿ ಅಪುನರ್ಭವರೂಪ ಮೋಕ್ಷವನ್ನು ಹೊಂದುತ್ತಾನೆ ಎಂದರ್ಥ..

ಈಶ್ವರೋಽಪಿ ನ ಜ್ಞಾನಸುಖಾತ್ಮಾ ಕಿಂತು ಜ್ಞಾನಾದ್ಯಾಶ್ರಯಃ । 'ನಿತ್ಯಂ ವಿಜ್ಞಾನಮಾನಂದಂ ಬ್ರಹ್ಮ' (ಬೃಹ-೫-೯-೭) ಇತ್ಯಾದೌ ವಿಜ್ಞಾನಪದೇನ ಜ್ಞಾನಾಶ್ರಯ ಏವೋಕ್ತಃ । 'ಯಃ ಸರ್ವಜ್ಞಃ ಸ ಸರ್ವವಿತ್' (ಮುಂ-೧-೯) ಇತ್ಯನುರೋಧಾತ್ । ಆನಂದಮಿತ್ಯಸ್ಯಾನಂದವದಿತ್ಯರ್ಥಃ । ಅರ್ಶ-ಆದಿತ್ವಾನ್ಮತ್ವರ್ಥೀಯ

ಯೋಽಚ್ಪ್ರತ್ಯಯಃ । ಅನ್ಯಥಾ ಪುಲ್ಲಿಂಗತ್ವಾಪತ್ತೇಃ । ಆನಂದೋಽಪಿ ದುಃಖಾಭಾವೇ ಉಪಚರ್ಯತೇ, ಭಾರಾದ್ಯಪಗಮೇ ಸುಖೀಸಂವೃತ್ತೋಽಹಮಿತಿವತ್, ದುಃಖಾಭಾವೇನ ಸುಖಿತ್ವಪ್ರತ್ಯಯಾತ್ । ಅಸ್ತು ವಾ ತಸ್ಮಿನ್ನಾನಂದೋ ನತ್ವಸಾವಾನಂದಃ 'ಅಸುಖಮ್' ಇತಿ ಶ್ರುತೇಃ । ನ ವಿದ್ಯತೇ ಸುಖಂ ಯಸ್ಯೇತಿ ಕೂತೋ ನಾರ್ಥ ಇತಿಚೇನ್ನ, ಕ್ಲಿಷ್ಟಕಲ್ಪನಾಪತ್ತೇಃ । ಪ್ರಕರಣವಿರೋಧಾದಾನಂದಮಿತ್ಯತ್ರ ಮತ್ವರ್ಥೀಯಾಚ್ಪ್ರತ್ಯಯವಿರೋಧಾಚ್ಚೇತಿ ಸಂಕ್ಷೇಪಃ ॥

ಈಶ್ವರನು ಜ್ಞಾನಸುಖಸ್ವರೂಪನೆಂದು ವೇದಾಂತಿಯು ಹೇಳುವುದು ಸಮಂಜಸವಲ್ಲವೆಂದು ತೋರಿಸುತ್ತಾನೆ. 'ಈಶ್ವರಃ—' ಇತಿ. ಜೀವನು ಹೇಗೆ ಜ್ಞಾನಸ್ವರೂಪನಲ್ಲವೋ ಅದರಂತೆ ಈಶ್ವರನೂ ಜ್ಞಾನಸ್ವರೂಪನಲ್ಲ. 'ಕಿಂತು—' ಇತಿ. ಜ್ಞಾನಾಶ್ರಯನು ಈಶ್ವರ. ಹಾಗಾದರೆ ವಿಜ್ಞಾನಸ್ವರೂಪಬೋಧಕ ಶ್ರುತಿಗೆ ಅಪ್ರಾಮಾಣ್ಯ ಬರುವುದಿಲ್ಲವೇ ? ಅಂದರೆ ಆರೀತಿ ಶ್ರುತಿಗೆ ವಾಸ್ತವಾರ್ಥ ತಿಳಿಸುತ್ತಾನೆ. 'ವಿಜ್ಞಾನಂ' —ಎಂಬುದು ಬೃಹದಾರಣ್ಯಕೋಪನಿಷತ್ತಿನ ವಾಕ್ಯ. ಅಲ್ಲಿ ವಿಜ್ಞಾನಪದಕ್ಕೆ ಜ್ಞಾನಾಶ್ರಯ ಎಂದೇ ಅರ್ಥ. 'ವಿಜ್ಞಾನಮಸ್ಮಿನ್ ಅಸ್ತಿ' ಇತಿ ವಿಜ್ಞಾನಂ ಎಂಬ ವ್ಯುತ್ಪತ್ತಿಯಿಂದ ಈ ಅರ್ಥ ಸಿದ್ಧವಾಗುತ್ತದೆ. 'ಕರಣಾಧಿಕರಣಯೋಶ್ಚ' (ಪಾ. ಸೂ-೩-೩-೧೧೭ ಸೂತ್ರದಿಂದ ಅಧಿಕರಣಾರ್ಥದಲ್ಲಿ ಜ್ಞಾಧಾತುವಿಗೆ ಲ್ಯುಟ್ ಬಂದಿದೆ. ಈ ಅರ್ಥದಲ್ಲಿ ಮುಂಡಕೋಪನಿಷತ್ತಿನ ವಾಕ್ಯವನ್ನು ಪ್ರಮಾಣವಾಗಿ ತೋರಿಸುತ್ತಾನೆ. 'ಯಃ ಸರ್ವಜ್ಞಃ—' ಇತಿ. ಜ್ಞಾನವುಳ್ಳವನೆಂದರ್ಥ. ಭಾವಾರ್ಥದಲ್ಲಿ ಲ್ಯುಟ್ ಹೇಳಿ ವಿಜ್ಞಾನಪದಕ್ಕೆ ಜ್ಞಾನವೆಂದೇ ಅರ್ಥ ಹೇಳುವುದಾದರೆ ಆಗ ಈ ಶ್ರುತಿಗೆ ವಿರೋಧ ಬರುತ್ತದೆ. ಹೀಗೆ ಜ್ಞಾನಬ್ರಹ್ಮರಿಗೆ ಗುಣಗುಣಿಭಾವವಿರುವುದಾದರೆ 'ವಿಜ್ಞಾನಮಾನಂದಂ ಬ್ರಹ್ಮ' ಎಂಬ ಶ್ರುತಿವಾಕ್ಯದಲ್ಲಿರುವ ಆನಂದಪದಕ್ಕೆ ಗತಿಯೇನು ? ಎಂಬ ಶಂಕಗೆ ಸಮಾಧಾನ ತೋರಿಸುತ್ತಾನೆ. 'ಆನಂದಮಿ—' ಇತಿ. ಆನಂದಪದದ ಮೇಲೆ ಮತ್ವರ್ಥದಲ್ಲಿ 'ಅರ್ಶ ಆದಿಭ್ಯೋಽಚ್' (ಪಾ-ಸೂ ೫-೨-೧೨೭) ಸೂತ್ರದಿಂದ ಅಚ್ಪ್ರತ್ಯಯ ಬಂದಿದೆ. 'ಆನಂದಃ ಅಸ್ಯ ಅಸ್ತಿ.' ಆನಂದವುಳ್ಳವನೆಂದರ್ಥ. 'ಅನ್ಯಥಾ—' ಇತಿ. ಹೀಗೆ ಆನಂದವತ್ ಎಂಬ ಅರ್ಥ ಹೇಳದೇ ಹೋದರೆ ಸುಖವಾಚಕವಾದ ಆನಂದಪದವು ಪುಲ್ಲಿಂಗವಾದುದರಿಂದ ಆನಂದಂ ಎಂಬ ನಪುಂಸಕ ನಿರ್ದೇಶ ಸಂಗತವಾಗಲಾರದು. ಈಗ ಮತ್ವರ್ಥದಲ್ಲಿ ಅಚ್ಪ್ರತ್ಯಯಮಾಡಿರುವುದರಿಂದ ಬ್ರಹ್ಮಪದನಪುಂಸಕವಾದುದರಿಂದ ಅದಕ್ಕೆ ಇದು ವಿಶೇಷಣವಾದುದರಿಂದ ನಪುಂಸಕ ನಿರ್ದೇಶ ಸಂಗತವಾಗುತ್ತದೆ.

'ಆನಂದವತ್' ಎಂದು ಅರ್ಥಕಲ್ಪನ ಮಾಡುವುದೂ ಸರಿಯಾಗುವುದಿಲ್ಲ. ಈಶ್ವರನಲ್ಲಿಯೂ ಆನಂದವಿಲ್ಲ. ಸುಖವು ಪುಣ್ಯಫಲವೆಂದು ಪ್ರಸಿದ್ಧವಾಗಿದೆ. ವಿಹಿತಕ್ರಿಯಾಜನ್ಯವಾದ ಧರ್ಮವೇ ಪುಣ್ಯ. ವಿಹಿತಕ್ರಿಯೆಂದರೆ ಯಾಗಾದಿಗಳು. ಈಶ್ವರನು ಯಾಗಾದಿಕರ್ಮಗಳನ್ನು ಮಾಡುವುದಿಲ್ಲ. ಪುಣ್ಯಾಪುಣ್ಯ ಅವನಿಗಿಲ್ಲದಮೇಲೆ ಆನಂದ

ಬರುವುದು ಹೇಗೆ ? ಎಂದು ಆಶಂಕಿಸಿದರೆ ಅದಕ್ಕೆ ಸಮಾಧಾನ. 'ಆನಂದೋಽಪಿ'— ಇತಿ. ದುಃಖಾಭಾವವೇ ಪ್ರವೃತ್ತಿನಿಮಿತ್ತ. ಇದನ್ನು ಇಟ್ಟುಕೊಂಡು ಈಶ್ವರನಲ್ಲಿ ಆನಂದವು ಹೇಳಿದೆ. ಲಕ್ಷಣಾವೃತ್ತಿಯಿಂದ ಆನಂದಪದವು ದುಃಖಾಭಾವವನ್ನು ತಿಳಿಸುತ್ತದೆ. ಸಮವಾಯಸಂಬಂಧದಿಂದ ಆನಂದ ವಿಶಿಷ್ಟನಾದವನು ಎಂದರ್ಥ ಹೇಳುವುದಿಲ್ಲವಾದುದರಿಂದ ಪೂರ್ವೋಕ್ತದೋಷಕ್ಕೆ ಅವಕಾಶವಿಲ್ಲ. ಇದನ್ನು ದೃಷ್ಟಾಂತದಿಂದ ಸ್ಪಷ್ಟಪಡಿಸುತ್ತಾನೆ. 'ಭಾರಾದ್ಯಪಗಮೆ'—ಇತಿ. ಭಾರಾತಿಶಯದಿಂದ ವ್ಯಥೆಯಾಗಿತ್ತು. ಭಾರ ಇಳಿಸಿದ ಮೇಲೆ ಸುಖ ಹೊಂದಿದೆ ಎನ್ನುತ್ತಾನೆ. ದುಃಖಾಭಾವವುಂಟಾಯಿತೆಂದೇ ಅರ್ಥ. ಇತರ ಸುಖ ಯಾವುದೂ ಆಗಿಲ್ಲ. ಮುಖ್ಯಾರ್ಥಸಂಭವಿಸುವಾಗ ಜಘನ್ಯವಾದ ಲಕ್ಷಣಾವೃತ್ತಿಕಲ್ಪನೆ ಸಮಂಜಸವಲ್ಲವೆಂದು ತೋರಿಸುತ್ತಾನೆ. 'ಅಸ್ತುವಾ'— ಇತಿ. ಅವನಲ್ಲಿ ನಿತ್ಯಸುಖವಿರಲಿ. ಆದರೆ ಅವನೇ ಸುಖರೂಪನಲ್ಲ. ಆನಂದ ಬ್ರಹ್ಮರಿಗೆ ಅಭೇದವಿಲ್ಲವೇ ಇಲ್ಲವೆಂಬುದರಲ್ಲಿ ಶ್ರುತಿಪ್ರಮಾಣ ತೋರಿಸುತ್ತಾನೆ. 'ಅಸುಖ'— ಇತಿ. 'ನ ಸುಖಮ್' ಅಸುಖಮ್. ನಞತತ್ಪುರುಷಸಮಾಸ ಹೇಳಿರುವುದರಿಂದ ಇದು ಬ್ರಹ್ಮನಿಂದ ಸುಖ ಬೇರೆ ಎಂದು ಸ್ಪಷ್ಟವಾಗಿ ತಿಳಿಸುತ್ತದೆ.

ವೇದಾಂತಿಯು ಆಶಂಕಿಸುತ್ತಾನೆ. ನ ವಿದ್ಯತೇ'—ಇತಿ. ನಞ್ ತತ್ಪುರುಷವನ್ನೇ ಏಕೆ ಆಶ್ರಯಿಸಬೇಕು. ಯಾರಿಗೆ ಸುಖವಿಲ್ಲವೋ ಅವನು ಅಸುಖ ಎಂದು ಬಹುವ್ರೀಹಿಯನ್ನು ಏಕೆ ಆಶ್ರಯಿಸಬಾರದು ? ಎಂದರೆ ಅದಕ್ಕೆ ಸಮಾಧಾನ. 'ನ—' ಇತಿ. ಬಹುವ್ರೀಹಿಯನ್ನು ಅಂಗೀಕರಿಸಿದರೆ ಲಕ್ಷಣಾವೃತ್ತಿಯನ್ನು ಆಶ್ರಯಿಸಬೇಕಾಗುತ್ತದೆ. ಅನ್ಯಪದಾರ್ಥ ಪ್ರಧಾನ ಬಹುವ್ರೀಹಿ. ನಞ್‌ಗೆ ಅನ್ಯಪದಾರ್ಥದಲ್ಲಿ ಲಕ್ಷಣಾ ಕಲ್ಪಿಸುವುದೇ ಕ್ಲಿಷ್ಟಕಲ್ಪನಾ. ತತ್ಪುರುಷದಲ್ಲಿ ಈ ದೋಷವಿಲ್ಲ. ಇನ್ನು ಪ್ರಕರಣ ವಿರೋಧವೂ ಬರುತ್ತದೆ. ಬೃಹದಾರಣ್ಯಕದಲ್ಲಿ ಅಸ್ಥೂಲಾದಿಪದಗಳಲ್ಲಿ ನಞ್‌ತತ್ಪುರುಷವೇ ಮಾಡಿರುವಾಗ ಅದರ ಮಧ್ಯದಲ್ಲಿ ಇದೊಂದು ಪದಕ್ಕೆ ಬಹುವ್ರೀಹಿಕಲ್ಪನೆ ಮಾಡುವುದು ನ್ಯಾಯವೂ ಅಲ್ಲ. ಇನ್ನೊಂದು ವಿರೋಧವನ್ನು ತೋರಿಸುತ್ತಾನೆ. 'ಆನಂದ'—ಇತಿ. ಆನಂದ ಪದಕ್ಕೆ ಆನಂದವುಳ್ಳವನೆಂದು ಅರ್ಥಕಲ್ಪಿಸಿರುವಾಗ ಅಸುಖಂ ಎಂಬಲ್ಲಿ ಸುಖವಿಲ್ಲದಿರುವವನೆಂದು ಬಹುವ್ರೀಹಿಕಲ್ಪನ ಮಾಡಿದರೆ ಪೂರ್ವಾಪರ ವಿರೋಧ ಬರುತ್ತದೆ. 'ಸಂಕ್ಷೇಪಃ'—'ಆನಂದಂಬ್ರಹ್ಮಣೋವಿದ್ವಾನ್' ಇತ್ಯಾದಿ ಶ್ರುತಿಗಳೂ ಕೂಡಾ ಭೇದವಾದಿಗಳಿಗೆ ಅನುಕೂಲವಾಗಿವೆ ಎಂದರ್ಥ. ಹೀಗೆ ಯುಕ್ತ್ಯಾದಿಗಳಿಂದ ಈಶ್ವರನೇ ಬೇರೆ ಜೀವರೇ ಬೇರೆಯೆಂದು ಸಿದ್ಧವಾಗುತ್ತದೆ.

ವೇದಾಂತ ಮತದ ಸಾರ. ಸತ್, ಚಿತ್, ಆನಂದ ಸ್ವರೂಪವಾದ ಅದ್ವೈತ ಬ್ರಹ್ಮವೊಂದೇ ಪರಮಾರ್ಥ ಸತ್ಯವಾದದ್ದು. ಇದಕ್ಕಿಂತ ಬೇರೆಯಾದುದೆಲ್ಲ ಶುಕ್ತಿರಜತದಂತೆ ತೋರಿಕೆಗೆ ಮಾತ್ರ ಇದ್ದು ಭ್ರಾಂತಿವಿಲಸಿತವಾಗಿ ಮಿಥ್ಯೆಯಾಗಿರುತ್ತದೆ. ಎಲ್ಲಿ ಯಾವುದರ ಅತ್ಯಂತಾಭಾವವು ಇದ್ದು ತೋರುತ್ತಿರುವುದೋ ಅದೇ ಮಿಥ್ಯೆ ಇದಕ್ಕೆ ಪ್ರಾತಿಭಾಸಿಕವೆಂದು ಹೆಸರು. ಬ್ರಹ್ಮ ಒಂದಾಗಿದ್ದರೂ ಉಪಾಧಿವಶದಿಂದ ಜೀವಭಾವ

ವನ್ನು ಹೊಂದಿದಂತಿದೆ. ಉಪಾಧಿಗಳು ಅನೇಕವಾದುದರಿಂದ ಜೀವರೂ ನಾನಾ ಆಗಿ ತೋರುತ್ತಾರೆ. ಆಕಾಶ ಒಂದಾದರೂ ಘಟಮಠಾದಿ ಉಪಾಧಿಗಳಿಂದ ಅನೇಕವಾಗಿ ತೋರಿದಂತೆ ನಾನಾ ಪ್ರಪಂಚ ತೋರುತ್ತದೆ. ಆ ಉಪಾಧಿ ಮಾಯಾ, ಅವಿದ್ಯಾ ಎಂದು ಎರಡು ವಿಧ. ಮಾಯಾ ಉಪಾಧಿಕವಾದ ಚೈತನ್ಯವೇ ಈಶ್ವರ. ಅವಿದ್ಯಾ ಉಪಾಧಿಯಾಗಿರುವ ಚೈತನ್ಯವೇ ಜೀವ. ರಾಗದ್ವೇಷಾದಿ ಸಂಬಂಧದಿಂದ ಬಂದಿರುವ ಸಂಸಾರವೇ ಬಂಧ. ಅವಿದ್ಯೆಯೇ ಅದಕ್ಕೆ ಕಾರಣ. ಜೀವನಿಗೆ ಬ್ರಹ್ಮಸ್ವರೂಪಾ ವಿರ್ಭಾವವೇ ಮೋಕ್ಷ. 'ತತ್ತ್ವಮಸಿ' ಇತ್ಯಾದಿ ಮಹಾವಾಕ್ಯದಿಂದ ಉಂಟಾದ 'ಅಹಂ 'ಬ್ರಹ್ಮಾಸ್ಮಿ' ಎಂಬ ಅಖಂಡಾಕಾರವೃತ್ತಿಯೇ ಬ್ರಹ್ಮವಿದ್ಯೆ. ಇದು ಸಮೂಲವಾಗಿ ಸಂಸಾರಬಂಧವನ್ನು ನಾಶಮಾಡುತ್ತದೆ. ಮೋಕ್ಷವೇ ಪರಮಪುರುಷಾರ್ಥ. ಇದನ್ನು ಯುಕ್ತಿಯಿಂದ ತಾರ್ಕಿಕನು ಖಂಡಿಸಿ ಸ್ವಮತವನ್ನು ಸ್ಥಾಪಿಸಿರುತ್ತಾನೆ.

ಏತೇನ ಪ್ರಕೃತಿಃ ಕರ್ತ್ರೀ ಪುರುಷಸ್ತು ಪುಷ್ಕರಪಲಾಶವನ್ನಿರ್ಲೇಪಃ, ಕಿಂತು ಚೇತನಃ । ಕಾರ್ಯಕಾರಣಯೋರಭೇದಾತ್ ಕಾರ್ಯನಾಶೇ ಸತಿ ಕಾರ್ಯರೂಪ ತಯಾ ತನ್ನಾಶೋ ನ ಸ್ಯಾದಿತ್ಯಕಾರಣತ್ವಂ ತಸ್ಯ । ಬುದ್ಧಿಗತಚೈತನ್ಯಾಭಿ ಮಾನಾನ್ಯಥಾನುಪಪತ್ತ್ಯಾ ತತ್ ಕಲ್ಪನಮ್ । ಬುದ್ಧಿಶ್ಚ ಪ್ರಕೃತೇಃ (ಪ್ರಥಮಃ) ಪರಿಣಾಮಃ । ಸೈವ ಮಹತ್ತತ್ತ್ವಮಂತಃಕರಣಮಿತ್ಯುಚ್ಯತೇ । ತತ್ಸತ್ತ್ವಾಸ ತ್ತ್ವಾಭ್ಯಾಂ ಪುರುಷಸ್ಯ ಸಂಸಾರಾಪವರ್ಗೌ, ತಸ್ಯಾ ಏವೇಂದ್ರಿಯ ಪ್ರಣಾಲಿ ಕಯಾ ಪರಿಣತಿರ್ಜ್ಞಾನರೂಪಾ ಘಟಾದಿನಾ ಸಂಬಂಧಃ ॥

ಸಾಂಖ್ಯಮತವನ್ನು ದೂಷಿಸಲು ಅದರ ಸ್ವರೂಪವನ್ನು ತೋರಿಸುತ್ತಾನೆ. 'ಏತೇನ—' ಇತಿ. ಇದಕ್ಕೆ 'ಅಪಾಸ್ತಂ' ಎಂಬಲ್ಲಿ ಅನ್ವಯ. ಏತೇನ—ಆತ್ಮನು ಜ್ಞಾನವುಳ್ಳವನು ಎಂದು ಸಾಧಿಸಿರುವುದರಿಂದ. ಪ್ರಕೃತಿಃ—ಮೂಲಪ್ರಕೃತಿ. ಸತ್ವ ರಜಸ್ತಮೋಗುಣಗಳ ಸಾಮ್ಯಾವಸ್ಥೆಗೆ ಮೂಲಪ್ರಕೃತಿಯೆಂದು ಹೆಸರು. ಸಾಂಖ್ಯರಲ್ಲಿ ೨೫ ತತ್ವಗಳು. ೧. ಮೂಲಪ್ರಕೃತಿ. ೨) ಮಹತ್ತತ್ವ ( ಬುದ್ಧಿ. ) (೩) ಅಹಂ ಕಾರ. (೪) ಮನಸ್ಸು. (೯) ಚಕ್ಷುರಾದಿ ೫ ಜ್ಞಾನೇಂದ್ರಿಯಗಳು. (೧೪) ವಾಗಾದಿ ೫ ಕರ್ಮೇಂದ್ರಿಯಗಳು. (೧೯) ರೂಪಾದಿ ೫ ಪಂಚತನ್ಮಾತ್ರಗಳು. (೨೪) ಪಂಚಮಹಾಭೂತಗಳು. (೨೫) ಪುರುಷ. 'ಕರ್ತ್ರೀ—' ಪ್ರಕೃತಿಯು ಸಕಲಜಗತ್ತಿಗೆ ಉಪಾದಾನಕಾರಣ. ಇದು ಪರಿಣಾಮಸ್ವಭಾವವುಳ್ಳದ್ದು. ಅಂತಃಕರಣ ಸಾಕ್ಷಾತ್ ಕರ್ತೃ. ಇದಕ್ಕೆ ಪ್ರಕೃತಿಯಾಗುವುದೇ ಪ್ರಕೃತಿಯ ಕರ್ತೃತ್ವ. ಅನುಕೂಲಕೃತಿ ಮತ್ವರೂಪ ಕರ್ತೃತ್ವ ಇದಕ್ಕೆ ಸಂಭವಿಸುವುದಿಲ್ಲ. ಈ ಕರ್ತೃತ್ವವು ಇವರ ಮತದಲ್ಲಿ ಅಂತಃಕರಣಧರ್ಮವಾಗುತ್ತದೆ. 'ಪುರುಷಸ್ತು—' ಇತಿ. ಚೇತನಲಕ್ಷಣನಾದ ಜೀವನು ಪರಿಣಾಮಿಯಲ್ಲ. 'ಪುಷ್ಕರ—' ಇತಿ. ಕಮಲದ ಎಲೆಯಂತೆ ಅಸಂಗನು. ಚಿತ್ಸ್ವಭಾವನು. 'ಪುರುಷಃ— ಲಿಪ್ತತ್ವಾಭಾವವಾನ್—ಚೇತನತ್ವಾತ್ । ಯನ್ನೈ

ವಂ ತನ್ನೈವಮ್ । ಯಥಾ ಪ್ರಕೃತಿಃ ॥ ಈ ಅನುಮಾನವೇ ಅವನು ಲೇಪನಶೂನ್ಯ ನೆಂಬುವದಲ್ಲಿ ಪ್ರಮಾಣ. ತಾವರೆಯ ಎಲೆಯಲ್ಲಿ ನೀರು ಹಾಕಿದರೂ ಅದರ ಸಂಪರ್ಕ ಎಲೆಗೆ ಏನೂ ಆಗುವುದಿಲ್ಲ ಅದರಂತೆ ಪುರುಷನು ಯಾವ ಕರ್ತೃತ್ವಾದಿಧರ್ಮಗಳಿಂದಲೂ ಕೂಡಿರುವುದಿಲ್ಲ. ಅವನಲ್ಲಿ ಕಾರಣತ್ವಾದಿ ಧರ್ಮವಿಲ್ಲದಿರುವುದರಿಂದಲೂ ಕರ್ತೃತ್ವಾದಿ ಧರ್ಮಗಳಿರುವುದಿಲ್ಲ. 'ಪುರುಷಃ—ಕರ್ತೃತ್ವಾದಿ ಧರ್ಮಾಭಾವವಾನ್—ಕಾರಣತ್ವಾ ಭಾವಾತ್ । ಯನ್ನೈವಂ ತನ್ನೈವಮ್ । ಯಥಾ ಪ್ರಕೃತಿಃ ॥' ಎಂಬ ಅನುಮಾನ ದಿಂದ ಅಸಂಗತ್ವ ಸಿದ್ಧವಾಗುತ್ತದೆ. ಪುರುಷನಂತೆ ಇನ್ನಾವ ತತ್ವವೂ ಇಲ್ಲವಾದುದರಿಂದ ವ್ಯತಿರೇಕದೃಷ್ಟಾಂತ ಹೇಳಬೇಕು. 'ಕಾರಣತ್ವಾಭಾವಾತ್ ಎಂದು ಹೇತು ಹೇಳಿದೆ. ಇದೇ ಪುರುಷನಲ್ಲಿ ಇಲ್ಲವೆಂದು ಅಸಿದ್ಧಿಯನ್ನಾಶಂಕಿಸಿದರೆ ಅದನ್ನು ಹೋಗಲಾಡಿಸು ತ್ತಾನೆ. 'ಕಾರ್ಯಕಾರಣಯೋಃ—' ಇತಿ. ಸಾಂಖ್ಯಮತದಲ್ಲಿ ಕಾರ್ಯಕಾರಣಗಳಿಗೆ ಅಭೇದ ಅಂದರೆ ತಾದಾತ್ಮ್ಯವಿರುತ್ತದೆ. ಆಗ ಕಾರ್ಯನಾಶವಾದರೆ ಕಾರ್ಯರೂಪನಾದ ಪುರುಷನಿಗೂ ನಾಶ ಹೇಳಬೇಕು. ನಸ್ಯಾತ್—ಆಗಬಾರದು. ಎಂದರ್ಥ. ಕಾರ್ಯನಾಶದಿಂದ ಪುರುಷನಾಶವಾಗಬಾರದು. ಇತಿ — ಈ ಕಾರಣದಿಂದ, ತಸ್ಯ— ಆ ಪುರುಷನಿಗೆ, ಅಕಾರಣತ್ವಮ್—ಕಾರಣತ್ವವಿಲ್ಲವೆಂದು ಅಂಗೀಕರಿಸಬೇಕೆಂದರ್ಥ. ನಾಶಾಪ್ರತಿಯೋಗಿತ್ವರೂಪ ನಿತ್ಯತ್ವವು ಅವನಲ್ಲಿರುವುದರಿಂದ ಕಾರಣತ್ವವನ್ನು ಒಪ್ಪಬಾರ ದೆಂದರ್ಥ. ॥

ಆತ್ಮನು ಕೂಟಸ್ಥನೆಂದು ಶ್ರುತಿಯಲ್ಲಿ ಹೇಳಿದೆ. ಪರಿಣಾಮರಹಿತನೆಂದರ್ಥ. ಕಾರಣನಾದರೆ ಪರಿಣಾಮಿಯಾಗಬೇಕು. ಆಗ ಶ್ರುತಿವಿರೋಧ ಬರುತ್ತದೆ. ಆದುದ ರಿಂದ ಕಾರಣನಲ್ಲವೆಂದು ತಾತ್ಪರ್ಯ. ॥ ನೈಯಾಯಿಕರಲ್ಲಿ ಪರಿಣಾಮವೆಂದರೆ ನಾಶವೇ ಇರತಕ್ಕ ವಸ್ತುವಿಗೆ ಪೂರ್ವಾವಸ್ಥಾಪರಿತ್ಯಾಗದಿಂದ ಧರ್ಮಾಂತರೋತ್ಪತ್ತಿಗೆ ಪರಿಣಾಮ ವೆಂದು ಸಾಂಖ್ಯಸಿದ್ಧಾಂತ. ॥

ಈ ರೀತಿಯ ಪುರುಷನು ಇದ್ದಾನೆಂಬುದರಲ್ಲಿ ಪ್ರಮಾಣವೇನು ? ಎಂಬುದಕ್ಕೆ ಉತ್ತರ ತೋರಿಸುತ್ತಾನೆ. 'ಬುದ್ಧಿಗತಾ—' ಇತಿ. ಸಾಂಖ್ಯರಲ್ಲಿ ಬುದ್ಧಿಯು ಪ್ರಕೃತಿಯ ಪ್ರಥಮಪರಿಣಾಮ. ಪ್ರಕೃತಿ ಜಡವಾದುದರಿಂದ ಅದರ ಕಾರ್ಯವಾದ ಬುದ್ಧಿಯೂ ಜಡವಾಗಬೇಕು. ಉಪಾದಾನೋಪಾದೇಯಗಳಿಗೆ ಸಮಾನಯೋಗಕ್ಷೇಮ ವಿದೆ. ಮೃತ್ತಿ ( ಮಣ್ಣು ) ನಿಂದ ಕೂಡಿದ ಘಟವೂ ಮೃತ್ತೇ ಆಗಿದೆ. ಆದರೆ ಅಲ್ಲಿ ಜ್ಞಾನೇಚ್ಛಾದಿಗಳು ತೋರಿದಂತೆ ಚೈತನ್ಯವೂ ತೋರುತ್ತದೆ. ಆದುದರಿಂದ ಚೇತನ ಪುರುಷಸಂಬಂಧವಿಲ್ಲದೆ ಬುದ್ಧಿಯಲ್ಲಿ ಚೈತನ್ಯ ತೋರಲಾರದು. ಪುರುಷನನ್ನು ಅಂಗೀ ಕರಿಸದಿದ್ದರೆ 'ಚೇತನೋಽಹಂ' ಎಂಬ ಚೈತನ್ಯಾಭಿಮಾನವು ಸಂಗತವಾಗಲಾರದು. ಒಂದು ಕಡೆ ಪ್ರಸಿದ್ಧವಾದ ಚೈತನ್ಯವು ಬುದ್ಧಿಯಲ್ಲಿ ಆರೋಪಿತವಾಗಿದೆ. ಜಪಾ ಕುಸುಮದ ಲೌಹಿತ್ಯ ಸ್ಫಟಿಕದಲ್ಲಿ ತೋರುತ್ತದೆ. ಅದರಂತೆ ಪುರುಷನಲ್ಲಿರುವ ಚೈತನ್ಯ ಬುದ್ಧಿಯಲ್ಲಿ ತೋರುತ್ತದೆ.

ಪುರುಷಸಂಬಂಧದಿಂದ ಬುದ್ಧಿಯಲ್ಲಿ ಚೈತನ್ಯ ತೋರುತ್ತದೆ. ಎಂದು ಹೇಳ ಬೇಕಾದರೆ ಆ ಬುದ್ಧಿಯಾವುದು ? ಎಂಬ ಜಿಜ್ಞಾಸೆಗೆ ಸಮಾಧಾನ ತೋರಿಸುತ್ತಾನೆ. 'ಬುದ್ಧಿಶ್ಚ—' ಇತಿ. ಪ್ರಕೃತಿ ಅಂದರೆ ಪ್ರಧಾನ. ಇದರ ಪರಿಣಾಮ ಅಂದರೆ ಅವಸ್ಥಾವಿಶೇಷವೇ ಬುದ್ಧಿ. ಇದಕ್ಕೆ ಮಹತ್ತತ್ವವೆಂದೂ, ಅಂತಃಕರಣವೆಂದೂ ಹೆಸರಿದೆ. 'ತತ್ಸತ್ವಾ—' ಇತಿ. ಈ ಬುದ್ಧಿಯ ಸಂಬಂಧದಿಂದ ಪುರುಷನಿಗೆ ಅಂದರೆ ಜೀವನಿಗೆ ಸಂಸ್ಕಾರ. ಅಸತ್ವ—ಅಸಂಬಂಧದಿಂದ ಮೋಕ್ಷವಾಗುತ್ತದೆ. ನಿತ್ಯಶುದ್ಧ ಬುದ್ಧಮುಕ್ತಸ್ವಭಾವವುಳ್ಳ ಪುರುಷನಿಗೆ ಬುದ್ಧ್ಯುಪರಾಗದಿಂದ, ಸ್ಫಟಿಕಕ್ಕೆ ಜಪಾಕುಸುಮ ಸಂಬಂಧದಿಂದ ಲೌಹಿತ್ಯಬಂದಂತೆ ಸಂಸಾರ. ಅದರ ಸಂಪರ್ಕವಿಲ್ಲದಿರುವಾಗ ಮೋಕ್ಷ ಅಂದರೆ ಸ್ವಸ್ವಭಾವ. ಕೆಂಪುದಾಸವಾಳ ಹತ್ತಿರವಿರದಿದ್ದರೆ ಕೇವಲ ಸ್ಫಟಿಕಸ್ವಚ್ಛವಾಗಿರುತ್ತದೆ. ತಸ್ಯಾಏವ—ಆಬುದ್ಧಿತತ್ವದ್ದೇ. ಪರಿಣತಿ ಎಂಬಲ್ಲಿ ಇದಕ್ಕೆ ಸಂಬಂಧ. ಜ್ಞಾನಾಕಾರವಾದ ಪರಿಣತಿಯು ಮಹತ್ತತ್ವವೆಂಬ ಹೆಸರುಳ್ಳ ಬುದ್ಧಿತತ್ವದ್ದೇ ಆಗಿರುತ್ತದೆ. ಈ ಬುದ್ಧಿಯು ಚಕ್ಷುರಾದಿ ಇಂದ್ರಿಯನಾಲಿಕಾಮೂಲಕವಾಗಿ ಘಟಾದಿವಿಷಯಗಳ ಸಂಬಂಧ ಹೊಂದುತ್ತದೆ. ಸ್ವಾಕಾರತಾಸಮರ್ಪಣವೇ ಅಂದರೆ ಆಯಾಯ ವಿಷಯಾಕಾರತಾಸ್ವರೂಪಹೊಂದುವುದೇ ಇಲ್ಲಿ ಸಂಬಂಧ. ಬುದ್ಧಿಯೇ ಇಂದ್ರಿಯ ನಾಲಿಕೆಯ ಮೂಲಕ ಹೊರಗೆ ಹೋಗಿ ಘಟಾದಿವಿಷಯಾಕಾರವಾಗಿ ಪರಣತಿ ಹೊಂದುತ್ತದೆ. ಇದಕ್ಕೆ ಅಧ್ಯವಸಾಯರೂಪಜ್ಞಾನವೆನ್ನುತ್ತಾರೆ.

ಹರಿಯುವಸ್ವಭಾವವುಳ್ಳದ್ದಾದರೂ ನೀರು ಕೆರೆಯಲ್ಲಿ ಹೋಗಲು ದಾರಿ ಇಲ್ಲವಾದರೆ ನಿಂತಿರುತ್ತದೆ. ಆಗ ಗದ್ದೆಯ ಆಕಾರವನ್ನು ಹೊಂದಲು ಸಮರ್ಥವಾಗುವುದಿಲ್ಲ. ಆದರೆ ಛಿದ್ರ ಇದ್ದರೆ ಅದರ ಮೂಲಕ ಹೊರಗೆ ಹೋಗಿ ಕಾಲುವೆಯ ಮೂಲಕ ಗದ್ದೆಗೆ ಹೋಗಿ ಗದ್ದೆಯ ಆಕಾರವನ್ನೇ ಹೊಂದುತ್ತದೆ. ಅದರಂತೆ ಸಕಲ ವಿಷಯಪ್ರಕಾಶಕ ಸಮರ್ಥವಾಗಿದ್ದರೂ ಬುದ್ಧಿತತ್ವವು ತಮೋಗುಣದಿಂದ ಪ್ರತಿಬದ್ಧವಾಗಿರುತ್ತದೆ. ಆಗ ಘಟಾದಿವಿಷಯಪರ್ಯಂತಧಾವನಶಕ್ತಿ ಇರುವುದಿಲ್ಲ. ಆದರೆ ನಯನಾದಿ ಇಂದ್ರಿಯಸನ್ನಿಕರ್ಷವಾದಾಗ ತಮೋಗುಣ ನಾಶವಾಗುವುದರಿಂದ ಆ ಇಂದ್ರಿಯ ನಲಿಕಾದ್ವಾರದಿಂದ ವಿಷಯಪ್ರದೇಶಕ್ಕೆ ಹೋಗಿ ಆಯಾಯವಿಷಯಾಕಾರವಾಗಿ ಪರಿಣತವಾಗುತ್ತದೆ. ಈ ಬುದ್ಧಿತತ್ವದ ಘಟಾದಿವಿಷಯಾಕಾರವಾದ ಪರಿಣಾಮಕ್ಕೇ ಅಧ್ಯವಸಾಯವೃತ್ತಿಯೆಂದೂ ಜ್ಞಾನವೆಂದೂ ಹೆಸರು.

ಇದು ಯೋಗಭಾಷ್ಯದಲ್ಲಿಯೂ ಹೇಳಿದೆ. 'ಫಲಮವಿಶಿಷ್ಟಃ ಪೌರುಷೇಯಶ್ಚಿತ್ತವೃತ್ತಿಬೋಧಃ" ಇಂದ್ರಿಯನಲಿಕೆಯಿಂದ ವಿಷಯಸಂಬಂಧವಾದೊಡನೆಯೇ 'ಅಯಂ ಘಟಃ' ಎಂದು ಸಾಮಾನ್ಯ ಚಿತ್ತವೃತ್ತಿಯುಂಟಾಗುತ್ತದೆ. ಇದೇ ವಿಷಯವಾಗಿರುವ 'ಅಹಂ ಘಟಂ ಜಾನಾಮಿ' (ನಾನು ಘಟವನ್ನು ತಿಳಿಯುತ್ತೇನೆ. ನನ್ನಿಂದ ಘಟ ಗ್ರಹಿಸಲ್ಪಟ್ಟಿದೆ) ಎಂಬ ಅನುಭವ ಆಮೇಲೆ ಬರುತ್ತದೆ. ಇದು ಪ್ರಮಾಣಭೂತವಾದ ಚಿತ್ತವೃತ್ತಿಯ ಫಲ. ಈ ಅನುಭವವು ಪೌರುಷೇಯ ಅಂದರೆ ಚಿತಿಚಿತ್ತಗಳಿಗೆ ಅಭೇದಗ್ರಹ

ವಿರುವುದರಿಂದ ಉಪಚರಿತವಾಗಿ ಪುರುಷನಲ್ಲಿರುತ್ತದೆಂದರ್ಥ. ವಾಸ್ತವವಾಗಿ ಅಸಂಗನಾದ ಅವನಲ್ಲಿ ಯಾವುದೂ ಇರುವುದಿಲ್ಲನೆಂದು ಸಾಂಖ್ಯಸಿದ್ಧಾಂತ. ||

ಪುರುಷೇ ಕರ್ತೃತ್ವಾಭಿಮಾನೋ ಬುದ್ಧೌ ಚೈತನ್ಯಾಭಿಮಾನಶ್ಚ ಭೇದಾಗ್ರಹಾತ್ । ಮಮೇದಂ ಕರ್ತವ್ಯಮಿತಿ ಮದಂಶಃ ಪುರುಷೋಪರಾಗೋ ಬುದ್ಧೇಃ ಸ್ವಚ್ಛತಯಾ ತತ್‌ಪ್ರತಿಬಿಂಬಾದತಾತ್ತ್ವಿಕೋ ದರ್ಪಣಸ್ಯೇವ ಮುಖೋಪರಾಗಃ। ಇದಮಿತಿ ವಿಷಯೋಪರಾಗಃ, ಇಂದ್ರಿಯಪ್ರಣಾಲಿಕಯಾ ಪರಿಣತಿಭೇದಸ್ತಾತ್ತ್ವಿಕೋ ನಿಃಶ್ವಾಸಾಭಿಹತದರ್ಪಣಸ್ಯೇವ ಮಲಿನಿಮಾ। ಕರ್ತವ್ಯಮಿತಿ ವ್ಯಾಪಾರಾಂಶಃ। ತೇನಾಂಶತ್ರಯವತೀ ಬುದ್ಧಿಃ। ತತ್ಪರಿಣಾಮೇನ ಜ್ಞಾನೇನ ಪುರುಷಸ್ಯಾತಾತ್ತ್ವಿಕಃ ಸಂಬಂಧೋ ದರ್ಪಣಮಲಿನಿಮ್ನೇವ ಮುಖಸ್ಯೋಪಲಬ್ಧಿರುಚ್ಯತೇ । ಜ್ಞಾನಾದಿವತ್ಸುಖದುಃಖೇಚ್ಛಾದ್ವೇಷಪ್ರಯತ್ನಧರ್ಮಾಽಧರ್ಮಾ ಅಪಿ ಬುದ್ಧೇರೇವ ಕೃತಿಸಾಮಾನಾಧಿಕರಣ್ಯೇನ ಪ್ರತೀತೇಃ ನ ಚ ಬುದ್ಧಿಶ್ಚೇತನಾ ಪರಿಣಾಮಿತ್ವಾದಿತಿ ಮತಮಪಾಸ್ತಮ್ || ಕೃತ್ಯದೃಷ್ಟಭೋಗಾನಾಮಿವ ಚೈತನ್ಯಸ್ಯಾಪಿ ಸಾಮಾನಾಧಿಕರಣ್ಯಪ್ರತೀತೇಸ್ತದ್ಭಿನ್ನೇ ಮಾನಾಭಾವಾಚ್ಚ ||

ಪುರುಷನು ಕರ್ತೃ ಆಗದಿದ್ದರೆ 'ಅಹಂಕರೋಮಿ' (ನಾನು ಮಾಡುತ್ತೇನೆ) ಎಂಬ ಅಹಂಪ್ರತ್ಯಯ ಬರುವುದು ಹೇಗೆ? ಎಂಬ ಶಂಕೆಗೆ ಸಮಾಧಾನ ತೋರಿಸುತ್ತಾನೆ. 'ಪುರುಷೇ—' ಇತಿ. 'ಕರ್ತೃತ್ವಾಭಿಮಾನಃ — ಅಹಂಕರೋಮಿ ಎಂಬ ಪ್ರತ್ಯಯ. ಪುರುಷನಲ್ಲಿ ಈ ಜ್ಞಾನ ಬಂದಂತೆ ಪ್ರಕೃತಿಯ ಪ್ರಥಮಪರಿಣಾಮವಾದ ಬುದ್ಧಿಯೆಂಬ ಮಹತ್ತತ್ತ್ವದಲ್ಲಿ 'ಚೈತನ್ಯಾಭಿಮಾನಃ' ಅಂದರೆ 'ಅಹಂ ಚೇತನೋಽಸ್ಮಿ' ಎಂಬ ಪ್ರತ್ಯಯವೂ (ನಾನು ಚೇತನನು) ಬರುತ್ತದೆ. ಇದಕ್ಕೆ ಕಾರಣ. 'ಭೇದಾಗ್ರಹಾತ್—' ಇತಿ. ಬುದ್ಧಿಪುರುಷರಿಗೆ ವಿವೇಕಗ್ರಹವಿಲ್ಲದಿರುವುದರಿಂದ (ಅಸಂಸರ್ಗದ ಅಗ್ರಹ—ಸಂಬಂಧವಿಲ್ಲವೆಂಬುದು ತಿಳಿಯದಿರುವುದರಿಂದ) ಪುರುಷನಲ್ಲಿರುವ ಚೈತನ್ಯವು ಬುದ್ಧಿಯಲ್ಲಿಯೂ, ಬುದ್ಧಿಯಲ್ಲಿರುವ ಕರ್ತೃತ್ವವು ಪುರುಷನಲ್ಲಿಯೂ ತೋರುತ್ತದೆ. ಅವರಿಬ್ಬರೂ ಒಂದು ಎಂಬುದರಲ್ಲಿ ವಿವೇಕವಿಲ್ಲದಿರುವುದೇ ಕಾರಣ. ನೈಯಾಯಿಕರಲ್ಲಿ ಬುದ್ಧಿ, ಉಪಲಬ್ಧಿ, ಜ್ಞಾನ ಇವುಗಳಿಗೆ ಭೇದವಿಲ್ಲ. ಸಾಂಖ್ಯರಲ್ಲಿ ಬುದ್ಧಿ ಬೇರೆ ಉಪಲಬ್ಧಿ ಬೇರೆ ಎಂದು ತೋರಿಸುತ್ತಾನೆ–'ಮಮೇದಂ—' ಇತಿ ||

'ಮಮ, ಇದಂ, ಕರ್ತವ್ಯಮ್' ಎಂಬಲ್ಲಿ ಮೂರು ಅಂಶಗಳಿವೆ. ಬುದ್ಧಿಪುರುಷರಿಗೆ ಭೇದಗ್ರಹವಿಲ್ಲದಿರುವುದರಿಂದ ಏಕತ್ವಾಭಿಮಾನ ಬರುತ್ತದೆ. ಇದೇ ಪುರುಷೋಪರಾಗ. ಅಸ್ಮಚ್ಛಬ್ದಕ್ಕೆ ಪುರುಷನೆಂದರ್ಥ. ಷಷ್ಠಿಯಿಂದ ಸಂಬಂಧ ತೋರುತ್ತದೆ. ಪುರುಷೋಪರಾಗವೆಂದರೆ ಪುರುಷಸಂಬಂಧ ತೋರುತ್ತದೆ.

ಪುರುಷನಿಗೂ ಬುದ್ಧಿಗೂ ಯಾವ ಸಂಬಂಧ? ವಿಷಯ ವಿಷಯಿಭಾವಸಂಬಂಧ ಹೇಳಲು ಸಾಧ್ಯವಿಲ್ಲ. ಪುರುಷನು ಬುದ್ಧಿ ಪರಿಣಾಮವಲ್ಲ. ಚಿತ್ ಜಡಗಳಾದುದರಿಂದ

ತಾದಾತ್ಮ್ಯಸಂಬಂಧ ಹೇಳಲೂ ಸಾಧ್ಯವಿಲ್ಲವೆಂದರೆ ಔಪಾಧಿಕ ತಾದಾತ್ಮ್ಯ ಸಂಭವಿಸು ತ್ತದೆಂದು ತೋರಿಸುತ್ತಾನೆ. 'ಬುದ್ಧೇಃ ಸ್ವ—' ಇತಿ. ಸತ್ವಉದ್ರಿಕ್ತವಾದಾಗ ಬುದ್ಧಿಗೆ ಸ್ವಾಚ್ಛ್ಯವಿರುತ್ತದೆ. ತತ್ಪ್ರತಿಬಿಂಬಾತ್—ಪುರುಷನ ತಾದಾತ್ಮ್ಯ ಭ್ರಮದಿಂದ. ಈ ಸಂಬಂಧಕ್ಕೆ ಸಾಂಖ್ಯರು 'ಯೋಗ್ಯತಾ' ಎಂದು ಕರೆಯುತ್ತಾರೆ. ಬುದ್ಧಿಯಲ್ಲಿ ಪುರುಷನ ತಾದಾತ್ಮ್ಯವಿಲ್ಲದಿದ್ದರೂ ಸ್ವಚ್ಛತಾಉಪಾಧಿನಿಮಿತ್ತಕ ತಾದಾತ್ಮ್ಯಭ್ರಮವಿರುವದರಿಂದ ಆರೋಪಿತವಾದ ಏಕತ್ವವೇ ಪುರುಷೋಪರಾಗವೆಂದು ಸಿದ್ಧವಾಗುತ್ತದೆ. ವಾಸ್ತವವಾದ ಪುರುಷೈಕ್ಯವಿಲ್ಲವೆಂಬುದನ್ನು ದೃಷ್ಟಾಂತದಿಂದ ದೃಢಪಡಿಸುತ್ತಾನೆ. 'ದರ್ಪಣಸ್ಯ—' ಇತಿ. ಕನ್ನಡಿಯಲ್ಲಿ ಮುಖವಿಲ್ಲದಿದ್ದರೂ ಅದರ ಸ್ವಚ್ಛತ್ವರೂಪ ಉಪಾಧಿಮೂಲಕ ಮುಖ ಸಂಬಂಧವು ಆಧ್ಯಾಸಿಕವಾಗಿ (ಅವಾಸ್ತವ) ತೋರುತ್ತದೆ. ಆಧ್ಯಾಸಿಕ ಮುಖಸಂಬಂಧ ವುಳ್ಳದ್ದು ಕನ್ನಡಿಯಾದಂತೆ ಆಧ್ಯಾಸಿಕಪುರುಷಸಂಬಂಧವುಳ್ಳದ್ದು ಬುದ್ಧಿಯಾಗುತ್ತದೆ. 'ಇದಂ—' ಎಂಬುದರಿಂದ ಎರಡನೆಯ ಅಂಶ ತೋರಿಸುತ್ತಾನೆ. ಘಟಾದಿವಿಷಯಗಳು ಇದಂಪದದಿಂದ ತೋರುವುದರಿಂದ ಅದರ ಸಂಬಂಧ ಬುದ್ಧಿಯಲ್ಲಿ ಹೇಳಬೇಕು. ವಿಷ ಯೋಪರಾಗವೆಂದರೆ ವಿಷಯಸಂಬಂಧ. ಅದನ್ನು ವಿವರಿಸುತ್ತಾನೆ. 'ಇಂದ್ರಿಯಪ್ರಣಾ ಲಿಕಯಾ—' ಇತಿ. ಇಂದ್ರಿಯವೆಂಬ ನಳಿಕೆಯಿಂದ ಬುದ್ಧಿಯು ಹೊರಗೆ ಹೋಗಿ ಘಟಾಕಾರ ಪರಿಣತಿಹೊಂದುತ್ತದೆ. ಆಗ 'ಅಯಂಘಟಃ' ಎಂಬ ಜ್ಞಾನವುಂಟಾಗುತ್ತದೆ. ಬುದ್ಧಿಯ ಪರಿಣಾಮವೇ ಇದು. ಇದು ತಾತ್ವಿಕಸಂಬಂಧ, ಕನ್ನಡಿಗೆ ಬಾಯಿಂದ ಗಾಳಿ ಊದಿದರೆ ಆಗ ಕನ್ನಡಿಯಲ್ಲಿ ಮಾಲಿನ್ಯವುಂಟಾಗುತ್ತದೆ. ಇದು ಕನ್ನಡಿಯಲ್ಲಿ ಸಹಜ ವಾಗಿರುತ್ತದೆ. ಹಾಗೆ ಬುದ್ಧಿಯಲ್ಲಿ ಘಟಾದ್ಯಾಕಾರಪರಿಣಾಮವುಂಟಾಗುವುದೇ ವಿಷಯ ಸಂಬಂಧ. ಇದಕ್ಕೆ ಉಪಲಬ್ಧಿ, ವೃತ್ತಿಯೆಂದು ಕರೆಯುತ್ತಾರೆ. ವಿಲಕ್ಷಣವಾದ ಪರಿ ಣತಿಯೇ ಪರಿಣತಿ ಭೇದ. 'ಕೃದಭಿಹಿ ತೋ ಭಾವಃ ದ್ರವ್ಯವತ್ ಪ್ರಕಾಶತೇ' ನ್ಯಾಯ ದಿಂದ (ಭಿದ್ಯತೇ ಅನೇನ) ಭೇದಪದಕ್ಕೆ ವೈಲಕ್ಷಣ್ಯಾರ್ಥತೋರುವುದರಿಂದ ಅಯಂಘಟಃ, ಅಯಂಪಟಃ ಇತ್ಯಾದಿಪ್ರತೀತಿಗಳೇ ಇಲ್ಲಿ ವಿವಕ್ಷಿತವಾಗಿವೆ.

'ಕರ್ತವ್ಯಂ—' ಇತಿ. ಮಾಡಬೇಕು ಎಂಬ ಮೂರನೆಯ ಅಂಶದ ವಿಚಾರ ತಿಳಿಸುತ್ತಾನೆ. ಎರಡು ಅಂಶಗಳಿಂದ ಬುದ್ಧಿಗೆ ಪುರುಷಸಂಬಂಧ, ವಿಷಯಸಂಬಂಧ ತಿಳಿಸಿ ದಂತಾಯಿತು. ಮೂರನೆಯ ಅಂಶದಿಂದ ನಿಶ್ಚಯಾತ್ಮಕವಾದ ಅಧ್ಯವಸಾಯ ತೋರು ತ್ತದೆ. ಇದೇ ವ್ಯಾಪಾರಾಂಶಸಂದರ್ಭ. ಈ ಕರ್ತವ್ಯತಾಸಂಬಂಧವೂ ಬುದ್ಧಿಯಪರಿ ಣಾಮವೇ. (ಕರ್ತವ್ಯತ್ವಾಕಾರಿಜ್ಞಾನಪರಿಣಾಮಿತ್ವಂ) ಕರ್ತವ್ಯತ್ವರೂಪಜ್ಞಾನಾಕಾರ ವಾಗಿ ಪರಿಣಾಮಹೊಂದುತ್ತದೆ. 'ತೇನ—' ಇತಿ. 'ಮಮೇದಂ ಕರ್ತವ್ಯಮ್' ಎಂಬುದು ಬುದ್ಧಿಯೇ ಆದುದರಿಂದ ಇದು ಮೂರು ಅಂಶಗಳಿಂದ ಕೂಡಿರುತ್ತದೆ. (ಪುರುಷ ಸಂಬಂಧ, ವಿಷಯಸಂಬಂಧ, ವ್ಯಾಪಾರಸಂಬಂಧ) ಈ ಬುದ್ಧಿಯ ಪರಿಣಾಮವಾದ ವೃತ್ತಿರೂಪಜ್ಞಾನದಿಂದ ನಿರತಿಶಯಚೈತನ್ಯಸ್ವಭಾವನಾದ ಪುರುಷನಿಗೂ ಅತಾತ್ವಿಕವಾದ ಸಂಬಂಧ ಬರುತ್ತದೆ. (ಆರೋಪಿತವಾಗುತ್ತದೆ) 'ಚೇತನೋಹಂ ಕರೋಮಿ' 'ಚೇತ

ನೋಽಹಂ ಜಾನಾಮಿ' ಎಂಬುದು ಜ್ಞಾನಪರಿಣಾಮಿಬುದ್ಧಿತಾದಾತ್ಮ್ಯಭ್ರಮರೂಪ ಸಂಬಂಧದಿಂದ ಪುರುಷನಲ್ಲಿ ತೋರುತ್ತದೆ. ವಸ್ತುತಃ ಪುರುಷನು ಅಸಂಗನೇ. ಈ ಅತಾತ್ವಿಕ ಸಂಬಂಧಕ್ಕೆ ಉದಾಹರಣೆ ತೋರಿಸುತ್ತಾನೆ. 'ದರ್ಪಣಮಲಿ'—ಇತಿ. ಕನ್ನಡಿಯು ಮಲಿನವಾಗಿದ್ದರೆ ಮುಖವೂ ಮಲಿನವಾಗಿ ತೋರುತ್ತದೆ. ವಾಸ್ತವವಾಗಿ ಮುಖವು ಮಲಿನವಲ್ಲ. ಕನ್ನಡಿ ಮುಖಗಳಿಗೆ ಅಸಂಸರ್ಗ ಗೃಹೀತವಾಗದಿರುವುದರಿಂದ ತಾದಾತ್ಮ್ಯಭ್ರಮವಿರುವುದರಿಂದ ಕನ್ನಡಿಯಲ್ಲಿರುವ ಮಾಲಿನ್ಯ ಮುಖದಲ್ಲಿ ತೋರುತ್ತದೆ. ಹಾಗೆ ಬುದ್ಧಿಪುರುಷರಲ್ಲಿ ಭೇದಗ್ರಹವಿಲ್ಲದಿರುವುದರಿಂದ ಬುದ್ಧಿಯಲ್ಲಿರುವ ಜ್ಞಾನಪರಿಣಾಮಿತ್ವವು ಪುರುಷನಲ್ಲಿ ಭ್ರಮರೂಪವಾಗಿ ತೋರುತ್ತದೆ. ತಾರ್ಕಿಕರು ಮಾತ್ರ ಬುದ್ಧಿಯೇ ಉಪಲಬ್ಧಿ ಅಥವಾ ವೃತ್ತಿಜ್ಞಾನವೆಂದು ಒಪ್ಪುವುದಿಲ್ಲ. ಇದು ಕೇವಲ ಸಾಂಖ್ಯ ಸಿದ್ಧಾಂತ.

'ಜ್ಞಾನಾದಿವತ್'—ಇತಿ. 'ಅಯಂ ಘಟಃ' ಎಂಬ ವೃತ್ತಿರೂಪಜ್ಞಾನವು ಹೇಗೆ ಬುದ್ಧಿಧರ್ಮವೋ, ಅದರಂತೆ ಸುಖದುಃಖಾದಿಗಳೂ ಕೂಡಾ ಬುದ್ಧಿಯ ಪರಿಣಾಮ ವಿಶೇಷಗಳೇ ಆಗಿವೆ. 'ಕೃತಿಸಾಮಾನಾಧಿಕರಣ್ಯೇನ'—ಇತಿ. ಕರ್ತೃವಿನಲ್ಲಿ ಕೃತಿ ಇದ್ದರೆ ಅಲ್ಲಿಯೇ ಸುಖದುಃಖಾದಿಗಳಿರುವುದು ಲೋಕ ಪ್ರಸಿದ್ಧವಾಗಿವೆ. ಕರ್ತವ್ಯಾಂಶ ಬುದ್ಧಿತತ್ವದ್ದಾದರೆ ಕರ್ತವ್ಯಾಂಶವಿದ್ದಲ್ಲಿ ತೋರುವ ಸುಖಾದಿಗಳೂ ಬುದ್ಧಿಧರ್ಮವೇ ಆಗುತ್ತವೆ.

ಚೈತನ್ಯವು ಬುದ್ಧಿಧರ್ಮವಾಗಿ ತೋರುವುದಾದರೆ ಚೇತನನಾದ ಪುರುಷನನ್ನು ಸ್ವೀಕರಿಸುವುದು ಏಕೆ ? ಎಂಬ ಶಂಕೆಗೆ ಸಮಾಧಾನ ತೋರಿಸುತ್ತಾನೆ. 'ನಚ—' ಇತಿ. ಬುದ್ಧಿ ಪರಿಣಮನಸ್ವಭಾವವುಳ್ಳದ್ದಾದುದರಿಂದ ಅನಿತ್ಯವಾಗುತ್ತದೆ. ಆದುದರಿಂದ ಚೈತನ್ಯಾಶ್ರಯನಾಗಿ ಬುದ್ಧಿಗಿಂತ ಪುರುಷನು ಬೇರೆಯಾಗಿದ್ದನೆಂದೂ ಅವನು ನಿತ್ಯನೆಂದೂ ಸಾಂಖ್ಯಸಿದ್ಧಾಂತ. ಇದು ಹಿಂದೆ ಹೇಳಿದ ಯುಕ್ತಿಯಿಂದಲೂ ಮುಂದೆ ಹೇಳುವ ರೀತಿಯಿಂದಲೂ ಸಮಂಜಸವಾಗುವುದಿಲ್ಲವೆಂದು 'ಅಪಾಸ್ತಂ' ಎಂಬುದರಿಂದ ಖಂಡಿಸುತ್ತಾನೆ. 'ಕೃತ್ಯದೃಷ್ಟ'—ಇತಿ. ಕೃತಿಃ—ಪ್ರಯತ್ನಃ। ಅದೃಷ್ಟಮ್—ಧರ್ಮಾಧರ್ಮಗಳು ॥ ಭೋಗಃ—ಸುಖದುಃಖಾನ್ಯತರಸಾಕ್ಷಾತ್ಕಾರಃ। ಇವು ಯಾವ ಅಧಿಕರಣದಲ್ಲಿ ತೋರುತ್ತವೆಯೊ ಅಲ್ಲಿಯೇ ಚೈತನ್ಯ ತೋರುತ್ತದೆ. ಕೃತಿಯು ತನ್ನ ಅಧಿಕರಣದಲ್ಲಿಯೇ (ಆಶ್ರಯ) ಅದೃಷ್ಟವನ್ನು ಹುಟ್ಟಿಸುತ್ತದೆ. ಅದೃಷ್ಟವು ತನ್ನ ಅಧಿಕರಣದಲ್ಲಿಯೇ ಭೋಗವನ್ನುಂಟುಮಾಡುತ್ತದೆ. ಹೀಗೆ ಕೃತ್ಯದೃಷ್ಟ ಭೋಗಗಳಿಗೆ ಪರಂಪರೆಯಿಂದ ಸಾಮಾನಾಧಿಕರಣ್ಯ ತೋರುತ್ತದೆ. ಇದರಿಂದ 'ಚೇತನೋಽಹಂ ಕರೋ'ಮಿ ಎಂಬಲ್ಲಿಯೂ ಚೈತನ್ಯ ಕೃತಿಗಳಿಗೆ ಸಾಮಾನಾಧಿಕರಣ್ಯವೇ (ಏಕಾಧಿಕರಣವೃತ್ತಿತ್ವ ಸಂಬಂಧ) ಪ್ರತೀತವಾಗುತ್ತದೆ. ಕರ್ತೃ ಬೇರೆ ಚೇತನ ಬೇರೆ ಎಂಬುದರಲ್ಲಿ ಪ್ರಮಾಣ ವಿಲ್ಲ. 'ಚೇತನೋಽಹಂ ಕರೋಮಿ' ಎಂಬ ಪ್ರತ್ಯಯದಲ್ಲಿ ಕೃತಿಯುಳ್ಳವನೇ ಚೇತನ

ನೆಂದು ಪ್ರತೀತವಾಗುತ್ತದೆ. ಹೀಗೆ ಒಪ್ಪದೇ ಹೋದರೆ ಸಂಸಾರಾಪವರ್ಗಗಳು ಸಿದ್ಧಿಸಲಾರವು.

ಚೇತನೋಽಹಂ ಕರೋಮೀತಿ ಪ್ರತೀತಿಶ್ಚೈತನ್ಯಾಂಶೇ ಭ್ರಮ ಇತಿ ಚೇತ್ ಕೃತ್ಯಂಶೇ ಕಿಂ ನೇಷ್ಯತೇ। ಅನ್ಯಥಾ ಬುದ್ಧೇರ್ನಿತ್ಯತ್ವೇ ಮೋಕ್ಷಾಭಾವೋಽನಿತ್ಯತ್ವೇ ತತ್ಪೂರ್ವಮಸಂಸಾರಾಪತ್ತಿಃ। ನನ್ವಚೇತನಾಯಾಃ ಪ್ರಕೃತೇಃ ಕಾರ್ಯತ್ವಾತ್ ಬುದ್ಧೇರಚೈತನ್ಯಂ ಕಾರ್ಯಕಾರಣಯೋಸ್ತಾದಾತ್ಮ್ಯಾದಿತಿ ಚೇನ್ನ, ಅಸಿದ್ಧೇಃ। ಕರ್ತುರ್ಜನ್ಯತ್ವೇ ಮಾನಾಭಾವಾತ್ ವೀತರಾಗಜನ್ಮಾದರ್ಶನಾದನಾದಿತ್ವಮ್ ಅನಾದೇರ್ನಾಶಾಽಸಂಭವಾನ್ನಿತ್ಯತ್ವಮ್। ತತ್ಕಿಂ ಪ್ರಕೃತ್ಯಾದಿ ಕಲ್ಪನೇನ॥

'ಅಹಂಕರೋಮಿ' ಎಂಬಲ್ಲಿ ಚೈತನ್ಯಾಂಶದಲ್ಲಿ ಭ್ರಮ. ಪುರುಷನಲ್ಲಿರುವ ಚೈತನ್ಯ ಬುದ್ಧಿ ತತ್ವದಲ್ಲಿ ತೋರುವುದರಿಂದ ಅದು ಭ್ರಮವೆಂದು ಹೇಳುವುದಾದರೆ ಕೃತ್ಯಂಶದಲ್ಲಿಯೂ ಅಂದರೆ ಪ್ರಯತ್ನಾಂಶದಲ್ಲಿಯೂ ಭ್ರಮವೆಂದು ಏಕೆ ಒಪ್ಪಬಾರದು. ಪುರುಷನಲ್ಲಿರುವ ಯತ್ನ ಅಂತಃಕರಣದಲ್ಲಿ ತೋರುತ್ತದೆಂದು ತಾರ್ಕಿಕ ಸಿದ್ಧಾಂತ.

ಸ್ವಭಾವದಿಂದ ಜಡವಾದ ಬುದ್ಧಿಯು ಚೇತನ ಪುರುಷನ ಸಂಬಂಧದಿಂದ ಅವನ ಪ್ರತಿಬಿಂಬವನ್ನು ಗ್ರಹಿಸುವುದರಿಂದ ತನ್ನಲ್ಲಿ 'ಚೇತನೋಹಂ ಕರೋಮಿ' ಎಂದು ಮಿಥ್ಯಾಭಿಮಾನವನ್ನು ಹೊಂದುತ್ತವೆ. ಆದುದರಿಂದ ಜ್ಞಾನವು ಕೃತಿಸಮಾನಾಧಿಕರಣವಾಗುವುದಿಲ್ಲವೆಂದು ಸಾಂಖ್ಯನ ಮತ. ಇದೇ ವಿರುದ್ಧವಾಗಿ ಏಕೆ ಹೇಳಬಾರದು ಎಂದು ತಾರ್ಕಿಕನು ಆಕ್ಷೇಪಿಸಿ ಕೃತಿಯೂ (ಯತ್ನ) ಬುದ್ಧಿಯಲ್ಲಿ ಆರೋಪಿತವಾಗುವುದರಿಂದ ಜ್ಞಾನವು (ಚೈತನ್ಯ) ಕೃತಿ ಇರುವ ಪುರುಷನಲ್ಲಿಯೇ ಇರುವುದೆಂದೂ ಕೃತಿಸಮಾನಾಧಿಕರಣವೇ ಆಗುತ್ತದೆಂದೂ ಸಾಂಖ್ಯಮತವನ್ನು ಖಂಡಿಸುತ್ತಾನೆ. ಜ್ಞಾನ ಕೃತಿ ಮುಂತಾದವುಗಳೆಲ್ಲವೂ ಪುರುಷಧರ್ಮಗಳೇ. ಸಾಂಖ್ಯಾನುಮಾನಕ್ಕೆ ಬಾಧಕಾನುಮಾನ. 'ಬುದ್ಧಿಃ ಕರ್ತೃತ್ವಾ (ಕೃತಿ) ಭಾವವತೀ—ಜನ್ಯಧರ್ಮಾಶ್ರಯತ್ವಾತ್.'. 'ಅನ್ಯಥಾ' —ಇತಿ. ಕರ್ತೃ, ಚೇತನ ಒಬ್ಬನೇ ಎಂದು ಅಂಗೀಕರಿಸದೆ ಹೋದರೆ ಎಂದರ್ಥ. ಸಾಂಖ್ಯಾಭಿಮತವಾದ ಬುದ್ಧಿಯು ನಿತ್ಯವೇ, ಅನಿತ್ಯವೇ ? ನಿತ್ಯವೆಂದು ಹೇಳುವುದಾದರೆ ಬುದ್ಧಿ ಪುರುಷರ ಸಂಬಂಧವು ಯಾವಾಗಲೂ ಇರುವುದರಿಂದ ಯಾರಿಗೂ ಎಂದಿಗೂ ಮುಕ್ತಿಯಾಗಬಾರದು. ಅನಿತ್ಯವೆಂದರೂ ದೋಷ ತೋರಿಸುತ್ತಾನೆ. 'ತತ್ಪೂರ್ವಂ'—ಇತಿ. ಬುದ್ಧಿ ಹುಟ್ಟಬೇಕಾದರೆ ಮೊದಲು ಸಂಸಾರವೇ ಇಲ್ಲವೆಂದು ಒಪ್ಪಬೇಕಾಗುತ್ತದೆ. ಸಂಸಾರ ಅನಾದಿಯೆಂಬುದು ಈಗ ಸಾದಿಯಾಗಬೇಕಾಗುತ್ತದೆ. ಆಗ ಕೃತನಾಶ, ಅಕೃತಾಭ್ಯಾಗಮ ದೋಷ ಬರುತ್ತದೆ.

ಚೇತನನಾದ ಪುರುಷನಲ್ಲಿ ಸುಖದುಃಖಗಳಿಲ್ಲ. ಆಗ ಬಂಧಮೋಕ್ಷವ್ಯವಹಾರಗಳೂ ಇಲ್ಲ. ಆದುದರಿಂದ ಬುದ್ಧಿಸಂಬಂಧಾಸಂಬಂಧಗಳಿಂದ ಅದನ್ನು ಹೇಳಬೇಕು. ಬುದ್ಧಿ ನಿತ್ಯವೆಂದರೆ ಅದರ ಸಂಬಂಧ ನಿಮಿತ್ತವಾಗಿ ಯಾವಾಗಲೂ ಮೋಕ್ಷವಿಲ್ಲವೆನ್ನಬೇಕು.

ಅನಿತ್ಯವೆಂದರೆ ಅದು ಹುಟ್ಟಬೇಕಾದರೆ ಮೊದಲು ಸಂಸಾರೋತ್ಪತ್ತಿಯೂ ಇಲ್ಲವೆನ್ನ ಬೇಕು. ಸಂಸಾರೋತ್ಪತ್ತಿ ನಿಮಿತ್ತವಾದ ಅದೃಷ್ಟವೇ ಇರುವುದಿಲ್ಲ. ಅದೇ ಇಲ್ಲದ ಮೇಲೆ ಬುದ್ಧಿ ಹುಟ್ಟುವುದಾದರೂ ಹೇಗೆ ? ಬುದ್ಧಿ ಹುಟ್ಟದಿದ್ದರೆ ಸಂಸಾರ ಬರುವುದು ಹೇಗೆ ? ಹೀಗೆ ಯಾವುದಕ್ಕೂ ಸರಿಯಾಗಿ ಸಾಂಖ್ಯರು ಉತ್ತರ ಹೇಳಲಾರರು.

ಬುದ್ಧಿ ಅಚೇತನವಾಗಲು ಕಾರಣ ತೋರಿಸುತ್ತಾನೆ. 'ಅಚೇತನಾಯಾಃ'— ಇತಿ. ಅಚೇತನವಾದ ಅಂದರೆ ಜಡವಾದ ಪ್ರಕೃತಿಯ (ಪ್ರಧಾನ) ಕಾರ್ಯವಾದುದರಿಂದ ಬುದ್ಧಿಯೂ ಅಚೇತನವಾಗುತ್ತದೆ. ಕಾರಣತೋರಿಸುತ್ತಾನೆ.—'ಕಾರ್ಯ'—ಇತಿ. ಕಾರ್ಯ ಕಾರಣಗಳಿಗೆ ಅಭೇದವನ್ನಂಗೀಕರಿಸುವುದರಿಂದ ಕಾರಣವಾದ ಪ್ರಕೃತಿ ಜಡವಾದರೆ ಕಾರ್ಯ ವಾದ ಬುದ್ಧಿಯೂ ಜಡವಾಗುತ್ತದೆ.

ಸಿದ್ಧಾಂತಿಯು ಇದನ್ನು ಖಂಡಿಸುತ್ತಾನೆ. 'ನ'—ಇತಿ. ಬುದ್ಧಿಯು ಪ್ರಕೃತಿಯ ಕಾರ್ಯವೆಂಬುದರಲ್ಲಿಯೇ ಪ್ರಮಾಣವಿಲ್ಲ. ಕೆಲವರು 'ಅಸಿದ್ಧೇಃ' ಎಂಬುದಕ್ಕೆ ಪ್ರಧಾನ ಪದವಾಚ್ಯವಾದ ಪ್ರಕೃತಿಯೇ ಇಲ್ಲವೆಂದು ವ್ಯಾಖ್ಯಾನ ಮಾಡುತ್ತಾರೆ. 'ಕರ್ತುಃ'— ಇತಿ. ಕರ್ತೃತ್ವವಿದ್ದಲ್ಲಿ ಅನಿತ್ಯತ್ವವಿರಬೇಕೆಂಬುದರಲ್ಲಿಯೂ ಪ್ರಮಾಣವಿಲ್ಲ. 'ಯತ್ರ ಕರ್ತೃತ್ವಂ ತತ್ರ ಜನ್ಯತ್ವಂ' ಎಂಬಲ್ಲಿ ಅನುಕೂಲತರ್ಕವಿಲ್ಲ. 'ಕರ್ತೃತ್ವಂ ತಿಷ್ಠತು ಜನ್ಯತ್ವಂ ಮಾಸ್ತು' ಎಂದು ಅಪ್ರಯೋಜಕತ್ವ ಶಂಕೆ ಮಾಡಿದರೆ ಅನುಕೂಲ ತರ್ಕ ಹೇಳಿ ಸಾಧಿಸಬೇಕು. ಅದೇ ಇಲ್ಲ. ಪ್ರತ್ಯುತ ಅದಕ್ಕೆ ವಿರುದ್ಧವಾಗಿ ಅನಾದಿತ್ವ ಗ್ರಾಹಕತರ್ಕವೇ ಇದೆ. ಕರ್ತೃವು ಅನಾದಿಯಾಗಿರುತ್ತಾನೆ ಎಂಬುದರಲ್ಲಿ ಪ್ರಮಾಣ ತೋರಿಸುತ್ತಾನೆ. 'ವೀತರಾಗ'—ಇತಿ. ನ್ಯಾಯದರ್ಶನಸೂತ್ರ. ರಾಗಶೂನ್ಯನಿಗೆ ಜನ್ಮವಿಲ್ಲ. ಸರಾಗನಿಗೆ ಜನ್ಮವೆಂದು ತಾತ್ಪರ್ಯ. ಸ್ತನ್ಯಪಾನದಲ್ಲಿ ಬಾಲಕನಿಗೆ ಪ್ರವೃತ್ತಿಯುಂಟಾಗುವುದು ಎಲ್ಲರಿಗೂ ತಿಳಿದ ವಿಷಯ. ಇಷ್ಟಸಾಧನತಾ ಜ್ಞಾನವಿಲ್ಲದೆ ಪ್ರವೃತ್ತಿಯುಂಟಾಗಲಾರದು. ಅದು ಬಾಲಕನಿಗೆ ಅನುಭವರೂಪವಾಗಿದೆಯೆಂದರೆ ಬಾಧೆ ಸ್ಪಷ್ಟವಾಗಿದೆ. ಸ್ಮರಣರೂಪವೆಂದು ಹೇಳಬೇಕು. ಅದು ಸಂಸ್ಕಾರಾಧೀನ. ಸಂಸ್ಕಾರವು ಅನುಭವ ಸಾಪೇಕ್ಷ. ಯಾವಾಗಲಾದರೂ ಅನುಭವಿಸದೇ ಸಂಸ್ಕಾರ ಹುಟ್ಟುವುದಿಲ್ಲ. ಇದರಿಂದ ಪೂರ್ವಜನ್ಮದಲ್ಲಿ ಅನುಭವಿಸಿರುವನೆಂದು ಪೂರ್ವಜನ್ಮ ಸಿದ್ಧವಾಗುತ್ತದೆ. ಅಲ್ಲಿಯೂ ಸ್ತನ್ಯಪಾನ ಪ್ರವೃತ್ತಿಯುಂಟಾಗುವುದರಿಂದ ಪೂರ್ವ ಪೂರ್ವಜನ್ಮಸಿದ್ಧವಾಗಿ ಜನ್ಮ ಪ್ರವಾಹವೂ ಅನಾದಿಯಾಗಿ ಪುರುಷನೂ ಅನಾದಿಯೆಂದು ಸಿದ್ಧವಾಗುತ್ತದೆ. ಅನಾದಿಭಾವವು ನಿತ್ಯವೇ ಆಗುತ್ತದೆ. ಇದರಿಂದ ಪ್ರಾಗಭಾವ ಅನಾದಿಯಾದರೂ ಭಾವವಾಗದಿರುವುದರಿಂದ ಅದಕ್ಕೆ ನಿತ್ಯತ್ವವಿಲ್ಲ. ಜನ್ಯಭಾವಕ್ಕೇ ಲೋಕದಲ್ಲಿ ನಾಶವಿರುವುದು. ಹೀಗಿರುವಾಗ ಪ್ರಕೃತ್ಯಾದಿಗಳನ್ನು ಕಲ್ಪಿಸುವುದರಿಂದ ಪ್ರಯೋಜನವೇನು ? ಪುರುಷನೇ ಕರ್ತೃ. ಕೃತ್ಯಾದಿಗಳು ಚೈತನ್ಯಸಾಮಾನಾಧಿ ಕರಣ್ಯದಿಂದಲೇ ತೋರುವುದರಿಂದ (ಚೈತನ್ಯವಿದ್ದಲ್ಲಿ ಕೃತಿಜ್ಞಾನಾದಿಗಳು) ಸಾಂಖ್ಯರ

ಪ್ರಕ್ರಿಯೆ ಸಮಂಜಸವಲ್ಲ. ಯುಕ್ತಿಶೂನ್ಯವಾದುದರಿಂದ ಆದರಾರ್ಹವಲ್ಲವೆಂದು ತಾತ್ಪರ್ಯ.

ನಚ–'ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ । ಅಹಂಕಾರವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ।' ಇತ್ಯನೇನ ವಿರೋಧ ಇತಿ ವಾಚ್ಯಂ, ಪ್ರಕೃತೇರದೃಷ್ಟಸ್ಯ ಗುಣೈರದೃಷ್ಟಜನ್ಯೈರಿಚ್ಛಾದಿಭಿಃ ಕರ್ತಾಹಂ ಅಹಮೇವೇತ್ಯಸ್ಯ ತದರ್ಥತ್ವಾತ್ । "ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ" ಇತ್ಯಾದಿ ವದತಾ ಭಗವತಾ ಪ್ರಕಟೀಕೃತೋಽಯಮುಪರಿಷ್ಟಾದಾಶಯ ಇತಿ ಸಂಕ್ಷೇಪಃ ॥

ಸಾಂಖ್ಯಮತವನ್ನಾಶಂಕಿಸಿ ಪುನಃ ಖಂಡಿಸುತ್ತಾನೆ. 'ನಚ–' ಇತಿ. ಸತ್ವರಜಸ್ತಮೋರೂಪಗುಣಗಳ ಸಾಮ್ಯಾವಸ್ಥೆಯೇ ಪ್ರಕೃತಿ. ಅದರ ಸತ್ವಾದಿಗುಣಗಳಿಂದಲೇ ಶುಭಾಶುಭಲಕ್ಷಣಕ್ರಿಯೆಗಳು ಮಾಡಲ್ಪಡುತ್ತವೆ. ನಾನು ಎಂಬ ಜ್ಞಾನಕ್ಕೇ ಅಹಂಕಾರವೆಂದು ಹೆಸರು. ಮಹತ್ತತ್ವದ ಕಾರ್ಯವಿದು. ಈ ಪ್ರತ್ಯಯ ಸಂಸರ್ಗವನ್ನು ಹೊಂದಿರುವ ಪುರುಷನು ನಾನೇ ಕರ್ತೃ ಎಂದು ತಿಳಿಯುತ್ತಾನೆ. ಎಂದು ಗೀತೆಯಲ್ಲಿ ಹೇಳಿದೆ. ಇದರಿಂದ ಪುರುಷನಿಗೆ ಕರ್ತೃತ್ವವಿಲ್ಲವೆಂದು ಸ್ಪಷ್ಟವಾಗಿ ತಿಳಿಸಿದಂತಾಗಲಿಲ್ಲವೇ ? ಅಂದರೆ ಇಲ್ಲಿ ಪ್ರಕೃತಿಯೆಂದರೆ ಸಾಂಖ್ಯಾಭಿಮತ ಗುಣತ್ರಯಾತ್ಮಕವಾದ ಪ್ರಕೃತಿಯಲ್ಲ. ಜೀವನ ಅದೃಷ್ಟವೇ ಇಲ್ಲಿ ಪ್ರಕೃತಿಪದವಾಚ್ಯವಾಗಿದೆ. ಸ್ವತಂತ್ರಕರ್ತೃತ್ವವಿಲ್ಲವೆಂದು ಇಲ್ಲಿ ಹೇಳಿರುವುದಲ್ಲದೆ ಕರ್ತೃತ್ವಸಾಮಾನ್ಯವೂ ಇಲ್ಲವೆಂದಲ್ಲ. ಅದೃಷ್ಟಾದಿ ನಿರಪೇಕ್ಷವಾಗಿ ಕೇವಲ ತಾನೊಬ್ಬನೇ ಕರ್ತೃವೆಂದು ಯಾರು ತಿಳಿಯುತ್ತಾರೋ ಅವನು ಮೂಢನೆಂದರ್ಥ. 'ಅಧಿಷ್ಠಾನಂ ತಥಾಕರ್ತಾ—' ಇತ್ಯಾದಿ ಶ್ಲೋಕಗಳಿಂದ ಐದಕ್ಕೆ ಕರ್ತೃತ್ವವನ್ನು ಹೇಳಿ 'ತತ್ರೈವಂ—' ಎಂಬುದರಿಂದ ಸ್ವತಂತ್ರಕರ್ತೃತ್ವವನ್ನು ನಿಷೇಧಮಾಡಿರುವುದೇ ಈ ವಿಷಯ.ದಲ್ಲಿ ಪ್ರಮಾಣ. ಆದುದರಿಂದ ಪುರುಷನೇ ಕರ್ತೃ. ಬುದ್ಧಿ ಕರ್ತೃವಲ್ಲ. ಕಾರ್ಯಕಾರಣಗಳಿಗೆ ಅಭೇದ ಹೇಳಿರುವುದೂ ಕೂಡುವುದಿಲ್ಲ. ಅದೂ ಖಂಡಿಸಲ್ಪಟ್ಟಿದೆ. ಇಲ್ಲಿ ಅದು ಅನುಪಯುಕ್ತವೆಂದು 'ಸಂಕ್ಷೇಪಃ' ಎಂದಿರುತ್ತಾನೆ. ಹೀಗೆ ಸಾಂಖ್ಯ ಮತ ಖಂಡಿಸಲ್ಪಟ್ಟಿದೆ.

**ಧರ್ಮಾಧರ್ಮಾಶ್ರಯಾಧ್ಯಕ್ಷೋ ವಿಶೇಷಗುಣಯೋಗತಃ ॥ ೪೯ ॥**

ಧರ್ಮಾಧರ್ಮಾಶ್ರಯ ಇತಿ—ಆತ್ಮೇತ್ಯನುಷಜ್ಯತೇ । ಶರೀರಸ್ಯ ತದಾಶ್ರಯತ್ವೇ ದೇಹಾಂತರಕೃತಕರ್ಮಣಾಂ ದೇಹಾಂತರೇಣ ಭೋಗಾನುಪಪತ್ತೇಃ । ವಿಶೇಷಗುಣಯೋಗತ ಇತಿ । ಯೋಗ್ಯವಿಶೇಷಗುಣಸ್ಯ ಜ್ಞಾನಸುಖಾದೇಃ ಸಂಬಂಧೇನಾತ್ಮನಃ ಪ್ರತ್ಯಕ್ಷತ್ವಂ ಸಂಭವತಿ ನತ್ವನ್ಯಥಾ, ಅಹಂ ಜಾನೇ ಅಹಂಕರೋಮೀತ್ಯಾದಿ ಪ್ರತೀತೇಃ ॥ ೪೯ ॥

ಈ ಆತ್ಮನು ಧರ್ಮಾಧರ್ಮಗಳಿಗೆ ಆಶ್ರಯನು. ಸಮವಾಯಸಂಬಂಧದಿಂದ ಅಧಿಕರಣನೆಂದರ್ಥ. ಶರೀರವು ಏಕೆ ಆಶ್ರಯವಾಗಬಾರದು ? ಎಂಬ ಶಂಕೆಗೆ ಸಮಾಧಾನ ತೋರಿಸುತ್ತಾನೆ. 'ಶರೀರಸ್ಯ'—ಇತಿ. ಧರ್ಮ, ಅಧರ್ಮಗಳಿಗೆ ಶರೀರವೇ ಆಶ್ರಯವೆನ್ನುವುದಾದರೆ ಒಂದು ದೇಹದಿಂದ ಮಾಡಿದ ಕರ್ಮಗಳಿಗೆ ಇನ್ನೊಂದು ದೇಹದಿಂದ ಭೋಗವು ಕೂಡಲಾರದು. 'ದೇಹಾಂತರೇ ಕೃತಾನಿ ಕರ್ಮಾಣಿ ಯೈಸ್ತೇ' ದೇಹಾಂತರ ಕೃತಕರ್ಮಾಣಃ ತೇಷಾಮ್. 'ದೇಹಾಂತರಾವಚ್ಛೇದ್ಯಕರ್ಮವಿಷಯಕ ಸಫಲಯತ್ನವತಾಮ್' ಒಂದು ದೇಹಾವಚ್ಛೇದದಿಂದ ಮಾಡಿದ ಸಫಲಕರ್ಮವುಳ್ಳವರು ಇನ್ನೊಂದು ದೇಹಾವಚ್ಛೇದದಿಂದ ಫಲವನ್ನು ಅನುಭವಿಸುತ್ತಾರೆ. ಈಗ ದೇಹವೇ ಆಶ್ರಯವೆಂದರೆ ಈ ದೇಹ ಸುಟ್ಟು ಹೋಗುತ್ತದೆ. ಇನ್ನೊಂದು ದೇಹಕ್ಕೆ ಅದೃಷ್ಟವಿಲ್ಲ. ಆ ದೇಹದಿಂದ ಸುಖದುಃಖಗಳನ್ನನುಭವಿಸುವುದು ಹೇಗೆ ? ಕೃತವಿಪ್ರಣಾಶ ಅಕೃತಾಭ್ಯಾಗಮ ದೋಷ ಬರುತ್ತದೆ. ಆದುದರಿಂದ ಆತ್ಮನೇ ಈ ಅದೃಷ್ಟಕ್ಕೆ ಆಶ್ರಯನೆಂದು ಒಪ್ಪಬೇಕು. ಶರೀರ ಹಲವು ಹೊಂದಿದರೂ ಆತ್ಮನು ಒಬ್ಬನಾದುದರಿಂದ ಹಿಂದಿನ ದೋಷಕ್ಕೆ ಅವಕಾಶವಿಲ್ಲ. 'ವಿಶೇಷಗುಣಯೋಗತಃ ಅಧ್ಯಕ್ಷಃ,—ಜ್ಞಾನಾದಿ ವಿಶೇಷ ಗುಣಗಳಿರುವುದರಿಂದ ಆತ್ಮನು ಪ್ರತ್ಯಕ್ಷನಾಗುತ್ತಾನೆ. 'ಅಹಂ ಸುಖೀ' ಇತ್ಯಾದಿ ಪ್ರತ್ಯಕ್ಷದಲ್ಲಿ ಯೋಗ್ಯ ವಿಶೇಷಗುಣ ಪ್ರಕಾರವಾಗಿರುವುದರಿಂದ ಆತ್ಮಪ್ರತ್ಯಕ್ಷ ಅನುಭವ ಸಿದ್ಧವಾಗಿದೆ.

**ಪ್ರವೃತ್ತ್ಯಾದ್ಯನುಮೇಯೋಽಯಂ ರಥಗತ್ಯೇವ ಸಾರಥಿಃ ।**
**ಅಹಂಕಾರಸ್ಯಾಶ್ರಯೋಽಯಂ ಮನೋಮಾತ್ರಸ್ಯ ಗೋಚರಃ ॥ ೫೦ ॥**

ಅಯಮಾತ್ಮಾ ಪರದೇಹಾದೌ ಪ್ರವೃತ್ತ್ಯಾದಿನಾಽನುಮೀಯತೇ । ಪ್ರವೃತ್ತಿರತ್ರ ಚೇಷ್ಟಾ । ಜ್ಞಾನೇಚ್ಛಾಪ್ರಯತ್ನಾದೀನಾಂ ದೇಹೇಽಭಾವಸ್ಯೋಕ್ತತ್ವಾತ್ಪ್ರಯತ್ನಾಚ್ಚೇಷ್ಟಾಯಾಶ್ಚ ಪ್ರಯತ್ನಸಾಧ್ಯತ್ವಾಚ್ಚೇಷ್ಟಯಾ ಪ್ರಯತ್ನವಾನಾತ್ಮಾಪ್ಯನುಮೀಯತೇ ಇತಿಭಾವಃ । ಅತ್ರ ದೃಷ್ಟಾಂತಮಾಹ—ರಥೇತಿ । ಯದ್ಯಪಿ ರಥಕರ್ಮ ಚೇಷ್ಟಾ ನ ಭವತಿ । ತಥಾಪಿ ತೇನ ಕರ್ಮಣಾ ಸಾರಥಿರ್ಯಥಾಽನುಮೀಯತೇ ತಥಾ ಚೇಷ್ಟಾತ್ಮಕೇನ ಕರ್ಮಣಾ ಪರಾತ್ಮಾಪೀತಿ ಭಾವಃ । ಅಹಂಕಾರಾಸ್ಯೇತಿ — ಅಹಂಕಾರೋಽಹಮಿತಿ ಪ್ರತ್ಯಯಸ್ತಸ್ಯಾಶ್ರಯೋ ವಿಷಯಃ ಆತ್ಮಾ ನ ಶರೀರಾದಿರಿತಿ ! ಮನ ಇತಿ । ಮನೋಭಿನ್ನೇಂದ್ರಿಯಜನ್ಯಪ್ರತ್ಯಕ್ಷಾಽವಿಷಯೋ ಮಾನಸಪ್ರತ್ಯಕ್ಷವಿಷಯಶ್ಚೇತ್ಯರ್ಥಃ । ರೂಪಾದ್ಯಭಾವೇನೇಂದ್ರಿಯಾಂತರಾಯೋಗ್ಯತ್ವಾತ್ । ॥ ೫೦ ॥

ಪ್ರತ್ಯಾತ್ಮರಲ್ಲಿಯೂ ಸ್ವಾತ್ಮಪ್ರತ್ಯಕ್ಷ ಪ್ರಸಿದ್ಧವಾಗಿದೆ. ಆದರೆ ಪರದೇಹದಲ್ಲಿರುವ ಆತ್ಮಪ್ರತ್ಯಕ್ಷ ಪ್ರತ್ಯಕ್ಷವಾಗದಿರುವುದರಿಂದ ಅನುಮಾನದಿಂದ ತಿಳಿಯಲು ಶಕ್ಯವೆಂದು

ತಿಳಿಸುತ್ತಾನೆ. 'ಅಯಂ—' ಇತಿ. ಈ ಆತ್ಮನು ಪರಕೀಯಶರೀರಾದಿಗಳಲ್ಲಿ ಪ್ರವೃತ್ತಿಯಿಂದ ತಿಳಿಯಲು ಶಕ್ಯನು. ಇಲ್ಲಿ ಪ್ರವೃತ್ತಿಯೆಂದರೆ ಚೇಷ್ಟೆಯೆಂದರ್ಥ. ಆಗ ಅನುಮಾನಸಿದ್ಧವಾಗುತ್ತದೆ. 'ಚೈತ್ರಶರೀರಂ— ಚೇತನಾಧಿಷ್ಠಿತಂ—ಪ್ರವೃತ್ತಿಮತ್ತ್ವಾತ್ । ರಥವತ್ । ಚೇಷ್ಟೆಯಿಂದ ಅನುಮಿತನಾದ ಆತ್ಮನಿಗೆ ಸಮವಾಯದಿಂದ ಶರೀರ ಅವಚ್ಛೇದಕವಾಗುವುದರಿಂದ ಸಮವಾಯದಿಂದ ಪ್ರಯತ್ನಕ್ಕೆ ಆಶ್ರಯನು ಆತ್ಮನೆಂದು ತಾತ್ಪರ್ಯ. ಜ್ಞಾನೇಚ್ಛಾದಿಗಳು ಶರೀರಧರ್ಮವಾಗುವುದಿಲ್ಲವೆಂದು 'ಶರೀರಸ್ಯ ನ ಚೈತನ್ಯಂ—ಎಂಬ ಕಾರಿಕೆಯಲ್ಲಿ ಹೇಳಿದೆ. ಜ್ಞಾನಾಭಾವ ಅಲ್ಲಿ ಕಂಠತಃ ಹೇಳಿದರೂ ಇಚ್ಛಾದ್ಯಭಾವವೂ ಹೇಳಿದಂತೇ ಆಗುತ್ತದೆ. ಚೇಷ್ಟಾ—ವ್ಯಾಪಾರ ಪ್ರಯತ್ನಸಾಧ್ಯ. ಚೇಷ್ಟೆಯಿಂದ ಪ್ರಯತ್ನಾಶ್ರಯನಾದ ಆತ್ಮನು ಸಿದ್ಧಿಸುತ್ತಾನೆ. 'ಇದಂ ಪರಕೀಯ ಶರೀರಂ — ಅವಚ್ಛೇದಕತಾ ಸಂಬಂಧೇನ ಪ್ರಯತ್ನವತ್—ಚೇಷ್ಟಾವತ್ತ್ವಾತ್ ! ಮಚ್ಛರೀರವತ್ ॥" ಇದರಿಂದ ಪ್ರಯತ್ನ ಸಿದ್ಧವಾದ ಮೇಲೆ ಇದಕ್ಕೆ ಆಶ್ರಯನಾದ ಆತ್ಮನೂ ಸಿದ್ಧಿಸುತ್ತಾನೆ. ದೃಷ್ಟಾಂತಾಸಿದ್ಧಿಯನ್ನು ಆಶಂಕಿಸಿ ಹೋಗಲಾಡಿಸುತ್ತಾನೆ. 'ಯದ್ಯಪಿ—' ಇತಿ. 'ಹಿತಾಹಿತಪ್ರಾಪ್ತಿಪರಿಹಾರಾನುಕೂಲಕ್ರಿಯಾ ಚೇಷ್ಟಾ'. ಇದು ಕೇವಲ ವ್ಯಾಪಾರವಲ್ಲ. ಹಿತಪ್ರಾಪ್ತಿಗೂ ಅಹಿತಪರಿಹಾರಕ್ಕೂ ಅನುಕೂಲವಾದ ಕ್ರಿಯೆ ಆಗಬೇಕು. ಈ ರೀತಿಯಾದ ಕ್ರಿಯೆ ಅಚೇತನವಾದ ರಥದಲ್ಲಿ ಇಲ್ಲದಿರುವುದರಿಂದ ದೃಷ್ಟಾಂತ ಹೇಳಿದುದು ಹೇಗೆ ? ಅಂದರೆ ರಥವ್ಯಾಪಾರದಿಂದ ಹೇಗೆ ಒಬ್ಬ ಸಾರಥಿ ಇದ್ದಾನೆಂದು ಅನುಮಾನಮಾಡುತ್ತೇವೋ ಅದರಂತೆ ಪ್ರಯತ್ನದಿಂದ ಚೇಷ್ಟಾರೂಪ ವ್ಯಾಪಾರದಿಂದ ಪರದೇಹದಲ್ಲಿ ಆತ್ಮನಿದ್ದಾನೆಂದು ಊಹಿಸುತ್ತೇವೆ ಎಂದು ತಾತ್ಪರ್ಯ. (ಪ್ರವೃತ್ತಿಮತ್ತ್ವ ಹೇತುವಿಗೆ 'ಉತ್ತರದೇಶ ಸಂಯೋಗಯೋಗ್ಯ ಕ್ರಿಯಾವತ್ತ್ವಂ' ಎಂದರ್ಥವಾಗುತ್ತದೆ.)

'ಅಹಂಕಾರಸ್ಯ'—ಇತಿ. 'ಅಹಂ' ಎಂಬ ಒಂದು ಜ್ಞಾನವೇ ಅಹಂಕಾರ. ಆತ್ಮನೇ ಕರ್ತೃವಾದುದರಿಂದ ಅಹಂಶಬ್ದ ಬೋಧ್ಯನೂ ಆತ್ಮನೇ ಆಗುತ್ತಾನೆ. 'ಅಹಂ' ಎಂಬ ಪ್ರತ್ಯಯಕ್ಕೆ ಶರೀರವಾಗಲೀ ಇಂದ್ರಿಯಗಳಾಗಲೀ ವಿಷಯವಾಗುವುದಿಲ್ಲ. ಇದು ಹಿಂದೆ ಹೇಳಿದೆ. 'ಮನೋಮಾತ್ರ'—ಇತಿ. ಮಾತ್ರ ಪದದಿಂದ ಮನೋಭಿನ್ನವಾದದ್ದು ವ್ಯಾವೃತ್ತವಾಗುತ್ತದೆ. ಮನೋಭಿನ್ನವಾದ ಚಾಕ್ಷುಷಾದಿ ಪ್ರತ್ಯಕ್ಷಕ್ಕೆ ಅವಿಷಯನಾಗಿ ಮಾನಸಪ್ರತ್ಯಕ್ಷಕ್ಕೆ ವಿಷಯನಾಗುತ್ತಾನೆ. 'ಮಾನಸತ್ವಾವಚ್ಛಿನ್ನ ಲೌಕಿಕವಿಷಯತಾವಾನ್ ಆತ್ಮಾ' ಎಂದು ತಾತ್ಪರ್ಯ. ರೂಪಾದಿಗಳು ಇಲ್ಲದಿರುವುದರಿಂದ ಚಕ್ಷುರಾದಿಗಳಿಂದ ಗ್ರಹಿಸಲು ಸಾಧ್ಯವಿಲ್ಲ.

## ವಿಭುರ್ಬುದ್ಧ್ಯಾದಿ ಗುಣವಾನ್

ವಿಭುತ್ವಂ ಪರಮಮಹತ್ತ್ವಮ್ । ತಚ್ಚ ಪೂರ್ವೋಕ್ತಮಪಿ ಸ್ಪಷ್ಟಾರ್ಥಮುಕ್ತಮ್ ॥

'ಕಾಲಖಾತ್ಮ'—ಕಾರಿಕೆಯಲ್ಲಿಯೂ 'ಬುದ್ಧ್ಯಾದಿಷಟ್ಕಮ್' — ಕಾರಿಕೆಯಲ್ಲಿಯೂ ಈ ಎರಡು ವಿಷಯ ಹೇಳಿದೆ. ಸ್ಪಷ್ಟಪ್ರತಿಪತ್ತಿಗೋಸ್ಕರ ತಿರುಗಿ ಹೇಳಿದೆ. ಸುಖಾದಿಗಳಿಗೆ ಆಶ್ರಯವಾಗಿರುವದ್ರವ್ಯವೇ ಆತ್ಮನೆಂದು 'ಪ್ರಾಣಾಪಾನ'—ಎಂಬ ಸೂತ್ರದಿಂದಲೂ, 'ಆತ್ಮತ್ವಾಭಿಸಂಬಂಧಾದಾತ್ಮಾ'— ಇತ್ಯಾದಿಗಳಿಂದ ಭಾಷ್ಯದಲ್ಲಿಯೂ ವಿವರಿಸಿದೆ. ಬುದ್ಧಿಸುಖದುಃಖೇಚ್ಛಾದಿ ಹದಿನಾಲ್ಕು ಗುಣಗಳೆಂದು ಹಿಂದೆ ಹೇಳಿದೆ. ||

ಆತ್ಮನಿರೂಪಣ ಮುಗಿದಿದೆ.

**ಬುದ್ಧಿಸ್ತು ದ್ವಿವಿಧಾ ಮತಾ ||**
**ಅನುಭೂತಿಃ ಸ್ಮೃತಿಶ್ಚ ಸ್ಯಾದನುಭೂತಿಶ್ಚತುರ್ವಿಧಾ || ೫೧ ||**

ಅತ್ರೈವ ಪ್ರಸಂಗಾದ್ ಬುದ್ಧೇಃ ಕತಿಪಯಂ ಪ್ರಪಂಚಂ ದರ್ಶಯತಿ—'ಬುದ್ಧಿಸ್ತ್ವಿತಿ' | ದ್ವೈವಿಧ್ಯಂ ವ್ಯುತ್ಪಾದಯತಿ | ಅನುಭೂತಿರಿತಿ | ಅನುಭೂತಿಶ್ಚತುರ್ವಿಧೇತಿ | ಏತಾಸಾಂಚತಸೃಣಾಂಕರಣಾನಿ ಚತ್ವಾರಿ 'ಪ್ರತ್ಯಕ್ಷಾನುಮಾನೋಪಮಾನಶಬ್ದಾಃ ಪ್ರಮಾಣಾನಿ' (೧-೧-೩) ಇತಿ ಸೂತ್ರೋಕ್ತಾನಿ ವೇದಿತವ್ಯಾನಿ || ೫೧ ||

ಪ್ರಸಂಗ ಸಂಗತಿಯಿಂದ ಕ್ರಮಪ್ರಾಪ್ತವಾದ ಮನೋದ್ರವ್ಯವನ್ನು ನಿರೂಪಿಸದೆ ಬುದ್ಧಿಯನ್ನು ವಿವರಿಸುತ್ತಾನೆ. 'ಸ್ಮೃತಸ್ಯ ಉಪೇಕ್ಷಾನರ್ಹತ್ವಮ್' ಪ್ರಸಂಗಸಂಗತಿಯ ಲಕ್ಷಣ. ಅನುಭೂತಿ ಅಂದರೆ ಅನುಭವ, ಸ್ಮತಿಯೆಂದು ಬುದ್ಧಿ ಎರಡು ವಿಧ. ಅನುಭೂತಿಚಾತುರ್ವಿಧ್ಯದಲ್ಲಿ ಸೂತ್ರ ಪ್ರಮಾಣ ತೋರಿಸುತ್ತಾನೆ—'ಸೂತ್ರೋಕ್ತಾನಿ—' ಇತಿ. ನಾನಾಶಾಸ್ತ್ರಕಾರರು ನಾನಾಪ್ರಮಾಣಗಳನ್ನು ಒಪ್ಪಿರುತ್ತಾರೆ' ತಾರ್ಕಿಕ ರಕ್ಷೆಯಲ್ಲಿ ಇದು ಸಂಗೃಹೀತವಾಗಿದೆ

ಪ್ರತ್ಯಕ್ಷಮೇಕಂ ಚಾರ್ವಾಕಾಃ, ಕಣಾದಸುಗತೌ ಪುನಃ ||
ಅನುಮಾನಂ ಚ, ತಚ್ಚಾಥ ಸಾಂಖ್ಯಾಃ ಶಬ್ದಂ ಚ ತೇಽಪಿ ||
ನ್ಯಾಯೈಕದೇಶಿನೋಽಪ್ಯೇವಮುಪಮಾನಂ ಚ ಕೇಚನ ||
ಅರ್ಥಾಪತ್ತ್ಯಾ ಸಹೈತಾನಿ ಚತ್ವಾರ್ಯಾಹ ಪ್ರಭಾಕರಃ ||
ಅಭಾವಷಷ್ಠಾನ್ಯೇತಾನಿ ಭಾಟ್ಟಾ ವೇದಾಂತಿನಸ್ತಥಾ ||
ಸಂಭವೈತಿಹ್ಯಯುಕ್ತಾನಿ ತಾನಿ ಪೌರಾಣಿಕಾ ಜಗುಃ ||

ಪ್ರತ್ಯಕ್ಷಾದಿ ಪ್ರಮಾಣ ಚತುಷ್ಟಯವನ್ನು ಹೇಳುವ ಗೋತಮರು ಅಧಿಕವಾದವುಗಳು ಇವುಗಳಲ್ಲೇ ಅಂತರ್ಭಾವ ಹೊಂದುತ್ತದೆಂದೂ ನ್ಯೂನವಾದರೆ ನಿರ್ವಾಹಾನುಪಪತ್ತಿಯೆಂದೂ ಸಮರ್ಥಿಸಿರುತ್ತಾರೆ. ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದಗಳೆಂದು ನಾಲ್ಕು ಪ್ರಮಾಣಗಳು.

**ಪ್ರತ್ಯಕ್ಷಮಪ್ಯನುಮಿತಿಸ್ತಥೋಪಮಿತಿಶಬ್ದಜೇ ||**
**ಘ್ರಾಣಜಾದಿಪ್ರಭೇದೇನ ಪ್ರತ್ಯಕ್ಷಂ ಷಡ್ವಿಧಂ ಮತಮ್ || ೫೨ ||**

ಇಂದ್ರಿಯಜನ್ಯಂ ಜ್ಞಾನಂ ಪ್ರತ್ಯಕ್ಷಮ್ । ಯದ್ಯಪಿ ಮನೋರೂಪೇಂದ್ರಿಯಜನ್ಯಂ ಸರ್ವಮೇವ ಜ್ಞಾನಮ್, ತಥಾಪೀಂದ್ರಿಯತ್ವೇನ ರೂಪೇಣೇಂದ್ರಿಯಾಣಾಂ ಯತ್ರ ಜ್ಞಾನೇ ಕಾರಣತ್ವಂ ತತ್ ಪ್ರತ್ಯಕ್ಷಮಿತಿ ವಿವಕ್ಷಿತಮ್ । ಈಶ್ವರ ಪ್ರತ್ಯಕ್ಷಂ ತು ನ ಲಕ್ಷ್ಯಮ್ । 'ಇಂದ್ರಿಯಾರ್ಥಸನ್ನಿಕರ್ಷೋತ್ಪನ್ನಂ ಜ್ಞಾನಮವ್ಯಪದೇಶ್ಯಮವ್ಯಭಿಚಾರಿ ವ್ಯವಸಾಯಾತ್ಮಕಂ ಪ್ರತ್ಯಕ್ಷಮ್' (ನ್ಯಾ-ಸೂ-೧-೧-೪) ಇತಿ ಸೂತ್ರೇ ತಥೈವೋಕ್ತತ್ವಾತ್ ||

'ಪ್ರತ್ಯಕ್ಷಂ—' ಎಂಬ ಕಾರಿಕೆಯಿಂದ ಅನುಭವಚತುಷ್ಟಯವನ್ನು ಹೇಳುತ್ತಾನೆ. 'ಪ್ರತಿಗತಂ ಅಕ್ಷಂ' ಪ್ರತ್ಯಕ್ಷಮ್ ಇಂದ್ರಿಯಾದಿಗಳಾಗುತ್ತವೆ. ಈ ಇಂದ್ರಿಯ ಜನ್ಯ ಜ್ಞಾನವೂ ಪ್ರತ್ಯಕ್ಷ ಅನುಭೂತಿಯಾಗುತ್ತದೆ. ಅನುಮೀಯತೇ ಅನೇನ ಇತಿ ಅನುಮಾನಮ್. ಅನುಮಿತಿಗೆಕರಣವಾದದ್ದು ಅದರಿಂದ ಹುಟ್ಟಿದ ಜ್ಞಾನ ಅನುಮಿತಿ ಪ್ರಮಾರೂಪವಾದ ಎರಡನೆಯ ಅನುಭೂತಿ. ಉಪಮೀಯತೇ ಅನೇನ ಇತಿ ಉಪಮಾನಮ್. ಇದು ಉಪಮಿತಿಗೆ ಕರಣ. ಇದರಿಂದುಂಟಾದ ಉಪಮಿತಿರೂಪಪ್ರಮಾ ಮೂರನೆಯ ಅನುಭೂತಿ. ಶಬ್ದ್ಯತೇ—ಪ್ರತಿಪಾದ್ಯತೇ ಅನೇನ ಅರ್ಥ. ಇತಿ ಶಬ್ದಃ ಶಾಬ್ದಜ್ಞಾನಕ್ಕೆಕರಣವಾದದ್ದು. ಶಾಬ್ದಪ್ರಮಾ ಹುಟ್ಟುತ್ತದೆ. ಇದು ನಾಲ್ಕನೇ ಅನುಭೂತಿ. ಹೀಗೆ ನಾಲ್ಕು ಪ್ರಮಾತ್ಮಕ ಅನುಭವಗಳು. ಇವುಗಳಿಗೆ ಕರಣಗಳಾದ ಪ್ರಮಾಣಗಳೂ ನಾಲ್ಕು.

ಮೊದಲನೆಯ ಪ್ರತ್ಯಕ್ಷಪ್ರಮಾರೂಪ ಅನುಭವವನ್ನು ತೋರಿಸುತ್ತಾನೆ. 'ಇಂದ್ರಿಯ—' ಇತಿ. 'ಇಂದ್ರಿಯಜನ್ಯತ್ವೇ ಸತಿ ಜ್ಞಾನತ್ವಂ' ಪ್ರತ್ಯಕ್ಷದ ಲಕ್ಷಣ. ಇಂದ್ರಿಯಜನ್ಯತ್ವ ಇಂದ್ರಿಯರೂಪಾದಿಗಳಲ್ಲಿಯೂ ಇರುವುದರಿಂದ ಇಂದ್ರಿಯಜನ್ಯತ್ವವೆಂದಿದೆ. ಸಾಕ್ಷಾತ್ ಇಂದ್ರಿಯಗಳಿಂದುಂಟಾದ ಜ್ಞಾನಕ್ಕೆ ಪ್ರತ್ಯಕ್ಷವೆಂದು ಹೆಸರು. ಹೀಗೆ ಹೇಳಿದರೂ ಅನುಮಿತ್ಯಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಮನೋರೂಪ ಇಂದ್ರಿಯದಿಂದ ಸಕಲಜ್ಞಾನವೂ ಹುಟ್ಟುತ್ತದೆಂದು ಆಶಂಕಿಸುತ್ತಾನೆ. 'ಯದ್ಯಪಿ—' ಇತಿ. ಜನ್ಯಜ್ಞಾನಸಾಮಾನ್ಯವೂ ಮನಸ್ಸಿಂದ ಹುಟ್ಟುತ್ತದೆ. ಸಮಾಧಾನ ತೋರಿಸುತ್ತಾನೆ. 'ತಥಾಪಿ—' ಇತಿ. ಇಂದ್ರಿಯತ್ವರೂಪದಿಂದ ಇಂದ್ರಿಯಗಳು ಯಾವ ಜ್ಞಾನದಲ್ಲಿ ಕಾರಣವಾಗುತ್ತವೆಯೋ ಆ ಜ್ಞಾನಕ್ಕೆ ಪ್ರತ್ಯಕ್ಷವೆಂದು ಹೆಸರು. ಇಂದ್ರಿಯ ಲಕ್ಷಣವನ್ನು ಮುಂದೆ ಹೇಳುತ್ತಾನೆ. ಆ ಲಕ್ಷಣಲಕ್ಷಿತ ಇಂದ್ರಿಯತ್ವದಿಂದ ಕೂಡಿದ ಇಂದ್ರಿಯವು ಕರಣವಾದರೆ ಆಗ ಆ ಜ್ಞಾನ ಪ್ರತ್ಯಕ್ಷವಾಗುತ್ತದೆ. ಮನಸ್ಸಾದರೋ ಮನಸ್ತ್ವರೂಪದಿಂದ ಜ್ಞಾನಮಾತ್ರವನ್ನು ಕುರಿತು ಅಂದರೆ ಅನುಮಿತ್ಯಾದಿಜ್ಞಾನ ಸಾಧಾರಣವನ್ನು ಕುರಿತು ಕಾರಣವಾಗುತ್ತದೆ. ಇಂದ್ರಿಯತ್ವರೂಪದಿಂದ ಮನಸ್ಸು

ಕರಣವಾಗುವುದಿಲ್ಲ. ಸುಖಾದಿಸಾಕ್ಷಾತ್ಕಾರದಲ್ಲಿ ಮಾತ್ರ ಮನಸ್ಸು ಇಂದ್ರಿಯತ್ವ ರೂಪದಿಂದ ಕಾರಣವಾಗುತ್ತದೆ. ಜ್ಞಾನಸಾಮಾನ್ಯಕ್ಕೆ ಅದು ಸಾಧಾರಣಕಾರಣ. ಚಕ್ಷುರಾದಿ ಇಂದ್ರಿಯಗಳಾದರೋ ಆಯಾಯರೂಪಾದಿ ಜ್ಞಾನವನ್ನು ಕುರಿತು ಅಸಾಧಾರಣ ಕಾರಣಗಳಾಗುತ್ತವೆ. ಹೀಗೆ ಹೇಳುವುದರಿಂದ ಅನುಮಿತ್ಯಾದಿಗಳಲ್ಲಿ ಅತಿವ್ಯಾಪ್ತಿ ಬರುವುದಿಲ್ಲ. ಕೆಲವರು 'ಇಂದ್ರಿಯತ್ವೇನ' ಎಂಬುದಕ್ಕೆ ಇಂದ್ರಿಯತ್ವವ್ಯಾಪ್ಯಘ್ರಾಣತ್ವಾದಿ ರೂಪದಿಂದ ಕಾರಣವೆನ್ನುತ್ತಾರೆ. ಆಗ ಎಲ್ಲಿಯೂ ಅತಿವ್ಯಾಪ್ತಿಗೆ ಅವಕಾಶವೇ ಇರುವುದಿಲ್ಲ.

ಈಶ್ವರನ ಪ್ರತ್ಯಕ್ಷವು ಇಂದ್ರಿಯಜನ್ಯವಲ್ಲ. ಇಂದ್ರಿಯಜನ್ಯಜ್ಞಾನವೆಂದರೆ ಈಶ್ವರ ಪ್ರತ್ಯಕ್ಷದಲ್ಲಿ ಅವ್ಯಾಪ್ತಿಬರುವುದರಿಂದ ಅದು ಲಕ್ಷ್ಯವೇ ಅಲ್ಲವೆಂದು ತೋರಿಸುತ್ತಾನೆ. 'ಈಶ್ವರ—' ಇತಿ. ಇಲ್ಲಿ ಜನ್ಯಪ್ರತ್ಯಕ್ಷವೇ ಲಕ್ಷ್ಯವಾದುದರಿಂದ ಈಶ್ವರನ ಪ್ರತ್ಯಕ್ಷ ಜನ್ಯವಾಗದಿರುವುದರಿಂದ ಅಲ್ಲಿ ಈಲಕ್ಷಣ ಬರಬೇಕಾಗಿಲ್ಲ. ಈ ವಿಷಯದಲ್ಲಿ ಸೂತ್ರ ಪ್ರಮಾಣವನ್ನು ತೋರಿಸುತ್ತಾನೆ. 'ಇಂದ್ರಿಯಾರ್ಥ—' ಇತಿ. ಇಂದ್ರಿಯವೆಂದರೆ ಚಕ್ಷುರಾದಿಗಳು. ಇವುಗಳಿಗೆ ಅರ್ಥೇನ— ಘಟಾದಿಗಳೊಡನೆ, ಸನ್ನಿಕರ್ಷಾತ್—ಸಂಯೋಗಾದಿ ಆರುವಿಧಗಳಾದ ವ್ಯಾಪಾರಗಳಿಂದ, ಉತ್ಪನ್ನಂ—ಯಾವ ಜ್ಞಾನ ಹುಟ್ಟುತ್ತದೆಯೋ ಅದೇ ಪ್ರತ್ಯಕ್ಷಜ್ಞಾನ. ಭ್ರಮಾತ್ಮಕಜ್ಞಾನವೂ ( ಶುಕ್ತಿಯನ್ನು ನೋಡಿ ರಜತವೆಂದು ತಿಳಿಯುವುದು ) ಇಂದ್ರಿಯಾರ್ಥಸಂನಿಕರ್ಷದಿಂದ ಉಂಟಾಗುವುದರಿಂದ ಅಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ ಸೂತ್ರದಲ್ಲಿ 'ಅವ್ಯಭಿಚಾರಿ' ಎಂದು ಹೇಳಿದೆ. (ಸಂವಾದಿಪ್ರವೃತ್ತಿಜನಕಂ) ಭ್ರಮಭಿನ್ನವಾಗಿರಬೇಕೆಂದು ತಾತ್ಪರ್ಯ. ಇದು ಎರಡು ವಿಧವಾಗಿದೆಯೆಂದು ಅಲ್ಲಿಯೇ ಹೇಳಿದೆ. ಅವ್ಯಪದೇಶ್ಯಂ—ನಿರ್ವಿಕಲ್ಪಕರೂಪವಾದದ್ದು. ವ್ಯವಸಾಯಾತ್ಮಕಂ—ಸವಿಕಲ್ಪಕವೆಂದರ್ಥ. ಆಗ 'ಇಂದ್ರಿಯಾರ್ಥಸನ್ನಿಕರ್ಷೋತ್ಪನ್ನಂ, ಅವ್ಯಭಿಚಾರಿ, ಅವ್ಯಪದೇಶ್ಯಂ, ವ್ಯವಸಾಯಾತ್ಮಕಂ ಪ್ರತ್ಯಕ್ಷಮ್' ಎಂದು ಅನ್ವಯ. ಇದರಿಂದ ಈಶ್ವರಪ್ರತ್ಯಕ್ಷ ಲಕ್ಷ್ಯವಲ್ಲವೆಂದು ಸ್ಪಷ್ಟವಾಗುತ್ತದೆ. ||

ಅಥವಾ ಜ್ಞಾನಾಕರಣಕಂ ಜ್ಞಾನಂ ಪ್ರತ್ಯಕ್ಷಮ್ । ಅನುಮಿತೌ ವ್ಯಾಪ್ತಿಜ್ಞಾನಸ್ಯ, ಉಪಮಿತೌ ಸಾದೃಶ್ಯಜ್ಞಾನಸ್ಯ, ಶಾಬ್ದಬೋಧೇ ಪದಜ್ಞಾನಸ್ಯ, ಸ್ಮೃತೌ ಅನುಭವಸ್ಯ ಕರಣತ್ವಾತ್ತತ್ರ ತತ್ರ ನಾತಿವ್ಯಾಪ್ತಿಃ । ಇದಂ ಲಕ್ಷಣಮೀಶ್ವರಪ್ರತ್ಯಕ್ಷಸಾಧಾರಣಮ್ । ಪರಾಮರ್ಶಜನ್ಯಂ ಜ್ಞಾನಮನುಮಿತಿಃ । ಯದ್ಯಪಿ ಪರಾಮರ್ಶಪ್ರತ್ಯಕ್ಷಾದಿಕಂ ಪರಾಮರ್ಶಜನ್ಯಮ್, ತಥಾಪಿ ಪರಾಮರ್ಶಜನ್ಯಂ ಹೇತ್ವವಿಷಯಕಂ ಯತ್ಜ್ಞಾನಂ ತದೇವಾನುಮಿತಿಃ ! ನ ಚ ಕಾದಾಚಿತ್ಕಹೇತು ವಿಷಯಕಾನುಮಿತಾವವ್ಯಾಪ್ತಿರಿತಿವಾಚ್ಯಮ್, ತಾದೃಶಜ್ಞಾನಾವೃತ್ತ್ಯನುಭವತ್ವವ್ಯಾಪ್ಯಜಾತಿಮತ್ವಸ್ಯ ವಿವಕ್ಷಿತತ್ವಾತ್ ||

ಜೀವೇಶ್ವರ ಸಾಧಾರಣವಾದ ಪ್ರತ್ಯಕ್ಷ ಲಕ್ಷಣವನ್ನು ತೋರಿಸುತ್ತಾನೆ.

'ಅಥವಾ—' ಇತಿ. 'ಜ್ಞಾನಂ ನ ಕರಣಂ ಯಸ್ಯ ತದ್ ಜ್ಞಾನಾಕರಣಮ್' ಜ್ಞಾನ ಪದದಿಂದ ವ್ಯಾಪ್ತಿಜ್ಞಾನಾದಿಗಳನ್ನು ತೆಗೆದುಕೊಳ್ಳಬೇಕು. ಅನುಮಿತಿಯನ್ನು ಕುರಿತು ವ್ಯಾಪ್ತಿಜ್ಞಾನವು ಕರಣ. ಉಪಮಿತಿಯನ್ನು ಕುರಿತು ಸಾದೃಶ್ಯಜ್ಞಾನ ಕರಣ. ಶಾಬ್ದ ಬೋಧವನ್ನು ಕುರಿತು ಪದಜ್ಞಾನ ಕರಣ. ಆದರೆ ಪ್ರತ್ಯಕ್ಷವನ್ನು ಕುರಿತು ಯಾವ ಜ್ಞಾನವೂ ಕರಣವಾಗಿಲ್ಲ. ಜ್ಞಾನಕರಣವಾಗದಿರುವ ಜ್ಞಾನವೆಂದರೆ ಜೀವೇಶ್ವರ ಸಾಧಾರಣವಾಗುವುದರಿಂದ ಅವ್ಯಾಪ್ತಿಯಾಗಲೀ ಅನುಮಿತ್ಯಾದಿಗಳಲ್ಲಿ ಬಾರದಿರುವುದ ರಿಂದ ಅತಿವ್ಯಾಪ್ತಿಯಾಗಲೀ ಬರುವುದಿಲ್ಲ. ಸ್ಮೃತ್ಯಾತ್ಮಕಜ್ಞಾನಕ್ಕೆ ಅನುಭವಕರಣ ವಾಗುವುದರಿಂದ ಅಲ್ಲಿಯೂ ಅತಿವ್ಯಾಪ್ತವಾಗುವುದಿಲ್ಲ. ಇದನ್ನೇ 'ಇದಂಲಕ್ಷಣಂ—' ಎಂಬುದರಿಂದ ವಿವರಿಸುತ್ತಾನೆ. ಹೀಗೆ ಪ್ರತ್ಯಕ್ಷಪ್ರಮೆಯನ್ನು ತೋರಿಸಿ ಅನುಮಿತಿ ಲಕ್ಷಣ ಹೇಳುತ್ತಾನೆ. 'ಪರಾಮರ್ಶ—' ಇತಿ. ಪರಾಮರ್ಶದಿಂದ ಹುಟ್ಟಿದ ಜ್ಞಾನಕ್ಕೆ ಅನುಮಿತಿಯೆಂದು ಹೆಸರು. 'ವಹ್ನಿವ್ಯಾಪ್ಯಧೂಮವಾನ್ ಅಯಂ ಪರ್ವತಃ' ಎಂದು ಬರುವ ಜ್ಞಾನವು ವ್ಯಾಪ್ತಿವಿಶಿಷ್ಟಪಕ್ಷಧರ್ಮತಾಜ್ಞಾನರೂಪವಾಗಿ ಪರಾಮರ್ಶವಾಗು ತ್ತದೆ. ವಹ್ನಿಯವ್ಯಾಪ್ತಿಯಿಂದ ಕೂಡಿರುವುದು ಧೂಮ. ಆ ಧೂಮಪರ್ವತದಲ್ಲಿದೆ ಯೆಂಬ ಜ್ಞಾನ. ಇದರಿಂದ 'ಪರ್ವತೋ ವಹ್ನಿಮಾನ್' (ಪರ್ವತ ವಹ್ನಿಯಿಂದ ಕೂಡಿದೆ) ಎಂಬ ಅನುಮಿತಿ ಜ್ಞಾನ ಬರುತ್ತದೆ. ವ್ಯಾಪ್ತಿಜ್ಞಾನವು ಪರಾಮರ್ಶಜ್ಞಾನ ಮೂಲಕ ಅನುಮಿತಿಯನ್ನು ಹುಟ್ಟಿಸುತ್ತದೆ. ಇದು ಅನುಮಾನ ಖಂಡದಲ್ಲಿ ವಿವರಿಸ ಲ್ಪಡುತ್ತದೆ. ಅನುಮಿತಿ ಲಕ್ಷಣದಲ್ಲಿ ಅತಿವ್ಯಾಪ್ತಿಯನ್ನು ಆಶಂಕಿಸುತ್ತಾನೆ. 'ಯದ್ಯಪಿ—' ಇತಿ. ಪರಾಮರ್ಶಪ್ರತ್ಯಕ್ಷವು ಪರಾಮರ್ಶದಿಂದಲೇ ಹುಟ್ಟುತ್ತದೆ (ವಿಷಯ ರೂಪದಿಂದ) ಪರಾಮರ್ಶಧ್ವಂಸವೂ (ಪ್ರತಿಯೋಗಿರೂಪದಿಂದ) ಪರಾಮರ್ಶದಿಂದ ಹುಟ್ಟುತ್ತದೆ. ಧ್ವಂಸಕ್ಕೆ ಪ್ರತಿಯೋಗಿ ಕಾರಣ. ಆದುದರಿಂದ ಪರಾಮರ್ಶಜನ್ಯತ್ವವು ಅನುಮಿತಿಯಲ್ಲಿ ಬಂದಂತೆ ಪರಾಮರ್ಶಪ್ರತ್ಯಕ್ಷ ಮತ್ತು ಅದರ ಧ್ವಂಸದಲ್ಲಿಯೂ ಬರು ವುದರಿಂದ ಅತಿವ್ಯಾಪ್ತವಾಗುತ್ತದೆ. 'ತಥಾಪಿ—' ಎಂಬುದರಿಂದ ಸಮಾಧಾನ ತೋರಿಸು ತ್ತಾನೆ. 'ಪರಾಮರ್ಶಜನ್ಯತ್ವೇ ಸತಿ ಹೇತ್ವವಿಷಯಕತ್ವೇ ಸತಿ ಜ್ಞಾನತ್ವಂ' ಎಂದು ಅನುಮಿತಿಲಕ್ಷಣ. ಅನುಮಿತಿಯು ಪರಾಮರ್ಶಜ್ಞಾನದಿಂದ ಹುಟ್ಟಿ ಹೇತ್ವವಿಷಯಕ ವಾಗಿದೆ. ಅಂದರೆ ಈ ಜ್ಞಾನವು ಹೇತುವನ್ನು ವಿಷಯೀಕರಿಸುವುದಿಲ್ಲ. ಹೇತುವು ಇಲ್ಲಿ ವಿಷಯವಾಗಿ ತೋರುವುದಿಲ್ಲ. 'ವಹ್ನಿವ್ಯಾಪ್ಯಧೂಮವಾನಯಂ ಪರ್ವತಃ' ಎಂಬ ಪರಾ ಮರ್ಶಜ್ಞಾನದಲ್ಲಿ ಧೂಮರೂಪ ಹೇತುವೂ ತೋರುವುದರಿಂದ ಹೇತ್ವವಿಷಯಕವಾಗುವು ದಿಲ್ಲ. ಅನುವ್ಯವಸಾಯರೂಪವಾದ ಪರಾಮರ್ಶಪ್ರತ್ಯಕ್ಷದಲ್ಲಿಯೂ ಹೇತುಭಾವ ಇದ್ದೇ ಇದೆ. ವ್ಯವಸಾಯಜ್ಞಾನವು ಯಾವುವನ್ನು ವಿಷಯೀಕರಿಸುವುದೋ ಅನುವ್ಯವ ಸಾಯವು ಅದೆಲ್ಲವನ್ನೂ ವಿಷಯೀಕರಿಸುತ್ತದೆ. 'ಪರ್ವತೋವಹ್ನಿಮಾನ್' ಎಂಬ ಅನುಮಿತಿಜ್ಞಾನ ಹೇತ್ವವಿಷಯಕವಾದುದರಿಂದ ಎಲ್ಲಿಯೂ ದೋಷ ಬರುವುದಿಲ್ಲ.

'ಧೂಮವಾನ್ ಪರ್ವತೋ ವಹ್ನಿಮಾನ್' ಎಂದು ಕೆಲವು ಸಮಯ ಅನುಮಿತಿ

ಬರುತ್ತದೆ. ಈ ಜ್ಞಾನದಲ್ಲಿ ಧೂಮರೂಪಹೇತುವು ಪಕ್ಷತಾವಚ್ಛೇದಕರೂಪದಿಂದ ತೋರುತ್ತದೆ. ಧೂಮವಿಶಿಷ್ಟವಾದ ಪರ್ವತ ಎಂದುದರಿಂದ ಪಕ್ಷಕ್ಕೆ ಅದು ವಿಶೇಷಣ ವಾಗುವುದರಿಂದ ಅವಚ್ಛೇದಕವಾಗುತ್ತದೆ. ಇದನ್ನೇ 'ನಚ—' ಎಂದು ಆಶಂಕಿಸಿ ಸಮಾಧಾನ ತೋರಿಸುತ್ತಾನೆ. ಯಾವಾಗಲಾದರೂ ಬರುವ ಈ ಅನುಮಿತಿಜ್ಞಾನವು ಹೇತ್ವವಿಷಯಕವಾಗದಿರುವುದರಿಂದ ಅನುಮಿತಿಲಕ್ಷಣವು ಅವ್ಯಾಪ್ತವಾಗುತ್ತದೆ. ಆದುದ ರಿಂದ ಜಾತಿಘಟಿತಲಕ್ಷಣಮಾಡಬೇಕು. 'ತಾದೃಶ—' ಇತಿ. ತಾದೃಶಜ್ಞಾನದಿಂದ 'ವ್ಯಾಪ್ತಿವಿಶಿಷ್ಟಪಕ್ಷಧರ್ಮತಾಜ್ಞಾನಜನ್ಯಜ್ಞಾನವನ್ನು ತೆಗೆದುಕೊಳ್ಳಬೇಕು. ಆಜ್ಞಾನ ಅನುಮಿತಿಯೇ ಆಗುತ್ತದೆ. ಅಲ್ಲಿ ಇರತಕ್ಕ ಅನುಭವತ್ವವ್ಯಾಪ್ಯಜಾತಿ ಅಂದರೆ ಅನು ಮಿತಿತ್ವರೂಪ ಜಾತಿ. ಅದು ಉಳ್ಳದ್ದು ಎಲ್ಲಾ ಅನುಮಿತಿಗಳೂ ಆಗುತ್ತವೆ. ಪ್ರಕೃತ ಹೇತ್ವವಿಷಯಕತ್ವವು 'ಧೂಮವಾನ್ ಪರ್ವತಃ ವಹ್ನಿಮಾನ್' ಎಂಬಲ್ಲಿ ಬಾರದಿದ್ದರೂ ಅನುಮಿತಿತ್ವರೂಪಜಾತಿಯು ಅದರಲ್ಲಿ ಬರುವುದರಿಂದ ಅವ್ಯಾಪ್ತಿದೋಷಕ್ಕೆ ಅವಕಾಶವಿಲ್ಲ.

ಅಥವಾ ವ್ಯಾಪ್ತಿಜ್ಞಾನಕರಣಕಂ ಜ್ಞಾನಮನುಮಿತಿಃ । ಏವಂ ಸಾದೃಶ್ಯಜ್ಞಾನಕರಣಕಂ ಜ್ಞಾನಮುಪಮಿತಿಃ । ಪದಜ್ಞಾನಕರಣಕಂ ಜ್ಞಾನಂ ಶಾಬ್ದಬೋಧಃ । (ವಸ್ತು ತಸ್ತು—ಯಾಂ ಕಾಂಚಿದನುಮಿತಿವ್ಯಕ್ತಿಮಾದಾಯ ತದ್ವ್ಯಕ್ತಿವೃತ್ತಿಪ್ರತ್ಯಕ್ಷಾ ವೃತ್ತಿ ಜಾತಿಮತ್ತ್ವಮನುಮಿತಿತ್ವಮ್ । ಏವಂ ಯತ್ಕಿಂಚಿತ್ಪ್ರತ್ಯಕ್ಷಾದಿಕ ಮಾದಾಯ ತದ್ವ್ಯಕ್ತಿವೃತ್ತ್ಯನುಮಿತ್ಯವೃತ್ತಿ ಜಾತಿಮತ್ತ್ವಂ ಪ್ರತ್ಯಕ್ಷಾದಿಕಂ ವಾಚ್ಯಮಿತಿ) ಜನ್ಯಪ್ರತ್ಯಕ್ಷಂ ವಿಭಜತೇ–ಘ್ರಾಣಜಾದೀತಿ। ಘ್ರಾಣಜಂ ರಾಸನಂ ಚಾಕ್ಷುಷಂ ಸ್ಪಾರ್ಶನಂ ಶ್ರೌತ್ರಂ ಮಾನಸಮಿತಿ ಷಡ್ವಿಧಂ ಪ್ರತ್ಯಕ್ಷಮ್ । ನ ಚೇಶ್ವರಪ್ರತ್ಯಕ್ಷಸ್ಯಾವಿಭಜನಾತ್ ನ್ಯೂನತ್ವಮ್, ಜನ್ಯಪ್ರತ್ಯಕ್ಷಸ್ಯೈವ ನಿರೂಪ ಣೀಯತ್ವಾದ್ಯುಕ್ತಸೂತ್ರಾನುಸಾರಾತ್ ॥ ೫೨ ॥)

ಹಿಂದಿನಲಕ್ಷಣದಲ್ಲಿ ಪಕ್ಷಧರ್ಮತಾಜ್ಞಾನವೂ ಸೇರಿರುವುದರಿಂದ ಗೌರವವೆಂದು ತಿಳಿದು ಶರೀರಕೃತಲಾಘವದಿಂದ ಬೇರೆ ಲಕ್ಷಣವನ್ನು ತೋರಿಸುತ್ತಾನೆ. 'ಅಥವಾ—' ಇತಿ. ವ್ಯಾಪ್ತಿಜ್ಞಾನವೇ ಕರಣವಾಗಿರುವ ಜ್ಞಾನಕ್ಕೆ ಅನುಮಿತಿಯೆಂದು ಹೆಸರು. 'ಹೇತುಮನ್ನಿಷ್ಠಾತ್ಯಂತಾಭಾವಾಪ್ರತಿಯೋಗಿ ಸಾಧ್ಯಸಾಮಾನಾಧಿಕರಣ್ಯಂ' ಎಂದು ವ್ಯಾಪ್ತಿಸ್ವರೂಪವನ್ನು ಮುಂದೆ ಹೇಳುತ್ತಾನೆ. ಎಲ್ಲೆಲ್ಲಿ ಧೂಮವೋ ಅಲ್ಲಲ್ಲಿ ಅಗ್ನಿಯೆಂಬ ಪ್ರತ್ಯಕ್ಷಾತ್ಮಕಜ್ಞಾನವು ಕರಣ ಅಂದರೆ ವ್ಯಾಪಾರವಿಶಿಷ್ಟ ಅಸಾಧಾರಣ ಕಾರಣ ಯಾವ ಜ್ಞಾನಕ್ಕಿದೆಯೋ ಅದೇ ಅನುಮಿತಿ. ಈ ಕರಣವು ಸಾಧ್ಯಹೇತುಗಳಿಗಿರುವ ಸಾಹಚರ್ಯ ರೂಪವಾದ ಜ್ಞಾನವಾಗುತ್ತದೆ. ಹೀಗೆ ಸಾದೃಶ್ಯಜ್ಞಾನವೇ ಕರಣವಾಗಿರುವ ಜ್ಞಾನಕ್ಕೆ ಉಪಮಿತಿಯೆಂದೂ, ಪದಜ್ಞಾನವೇ ಕರಣವಾಗಿರುವ ಜ್ಞಾನಕ್ಕೆ ಶಾಬ್ದಬೋಧವೆಂದೂ ಹೆಸರು.

ಅನುಮಿತಿಯನ್ನು ಕುರಿತು ವ್ಯಾಪ್ತಿಜ್ಞಾನಕ್ಕೆ ಕರಣತ್ವ ಹೇಳಬೇಕಾಗಿಲ್ಲ.

ಮನಸ್ಸಿಗೆ ಲಾಘವದಿಂದ ಕರಣತ್ವ ಹೇಳಿದರೂ ತೊಂದರೆ ಇಲ್ಲ. ಮನಸ್ಸು ಒಂದಾದರೂ ಆಯಾಯ ಸಾಮಗ್ರಿಭೇದದಿಂದ ಅನುಮಿತ್ಯಾದಿಫಲವೈಲಕ್ಷಣ್ಯವು ಬರುತ್ತದೆ. ಪ್ರತ್ಯಕ್ಷಕ್ಕೆ ಮನಸ್ತ್ವರೂಪದಿಂದ ಕರಣವೆಂದರೂ ಚಕ್ಷುರಾದಿಸಾಮಗ್ರೀಭೇದದಿಂದ ಚಾಕ್ಷುಷಾದಿ ಪ್ರಮಾವೆಂಬ ವ್ಯವಹಾರ ಬರುತ್ತದೆ; ಎಂದು ಹೇಳುವುದಾದರೆ ಆಗ ಸಿದ್ಧಾಂತ ರೀತಿ ಯಿಂದ ಲಕ್ಷಣ ತೋರಿಸುತ್ತಾನೆ. 'ವಸ್ತುತಸ್ತು—' ಇತಿ.

ಯಾವುದಾದರೂ ಒಂದು ಅನುಮಿತಿಯನ್ನು ತೆಗೆದುಕೊಂಡು ಅಂದರೆ ಪ್ರಕೃತ 'ಪರ್ವತೋವಹ್ನಿಮಾನ್' ಎಂಬ ಅನುಮಿತಿಯನ್ನು ಸ್ವೀಕರಿಸಿ, ಅದರಲ್ಲಿರುವ ಪ್ರತ್ಯಕ್ಷಾ ದಿಗಳಲ್ಲಿ ಇಲ್ಲದಿರುವ ಜಾತಿ ಅಂದರೆ ಅರ್ಥಾತ್ ಅನುಮಿತಿತ್ವಜಾತಿಯೇ ಆಗುತ್ತದೆ. ಆ ಜಾತಿಯಿಂದ ಕೂಡಿರುವುದು ಅನುಮಿತಿಯ ಲಕ್ಷಣ. ತದ್ವ್ಯಕ್ತಿವೃತ್ತಿಃ—(ತಸ್ಯಾಂ ವ್ಯಕ್ತೌ ವೃತ್ತಿಃ ಯಸ್ಯಾಃ) ಆ ಅನುಮಿತಿ ವ್ಯಕ್ತಿಯಲ್ಲಿರುವುದು, ಪ್ರತ್ಯಕ್ಷಾವೃತ್ತಿಃ— (ಪ್ರತ್ಯಕ್ಷೇ ಅವೃತ್ತಿಶ್ಚ ಯಸ್ಯಾಃ ಸಾ) ಪ್ರತ್ಯಕ್ಷಾದಿಗಳಲ್ಲಿ ಇಲ್ಲದಿರುವುದು. ಏವಂಭೂತಾ ಯಾಜಾತಿಃ ತದ್ವತ್ವಂ ಅನುಮಿತಿತ್ವಮ್. 'ಏವಂ—' ಇತಿ. ಹೀಗೆಯೇ ಪ್ರತ್ಯ ಕ್ಷಾದಿ ಲಕ್ಷಣವನ್ನೂ ಊಹಿಸಿ ತಿಳಿಯಬೇಕು. ಯಾವುದಾದರೊಂದು ಪ್ರತ್ಯಕ್ಷವನ್ನು ಅಂಗೀಕರಿಸಿ ಆ ಪ್ರತ್ಯಕ್ಷದಲ್ಲಿ ಇರುವ, ಅನುಮಿತ್ಯಾದಿಗಳಲ್ಲಿ ಇಲ್ಲದಿರುವ ಜಾತಿಯೆಂದರೆ ಪ್ರತ್ಯಕ್ಷತ್ವ ಜಾತಿ. ಅದು ಉಳ್ಳದ್ದು ಪ್ರತ್ಯಕ್ಷ. 'ಯತ್ಕಿಂಚಿದುಪಮಿತಿವ್ಯಕ್ತಿವೃತ್ತಿ, ಪ್ರತ್ಯಕ್ಷಾಸಮವೇತ (ಪ್ರತ್ಯಕ್ಷಾದಿಗಳಲ್ಲಿ ಸಮವಾಯ ಸಂಬಂಧದಿಂದ ಇಲ್ಲದಿರುವುದು) ಜಾತಿಮತ್ತ್ವಂ' ಉಪಮಿತಿಲಕ್ಷಣಮ್. 'ಯತ್ಕಿಂಚಿಚ್ಛಾಬ್ದಬೋಧವ್ಯಕ್ತಿವೃತ್ತಿ ಪ್ರತ್ಯಕ್ಷಾದ್ಯಸಮವೇತಜಾತಿಮತ್ತ್ವಂ' ಶಾಬ್ದಬೋಧಲಕ್ಷಣಮ್. ಜನ್ಯಪ್ರತ್ಯಕ್ಷದ ವಿಭಾಗವನ್ನು ತೋರಿಸುತ್ತಾನೆ. 'ಘ್ರಾಣಜಾದಿ—' ಇತಿ. ಘ್ರಾಣಜ, (ಮೂಗಿ ನಿಂದಾಗುವ) ರಾಸನ (ನಾಲಗೆಯಿಂದಾಗುವ) ಚಾಕ್ಷುಷ (ಕಣ್ಣಿನಿಂದಾಗುವ) ಸ್ಪಾರ್ಶ ನ (ಚರ್ಮದಿಂದಾಗುವ) ಶ್ರೌತ್ರ (ಕಿವಿಯಿಂದಾಗುವ) ಮಾನಸ (ಮನಸ್ಸಿನಿಂದಾಗುವ) ವೆಂದು ಪ್ರತ್ಯಕ್ಷವು ಆರು ರೀತಿಯಾಗುತ್ತದೆ. ಇವೆಲ್ಲವೂ ಇಂದ್ರಿಯಗಳಿಂದ ಆಗುತ್ತವೆ. ಈಶ್ವರನ ಪ್ರತ್ಯಕ್ಷವು ಇಂದ್ರಿಯಗಳಿಂದ ಉಂಟಾಗುವುದಿಲ್ಲ. ಈ ಆರರಿಂದ ಅದು ವಿಲಕ್ಷಣ ವಾದುದರಿಂದ ಏಳನೇದಾಗಿ ಹೇಳದಿರುವುದರಿಂದ ಗ್ರಂಥನ್ಯೂನತೆ ಬರುವುದಿಲ್ಲವೇ ? ಎಂದು ಶಂಕಿಸಿ ಸಮಾಧಾನ ತೋರಿಸುತ್ತಾನೆ. 'ನಚ—' ಇತಿ. ಈಗ ಹೇಳಿರುವ ಪ್ರತ್ಯಕ್ಷವು ಇಂದ್ರಿಯಾರ್ಥಸಂನಿಕರ್ಷದಿಂದ ಉಂಟಾಗುವ ಪ್ರತ್ಯಕ್ಷವೆಂದು ಸೂತ್ರದಲ್ಲಿ ಹೇಳಿರುವುದ ರಿಂದ ಕೇವಲ ಜನ್ಯಪ್ರತ್ಯಕ್ಷವೇ ವಿಭಾಗಿಸಲು ಇಷ್ಟವಾದದ್ದು. ಪ್ರತ್ಯಕ್ಷಸಾಮಾನ್ಯವಾಗಿ ದ್ದರೆ ಈಶ್ವರ ಪ್ರತ್ಯಕ್ಷ ಸೇರುತ್ತಿತ್ತು. ಇಲ್ಲಿ ಅದು ಲಕ್ಷ್ಯವೇ ಆಗದಿರುವುದರಿಂದ ದೋಷ ವಿಲ್ಲ. ಅವನ ಪ್ರತ್ಯಕ್ಷಕ್ಕೆ ಯಾವ ಕರಣವೂ ಬೇಕಾಗಿಲ್ಲ.

**ಘ್ರಾಣಸ್ಯ ಗೋಚರೋ ಗಂಧೋ ಗಂಧತ್ವಾದಿರಪಿ ಸ್ಮೃತಃ ।**
**ತಥಾ ರಸೋ ರಸಜ್ಞಾಯಾಸ್ತಥಾ ಶಬ್ದೋಽಪಿ ಚ ಶ್ರುತೇಃ ॥ ೫೩ ॥**

ಗೋಚರ ಇತಿ । ಗ್ರಾಹ್ಯ ಇತ್ಯರ್ಥಃ । ಗಂಧತ್ವಾದಿರಿತಿ । ಆದಿ ಪದಾತ್ ಸುರಭಿತ್ವಾದಿ ಸಂಗ್ರಹಃ। ಗಂಧಸ್ಯ ಪ್ರತ್ಯಕ್ಷತ್ವಾತ್ ತದ್ವೃತ್ತಿಜಾತಿರಪಿ ಪ್ರತ್ಯಕ್ಷಾ। ಗಂಧಾಶ್ರಯ ಗ್ರಹಣೇತು ಘ್ರಾಣಸ್ಯ ನ ಸಾಮರ್ಥ್ಯಮಿತಿ ಬೋಧ್ಯಮ್ । ತಥಾ ರಸ ಇತಿ । ರಸತ್ವಾದಿ ಸಹಿತ ಇತ್ಯರ್ಥಃ । ತಥಾ ಶಬ್ದೋಽಪಿ ಶಬ್ದತ್ವಾದಿಸಹಿತಃ । ಗಂಧೋ ರಸಶ್ಚ ಉದ್ಭೂತೋ ಬೋಧ್ಯಃ ॥ ೫೩ ॥

ಯಾವ ಯಾವ ಇಂದ್ರಿಯಗಳಿಗೆ ಯಾವ ಯಾವ ವಿಷಯಗಳನ್ನು ಗ್ರಹಿಸುವುದ ರಲ್ಲಿ ಶಕ್ತಿ ಇದೆಯೆಂದು ಬೇರೆ ಬೇರೆಯಾಗಿ ತೋರಿಸುತ್ತಾನೆ. 'ಘ್ರಾಣಸ್ಯ—' ಇತಿ. ಗೋಚರ, ಗ್ರಾಹ್ಯ, ವಿಷಯ ಇವು ಪರ್ಯಾಯ ಶಬ್ದಗಳು. ಘ್ರಾಣೇಂದ್ರಿಯಕ್ಕೆ ಗಂಧವು ವಿಷಯವಾಗುವುದಲ್ಲದೆ ಗಂಧತ್ವವೂ ವಿಷಯವಾಗುತ್ತದೆ. ಗಂಧತ್ವಾದಿ ಎಂಬಲ್ಲಿ ಆದಿ ಪದದಿಂದ ಸುರಭಿತ್ವ, ಅಸುರಭಿತ್ವಗಳನ್ನು ತೆಗೆದುಕೊಳ್ಳಬೇಕು. 'ಯೇನೇಂದ್ರಿ ಯೇಣಯಾ ವ್ಯಕ್ತಿಃ ಗೃಹ್ಯತೇ ತೇನೇಂದ್ರಿಯೇಣ ತನ್ನಿಷ್ಠಾ ಜಾತಿಃ, ತದಭಾವಶ್ಚ ಗೃಹ್ಯತೇ' ಎಂಬ ನ್ಯಾಯದಿಂದ ಗಂಧತ್ವಾದಿಗಳೂ ಘ್ರಾಣೇಂದ್ರಿಯಕ್ಕೆ ವಿಷಯವಾಗು ತ್ತವೆ. ಗಂಧ ಪ್ರತ್ಯಕ್ಷವಾಗುವುದರಿಂದ ಗಂಧತ್ವಾದಿಗಳೂ ಪ್ರತ್ಯಕ್ಷವಾಗುತ್ತವೆಂದು ತಿಳಿಯಬೇಕು. 'ಗಂಧಾಶ್ರ—' ಇತಿ. ಗಂಧವು ಪ್ರತ್ಯಕ್ಷವಾದಂತೆ ಘ್ರಾಣೇಂದ್ರಿಯ ದಿಂದ ಗಂಧಕ್ಕೆ ಆಶ್ರಯವಾದ ಪೃಥಿವಿಯು ಪ್ರತ್ಯಕ್ಷವಾಗುವುದಿಲ್ಲ. ಅದನ್ನು ಗ್ರಹಿಸುವ ಶಕ್ತಿ ಅದಕ್ಕಿಲ್ಲ. ಕಣ್ಣು ಮತ್ತು ತ್ವಕ್ ಮಾತ್ರ ದ್ರವ್ಯಸಾಕ್ಷಾತ್ಕಾರದಲ್ಲಿ ಸಮರ್ಥವಾಗು ತ್ತವೆ. ರಸನೇಂದ್ರಿಯಕ್ಕೆ ರಸ, ರಸತ್ವಾದಿಗಳು ವಿಷಯವಾಗುತ್ತವೆ. ಈ ರಸವಾಗಲೀ ಗಂಧವಾಗಲೀ ಉದ್ಭೂತವಾಗಿದ್ದರೇ ಈ ಹಿಂದೆ ಹೇಳಿದ ಇಂದ್ರಿಯಗಳು ಅವುಗಳನ್ನು ಗ್ರಹಿಸುತ್ತವೆ. ಅನುದ್ಭೂತರಸ ಅಥವಾ ಗಂಧದ ಪ್ರತ್ಯಕ್ಷವಿಲ್ಲ. ಶ್ರವಣೇಂದ್ರಿಯಕ್ಕೆ ಶಬ್ದ, ಶಬ್ದತ್ವಜಾತಿ, ಶಬ್ದಾಭಾವಗಳು ವಿಷಯಗಳಾಗುತ್ತವೆ.

ಉದ್ಭೂತರೂಪಂ ನಯನಸ್ಯ ಗೋಚರೋ
ದ್ರವ್ಯಾಣಿ ತದ್ವಂತಿ ಪೃಥಕ್ತ್ವಸಂಖ್ಯೇ ॥

ವಿಭಾಗಸಂಯೋಗ ಪರಾಪರತ್ವ
ಸ್ನೇಹದ್ರವತ್ವಂ ಪರಿಮಾಣಯುಕ್ತಮ್ ॥ ೫೪ ॥

ಕ್ರಿಯಾ ಜಾತಿರ್ಯೋಗ್ಯವೃತ್ತಿಃ ಸಮವಾಯಶ್ಚ ತಾದೃಶಃ ॥
ಗೃಹ್ಣಾತಿ ಚಕ್ಷುಃ ಸಂಯೋಗಾದಾಲೋಕೋದ್ಭೂತರೂಪಯೋಃ ॥ ೫೫ ॥

ಗ್ರೀಷ್ಮೋಷ್ಮಾದಾವನುದ್ಭೂತರೂಪಮಿತಿ ನ ತತ್ಪ್ರತ್ಯಕ್ಷಮ್ । ತದ್ವಂತಿ ಉದ್ಭೂತರೂಪ ವಂತಿ ॥ ೫೪ ॥

ಯೋಗ್ಯೇತಿ । ಪೃಥಕ್ತ್ವಾದಿಕಮಪಿ ಯೋಗ್ಯವೃತ್ತಿತಯಾ ಬೋಧ್ಯಮ್ । ತಾದೃಶಃ

ಯೋಗ್ಯವ್ಯಕ್ತಿವೃತ್ತಿರಿತ್ಯರ್ಥಃ । ಚಕ್ಷುಯೋರ್ಗ್ಯತ್ವಮೇವ ಕಥಮ್ ? ತದಾಹ —ಗೃಹ್ಣಾತೀತಿ । ಆಲೋಕ ಸಂಯೋಗ ಉದ್ಭೂತರೂಪಂ ಚ ಚಾಕ್ಷುಷ ಪ್ರತ್ಯಕ್ಷೇ ಕಾರಣಮ್ । ತತ್ರ ದ್ರವ್ಯಚಾಕ್ಷುಷಂ ಪ್ರತಿ ತಯೋಃ ಸಮವಾಯ ಸಂಬಂಧೇನ ಕಾರಣತ್ವಮ್ । ದ್ರವ್ಯ ಸಮವೇತ ರೂಪಾದಿ ಪ್ರತ್ಯಕ್ಷೇ ಸ್ವಾಶ್ರಯ ಸಮವಾಯ ಸಂಬಂಧೇನ, ದ್ರವ್ಯಸಮವೇತ ಸಮವೇತಸ್ಯ ರೂಪತ್ವಾದೇಃ ಪ್ರತ್ಯಕ್ಷೇಸ್ವಾಶ್ರಯ ಸಮವಾಯ ಸಂಬಂಧೇನೇತಿ ॥ ೫೫ ॥

'ಗ್ರೀಷ್ಮಾದೌ' ಎಂಬಲ್ಲಿ ಆದಿಪದದಿಂದ ಚೂರ್ಣದಲ್ಲಿರುವ ತೇಜಸ್ಸನ್ನು ತೆಗೆದು ಕೊಳ್ಳಬೇಕು. ಇವುಗಳಲ್ಲಿ ಅನುದ್ಭೂತರೂಪವಿರುವುದರಿಂದ ಪ್ರತ್ಯಕ್ಷವಾಗುವುದಿಲ್ಲ. ಗೋಚರ ಶಬ್ದವು ನಿತ್ಯಪುಲ್ಲಿಂಗವಾದುದರಿಂದ ವಿಭಕ್ತಿ ವ್ಯತ್ಯಾಸದಿಂದ ಅನ್ವಯಮಾಡಿ ಕೊಳ್ಳಬೇಕು. 'ಯೋಗ್ಯವೃತ್ತಿತಯಾ—' ಇತಿ. ಪ್ರತ್ಯಕ್ಷಕ್ಕೆ ಯೋಗ್ಯವಾದ ವ್ಯಕ್ತಿ ಗಳಲ್ಲಿರುವ ಪೃಥಕ್ತ್ವಾದಿಗಳನ್ನೇ ತೆಗೆದುಕೊಳ್ಳಬೇಕು. ಪರಮಾಣು ಮುಂತಾದವುಗಳ ಲ್ಲಿರುವ ಪೃಥಕ್ತ್ವ ಸಂಖ್ಯಾದಿಗಳು ಯೋಗ್ಯವೃತ್ತಿಯಾಗದಿರುವುದರಿಂದ ಅವುಗಳ ಪ್ರತ್ಯಕ್ಷ ವಿಲ್ಲ. ಉದ್ಭೂತರೂಪವುಳ್ಳ ದ್ರವ್ಯ, ಪೃಥಕ್ತ್ವ, ಸಂಖ್ಯಾ, ವಿಭಾಗ, ಸಂಯೋಗ, ಪರತ್ವ, ಅಪರತ್ವ, ಸ್ನೇಹ, ದ್ರವತ್ವ, ಪರಿಮಾಣ, ಪ್ರತ್ಯಕ್ಷಯೋಗ್ಯವಾದ ಕ್ರಿಯೆ, ಜಾತಿ, ಸಮವಾಯ ಇವುಗಳು ಚಕ್ಷುರಿಂದ್ರಿಯದಿಂದ ಗ್ರಹಿಸಲ್ಪಡುತ್ತವೆ. ಇವು ಚಾಕ್ಷುಷ ಪ್ರತ್ಯಕ್ಷ ವಿಷಯಗಳು. ಚಾಕ್ಷುಷಪ್ರತ್ಯಕ್ಷವೂ ಕೇವಲ ಕಣ್ಣಿನಿಂದ ಆಗುವುದಿಲ್ಲ. ಅದಕ್ಕೂ ಸೌರಾಲೋಕಸಂಯೋಗ (ಸಂನಿಕರ್ಷಸಂಬಂಧ) ಉದ್ಭೂತರೂಪ ಇವೆರಡು ಇಲ್ಲವಾದರೆ ದ್ರವ್ಯಪ್ರತ್ಯಕ್ಷವಾಗಲಾರದು. ಇವೆರಡು ಕಾರಣಗಳಾದರೆ ಕಾರಣತಾವ ಚ್ಛೇದಕ ಸಂಬಂಧ ಯಾವುದೆಂದು ತೋರಿಸುತ್ತಾನೆ. 'ತತ್ರ—' ಇತಿ. ಘಟ ಪಟಾದಿ ದ್ರವ್ಯ ವಿಷಯಕಚಾಕ್ಷುಷಪ್ರತ್ಯಕ್ಷವಾಗಬೇಕಾದರೆ ಸಮವಾಯ ಸಂಬಂಧದಿಂದ ಇವೆರಡು ಕಾರಣಗಳಾಗುತ್ತವೆ. ಕಾರಣತಾವಚ್ಛೇದಕಸಂಬಂಧ ಸಮವಾಯ ಎಂದರ್ಥ. ಘಟ ಮತ್ತು ಆಲೋಕಗಳಿಗೆ ಇರುವ ಸಂಯೋಗವೆಂದರೆ ಅದು ಎರಡರಲ್ಲಿಯೂ ಸಮ ವಾಯದಿಂದ ಇರುತ್ತದೆ. 'ಗುಣಗುಣಿನೋಃ ಸಮವಾಯಃ' ಎಂದು ನಿಯಮ. ಉದ್ಭೂತರೂಪವೂ ಕೂಡ ಘಟಪಟಾದಿಗಳಲ್ಲಿ ಸಮವಾಯಸಂಬಂಧದಿಂದ ಇರುತ್ತದೆ. ವಿಷಯನಿಷ್ಠಸಾಕ್ಷಾತ್ಕಾರಂ ಪ್ರತಿ ಆಲೋಕಸಂಯೋಗೋದ್ಭೂತರೂಪಯೋಃ ಸಮ ವಾಯೇನ ಹೇತತ್ವಮ್' ಎಂದು ಸಿದ್ಧವಾಗುತ್ತದೆ. 'ದ್ರವ್ಯಸಮವೇತ—' ಇತಿ. ದ್ರವ್ಯವೆಂದರೆ ಘಟಾದಿದ್ರವ್ಯಗಳು. ಅದರಲ್ಲಿ ಸಮವೇತ ಅಂದರೆ ಸಮವಾಯಸಂಬಂಧ ದಿಂದ ಇರುವುದು ರೂಪಾದಿಗಳು. ಇವುಗಳ ಪ್ರತ್ಯಕ್ಷವಾಗಬೇಕಾದರೆ ಸ್ವಾಶ್ರಯ ಸಮ ವಾಯ ಸಂಬಂಧದಿಂದ ಆಲೋಕ ಸಂಯೋಗೋದ್ಭೂತರೂಪಗಳಿರಬೇಕು. ಸ್ವಂ— ಆಲೋಕ ಸಂಯೋಗ, ಉದ್ಭೂತರೂಪ. ಅವುಗಳ ಆಶ್ರಯ ಘಟಾದಿ. ಅಲ್ಲಿ ಸಮ ವಾಯದಿಂದ ಇರುವುದು. ಹೀಗೆಯೇ ದ್ರವ್ಯ ಸಮವೇತ ಸಮವೇತ ಪ್ರತ್ಯಕ್ಷದಲ್ಲಿ

ಸ್ವಾಶ್ರಯ ಸಮವೇತ ಸಮವಾಯ ಸಂಬಂಧವು, ಕಾರಣತಾನಚ್ಛೇದಕ ಸಂಬಂಧವಾಗುತ್ತದೆ. ದ್ರವ್ಯದಲ್ಲಿ ಸಮವೇತ ಅಂದರೆ ಸಮವಾಯಸಂಬಂಧದಿಂದ ಇರುವುದು ರೂಪ. ಅದರಲ್ಲಿ ಸಮವೇತವಾದದ್ದು ರೂಪತ್ವ. ಇದರ ಪ್ರತ್ಯಕ್ಷದಲ್ಲಿ ಸ್ವಾಶ್ರ—ಸಂಬಂಧದಿಂದ ಆಲೋಕ ಸಂಯೋಗ, ಉದ್ಭೂತರೂಪವು ಕಾರಣವಾಗುತ್ತದೆ. ಸ್ವಂ—ಆಲೋಕ ಸಂಯೋಗ, ಉದ್ಭೂತರೂಪ. ಸ್ವಾಶ್ರಯ—ಘಟಾದಿದ್ರವ್ಯ. ಅಲ್ಲಿ ಸಮವೇತವಾದದ್ದು ರೂಪ. ಅಲ್ಲಿ ರೂಪತ್ವಾದಿಗಳು ಸಮವಾಯ ಸಂಬಂಧದಿಂದ ಇರುತ್ತವೆ. ಗುಣ, ಗುಣಿಗಳಿಗೂ, ಜಾತಿವ್ಯಕ್ತಿಗಳಿಗೂ ಸಮವಾಯ ಸಂಬಂಧವೆಂದು ಹಿಂದೆ ಹೇಳಿವೆ. ಹೀಗೆ ಪರಂಪರಾ ಸಂಬಂಧದಿಂದ ಕಾರಣವಾಗುವುದರಿಂದ ಈ ಸಂಬಂಧವೇ ಕಾರಣತಾವಚ್ಛೇದಕಸಂಬಂಧವಾಗುತ್ತದೆ. ಆಲೋಕ ಸಂಯೋಗಕ್ಕೆ ಕಾರಣತ್ವ ಹೇಳದಿದ್ದರೆ ಕತ್ತಲೆಯಲ್ಲಿರುವ ಘಟವೂ ಪ್ರತ್ಯಕ್ಷವಾಗಬೇಕಾಗುತ್ತದೆ. ಹೀಗೆಯೇ ಉದ್ಭೂತ ರೂಪಕ್ಕೂ ಸಹಕಾರಿಕಾರಣತ್ವ ಹೇಳದಿದ್ದರೆ ಪಿಶಾಚಾದಿಗಳ ಪ್ರತ್ಯಕ್ಷವಾಗಬೇಕಾಗುತ್ತದೆ. ಆದುದರಿಂದ ಚಾಕ್ಷುಷಪ್ರತ್ಯಕ್ಷದಲ್ಲಿ ಇವೆರಡಕ್ಕೂ ಸಹಕಾರಿಕಾರಣತ್ವವನ್ನು ಹೇಳಲೇಬೇಕು.

**ಉದ್ಭೂತ ಸ್ಪರ್ಶವದ್ದ್ರವ್ಯಂ ಗೋಚರಃ ಸೋಽಪಿ ಚತ್ವಚಃ ||**
**ರೂಪಾನ್ಯಚ್ಚಕ್ಷುಷೋ ಯೋಗ್ಯಂ ರೂಪಮತ್ರಾಪಿ ಕಾರಣಮ್ || ೫೬ ||**

**ದ್ರವ್ಯಾಧ್ಯಕ್ಷೇ—**

ಉದ್ಭೂತಸ್ಪರ್ಶವದ್ದ್ರವ್ಯಂ ತ್ವಚೋ ಗೋಚರಃ | ಸೋಽಪಿ ಉದ್ಭೂತಸ್ಪರ್ಶೋಽಪಿ ಸ್ಪರ್ಶತ್ವಾದಿಸಹಿತಃ | ರೂಪಾನ್ಯದಿತಿ —ರೂಪಭಿನ್ನಂರೂಪತ್ವಾದಿಭಿನ್ನಂ ಯಚ್ಚಕ್ಷುಷೋ ಯೋಗ್ಯಂ ತತ್ ತ್ವಗಿಂದ್ರಿಯಸ್ಯಾಪಿ ಗ್ರಾಹ್ಯಮ್ | ತಥಾಚ ಪೃಥಕ್ತ್ವಸಂಖ್ಯಾದಯೋ ಯೇ ಚಕ್ಷುರ್ಗ್ರಾಹ್ಯಾ ಗುಣಾಃ ಉಕ್ತಾಃ, ಏವಂ ಕ್ರಿಯಾಜಾತಯೋ ಯೋಗ್ಯವೃತ್ತಯಶ್ಚ ತೇ ತ್ವಚಾ ಗ್ರಾಹ್ಯಾ ಇತ್ಯರ್ಥಃ, ಅತ್ರಾಪಿ ತ್ವಗಿಂದ್ರಿಯ ಜನ್ಯೇಽಪಿ ರೂಪಂ ದ್ರವ್ಯಪ್ರತ್ಯಕ್ಷೇ ಕಾರಣಮ್ | ತಥಾಚ ಬಹಿರಿಂದ್ರಿಯಜನ್ಯ ದ್ರವ್ಯಪ್ರತ್ಯಕ್ಷೇ ರೂಪಂ ಕಾರಣಮ್ ||

ಉದ್ಭೂತಸ್ಪರ್ಶವುಳ್ಳದ್ರವ್ಯವು ತ್ವಗಿಂದ್ರಿಯದಿಂದ ಗ್ರಹಿಸಲ್ಪಡುತ್ತದೆ. ಇಲ್ಲಿಯೂ ಉದ್ಭೂತಸ್ಪರ್ಶ, ಸ್ಪರ್ಶತ್ವಜಾತಿ, ಸ್ಪರ್ಶಾಭಾವ ಇವು ಮೂರು ತ್ವಗ್ಗೋಚರವಾಗುತ್ತವೆ. 'ರೂಪಭಿನ್ನಂ—' ಇತಿ. ರೂಪ, ರೂಪತ್ವ, ರೂಪಾಭಾವ, ರೂಪತ್ವಾಭಾವಗಳನ್ನುಳಿದು ಇನ್ನು ಯಾವುದು ಯಾವುದು ನಯನೇಂದ್ರಿಯದಿಂದ ಗ್ರಹಿಸಲ್ಪಡುವುದೋ ಅವೆಲ್ಲವೂ ತ್ವಗಿಂದ್ರಿಯಕ್ಕೂ ಗೋಚರವಾಗುತ್ತವೆ. ಅವು ಯಾವುವೆಂದು ತೋರಿಸುತ್ತಾನೆ. 'ತಥಾಚ—' ಇತಿ. 'ಅತ್ರಾಪಿ—' ಇತಿ. ತ್ವಾಚಪ್ರತ್ಯಕ್ಷದಲ್ಲಿಯೂ ರೂಪವು ಕಾರಣವಾಗುತ್ತದೆ. ತ್ವಾಚ, ಚಾಕ್ಷುಷಗಳೆರಡು ಪ್ರತ್ಯಕ್ಷಗಳಲ್ಲಿಯೂ ರೂಪ

ಕಾರಣವಾಗುವುದರಿಂದ ನಿಷ್ಕೃಷ್ಟಸ್ವರೂಪ ಹೀಗೆ ಹೇಳಬಹುದು. 'ಬಹಿರಿಂದ್ರಿಯ ಜನ್ಯಮೂರ್ತದ್ರವ್ಯಪ್ರತ್ಯಕ್ಷತ್ವಾವಚ್ಛಿನ್ನಂ ಪ್ರತಿ ರೂಪಂ ಕಾರಣಮ್.' ಇದನ್ನೇ 'ತಥಾಚ—' ಎಂಬ ವಾಕ್ಯದಿಂದ ವಿವರಿಸಿರುತ್ತಾನೆ. ವಾಯುವು ತ್ವಾಚಪ್ರತ್ಯಕ್ಷ ವಿಷಯವಾದರೂ ಅದರಲ್ಲಿ ರೂಪವಿಲ್ಲದಿರುವುದರಿಂದ ಅದು ಪ್ರತ್ಯಕ್ಷವಾಗುವುದಿಲ್ಲವೆಂದು ಇವರ ಮತ. ಆದುದರಿಂದ ಸ್ಪರ್ಶಾದಿಲಿಂಗದಿಂದ ಅದು ಅನುಮೇಯವೆಂದು ಸಿದ್ಧಾಂತ.

ನವೀನಾಸ್ತು—ಬಹಿರಿಂದ್ರಿಯಜನ್ಯದ್ರವ್ಯಪ್ರತ್ಯಕ್ಷೇ ನ ರೂಪಂ ಕಾರಣಂ, ಪ್ರಮಾಣಾಭಾವತ್ । ಕಿಂತು ಚಾಕ್ಷುಷಪ್ರತ್ಯಕ್ಷೇ ರೂಪಂ, ಸ್ಪಾರ್ಶನಪ್ರತ್ಯಕ್ಷೇ ಸ್ಪರ್ಶಃ ಕಾರಣಮನ್ವಯವ್ಯತಿರೇಕಾತ್ । ಬಹಿರಿಂದ್ರಿಯಜನ್ಯಪ್ರತ್ಯಕ್ಷಮಾತ್ರೇ ಕಿಂ ಕಾರಣಮಿತಿಚೇತ್ ನ ಕಿಂಚಿತ್ । ಆತ್ಮಾವೃತ್ತಿಶಬ್ದಭಿನ್ನವಿಶೇಷಗುಣವತ್ತ್ವಂ ವಾ ಪ್ರಯೋಜಕಮಸ್ತು । ರೂಪಸ್ಯ ಕಾರಣತ್ವೇ ಲಾಘವಮಿತಿಚೇನ್ನ, ವಾಯೋಸ್ತ್ವಗಿಂದ್ರಿಯೇಣಾಗ್ರಹಣಪ್ರಸಂಗಾತ್ । ಇಷ್ಟಾಪತ್ತಿರಿತಿಚೇತ್ ? ಉದ್ಭೂತ ಸ್ಪರ್ಶ ಏವ ಲಾಘವಾತ್ ಕಾರಣಮಸ್ತು । ಪ್ರಭಾಯಾ ಅಪ್ರತ್ಯಕ್ಷೇ ತು ಇಷ್ಟಾಪತ್ತಿರೇವ ಕಿಂ ನೇಷ್ಯತೇ ? । ತಸ್ಮಾತ್ ಪ್ರಭಾಂ ಪಶ್ಯಾಮೀತಿವತ್ ವಾಯುಂ ಸ್ಪೃಶಾಮೀತಿ ಪ್ರತ್ಯಯಸ್ಯ ಸಂಭವಾತ್ ವಾಯೋರಪಿ ಪ್ರತ್ಯಕ್ಷಂ ಸಂಭವತ್ಯೇವ । ಬಹಿರಿಂದ್ರಿಯಜನ್ಯ ದ್ರವ್ಯ ಪ್ರತ್ಯಕ್ಷಮಾತ್ರೇ ನ ರೂಪಸ್ಯ ನ ವಾ ಸ್ಪರ್ಶಸ್ಯ ಹೇತುತ್ವಮ್ । ವಾಯುಪ್ರಭಯೋರೇಕತ್ವಂ ಗೃಹ್ಯತ ಏವ, ಕ್ವಚಿತ್ ದ್ವಿತ್ವಾದಿಕಮಪಿ, ಕ್ವಚಿತ್ಸಂಖ್ಯಾಪರಿಮಾಣಾದ್ಯಗ್ರಹೋ ದೋಷಾದಿತ್ಯಾಹುಃ ॥ ೫೬ ॥

ಗಂಗೇಶೋಪಾಧ್ಯಾಯ ಮುಂತಾದ ನವ್ಯ ನೈಯಾಯಿಕರು ವಾಯುಪ್ರತ್ಯಕ್ಷವನ್ನೂ ಒಪ್ಪುವುದರಿಂದ ಬಹಿರಿಂದ್ರಿಯಗಳಿಂದುಂಟಾಗುವ ದ್ರವ್ಯಪ್ರತ್ಯಕ್ಷದಲ್ಲಿ ರೂಪವು ಸಾಮಾನ್ಯಕಾರಣವೆಂದು ಅಂಗೀಕರಿಸುವುದಿಲ್ಲ. ಹೀಗೆ ರೂಪಕ್ಕೆ ಕಾರಣತ್ವ ಹೇಳಲು ಅನ್ವಯವ್ಯತಿರೇಕವಿಲ್ಲದಿರುವುದರಿಂದ ಯಾವ ಪ್ರಮಾಣವೂ ಇಲ್ಲ. ವಾಯುವಿನಲ್ಲಿ ರೂಪವಿಲ್ಲದಿದ್ದರೂ ಬಹಿರಿಂದ್ರಿಯಜನ್ಯಪ್ರತ್ಯಕ್ಷವಿಷಯವಾಗುತ್ತದೆ. ಆದುದರಿಂದ ರೂಪ ವಿದ್ದರೆ ಚಾಕ್ಷುಷಪ್ರತ್ಯಕ್ಷ. ರೂಪವಿಲ್ಲದಿದ್ದರೆ ಚಾಕ್ಷುಷಪ್ರತ್ಯಕ್ಷವೂ ಇಲ್ಲ. ಹೀಗೆಯೇ ಸ್ಪರ್ಶವಿದ್ದರೆ ತ್ವಾಚಪ್ರತ್ಯಕ್ಷ. ಸ್ಪರ್ಶವಿಲ್ಲದಿದ್ದರೆ ತ್ವಾಚಪ್ರತ್ಯಕ್ಷವೂ ಇಲ್ಲ. ಹೀಗೆ ಬೇರೆ ಬೇರೆಯಾಗಿ ಅನ್ವಯವ್ಯತಿರೇಕವಿರುವುದೇ ವಿನಾ ರೂಪವೊಂದಕ್ಕೆ ಕಾರಣತ್ವ ಹೇಳಲು ಸಾಮಾನ್ಯಾನ್ವಯವ್ಯತಿರೇಕವಿರುವುದಿಲ್ಲ. ಚಾಕ್ಷುಷ ಪ್ರತ್ಯಕ್ಷವನ್ನು ಕುರಿತು ರೂಪವೂ, ತ್ವಾಚಪ್ರತ್ಯಕ್ಷವನ್ನು ಕುರಿತು ಸ್ಪರ್ಶವೂ ಕಾರಣವೆಂದು ವಿಶೇಷವಾಗಿ ಹೇಳಬೇಕು. ಆಗ ವಾಯುವಿನಲ್ಲಿ ಸ್ಪರ್ಶವಿರುವುದರಿಂದ ಅದೂ ತ್ವಾಚಪ್ರತ್ಯಕ್ಷವಿಷಯವಾಗುತ್ತದೆ. ಪ್ರಾಚೀನ ನೈಯಾಯಿಕರೂ ಆಕ್ಷೇಪಿಸುತ್ತಾರೆ. 'ಬಹಿರಿಂದ್ರಿಯ—, ಇತಿ. ಹಾಗಾದರೆ ಬಹಿರಿಂದ್ರಿಯಜನ್ಯ ದ್ರವ್ಯಪ್ರತ್ಯಕ್ಷಸಾಮಾನ್ಯದಲ್ಲಿ ಯಾವುದು ಕಾರಣ ? ಅನುಗತವಾಗಿ ಕಾರಣತ್ವ ಹೇಳಲು ಬರುವುದಿಲ್ಲವೆ ? ಅಂದರೆ ನವೀನರು ಸಮಾಧಾನ

ಹೇಳುತ್ತಾರೆ. 'ನ—, ಇತಿ. ಅನುಗತವಾಗಿ ಯಾವುದೂ ಕಾರಣವಿಲ್ಲವೇ ಇಲ್ಲ. ಹಿಂದೆ ಹೇಳಿದಂತೆ ವಿಶೇಷರೂಪದಿಂದ ಬೇರೆ ಬೇರೆಯಾಗಿಯೇ ಕಾರಣವಾಗುತ್ತದೆಂದು ತಾತ್ಪರ್ಯ. ಬೇರೆ ಸಮಾಧಾನವನ್ನೂ ತೋರಿಸುತ್ತಾನೆ. 'ಆತ್ಮಾವೃತ್ತಿ—' ಆತ್ಮನಲ್ಲಿ ಇಲ್ಲದಿರುವ ಯಾವ ಶಬ್ದಭಿನ್ನವಾದ ವಿಶೇಷಗುಣವಿದೆಯೋ ಅದೇ ಬಹಿರಿಂದ್ರಿಯ ಜನ್ಯಪ್ರತ್ಯಕ್ಷಸಾಮಾನ್ಯವನ್ನು ಕುರಿತು ಕಾರಣ. ಅರ್ಥಾತ್ ಪೃಥಿವೀ, ಅಪ್ ತೇಜೋ ವಾಯು ಈ ನಾಲ್ಕರಲ್ಲಿರುವ ರೂಪಾದಿಗಳೇ ಈ ಗುಣಗಳಾಗುತ್ತವೆ. ಆತ್ಮನಿಗೆ ಬಹಿರಿಂದ್ರಿಯ ಪ್ರತ್ಯಕ್ಷವಾಗಬಾರದೆಂದು ಆತ್ಮಾವೃತ್ತಿಯೆಂದು ಹೇಳಿದೆ. ಆಕಾಶಕ್ಕೆ ಈ ಪ್ರತ್ಯಕ್ಷವಾಗಬಾರದೆಂದು ಶಬ್ದಭಿನ್ನವೆಂದು ಹೇಳಿದೆ. ಕಾಲಾದಿವ್ಯಾವೃತ್ತಿಗೋಸ್ಕರ ವಿಶೇಷಗುಣವೆಂದು ಹೇಳಿದೆ.

ಪ್ರಾಚೀನರು ಆಶಂಕಿಸುತ್ತಾರೆ. 'ರೂಪಸ್ಯ—' ಇತಿ. ಬಹಿರಿಂದ್ರಿಯಜನ್ಯ ಪ್ರತ್ಯಕ್ಷವನ್ನು ಕುರಿತು ಉದ್ಭೂತರೂಪಕಾರಣವೆಂದರೆ ಶರೀರಕೃತಲಾಘವ ಬರುತ್ತದೆ. ಚಾಕ್ಷುಷಂ ಪ್ರತಿ ಉದ್ಭೂತರೂಪಂ, ಸ್ಪಾರ್ಶನಂ ಪ್ರತಿ ಉದ್ಭೂತಸ್ಪರ್ಶಃ ಕಾರಣಂ, ಅಥವಾ ಉದ್ಭೂತರೂಪತ್ವಾದಿಘಟಿತಾನ್ಯತರಾವಚ್ಛಿನ್ನಂ ಕಾರಣಂ ಎಂದರೆ ಶರೀರಕೃತ ಗೌರವ ಬರುವುದಿಲ್ಲವೆ ? ಎಂದು ಆಕ್ಷೇಪಿಸುತ್ತಾನೆ. ಅದಕ್ಕೆ ನವೀನರ ಸಮಾಧಾನ. ಶರೀರಕೃತಲಾಘವವಿದ್ದರೂ ರೂಪಕ್ಕೆ ಕಾರಣತ್ವ ಹೇಳಿದರೆ ವಾಯುವಿಗೆ ತ್ವಾಚಪ್ರತ್ಯಕ್ಷ ವಿಲ್ಲದೇ ಹೋಗಬೇಕಾಗುತ್ತದೆ. ತ್ವಗಿಂದ್ರಿಯದಿಂದ ಎಲ್ಲರಿಗೂ ವಾಯು ಪ್ರತ್ಯಕ್ಷವಾಗುವುದು ಪ್ರಸಿದ್ಧ. ನಿನ್ನ ಮತದಲ್ಲಿ ಅದಕ್ಕೆ ಪ್ರತ್ಯಕ್ಷವಿಲ್ಲದಂತಾಗುತ್ತದೆ. ನಾವು ಹೇಳಿದಂತೆ ಬೇರೆ ಬೇರೆಯಾಗಿ ವಿಶೇಷವಾಗಿ ಕಾರ್ಯಕಾರಣಭಾವ ಹೇಳಿದರೆ ಯಾವ ದೋಷವೂ ಇಲ್ಲ. ಪ್ರಾಚೀನನು ಇಷ್ಟಾಪತ್ತಿಯಿಂದ ದೋಷವಿಲ್ಲವೆನ್ನುತ್ತಾನೆ. 'ಇಷ್ಟಾಪತ್ತಿಃ—, ಇತಿ. ನಮ್ಮ ಮತದಲ್ಲಿ ಸ್ಪರ್ಶಹೇತುವಿನಿಂದ ವಾಯುವು ಅನುಮೇಯವಾದುದರಿಂದ ಅದು ಪ್ರತ್ಯಕ್ಷವಲ್ಲವಾದುದರಿಂದ ಯಾವ ದೋಷವೂ ಇಲ್ಲದೆ ಲಾಘವಗುಣವಿದೆಯೆಂದು ಪ್ರಾಚೀನರ ಅಭಿಪ್ರಾಯ. ವಿನಿಗಮನಾ ಇಲ್ಲದಿರುವುದರಿಂದ ನವೀನರು ಇದಕ್ಕೆ ಬೇರೆ ರೀತಿಯಿಂದ ಸಮಾಧಾನ ತೋರಿಸುತ್ತಾರೆ. 'ಉದ್ಭೂತಸ್ಪ—' ಇತಿ. ಲಾಘವದಿಂದ ರೂಪಕಾರಣವೆನ್ನುವುದಾದರೆ ಬಹಿರಿಂದ್ರಿಯಜನ್ಯದ್ರವ್ಯಪ್ರತ್ಯಕ್ಷಸಾಮಾನ್ಯಕ್ಕೆ ಉದ್ಭೂತ ಸ್ಪರ್ಶವೇ ಕಾರಣವೆಂದು ಹೇಳು. ರೂಪವೇ ಕಾರಣವೆನ್ನುವುದರಿಂದ ವಿನಿಗಮಕ ವೇನಿದೆ. ನೀನು ರೂಪವೆಂದರೆ ನಾನು ಸ್ಪರ್ಶವೆನ್ನುತ್ತೇನೆ. ನಿನ್ನ ಆಪಾದನೆಯಂತೆ ಈಗ ಗೌರವಕ್ಕೆ ಕಾರಣವಿಲ್ಲ. ಸಮಾನಯುಕ್ತಿಯಿಂದ ಉದ್ಭೂತಸ್ಪರ್ಶವನ್ನೇ ಕಾರಣ ವೆಂದು ಹೇಳಿದರೆ ದೋಷವೇನು ?

ಹಾಗಾದರೆ ಪ್ರಭಾಪ್ರತ್ಯಕ್ಷವಾಗಲಾರದು. ಪ್ರಭೆಯಲ್ಲಿ (ಬೆಳಕು) ಯಾವ ಉದ್ಭೂತಸ್ಪರ್ಶವೂ ಇಲ್ಲ. ಉದ್ಭೂತರೂಪಕಾರಣವೆಂದರೆ ಆಗ ಅದರಲ್ಲಿ ರೂಪವಿರುವುದರಿಂದ ಪ್ರತ್ಯಕ್ಷವಾಗುತ್ತದೆ, ಸ್ಪರ್ಶವೆಂದರೆ ಅದರಲ್ಲಿ ಸ್ಪರ್ಶವಿಲ್ಲದಿರುವುದರಿಂದ ಪ್ರತ್ಯಕ್ಷ ವಾಗದೇ ಹೋಗಬೇಕಾಗುತ್ತದೆಂದು ಪ್ರಾಚೀನರ ಆಕ್ಷೇಪ. ಪ್ರಭಾಯಾಃ—' ಇತಿ.

ಆಗ ಅದು ಇಷ್ಟವೆಂದೇ ನವೀನರ ಉತ್ತರ. ನಿನ್ನ ಮತದಲ್ಲಿ ವಾಯುಪ್ರತ್ಯಕ್ಷವಾಗದಿದ್ದರೂ ದೋಷವಿಲ್ಲನೆಂದು ಹೇಳಿದಂತೆ ಪ್ರಭಾಪ್ರತ್ಯಕ್ಷವಾಗದಿದ್ದರೂ ಯಾವ ದೋಷವಿಲ್ಲವೆಂದೇ ಉತ್ತರ. ಆದರೆ 'ಪ್ರಭಾಂ ಪಶ್ಯಾಮಿ,' ಎಂದು ಪ್ರಭಾವಿಷಯಕ ಚಾಕ್ಷುಷ ಪ್ರತ್ಯಕ್ಷವಿರುವುದಾದರೆ ಸಮಾನಪ್ರತೀತಿಯಿಂದ 'ವಾಯುಂ ಪಶ್ಯಾಮಿ' ಎಂಬ ವಾಯುವಿಷಯಕ ತ್ವಾಚಪ್ರತ್ಯಕ್ಷವೂ ಪ್ರಸಿದ್ಧವಾದುದರಿಂದ ನಾನು ಹೇಳಿದಂತೆ ಬೇರೆ ಬೇರೆಯಾಗಿ ಕಾರಣತ್ವ ಹೇಳುವುದೇ ಸಮಂಜಸವಾಗಿದೆ. ಇದನ್ನೇ ಸ್ಪಷ್ಟವಾಗಿ ವಿವರಿಸುತ್ತಾನೆ- 'ಬಹಿರಿಂದ್ರಿಯ—' ಇತಿ. ರೂಪವೊಂದೇ ಕಾರಣವೆನ್ನುವುದಾಗಲೀ, ಸ್ಪರ್ಶವೊಂದೇ ಕಾರಣವೆನ್ನುವುದಾಗಲೀ ಯಾವುದೂ ಸರಿಯಲ್ಲ. ಆಯಾಯ ಪ್ರತ್ಯಕ್ಷವನ್ನು ಕುರಿತು ಅದು ಅದು ಕಾರಣವೆನ್ನುವುದರಿಂದ ತನ್ನ ಮತದಲ್ಲಿ ಯುಕ್ತಿ ಇದೆಯೆಂದು ತೋರಿಸುತ್ತಾನೆ. 'ವಾಯುಪ್ರಭಯೋಃ—' ಇತಿ. (ಅಯಂ ಏಕಃ ಪೌರಸ್ತ್ಯಃ ವಾಯುಃ) ಇದು ಒಂದು ಪೂರ್ವದಿಕ್ಕಿನ ಗಾಳಿ, ಇವೆರಡು ದಕ್ಷಿಣೋತ್ತರದಿಕ್ಕುಗಳಿಂದ ಬರುವ ಗಾಳಿ' ಎಂದು ವಾಯುವಿನಲ್ಲಿರುವ ಸಂಖ್ಯಾಪ್ರತ್ಯಕ್ಷವು ತ್ವಗಿಂದ್ರಿಯದಿಂದಾಗುವುದರಿಂದ ವಾಯುಪ್ರತ್ಯಕ್ಷವೂ ಪ್ರಸಿದ್ಧವಾಗಿದೆ. ಹೀಗೆಯೇ 'ಇದೊಂದು ಸೌರಪ್ರಭೆ. ಇದೊಂದು ದೀಪಪ್ರಭೆ' ಎಂದು ಪ್ರಭೆಯಲ್ಲಿರುವ ಸಂಖ್ಯೆಯೂ ಪ್ರತ್ಯಕ್ಷವಿಷಯವಾಗುತ್ತದೆ. ಬೇರೆಬೇರೆಯಾಗಿ ಕಾರಣತ್ವ ಹೇಳಿರುವುದರಿಂದಲೇ ಇದು ಸಂಗತವಾಗುವುದಲ್ಲದೆ ಪ್ರಾಚೀನಮತದಿಂದ ಇದು ಕೂಡಲಾರದು. ಪ್ರಭಾವಾಯುಗಳಿಗೆ ವಿಲಕ್ಷಣಸಂಯೋಗವಿಲ್ಲದಿರುವಾಗ ಅವುಗಳಲ್ಲಿರುವ ದ್ವಿತ್ವಪ್ರತ್ಯಕ್ಷವೆಂದು ತಿಳಿಯಬೇಕು. ದ್ವಿತ್ವಾದಿಯೆಂಬಲ್ಲಿ ಆದಪದದಿಂದ ವಾಯುವಿನಲ್ಲಿರುವ ಪರಿಮಾಣಾದಿಗಳನ್ನು ತೆಗೆದುಕೊಳ್ಳಬೇಕು. 'ದ್ವಿತೀಯಃ ಅಯಂ ಮಹಾನ್ ವಾಯುಃ' ಎಂಬ ಪ್ರತ್ಯಕ್ಷವುಪ್ರಸಿದ್ಧವಾಗಿದೆ. 'ಕ್ವಚಿತ್—' ಇತಿ. ಕೆಲವು ಕಡೆ ಸಜಾತೀಯಸಮಾವೇಶವಿರುವುದರಿಂದ ಸಂಖ್ಯಾಪರಿಮಾಣಾದಿಗಳಿಗೆ ಪ್ರತ್ಯಕ್ಷವಿಲ್ಲವೆಂದು ನವೀನರ ಸಿದ್ಧಾಂತ. 'ಆಹುಃ' ಎಂದುದರಿಂದ ಗ್ರಂಥಕಾರನಿಗೆ ಇದು ಇಷ್ಟವಲ್ಲವೆಂದು ತೋರುತ್ತದೆ. 'ಆಹುಃ' ಎಂದು ಹೇಳುವಲ್ಲಿ ಅಸ್ವರಸ ತೋರಿಸುವುದು ಸ್ವಭಾವ. ಸ್ಪರ್ಶಾದಿಲಿಂಗದಿಂದ ವಾಯು ಅನುಮೇಯವೆಂದು ಮುಂದೆ ಹೇಳುವುದರಿಂದ ವಾಯುಪ್ರತ್ಯಕ್ಷವಾಗದಿದ್ದರೂ ದೋಷವಿಲ್ಲ. ಪ್ರಾಚೀನಮತವೇ ಉತ್ತಮವಾದದ್ದು. 'ಬಹಿರಿಂದ್ರಿಯಜನ್ಯದ್ರವ್ಯ ಪ್ರತ್ಯಕ್ಷತ್ವಾವಚ್ಛಿನ್ನಂ ಪ್ರತಿ ಮಹತ್ತ್ವೋದ್ಭೂತರೂಪವತ್ತ್ವಂ ಹೇತುಃ' ಎಂದು ಒಂದು ನಿಯಾಮಕ ಹೇಳಲು ಸಾಧ್ಯ. ಭಿನ್ನಭಿನ್ನವಾಗಿ ಹೇಳಿದರೆ ಅನುಗತಕಾರಣವಿಲ್ಲದೇ ಹೋಗಬೇಕಾಗುತ್ತದೆ. ಅಥವಾ 'ವಿಭುವೃತ್ತಿಭಿನ್ನವಿಶೇಷಗುಣ ವತ್ತ್ವರೂಪದಿಂದ ಕಾರಣತ್ವ ಹೇಳಿದರೆ ಯಾವ ದೋಷವೂ ಇಲ್ಲ. ಆಗ ಎರಡಕ್ಕೂ ಪ್ರತ್ಯಕ್ಷವು ಬಾಧಿತವಾಗುವುದಿಲ್ಲ.

**ತ್ವಚೋ ಯೋಗೋ ಮನಸಾ ಜ್ಞಾನಕಾರಣಮ್ ॥**

ತ್ವಙ್ಮನಃ ಸಂಯೋಗೋ ಜ್ಞಾನಸಾಮಾನ್ಯೇ ಕಾರಣಮಿತ್ಯರ್ಥಃ। ಕಿಂ ತತ್ರ ಪ್ರಮಾಣಮ್, ಸುಷುಪ್ತಿಕಾಲೇ ತ್ವಚಂ ತ್ಯಕ್ತ್ವಾ ಪುರೀತತಿ ವರ್ತಮಾನೇನ ಮನಸಾ ಜ್ಞಾನಾಽಜನನಮಿತಿ ॥

ಜನ್ಯಜ್ಞಾನಕ್ಕೆ ಸಾಧಾರಣಕಾರಣ ತೋರಿಸುತ್ತಾನೆ. 'ತ್ವಚೋಯೋಗಃ—' ಜ್ಞಾನವೆಂದರೆ ಜನ್ಯಜ್ಞಾನ ಸಾಮಾನ್ಯವೆಂದರ್ಥ. 'ಮನಸಾ ತ್ವಚೋ ಯೋಗಃ, ಜನ್ಯಜ್ಞಾನ ಸಾಮಾನ್ಯಕ್ಕೆ ತ್ವಙ್ಮನಃ ಸಂಯೋಗವು ಕಾರಣವೆಂಬುದರಲ್ಲಿ ಪ್ರಮಾಣ ವೇನೆಂದು ಕೇಳುತ್ತಾನೆ. 'ಕಿಂತತ್ರ—' ಇತಿ. 'ಸುಷುಪ್ತಿ—' ಎಂಬುದರಿಂದ ಉತ್ತರ ತೋರಿಸುತ್ತಾನೆ. 'ನಿದ್ರಾನಾಡ್ಯವಚ್ಛಿನ್ನಾತ್ಮ ಮನಃ ಸಂಯೋಗಕ್ಕೆ ಸುಷುಪ್ತಿಯೆಂದು ಹೆಸರು. ಜ್ಞಾನಾಜನನವೇ ಪ್ರಮಾಣವೆಂದು ತಿಳಿಯಬೇಕು. ಸುಷುಪ್ತಿಗನುಕೂಲವಾದ ಮನಸ್ಸಿನ ಕ್ರಿಯೆಯಿಂದ ಮನಸ್ಸಿನಿಂದ ಆತ್ಮನ ವಿಭಾಗವು ಮೊದಲು ಆಗುತ್ತದೆ. ಆಮೇಲೆ ಆತ್ಮಮನಃ ಸಂಯೋಗ ನಾಶವಾಗುತ್ತದೆ. ಆಮೇಲೆ ಪುರೀತತ್ತೆಂಬ ಉತ್ತರ ದೇಶದ ಸಂಯೋಗವು ಮನಸ್ಸಿಗಾಗುತ್ತದೆ. ಇದೇ ಸುಷುಪ್ತಿಯೆಂದು ತಾರ್ಕಿಕರ ಸಿದ್ಧಾಂತ. ಸಾಂಖ್ಯರಲ್ಲಿ ಸುಷುಪ್ತಿ ಎರಡು ರೀತಿ. ಅರ್ಧಲಯ, ಸಮಗ್ರಲಯವೆಂದು ಅವುಗಳ ಹೆಸರು. ಅರ್ಧಲಯದಲ್ಲಿ ವಿಷಯಾಕಾರವೃತ್ತಿಯಾಗುವುದಿಲ್ಲ. ಆದರೆ ತನ್ನಲ್ಲಿರುವ ಸುಖ, ದುಃಖ ಮೋಹಾಕಾರ ಬುದ್ಧಿವೃತ್ತಿಯು ಆಗ ಹುಟ್ಟುತ್ತದೆ. ಸಮಗ್ರಲಯದಲ್ಲಿ ಬುದ್ಧಿಯಲ್ಲಿ ಯಾವ ವೃತ್ತಿಯೂ ಉಂಟಾಗುವುದಿಲ್ಲ. ಮರಣಾದಿಗಳಿದ್ದಂತೆ ಶೂನ್ಯವೃತ್ತಿಕವಾಗಿರುತ್ತದೆ. ಅದ್ವೈತಿಗಳು ಸಮಗ್ರಲಯದಲ್ಲಿ ಜೀವನು ಪರಮಾತ್ಮೈಕ್ಯ ಹೊಂದಿರುತ್ತಾನೆಂದು ಹೇಳುತ್ತಾರೆ. ಪರಮಾತ್ಮಾಲಿಂಗನಾವಸ್ಥೆಯೇ ಸುಷುಪ್ತಿಯೆಂದು ಮಧ್ವಾನುಯಾಯಿಗಳ ಮತ. ಗಾಢನಿದ್ರೆಯೇ ಸುಷುಪ್ತಿಯೆಂದು ವ್ಯವಹಾರ. ನಿದ್ರಾನಾಡಿಯೇ ಪುರೀತತ್. ತ್ವಙ್ಮನಃ ಸಂಯೋಗವೇ ಜ್ಞಾನ ಸಾಮಾನ್ಯಕ್ಕೆ ಕಾರಣವೆಂಬುದರಿಂದ ಸುಷುಪ್ತಿಯಲ್ಲಿ ಜನ್ಯಜ್ಞಾನವೊಂದೂ ಉಂಟಾಗುವುದಿಲ್ಲ. ಅದಕ್ಕೆ ಕಾರಣತ್ವ ಹೇಳದಿದ್ದರೆ ಆಗ ಯಾವುದಾದರೂ ಜ್ಞಾನವುಂಟಾಗಬೇಕಾಗುತ್ತದೆ ಹೀಗೆ ಅಲ್ಲಿ ಜ್ಞಾನ ಹುಟ್ಟದಿರುವುದರಿಂದ ಅದನ್ನು ಪ್ರಮಾಣವನ್ನಾಗಿಟ್ಟುಕೊಂಡು ಕಾರ್ಯ ಕಾರಣಭಾವ ಹೇಳಿದೆ.

ನನು—ಸುಷುಪ್ತಿಕಾಲೇ ಕಿಂ ಜ್ಞಾನಂ ಭವಿಷ್ಯತಿ, ಅನುಭವರೂಪಂ ಸ್ಮರಣರೂಪಂ ವಾ ? ನಾದ್ಯಃ ಅನುಭವಸಾಮಗ್ರ್ಯಭಾವಾತ್। ತಥಾಹಿ ಪ್ರತ್ಯಕ್ಷೇ ಚಕ್ಷುರಾದಿನಾ ಮನಃ ಸಂಯೋಗಸ್ಯ ಹೇತುತ್ವಾತ್ತದಭಾವಾದೇವ ನ ಚಾಕ್ಷುಷಾದಿಪ್ರತ್ಯಕ್ಷಮ್। ಜ್ಞಾನಾದೇರಭಾವಾದೇವ ನ ಮಾನಸಂ ಪ್ರತ್ಯಕ್ಷಮ್। ಜ್ಞಾನಾದ್ಯಭಾವೇ ಚಾತ್ಮನೋಽಪಿ ನ ಪ್ರತ್ಯಕ್ಷಮಿತಿ। ಏವಂ ವ್ಯಾಪ್ತಿಜ್ಞಾನಾದ್ಯಭಾವಾದೇವ ನಾನುಮಿತಿಃ। ಸಾದೃಶ್ಯಜ್ಞಾನಾಭಾವಾನ್ನೋಪಮಿತಿಃ। ಪದಜ್ಞಾನಾಭಾವಾನ್ನ ಶಾಬ್ದಬೋಧಃ ಇತ್ಯನುಭವಸಾಮಗ್ರ್ಯಭಾವಾನ್ನಾಽನುಭವಃ। ಉದ್ಬೋಧಕಾ

ಭಾವಾಚ್ಚನ ಸ್ಮರಣಮ್ । ನೈವಮ್ । ಸುಷುಪ್ತಿಪ್ರಾಕ್ಕಾಲೋತ್ಪನ್ನೇಚ್ಛಾದಿ ವ್ಯಕ್ತೇಸ್ತತ್ಸಂಬಂಧೇನಾತ್ಮನಶ್ಚ ಪ್ರತ್ಯಕ್ಷತ್ವಪ್ರಸಂಗಾತ್ । ತದತೀಂದ್ರಿಯತ್ವೇ ಮಾನಾಭಾವಾತ್ । ಸುಷುಪ್ತಿಪ್ರಾಕ್ಕಾಲೇ ನಿರ್ವಿಕಲ್ಪಕಮೇವ ನಿಯಮೇನ ಜಾಯತ ಇತ್ಯತ್ರಾಽಪಿ ಪ್ರಮಾಣಾಭಾವಾತ್ ॥

ಸುಷುಪ್ತಿಯಲ್ಲಿ ತ್ವಙ್ಮನಸ್ಸುಗಳ ಸಂಯೋಗವಿದ್ದರೂ ಯಾವಜ್ಞಾನ ಉಂಟಾಗಲೂ ಕಾರಣವಿಲ್ಲವೆಂದು ಆಶಂಕಿಸುತ್ತಾನೆ. 'ನನು—' ಇತಿ. ಸುಷುಪ್ತಿಯಲ್ಲಿ ಜ್ಞಾನ ವುಂಟಾಗುವುದಾದರೆ ಒಂದೂ ಅನುಭವಾತ್ಮಕವಾದ ಜ್ಞಾನ, ಅಥವಾ ಸ್ಮರಣಾತ್ಮಕಜ್ಞಾನ ವಾಗಬೇಕು. ಆದರೆ ಇವೆರಡಕ್ಕೂ ಕಾರಣವಿಲ್ಲವಾದುದರಿಂದ ಉಂಟಾಗಲಾರವೆಂದು ತೋರಿಸುತ್ತಾನೆ. 'ನಾದ್ಯಃ—, ಇತಿ. ಪ್ರತ್ಯಕ್ಷ, ಅನುಮಿತಿ, ಉಪಮಿತಿ, ಶಾಬ್ದ ಗಳೆಂದು ನಾಲ್ಕುರೀತಿಯಾದ ಅನುಭವವಿದೆ. ಇವುಗಳಿಗೆ ಕಾರಣಸಾಮಗ್ರಿ ಇಲ್ಲದಿರು ವುದರಿಂದ ಹುಟ್ಟುವುದಿಲ್ಲ. ಮೊದಲನೆಯ ಪ್ರತ್ಯಕ್ಷಾನುಭವವೇ ಚಾಕ್ಷುಷಾದಿಭೇದ ಗಳಿಂದ ನಾನಾರೀತಿಯಾಗಿರುತ್ತದೆ. ಚಕ್ಷುರ್ಮನಃಸಂಯೋಗವಿಲ್ಲದಿರುವುದರಿಂದ ಚಾಕ್ಷುಷಜ್ಞಾನ ಬರಲಾರದು. ತ್ವಙ್ಮನಃ ಸಂಯೋಗ, ರಸನೇಂದ್ರಿಯಮನಃ ಸಂ ಯೋಗ, ಘ್ರಾಣಮನಃ ಸಂಯೋಗ, ಶ್ರವಣಮನಃ ಸಂಯೋಗಗಳು ಇಲ್ಲವಾದುದರಿಂದ ತ್ವಾಚಾದಿಪ್ರತ್ಯಕ್ಷಗಳೂ ಉಂಟಾಗಲಾರವು. ಹೀಗೆ ಆಯಾಯ ಇಂದ್ರಿಯಸಂಯೋಗ ರೂಪಸಾಮಗ್ರಿ ಇಲ್ಲವಾದುದರಿಂದ ಬಾಹ್ಯಪ್ರತ್ಯಕ್ಷರೂಪ ಅನುಭವಉಂಟಾಗಲಾರದು. ಬಾಹ್ಯಪ್ರತ್ಯಕ್ಷವಾಗದಿದ್ದರೂ ಮಾನಸಪ್ರತ್ಯಕ್ಷಾತ್ಮಕಾನುಭವ ಉಂಟಾಗಲೆಂದರೆ ಅದಕ್ಕೂ ಸಾಮಗ್ರಿ ಇಲ್ಲವೆಂದು ತೋರಿಸುತ್ತಾನೆ 'ಜ್ಞಾನಾದೇಃ—' ಇತಿ. ಮಾನಸಾನು ಭವವು ಎರಡು ರೀತಿಯಾಗಿರುತ್ತದೆ. ಆತ್ಮನಲ್ಲಿರುವ ಜ್ಞಾನಾದಿಗುಣವಿಷಯಕಮಾನಸ ಪ್ರತ್ಯಕ್ಷ. ಆತ್ಮವಿಷಯಕವಾದ ಮಾನಸಪ್ರತ್ಯಕ್ಷ. ಇವುಗಳಲ್ಲಿ ಜ್ಞಾನಾದಿಗುಣಗಳು ಸುಷುಪ್ತಿಯಲ್ಲಿಲ್ಲದಿರುವುದರಿಂದ ಮೊದಲಿನ ಮಾನಸಪ್ರತ್ಯಕ್ಷವಾಗುವುದಿಲ್ಲ. ಎರಡನೆಯ ಆತ್ಮಮಾನಸಪ್ರತ್ಯಕ್ಷವಾಗಬೇಕಾದರೆ ಜ್ಞಾನಾದಿಯೋಗ್ಯಗುಣ ಸಂಬಂಧವಿರಬೇಕು. ಈಗ ಆ ಯೋಗ್ಯವಿಶೇಷಗುಣರೂಪವಾದ ಪ್ರತ್ಯಕ್ಷಸಾಮಗ್ರಿ ( ಜ್ಞಾನಾದಿಗಳು ) ಇಲ್ಲ ದಿರುವುದರಿಂದ ಆತ್ಮಮಾನಸಪ್ರತ್ಯಕ್ಷವೂ ಆಗಲಾರದು. ಹೀಗೆ ಯಾವ ಪ್ರತ್ಯಕ್ಷ ಸಾಮಗ್ರಿಯೂ ಇಲ್ಲದಿರುವುದರಿಂದ ಪ್ರತ್ಯಕ್ಷರೂಪ ಅನುಭವವುಂಟಾಗಲಾರದು. ಅನು ಮಿತಿರೂಪಾನುಭವಕ್ಕೆ ವ್ಯಾಪ್ತಿಜ್ಞಾನರೂಪಸಾಮಗ್ರಿಇಲ್ಲದಿರುವುದರಿಂದ ಅದೂ ಹುಟ್ಟ ಲಾರದು. 'ಯತ್ರ ಧೂಮಸ್ತತ್ರಾಗ್ನಿಃ ಎಂಬ ವ್ಯಾಪ್ತಿಜ್ಞಾನವು ಅನುಮಿತಿಗೆ ಕರಣ ವೆಂದು ಮುಂದೆ ಹೇಳುತ್ತಾನೆ. 'ಗೋಸದೃಶೋ ಗವಯಃ' ಎಂಬ ಸಾದೃಶ್ಯಜ್ಞಾನ ರೂಪಸಾಮಗ್ರಿ ಇಲ್ಲದಿರುವುದರಿಂದ ಉಪಮಿತಿರೂಪಾನುಭವಾತ್ಮಕಜ್ಞಾನವೂ ಹುಟ್ಟುವು ದಿಲ್ಲ. 'ಅನುಯೋಗಿತಾ ಸಂಬಂಧದಿಂದ ( ತದ್ಗತಭೂಯೋಧರ್ಮವತ್ತ್ವಂ ) ಒಂದು ವಸ್ತುವಿನಲ್ಲಿರುವ ಅಧಿಕಧರ್ಮದಿಂದ ಕೂಡಿರುವಿಕೆಗೆ ಸಾದೃಶ್ಯವೆಂದೂ ಅದರ ಜ್ಞಾನವೇ

ಉಪಮಿತಿಗೆ ಕರಣವೆಂದೂ ಮುಂದೆ ಹೇಳುತ್ತಾನೆ. 'ಪದಜ್ಞಾನಾಭಾವಾತ್—' ಇತಿ. ಶಾಬ್ದಬೋಧವನ್ನು ಕುರಿತು (ವಾಕ್ಯಾರ್ಥಜ್ಞಾನಕ್ಕೆ ಶಾಬ್ದಬೋಧವೆಂದು ಹೆಸರು.) ಪದಜ್ಞಾನವು ಕರಣವೆಂದು ಮುಂದೆ ಹೇಳುತ್ತಾನೆ. ಶಕ್ತಿಯಿಂದ ಕೂಡಿರುವುದು (ಶಕ್ತವಾದದ್ದು) ಪದ. ಪದಜ್ಞಾನವಿಲ್ಲದಿರುವುದರಿಂದ ಶಾಬ್ದಾನುಭವವೂ ಉಂಟಾಗುವುದಿಲ್ಲ. ಹೀಗೆ ಸುಷುಪ್ತಿಯಲ್ಲಿ ಅನುಭವರೂಪಜ್ಞಾನವುಂಟಾಗಲು ಯಾವ ಸಾಮಗ್ರಿಯೂ ಇಲ್ಲದಿರುವುದರಿಂದ ಅನುಭವಾತ್ಮಕಜ್ಞಾನವು ಹುಟ್ಟುವುದು ಹೇಗೆ? ಆದುದರಿಂದ ತ್ವಙ್ಮನಃಸಂಯೋಗವಿದ್ದರೂ ಅನುಭವಾತ್ಮಕಜ್ಞಾನ ಬರಲಿದೆಯೆಂದು ಆಶಂಕಿಸಲು ಕಾರಣವಿಲ್ಲ.

ಇನ್ನು ಸ್ಮರಣಜ್ಞಾನ ಹುಟ್ಟಲೆಂದು ಆಶಂಕಿಸಬಹುದು. ಆದರೆ ಇದಕ್ಕೂ ಕಾರಣವಿಲ್ಲದಿರುವುದರಿಂದ ಉಂಟಾಗಲಾರದೆಂದು ತೋರಿಸುತ್ತಾನೆ. 'ಉದ್ಬೋಧಕಾ—' ಇತಿ. ಸಂಸ್ಕಾರದಿಂದ ಬರುವ ಜ್ಞಾನಕ್ಕೆ ಸ್ಮೃತಿಯೆಂದು ಹೆಸರು. ಸಂಸ್ಕಾರಗಳು ಉದ್ಬುದ್ಧಗಳಾದರೇ ಅವು ಸ್ಮರಣೆಯನ್ನು ಹುಟ್ಟಿಸುತ್ತವೆ. ಪ್ರಣಿಧಾನ, ಸಾದೃಶ್ಯಜ್ಞಾನ, ಮುಂತಾದ ಉದ್ಬೋಧಕ ಸಾಮಗ್ರಿಗಳಿದ್ದರೇ ಸಂಸ್ಕಾರ ಉದ್ಬುದ್ಧವಾಗುತ್ತದೆ ಸ್ಮೃತಿಗೆ ಪ್ರಯೋಜಕಗಳಾದ ಈ ಉದ್ಬೋಧಕ ಸಾಮಗ್ರಿಗಳು ಇಲ್ಲದಿರುವುದರಿಂದ ಸ್ಮರಣೆಯೂ ಸುಷುಪ್ತಿಯಲ್ಲಿ ಹುಟ್ಟುವುದಿಲ್ಲ. ಹೀಗೆ ಆಯಾಯ ಜ್ಞಾನಗಳ ಸಾಮಗ್ರಿಗಳು ಇಲ್ಲದಿರುವುದರಿಂದಲೇ ಯಾವ ಜ್ಞಾನವೂ ಹುಟ್ಟದಿರುವಾಗ—ತ್ವಙ್ಮನಃ ಸಂಯೋಗವಿಲ್ಲದಿರುವುದರಿಂದ ಜ್ಞಾನ ಸಾಮಾನ್ಯವು ಹುಟ್ಟುವುದಿಲ್ಲವೆಂದು ಈ ಕಾರಣದಿಂದಲೇ (ಇದನ್ನೇ ಪ್ರಮಾಣವನ್ನಾಗಿ ಸ್ವೀಕರಿಸಿ) ಜ್ಞಾನ ಸಾಮಾನ್ಯಕ್ಕೆ ತ್ವಙ್ಮನಃ ಸಂಯೋಗವು ಕಾರಣವೆಂದು ಹೇಳಿದುದು ಸರಿಯುಲ್ಲವೆಂದು ಪೂರ್ವಪಕ್ಷಿಯ ಅಭಿಪ್ರಾಯ.

ಇದನ್ನು 'ನೈವಂ—' ಎಂಬುದರಿಂದ ಖಂಡಿಸುತ್ತಾನೆ. ಸುಷುಪ್ತಿಯು ಯಾವ ಕ್ಷಣದಲ್ಲಿರುವುದೋ ಅದರ ಅವ್ಯವಹಿತಪೂರ್ವಕ್ಷಣವೇ ಸುಷುಪ್ತಿಪ್ರಾಕ್ಕಾಲ. ಆ ಸಮಯದಲ್ಲಿ ಯಾವ ಇಚ್ಛಾದಿವ್ಯಕ್ತಿ ಇದೆಯೋ, ಇಚ್ಛಾಯಾಃ ಆದಿಃ—ಇಚ್ಛೆಯ ಮೊದಲಿರುವುದು ಅಂದರೆ ಅರ್ಥಾತ್ ಜ್ಞಾನವ್ಯಕ್ತಿ. 'ಅಯಂಘಟಃ' ಇತ್ಯಾದಿ ಯಾವುದಾದರೊಂದು ಜ್ಞಾನವು ಆ ಸಮಯದಲ್ಲಿ ಇದ್ದಿದ್ದರೆ ಆ ಜ್ಞಾನದ ಸಂಬಂಧದಿಂದ ಅಂದರೆ ಸಂಯುಕ್ತಸಮವಾಯಸಂಬಂಧದಿಂದ (ಮನಸ್ಸಿನಿಂದ ಸಂಯುಕ್ತನಾದವನು ಆತ್ಮ. ಆತ್ಮನಲ್ಲಿ ಸಮವಾಯದಿಂದ ಜ್ಞಾನಾದಿಗಳಿರುತ್ತವೆ.) 'ಅಹಂ ಸುಖೀ' 'ಅಹಂಜ್ಞಾನವಾನ್' ಎಂಬ ಆತ್ಮನ ಪ್ರತ್ಯಕ್ಷವು ಸುಷುಪ್ತಿಕಾಲದಲ್ಲಿ ಬರಬೇಕಾಗುತ್ತದೆ. ಜ್ಞಾನವಿಲ್ಲವಾದುದರಿಂದ ಆತ್ಮಮಾನಸಪ್ರತ್ಯಕ್ಷವೂ ಆಗಲಾರದೆಂದು ಹಿಂದೆ ಹೇಳಿದೆ. ಈಗ ಈ ರೀತಿ ಜ್ಞಾನಸಂಬಂಧ ಬರುವುದರಿಂದ ಆತ್ಮಪ್ರತ್ಯಕ್ಷವು ಅವಶ್ಯವಾಗಿ ಆಗಬೇಕಾಗುತ್ತದೆ. ಜ್ಞಾನಸಾಮಾನ್ಯವನ್ನು ಕುರಿತು ತ್ವಙ್ಮನಃ ಸಂಯೋಗವು ಕಾರಣವೆಂದರೆ ಆಗ ಅಂದರೆ ಸುಷುಪ್ತಿಪ್ರಾಕ್‌ಕ್ಷಣದಲ್ಲಿ ಯಾವ ಜ್ಞಾನವಿದ್ದರೂ ಸುಷುಪ್ತಿ ಕಾಲದಲ್ಲಿ ತ್ವಙ್ಮನಃ ಸಂಯೋಗವು ಇಲ್ಲದಿರುವುದರಿಂದ ಆತ್ಮನ ಪ್ರತ್ಯಕ್ಷವಾಗಲಿ ಎಂದು ಆಪಾದಿಸಲು ಕಾರಣವಿಲ್ಲ. ಆ ಜ್ಞಾನವು ಅತೀಂದ್ರಿಯವಾಗಿರುತ್ತದೆಯೆಂಬುದರಲ್ಲಿಯೂ ಯಾವ ಪ್ರಮಾಣ

ವಿಲ್ಲ. ನಿರ್ವಿಕಲ್ಪಕವಾದುದರಿಂದ ಸುಷುಪ್ತಿಯ ಪ್ರಾಕ್ಕ್ಷಣದಲ್ಲಿರುವ ಜ್ಞಾನವು ಅತೀಂದ್ರಿಯವಾಗುತ್ತದೆಂದರೆ ಅದರಲ್ಲಿಯೂ ಯಾವ ಪ್ರಮಾಣವಿಲ್ಲವೆನ್ನುತ್ತಾನೆ. 'ಸುಷುಪ್ತಿಪ್ರಾಕ್ಕಾಲೇ—' ಇತಿ. ಪ್ರಕಾರತಾ ವಿಶೇಷ್ಯತಾ ಸಂಸರ್ಗತಾ ಈ ಮೂರನ್ನು ಗ್ರಹಿಸದಿರುವ ಜ್ಞಾನ, ವಿಶೇಷಣ ವಿಶೇಷ್ಯಭಾವರಹಿತವಾದ ಜ್ಞಾನಕ್ಕೆ ನಿರ್ವಿಕಲ್ಪಕಜ್ಞಾನವೆಂದು ಹೆಸರು. ಸುಷುಪ್ತಿಯ ಪೂರ್ವಕ್ಷಣದಲ್ಲಿ ನಿಯಮದಿಂದ ಈ ನಿರ್ವಿಕಲ್ಪಕಜ್ಞಾನವೇ ಹುಟ್ಟುತ್ತದೆಂಬುದರಲ್ಲಿಯೂ ಯಾವ ಪ್ರಮಾಣವೂ ಇಲ್ಲ. ಆದುದರಿಂದ ನಿಯತವಾಗಿ ಜ್ಞಾನಸಾಮಾನ್ಯವನ್ನು ಕುರಿತು ತ್ವಙ್ಮನಃ ಸಂಯೋಗವು ಕಾರಣವೆಂದು ಅಂಗೀಕರಿಸಲೇಬೇಕು.

ಅಥ ಜ್ಞಾನಮಾತ್ರೇ ತ್ವಙ್ಮನಃ ಸಂಯೋಗಸ್ಯ ಯದಿ ಕಾರಣತ್ವಂ ತದಾರಾಸನ ಚಾಕ್ಷುಷಾದಿಪ್ರತ್ಯಕ್ಷಕಾಲೇ ತ್ವಾಚಪ್ರತ್ಯಕ್ಷಂ ಸ್ಯಾತ್ । ವಿಷಯತ್ವಕ್ಸಂಯೋಗಸ್ಯ ಚ ಸತ್ವಾತ್ । ಪರಸ್ಪರ ಪ್ರತಿಬಂಧಾದೇಕಮಪಿ ವಾ ನ ಸ್ಯಾದಿತಿ । ಅತ್ರ ಕೇಚಿತ್—ಪೂರ್ವೋಕ್ತಯುಕ್ತ್ಯಾ ತ್ವಙ್ಮನೋಯೋಗಸ್ಯ ಜ್ಞಾನಹೇತುತ್ವೇ ಸಿದ್ಧೇ ಚಾಕ್ಷುಷಾದಿಸಾಮಗ್ರ್ಯಾಃ ಸ್ಪಾರ್ಶನಾದಿ ಪ್ರತಿಬಂಧಕತ್ವ ಮನುಭವಾನುರೋಧಾತ್ ಕಲ್ಪ್ಯತೇ ಇತಿ । ಅನ್ಯೇತು—ಸುಷುಪ್ತ್ಯನುರೋಧಾಚ್ಚರ್ಮಮನಃ ಸಂಯೋಗಸ್ಯ ಜ್ಞಾನ ಹೇತುತ್ವಂ ಕಲ್ಪ್ಯತೇ । ಚಾಕ್ಷುಷಾದಿ ಪ್ರತ್ಯಕ್ಷಕಾಲೇ ತ್ವಙ್ಮನಃ ಸಂಯೋಗಾಭಾವಾನ್ನ ಸ್ಪಾರ್ಶನಪ್ರತ್ಯಕ್ಷಮಿತಿ ವದಂತಿ ॥

ತ್ವಙ್ಮನಃ ಸಂಯೋಗವು ಜ್ಞಾನ ಸಾಮಾನ್ಯಕ್ಕೆ ಕಾರಣವೆಂದು ಒಪ್ಪಿದಿದ್ದವನು ಆಶಂಕಿಸುತ್ತಾನೆ. 'ಅಥ—' ಇತಿ. ಮಾವಿನ ಹುಳಿರಸದ ರಸನೇಂದ್ರಿಯಜನ್ಯಪ್ರತ್ಯಕ್ಷಕಾಲದಲ್ಲಿ ಅಥವಾ ಅದರ ರೂಪದ ಚಾಕ್ಷುಷಪ್ರತ್ಯಕ್ಷ ಕಾಲದಲ್ಲಿ ತ್ವಗಿಂದ್ರಿಯದಿಂದ ಉಂಟಾಗುವ ಸ್ಪರ್ಶಾದಿ ಪ್ರತ್ಯಕ್ಷವೂ ಆಗಲಿ. ಜ್ಞಾನ ಸಾಮಾನ್ಯಕ್ಕೆ ತ್ವಙ್ಮನಃ ಸಂಯೋಗವು ಕಾರಣವೆಂದುದರಿಂದ ಆಗ ವಿಷಯ—ಮಾವು ಮುಂತಾದವುಗಳು, ಅವುಗಳಿಗೂ ತ್ವಕಿಗೂ ಸಂಯೋಗವಿದ್ದು, ತ್ವಙ್ಮನಃ ಸಂಯೋಗವೂ ಇರುವುದರಿಂದ ಹೀಗೆ ಶಂಕಿಸಲು ಅವಕಾಶವಿದೆ.

ಆ ಸಮಯದಲ್ಲಿ ಸ್ಪಾರ್ಶನ ಪ್ರತ್ಯಕ್ಷವಾಗಲು ಚಾಕ್ಷುಷಪ್ರತ್ಯಕ್ಷ ಸಾಮಗ್ರಿಯು ಅಂದರೆ ವಿಷಯ ಚಕ್ಷುರಿಂದ್ರಿಯಸನ್ನಿಕರ್ಷಾದಿಗಳು ಪ್ರತಿಬಂಧಕವಿರುತ್ತವೆ. ಆದುದರಿಂದ ಸ್ಪಾರ್ಶನಪ್ರತ್ಯಕ್ಷವಾಗುವುದಿಲ್ಲವೆಂದರೆ ಯಾವ ಪ್ರತ್ಯಕ್ಷವೂ ಆಗದಿರಲಿ ಎಂದು ಆಪಾದಿಸುತ್ತಾನೆ. 'ಪರಸ್ಪರ—' ಇತಿ. ರಾಸನ ಸಾಮಗ್ರಿ ಚಾಕ್ಷುಷಪ್ರತ್ಯಕ್ಷಕ್ಕೆ ಪ್ರತಿಬಂಧಕ. ಹೀಗೆ ಪರಸ್ಪರ ಪ್ರತಿಬಂಧ ಇರುವುದರಿಂದ ರಾಸನಾದಿ ಯಾವ ಒಂದ ಪ್ರತ್ಯಕ್ಷವೂ ಉಂಟಾಗದೆ ಇರಬೇಕಾಗುತ್ತದೆ. ವಿಷಯೇಂದ್ರಿಯಸಂಯೋಗ' ಇಂದ್ರಿಯಮನಃ ಸಂಯೋಗ ಯಾವಾಗಲೂ ಇರುವುದರಿಂದ ಪರಸ್ಪರ ಪ್ರತಿಬಧ್ಯ ಪ್ರತಿಬಂಧಕಭಾವ ಹೇಳಿದರೆ ಒಂದು ಜ್ಞಾನವೂ ಹುಟ್ಟಲಾರದೆಂದು ತಾತ್ಪರ್ಯ. ಆದರೆ ಯಾವು

ದಾದರೂ ಒಂದು ಜ್ಞಾನ ಬಂದೇ ಬರುತ್ತದೆ. ಆದುದರಿಂದ ತ್ವಙ್ಮನಃ ಸಂಯೋಗಕ್ಕೆ ಜ್ಞಾನಸಾಮಾನ್ಯವನ್ನು ಕುರಿತು ಕಾರಣತ್ವ ಹೇಳುವುದು ಸರಿಯಲ್ಲವೆಂದು ಪೂರ್ವಪಕ್ಷಿಯ ಅಭಿಪ್ರಾಯ.

ಕಾರಣತ್ವಹೇಳುವವನು ಇದಕ್ಕೆ ಸಮಾಧಾನ ತೋರಿಸುತ್ತಾನೆ. 'ಅತ್ರ ಕೇಚಿತ್—' ಇತಿ. ಪೂರ್ವೋಕ್ತಯುಕ್ತಿಯಿಂದ ಅಂದರೆ ಸುಷುಪ್ತಿಯಲ್ಲಿ ತ್ವಕ್ಕನ್ನು ಬಿಟ್ಟು ಮನಸ್ಸು ಪುರೀತನ್ನಾಡಿಯನ್ನು ಪ್ರವೇಶಿಸುವುದರಿಂದ ಯಾವ ಜ್ಞಾನವೂ ಹುಟ್ಟದಿರುವುದರಿಂದ ಜ್ಞಾನಸಾಮಾನ್ಯಕ್ಕೆ ತ್ವಙ್ಮನಃ ಸಂಯೋಗವು ಕಾರಣವೆಂದು ಸಿದ್ಧವಾಗುವುದರಿಂದ (ಪ್ರಮಾಣ ಸಿದ್ಧವಾದುದರಿಂದ) ಚಾಕ್ಷುಷಾದಿ ಸಾಮಗ್ರಿಯು (ವಿಷಯ ಚಕ್ಷುಃ ಸಂಯೋಗಾದಿ) ತ್ವಾಚ ಪ್ರತ್ಯಕ್ಷವನ್ನು ಕುರಿತು ಪ್ರತಿಬಂಧಕವೆಂದು ಫಲಬಲದಿಂದ ಅಂಗೀಕರಿಸಬೇಕು. ಅನುಭವಾನುರೋಧಾತ್—ಅನುಭವಬಲದಿಂದ ಇದು ಅನುಮಿತವಾಗುತ್ತದೆ. ಚಾಕ್ಷುಷಾದಿ ಸಾಮಗ್ರಿ ಇರುವಾಗ ಚಾಕ್ಷುಷಪ್ರತ್ಯಕ್ಷ ಒಂದೇ ಆಗುತ್ತದೆ. ಸ್ಪಾರ್ಶನ ಪ್ರತಿಬಂಧಕವೆಂದು ಕಲ್ಪಿತವಾದುದರಿಂದ ತ್ವಙ್ಮನಃ ಸಂಯೋಗ ವಿದ್ದರೂ ಸ್ಪಾರ್ಶನ ಪ್ರತ್ಯಕ್ಷವಾಗುವುದಿಲ್ಲ. ಇದರಿಂದ ಹೀಗೆ ಅನುಮಾನವು ಸಿದ್ಧವಾಗುತ್ತದೆ. 'ಘಟಚಕ್ಷುರಿಂದ್ರಿಯಸನ್ನಿಕರ್ಷಃ—ಸ್ಪಾರ್ಶನ ಪ್ರತ್ಯಕ್ಷ ಪ್ರತಿಬಂಧಕಃ—ರೂಪೀ ಘಟಃ (ರೂಪವಿಶಿಷ್ಟ ಘಟ ವಿಷಯಕ) ಇತ್ಯಾಕಾರಕ ಜ್ಞಾನಜನಕತ್ವಾತ್' | ಯನ್ನೈವಂ ತನ್ನೈವಂ | ಹೀಗೆ ಕೆಲವರ ಸಮಾಧಾನ. ಇನ್ನು ಕೆಲವರು (ಪಕ್ಷಧರ ಮಿಶ್ರ ಮುಂತಾದವರು) ಬೇರೆ ರೀತಿಯಿಂದ ಸಮಾಧಾನ ಹೇಳುತ್ತಾರೆ. 'ಅನ್ಯೇತು—' ಇತಿ' ಸುಷುಪ್ತಿಯಲ್ಲಿ ಯಾವ ಜ್ಞಾನವೂ ಹುಟ್ಟದಿರುವುದರಿಂದ ಚರ್ಮಮನಃ ಸಂಯೋಗವು ಜ್ಞಾನ ಸಾಮಾನ್ಯವನ್ನು ಕುರಿತು ಕಾರಣವೆಂದು ಕಲ್ಪಿತವಾಗುತ್ತದೆ. ಆದರೆ ಚಾಕ್ಷುಷ ಪ್ರತ್ಯಕ್ಷವಾಗುವಾಗ ತ್ವಾಚಪ್ರತ್ಯಕ್ಷವು ಉಂಟಾಗುವುದಿಲ್ಲ. ಇವರ ಮತದಲ್ಲಿ ಹಿಂದಿನವರು ಹೇಳಿದಂತೆ ಪ್ರತಿಬಧ್ಯಪ್ರತಿಬಂಧಕಭಾವವನ್ನು ಕಲ್ಪಿಸದಿದ್ದರೂ ಚಾಕ್ಷುಷಪ್ರತ್ಯಕ್ಷವಾಗುವಾಗ ತ್ವಙ್ಮನಃ ಸಂಯೋಗವೇ ಇರುವುದಿಲ್ಲವೆಂದು ಇವರ ಸಿದ್ಧಾಂತ. ಮನಸ್ಸಿಗೆ ತ್ವಗಿಂದ್ರಿಯಮೊಡನೆ ಸಂಯೋಗವೇ ಇಲ್ಲದಿರುವುದರಿಂದ ತ್ವಾಚ ಪ್ರತ್ಯಕ್ಷವಾಗುವುದಿಲ್ಲ.

**ಮನೋಗ್ರಾಹ್ಯಂ ಸುಖಂ ದುಃಖಮಿಚ್ಛಾ ದ್ವೇಷೋ ಮತಿಃ ಕೃತಿಃ || ೫೭ ||**

ಮನೋಗ್ರಾಹ್ಯಮಿತಿ || ಮನೋಜನ್ಯಪ್ರತ್ಯಕ್ಷವಿಷಯ ಇತ್ಯರ್ಥಃ | ಮತಿರ್ಜ್ಞಾನಮ್ | ಕೃತಿಃ ಪ್ರಯತ್ನಃ ಏವಂ ಸುಖತ್ವಾದಿಕಮಪಿ ಮನೋಗ್ರಾಹ್ಯಮ್ | ಏವ ಮಾತ್ಮಾಪಿ ಮನೋಗ್ರಾಹ್ಯಃ | ಕಿಂತು ಮನೋಮಾತ್ರಸ್ಯ ಗೋಚರ ಇತ್ಯನೇನ ಪೂರ್ವಮುಕ್ತತ್ವಾದತ್ರ ನೋಕ್ತಃ || ೫೭ ||

ಕಾರಿಕೆಯಲ್ಲಿ ಮನೋರೂಪ ಇಂದ್ರಿಯಕ್ಕೆ ಅಸಾಧಾರಣ ವಿಷಯಗಳು ಯಾವು

ವೆಂದು ತೋರಿಸುತ್ತಾನೆ. 'ಮನೋಗ್ರಾಹ್ಯ—' ಇತಿ. ಸುಖ, ದುಃಖ, ಇಚ್ಛಾ, ದ್ವೇಷ, ಮತಿ (ಜ್ಞಾನ) ಕೃತಿ (ಪ್ರಯತ್ನ ಇವು ಕೇವಲ ಮನೋಜನ್ಯಪ್ರತ್ಯಕ್ಷ ವಿಷಯ ಗಳಾಗುತ್ತವೆ. 'ಏವಂ—' ಇತಿ. 'ಯೇನೇಂದ್ರಿಯೇಣ—' ನ್ಯಾಯದಿಂದ ಸುಖಾದಿ ಗಳಲ್ಲಿರುವ ಸುಖತ್ವಾದಿ ಜಾತಿಗಳೂ ಸುಖಭಾವಾದಿಗಳೂ ಮನಸ್ಸಿನಿಂದಲೇ ಗೃಹೀತ ವಾಗುತ್ತವೆ. ಆತ್ಮನೂ ಮನಸ್ಸಿನಿಂದ ಗಾಹ್ಯನಾದರೂ ಕೇವಲ ಮನಸ್ಸಿಗೆ ಗೋಚರ ವಾಗುವ ವಿಷಯಗಳೆಂದು ಹಿಂದೆ ಪ್ರತಿಜ್ಞಾತವಾದುದರಿಂದ ಅದನ್ನು ಇಲ್ಲಿ ಹೇಳಿಲ್ಲ. ಆದುದರಿಂದ ಯಾವ ದೋಷವೂ ಇಲ್ಲ || ೫೭ ||

**ಜ್ಞಾನಂ ಯನ್ನಿರ್ವಿಕಲ್ಪಾಖ್ಯಂ ತದತೀಂದ್ರಿಯಮಿಷ್ಯತೇ ||**
**ಮಹತ್ವಂ ಷಡ್ವಿಧೇ ಹೇತುರಿಂದ್ರಿಯಂ ಕರಣಂ ಮತಮ್ ||**

**ಚಕ್ಷುಃ** ಸಂಯೋಗಾದ್ಯನಂತರಂ ಘಟ ಇತ್ಯಾಕಾರಕಂ ಘಟತ್ವಾದಿವಿಶಿಷ್ಟಂ ಜ್ಞಾನಂ ನ ಸಂಭವತಿ, ಪೂರ್ವಂ ವಿಶೇಷಣಸ್ಯ ಘಟತ್ವಾದೇರ್ಜ್ಞಾನಾಭಾವಾತ್ | ವಿಶಿಷ್ಟ ಬುದ್ಧೌ ವಿಶೇಷಣಜ್ಞಾನಸ್ಯ ಕಾರಣತ್ವಾತ್ | ತಥಾಚ ಪ್ರಥಮತೋ ಘಟ ಘಟತ್ವಯೋರ್ವೈಶಿಷ್ಟ್ಯಾನವಗಾಹ್ಯೇವ ಜ್ಞಾನಂ ಜಾಯತೇ | ತದೇವ ನಿರ್ವಿ ಕಲ್ಪಮ್ | ತಚ್ಚ ನ ಪ್ರತ್ಯಕ್ಷಮ್ ||

ಇಂದ್ರಿಯಗಳಿಗೆ ಗೋಚರವಾಗುವ ಪ್ರತ್ಯಕ್ಷವನ್ನು ಹೇಳಿ ಈಗ ಗೋಚರಿಸದಿರುವ ಪ್ರತ್ಯಕ್ಷವನ್ನು ಹೇಳುತ್ತಾನೆ. 'ಜ್ಞಾನಂ—' ಇತಿ. ನಿರ್ವಿಕಲ್ಪಂ ಆಖ್ಯಾ ಯಸ್ಯ ತತ್ ನಿರ್ವಿಕಲ್ಪಾಖ್ಯಮ್. ನಿರ್ಗತೋ ವಿಕಲ್ಪಃ—ಪ್ರಕಾರತಾದಿಕೃತೋ ವಿಶೇಷಃ ಯಸ್ಮಾತ್, ತತ್ ನಿರ್ವಿಕಲ್ಪಮ್ | ಇಂದ್ರಿಯಂ ಅತಿಕ್ರಮ್ಯ ವರ್ತತೇ ಇತಿ ಅತೀಂದ್ರಿ ಯಮ್. ವಿಶೇಷಣಶೂನ್ಯವಾದ ಜ್ಞಾನವು ನಿರ್ವಿಕಲ್ಪಕಜ್ಞಾನ. ಇದು ಇಂದ್ರಿ ಯಕ್ಕೆ ಗೋಚರವಾಗುವುದಿಲ್ಲವೆಂದು ನೈಯಾಯಿಕರ ಮತ. ಇದನ್ನೇ ಮುಕ್ತಾವಳಿ ಯಲ್ಲಿ ವಿವರಿಸುತ್ತಾನೆ. 'ಚಕ್ಷುಃ ಸಂಯೋ—' ಇತಿ. ಘಟರೂಪ ವಿಷಯಕ್ಕೂ ನಯನೇಂದ್ರಿಯಕ್ಕೂ ಸಂಯೋಗವಾದಮೇಲೆ 'ಅಯಂಘಟಃ' ಎಂಬ ಘಟತ್ವ ಪ್ರಕಾರಕ ಘಟತ್ವವದ್ವಿಶೇಷ್ಯಕರೂಪವಾದ ವಿಶಿಷ್ಟ ಜ್ಞಾನವು ಹುಟ್ಟುವುದಿಲ್ಲ. ಹೀಗೆ ವಿಶಿಷ್ಟಜ್ಞಾನವುಂಟಾಗಲು ಕಾರಣವೇ ಇಲ್ಲವೆಂದು ತೋರಿಸುತ್ತಾನೆ. 'ಪೂರ್ವಂ—' ಇತಿ. 'ಘಟಃ' ಎಂದು ಬರುವ ಜ್ಞಾನದ ಅವ್ಯವಹಿತ ಪೂರ್ವ ಕ್ಷಣದಲ್ಲಿ ಎಂದರ್ಥ. 'ಘಟಃ ಎಂಬ ಜ್ಞಾನದಿಂದ ।ನಿರೂಪಿತವಾದ ವಿಶೇಷಣಾ ತಾಶ್ರಯವಾದ ಘಟತ್ವಾದಿಗಳ ಜ್ಞಾನವಿರುವುದಿಲ್ಲ. ಘಟತ್ವಾದಿನಿಷ್ಠ ವಿಶೇಷಣತಾ ವಿಷಯಕ ಬುದ್ಧಿಯೇ ಇರುವುದಿಲ್ಲ.

ಘಟತ್ವದಜ್ಞಾನವಿಲ್ಲದಿದ್ದರೆ 'ಘಟಃ' ಎಂಬ ವಿಶಿಷ್ಟಜ್ಞಾನವೂ ಬಾರದಿರಲುಕಾರಣ ತೋರಿಸುತ್ತಾನೆ. 'ವಿಶಿಷ್ಟಬುದ್ಧೌ—' ಇತಿ. ವಿಶಿಷ್ಟಬುದ್ಧಿಯಲ್ಲಿ ವಿಶೇಷಣವಾದ

ಧರ್ಮಜ್ಞಾನವು ಕಾರಣವಾಗುತ್ತದೆ. 'ನಾಗೃಹೀತವಿಶೇಷಣಾ ಬುದ್ಧಿರ್ವಿಶಿಷ್ಟ ಉಪ ಜಾಯತೇ' ಎಂದು ನಿಯಮ. ವಿಶೇಷಣವನ್ನು ವಿಷಯೀಕರಿಸದಿರುವ ಬುದ್ಧಿಯು ವಿಶಿಷ್ಟಬುದ್ಧಿಯಾಗಲಾರದೆಂದು ತಾತ್ಪರ್ಯ. ಇದನ್ನೇ 'ತಥಾಚ—' ಎಂಬುದರಿಂದ ವಿವರಿಸುತ್ತಾನೆ. ಮೊದಲು ಘಟ, ಘಟತ್ವರೂಪ ವಿಶೇಷ್ಯವಿಶೇಷಣಗಳಿಗೆ (ಧರ್ಮಿ ಧರ್ಮಗಳಿಗೆ) ವೈಶಿಷ್ಟ್ಯವನ್ನು ಗ್ರಹಿಸದಿರುವ ಜ್ಞಾನವುಂಟಾಗುತ್ತದೆ. ಇದೇ ವೈಶಿಷ್ಟ್ಯ ನಿಷ್ಠಸಾಂಸರ್ಗಿಕವಿಷಯತಾನಿರೂಪಿತವಿಷಯತಾಶೂನ್ಯಜ್ಞಾನವಾಗಿ ನಿರ್ವಿಕಲ್ಪಕಜ್ಞಾನ ವಾಗುತ್ತದೆ. ಇದು ಪ್ರತ್ಯಕ್ಷವಾಗುವುದಿಲ್ಲ. ಇಂದ್ರಿಯಾರ್ಥಸನ್ನಿಕರ್ಷದಿಂದ ಹುಟ್ಟು ವುದಿಲ್ಲವೆಂದರ್ಥ. ಲೌಕಿಕವಿಷಯತಾಶೂನ್ಯಜ್ಞಾನವೇ ನಿರ್ವಿಕಲ್ಪಜ್ಞಾನ. ವಿಶಿಷ್ಟ ಬುದ್ಧಿಗೆ ಇದು ಕಾರಣವಾಗುವುದರಿಂದ ಅನುಮಾನಗಮ್ಯ. 'ಅಯಂ ಘಟಃ' ಇತಿ ವಿಶಿಷ್ಟಬುದ್ಧಿಃ— ವಿಶೇಷಣಜ್ಞಾನಜನ್ಯಾ— ವಿಶಿಷ್ಟಬುದ್ಧಿತ್ವಾತ್ । 'ದಂಡೀಪುರುಷಃ' ಇತಿವಿಶಿಷ್ಟಬುದ್ಧಿವತ್ ॥ ಎಂದು ಅನುಮಾನಾಕಾರ. ಇದು ಮುಂದೆ ವಿವರಿ ಸಲ್ಪಡುತ್ತದೆ.

'ಅಯಂಘಟಃ' ಎಂಬ ಜ್ಞಾನಕ್ಕೆ ವಿಶಿಷ್ಟಜ್ಞಾನವೆಂದು ಹೆಸರು. ಇಲ್ಲಿ ಘಟ, ಘಟತ್ವ ಇವೆರಡರಸಂಬಂಧ ಇವು ಮೂರು ತೋರುತ್ತವೆ. ಈ ಮೂರರಲ್ಲಿ ಘಟತ್ವ ವಿಶೇಷಣ, ಘಟ ವಿಶೇಷ್ಯ, ಇವುಗಳ ಪರಸ್ಪರಸಂಬಂಧ ಸಮವಾಯವಾಗುತ್ತದೆ. ಇವು ಮೂರೂ ವಿಶಿಷ್ಟಜ್ಞಾನಕ್ಕೆ ವಿಷಯಗಳು. ವಿಶಿಷ್ಟಜ್ಞಾನವು ಇವುಗಳನ್ನು ವಿಷಯೀಕರಿಸುತ್ತದೆ. ವಿಶಿಷ್ಟಜ್ಞಾನವು ಯಾವಾಗಲೂ ವಿಶೇಷಣಜ್ಞಾನಪೂರ್ವಕವಾಗಿಯೇ ಇರುತ್ತದೆ. ಅಂದರೆ ವಿಶೇಷಣಜ್ಞಾನ ಮೊದಲು ಬಂದು ಅದರಿಂದ ವಿಶಿಷ್ಟಜ್ಞಾನ ಬರುತ್ತದೆ. ಯಾವಜ್ಞಾನಬರಬೇಕಾದರೂ ಮೊದಲು ಯಾವಜ್ಞಾನದಲ್ಲಿ ಘಟ ಘಟತ್ವಗಳು ವಿಶಕಲಿತ ವಾಗಿಯೇ (ವಿಶಿಷ್ಟವಾಗಿ ತೋರದೆ ಬೇರೆ ಬೇರೆ ರೂಪವಾಗಿಯೇ ತೋರುವುದು) ತೋರುತ್ತವೆಯೋ ವೈಶಿಷ್ಟ್ಯವನ್ನು ಗ್ರಹಿಸುವುದಿಲ್ಲವೋ ಆ ಜ್ಞಾನವೇ ನಿರ್ವಿಕಲ್ಪಜ್ಞಾನ. ಇದು ಇಂದ್ರಿಯಗಳಿಗೆ ಗೋಚರಿಸದಿರುವುದರಿಂದ ಪ್ರತ್ಯಕ್ಷವಾಗುವುದಿಲ್ಲ.

ವಿಶೇಷಣವಿಶೇಷ್ಯಭಾವವನ್ನು ತೋರಿಸದ ಶುದ್ಧವಸ್ತುಜ್ಞಾನವೇ ನಿರ್ವಿಕಲ್ಪಜ್ಞಾನ ವೆಂದು ಭಟ್ಟಪಾದರ ಮತ. ನಾಮಾದಿವಿಶೇಷಣರಹಿತವಾಗಿ ಸ್ವಲಕ್ಷಣಮಾತ್ರ ವಿಷಯಕಜ್ಞಾನವು ನಿರ್ವಿಕಲ್ಪವೆಂದು ಪ್ರಾಚೀನತಾರ್ಕಿಕರ ಮತ.

ತಥಾಹಿ—ವೈಶಿಷ್ಟ್ಯಾನವಗಾಹಿ ಜ್ಞಾನಸ್ಯ ಪ್ರತ್ಯಕ್ಷಂ ನ ಭವತಿ, ಘಟಮಹಂ ಜಾನಾ ಮೀತಿ ಪ್ರತ್ಯಯಾತ್ । ತತ್ರಾತ್ಮನಿ ಜ್ಞಾನಂ ಪ್ರಕಾರೀಭೂಯಭಾಸತೇ । ಜ್ಞಾನೇ ಘಟಃ, ತತ್ರ ಘಟತ್ವಂ, ಯಃ ಪ್ರಕಾರಃ ಸ ಏವ ವಿಶೇಷಣಮಿತ್ಯು ಚ್ಯತೇ । ವಿಶೇಷಣೇ ಯದ್ವಿಶೇಷಣಂ ತದ್ವಿಶೇಷಣತಾವಚ್ಛೇದಕಮಿತ್ಯುಚ್ಯತೇ । ವಿಶೇಷಣತಾವಚ್ಛೇದಕಪ್ರಕಾರಕಂ ಜ್ಞಾನಂ ವಿಶಿಷ್ಟವೈಶಿಷ್ಟ್ಯಜ್ಞಾನೇ ಕಾರ ಣಮ್ । ನಿರ್ವಿಕಲ್ಪಕೇ ಚ ಘಟತ್ವಾದಿಕಂ ನ ಪ್ರಕಾರಸ್ತೇನ ಘಟತ್ವಾದಿವಿಶಿಷ್ಟ

ಘಟಾದಿವೈಶಿಷ್ಟ್ಯಭಾನಂ ಜ್ಞಾನೇ ನ ಸಂಭವತಿ । ಘಟತ್ವಾದ್ಯಪ್ರಕಾರಕಂ ಚ ಘಡಾದಿ ವಿಶಿಷ್ಟಜ್ಞಾನಂ ನ ಸಂಭವತಿ, ಜಾತ್ಯಖಂಡೋಪಾಧ್ಯತಿರಿಕ್ತಪದಾರ್ಥ ಜ್ಞಾನಸ್ಯಕಿಂಚಿದ್ಧರ್ಮಪ್ರಕಾರಕತ್ವನಿಯಮಾತ್ ॥

ಸವಿಕಲ್ಪಕ, ನಿರ್ವಿಕಲ್ಪಕಜ್ಞಾನಗಳನ್ನೇ ವಿವರಿಸುತ್ತಾನೆ. 'ತಥಾಹಿ—' ಇತಿ. ವೈಶಿಷ್ಟ್ಯಾನವಗಾಹಿಜ್ಞಾನವು ಪ್ರತ್ಯಕ್ಷವಾಗುವುದಿಲ್ಲ. ವೈಶಿಷ್ಟ್ಯಾನವಗಾಹಿ ಎಂದರೆ ವಿಶೇಷ್ಯತಾ, ವಿಶೇಷಣತಾ ಸಂಸರ್ಗತಾऽವಿಷಯಕ ಜ್ಞಾನ. ಯಾವ ಜ್ಞಾನವು ವಿಶೇಷ್ಯತಾದಿಗಳನ್ನು ಗ್ರಹಿಸುವುದಿಲ್ಲವೋ ಆ ಜ್ಞಾನ. (ವಸ್ತು ಸ್ವರೂಪವನ್ನು ಮಾತ್ರ ಗ್ರಹಿಸುವ ಜ್ಞಾನ) ಅನುವ್ಯವಸಾಯಜ್ಞಾನದಲ್ಲಿ ಈ ಜ್ಞಾನವು ತೋರುವುದಿಲ್ಲ. ಜ್ಞಾನದ ಜ್ಞಾನಕ್ಕೆ ಅನುವ್ಯವಸಾಯವೆಂದು ಹೆಸರು. ಘಟಮಹಂ ಜಾನಾಮಿ (ನಾನು ಘಟವನ್ನು ತಿಳಿಯುತ್ತೇನೆ.) ಎಂಬುದೇ ಈ ಜ್ಞಾನದ ಆಕಾರ. ಇದರಲ್ಲಿ ವಿಶಿಷ್ಟ ಜ್ಞಾನವು ತೋರುತ್ತದೆ. ಈ ಪ್ರತೀತಿಯಲ್ಲಿ ಆತ್ಮನಲ್ಲಿ ವಿಶಿಷ್ಟಜ್ಞಾನವು ಪ್ರಕಾರವಾಗಿ (ವಿಶೇಷಣ) ತೋರುತ್ತದೆ. (ವಿಶೇಷಣತಾ ರೂಪದಿಂದ ಜ್ಞಾನವು ಭಾಸವಾಗುತ್ತದೆ.) 'ಘಟಜ್ಞಾನವಾನಹಮ್' ಎಂಬ ಜ್ಞಾನಕ್ಕೆ ಅನುವ್ಯವಸಾಯಾತ್ಮಕಜ್ಞಾನವೆಂದು ಕರೆಯುತ್ತಾರೆ. ವಿಶೇಷಣತಾಭಾವ ಹೊಂದಿರುವ ಈ ವಿಶಿಷ್ಟಜ್ಞಾನದಲ್ಲಿ ಘಟವು ವಿಶೇಷಣವಾಗಿ ತೋರುತ್ತದೆ. ವಿಶೇಷಣತಾಭಾವ ಹೊಂದಿರುವ ಘಟದಲ್ಲಿ ಜಾತಿರೂಪ ಧರ್ಮವಾದ ಘಟತ್ವವು ವಿಶೇಷಣವಾಗಿ ತೋರುತ್ತದೆ. ಪ್ರಕಾರವೆಂದರೆ ವಿಶೇಷಣ. ಇವೆರಡೂ ಪರ್ಯಾಯ ಪದಗಳು. ವಿಶೇಷಣದಲ್ಲಿ ವಿಶೇಷಣವಾದದ್ದು ವಿಶೇಷಣತಾವಚ್ಛೇದಕವಾಗುತ್ತದೆ. ಪ್ರಕೃತಜ್ಞಾನದಲ್ಲಿ ವಿಶೇಷಣವಾದ ಘಟದಲ್ಲಿ ಘಟತ್ವವು ವಿಶೇಷಣವಾಗಿ ತೋರುವುದರಿಂದ ಅದು ವಿಶೇಷಣತಾವಚ್ಛೇದಕವಾಗುತ್ತದೆ. ವಿಶೇಷಣತಾವಚ್ಛೇದಕವಾದ ಘಟತ್ವವೇ ಪ್ರಕಾರವಾಗಿರುವ ಜ್ಞಾನವೆಂದರೆ 'ಅಯಂಘಟಃ' ಎಂಬ ವಿಶಿಷ್ಟಜ್ಞಾನ. 'ಘಟಮಹಂ ಜಾನಾಮಿ' ಎಂಬ ಅನುವ್ಯವಸಾಯಾತ್ಮಕವಾದ ವಿಶಿಷ್ಟವೈಶಿಷ್ಟ್ಯಾವಗಾಹಿ ಜ್ಞಾನದಲ್ಲಿ 'ಅಯಂಘಟಃ' ಎಂಬ ವಿಶಿಷ್ಟಜ್ಞಾನವು ಕಾರಣವಾಗುತ್ತದೆ. ಈ ವಿಶಿಷ್ಟ ಜ್ಞಾನ ಬರಬೇಕಾದರೆ ಮೊದಲು ವಿಶಕಲಿತರೂಪದಿಂದ ಘಟತ್ವಾದಿ ವಿಶೇಷಣಜ್ಞಾನವು ವೈಶಿಷ್ಟ್ಯಾವಗಾಹಿಯಾಗದೇ ತೋರುತ್ತದೆಂದು ಅಂಗೀಕರಿಸಲೇ ಬೇಕು. ಹೀಗೆ ಒಪ್ಪದಿದ್ದರೆ 'ಅಯಂಘಟಃ' ಎಂಬ ವಿಶಿಷ್ಟಜ್ಞಾನವೇ ಬರಲಾರದು. ವಿಶಿಷ್ಟಜ್ಞಾನವುಂಟಾಗದೆ 'ಘಟಮಹಂ ಜಾನಾಮಿ' ಎಂಬ ವಿಶಿಷ್ಟವೈಶಿಷ್ಟ್ಯಾವಗಾಹಿಜ್ಞಾನವೂ ಬರಲಾರದು.

ಇದನ್ನೇ ಸ್ಪಷ್ಟಪಡಿಸುತ್ತಾನೆ. 'ನಿರ್ವಿಕಲ್ಪಕೇ—' ಇತಿ. ಇದರಲ್ಲಿ ಘಟತ್ವವು ಪ್ರಕಾರವಾಗಿರುವುದಿಲ್ಲ. ಘಟತ್ವಾದಿಧರ್ಮಗಳು ವಿಶೇಷಣತಾ ರೂಪದಿಂದ ಅಲ್ಲಿ ತೋರುವುದಿಲ್ಲವೆಂದರ್ಥ. ಆದುದರಿಂದಲೇ ಘಟತ್ವವಿಶಿಷ್ಟಘಟದ ವೈಶಿಷ್ಟ್ಯಭಾನವೂ ಇರುವುದಿಲ್ಲ. ಘಟಾದಿವಿಶಿಷ್ಟಜ್ಞಾನವು ಘಟತ್ವಾದಿಗಳನ್ನು ಪ್ರಕಾರವಾಗಿ ಹೊಂದಿರುವುದಲ್ಲದೆ

ಘಟತ್ವಾದ್ಯಪ್ರಕಾರಕವಾಗುವುದೇ ಇಲ್ಲ. ಘಟವೇ ಪ್ರಕಾರವಾಗಿದ್ದರೆ ಅದು ವಿಶಿಷ್ಟ ಜ್ಞಾನವೇ ಆಗುವುದಿಲ್ಲ.

ವಿಶೇಷಣಜ್ಞಾನವೂ ಜ್ಞಾನವಾದುದರಿಂದ ಸವಿಕಲ್ಪಕವೆಂದು ಅಂಗೀಕರಿಸುವುದಾದರೆ ಅನವಸ್ಥಾದೋಷ ಬರುವುದರಿಂದ ನಿರ್ವಿಕಲ್ಪಕಜ್ಞಾನವು ಸಿದ್ಧವಾಗುತ್ತದೆ. 'ಜಾತ್ಯ—' ಇತಿ. ಜಾತಿ ಅಥವಾ ಅಖಂಡೋಪಾಧ್ಯತಿರಿಕ್ತವಾದ ಪದಾರ್ಥಜ್ಞಾನವು ಯಾವಾಗಲೂ ಯಾವುದಾದರೊಂದು ಧರ್ಮಪ್ರಕಾರಕವಾಗಿಯೇ ತೋರುತ್ತದೆಂದು ನಿಯಮವಿದೆ. ಜಾತಿ—ಘಟತ್ವಾದಿ ಪ್ರತಿಯೋಗಿತ್ವ, ಅನುಯೋಗಿತ್ವಾದಿಧರ್ಮಗಳಿಗೆ ಅಖಂಡೋಪಾಧಿ ಎಂದು ಹೆಸರು. ಘಟವು ಜಾತಿಯೂ ಅಲ್ಲ, ಅಖಂಡೋಪಾಧಿಯೂ ಅಲ್ಲ. ಆದುದರಿಂದ ಅಲ್ಲಿ ಘಟತ್ವರೂಪವಾದ ಧರ್ಮವು ಪ್ರಕಾರವಾಗಿಯೇ ಇರುತ್ತದೆ. ಘಟತ್ವಾಪ್ರಕಾರವಾದರೆ ಘಟಾದಿವಿಶಿಷ್ಟಜ್ಞಾನವೇ ಆಗುವುದಿಲ್ಲ. ಜಾತ್ಯಾದಿಗಳು ಮಾತ್ರ ನಿರವಚ್ಛಿನ್ನವಾಗಿಯೇ ತೋರುತ್ತವೆ. ಜಾತಿಯಿಂದ ಕೂಡಿದ ಪದಾರ್ಥಜ್ಞಾನವಾದರೋ ಯಾವಾಗಲೂ ಯಾವುದಾದರೊಂದು ವಿಶೇಷಣದಿಂದ ಅವಚ್ಛಿನ್ನವಾಗಿಯೇ ಇರುತ್ತದೆ.

ಮೊದಲು ನಾಮಜಾತ್ಯಾದಿರಹಿತವಾದ (ಪ್ರಕಾರತಾ ಶೂನ್ಯವಾದ) ನಿಷ್ಪ್ರಕಾರಕ ಜ್ಞಾನವುಂಟಾಗುತ್ತದೆ. ಇದೇ ನಿರ್ವಿಕಲ್ಪಜ್ಞಾನ. ಇದು ವಸ್ತುಸ್ವರೂಪವನ್ನು ಮಾತ್ರ ಗ್ರಹಣಮಾಡುವ ಸ್ವಭಾವವುಳ್ಳದ್ದು. 'ಕಿಂಚಿದಿದಮ್' ಎಂದು ಇದರ ಆಕಾರ. ದೂರದಲ್ಲಿ ಒಂದು ವಸ್ತು ತೋರಿದಂತೆ ಇರುತ್ತದೆ. ಅಲೌಕಿಕವಾದ ಆಲೋಚನಾತ್ಮಕ ಜ್ಞಾನವಿಶೇಷವೇ ನಿರ್ವಿಕಲ್ಪವೆಂದು ಸಾಂಖ್ಯರ ಮತ. ಜ್ಞಾತೃಜ್ಞೇಯಾದಿವಿಭಾಗ ಶೂನ್ಯವಾದ ಬ್ರಹ್ಮಾತ್ಮೈಕ್ಯವಿಷಯಕವಾದ ಅಖಂಡಾಕಾರಕಜ್ಞಾನವು ನಿರ್ವಿಕಲ್ಪಕವೆಂದು ಅದ್ವೈತವೇದಾಂತಿಗಳ ಸಿದ್ಧಾಂತ. ಈ ನಿರ್ವಿಕಲ್ಪಕಜ್ಞಾನವುಂಟಾಗದೆ 'ಅಯಂ ಘಟಃ' ಎಂಬ ಘಟಘಟತ್ವವಿಶಿಷ್ಟವಾದ ಸವಿಕಲ್ಪಕಜ್ಞಾನವೂ ಹುಟ್ಟುವುದಿಲ್ಲ. ಈ ವಿಶಿಷ್ಟಜ್ಞಾನ ಬಾರದೇ 'ಘಟಮಹಂ ಜಾನಾಮಿ' ಎಂಬ ಅನುವ್ಯವಸಾಯಾತ್ಮಕ ಜ್ಞಾನವೂ ಬರುವುದಿಲ್ಲ. ಇದರಿಂದ ಈ ಅನುಮಾನವು ಸಿದ್ಧವಾಗುತ್ತದೆ. 'ಅಯಂ ಘಟಃ ಇತಿ ವಿಶಿಷ್ಟಜ್ಞಾನಂ—ವಿಶೇಷಣಜ್ಞಾನಜನ್ಯಂ—ವಿಶಿಷ್ಟಜ್ಞಾನತ್ವಾತ್ । 'ದಂಡೀ ಪುರುಷಃ' ಇತಿ ವಿಶಿಷ್ಟಜ್ಞಾನವತ್ ॥ ವಿಶಿಷ್ಟಜ್ಞಾನದಿಂದ ಮೊದಲು ವಿಶಕಲಿತವಾದ ವಿಶೇಷಣಜ್ಞಾನರೂಪವಾದ ನಿರ್ವಿಕಲ್ಪಕವು ಅನುಮಿತವಾಗುತ್ತದೆ.

ಮಹತ್ತ್ವಮಿತಿ ॥ ದ್ರವ್ಯಪ್ರತ್ಯಕ್ಷೇ ಮಹತ್ತ್ವಂ ಸಮವಾಯಸಂಬಂಧೇನ ಕಾರಣಮ್ । ದ್ರವ್ಯ ಸಮವೇತಾನಾಂ ಗುಣಕರ್ಮಸಾಮಾನ್ಯಾನಾಂ ಪ್ರತ್ಯಕ್ಷೇ ಸ್ವಾಶ್ರಯಸಮವಾಯ ಸಂಬಂಧೇನ ಕಾರಣಮ್ । ದ್ರವ್ಯಸಮವೇತ ಸಮವೇತಾನಾಂ ಗುಣತ್ವ ಕರ್ಮತ್ವಾದೀನಾಂ ಪ್ರತ್ಯಕ್ಷೇ ಸ್ವಾಶ್ರಯಸಮವೇತ ಸಮವಾಯಸಂಬಂಧೇನ ಕಾರಣಮಿತಿ ॥

'ಮಹತ್ವಂ ಷಡ್ವಿಧೇ ಹೇತುಃ' ಎಂದು ಕಾರಿಕೆಯಲ್ಲಿ ಹೇಳಿದೆ. ಚಾಕ್ಷುಷ,

ರಾಸನ, ಘ್ರಾಣಜ, ಶ್ರೋತ್ರಜ, ತ್ವಾಚ, ಮಾನಸಗಳೆಂದು ಚಕ್ಷುಷಾದಿ ಆರು ಇಂದ್ರಿಯಗಳಿಂದುಂಟಾಗುವ ಆರು ಪ್ರತ್ಯಕ್ಷಗಳಲ್ಲಿಯೂ ಮಹತ್ತ್ವವು ಕಾರಣವಾಗುತ್ತದೆ. "ಲೌಕಿಕ ವಿಷಯತಾಸಂಬಂಧೇನ ಜನ್ಯಪ್ರತ್ಯಕ್ಷಸಾಮಾನ್ಯಂ ಪ್ರತಿ ಮಹತ್ತ್ವಂ ಕಾರಣಮ್" ಎಂದು ತಿಳಿಯಬೇಕು. ಅದು ಪ್ರತ್ಯಕ್ಷನಿಯತಪೂರ್ವವೃತ್ತಿಯಾಗಿರುತ್ತದೆ. ಮಹತ್ತ್ವವು ಯಾವ ಯಾವ ಸಂಬಂಧದಿಂದ ಯಾವ ಯಾವ ಪ್ರತ್ಯಕ್ಷದಲ್ಲಿ ಕಾರಣವೆಂದು ತೋರಿಸುತ್ತಾನೆ. 'ದ್ರವ್ಯಪ್ರತ್ಯಕ್ಷೇ—' ಇತಿ. ದ್ರವ್ಯವಿಷಯಕ ಪ್ರತ್ಯಕ್ಷವನ್ನು ಕುರಿತು ಮಹತ್ತ್ವವು ಸಮವಾಯಸಂಬಂಧದಿಂದ ಕಾರಣವಾಗುತ್ತದೆ. ಯಾವ ದ್ರವ್ಯದಲ್ಲಿ ಮಹತ್ತ್ವವು ಸಮವಾಯಸಂಬಂಧದಿಂದ ಇರುತ್ತದೆಯೋ ಆಗ ಆ ದ್ರವ್ಯದ ಪ್ರತ್ಯಕ್ಷವಾಗುತ್ತದೆ. ಮಹತ್ತ್ವವು ಗುಣವಾದುದರಿಂದ ದ್ರವ್ಯವು ಗುಣಿಯಾದುದರಿಂದ 'ಗುಣಗುಣಿನೋಃ ಸಮವಾಯಃ' ಎಂದುದರಿಂದ ದ್ರವ್ಯದಲ್ಲಿ ಸಮವಾಯಸಂಬಂಧದಿಂದ ಇರುತ್ತದೆ. 'ದ್ರವ್ಯವೃತ್ತಿಲೌಕಿಕವಿಷಯತಾಸಂಬಂಧೇನ ಚಾಕ್ಷುಷಂ ಪ್ರತಿ ಮಹತ್ತ್ವಂ ಸಮವಾಯೇನ ಕಾರಣಂ' ಎಂದು ಕಾರ್ಯಕಾರಣಭಾವವನ್ನು ತಿಳಿಯಬೇಕು. ಮಹತ್ತ್ವಪರಿಮಾಣಾಕ್ರಾಂತವಾಗಿದ್ದರೇ ಆ ದ್ರವ್ಯಕ್ಕೆ ಷಡ್ವಿಧ ಪ್ರತ್ಯಕ್ಷವೂ ಉಂಟಾಗುತ್ತದೆ. ಅದು ಇಲ್ಲವಾದರೆ ಆ ದ್ರವ್ಯವು ಪ್ರತ್ಯಕ್ಷವಿಷಯವಾಗುವುದಿಲ್ಲ. 'ದ್ರವ್ಯಸಮವೇತ—' ಇತಿ. ದ್ರವ್ಯಸಮವೇತವೆಂದರೆ ದ್ರವ್ಯದಲ್ಲಿ ಸಮವಾಯಸಂಬಂಧದಿಂದ ಇರುವುದು. ಗುಣ, ಕರ್ಮ, ಸಮಾನ್ಯ—ಜಾತಿ ಇವು ದ್ರವ್ಯದಲ್ಲಿ ಸಮವಾಯಸಂಬಂಧದಿಂದ ಇರುವುದರಿಂದ ದ್ರವ್ಯಸಮವೇತಗಳು. ಇವುಗಳ ಪ್ರತ್ಯಕ್ಷವನ್ನು ಕುರಿತು ಮಹತ್ತ್ವವು ಸ್ವಾಶ್ರಯಸಮವಾಯಸಂಬಂಧದಿಂದ ಕಾರಣವಾಗುತ್ತದೆ. ಸ್ವಂ—ಮಹತ್ಪರಿಮಾಣ. ಸ್ವಾಶ್ರಯ—ಅದಕ್ಕೆ ಆಶ್ರಯವಾದ ದ್ರವ್ಯ. ಆ ದ್ರವ್ಯದಲ್ಲಿ ಮಹತ್ವವು (ಗುಣ) ಸಮವಾಯಸಂಬಂಧದಿಂದ ಇರುತ್ತದೆ. ದ್ರವ್ಯದಲ್ಲಿಯೇ ಗುಣಕರ್ಮಜಾತಿಗಳು ಸಮವೇತವಾಗಿವೆ. 'ದ್ರವ್ಯಸಮ—' ಇತಿ. ದ್ರವ್ಯದಲ್ಲಿ ಸಮವೇತವಾದವುಗಳು ಗುಣಾದಿಗಳು. ಆ ಗುಣಾದಿಗಳಲ್ಲಿ ಸಮವಾಯಸಂಬಂಧದಿಂದ ಗುಣತ್ವಾದಿಗಳು ಇರುವುದರಿಂದ ಅವು ಗುಣಸಮವೇತಗಳಾಗಿ ದ್ರವ್ಯಸಮವೇತ ಸಮವೇತಗಳಾಗುತ್ತವೆ. ಇವುಗಳ ಪ್ರತ್ಯಕ್ಷವನ್ನು ಕುರಿತು ಮಹತ್ತ್ವವು ಸ್ವಾಶ್ರಯಸಮವಾಯಸಂಬಂಧದಿಂದ ಕಾರಣವಾಗುತ್ತದೆ. ಸ್ವಂ—ಮಹತ್ತ್ವಂ. ಸ್ವಾಶ್ರಯಃ—ದ್ರವ್ಯಂ, ಅಲ್ಲಿ ಸಮವೇತಗಳು—ಗುಣಾದಿಗಳು ಅಲ್ಲಿ ಸಮವಾಯದಿಂದ ಗುಣತ್ವಾದಿಗಳು ಇರುತ್ತವೆ.

ಇಂದ್ರಿಯಮಿತಿ । ಅತ್ರಾಪಿ ಷಡ್ವಿಧ ಇತ್ಯನುಷಜ್ಯತೇ । ಇಂದ್ರಿಯತ್ವಂ ತು ನ ಜಾತಿಃ, ಪೃಥಿವೀತ್ವಾದಿನಾ ಸಾಂಕರ್ಯಪ್ರಸಂಗಾತ್ । ಶಬ್ದೇತರೋದ್ಭೂತವಿಶೇಷಗುಣಾನಾಶ್ರಯತ್ವೇ ಸತಿ ಜ್ಞಾನಕಾರಣಮನಃ ಸಂಯೋಗಾಶ್ರಯತ್ವಮಿಂದ್ರಿಯತ್ವಮ್ । ಆತ್ಮಾದಿವಾರಣಾಯ ಸತ್ಯಂತಮ್ । ಉದ್ಭೂತವಿಶೇಷಗುಣಸ್ಯ ಶಬ್ದಸ್ಯ ಶ್ರೋತ್ರೇ

ಸತ್ತ್ವಾಚ್ಛಬ್ದೇತರೇತಿ ! ವಿಶೇಷಗುಣಸ್ಯ ರೂಪಾದೇಶ್ಚಕ್ಷುರಾದಾವಪಿ ಸತ್ತ್ವಾದುದ್ಭೂತೇತಿ ||

ಕಾರಿಕೆಯಲ್ಲಿ 'ಇಂದ್ರಿಯಂ ಕರಣಂ—' ಎಂದು ಹೇಳಿದೆ. ಅದಕ್ಕೆ ಮುಕ್ತಾವಳಿಯಲ್ಲಿ ಸಂಬಂಧ ತೋರಿಸುತ್ತಾನೆ. 'ಅತ್ರಾಪಿ—' ಇತಿ. 'ಷಡ್ವಿಧೇ' ಪದವು ಅನುವೃತ್ತವಾಗುತ್ತದೆ. ಚಾಕ್ಷುಷಾದಿ ಆರು ಪ್ರತ್ಯಕ್ಷಗಳಲ್ಲಿ ಚಕ್ಷುರಾದಿ ಆರು ಇಂದ್ರಿಯಗಳು ಕರಣವಾಗುತ್ತವೆ. ಅಸಾಧಾರಣಕಾರಣಕ್ಕೆ ಕರಣವೆಂದು ಮುಂದೆ ಹೇಳುತ್ತಾನೆ. ಇದು ನಿಷ್ಕೃಷ್ಟಕಾರ್ಯಕಾರಣಭಾವ. 'ಚಾಕ್ಷುಷತ್ವಾದಿಪ್ರತ್ಯೇಕ ಧರ್ಮಾವಚ್ಛಿನ್ನ ನಿರೂಪಿತ ವ್ಯಾಪಾರಸಂಬಂಧಾವಚ್ಛಿನ್ನ ಕಾರಣತಾಶ್ರಯೀಭೂತಂ ಯತ್, ತತ್ ಇಂದ್ರಿಯವಿಭಾಜಕ ಚಕ್ಷುಷ್ಟ್ವಾದಿಪ್ರತ್ಯೇಕಧರ್ಮಾವಚ್ಛಿನ್ನಮ್" ಇಂದ್ರಿಯಗಳು ನಾನಾ ರೀತಿಯಾಗಿರುವುದರಿಂದ ಆಯಾಯ ಇಂದ್ರಿಯಗಳಿಗೆ ಪ್ರತ್ಯೇಕವಾಗಿ ಕಾರಣತ್ವಹೇಳುವುದಕ್ಕಿಂತ ಸಕಲೇಂದ್ರಿಯಗಳಲ್ಲಿರುವ ಇಂದ್ರಿಯತ್ವವು ಒಂದೇ ಆದುದರಿಂದ ಇಂದ್ರಿಯತ್ವ ಜಾತಿರೂಪದಿಂದ ಕಾರಣತ್ವ ಹೇಳಿದರೆ ಲಾಘವ ಬರುವುದಿಲ್ಲವೇ ? ಎಂಬ ಶಂಕೆ ಬಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಇಂದ್ರಿಯತ್ವಂ—' ಇತಿ. ಇದು ಜಾತಿಯಲ್ಲ. ಅಖಂಡೋಪಾಧಿರೂಪವಾದ ಒಂದು ಧರ್ಮವಾಗುತ್ತದೆ. ಇದಕ್ಕೆ ಜಾತಿತ್ವ ಇಲ್ಲದಿರಲು ಸಂಕರವೇ ಬಾಧಕವಾಗುತ್ತದೆ. ಪೃಥಿವೀತ್ವಾದಿಗಳಿಂದ ಇದಕ್ಕೆ ಸಾಂಕರ್ಯ ಬರುತ್ತದೆ. ಇಂದ್ರಿಯತ್ವವು ಪೃಥಿವೀತ್ವಾದಿಗಳನ್ನು ಬಿಟ್ಟು ಚಕ್ಷುರಾದಿಗಳಲ್ಲಿ ಇದೆ. ಚಕ್ಷುಸ್ಸಿನಲ್ಲಿ ಪೃಥಿವೀತ್ವಧರ್ಮವಿಲ್ಲ. ಇಂದ್ರಿಯತ್ವಧರ್ಮವಿದೆ. ಇಂದ್ರಿಯತ್ವಧರ್ಮವಿಲ್ಲದಿರುವ ಘಟಾದಿಗಳಲ್ಲಿ ಪೃಥಿವೀತ್ವಧರ್ಮವಿದೆ. ಹೀಗೆ ಪರಸ್ಪರಾಭಾವಸಮಾನಾಧಿಕರಣಕಗಳಾಗಿ ಘ್ರಾಣೇಂದ್ರಿಯದಲ್ಲಿ ಎರಡೂ ಬರುತ್ತವೆ. ಇದು ಪಾರ್ಥಿವವಾದುದರಿಂದ ಪೃಥಿವೀತ್ವವೂ ಇಂದ್ರಿಯವಾದುದರಿಂದ ಇಂದ್ರಿಯತ್ವವೂ ಇರುತ್ತದೆ. ಆದುದರಿಂದ ಇಂದ್ರಿಯತ್ವವು ಜಾತಿಯಾಗುವುದಿಲ್ಲ. ಇದಕ್ಕೆ ಅಖಂಡೋಪಾಧಿತ್ವವನ್ನು ತೋರಿಸುತ್ತಾನೆ. 'ಶಬ್ದೇತರೋ—' ಇತಿ. ಶಬ್ದಾತ್ ಇತರೇ ಯೇ ರೂಪಾದಯಃ, ಸುಖಾದಯಶ್ಚ, ಉದ್ಭೂತಾಃ—ಪ್ರತ್ಯಕ್ಷಯೋಗ್ಯಾಃ, ವಿಶೇಷಣಗುಣಾಃ, ತೇಷಾಮನಾಶ್ರಯತ್ವೇ ಸತಿ, ಜ್ಞಾನಸ್ಯ ಕಾರಣಂ, ಯಃ ಮನಃ ಸಂಯೋಗಃ, ತದಾಶ್ರಯತ್ವಮ್. ಶಬ್ದಕ್ಕಿಂತ ಬೇರೆಯಾದ ಯಾವ ರೂಪಸುಖಾದಿ ವಿಶೇಷಗುಣಗಳಿವೆಯೋ, ಅವು ಉದ್ಭೂತವಾಗಿರಬಾರದು. (ಪ್ರತ್ಯಕ್ಷಯೋಗ್ಯವಾಗಿರಬಾರದು) ಅನುದ್ಭೂತರೂಪದಿಂದ ಇರುತ್ತವೆಯೋ, ಅವುಗಳಿಗೆ ಆಶ್ರಯವಾಗಿದ್ದು, ಜ್ಞಾನಕ್ಕೆ ಸಾಧಾರಣಕಾರಣವಾದ ಮನಃ ಸಂಯೋಗಕ್ಕೆ ಆಶ್ರಯವಾಗಿರುವುದೇ ಇಂದ್ರಿಯ. ತತ್ತ್ವಂ—ಇಂದ್ರಿಯತ್ವಮ್. ಈ ರೀತಿಲಕ್ಷಣಕ್ಕೆ ಪದಕೃತ್ಯವನ್ನು ತೋರಿಸುತ್ತಾನೆ. 'ಆತ್ಮಾದಿ—' ಇತಿ. ಸತ್ಯಂತ ಹೇಳದೆ 'ಜ್ಞಾನಕಾರಣಮನಃ ಸಂಯೋಗಾಶ್ರಯತ್ವಂ' ಎಂದು ಹೇಳಿದರೆ ಇಂದ್ರಿಯಗಳನ್ನು ತೆಗೆದುಕೊಂಡಂತೆ ಆತ್ಮನನ್ನು ತೆಗೆದುಕೊಳ್ಳಬಹುದು. ಆ ಸಂಯೋಗಾಶ್ರಯ

ತ್ವವು ಆತ್ಮನಲ್ಲಿಯೂ ಬರುವುದರಿಂದ ಅತಿವ್ಯಾಪ್ತನಾಗುತ್ತದೆ. ಆದುದರಿಂದ ಸತ್ಯಂತ ಹೇಳಿದೆ. ಆಗ ಶಬ್ದಕ್ಕಿಂತ ಬೇರೆಯಾದ ಸುಖಾದಿ ಉದ್ಭೂತ ವಿಶೇಷಗುಣಗಳಿಗೆ ಆತ್ಮನು ಆಶ್ರಯನಾದುದರಿಂದ ಅನಾಶ್ರಯತ್ವ ಅವನಲ್ಲಿ ಬರುವುದಿಲ್ಲ. ಶಬ್ದೇತರವೆಂದು ಸತ್ಯಂತದಲ್ಲಿ ಹೇಳಿರುವುದರಿಂದ ಶ್ರೋತ್ರೇಂದ್ರಿಯದಲ್ಲಿ ಅವ್ಯಾಪ್ತಿ ಬರುವುದಿಲ್ಲ ಶ್ರೋತ್ರೇಂದ್ರಿಯವು ವಿಶೇಷಗುಣಗಳಿಗೆ ಅನಾಶ್ರಯವಾಗುವುದಿಲ್ಲ: ಇದು ಆಕಾಶಾತ್ಮಕ ವಾದುದರಿಂದ ಶಬ್ದರೂಪವಿಶೇಷಗುಣಾಶ್ರಯವಾಗಿಯೇ ಇರುತ್ತದೆ. ಆದುದರಿಂದ ಶಬ್ದಕ್ಕಿಂತ ಬೇರಾದ ವಿಶೇಷಗುಣಗಳಿಗೆ ಅನಾಶ್ರಯನೆಂದಿದೆ. ಸತ್ಯಂತದಲ್ಲಿಯೇ ಉದ್ಭೂತಪದವನ್ನು ಹೇಳದೇ ಉಳಿದ ಸಂಪೂರ್ಣಲಕ್ಷಣವನ್ನು ಹೇಳಿದರೂ (ಶಬ್ದೇತರ ವಿಶೇಷಗುಣಾನಾಶ್ರಯತ್ವೇ ಸತಿ ಜ್ಞಾನಕಾರಣಮನಃ ಸಂಯೋಗಾಶ್ರಯತ್ವಂ) ಚಕ್ಷುರಾದಿ ಇಂದ್ರಿಯಗಳಲ್ಲಿ ಅವ್ಯಾಪ್ತಿ ಬರುತ್ತದೆ. ನಯನಾದಿಗಳಲ್ಲಿ ರೂಪಾದಿವಿಶೇಷ ಗುಣಗಳೇ ಇರುವುದರಿಂದ ಅವು ಅನಾಶ್ರಯಗಳಾಗುವುದಿಲ್ಲ. ಉದ್ಭೂತಪದ ಹೇಳಿದರೆ ಆಗ ರೂಪಾದಿಗಳಿಗೆ ಆಶ್ರಯಗಳಾದರೂ ನಯನಾದಿಗಳು ಉದ್ಭೂತರೂಪಾದಿಗಳಿಗೆ ಆಶ್ರಯಗಳಾಗುವುದಿಲ್ಲ. ಅನುದ್ಭೂತರೂಪಾದಿವಿಶೇಷಗುಣಗಳು ಅಲ್ಲಿರುವುದರಿಂದ ಯಾವ ದೋಷಕ್ಕೂ ಅವಕಾಶವಿಲ್ಲ.

ಉದ್ಭೂತತ್ವಂ ನ ಜಾತಿಃ ಶುಕ್ಲತ್ವಾದಿನಾ ಸಾಂಕರ್ಯಾತ್ ನ ಚ ಶುಕ್ಲತ್ವಾದಿವ್ಯಾಪ್ಯಂ ನಾನೈವೋದ್ಭೂತತ್ವಮಿತಿ ವಾಚ್ಯಮ್ । ಉದ್ಭೂತರೂಪವತ್ತ್ವಾದಿನಾ ಚಾಕ್ಷುಷಾದೌ ಜನಕತಾನುಪಪತ್ತೇಃ । ಕಿಂತು ಶುಕ್ಲತ್ವಾದಿವ್ಯಾಪ್ಯಂ ನಾನೈವಾನುದ್ಭೂತತ್ವಂ ತದಭಾವಕೂಟಶ್ಚೋದ್ಭೂತತ್ವಮ್ । ತಚ್ಚ ಸಂಯೋಗಾದಾವಪ್ಯಸ್ತಿ, ತಥಾ ಚ ಶಬ್ದೇತರೋದ್ಭೂತಗುಣಃ ಸಂಯೋಗಾದಿಶ್ಚಕ್ಷುರಾದಾವಪ್ಯಸ್ತ್ಯತೋ ವಿಶೇಷೇತಿ । ಕಾಲಾದಿವಾರಣಾಯ ವಿಶೇಷ್ಯದಲಮ್ । ಇಂದ್ರಿಯಾವಯವ ವಿಷಯಸಂಯೋಗಸ್ಯಾಪಿ ಪ್ರಾಚಾಂ ಮತೇ ಪ್ರತ್ಯಕ್ಷಜನಕತ್ವಾದಿಂದ್ರಿಯಾವಯವವಾರಣಾಯ, ನವೀನಮತೇ ಕಾಲಾದೌ ರೂಪಾಭಾವ ಪ್ರತ್ಯಕ್ಷೇ ಸನ್ನಿಕರ್ಷಘಟಕತಯಾ ಕಾರಣೀಭೂತಚಕ್ಷುಃಸಂಯೋಗಾಶ್ರಯಸ್ಯ ಕಾಲಾದೇಶ್ಚವಾರಣಾಯ ಮನಃ ಪದಮ್ । ಜ್ಞಾನಕಾರಣಮಿತ್ಯಪಿ ತದ್ವಾರಣಾಯ್ವೈವ ಕರಣಮಿತಿ । ಅಸಾಧಾರಣಂ ಕಾರಣಂ ಕರಣಮ್ । ಅಸಾಧಾರಣತ್ವಂ ವ್ಯಾಪಾರವತ್ತ್ವಮ್ ॥ ॥ ೫೮ ॥

ವಿಶೇಷಗುಣವೆಂಬಲ್ಲಿ ವಿಶೇಷಪದಕ್ಕೆ ಪ್ರಯೋಜನ ತೋರಿಸಲು ಭೂಮಿಕಾರಚನೆ ತೋರಿಸುತ್ತಾನೆ. 'ಉದ್ಭೂತತ್ವಂ—' ಇತಿ. ಸಾಂಕರ್ಯರೂಪಜಾತಿಬಾಧಕತ್ವವಿರುವುದರಿಂದ ಉದ್ಭೂತತ್ವವು ಜಾತಿರೂಪಧರ್ಮವಾಗುವುದಿಲ್ಲ. ಉಪಾಧಿರೂಪಧರ್ಮವೆಂದು ತಿಳಿಯಬೇಕು. ಶುಕ್ಲತ್ವಾದಿಧರ್ಮದಿಂದ ಇದಕ್ಕೆ ಸಾಂಕರ್ಯ. ಶುಕ್ಲತ್ವಧರ್ಮವನ್ನು ಬಿಟ್ಟು ಉದ್ಭೂತತ್ವವು ಉದ್ಭೂತಗಂಧದಲ್ಲಿದೆ. ಉದ್ಭೂತತ್ವ ಇಲ್ಲದಿರುವ ಅನುದ್ಭೂತ ಶುಕ್ಲ

ದಲ್ಲಿ ಶುಕ್ಲತ್ವಧರ್ಮವಿದೆ. ಉದ್ಭೂತಶುಕ್ಲದಲ್ಲಿ ಈ ಎರಡು ಧರ್ಮಗಳು ಬರುವುದರಿಂದ ಸಾಂಕರ್ಯ ದೋಷ ಬರುತ್ತದೆ. ಆದುದರಿಂದ ಉದ್ಭೂತತ್ವವು ಜಾತಿಯಾಗುವುದಿಲ್ಲ. ಉದ್ಭೂತತ್ವಗಳು ಅನೇಕವಿರುತ್ತವೆಂದು ಹೇಳುವವರ ಮತವನ್ನು ತೋರಿಸಿ ಖಂಡಿಸುತ್ತಾನೆ. 'ನಚ—' ಇತಿ. ಶುಕ್ಲತ್ವಾದಿಪದದಿಂದ ನೀಲತ್ವಾದಿಗಳನ್ನು ತೆಗೆದುಕೊಳ್ಳಬೇಕು. ಶುಕ್ಲತ್ವ, ನೀಲತ್ವಾದಿಗಳು ವ್ಯಾಪಕಗಳು. ಇವುಗಳಿಂದ ವ್ಯಾಪ್ಯವಾದದ್ದು ಉದ್ಭೂತತ್ವ. 'ಯತ್ರ ಯತ್ರ ಉದ್ಭೂತತ್ವಂ ತತ್ರ ತತ್ರ ಶುಕ್ಲತ್ವಂ' ಎಂದು ವ್ಯಾಪ್ತಿ. ಇದಕ್ಕೆ ಆಶ್ರಯವಾದ ಉದ್ಭೂತತ್ವವು ನಾನಾ ಆಗಿ ರೂಪರಸಾದಿಗಳಲ್ಲಿರುತ್ತವೆ. ("ಶುಕ್ಲಾದಿನಿಷ್ಠವ್ಯಾಪಕತಾ ನಿರೂಪಿತ ವ್ಯಾಪ್ಯತಾಶ್ರಯಃ ಶುಕ್ಲತ್ವಾದಿವ್ಯಾಪ್ಯಂ") ಹೀಗೆ ಅನೇಕವಾದುದರಿಂದ ಜಾತಿಯಾಗಲಿ ಎಂದರೆ ಅದಕ್ಕೆ ಬಾಧಕ ತೋರಿಸುತ್ತಾನೆ. 'ಉದ್ಭೂತರೂ—' ಇತಿ. ಹೀಗೆ ನಾನಾತ್ವ ಹೇಳಿದರೆ ಚಾಕ್ಷುಷಾದಿಪ್ರತ್ಯಕ್ಷದಲ್ಲಿ ಉದ್ಭೂತತ್ವಕ್ಕೆ ಕಾರಣತ್ವ ಇಲ್ಲದೇ ಹೋಗಬೇಕಾಗುತ್ತದೆ. ಚಾಕ್ಷುಷಾದಿಪ್ರತ್ಯಕ್ಷ, ಉದ್ಭೂತತ್ವ ಇವುಗಳಿಗೆ ಕಾರ್ಯಕಾರಣಭಾವ ಪ್ರಸಿದ್ಧವಾಗಿದೆ. ಅನೇಕ ಉದ್ಭೂತತ್ವಗಳಿಗೆ ಕಾರಣತ್ವ ಹೇಳಿದರೆ ಚಾಕ್ಷುಷಪ್ರತ್ಯಕ್ಷವನ್ನು ಕುರಿತು ಆಗ ಒಂದು ಉದ್ಭೂತತ್ವ ಇದ್ದರೂ ಸ್ಪರ್ಶಾದಿಗಳಲ್ಲಿರುವ ಉದ್ಭೂತತ್ವ ಇಲ್ಲದಿರುವುದರಿಂದ ಕಾರ್ಯಕಾರಣಭಾವಕ್ಕೆ ವ್ಯಭಿಚಾರ ಬರುತ್ತದೆ. ಸಕಲೋದ್ಭೂತತ್ವಾದಿಗಳೂ ಒಂದೇ ಘಟಪಟಾದಿವ್ಯಕ್ತಿಯಲ್ಲಿ ಇರುತ್ತವೆಯೆಂಬುವುದರಲ್ಲಿ ಪ್ರಮಾಣವಿಲ್ಲ. ಇದಲು ಸಂಭವವೂ ಇಲ್ಲ. ಹೀಗೆ ಅನ್ಯೂನಾನತಿರಿಕ್ತ ವೃತ್ತದೇಶ ವೃತ್ತಿಯಾಗದಿರುವುದರಿಂದ ಉದ್ಭೂತತ್ವಕ್ಕೆ ಕಾರಣತಾವಚ್ಛೇದಕತ್ವ ಸಿದ್ಧಿಸುವುದಿಲ್ಲ.

ಜಾತಿಯೆಂದು ಒಪ್ಪದಿದ್ದರೆ ಉದ್ಭೂತತ್ವನಿರ್ವಚನ ಹೇಗೆ ಎಂದು ಪೂರ್ವಪಕ್ಷಿಯು ಆಕ್ಷೇಪಿಸಿದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಕಿಂತು—' ಶುಕ್ಲತ್ವವ್ಯಾಪ್ಯವೆಂದರೆ ಶುಕ್ಲತ್ವನಿಷ್ಠವ್ಯಾಪಕತಾನಿರೂಪಿತವ್ಯಾಪ್ಯತಾಶ್ರಯವೆಂದರ್ಥ. ಈ ಶುಕ್ಲತ್ವವ್ಯಾಪ್ಯಗಳಾದ ಅನುದ್ಭೂತತ್ವಗಳು ಅನೇಕಗಳಾಗಿರುತ್ತವೆ. ಅನುದ್ಭೂತತ್ವಾಭಾವಸಮುದಾಯವೇ ಉದ್ಭೂತತ್ವ. (ಶುಕ್ಲತ್ವಾದಿವ್ಯಾಪ್ಯನಾನಾಽನುದ್ಭೂತತ್ವಾಭಾವಸಮುದಾಯ ಏವೋದ್ಭೂತತ್ವಮ್) ಈ ರೀತಿಯಾದ ಉದ್ಭೂತತ್ವವು ಸಂಯೋಗಾದಿಗಳಲ್ಲಿಯೂ ಇರುವುದರಿಂದ ಶಬ್ದೇತರೋದ್ಭೂತಗುಣವು ಸಂಯೋಗವಾಗುತ್ತದೆ ಇದು ಚಕ್ಷುರಾದಿಗಳಲ್ಲಿ ಇರುವುದರಿಂದ ಅನಾಶ್ರಯತ್ವಬಾರದಿರುವುದರಿಂದ ಚಕ್ಷುರಾದಿಗಳಲ್ಲಿ ಅವ್ಯಾಪ್ತಿ ಬರುತ್ತದೆ. ಆದುದರಿಂದ ವಿಶೇಷಗುಣವೆಂದು ಹೇಳಿದೆ. ಸಂಯೋಗಾದಿಗಳು ವಿಶೇಷಗುಣಗಳಲ್ಲವಾದುದರಿಂದ ದೋಷ ಬರುವುದಿಲ್ಲ.

'ಶಬ್ದೇತರೋದ್ಭೂತ ವಿಶೇಷಗುಣಾನಾಶ್ರಯತ್ವಂ' ಇಷ್ಟೇ ಲಕ್ಷಣ ಹೇಳಿದರೆ ಕಾಲಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಅದಕ್ಕೋಸ್ಕರ ವಿಶೇಷ್ಯದಳ ಹೇಳಿದೆ. ಕಾಲಾದಿಗಳು ಯಾವ ವಿಶೇಷಗುಣಗಳಿಗೂ ಆಶ್ರಯವಾಗುವುದಿಲ್ಲ. 'ಶಬ್ದೇ—ತ್ವಂ' ಎಂಬ ಲಕ್ಷಣ ಅಲ್ಲಿ ಬರುವುದರಿಂದ ಅತಿವ್ಯಾಪ್ತಿ. ಜ್ಞಾನಕಾರಣಮನಃ ಸಂಯೋಗಾಶ್ರಯತ್ವಂ'

ಎಂದು ವಿಶೇಷ್ಯದಳ ಹೇಳಿದರೆ ಆಗ ಕಾಲಾದಿಗಳಲ್ಲಿ ಅದು ಬರುವುದಿಲ್ಲವಾದುದರಿಂದ ಅತಿವ್ಯಾಪ್ತಿಗ ಅವಕಾಶವಿಲ್ಲ. ಕಾಲಾದಿ ಎಂಬಲ್ಲಿ ಆದಿ ಪದದಿಂದ ದಿಕ್ಕನ್ನು ತೆಗೆದುಕೊಳ್ಳಬೇಕು. 'ಮನಃಸಂಯೋಗಾಶ್ರಯತ್ವಂ' ಎಂಬಲ್ಲಿ ಮನಃಪದಕ್ಕೆ ಪ್ರಯೋಜನ ತೋರಿಸುತ್ತಾನೆ. 'ಇಂದ್ರಿಯಾವಯ—' ಇತಿ. ಚಕ್ಷುರಾದಿ ಇಂದ್ರಿಯಗಳ ಅವಯವಗಳಿಗೂ, ಘಟಾದಿವಿಷಯಗಳಿಗೂ ಯಾವ ಪರಸ್ಪರ ಸಂಯೋಗವಿದೆಯೋ ಅದೂ ಪ್ರತ್ಯಕ್ಷವನ್ನು ಕುರಿತು ಕಾರಣವಾಗುತ್ತದೆಂದು ಪ್ರಾಚೀನರ ಸಿದ್ಧಾಂತ. ಆಗಇಂದ್ರಿಯಾವಯವೂ 'ಶಬ್ದೇತ—ನಾಶ್ರಯವಾಗಿ ಜ್ಞಾನಕಾರಣಸಂಯೋಗಾಶ್ರಯವಾಗುವುದರಿಂದ ಇಂದ್ರಿಯಕ್ಕೆ ಹೇಳಿದ ಲಕ್ಷಣವು ಇಂದ್ರಿಯಾವಯವದಲ್ಲಿ ಬರುವುದರಿಂದ ಅತಿವ್ಯಾಪ್ತಿ ಬರುತ್ತದೆ.

'ನವೀನ ಮತೇ—' ಇತಿ. 'ಕಾಲೇ ರೂಪಂ ನಾಸ್ತಿ' (ಕಾಲದಲ್ಲಿ ರೂಪವಿಲ್ಲ) ಎಂಬ ರೂಪಾತ್ಯಂತಾಭಾವವು ಚಾಕ್ಷುಷಪ್ರತ್ಯಕ್ಷಕ್ಕೆ ಗೋಚರವಾಗುತ್ತದೆ. ಈ ಚಾಕ್ಷುಷಪ್ರತ್ಯಕ್ಷಕ್ಕೆ ಕಾರಣವಾದ ಚಕ್ಷುಃ ಸಂಯೋಗಯಾವುದಿದೆಯೋ ಅದಕ್ಕೆ ಆಶ್ರಯವು ಕಾಲಾದಿಗಳಾಗುತ್ತವೆ. 'ಮನಃಸಂಯೋಗ—' ಎಂಬಲ್ಲಿ ಮನಃಪದ ಹೇಳದೇ ಹೋದರೆ ನವೀನರ ಮತದಲ್ಲಿ ಕಾಲಾದಿಗಳಲ್ಲಿ ಅತಿವಾಪ್ತಿ ಬರುತ್ತದೆ. 'ಜ್ಞಾನಕಾರಣ—' ಇತಿ. 'ಶಬ್ದೇತ....ನಾಶ್ರಯತ್ವೇ ಸತಿ ಮನಃ ಸಂಯೋಗಾಶ್ರಯತ್ವಂ' ಎಂದು ಲಕ್ಷಣ ಹೇಳಿ ಜ್ಞಾನಕಾರಣವೆಂದು ಹೇಳದಿದ್ದರೆ ಆಗ ಪೂರ್ಣಲಕ್ಷಣವೂ ಕಾಲಾದಿಗಳಲ್ಲಿ ಬರುವುದರಿಂದ ಅತಿವಾಪ್ತವಾಗುತ್ತದೆ. ಆದುದರಿಂದ 'ಜ್ಞಾನಕಾರಣ ಮನಃಸಂಯೋಗಾಶ್ರಯತ್ವಂ' ಎಂದು ಹೇಳಿದೆ. 'ಶರೀರಸಂಯುಕ್ತತ್ವೇ ಸತಿ ಜ್ಞಾನಕಾರಣಮತೀಂದ್ರಿಯಮಿಂದ್ರಿಯಂ' ಎಂದೂ ಲಕ್ಷಣವನ್ನು ಕೆಲವರು ಹೇಳುತ್ತಾರೆ. 'ಇಂದ್ರಿಯಕರಣಂ' ಎಂಬಲ್ಲಿ ಕರಣಪದ ಹೇಳಿದೆ. ಈಗ ಆ ಕರಣಲಕ್ಷಣವನ್ನು ತೋರಿಸುತ್ತಾನೆ. 'ಅಸಾಧಾರಣಂ—' ಇತಿ. ನ ಸಾಧಾರಣಂ ಅಸಾಧಾರಣಮ್. 'ತದಿತರಾವೃತ್ತಿತ್ವೇಸತಿ ಸಕಲತದ್ವೃತ್ತಿತ್ವಂ ಅಸಾಧಾರಣತ್ವಮ್. ಸಾಸ್ನಾದಿಮತ್ವಧರ್ಮವು (ಗಂಗೆತೊಗಲಿರುವಿಕೆ) ಗೋವಿಗಿಂತ ಬೇರೆಯಾದ ಪ್ರಾಣಿಗಳಲ್ಲಿರದೆ ಸಕಲಗೋವುಗಳಲ್ಲಿರುವುದರಿಂದ ಅಸಾಧಾರಣ ಧರ್ಮವಾಗುತ್ತದೆ. 'ಕಾರ್ಯತ್ವಾವಚ್ಛಿನ್ನಕಾರ್ಯತಾನಿರೂಪಿತಕಾರಣತಾಶ್ರಯತ್ವಂ' ಕಾರಣೇಽಸಾಧಾರಣತ್ವಮ್.

ವ್ಯಾಪಾರದಿಂದ ಕೂಡಿರುವ ಕಾರಣ ಅಸಾಧಾರಣಕಾರಣವೆಂಬು ಗ್ರಂಥಕಾರನ ಮತ. 'ತಜ್ಜನ್ಯತ್ವೇ ಸತಿ ತಜ್ಜನ್ಯ ಜನಕತ್ವಂ' ವ್ಯಾಪಾರದ ಲಕ್ಷಣ. ಛೇದನಕ್ರಿಯೆಯಲ್ಲಿ ಕೊಡಲಿ ಕರಣವಾಗಿದೆ. ಅದರಲ್ಲಿ ಉದ್ಯಮನನಿಪತನರೂಪ ವ್ಯಾಪಾರವಿರುವುದರಿಂದ ಕರಣ. ಆ ವ್ಯಾಪಾರವು ಕೊಡಲಿಯಿಂದಲೇ ಹುಟ್ಟಿ ಕೊಡಲಿಯಿಂದ ಆಗುವ ಛೇದನಕ್ರಿಯೆಗೆ ಜನಕವಾಗುತ್ತದೆ. ಕೊಡಲಿ ಮತ್ತು ಕಟ್ಟಿಗೆಯ ಸಂಯೋಗವೂ ವ್ಯಾಪಾರವಾಗುತ್ತದೆ. ಪ್ರಕೃತದಲ್ಲಿ ವಿಷಯೇಂದ್ರಿಯಸನ್ನಿಕರ್ಷ ರೂಪವ್ಯಾಪಾರದಿಂದಕೂಡಿ

ಕಾರಣವಾಗುವುದರಿಂದ ಚಕ್ಷುರಾದಿ ಇಂದ್ರಿಯಗಳು ಕರಣಗಳಾಗುತ್ತವೆ. 'ಸಾಧಕತಮಂ' ಎಂದು ಪಾಣಿನೀಯೂ ಇದೇ ಕರಣವನ್ನು ಹೇಳುತ್ತಾನೆ.

ಪ್ರಾಚೀನರು 'ಫಲಯೋಗಾವ್ಯವಚ್ಛಿನ್ನಂ ಕಾರಣಂ' ಕರಣಂ ಎಂದು ಲಕ್ಷಣ ಹೇಳುತ್ತಾರೆ. ಯಾವುದಿದ್ದರೆ ಅವ್ಯವಹಿತೋತ್ತರಕ್ಷಣದಲ್ಲಿ ಅವಶ್ಯವಾಗಿ ಕಾರಣವಾಗುತ್ತದೆಯೋ ಅದೇ ಕರಣವೆಂದರ್ಥ. ನವೀನರು ಅಂಗೀಕರಿಸಿದ ವ್ಯಾಪಾರವೇ ಇವರ ಮತದಲ್ಲಿ ಕರಣವಾಗುತ್ತದೆ. ನವೀನರ ಕರಣವು ಪ್ರಾಚೀನರ ಮತದಲ್ಲಿ ಕಾರಣವಾಗುತ್ತದೆ.

ನವ್ಯಮತದಂತೆ ಶಬ್ದಸಾಕ್ಷಾತ್ಕಾರದಲ್ಲಿ ಶ್ರೋತ್ರಕ್ಕೆ ಕರಣತ್ವಲಕ್ಷಣ ಸಂಗತವಾಗುವುದಿಲ್ಲ. ಅಲ್ಲಿ ಸಮವಾಯವೇ ವ್ಯಾಪಾರವಾಗುವುದರಿಂದ ವ್ಯಾಪಾರ ಲಕ್ಷಣ ಅಲ್ಲಿ ಬರುವುದಿಲ್ಲ. ಸಮವಾಯವು ನಿತ್ಯವಾದುದರಿಂದ ತಜ್ಜನ್ಯತ್ವರೂಪದಳವು ಅಲ್ಲಿ ಬರುವುದಿಲ್ಲ. ಆದುದರಿಂದ ಇಂದ್ರಿಯಮನಃ ಸಂಯೋಗವೇ ಆರು ಪ್ರತ್ಯಕ್ಷಗಳಲ್ಲಿಯೂ ವ್ಯಾಪಾರವೆಂದು ತಿಳಿಯಬೇಕು.

**ವಿಷಯೇಂದ್ರಿಯಸಂಬಂಧೋ ವ್ಯಾಪಾರಃ ಸೋಽಪಿ ಷಡ್ವಿಧಃ ।**
**ದ್ರವ್ಯಗ್ರಹಸ್ತು ಸಂಯೋಗಾತ್, ಸಂಯುಕ್ತ ಸಮವಾಯತಃ ॥ ೫೯ ॥**
**ದ್ರವ್ಯೇಷು ಸಮವೇತಾನಾಂ, ತಥಾ ತತ್ಸಮವಾಯತಃ ।**
**ತತ್ರಾಪಿ ಸಮವೇತಾನಾಂ, ಶಬ್ದಸ್ಯ ಸಮವಾಯತಃ ॥ ೬೦ ॥**
**ತದ್ವೃತ್ತೀನಾಂ ಸಮವೇತ ಸಮವಾಯೇನ ತು ಗ್ರಹಃ ।**
**ಪ್ರತ್ಯಕ್ಷಂ ಸಮವಾಯಸ್ಯ ವಿಶೇಷಣತಯಾ ಭವೇತ್ ॥ ೬೧ ॥**
**ವಿಶೇಷಣತಯಾ ತದ್ವದಭಾವಾನಾಂ ಗ್ರಹೋಭವೇತ್ ॥ ೬೧ ॥**
**ಯದಿಸ್ಯಾದುಪಲಭ್ಯೇತೇತ್ಯೇವಂ ಯತ್ರ ಪ್ರಸಜ್ಯತೇ ।**

ವ್ಯಾಪಾರಃ ಸನ್ನಿಕರ್ಷಃ ॥ ಷಡ್ವಿಧಂ ಸನ್ನಿಕರ್ಷಮುದಾಹರಣದ್ವಾರಾ ದರ್ಶಯತಿ ।
ದ್ರವ್ಯಗ್ರಹ ಇತಿ । ದ್ರವ್ಯಪ್ರತ್ಯಕ್ಷಮಿಂದ್ರಿಯಸಂಯೋಗಜನ್ಯಮ್ । ದ್ರವ್ಯ ಸಮವೇತ ಪ್ರತ್ಯಕ್ಷಮಿಂದ್ರಿಯಸಂಯುಕ್ತಸಮವಾಯ ಜನ್ಯಮ್ । ಏವಮಗ್ರೇಪಿ। ವಸ್ತುತಸ್ತು ದ್ರವ್ಯಚಾಕ್ಷುಷಂ ಪ್ರತಿ ಚಕ್ಷುಃ ಸಂಯೋಗಃ ಕಾರಣಮ್ । ದ್ರವ್ಯ ಸಮವೇತಚಾಕ್ಷುಷಂ ಪ್ರತಿ ಚಕ್ಷುಃ ಸಂಯುಕ್ತಸಮವಾಯಃ ಕಾರಣಮ್ । ದ್ರವ್ಯಸಮವೇತ ಸಮವೇತಚಾಕ್ಷುಷಂ ಪ್ರತಿ ಚಕ್ಷುಸಂಯುಕ್ತಸಮವೇತಸಮವಾಯಃ । ಏವಮನ್ಯತ್ರಾಪಿ ವಿಶಿಷ್ಯೈವ ಕಾರ್ಯಕಾರಣಭಾವಃ । ಪರಂತು— ಪೃಥಿವೀಪರಮಾಣುನೀಲೇ ನೀಲತ್ವಂ ಪೃಥಿವೀತ್ವಂ ಚ ಚಕ್ಷುಷಾ ಕಥಂ ನ ಗೃಹ್ಯತೇ, ತತ್ರ ಪರಂಪರಯೋದ್ಭೂತರೂಪಸಂಬಂಧಸ್ಯ ಮಹತ್ತ್ವಸಂಬಂಧಸ್ಯ ಚ ಸತ್ವಾತ್ । ತಥಾಹಿ—ನೀಲತ್ವಂ ಜಾತಿರೇಕೈವ ಘಟನೀಲೇ ಪರಮಾಣು ನೀಲೇ ಚ ವರ್ತತೇ । ತಥಾಚ ಮಹತ್ತ್ವಸಂಬಂಧೋ ಘಟನೀಲಮಾದಾಯ

ವರ್ತತೇ । ಉದ್ಭೂತರೂಪಸಂಬಂಧಸ್ತೂಭಯಮಾದಾಯೈವ, ಏವಂ ಪೃಥಿವೀಪರಮಾಣೌ ಪೃಥಿವೀತ್ವೇಪಿ ಘಟಾದಿಕಮಾದಾಯ ಮಹತ್ತ್ವಸಂಬಂಧೋ ಬೋಧ್ಯಃ । ಏವಂ ವಾಯೌ ತದೀಯಸ್ಪರ್ಶಾದೌ ಚ ಸತ್ತಾಯಾಶ್ಚಾಕ್ಷುಷ ಪ್ರತ್ಯಕ್ಷಂ ಸ್ಯಾತ್ । ತಸ್ಮಾತ್ ಉದ್ಭೂತರೂಪಾವಚ್ಛಿನ್ನಮಹತ್ತ್ವಾವಚ್ಛಿನ್ನ ಚಕ್ಷುಃ ಸಂಯುಕ್ತಸಮವಾಯಸ್ಯ ದ್ರವ್ಯ ಸಮವೇತಚಾಕ್ಷುಷಪ್ರತ್ಯಕ್ಷೇ, ತಾದೃಶ ಚಕ್ಷುಃ ಸಂಯುಕ್ತಸಮವೇತ ಸಮವಾಯಸ್ಯ ದ್ರವ್ಯ ಸಮವೇತ ಸಮವೇತ ಚಾಕ್ಷುಷೇ (ಪ್ರತ್ಯಕ್ಷೇ) ಕಾರಣತ್ವಂ ವಾಚ್ಯಮ್ ॥

ಕರಣಲಕ್ಷಣವು ವ್ಯಾಪಾರದಿಂದ ಕೂಡಿರುವುದರಿಂದ ಪ್ರಕೃತ ವ್ಯಾಪಾರವನ್ನು ತೋರಿಸುತ್ತಾನೆ. 'ವಿಷಯೇಂ—' ಇತಿ. ಸನ್ನಿಕರ್ಷವೇ ವ್ಯಾಪಾರ. ವಿಷಯೇಂದ್ರಿಯ ಸಂಬಂಧವೇ ವ್ಯಾಪಾರ. ಆರು ರೀತಿಯಾದ ಪ್ರತ್ಯಕ್ಷದಲ್ಲಿ ಆರುಕರಣವಾದುದರಿಂದ ಆರು ವ್ಯಾಪಾರಗಳಿರುತ್ತವೆ. ಅವುಗಳನ್ನು ಉದಾಹರಣೆಗಳ ಮೂಲಕ ಮುಕ್ತಾವಳಿಯಲ್ಲಿ ತೋರಿಸಿರುತ್ತಾನೆ. 'ದ್ರವ್ಯಗ್ರಹಸ್ತು ಸಂಯೋಗಾತ್—' ಇತಿ. ಘಟಾದಿದ್ರವ್ಯ ಪ್ರತ್ಯಕ್ಷವನ್ನು ಕುರಿತು ಇಂದ್ರಿಯ ಸಂಯೋಗವೇ ವ್ಯಾಪಾರವಾಗುತ್ತದೆ. "ಘಟಾದಿ ದ್ರವ್ಯವೃತ್ತಿ ಲೌಕಿಕ ವಿಷಯತಾಸಂಬಂಧೇನ ಪ್ರತ್ಯಕ್ಷಂ ಚಕ್ಷುರಾದಿ ಇಂದ್ರಿಯ ಸಂಯೋಗ ಜನ್ಯಮ್" ಇಂದ್ರಿಯವಿಷಯ ಸಂಯೋಗವಾದರೆ ದ್ರವ್ಯಪ್ರತ್ಯಕ್ಷವಾಗುತ್ತದೆ. 'ದ್ರವ್ಯ ಸಮವೇತ—' ಇತಿ. ದ್ರವ್ಯಗಳಲ್ಲಿ ಸಮವಾಯಸಂಬಂಧದಿಂದ ಇರುವ ರೂಪಾದಿ ಪ್ರತ್ಯಕ್ಷವನ್ನು ಕುರಿತು ಇಂದ್ರಿಯ ಸಂಯುಕ್ತಸಮವಾಯ ವ್ಯಾಪಾರವಾಗುತ್ತದೆ. (ದ್ರವ್ಯ ಸಮವೇತವೃತ್ತಿ ಲೌಕಿಕ ವಿಷಯತಾಸಂಬಂಧೇನ ರೂಪಾದಿಪ್ರತ್ಯಕ್ಷೇ ಸಂಯುಕ್ತಸಮವಾಯಃ ವ್ಯಾಪಾರಃ) ಇಂದ್ರಿಯ ಸಂಯುಕ್ತವಾದದ್ದು ದ್ರವ್ಯ. ಅಲ್ಲಿ ಸಮವಾಯದಿಂದ ಇರುವುದು ರೂಪಾದಿ. 'ಏವಮಗ್ರೇಽಪಿ—' ಇತಿ. ದ್ರವ್ಯಸಮವೇತ ಸಮವೇತವಾದ ರೂಪತ್ವಾದಿ ಪ್ರತ್ಯಕ್ಷದಲ್ಲಿ ಸಂಯುಕ್ತ ಸಮವೇತ ಸಮವಾಯ ವ್ಯಾಪಾರವಾಗುತ್ತದೆ. ಇಂದ್ರಿಯಸಂಯುಕ್ತ—ದ್ರವ್ಯ. ಅಲ್ಲಿ ಸಮವೇತವಾದದ್ದು ರೂಪ. ಅಲ್ಲಿ ಸಮವಾಯ ದಿಂದ ಇರುವುದು ರೂಪತ್ವ. (ರೂಪತ್ವದ ಸಮವಾಯ ಅಲ್ಲಿವೆ.)

ದ್ರವ್ಯಪ್ರತ್ಯಕ್ಷದಲ್ಲಿ ಇಂದ್ರಿಯ ಸನ್ನಿಕರ್ಷವು ಕಾರಣವಾಗುವುದಾದರೆ ತ್ವಕ್‌ಪ್ರಭಾ (ಬೆಳಕು) ಸಂಯೋಗವಿರುವುದರಿಂದ ಪ್ರಭಾಚಾಕ್ಷುಷಪ್ರತ್ಯಕ್ಷವಾಗಲಿ. ಕತ್ತಲೆಯಲ್ಲಿ ಘಟ ಚಕ್ಷುಃಸಂಯೋಗವಿರುವುದರಿಂದ ಘಟಸ್ಪಾರ್ಶನಪ್ರತ್ಯಕ್ಷವಾಗಲಿ ಎಂದು ಕೇಳಬಹುದು. ಸಾಮಾನ್ಯವಾಗಿ ಇಂದ್ರಿಯ ಸಂಯೋಗ ಕಾರಣವೆಂದರೆ ಕಾರಣವಿರುವುದರಿಂದ ಯಾವುದಾದರೂ ಕಾರ್ಯವಾಗಲಿ ಎಂದು ಕೇಳಬಹುದು. ಅದಕ್ಕೋಸ್ಕರ ಸಾಮಾನ್ಯಕಾರ್ಯಕಾರಣ ಭಾವವನ್ನು ಬಿಟ್ಟು ವಿಶೇಷರೂಪದಿಂದಲೇ ಕಾರ್ಯಕಾರಣಭಾವ ಹೇಳಬೇಕೆಂದು ತೋರಿಸುತ್ತಾನೆ. 'ವಸ್ತುತಸ್ತು—' ಇತಿ. ಘಟಪಟಾದಿದ್ರವ್ಯಗಳ ಲೌಕಿಕಸಾಕ್ಷಾತ್ಕಾರವನ್ನು ಕುರಿತು ಚಕ್ಷುಃಸಂಯೋಗ ಕಾರಣವಾಗುತ್ತದೆ. 'ದ್ರವ್ಯಸಮವೇತ—' ಇತಿ. ಘಟಾದಿ

ದ್ರವ್ಯಗಳಲ್ಲಿ ಸಮವಾಯಸಂಬಂಧದಿಂದ ಇರುವ ರೂಪಾದಿಗಳ ಲೌಕಿಕಸಾಕ್ಷಾತ್ಕಾರವನ್ನು ಕುರಿತು ಚಕ್ಷುಃ ಸಂಯುಕ್ತಸಮವಾಯವು ಕಾರಣವಾಗುತ್ತದೆ. ಚಕ್ಷುಃಸಂಯುಕ್ತವಾದ ಘಟಾದಿಗಳಲ್ಲಿ ರೂಪಾದಿಗಳ ಸಮವಾಯವಿರುತ್ತದೆ. ದ್ರವ್ಯಸಮವೇತ ಸಮವೇತಗಳಾದ ರೂಪತ್ವಾದಿ ಲೌಕಿಕ ಪ್ರತ್ಯಕ್ಷವನ್ನು ಕುರಿತು ಚಕ್ಷುಃಸಂಯುಕ್ತ ಸಮವೇತಸಮವಾಯವು ಕಾರಣವಾಗುತ್ತದೆ ಚಕ್ಷುಃ ಸಂಯುಕ್ತವಾದ ಘಟಾದಿಗಳಲ್ಲಿ ಸಮವೇತವಾದ ರೂಪದಲ್ಲಿ ರೂಪತ್ವದ ಸಮವಾಯವಿರುತ್ತದೆ. 'ಏವಮನ್ಯತ್ರಾಪಿ—' ಇತಿ. ಹೀಗೆ ತ್ವಾಚಾದಿಪ್ರತ್ಯಕ್ಷಗಳಲ್ಲಿ ವಿಶೇಷವಾದ ಕಾರ್ಯಕಾರಣಭಾವವನ್ನೇ ಹೇಳಬೇಕು. (ತ್ವಕ್ ಸಂಯೋಗ, ತ್ವಕ್‌ಸಂಯುಕ್ತಸಮವಾಯ, ತ್ವಕ್ ಸಂಯುಕ್ತಸಮವೇತಸಮವಾಯ ಇತ್ಯಾದಿ)

ಪುನಃ ಆಶಂಕಿಸುತ್ತಾನೆ. 'ಪರಂತು—' ಇತಿ. ಪೃಥಿವೀನೀಲಪರಮಾಣುಗಳಲ್ಲಿರುವ ನೀಲತ್ವವೂ, ಪೃಥಿವೀಪರಮಾಣುಗಳಲ್ಲಿರುವ ಪೃಥಿವೀತ್ವವೂ ಕಣ್ಣಿನಿಂದ ಏಕೆ ಗ್ರಹಿಸಲ್ಪಡಬಾರದು ? ಅವುಗಳಿಗೂ ಚಾಕ್ಷುಷಸಾಕ್ಷಾತ್ಕಾರವಾಗಲಿ. ಇದಕ್ಕೆ ಕಾರಣ ತೋರಿಸುತ್ತಾನೆ. 'ತತ್ರ—' ಇತಿ. ಚಾಕ್ಷುಷಪ್ರತ್ಯಕ್ಷವನ್ನು ಕುರಿತು ಉದ್ಭೂತ ರೂಪವೂ, ಮಹತ್ತ್ವವೂ ಕಾರಣವೆಂದು ಹಿಂದೆ ಹೇಳಿದೆ. ಹೇಗೆ ರೂಪತ್ವಾದಿಪ್ರತ್ಯಕ್ಷಗಳಲ್ಲಿ ಚಕ್ಷುಃ ಸಂಯುಕ್ತಸಮವೇತಸಮವಾಯವು ಪರಂಪರಾಸಂಬಂಧವಾಗಿ ಕಲ್ಪಿತವಾಗಿದೆಯೋ ಹಾಗೆ ಉದ್ಭೂತರೂಪವೂ, ಮಹತ್ತ್ವವೂ ಸ್ವಾಶ್ರಯಸಮವೇತ ಸಮವೇತತ್ವಾದಿಪರಂಪರಾಸಂಬಂಧದಿಂದ ಪೃಥಿವೀನೀಲಪರಮಾಣುಗಳಲ್ಲಿರುವ ನೀಲತ್ವದಲ್ಲಿಯೂ, ಪೃಥಿವೀಪರಮಾಣುಗಳಲ್ಲಿರುವ ಪೃಥಿವೀತ್ವದಲ್ಲಿಯೂ, ಬರುವುದರಿಂದ ಕಾರಣವಾಗುತ್ತದೆ. ಸ್ವಂ— ಮಹತ್ತ್ವ, ಉದ್ಭೂತರೂಪ. ಅದಕ್ಕೆ ಆಶ್ರಯವಾದದ್ದು ಘಟ. ಅಲ್ಲಿ ಸಮವೇತವಾದದ್ದು ನೀಲ. ಅಲ್ಲಿ ಸಮವೇತವಾಗಿರುವುದು ನೀಲತ್ವ. ಹೀಗೆ ಈ ಪರಂಪರಾಸಂಬಂಧದಿಂದ ನೀಲತ್ವದಲ್ಲಿ ಮಹತ್ತ್ವೋದ್ಭೂತರೂಪಗಳು ಬರುತ್ತವೆ. ಇನ್ನೊಂದು ರೀತಿಯಿಂದ ಹೇಳುವುದಾದರೆ ಸ್ವಂ—ಮಹತ್ತ್ವೋದ್ಭೂತರೂಪಗಳು. ಅವುಗಳಿಗೆ ಆಶ್ರಯವಾಗಿರುವುದು ತ್ರಸರೇಣು. ಅದು ದ್ವ್ಯಣುಕದಲ್ಲಿ ಸಮವೇತ. (ಸ್ವಾಶ್ರಯಸಮವೇತ—ದ್ವ್ಯಣುಕ) ಈ ದ್ವ್ಯಣುಕವು ಪರಮಾಣುವಿನಲ್ಲಿ ಸಮವೇತವಾಗಿದೆ. ಈ ಪರಂಪರಾಸಂಬಂಧದಿಂದ ಪರಮಾಣುಗಳಲ್ಲಿ ಮಹತ್ತ್ವೋದ್ಭೂತರೂಪಗಳು ಬರುತ್ತವೆ. ಪರಮಾಣುಗ್ರಹೀತವಾದರೆ ಆಗ ಅದರಲ್ಲಿರುವ ನೀಲಾದಿಗಳೂ ಗ್ರಹಿಸಲ್ಪಡಲಿ ಎಂದು ಪೂರ್ವಪಕ್ಷಿಯ ಆಕ್ಷೇಪ, ಇದನ್ನೇ 'ತಥಾಹಿ—' ಎಂಬವಾಕ್ಯದಿಂದ ವಿವರಿಸುತ್ತಾನೆ. ಘಟನೀಲದಲ್ಲಿಯೂ ಪರಮಾಣುನೀಲದಲ್ಲಿಯೂ ಇರುವ ನೀಲತ್ವಜಾತೀಯು ಒಂದೇ ಆಗಿದೆ. ಈ ನೀಲತ್ವದಲ್ಲಿ ಮಹತ್ತ್ವಸಂಬಂಧವು ಘಟನೀಲದಮೂಲಕವೂ ಉದ್ಭೂತರೂಪಸಂಬಂಧವು ಘಟನೀಲ, ಪರಮಾಣುಗಳ ಮೂಲಕವೂ (ಪರಂಪರಾಸಂಬಂಧದಿಂದ) ಬರುವುದರಿಂದ ಪರಮಾಣುನೀಲತ್ವವು ಪ್ರತ್ಯಕ್ಷವಿಷಯವಾಗಲಿ. 'ಏವಂ ಪೃಥಿವೀಪರ—' ಇತಿ. ಘಟಾದಿಘಟಿತಸ್ವಸಮವಾಯಿ

ಸಮವಾಯಸಂಬಂಧದಿಂದ ಮಹತ್ತ್ವಸಂಬಂಧವೂ ಘಟ, ಪರಮಾಣುಗಳ ಮೂಲಕ ಉದ್ಭೂತರೂಪಸಂಬಂಧವೂ ಪೃಥಿವೀತ್ವದಲ್ಲಿ ಬರುವುದರಿಂದ ಪೃಥಿವೀಪರಮಾಣು ಪೃಥಿವೀತ್ವವು ಪ್ರತ್ಯಕ್ಷವಿಷಯವಾಗಲಿ. ಹೀಗೆ ಮಹತ್ತ್ವವಿಲ್ಲದಿರುವ ಸ್ಥಳದಲ್ಲಿ ಪ್ರತ್ಯಕ್ಷ ಕಾರಣ ಬರುವುದರಿಂದ ಪ್ರತ್ಯಕ್ಷವಾಗಲೆಂದು ಆಪಾದಿಸಿ ಈಗ ಉದ್ಭೂತರೂಪವಿಲ್ಲದಿರುವಲ್ಲಿಯೂ ಚಕ್ಷುಃ ಸನ್ನಿಕರ್ಷಬರುವುದರಿಂದ ಚಾಕ್ಷುಷಪ್ರತ್ಯಕ್ಷಾಪಾದನೆ ಮಾಡುತ್ತಾನೆ. 'ಏವಂ ವಾಯೌ—' ಇತಿ. ಸಮವಾಯಸಂಬಂಧದಿಂದ ವಾಯುವಿನಲ್ಲಿರುವ ಸತ್ತಾಜಾತಿಯಪ್ರತ್ಯಕ್ಷವಾಗಲಿ ಎಂದು ಆಕ್ಷೇಪ. ಉದ್ಭೂತರೂಪ, ಮಹತ್ತ್ವಗಳು ಅಲ್ಲಿ ಹಿಂದಿನಂತೆ ಪರಂಪರಾಸಂಬಂಧದಿಂದ ಬರುತ್ತವೆ. ಸ್ವಂ—ಮಹತ್ತ್ವೋದ್ಭೂತರೂಪಗಳು. ತದಾಶ್ರಯ—ಘಟ. ಅಲ್ಲಿ ಸಮವೇತವಾಗಿರುವುದು ಸತ್ತಾ. ವಾಯುಘಟಿತಚಕ್ಷುಃ ಸಂಯುಕ್ತಸಮವಾಯ ರೂಪಕಾರಣವಿರುವುದರಿಂದ ಕಾರ್ಯವಾಗಲಿ. ಹಾಗೆಯೇ ವಾಯುಸ್ಪರ್ಶದಲ್ಲಿರುವ ಸತ್ತಾಜಾತಿಯು ಪ್ರತ್ಯಕ್ಷವೂ ಆಗಲಿ. ಸ್ವಾಶ್ರಯಸಮವೇತಸಮವಾಯದಿಂದ ಘಟನೀಲವಲ್ಲಿರುವ ಸತ್ತಾಜಾತಿಯೂ, ವಾಯುಸ್ಪರ್ಶದಲ್ಲಿರುವ ಸತ್ತಾಜಾತಿಯೂ ಒಂದೇ ಆದುದರಿಂದ ವಾಯುಸ್ಪರ್ಶದಲ್ಲಿರುವ ಸತ್ತಾಜಾತಿಯಲ್ಲಿ ಸ್ವಾಶ್ರಯಸಮವೇತ ಸಮವಾಯದಿಂದ ಉದ್ಭೂತರೂಪವೂ ವಾಯುಮಹತ್ತ್ವದ ಮೂಲಕ ಮಹತ್ತ್ವಸಂಬಂಧವೂ ಬರುತ್ತದೆ. ಸ್ಪರ್ಶಾದಿಪದದಿಂದ ವಾಯುವಿನಲ್ಲಿರುವ ಪರಿಮಾಣಾದಿಗಳನ್ನು ತೆಗೆದುಕೊಳ್ಳಬೇಕು.

ಹೀಗೆ ಆಕ್ಷೇಪಿಸಿ ಸಮಾಧಾನ ತೋರಿಸುತ್ತಾನೆ. 'ತಸ್ಮಾತ್—' ಇತಿ. ಈ ದೋಷನಿವಾರಣೆಗೋಸ್ಕರ ಚಕ್ಷುಃ ಸಂಯುಕ್ತ ಪದಾರ್ಥದಲ್ಲಿ ಮಹತ್ತ್ವಾವಚ್ಛಿನ್ನತ್ವ, ಉದ್ಭೂತರೂಪಾವಚ್ಛಿನ್ನತ್ವ ವಿಶೇಷಣಗಳನ್ನು ಕೊಡಬೇಕು. 'ಉದ್ಭೂತರೂಪಾವಚ್ಛಿನ್ನಂ, ಮಹತ್ತ್ವಾವಚ್ಛಿನ್ನಂ ಚ ಯಚ್ಚಕ್ಷುಃ ಸಂಯುಕ್ತಂ ತತ್ಸಮವಾಯಃ' ಇದು ರೂಪಾದಿಗುಣಸಾಕ್ಷಾತ್ಕಾರದಲ್ಲಿ ಕಾರಣ. ಹೀಗೆ ವಿಶೇಷಣದಿಂದ ಕೂಡಿದ ಚಕ್ಷುಃ ಸಂಯುಕ್ತಸಮವೇತಸಮವಾಯವು ರೂಪತ್ವಾದಿ ಜಾತಿಪ್ರತ್ಯಕ್ಷದಲ್ಲಿ ಕಾರಣ. ಚಕ್ಷುಃ ಸಂಯುಕ್ತಸಮವೇತದಲ್ಲಾಗಲೀ, ಚಕ್ಷುಃ ಸಮವೇತಸಮವೇತದಲ್ಲಿಯಾಗಲೀ ವಿಶೇಷಣ ಹೇಳಿದ್ದರೆ ಪರಮಾಣುನೀಲದಲ್ಲಿರುವ ನೀಲತ್ವದಲ್ಲಿಯೂ, ಪೃಥಿವೀಪರಮಾಣು ಪೃಥಿವೀತ್ವದಲ್ಲಿಯೂ ಮಹತ್ತ್ವೋದ್ಭೂತರೂಪಗಳು ಪರಂಪರಾಸಂಬಂಧದಿಂದ ಬರುವುದರಿಂದ ಅವುಗಳ ಪ್ರತ್ಯಕ್ಷವಾಗಲಿ ಎಂದು ಶಂಕಿಸಬಹುದು. ಈಗ ಪರಮಾಣುವಿನಲ್ಲಿ ಚಕ್ಷುಃ ಸಂಯೋಗವು ಮಹತ್ತ್ವಾವಚ್ಛಿನ್ನವಾಗಿರುವುದಿಲ್ಲ. ವಾಯುಚಕ್ಷುಃಸಂಯೋಗವು ಉದ್ಭೂತರೂಪಾವಚ್ಛಿನ್ನವಾಗಿರುವುದಿಲ್ಲ. ಆದುದರಿಂದ ಅವುಗಳ ಪ್ರತ್ಯಕ್ಷತ್ವಾಪಾದನೆ ಇಲ್ಲ. ಇದನ್ನೇ ಮೂಲದಲ್ಲಿ ವಿವರಿಸಿ ತೋರಿಸುತ್ತಾನೆ.

ಇತ್ಥಂ ಚ ಪರಮಾಣುನೀಲಾದೌ ನ ನೀಲತ್ವಾದಿ ಗ್ರಹಃ । ಪರಮಾಣೌ ಚಕ್ಷುಃ ಸಂಯೋಗಸ್ಯ ಮಹತ್ತ್ವಾವಚ್ಛಿನ್ನತ್ವಾಭಾವಾತ್ । ಏವಂವಾಯ್ವಾದೌ ನ ಸತ್ತಾದಿ

ಚಾಕ್ಷುಷಮ್, ತತ್ರ ಚಕ್ಷುಃ ಸಂಯೋಗಸ್ಯ ರೂಪಾವಚ್ಛಿನ್ನತ್ವಾಭಾವಾತ್ । ಏವಂ ಯತ್ರ ಘಟಸ್ಯ ಮಧ್ಯಾವಚ್ಛೇದೇನಾಲೋಕಸಂಯೋಗಃ ಚಕ್ಷುಃಸಂಯೋಗಸ್ತು ಬಾಹ್ಯಾವಚ್ಛೇದೇನ ತತ್ರ ಘಟಪ್ರತ್ಯಕ್ಷಾಭಾವಾತ್ ಆಲೋಕ ಸಂಯೋಗಾವಾಚ್ಛಿನ್ನತ್ವಂ ಚಕ್ಷುಃಸಂಯೋಗೇ ವಿಶೇಷಣಂ ದೇಯಮ್ । ಏವಂ ದ್ರವ್ಯಸ್ಪಾರ್ಶನಪ್ರತ್ಯಕ್ಷೇ ತ್ವಕ್‌ಸಂಯೋಗಃ ಕಾರಣಮ್, ದ್ರವ್ಯಸಮವೇತಸ್ಪಾರ್ಶನ ಪ್ರತ್ಯಕ್ಷೇ ತ್ವಕ್‌ಸಂಯುಕ್ತಸಮವಾಯಃ, ದ್ರವ್ಯಸಮವೇತಸಮವೇತಸ್ಪಾರ್ಶನ ಪ್ರತ್ಯಕ್ಷೇ ತ್ವಕ್ ಸಂಯುಕ್ತಸಮವೇತಸಮವಾಯಃ ಕಾರಣಮ್. । ಅತ್ರಾಪಿ ಮಹತ್ತ್ವಾವಚ್ಛಿನ್ನತ್ವಂ ಉದ್ಭೂತಸ್ಪರ್ಶಾವಚ್ಛಿನ್ನತ್ವಂ ಚ ಪೂರ್ವವದೇವ ಬೋಧ್ಯಮ್ । ಏವಂ ಗಂಧ ಪ್ರತ್ಯಕ್ಷೇ ಘ್ರಾಣಸಂಯುಕ್ತಸಮವಾಯಃ, ಗಂಧ ಸಮವೇತಸ್ಯ ಘ್ರಾಣಜನ್ಯಪ್ರತ್ಯಕ್ಷೇ ಘ್ರಾಣಸಂಯುಕ್ತಸಮವೇತಸಮವಾಯಃ ಕಾರಣಮ್ ॥

'ಇತ್ಥಂಚ—' ಇತಿ. ಮಹತ್ತ್ವೋದ್ಭೂತರೂಪಾದಿಘಟಿತ ಚಕ್ಷುಃ ಸನ್ನಿಕರ್ಷವು ಕಾರಣವೆಂದುದರಿಂದ ಪರಮಾಣುವಿನಲ್ಲಿರುವ ನೀಲಾದಿಗಳಲ್ಲಿರುವ ನೀಲತ್ವಜಾತಿಪ್ರತ್ಯಕ್ಷ ವಾಗಲಿ ಎಂಬ ಶಂಕೆಗೆ ಅವಕಾಶವಿಲ್ಲ. ಪರಮಾಣುವಿನಲ್ಲಿರುವ ಚಕ್ಷುಃಸಂಯೋಗವು ಮಹತ್ತ್ವಾವಚ್ಛಿನ್ನವಾಗಿಲ್ಲ. ಸ್ವಾಶ್ರಯ ಸಮವೇತ ಸಮವೇತತ್ವರೂಪ ಪರಂಪರಾ ಸಂಬಂಧವಿದ್ದರೂ ಆ ಸಂಬಂಧವು ಉದ್ಭೂತರೂಪಾವಚ್ಛಿನ್ನವಾಗಲೀ ಮಹತ್ತ್ವಾವಚ್ಛಿನ್ನ ವಾಗಲೀ ಆಗಲಿಲ್ಲ. ಈ ಸಂಬಂಧದಲ್ಲಿ ಉದ್ಭೂತರೂಪವಾಗಲೀ ಮಹತ್ತ್ವವಾಗಲೀ ವಿಶೇಷಣವಾಗಿಲ್ಲವೆಂದರ್ಥ. ಈ ವಿಶೇಷಣವಿಶಿಷ್ಟಸಂಬಂಧವೇ ಪ್ರತ್ಯಕ್ಷಕಾರಣವಾಗಿರುತ್ತದೆ. 'ಏವಂ—' ಇತಿ. ವಾಯುವಿನಲ್ಲಿರುವ ಸತ್ತಾ ಚಾಕ್ಷುಷಪ್ರತ್ಯಕ್ಷವೂ ಇಲ್ಲ. ಇದಕ್ಕೆ ವಾಯುವಿನಲ್ಲಿರುವ ಚಕ್ಷುಸಂಯೋಗವು ಉದ್ಭೂತರೂಪಾವಚ್ಛಿನ್ನವಾಗದಿರುವುದೇ ಕಾರಣ. ವಾಯ್ವಾದಿಪದದಿಂದ ಹುರಿಯುಪಾತ್ರದಲ್ಲಿರುವ ಅಗ್ನ್ಯಾದಿ, ವಾಯು ಸಮವೇತಸ್ಪರ್ಶದಲ್ಲಿರುವ ಸತ್ತಾಜಾತಿ ಮುಂತಾದವುಗಳನ್ನು ತೆಗೆದುಕೊಳ್ಳಬೇಕು.

ಪ್ರತ್ಯಕ್ಷಕ್ಕೆ ಸಂಪೂರ್ಣಕಾರಣಸಾಮಗ್ರಿಯು ಆವಶ್ಯಕವೆಂದು ಇನ್ನೂ ಉದಾಹರಣೆಗಳಿಂದ ವಿಶದಪಡಿಸುತ್ತಾನೆ. 'ಏವಂಯತ್ರ—' ಇತಿ. ಒಂದು ಘಟದ ಮಧ್ಯ ಭಾಗದಲ್ಲಿ ದೀಪವಿಟ್ಟರೆ ಮಧ್ಯದಲ್ಲಿ ಮಾತ್ರ ಆಲೋಕಸಂಯೋಗವಿರುತ್ತದೆ. ಘಟ ಚಕ್ಷುಃಸಂಯೋಗ ಮಾತ್ರ ಘಟದ ಹೊರಗಿನ ಪ್ರದೇಶದಲ್ಲಿ ಆಗಿರುತ್ತದೆ. ಆಗ ಉದ್ಭೂತರೂಪ, ಮಹತ್ತ್ವವಿದ್ದರೂ ಘಟಪ್ರತ್ಯಕ್ಷವಾಗುವುದಿಲ್ಲ. ಕಾರಣವಿದ್ದರೂ ಕಾರ್ಯವಾಗದಿರುವುದರಿಂದ ಅನ್ವಯವ್ಯಭಿಚಾರ ಬರುತ್ತದೆ. ಆದುದರಿಂದ ಘಟಾದಿದ್ರವ್ಯ ಪ್ರತ್ಯಕ್ಷವನ್ನು ಕುರಿತು ಆಲೋಕಸಂಯೋಗಾವಚ್ಛಿನ್ನ, ಉದ್ಭೂತರೂಪಾವಚ್ಛಿನ್ನ ಮಹತ್ವಾವಚ್ಛಿನ್ನ ಚಕ್ಷುಃಸಂಯೋಗವು ಕಾರಣವೆಂದು ವಿಶೇಷವಾಗಿ ಹೇಳಬೇಕು. ಹಿಂದಿನಸ್ಥಳದಲ್ಲಿ ಉದ್ಭೂತರೂಪ, ಮಹತ್ತ್ವ, ಚಕ್ಷುಃಸಂಯೋಗಗಳಿದ್ದರೂ ಆಲೋಕ

ಸಂಯೋಗರೂಪವಿಶೇಷಣ ಇಲ್ಲದಿರುವುದರಿಂದ ಕಾರಣಸಾಮಗ್ರಿಸಂಪೂರ್ಣ ಇಲ್ಲದಿರುವುದರಿಂದ ಪ್ರತ್ಯಕ್ಷವಾಗುವುದಿಲ್ಲ. ರೂಪಾದಿಸಾಕ್ಷಾತ್ಕಾರದಲ್ಲಿಯೂ ಹೀಗಯೇ ತಿಳಿಯಬೇಕು.

ಹೀಗೆ ಪ್ರತ್ಯಕ್ಷದಲ್ಲಿ ಚಕ್ಷುರಾದಿ ಇಂದ್ರಿಯಗಳು ಕರಣಗಳು. ಚಕ್ಷುರಾದಿ ಇಂದ್ರಿಯ ಸಂನಿಕರ್ಷ (ಸಂಯೋಗ)ವು ವ್ಯಾಪಾರ. ಮಹತ್ತ್ವ, ಉದ್ಭೂತರೂಪ, ಆಲೋಕಸಂಯೋಗಗಳು ಸಹಕಾರಿಕಾರಣ. ಇವುಗಳಲ್ಲಿ ಯಾವುದೊಂದು ಇಲ್ಲವಾದರೂ ಪ್ರತ್ಯಕ್ಷರೂಪಕಾರ್ಯವಾಗುವುದಿಲ್ಲ.

'ಏವಂದ್ರವ್ಯಸ್ಪಾರ್ಶನ—' ಇತಿ. ತ್ವಗಿಂದ್ರಿಯದಿಂದ ಆಗುವ ದ್ರವ್ಯವಿಷಯಕ ಸ್ಪಾರ್ಶನಪ್ರತ್ಯಕ್ಷದಲ್ಲಿ ತ್ವಕ್ ಸಂಯೋಗವು ಕಾರಣ. ತ್ವಗಿಂದ್ರಿಯವು ಕಾರಣ. ತ್ವಕ್ ಸಂಯೋಗವು ಮಹತ್ವಾವಚ್ಛಿನ್ನವಾಗಿಯೂ ಉದ್ಭೂತಸ್ಪರ್ಶಾವಚ್ಛಿನ್ನವಾಗಿಯೂ ಇರಬೇಕು. ಮಹತ್ವ, ಉದ್ಭೂತಸ್ಪರ್ಶಗಳು ಸಹಕಾರಿಕಾರಣವೆಂದರ್ಥ. ದ್ರವ್ಯಸಮವೇತ ಸ್ಪಾರ್ಶನ ಪ್ರತ್ಯಕ್ಷದಲ್ಲಿ ತ್ವಕ್ ಸಂಯುಕ್ತಸಮವಾಯವು ಕಾರಣ. ದ್ರವ್ಯ ಸಮವೇತ ಸಮವೇತಸ್ಪಾರ್ಶನದಲ್ಲಿ (ಸ್ಪರ್ಶತ್ವದ ಪ್ರತ್ಯಕ್ಷ.) ತ್ವಕ್ ಸಂಯುಕ್ತಸಮವೇತಸಮವಾಯವು ಕಾರಣ. ಗಂಧಪ್ರತ್ಯಕ್ಷದಲ್ಲಿ ಘ್ರಾಣಸಂಯುಕ್ತಸಮವಾಯವೂ, ಗಂಧಸಮವೇತವಾದ ಗಂಧತ್ವದ ಪ್ರತಕ್ಷದಲ್ಲಿ ಘ್ರಾಣಸಂಯುಕ್ತ ಸಮವೇತ ಸಮವಾಯವೂ ಸನ್ನಿಕರ್ಷವಾಗಿ ಕಾರಣವಾಗುತ್ತದೆ.

ಏವಂ ರಸಪ್ರತ್ಯಕ್ಷೇ ರಸನಾಸಂಯುಕ್ತ ಸಮವಾಯಃ, ರಸಸಮವೇತರಾಸನಪ್ರತ್ಯಕ್ಷೇ ರಸನಾಸಂಯುಕ್ತಸಮವೇತಸಮವಾಯಃ ಕಾರಣಮ್ । ಶಬ್ದಪ್ರತ್ಯಕ್ಷೇ ಶ್ರೋತ್ರಾವಚ್ಛಿನ್ನಸಮವಾಯಃ, ಶಬ್ದಸಮವೇತ ಶ್ರಾವಣಪ್ರತ್ಯಕ್ಷೇ ಶ್ರೋತ್ರಾವಚ್ಛಿನ್ನ ಸಮವೇತ ಸಮವಾಯಃ ಕಾರಣಮ್ । ಅತ್ರ ಸರ್ವಂ ಪ್ರತ್ಯಕ್ಷಂ ಲೌಕಿಕಂ ಬೋಧ್ಯಮ್ । ವಕ್ಷ್ಯಮಾಣಮಲೌಕಿಕಂ ಪ್ರತ್ಯಕ್ಷಂ ಇಂದ್ರಿಯ ಸಂಯೋಗಾದಿಕಂ ವಿನಾಪಿ ಭವತಿ । ಏವಮಾತ್ಮನಃ ಪ್ರತ್ಯಕ್ಷೇ ಮನಃಸಂಯೋಗಃ ಆತ್ಮಸಮವೇತಮಾನಸಪ್ರತ್ಯಕ್ಷೇ ಮನಃಸಂಯುಕ್ತಸಮವಾಯಃ, ಆತ್ಮಸಮವೇತ ಸಮವೇತ ಮಾನಸ ಪ್ರತ್ಯಕ್ಷೇ ಮನಃ ಸಂಯುಕ್ತ ಸಮವೇತ ಸಮವಾಯಃ ಕಾರಣಮ್ ॥

ನಯನ, ತ್ವಕ್ ಮನಸ್ಸು ಈ ಮೂರು ಮಾತ್ರ ದ್ರವ್ಯಗ್ರಾಹಕಗಳು. (ದ್ರವ್ಯ ವಿಷಯಕ ಲೌಕಿಕ ಪ್ರತ್ಯಕ್ಷವನ್ನುಂಟುಮಾಡುತ್ತವೆ.) ಅಲ್ಲಿ ಮಾತ್ರ ಸಂಯೋಗವು ಸನ್ನಿಕರ್ಷವಾಗುತ್ತದೆ. ರಾಸನಾದಿಗಳು ಸಂಯೋಗಜನ್ಯವಾಗುವುದಿಲ್ಲ. ಆದುದರಿಂದ ಅಲ್ಲಿ ಕಾರಣವಾದ ಸನ್ನಿಕರ್ಷವನ್ನು ತೋರಿಸುತ್ತಾನೆ. 'ಏವಂ ರಾಸನ—' ಇತಿ. ರಸನೇಂದ್ರಿಯದಿಂದ ರಸಪ್ರತ್ಯಕ್ಷವಾಗುತ್ತದೆ. ಈ ರಾಸನಪ್ರತ್ಯಕ್ಷದಲ್ಲಿ ರಸನಾಸಂಯುಕ್ತ ಸಮವಾಯವು ಸನ್ನಿಕರ್ಷವಾಗಿ ಕಾರಣವಾಗುತ್ತದೆ. ರಸನಾ ಸಂಯುಕ

ವಾದದ್ದು ದ್ರವ್ಯ. ಅಲ್ಲಿ ರಸದ ಸಮವಾಯವಿರುತ್ತದೆ. ಕಿವಿಯಿಂದ ಶಬ್ದಪ್ರತ್ಯಕ್ಷವಾಗುವಾಗ ಶ್ರೋತ್ರಾವಚ್ಛಿನ್ನ ಸಮವಾಯವು ಸನ್ನಿಕರ್ಷವಾಗುತ್ತದೆ. ಶ್ರೋತ್ರವು ಆಕಾಶರೂಪವಾಗಿ ಶಬ್ದವು ಅದರ ಗುಣವಾದುದರಿಂದ ಶ್ರೋತ್ರಾವಚ್ಛಿನ್ನಸಮವಾಯವೆಂದಿದೆ. ಶಬ್ದಸಮವೇತವೆಂದರೆ ಶಬ್ದದಲ್ಲಿ ಸಮವಾಯಸಂಬಂಧದಿಂದ ಇರುವ ಶಬ್ದತ್ವ ಜಾತಿ. ಶ್ರೋತ್ರಾವಚ್ಛಿನ್ನವಾದ ಆಕಾಶದಲ್ಲಿ ಸಮವೇತವಾದದ್ದು ಶಬ್ದ. ಅದರಲ್ಲಿ ಶಬ್ದತ್ವದ ಸಮವಾಯವಿದೆ.

'ಅತ್ರ—' ಇತಿ. ಲೌಕಿಕ, ಅಲೌಕಿಕವೆಂದು ಪ್ರತ್ಯಕ್ಷವು ಎರಡು ವಿಧವಾಗಿದೆ. ಅತ್ರ—ಈ ರೀತಿ ಕಾರ್ಯಕಾರಣಭಾವ ಹೇಳಿದ ಸ್ಥಳದಲ್ಲಿ ಸರ್ವಂ—ಚಾಕ್ಷುಷಾದಿಭೇದದಿಂದ ನಾನಾ ರೀತಿಯಾದ, ಪ್ರತ್ಯಕ್ಷವು ಲೌಕಿಕವೆಂದು ತಿಳಿಯಬೇಕು. ಲೌಕಿಕ ವಿಷಯತಾಸಂಬಂಧದಿಂದ ಹುಟ್ಟುವುದೆಂದರ್ಥ. ಅಲೌಕಿಕ ಪ್ರತ್ಯಕ್ಷವನ್ನು ಮುಂದೆ ವಿವರಿಸುತ್ತಾನೆ. ಅದು ಅಲೌಕಿಕ ಸನ್ನಿಕರ್ಷದಿಂದ (ಸಾಮಾನ್ಯಲಕ್ಷಣಾಪ್ರತ್ಯಾಸತ್ತಿ ಮುಂತಾದ) ಹುಟ್ಟುತ್ತದೆ. 'ಚಕ್ಷು—' ಇತಿ. ಚಕ್ಷುರಾದಿ ಇಂದ್ರಿಯಗಳೊಡನೆ ಸಂಯೋಗಾದಿ ಸನ್ನಿಕರ್ಷವಿಲ್ಲದೇ ಬರುತ್ತದೆ. 'ಏವಂ—' ಇತಿ. ಆತ್ಮಪ್ರತ್ಯಕ್ಷದಲ್ಲಿ (ಆತ್ಮವೃತ್ತಿಲೌಕಿಕ ವಿಷಯತಾ ಸಂಬಂಧೇನ ಪ್ರತ್ಯಕ್ಷೇ ಇತ್ಯರ್ಥಃ.) ಕೇವಲ ಮನಃಸಂಯೋಗವು ಕಾರಣ. ಆತ್ಮಸಮವೇತಗಳಾದ ಜ್ಞಾನಾದಿಮಾನಸಪ್ರತ್ಯಕ್ಷದಲ್ಲಿ ಮನಃಸಂಯುಕ್ತಸಮವಾಯವು ಸನ್ನಿಕರ್ಷವಾಗುತ್ತದೆ. ಮನಃ ಸಂಯುಕ್ತನಾದವನು ಆತ್ಮಾ. ಅಲ್ಲಿ ಜ್ಞಾನಾದಿಗಳ ಸಮವಾಯವಿದೆ. ಆತ್ಮ ಸಮವೇತಸಮವೇತವೆಂದರೆ ಜ್ಞಾನತ್ವಾದಿಗಳು. ಮನಃ ಸಂಯುಕ್ತ—ಆತ್ಮ. ಅಲ್ಲಿ ಸಮವೇತ—ಜ್ಞಾನ. ಅಲ್ಲಿ ಜ್ಞಾನತ್ವದ ಸಮವಾಯವಿದೆ.

ಅಭಾವಪ್ರತ್ಯಕ್ಷೇ ಸಮವಾಯಪ್ರತ್ಯಕ್ಷೇ ಚೇಂದ್ರಿಯಸಂಬದ್ಧ ವಿಶೇಷಣತಾ ಹೇತುಃ ವೈಶೇಷಿಕ ಮತೇ ತು ಸಮವಾಯೋ ನ ಪ್ರತ್ಯಕ್ಷಃ । ಅತ್ರಯದ್ಯಪಿ ವಿಶೇಷಣತಾ ನಾನಾ ವಿಧಾ । ತಥಾಹಿ—ಭೂತಲಾದೌ ಘಟಾದ್ಯಭಾವಃ ಸಂಯುಕ್ತ ವಿಶೇಷಣತಯಾ ಗೃಹ್ಯತೇ । ಸಂಖ್ಯಾದೌ ರೂಪಾದ್ಯಭಾವಃ ಸಂಯುಕ್ತ ಸಮವೇತ ಸಮವೇತವಿಶೇಷಣತಯಾ । ಶಬ್ದಾಭಾವಃ ಕೇವಲಶ್ರೋತ್ರಾವಚ್ಛಿನ್ನ ವಿಶೇಷಣತಯಾ । ಕಾದೌ ಖತ್ವಾದ್ಯಭಾವಃ ಶ್ರೋತ್ರಾವಚ್ಛಿನ್ನ ಸಮವೇತ ವಿಶೇಷಣತಯಾ । ಏವಂ ಕತ್ವಾದ್ಯವಚ್ಛಿನ್ನಾಭಾವೇ ಗತ್ವಾಭಾವಾದಿಕಂ ಶ್ರೋತ್ರಾವಚ್ಛಿನ್ನ ವಿಶೇಷಣ ವಿಶೇಷಣತಯಾ । ಏವಂ ಘಟಾಭಾವಾದೌ ಪಟಾಭಾವಃ ಚಕ್ಷುಃ ಸಂಯುಕ್ತ ವಿಶೇಷಣ ವಿಶೇಷಣತಯಾ । ಏವಮನ್ಯದಪ್ಯೂಹ್ಯಮ್ । ತಥಾಪಿ ವಿಶೇಷಣತಾತ್ವರೂಪೇಣೈಕ್ಯೈವ ಸಾ ಗಣ್ಯತೇ । ಅನ್ಯಥಾ ಷೋಢಾ ಸನ್ನಿಕರ್ಷ ಇತಿ ಪ್ರಾಚಾಂ ಪ್ರವಾದೋ ವ್ಯಾಹನ್ಯೇತೇತಿ ॥

ಅಭಾವ ಮತ್ತು ಸಮವಾಯ ಪ್ರತ್ಯಕ್ಷಗಳಲ್ಲಿ ಸನ್ನಿಕರ್ಷವನ್ನು ತೋರಿಸುತ್ತಾನೆ. 'ಅಭಾವ—' ಇತಿ. ಈ ಎರಡರ ಪ್ರತ್ಯಕ್ಷದಲ್ಲಿ 'ಇಂದ್ರಿಯಸಂಬದ್ಧ ವಿಶೇಷಣತಾ' ಎಂಬುದು ಸನ್ನಿಕರ್ಷವಾದುದರಿಂದ ಅದು ಕಾರಣವಾಗುತ್ತದೆ. ಇಂದ್ರಿಯಸಂಬದ್ಧ ವಾದದ್ದು ಭೂತಲ ಮುಂತಾದವುಗಳು. (ಭೂತಲವು ಅಭಾವಕ್ಕೆ ಅಧಿಕರಣವಾಗಿರುತ್ತದೆ.) ಅಲ್ಲಿ ಘಟಾಭಾವಾದಿಗಳು ವಿಶೇಷಣವಾಗಿರುತ್ತವೆ. ಅಭಾವದಲ್ಲಿ ವಿಶೇಷಣತಾ ರೂಪ ವಿಷಯತಾ ಇದೆ. 'ಘಟಾಭಾವವತ್ ಭೂತಲಮ್' ಎಂಬ ಜ್ಞಾನದಲ್ಲಿ ಘಟಾಭಾವವು ವಿಶೇಷಣವಾದುದರಿಂದ ವಿಶೇಷಣತಾ ಅದರಲ್ಲಿದೆ. 'ರೂಪಸಮವಾಯವಾನ್' ಎಂಬಲ್ಲಿಯೂ ಸಮವಾಯವು ವಿಶೇಷಣರೂಪವಾಗಿ ತೋರುವುದರಿಂದ ವಿಶೇಷಣತಾ ಅದರಲ್ಲಿ ಬರುತ್ತದೆ. ಇಂದ್ರಿಯಸಂಬದ್ಧವಾದದ್ದು ರೂಪ. ಅಲ್ಲಿ ಸಮವಾಯ ವಿಶೇಷಣವಾದುದರಿಂದ ವಿಶೇಷಣತಾ ರೂಪವಿಷಯತಾ ಸಮವಾಯದಲ್ಲಿ ಬರುತ್ತದೆ. ಇಂದ್ರಿಯ ಸಂಬದ್ಧವಿಶೇಷಣತಾ ರೂಪಸಂಬಂಧಕ್ಕೆ 'ವಿಶೇಷಣ ವಿಶೇಷ್ಯಭಾವಃ ಸನ್ನಿಕರ್ಷ'ವೆಂದೂ ಕರೆಯುತ್ತಾರೆ.

ಇಂದ್ರಿಯಸಂಬಂದ್ಧವಿಶೇಷ್ಯತ್ವ, ಇಂದ್ರಿಯಸಂಬಂದ್ಧವಿಶೇಷಣತ್ವವೆಂದು ಎರಡು ರೀತಿಯಾಗಿಯೂ ಹೇಳಬಹುದು. 'ಘಟಾಭಾವವತ್ ಭೂತಲಮ್' ಎಂಬ ಪ್ರತ್ಯಕ್ಷ ಜ್ಞಾನದಲ್ಲಿ ಇಂದ್ರಿಯಸಂಬಂದ್ಧ ವಿಶೇಷಣತ್ವಸಂಬಂಧ ತೋರುತ್ತದೆ. ಇಂದ್ರಿಯ ಸಂಬಂದ್ಧವಾದದ್ದು ಭೂತಲ. ಅಲ್ಲಿ ಘಟಾಭಾವವು ವಿಶೇಷಣ. 'ಇಹ ಭೂತಲೇ ಘಟಾಭಾವಃ' (ಘಟಃನಾಸ್ತಿ) ಎಂಬ ಜ್ಞಾನ ಬಂದಾಗ ಇಂದ್ರಿಯಸಂಬಂದ್ಧವಿಶೇಷ್ಯತ್ವವು ಸಂಬಂಧವಾಗುತ್ತದೆ. ಇಂದ್ರಿಯಸಂಬಂದ್ಧವಾದದ್ದು ಅಭಾವ. ಅದರಲ್ಲಿ ಭೂತಲವು ವಿಶೇಷಣವಾಗಿದೆ. (ಸಪ್ತಮ್ಯಂತವಾದದ್ದು ವಿಶೇಷಣವೆಂದು ನಿಯಮ.) ಹೀಗೆಯೇ ಸಮವಾಯದ ಪ್ರತ್ಯಕ್ಷದಲ್ಲಿಯೂ ಸಂಬಂಧವನ್ನು ತಿಳಿಯಬೇಕು.

ಗೌತಮರ ಮತದಲ್ಲಿ ಮಾತ್ರ ಸಮವಾಯದ ಪ್ರತ್ಯಕ್ಷ. ವೈಶೇಷಿಕ (ಕಣಾದ) ಮತದಲ್ಲಿ ಸಮವಾಯದ ಪ್ರತ್ಯಕ್ಷವಿಲ್ಲವೆಂದು ತೋರಿಸುತ್ತಾನೆ. 'ವೈಶೇಷಿ—' ಇತಿ. ವೈಶೇಷಿಕಮತದಲ್ಲಿ ಸಂಬಂಧಪ್ರತ್ಯಕ್ಷವಾಗಬೇಕಾದರೆ ಅದರ ಸಕಲಾಶ್ರಯಗಳ ಪ್ರತ್ಯಕ್ಷವಾಗಬೇಕೆಂದು ನಿಯಮವಿದೆ. ಆಗ ರೂಪಸಮವಾಯಪ್ರತ್ಯಕ್ಷವಾಗಬೇಕಾದರೆ ರೂಪ ಸಮವಾಯವುಳ್ಳ ಪರಮಾಣುಗಳಪ್ರತ್ಯಕ್ಷವೂ ಆಗಬೇಕಾಗುತ್ತದೆ. ಸಮವಾಯವು ಒಂದೇ ಆದುದರಿಂದ ಭೂತಭವಿಷ್ಯತ್ತಿನಲ್ಲಿರುವ ಸಕಲ ಸಮವಾಯಾಶ್ರಯವ್ಯಕ್ತಿಗಳ ಪ್ರತ್ಯಕ್ಷವಾಗಲಿ ಎಂಬ ಶಂಕೆ ಬರುತ್ತದೆ. ಆದುದರಿಂದ ಸಮವಾಯದ ಪ್ರತ್ಯಕ್ಷವಿಲ್ಲವೆಂದು ಅವರ ಸಿದ್ಧಾಂತ. ನ್ಯಾಯಮತೀಯರಲ್ಲಿ ಈ ನಿಯಮವಿಲ್ಲ. ಸಂಯೋಗ ಸಂಬಂಧಪ್ರತ್ಯಕ್ಷದಲ್ಲಿ ಮಾತ್ರ ಈ ನಿಯಮಹೇಳಬಹುದೆಂದು ಅವರ ಅಭಿಪ್ರಾಯ.

ಈ ವಿಶೇಷಣತಾ ಸನ್ನಿಕರ್ಷಗಳು ನಾನಾ ರೀತಿಯಾಗಿದ್ದರೂ ವಿಶೇಷಣತಾತ್ವ ರೂಪದಿಂದ ಒಂದೇ ಆದುದರಿಂದ ಆರು ವಿಧವಾದ ಸನ್ನಿಕರ್ಷವೆಂಬ ಸಿದ್ಧಾಂತಕ್ಕೆ ಭಂಗ ಬಂದಿಲ್ಲವೆಂದು ಆಶಂಕಾ ಸಮಾಧಾನಗಳಿಂದ ವಿಶದಪಡಿಸುತ್ತಾನೆ. 'ಯದ್ಯಪಿ—'

ಇತಿ. ಸಂಯುಕ್ತಸಮವೇತ ವಿಶೇಷಣತಾ—'ಸಂಖ್ಯಾರೂಪಾಭಾವವಾನ್' ಎಂಬಲ್ಲಿ ಸಂಯುಕ್ತವಾದದ್ದು ಭೂತಲಾದಿ. ಅಲ್ಲಿ ಸಮವೇತವಾದದ್ದು ಸಂಖ್ಯಾ. ಅಲ್ಲಿ ರೂಪಾಭಾವವು ವಿಶೇಷಣವಾಗಿದೆ. ವಿಶೇಷಣತಾ ಅದರಲ್ಲಿ ಇದೆ. ಸಂಖ್ಯಾತ್ವಂರೂಪಾಭಾವವಾನ್' ಎಂಬಲ್ಲಿ ಸಂಯುಕ್ತ—ಭೂತಲಾದಿ. ಅಲ್ಲಿ ಸಮವೇತ—ಸಂಖ್ಯಾ, ಅಲ್ಲಿ ಸಮವೇತ—ಸಂಖ್ಯಾತ್ವ. ಅದರಲ್ಲಿ ರೂಪಾಭಾವ ವಿಶೇಷಣವಾಗಿದೆ. ಹೀಗೆಯೇ ಮುಂದೆ ತಿಳಿಯಬೇಕು.

ಯದಿಸ್ಯಾದುಪಲಭ್ಯೇತೇತಿ || ಅತ್ರಾಭಾವಪ್ರತ್ಯಕ್ಷೇ ಯೋಗ್ಯಾನುಪಲಬ್ಧಿಃ ಕಾರಣಮ್ | ತಥಾಹಿ—ಭೂತಲಾದೌ ಘಟಾದಿಜ್ಞಾನೇ ಜಾತೇ ಘಟಾಭಾವಾದಿಕಂನ ಜ್ಞಾಯತೇ | ತೇನಾಭಾವೋಪಲಂಭೇ ಪ್ರತಿಯೋಗ್ಯುಪಲಂಭಾಭಾವಃ ಕಾರಣಮ್ | ತತ್ರ ಯೋಗ್ಯತಾಪ್ಯಪೇಕ್ಷಿತಾ || ಸಾ ಚ ಪ್ರತಿಯೋಗಿಸತ್ವ ಪ್ರಸಂಜನ ಪ್ರಸಂಜಿತ ಪ್ರತಿಯೋಗಿಕತ್ವರೂಪಾ | ತದರ್ಥಶ್ಚ ಪ್ರತಿಯೋಗಿನೋ ಘಟಾದೇಃ ಸತ್ತ್ವಪ್ರಸಕ್ತ್ಯಾ ಪ್ರಸಂಜಿತ ಆಪಾದಿತ ಉಪಲಂಭರೂಪಃ ಪ್ರತಿಯೋಗೀ ಯಸ್ಯ ಸೋಽಭಾವಪ್ರತ್ಯಕ್ಷೇ ಹೇತುಃ | ತಥಾಹಿ—ಯತ್ರಾಽಽಲೋಕ ಸಂಯೋಗಾದಿಕಂ ವರ್ತತೇ, ತತ್ರ ಯದ್ಯತ್ರ ಘಟಃ ಸ್ಯಾತ್ತರ್ಹಿ ಉಪಲಭ್ಯೇತೇತ್ಯಾಪಾದಯಿತುಂ ಶಕ್ಯತೇ | ತೇನ ಘಟಾಭಾವಾದೇರಂಧಕಾರೇ ನ ಚಾಕ್ಷುಷ ಪ್ರತ್ಯಕ್ಷಮ್, ಸ್ಪಾರ್ಶನಪ್ರತ್ಯಕ್ಷಂತು ಭವತ್ಯೇವ, ಆಲೋಕಸಂಯೋಗಂ ವಿನಾಪಿ ಸ್ಪಾರ್ಶನಪ್ರತ್ಯಕ್ಷಸ್ಯಾಪಾದಾಯಿತುಂ ಶಕ್ಯತ್ವಾತ್ | ಗುರುತ್ವಾದಿಕಂ ಯದಯೋಗ್ಯಂ ತದಭಾವಸ್ತು ನ ಪ್ರತ್ಯಕ್ಷಃ ತತ್ರ ಗುರುತ್ವಾದಿಪ್ರತ್ಯಕ್ಷಸ್ಯಾಽಪಾದಯಿತುಮಶಕ್ಯತ್ವಾತ್ | ವಾಯೌ ರೂಪಾಭಾವಃ, ಪಾಷಾಣೇ ಸೌರಭಾಭಾವಃ, ಗುಡೇತಿಕ್ತಾಭಾವಃ, ಶ್ರೋತ್ರೇ ಶಬ್ದಾಭಾವಃ, ಆತ್ಮನಿಸುಖಾಭಾವಃ ಏವಮಾದಯಸ್ತತ್ತದಿಂದ್ರಿಯೈರ್ಗೃಹ್ಯಂತೇ, ತತ್ತತ್ಪ್ರತ್ಯಕ್ಷಸ್ಯಾಪಾದಯಿತುಂ ಶಕ್ಯತ್ವಾತ್ | ಸಂಸರ್ಗಾಭಾವಪ್ರತ್ಯಕ್ಷೇ ಪ್ರತಿಯೋಗಿನೋ ಯೋಗ್ಯತಾ| ಅನ್ಯೋನ್ಯಾಭಾವಪ್ರತ್ಯಕ್ಷೇ ತು ಅಧಿಕರಣಯೋಗ್ಯತಾಽಪೇಕ್ಷಿತಾ | ಅತಃ ಸ್ತಂಭಾದೌ ಪಿಶಾಚಾದಿಭೇದೋಽಪಿ ಚಾಕ್ಷುಷಾಗೃಹ್ಯತ ಏವ || ೬೨ ||

ಅಭಾವಪ್ರತ್ಯಕ್ಷದಲ್ಲಿ ಸಹಕಾರಿಕಾರಣವನ್ನು ಕಾರಿಕೆಯಲ್ಲಿ ತೋರಿಸಿದೆ. 'ಯದಿ—' ಇತಿ. ಎಲ್ಲಿ ಅದು ಇದ್ದಿದ್ದರೆ ಹೊಂದಲ್ಪಡುತ್ತಿತ್ತು ಎಂದು ಆಪಾದನೆ ಮಾಡಲು ಸಾಧ್ಯವೋ ಅಲ್ಲಿ ಮಾತ್ರ ಅಭಾವವು ವಿಶೇಷಣತಾ ಸನ್ನಿಕರ್ಷದಿಂದ ಪ್ರತ್ಯಕ್ಷವಾಗುತ್ತದೆ. ಇದನ್ನೇ ಮುಕ್ತಾವಳಿಯಲ್ಲಿ ವಿವರಿಸುತ್ತಾನೆ. 'ಅತ್ರಾಭಾವ—' ಇತಿ. 'ಯೋಗ್ಯಸ್ಯ ಅನುಪಲಬ್ಧಿಃ' ಪ್ರತ್ಯಕ್ಷಯೋಗ್ಯವಾದ (ಯೋಗ್ಯತೆಯಿಂದ ಕೂಡಿದ) ಘಟಾದಿಗಳ ಅನುಪಲಬ್ಧಿ. (ಉಪಲಂಭಾಭಾವ) ಪ್ರತೀತಿ ಇಲ್ಲದಿರುವುದು. ಇದೇ ಅಭಾವ ಪ್ರತ್ಯಕ್ಷದಲ್ಲಿ ಕಾರಣ. (ಕರಣವಲ್ಲ.) ಉಪಲಂಭ, ಉಪಲಬ್ಧಿ, ಪ್ರತೀತಿ,

ಜ್ಞಾನ ಇವೆಲ್ಲಾ ಒಂದೇ ಅರ್ಥವನ್ನು ಕೊಡುತ್ತವೆ. (ಹೀಗೆಯೇ ಅನುಪಲಂಭ, ಅನುಪಲಬ್ಧಿ, ಪ್ರತೀತ್ಯಭಾವ ಇವೆಲ್ಲಾ ಏಕಾರ್ಥಗಳು.) 'ತಥಾಹಿ—' ಎಂಬುದರಿಂದ ಇದನ್ನೇ ವಿವರಿಸುತ್ತಾನೆ. 'ಯದ್ಯತ್ರ ಘಟಾದಿಃ ಸ್ಯಾತ್ ತರ್ಹಿತಸ್ಯೋಪಲಂಭೋऽಪಿ ಸ್ಯಾತ್' ಎಂದು ಎಲ್ಲಿ ಆಪಾದನೆ ಮಾಡಲು ಶಕ್ಯವೋ ಅಲ್ಲಿ ಮಾತ್ರ ಹಿಂದೆ ಹೇಳಿದ ವಿಶೇಷಣತಾ ಸಂನಿಕರ್ಷದಿಂದ ಅಭಾವಪ್ರತ್ಯಕ್ಷವಾಗುತ್ತದೆ. ಆಪಾದಿಸಲು ಶಕ್ಯವಿಲ್ಲದ ಸ್ಥಳದಲ್ಲಿ ಅಭಾವಪ್ರತ್ಯಕ್ಷವಿಲ್ಲ.

ಭೂತಲಾದೌ—ಅಭಾವಕ್ಕೆ ಅಧಿಕರಣವಾದ ಭೂತಲ ಮುಂತಾದವುಗಳಲ್ಲಿ, ಘಟಾದಿಜ್ಞಾನೇ—'ಅಯಂಘಟಃ' ಎಂಬ ಪ್ರತ್ಯಕ್ಷವು, ಜಾತೇ—ಉಂಟಾದಾಗ 'ಘಟಾಭಾವಾದಿಕಂ—ಘಟಪ್ರತಿಯೋಗಿಕಾಭಾವವು ನಜ್ಞಾಯತೇ—ಚುಕ್ಷುರಾದಿ ಇಂದ್ರಿಯ ಪ್ರಮಾಣದಿಂದ ವಿಷಯೀಕರಿಸಲ್ಪಡುವುದಿಲ್ಲ. ಘಟಾಭಾವನೆಂದರೆ ಅಭಾವಕ್ಕೆ ಪ್ರತಿಯೋಗೀ ಘಟವಾಗುತ್ತದೆ. ತೇನ—ಅಭಾವದ ಪ್ರತಿಯೋಗಿ ಇರುವಾಗ ಅಭಾವಜ್ಞಾನ ಬಾರದಿರುವುದರಿಂದ, ಅಭಾವೋಪಲಂಭೇ—ಅಭಾವದಪ್ರತ್ಯಕ್ಷದಲ್ಲಿ, ಪ್ರತಿಯೋಗ್ಯುಪಲಂಭಾಭಾವಃ—ಪ್ರತಿಯೋಗಿಯಾದ ಘಟದ ಪ್ರತೀತ್ಯಭಾವವು (ಘಟಜ್ಞಾನವಿಲ್ಲದಿರುವುದು) ಕಾರಣಂ—ಹೇತುವೆಂದರ್ಥ. (ಕರಣವಲ್ಲ.) ತತ್ರ—ಪ್ರತಿಯೋಗ್ಯುಪಲಂಭಾಭಾವದಲ್ಲಿಯೂ ಒಂದು ಯೋಗ್ಯತೆಯು ಅಪೇಕ್ಷಿತವಾಗಿದೆ. 'ಸಾಚ—' ಎಂಬುದರಿಂದ ಯಾವ ಯೋಗ್ಯತೆಯೆಂದು ತೋರಿಸುತ್ತಾನೆ. 'ಪ್ರತಿಯೋಗಿ—' ಇತಿ. ಇದನ್ನು ತಾನೇ 'ತದರ್ಥಶ್ಚ—' ಎಂಬ ವಾಕ್ಯದಿಂದ ವಿವರಿಸುತ್ತಾನೆ. ಯಾವುದರ ಅಧಿಕರಣದಲ್ಲಿ ಪ್ರತಿಯೋಗಿಯಾದ ಘಟಾದಿಪ್ರತೀತಿಯನ್ನು ಆಪಾದಿಸಲು ಸಾಧ್ಯವೋ ಆ ಅಧಿಕರಣದಲ್ಲಿ ಮಾತ್ರ ಘಟಾದಿಪ್ರತಿಯೋಗಿಕಾಭಾವಪ್ರತ್ಯಕ್ಷವು ಉಂಟಾಗುತ್ತದೆ. ಅಧಿಕರಣವಾದ ಭೂತಲವಲ್ಲಿ 'ಇಲ್ಲಿ ಘಟವಿದ್ದಿದ್ದರೆ ಕಣ್ಣಿನಿಂದ ಗ್ರಹಿಸಲ್ಪಡುತ್ತಿತ್ತು.' ಎಂದು ಘಟರೂಪಪ್ರತಿಯೋಗಿಪ್ರತೀತಿಯನ್ನು ಆಪಾದಿಸಬಹುದು. ಆದುದರಿಂದ ಭೂತಲವಲ್ಲಿ ಘಟಪ್ರತಿಯೋಗಿಕಾಭಾವಪ್ರತ್ಯಕ್ಷವು ಆಗಬಹುದು. ಹೀಗೆ ಆಪಾದಿಸಲು ಸಾಧ್ಯವಾಗದ ಸ್ಥಳದಲ್ಲಿ ಆಭಾವಪ್ರತ್ಯಕ್ಷವೂ ಇಲ್ಲ. 'ಜಲಪರಮಾಣುಗಳಲ್ಲಿ ಪೃಥಿವೀತ್ವವಿದ್ದರೆ ಆಗ ಅದು ತಿಳಿಯುತ್ತಿತ್ತು' ಎಂದು ಜಲಪರಮಾಣುಗಳಲ್ಲಿ ಪೃಥಿವೀತ್ವಾರೋಪದಿಂದ ಆಪಾದಿಸಲು ಸಾಧ್ಯವಾಗದಿರುವುದರಿಂದ ಜಲಪರಮಾಣುಗಳಲ್ಲಿ ಪೃಥಿವೀತ್ವಾಭಾವದ ಪ್ರತ್ಯಕ್ಷವಿಲ್ಲ. ಪೃಥಿವೀತ್ವಾಭಾವವು ಪ್ರತ್ಯಕ್ಷಯೋಗ್ಯವಾದರೂ ಜಲಪರಮಾಣುಗಳಲ್ಲಿ ಅವುಗಳಿಗೆ ಪ್ರತ್ಯಕ್ಷಯೋಗ್ಯತೆ ಇಲ್ಲ. ಆಶ್ರಯದ ಪ್ರತ್ಯಕ್ಷವೇ ಜಾತಿಪ್ರತ್ಯಕ್ಷದಲ್ಲಿ ಪ್ರಯೋಜಕವಾಗಿದೆ. ಜಲಪರಮಾಣು ಪ್ರತ್ಯಕ್ಷಗೋಚರವಲ್ಲ. ಆದುದರಿಂದ ಅಲ್ಲಿರುವ ಜಲತ್ವಕ್ಕೆ ಹೇಗೆ ಪ್ರತ್ಯಕ್ಷತ್ವ ಇಲ್ಲವೋ ಹಾಗೆಯೇ ಆರೋಪಿತ ಪೃಥಿವೀತ್ವೋಪಲಂಭವೂ ಇಲ್ಲ. ಯೋಗ್ಯಪ್ರತಿಯೋಗ್ಯುಪಲಂಭಾಭಾವವೇ ಅಭಾವ ಪ್ರತ್ಯಕ್ಷದಲ್ಲಿ ಕಾರಣವೆಂದು ತಾತ್ಪರ್ಯ.

ಪುನಃ ಯೋಗ್ಯತೆಯನ್ನೇ ವಿಶದಪಡಿಸುತ್ತಾನೆ. 'ತಥಾಹಿ—' ಇತಿ. 'ಯತ್ರ

ಯದಾ' ಎಂದು ಸೇರಿಸಿಕೊಳ್ಳಬೇಕು. 'ಆಲೋಕಸಂಯೋಗಾದಿಕಂ' ಎಂಬಲ್ಲಿ ಆದಿ ಪದದಿಂದ ಉದ್ಭೂತರೂಪ, ಮಹತ್ತ್ವಗಳನ್ನು ತೆಗೆದುಕೊಳ್ಳಬೇಕು. ಆಲೋಕಸಂಯೋಗಾವಚ್ಛಿನ್ನ ಉದ್ಭೂತರೂಪಾವಚ್ಛಿನ್ನ ಮಹತ್ತ್ವಾವಚ್ಛಿನ್ನ ಚಕ್ಷುಃ ಸಂಯೋಗವು ಎಲ್ಲಿ ಯಾವಾಗ ಇರುತ್ತದೆಯೋ ಅಲ್ಲಿ ಆಗ ಪ್ರತಿಯೋಗ್ಯುಪಲಂಭಾಪಾದನೆ ಮಾಡಲು ಸಾಧ್ಯವಿದೆ. ಆಗ ಅಲ್ಲಿ ಅಭಾವಪ್ರತ್ಯಕ್ಷವಾಗಬಹುದು. ತೇನ—ಹೀಗೆ ಯೋಗ್ಯತಾ ಹೇಳಿರುವುದರಿಂದ ಅಂಧಕಾರದಲ್ಲಿ ಘಟಾಪಾದನೆ ಮಾಡಲು ಸಾಧ್ಯವಿಲ್ಲದಿರುವುದರಿಂದ ಘಟಾಭಾವವಿಷಯಕ ಚಾಕ್ಷುಷಪ್ರತ್ಯಕ್ಷವೂ ಇಲ್ಲ. ಆದರೆ ಘಟಾಭಾವವಿಷಯಕ ಸ್ಪಾರ್ಶನ ಪ್ರತ್ಯಕ್ಷವು ಆಗಬಹುದು. ಏಕೆಂದರೆ 'ಯದ್ಯತ್ರ ಘಟಃ ಸ್ಯಾತ್ ತರ್ಹಿ ತ್ವಚಾ ಉಪಲಭ್ಯೇತ' ಎಂದು ಆಪಾದಿಸಲು ಶಕ್ಯವಿದೆ. ಆಲೋಕಸಂಯೋಗವಿಲ್ಲದಿದ್ದರೂ ತ್ವಾಚಪ್ರತ್ಯಕ್ಷವಾಗುತ್ತದೆ. ಆದುದರಿಂದ ಚಾಕ್ಷುಷಪ್ರತ್ಯಕ್ಷಾಭಾವದಲ್ಲಿ ಯೋಗ್ಯತೆ ಇಲ್ಲದಿದ್ದರೂ ತ್ವಾಚಪ್ರತ್ಯಕ್ಷಾಭಾವದಲ್ಲಿ ಯೋಗ್ಯತೆ ಇದೆ. 'ಗುರುತ್ವಾದಿಕಂ—' ಇತಿ. ಆದಿಪದದಿಂದ ಧರ್ಮಾಧರ್ಮಾದಿಗಳನ್ನು ತೆಗೆದುಕೊಳ್ಳಬೇಕು. ಗುರುತ್ವವು ಯಾವಾಗಲೂ ಪ್ರತ್ಯಕ್ಷಯೋಗ್ಯವಲ್ಲ. ತಕ್ಕಡಿಯಿಂದ ತೂಗಿ ತಿಳಿಯಲು ಸಾಧ್ಯವಾದುದರಿಂದ ಅದು ಅನುಮಾನಗಮ್ಯ. ಆದುದರಿಂದ 'ಯದಿಘಟೇಗುರುತ್ವಂ ತರ್ಹಿ ಉಪಲಭ್ಯೇತ' ಎಂದು ಅಪಾದನೆ ಮಾಡಲು ಬರುವುದಿಲ್ಲ, ಹೀಗೆಯೇ ಧರ್ಮಾದಿಗಳೂ ಪ್ರತ್ಯಕ್ಷಯೋಗ್ಯವಾಗುವುದಿಲ್ಲ. ಇದರಿಂದ 'ಯದಿ ತಸ್ಮಿನ್ ಧರ್ಮಃ ಸ್ಯಾತ್ ತರ್ಹಿ ಉಪಲಭ್ಯೇತ' ಎಂದು ಆಪಾದಿಸಲೂ ಶಕ್ಯವಿಲ್ಲ. ಧರ್ಮಾದಿಗಳು ಸುಖಾದಿಲಿಂಗದಿಂದ ಅನುಮೇಯಗಳಾಗಿವೆ.

ಮಹತ್ತ್ವ ವಿಶಿಷ್ಟವಾದ ಉದ್ಭೂತರೂಪವು ಚಾಕ್ಷುಷಪ್ರತ್ಯಕ್ಷವನ್ನು ಕುರಿತು ಕಾರಣವೆಂದುದರಿಂದ ವಾಯುವಿನಲ್ಲಿ ಉದ್ಭೂತರೂಪವಿಲ್ಲದಿದ್ದರೂ ಮಹತ್ತ್ವವಿರುವುದರಿಂದ ವಾಯೌ ಯದಿ ರೂಪಂ ಸ್ಯಾತ್ ತರ್ಹಿ ಚಕ್ಷುಷಾ ಉಪಲಭ್ಯೇತ ಎಂದು ಆಪಾದಿಸಲು ಶಕ್ಯವಿರುವುದರಿಂದ ವಾಯುವಿನಲ್ಲಿ ರೂಪಾಭಾವಪ್ರತ್ಯಕ್ಷವಾಗುತ್ತದೆಂದು ತೋರಿಸುತ್ತಾನೆ. 'ವಾಯೌ—' ಇತಿ. ಹೀಗೆಯೇ 'ಪಾಷಾಣದಲ್ಲಿ (ಕಲ್ಲು) ಸೌರಭವಿರುವುದಾದರೆ ಆಗ ಅದು ಘ್ರಾಣದಿಂದ ಉಪಲಬ್ಧವಾಗುತ್ತಿತ್ತು' 'ಬೆಲ್ಲದಲ್ಲಿ ಕಹಿ ಇರುವುದಾದರೆ ರಸನೇಂದ್ರಿಯದಿಂದ ಪ್ರತೀತವಾಗುತ್ತಿತ್ತು' 'ಅಗ್ನಿಯಲ್ಲಿ ಅನುಷ್ಣ ಸ್ಪರ್ಶವಿದ್ದಿದ್ದರೆ ತ್ವಗಿಂದ್ರಿಯದಿಂದ ಜ್ಞಾತವಾಗುತ್ತಿತ್ತು' 'ಶ್ರೋತ್ರದಲ್ಲಿ ಶಬ್ದವಿದ್ದಿದ್ದರೆ ಶ್ರೋತ್ರದಿಂದ ಉಪಲಬ್ಧವಾಗುತ್ತಿತ್ತು' 'ಆತ್ಮನಲ್ಲಿ ಸುಖವಿದ್ದಿದ್ದರೆ ಮನಸ್ಸಿನಿಂದ ಉಪಲಬ್ಧವಾಗುತ್ತಿತ್ತು, ಎಂದು ಆಪಾದಿಸಲು ಶಕ್ಯವಿದೆ. ಆದುದರಿಂದ ವಾಯು ಮುಂತಾದವುಗಳಲ್ಲಿ ರೂಪಾದ್ಯಭಾವಪ್ರತ್ಯಕ್ಷಗಳು ಆಯಾಯ ಇಂದ್ರಿಯಗಳಿಂದ ಆಗುತ್ತವೆ. ಆದಿ ಪದದಿಂದ 'ಬೆಳಕಿನಲ್ಲಿ ಉದ್ಭೂತಸ್ಪರ್ಶವಿದ್ದಿದ್ದರೆ ಆಗ ತ್ವಗಿಂದ್ರಿಯದಿಂದ ಉಪಲಬ್ಧವಾಗುತ್ತಿತ್ತು' ಎಂದು ಆಪಾದಿಸಲು ಬರುವುದರಿಂದ ಪ್ರಭೆಯಲ್ಲಿ ಉದ್ಭೂತಸ್ಪರ್ಶಾಭಾವಪ್ರತ್ಯಕ್ಷವು ತ್ವಗಿಂದ್ರಿಯದಿಂದ ಆಗುತ್ತದೆಂದು ತಿಳಿಯಬೇಕು. 'ಸಂಸರ್ಗಾಭಾವ—' ಇತಿ. ಈಗ ಸಂಸರ್ಗಾ

ಭಾವಪ್ರತ್ಯಕ್ಷದಲ್ಲಿಯೂ, ಅನ್ಯೋನ್ಯಾಭಾವಪ್ರತ್ಯಕ್ಷದಲ್ಲಿಯೂ ಪ್ರತ್ಯೇಕಯೋಗ್ಯತೆಯನ್ನು ತೋರಿಸುತ್ತಾನೆ. ಪ್ರಾಗಭಾವ, ಪ್ರಧ್ವಂಸಾಭಾವ, ಅತ್ಯಂತಾಭಾವಗಳೆಂದು ಸಂಸರ್ಗಾ ಭಾವವು ಮೂರುವಿಧವಾಗಿ ಹೇಳಿದೆ. ಈ ಸಂಸರ್ಗಾಭಾವಪ್ರತ್ಯಕ್ಷದಲ್ಲಿ ಪ್ರತಿಯೋಗಿ ಯಾದ ಘಟಾದಿಗಳ ಪ್ರತ್ಯಕ್ಷಯೋಗ್ಯತಾ ಅಪೇಕ್ಷಿತವಾಗಿದೆ. ಯಾವ ಇಂದ್ರಿಯದಿಂದಲೇ ಆಗಲೀ ಪ್ರತಿಯೋಗಿಯು ಪ್ರತ್ಯಕ್ಷಯೋಗ್ಯವಾಗಿರಬೇಕು. ಆಗ ಆ ಪ್ರತಿಯೋಗಿಯ ಪ್ರಾಗಭಾವವಾಗಲೀ, ಪ್ರಧ್ವಂಸಾಭಾವವಾಗಲೀ, ಅತ್ಯಂತಾಭಾವವಾಗಲೀ ಪ್ರತ್ಯಕ್ಷ ವಿಷಯವಾಗುತ್ತದೆ. ಪ್ರತಿಯೋಗಿಯಾದ ಘಟಾದಿಗಳು ಇಂದ್ರಿಯಗೋಚರವಾದರೆ ಆಗ ಸಂಸರ್ಗಾಭಾವದ ಪ್ರತ್ಯಕ್ಷವಿಲ್ಲ. ಸಂಸರ್ಗಾಭಾವಭಿನ್ನವಾದ ಅನ್ಯೋನ್ಯಾಭಾವದ ಪ್ರತ್ಯಕ್ಷದಲ್ಲಿ ಅಭಾವಾಧಿಕರಣದ ಪ್ರತ್ಯಕ್ಷಯೋಗ್ಯತೆಯು ಅವಶ್ಯವಾಗಿದೆ. ಅಭಾವಾಧಿ ಕರಣವು ಪ್ರತ್ಯಕ್ಷಯೋಗ್ಯವಾದರೆ (ಪ್ರತಿಯೋಗಿಯು ಪ್ರತ್ಯಕ್ಷಯೋಗ್ಯವಾಗದಿದ್ದರೂ ತೊಂದರೆ ಇಲ್ಲ) ಆಗ ಅನ್ಯೋನ್ಯಾಭಾವದ ಪ್ರತ್ಯಕ್ಷವಾಗುತ್ತದೆ. ಇದಕ್ಕೆ ಫಲ ತೋರಿಸುತ್ತಾನೆ. 'ಅತಃ—' ಇತಿ. 'ಸ್ತಂಭಃ ಪಿಶಾಚೋನ' ಎಂಬಲ್ಲಿ ಪ್ರತ್ಯಕ್ಷ ಯೋಗ್ಯವಾದ ಸ್ತಂಭದಲ್ಲಿ (ಅಧಿಕರಣವಾದ ಸ್ತಂಭವು ಚಾಕ್ಷುಷ ಪ್ರತ್ಯಕ್ಷಯೋಗ್ಯ ವಾಗಿದೆ.) ಪ್ರತ್ಯಕ್ಷಕ್ಕೆ ಯೋಗ್ಯವಾಗದಿದ್ದರೂ ಪಿಶಾಚದ ಅಭಾವಪ್ರತ್ಯಕ್ಷವಿಷಯ ವಾಗುತ್ತದೆ.

ಏವಂ ಪ್ರತ್ಯಕ್ಷಂ ಲೌಕಿಕಾಲೌಕಿಕಭೇದೇನ ದ್ವಿವಿಧಮ್ । ತತ್ರ ಲೌಕಿಕ ಪ್ರತ್ಯಕ್ಷೇ ಷೋಢಾ ಸನ್ನಿಕರ್ಷೋ ವರ್ಣಿತಃ ಃ ಅಲೌಕಿಕ ಸನ್ನಿಕರ್ಷಸ್ತ್ವಿದಾನೀ ಮುಚ್ಯತೇ

**ಅಲೌಕಿಕಸ್ತು ವ್ಯಾಪಾರಸ್ತ್ರಿವಿಧಃ ಪರಿಕೀರ್ತಿತಃ ।**
**ಸಾಮಾನ್ಯಲಕ್ಷಣೋ ಜ್ಞಾನಲಕ್ಷಣೋ ಯೋಗಜಸ್ತಥಾ ॥ ೬೩ ॥**

ವ್ಯಾಪಾರಃ ಸನ್ನಿಕರ್ಷಃ । ಸಾಮಾನ್ಯಲಕ್ಷಣ ಇತಿ । ಸಾಮಾನ್ಯಂ ಲಕ್ಷಣಂ ಯಸ್ಯೇ ತ್ಯರ್ಥಃ । ತತ್ರ ಲಕ್ಷಣ ಪದೇನ ಯದಿ ಸ್ವರೂಪಮುಚ್ಯತೇ, ತದಾ ಸಾಮಾನ್ಯ ಸ್ವರೂಪಾ ಪ್ರತ್ಯಾಸತ್ತಿರಿತ್ಯರ್ಥೋಲಭ್ಯತೇ । ತಚ್ಚೇಂದ್ರಿಯಸಂಬದ್ಧವಿಶೇಷ್ಯಕ ಜ್ಞಾನೇ ಪ್ರಕಾರೀಭೂತಂ ಬೋಧ್ಯಮ್ । ತಥಾಹಿ

ಅಲೌಕಿಕ ವ್ಯಾಪಾರವು ಮೂರುವಿಧವಾಗಿ ಹೇಳಿದೆ. ಧೂಮತ್ವಾದಿಪ್ರಕಾರವೇ ಸಾಮಾನ್ಯಲಕ್ಷಣಾಪ್ರತ್ಯಾಸತ್ತಿಯೆಂದು ಮುಂದೆ ಹೇಳುತ್ತೇನೆ. ತಜ್ಜನ್ಯತ್ವೇ ಸತಿ ತಜ್ಜನ್ಯ ಜನಕತ್ವರೂಪ ವ್ಯಾಪಾರಲಕ್ಷಣವು ಅದರಲ್ಲಿ ಬರುವುದಿಲ್ಲ. ಧೂಮತ್ವವು ಇಂದ್ರಿಯಜನ್ಯವಲ್ಲ. ಆದುದರಿಂದ ಇಲ್ಲಿ ವ್ಯಾಪಾರವೆಂದರೆ ಸನ್ನಿಕರ್ಷವೆಂದು ತಿಳಿಯ ಬೇಕು

ಸಮಾನಾನಾಂ ಭಾವಃ ಸಾಮಾನ್ಯಮ್. ಆಗಂತುಕವಲ್ಲದ ನಿತ್ಯವಾದ ಧರ್ಮ. ದ್ರವ್ಯಗುಣಕರ್ಮಗಳಲ್ಲಿರುತ್ತದೆಂದು ಹಿಂದೆ ಹೇಳಿದೆ. ಘಟತ್ವ, ಪೃಥಿವೀತ್ವ ಮುಂತಾದ ಜಾತಿಯೇ ಸಾಮಾನ್ಯ. ಲಕ್ಷಣ ಪದಕ್ಕೆ ಸ್ವರೂಪ, ವಿಷಯವೆಂದು ಎರಡು ಅರ್ಥ ತೋರುತ್ತದೆ. ಇಲ್ಲಿ ಸ್ವರೂಪಾರ್ಥವನ್ನಂಗೀಕರಿಸಿದ್ದಾನೆ. ಲಕ್ಷ್ಯತೇ ವ್ಯವಚ್ಛಿದ್ಯತೇ ಇತಿ ಲಕ್ಷಣಮ್. ಅಸಾಧಾರಣಧರ್ಮವಾಗುತ್ತದೆ. ಇವರಿಂದ ಒಂದು ವಸ್ತುವು ಇತರ ವಸ್ತುವಿನಿಂದ ವ್ಯಾವೃತ್ತಿಹೊಂದುತ್ತದೆ. ಘಟತ್ವದಿಂದ ಘಟವು ಪಟದಿಂದ ವ್ಯಾವೃತ್ತವಾಗಿರುತ್ತದೆ. ಸಾಮಾನ್ಯಂ ಲಕ್ಷಣಂ ಯಸ್ಯ. ಸಾಮಾನ್ಯ (ಜಾತಿ) ರೂಪ ವಾದ ಪ್ರತ್ಯಾಸತ್ತಿಯೆಂದರ್ಥ. ಪ್ರತ್ಯಾಸತ್ತಿಯೆಂದರೆ ಸಂಬಂಧ. ಇದೇ ಮೊದಲಿನ ಅಲೌಕಿಕಸನ್ನಿಕರ್ಷವಾಗುತ್ತದೆ. 'ತಚ್ಚ—' ಇತಿ. ಈ ಸಾಮಾನ್ಯಸ್ವರೂಪವು 'ಇಂದ್ರಿಯ—' ಇತಿ.

ಇಂದ್ರಿಯ ಸಂಬದ್ಧವಾದದ್ದು ವಿಶೇಷ್ಯ. ಅದು ಉಳ್ಳದ್ದು ಜ್ಞಾನ. (ಇಂದ್ರಿಯ ಸಂಬದ್ಧಂ ವಿಶೇಷ್ಯಂ ಯಸ್ಯ) ಆ ಜ್ಞಾನದಲ್ಲಿ ಪ್ರಕಾರವಾಗಿ ತೋರುವುದು. ಧೂಮ ತ್ವಾದಿ ಪ್ರಕಾರವೇ ಸಾಮಾನ್ಯಲಕ್ಷಣ ಪ್ರತ್ಯಾಸತ್ತಿಯಾಗುತ್ತದೆ. ಘಟಾದಿಗಳಲ್ಲಿ ಚಕ್ಷುಃ ಸನ್ನಿಕರ್ಷವಾದೊಡನೆ 'ಅಯಂಘಟಃ' 'ಅಯಂ ಧೂಮಃ' ಇತ್ಯಾದಿ ಘಟಧೂಮಾದಿ ವಿಷಯಕ ಪ್ರತ್ಯಕ್ಷವಾಗುತ್ತದೆ. ಘಟಾದಿಗಳಿಗೆ ಚಕ್ಷುಃ ಸಂಯೋಗವೇ ಈ ಪ್ರತ್ಯಕ್ಷಕ್ಕೆ ಕಾರಣವಾಗುತ್ತದೆ. ಇದು ಲೌಕಿಕಸನ್ನಿಕರ್ಷವೆಂದು ಹಿಂದೆ ಹೇಳಿದೆ. ಈ ಸನ್ನಿಕರ್ಷ ದಿಂದ ಉಂಟಾದ ಜ್ಞಾನವು ಘಟ, ಘಟತ್ವ ಎರಡನ್ನೂ ವಿಷಯೀಕರಿಸುತ್ತದೆ. ಎರಡೂ ಆ ಜ್ಞಾನದಲ್ಲಿ ವಿಷಯವಾಗಿ ತೋರುತ್ತವೆಯೆಂದರ್ಥ. ಈ ಜ್ಞಾನವು ಘಟವನ್ನು ವಿಶೇಷ್ಯ ರೂಪದಿಂದಲೂ, ಘಟತ್ವವನ್ನೂ, ಪ್ರಕಾರರೂಪದಿಂದಲೂ ವಿಷಯೀಕರಿಸುತ್ತದೆ. ಇದನ್ನೇ ಮೂಲದಲ್ಲಿ 'ಯತ್ರೇಂದ್ರಿ —' ಎಂಬುದರಿಂದ ವಿವರಿಸುತ್ತಾನೆ.

'ಅಯಂ ಘಟಃ' ಎಂಬ ಲೌಕಿಕಸನ್ನಿಕರ್ಷದಿಂದ ಹುಟ್ಟಿದ ಇಂದ್ರಿಯಸಂಬದ್ಧ ಘಟವಿಶೇಷ್ಯಕಜ್ಞಾನದಲ್ಲಿ ಘಟತ್ವವು ಪ್ರಕಾರ. (ಘಟನಿಷ್ಠವಿಶೇಷ್ಯತಾನಿರೂಪಿತ ಪ್ರಕರತಾ ಘಟತ್ವನಿಷ್ಠಾ) ಹೀಗೆ ಈ ಜ್ಞಾನ ಬಂದ ಮೇಲೆ ಘಟತ್ವರೂಪಸನ್ನಿಕರ್ಷದಿಂದ 'ಸರ್ವೇಘಟಾಃ' ಎಂಬ ಅಲೌಕಿಕ ಪ್ರತ್ಯಕ್ಷಜ್ಞಾನವುಂಟಾಗುತ್ತದೆ. ಎಲ್ಲಾ ಘಟ ಗಳಲ್ಲಿಯೂ ಇಂದ್ರಿಯಸಂಯೋಗವಾಗದಿರುವುದರಿಂದ ಇದು ಅಲೌಕಿಕಜ್ಞಾನವಾಗುತ್ತದೆ. 'ಸ್ವಜನ್ಯಜ್ಞಾನಪ್ರಕಾರೀಭೂತ ಘಟತ್ವವತ್ತಾಸಂಬಂಧೇನ ಸಕಲಘಟವಿಷಯಕಂ ಜ್ಞಾನಮ್. ಘಟತ್ವಪ್ರಕಾರದಿಂದ ಸಕಲಘಟವಿಷಯಕಜ್ಞಾನ ಬರುತ್ತದೆ. ಘಟತ್ವ ಸಾಮಾನ್ಯವು ನಿತ್ಯವಾದುದರಿಂದ ಯಾವಾಗಲೂ ಇರುತ್ತದೆ. ಆದುದರಿಂದ ಯಾವಾ ಗಲೂ ಸಕಲಘಟವಿಷಯಕಜ್ಞಾನ ಬರಲಿ ಎಂದು ಆಪಾದಿಸಲು ಬರುವುದರಿಂದ ಕೇವಲ ಪ್ರಕಾರ ಹೇಳಿಲ್ಲ. 'ಇಂದ್ರಿಯಸಂಬಂಧ—' ಎಂದು ವಿಶಿಷ್ಟರೂಪದಿಂದ ಹೇಳಿದೆ. ಇದನ್ನೇ ಮುಂದೆ ವಿವರಿಸುತ್ತಾನೆ.

ಯತ್ರೇಂದ್ರಿಯಸಂಯುಕ್ತೋ ಧೂಮಾದಿಸ್ತದ್ವಿಶೇಷಕಂ ಧೂಮ ಇತಿ ಜ್ಞಾನಂ ಯತ್ರ ಜಾತಂ ತತ್ರಜ್ಞಾನೇ ಧೂಮತ್ವಂ ಪ್ರಕಾರಃ ತತ್ರ ಧೂಮತ್ವೇನ ಸನ್ನಿಕರ್ಷೇಣ ಧೂಮಾ ಇತ್ಯೇವಂರೂಪಂ ಸಕಲಧೂಮವಿಷಯಕಂ ಜ್ಞಾನಂ ಜಾಯತೇ । ಅತ್ರ ಯದಿ ಇಂದ್ರಿಯಸಂಬಂದ್ಧಮಿತ್ಯೇವೋಚ್ಯತೇ ತದಾ ಧೂಲೀಪಟಲೇ ಧೂಮತ್ವ ಭ್ರಮಾನಂತರಂ ಸಕಲಧೂಮವಿಷಯಕಂ ಜ್ಞಾನಂ ನ ಸ್ಯಾತ್ । ತತ್ರ ಧೂಮ ತ್ವೇನ ಸಹೇಂದ್ರಿಯಸಂಬಂಧಾಭಾವಾತ್ । ಮನ್ಮತೇ ತು ಇಂದ್ರಿಯಸಂಬದ್ಧಂ ಧೂಲೀಪಟಲಂ, ತದ್ವಿಶೇಷ್ಯಕಂ ಧೂಮ ಇತಿ ಜ್ಞಾನಂ, ತತ್ರ ಪ್ರಕಾರೀಭೂತಂ ಧೂಮತ್ವಂ ಪ್ರತ್ಯಾಸತ್ತಿಃ । ಇಂದ್ರಿಯಸಂಬಂಧಶ್ಚ ಲೌಕಿಕೋಗ್ರಾಹ್ಯಃ । ಇದಂ ಚ ಬಹಿರಿಂದ್ರಿಯಸ್ಥಲೇ । ಮಾನಸಸ್ಥಲೇ । ಜ್ಞಾನಪ್ರಕಾರೀಭೂತಂ ಸಾಮಾನ್ಯ ಮಾತ್ರಂ ಪ್ರತ್ಯಾಸತ್ತಿಃ (ಅತಃ ಶಬ್ದಾದಿನಾ ಯತ್ಕಿಂಚಿತ್‌ಪಿಶಾಚಾದ್ಯುಪಸ್ಥಿತೌ ಮಾನಸಃ ಸಕಲಪಿಶಾಚಾದಿಬೋಧ ಉಪಪದ್ಯತೆ)

'ಯತ್ರ—' ಇತಿ. ಯಾವಾಗ ಧೂಮಾದಿಗಳು (ಆದಿಪದದಿಂದ ಘಟಾದಿ ಗಳನ್ನು ತೆಗೆದುಕೊಳ್ಳಬೇಕು.) ಇಂದ್ರಿಯಸಂಬಂಧಹೊಂದುತ್ತವೆಯೋ ಆಗ ದೂಮ ವಿಶೇಷ್ಯಕವಾದ 'ಧೂಮಃ' ಎಂಬ ಜ್ಞಾನವುಂಟಾಗುತ್ತದೆ. ಆ ಜ್ಞಾನದಲ್ಲಿ ಧೂಮತ್ವವು ಪ್ರಕಾರ. (ಪ್ರಕಾರವಿಧಯಾ ತತ್ರ ಭಾಸತೇ.) ಆಗ ಧೂಮತ್ವರೂಪ ಅಲೌಕಿಕಸನ್ನಿ ಕರ್ಷದಿಂದ ಅತೀತಾನಾಗತಗಳಾದ, ಇಂದ್ರಿಯಸಂಬದ್ಧವಾಗದಿರುವ ಧೂಮತ್ವಕ್ಕೆ ಆಶ್ರಯಗಳಾದ ಸಕಲಧೂಮಗಳ ಜ್ಞಾನವುಂಟಾಗುತ್ತದೆ. ಆಸಕಲಧೂಮಗಳಲ್ಲಿಯೂ ಧೂಮತ್ವವೆಂಬುದು ಅನುಗತವಾಗಿರುತ್ತದೆ. ಒಂದು ಧೂಮದಲ್ಲಿ ಚಕ್ಷುರಿಂದ್ರಿಯ ಸಂಬಂಧವುಂಟಾಗಿದ್ದರೂ 'ಧೂಮಾಃ' ಎಂಬ ಸಕಲಧೂಮಜ್ಞಾನ ಬರುತ್ತದೆ. ಈ ಜ್ಞಾನದಲ್ಲಿ 'ಸ್ವಜನ್ಯಪ್ರಕಾರೀಭೂತಧೂಮತ್ವವತ್ತ್ವಂ' ಎಂಬ ಅಲೌಕಿಕಸನ್ನಿಕರ್ಷವೇ ಕಾರಣ.

ಮೊದಲು ನಮ್ಮೆದುರಿಗಿರುವ ಧೂಮದ ಜ್ಞಾನವುಂಟಾಗುತ್ತದೆ. ಇದು ಲೌಕಿಕ ಜ್ಞಾನ. ಆಮೇಲೆ ಎರಡನೆಯ ಕ್ಷಣದಲ್ಲಿ ಸಕಲಧೂಮವಿಷಯಕಚಾಕ್ಷುಷಜ್ಞಾನವುಂ ಟಾಗುತ್ತದೆ. ಇದಕ್ಕೆ ಹಿಂದೆ ಹೇಳಿದ ಸಂಬಂಧವೇ ಕಾರಣ. ಸ್ವಂ—ಚಕ್ಷುರಾದಿ ಇಂದ್ರಿಯಗಳು. ಸ್ವಜನ್ಯಂ ಯಜ್ಜ್ಞಾನಂ 'ಅಯಂ ಧೂಮಃ' ಎಂಬ ಲೌಕಿಕಸನ್ನಿಕರ್ಷ ದಿಂದ ಉಂಟಾದ ಜ್ಞಾನ. ಅಲ್ಲಿ ಪ್ರಕಾರೀಭೂತಂ । ಅಂದರೆ ಧೂಮತ್ವ. ತದ್ವತ್ತಾ—ಧೂಮತ್ವಧರ್ಮಸಂಬಂಧವು ಎಲ್ಲಾಧೂಮಗಳಲ್ಲಿಯೂ ಇರುತ್ತದೆ. ಈ ಧೂಮತ್ವವು ಯಾವಾಗ ಇಂದ್ರಿಯಸಂಬದ್ಧ ಧೂಮಾದಿವಿಶೇಷ್ಯಕ ಧೂಮತ್ವಾದಿ ಪ್ರಕಾರಕಜ್ಞಾನನಿರೂಪಿತಪ್ರಕಾರತಾವಿಶಿಷ್ಟವಾದರೆ ಆಗ ಮಾತ್ರ ಸಕಲಧೂಮವಿಷಯಕ ಜ್ಞಾನ ಬರುತ್ತದೆ. ಈರೀತಿಪ್ರಕಾರತಾವಿಶಿಷ್ಟವಾಗದಿದ್ದರೆ ಆಗ ಸನ್ನಿಕರ್ಷವಾಗುವುದಿಲ್ಲ.

ಈ ರೀತಿ ಗುರುವಾಗಿ ಲಕ್ಷಣ ಹೇಳಿದ್ದಕ್ಕೆ ಪ್ರಯೋಜನವನ್ನು ತೋರಿಸುತ್ತಾನೆ.

'ಯತ್ರ—' ಇತಿ. ಇಂದ್ರಿಯಸಂಬದ್ಧಪ್ರಕಾರತ್ವೇನ ಪ್ರತ್ಯಾಸತ್ತಿ ಹೇಳಿದರೆ ಯದ್ಯಪಿ ಲಾಘವವಾಗುತ್ತದೆ. ಹಿಂದಿನ ಸ್ಥಳದಲ್ಲಿ ಪ್ರತ್ಯಕ್ಷವೂ ಆಗುವುದು. ಆದರೆ ಪುರೋವೃತ್ತಿ (ಎದುರಿಗಿರುವ) ಧೂಲೀಪಟಲ (ಧೂಳಿನರಾಶಿ) ದಲ್ಲಿ 'ಅಯಂ ಧೂಮಃ' ಎಂಬ ಭ್ರಮಾತ್ಮಕಜ್ಞಾನವುಂಟಾಗುತ್ತದೆ. ಈ ಜ್ಞಾನ ಬಂದಮೇಲೆ 'ಧೂಮಾಃ' ಎಂಬ ಸಕಲಧೂಮವಿಷಯಕಪ್ರತ್ಯಕ್ಷವು ಬರಲಾರದು. ಅಲ್ಲಿ ಕಾರಣ ತೋರಿಸುತ್ತಾನೆ- 'ಧೂಮತ್ವೇನ—' ಇತಿ. ಧೂಮದಲ್ಲಿರುವ ಧೂಮತ್ವಸಾಮಾನ್ಯದೊಡನೆ ಇಂದ್ರಿಯ ಸಂಬಂಧವಿರುವುದಿಲ್ಲ. ಚಕ್ಷುಃ ಸಂಯುಕ್ತಸಮವಾಯಸನ್ನಿಕರ್ಷ ಅಲ್ಲಿ ಇರುವುದಿಲ್ಲ. ಇಂದ್ರಿಯಸಂಬಂಧವು ಕೇವಲ ಧೂಮವೆಂದು ತಿಳಿದ ಧೂಲಿಪಟಲದಲ್ಲಿ ಆಗಿದೆ. ಧೂಮತ್ವಕ್ಕಾಗಲಿಲ್ಲ. ಆದುದರಿಂದ ಸಕಲಧೂಮವಿಷಯಕಜ್ಞಾನವು ಬರಲಾರದು. ಹಿಂದೆ ಹೇಳಿದಂತೆ 'ಇಂದ್ರಿಯಸಂಬದ್ಧವಿಶೇಷ್ಯಕಜ್ಞಾನಪ್ರಕಾರೀಭೂತಧೂಮತ್ವವತ್ತಾ' ಸಂಬಂಧ ಹೇಳಿದರೆ ಸಕಲಧೂಮಜ್ಞಾನವು ಬಂದೇ ಬರುತ್ತದೆ. ಇಂದ್ರಿಯಸಂಬದ್ಧವಾದದ್ದು ಧೂಲೀಪಟಲ. ತದ್ವಿಶೇಷ್ಯಕಜ್ಞಾನವೆಂದರೆ ಧೂಮಭ್ರಮದಿಂದ 'ಅಯಂ ಧೂಮಃ' ಎಂಬ ಜ್ಞಾನ. ಅಲ್ಲಿ ಧೂಮತ್ವಪ್ರಕಾರಕತ್ವ ಇದ್ದೇ ಇದೆ. ಈರೀತಿಯಾದ ಧೂಮತ್ವಪ್ರತ್ಯಾಸತ್ತಿಯಿಂದ ಆಮೇಲೆ ಸಕಲಧೂಮವಿಷಯಕಜ್ಞಾನವು ಬಂದೇ ಬರುತ್ತದೆ. 'ಇದಂಚ—' ಇತಿ. ಇಂದ್ರಿಯಸಂಬದ್ಧವಿಶೇಷ್ಯಕಜ್ಞಾನಪ್ರಕಾರೀಭೂತ ಸಾಮಾನ್ಯಪ್ರತ್ಯಾಸತ್ತಿಯೆಂದು ಯಾವ ಅಲೌಕಿಕಸನ್ನಿಕರ್ಷ ಹೇಳಿದೆಯೋ ಅದರ ಉಪಯೋಗವು ಕೇವಲ ಚಕ್ಷುರಾದಿ ಬಹಿರಿಂದ್ರಿಯಸ್ಥಲದಲ್ಲಿ ಮಾತ್ರವೆಂದು ತಿಳಿಯಬೇಕು. 'ಮಾನಸಸ್ಥಲೇ—' ಇತಿ. ಮಾನಸಾಲೌಕಿಕಪ್ರತ್ಯಕ್ಷವಿಷಯದಲ್ಲಿ ಕೇವಲ ಜ್ಞಾನಪ್ರಕಾರೀಭೂತಸಾಮಾನ್ಯವೇ ಪ್ರತ್ಯಾಸತ್ತಿಯೆಂದು ತಿಳಿಯಬೇಕು. ಜ್ಞಾನದಲ್ಲಿ ವಿಶೇಷಣವಾದ ಸಾಮಾನ್ಯಪ್ರತ್ಯಾಸತ್ತಿಯೆಂದರ್ಥ. ಹೀಗೆ ವಿಭಾಗಿಸಿರುವುದಕ್ಕೆ ಪ್ರಯೋಜನ ತೋರಿಸುತ್ತಾನೆ. 'ಅತಃ—' ಇತಿ. 'ಅತ್ರ ವಟೇ ಪಿಶಾಚಃ' (ಈ ಆಲದಮರದಲ್ಲಿ ಪಿಶಾಚಿ ಇದೆ) ಎಂಬ ಶಾಬ್ದಜ್ಞಾನ ಬಂದಿರುತ್ತದೆ. ಇದು ಪ್ರತ್ಯಕ್ಷ ಯೋಗ್ಯವಲ್ಲ. ಈ ಶಾಬ್ದಜ್ಞಾನಬಂದಮೇಲೆ 'ಸರ್ವೇಪಿಶಾಚಾಃ ಪಿಶಾಚತ್ವವಂತಃ ಎಂಬ ಸಕಲಪಿಶಾಚವಿಷಯಕ ಮಾನಸಬೋಧ ಬರುತ್ತದೆ. ಎಲ್ಲಾ ಕಡೆಯಲ್ಲಿಯೂ 'ಇಂದ್ರಿಯಸಂಬಂಧ—' ಇತ್ಯಾದಿ ಪ್ರತ್ಯಾಸತ್ತಿ ಹೇಳಿದರೆ ಇಲ್ಲಿ ಇಂದ್ರಿಯಸಂಬಂಧವಿಲ್ಲ ವಾದುದರಿಂದ ಸಕಲಪಿಶಾಚವಿಷಯಕ ಜ್ಞಾನ ಬಾರದೇ ಹೋಗಬೇಕಾಗುತ್ತದೆ. ಮಾನಸಸ್ಥಳದಲ್ಲಿ 'ಜ್ಞಾನಪ್ರಕಾರ—' ಎಂದುದರಿಂದ ಶಾಬ್ದಜ್ಞಾನದಲ್ಲಿ ಪಿಶಾಚತ್ವವು ಪ್ರಕಾರವಾದುದರಿಂದ ಅದಕ್ಕೆ ಪ್ರತ್ಯಾಸತ್ತಿತ್ವವು ಕೂಡುತ್ತದೆ. ಮನೋಜನ್ಯ ಜ್ಞಾನ ಪ್ರಕಾರೀಭೂತಪಿಶಾಚತ್ವವತ್ತಾಸಂಬಂಧದಿಂದ ಸಕಲಪಿಶಾಚವಿಷಯಕಾಲೌಕಿಕ ಸಾಕ್ಷಾತ್ಕಾರವಾಗುತ್ತದೆ.

**ಪರಂ ತು ಸಮಾನಾನಾಂ ಭಾವಃ ಸಾಮಾನ್ಯಮ್ । ತಚ್ಚ ಕ್ವಚಿನ್ನಿತ್ಯಂ ಧೂಮ**

ತ್ವಾದಿಃ, ಕ್ವಚಿಚ್ಚಾನಿತ್ಯಂ ಘಟಾದಿ। ಯತ್ರೈಕೋ ಘಟಃ ಸಂಯೋಗೇನ ಭೂತಲೇ ಸಮವಾಯೇನ ಕಪಾಲೇ ಜ್ಞಾತಸ್ತದನಂತರಂ ಸರ್ವೇಷಾಮೇವ ತದ್ಘಟವತಾಂ ಭೂತಾದೀನಾಂ ಕಪಾಲಾದೀನಾಂ ವಾ ಜ್ಞಾನಂ ಭವತಿ ತತ್ರೇಂದ ಬೋಧ್ಯಮ್। ಪರಂತು ಸಾಮಾನ್ಯಂ ಯೇನ ಸಂಬಂಧೇನ ಜ್ಞಾಯತೇ ತೇನ ಸಂಬಂಧೇನಾಧಿಕರಣಾನಾಂ ಪ್ರತ್ಯಾಸತ್ತಿಃ। ಕಿಂತು—ಯತ್ರ ತದ್ ಘಟನಾಶಾನಂತರಂ ತದ್ ಘಟವತಃ ಸ್ಮರಣಂ ಜ್ಞಾತಂ, ತತ್ರ ಸಾಮಾನ್ಯಲಕ್ಷಣಯಾಸರ್ವೇಷಾಂ ತದ್ ಘಟವತಾಂ ಭಾನಂ ನ ಸ್ಯಾತ್। ಸಾಮಾನ್ಯಸ್ಯ ತದಾನೀಮಭಾವಾತ್। ಕಿಂಚೇಂದ್ರಿಯಸಂಬದ್ಧವಿಶೇಷ್ಯಕಂ ಘಟ ಇತಿ ಜ್ಞಾನಂಯತ್ರಜಾತಂ, ತತ್ರ ಪರದಿನೇ ಇಂದ್ರಿಯಸಂಬಂಧಂ ವಿನಾಪಿ ತಾದೃಶಜ್ಞಾನಪ್ರಕಾರೀಭೂತ ಸಾಮಾನ್ಯಸ್ಯ ಸತ್ತ್ವಾತ್ತಾದೃಶಂ ಜ್ಞಾನಂ ಕುತೋ ನ ಜಾಯತೇ, ತಸ್ಮಾತ್ಸಾಮಾನ್ಯವಿಷಯ ಕು ಜ್ಞಾನಂ ಪ್ರತ್ಯಾಸತ್ತಿರ್ನತು ಸಾಮಾನ್ಯಮಿತ್ಯಾಹ

**ಆಸತ್ತಿರಾಶ್ರಯಾಣಾಂ ತು ಸಾಮಾನ್ಯಜ್ಞಾನಮಿಷ್ಯತೇ।**

ಆಸತ್ತಿಃ ಪ್ರತ್ಯಾಸತ್ತಿರಿತ್ಯರ್ಥಃ। ತಥಾ ಚ ಸಾಮಾನ್ಯಲಕ್ಷಣಮಿತ್ಯತ್ರ ಲಕ್ಷಣಮಿತ್ಯಸ್ಯ ವಿಷಯೋಽರ್ಥಃ। ತೇನ ಸಾಮಾನ್ಯವಿಷಯಕಂ ಜ್ಞಾನಂ ಪ್ರತ್ಯಾಸತ್ತಿರಿತ್ಯರ್ಥೋ ಲಭ್ಯತೇ ॥

ಸಾಮಾನ್ಯಪದವು ಪಾರಿಭಾಷಿಕ (ಜಾತಿಗೆ ಹೆಸರು) ವೆಂದು ಇದುವರೆಗೆ ಹೇಳಿದ್ದಾಯಿತು. ಈಗ ಅದು ಯೌಗಿಕಪದವೆಂದು ಇನ್ನೊಂದು ರೀತಿಯಿಂದ ವ್ಯಾಖ್ಯಾನ ಮಾಡುತ್ತಾನೆ. 'ಪರಂತು—' ಇತಿ. ಸಮಾನಗಳ ಭಾವ ಸಾಮಾನ್ಯ. ಇದು ನಿತ್ಯ, ಅನಿತ್ಯವೆಂದು ಎರಡು ವಿಧ. ಧೂಮತ್ವಾದಿ ಸಾಮಾನ್ಯವು ನಿತ್ಯ. ಘಟಾದಿಸಾಮಾನ್ಯವು ಅನಿತ್ಯ. ಅನಿತ್ಯ ಸಾಮಾನ್ಯ ವಿಷಯದಲ್ಲಿ ವಿಶೇಷ ತೋರಿಸುತ್ತಾನೆ. 'ಯತ್ರ—' ಇತಿ. 'ಭೂತಲೇ ಸಂಯೋಗೇನ ಜ್ಞಾತಃ,' 'ಕಪಾಲೇ (ಸ್ವಾವಯವೇ) ಸಮವಾಯೇನ ಜ್ಞಾತಃ, ಎಂದು ಬೇರೆ ಬೇರೆಯಾಗಿ ತಿಳಿಯಬೇಕು. ಒಂದು ಪ್ರದೇಶದಲ್ಲಿ ಸಂಯೋಗ ಸಂಬಂಧದಿಂದ ಘಟವಿರುತ್ತದೆ. ಘಟದ ಅವಯವವಾದ ಯಾವುದೋ ಒಂದು ಕಪಾಲದಲ್ಲಿ ಸಮವಾಯದಿಂದ ಘಟವಿರುತ್ತದೆ. ಆಗ 'ಭೂತಲಂ ಸಂಯೋಗೇನ ಘಟವತ್' 'ಕಪಾಲಃ ಸಮವಾಯೇನ ಘಟವಾನ್' ಎಂಬ ಲೌಕಿಕ ಪ್ರತ್ಯಕ್ಷಜ್ಞಾನ ಬರುತ್ತದೆ. ಆದರ ಎರಡನೆಯ ಕ್ಷಣದಲ್ಲಿ 'ಸರ್ವಾಣಿ ಭೂತಲಾನಿ ಸಂಯೋಗೇನ ಘಟವಂತಿ' 'ಸರ್ವೇ ಕಪಾಲಾಃ ಸಮವಾಯೇನ ಘಟವಂತಃ' ಎಂಬ ಅಲೌಕಿಕಜ್ಞಾನವುಂಟಾಗುತ್ತದೆ. ಈ ಜ್ಞಾನದಲ್ಲಿ ಅನಿತ್ಯವಾದ ಸಾಮಾನ್ಯವೇ (ಘಟರೂಪ ಅನಿತ್ಯ ಸಾಮಾನ್ಯದಿಂದ) ಪ್ರತ್ಯಾಸತ್ತಿಯಾಗುತ್ತದೆ. ಭೂತಲಾದಿ ಪದದಿಂದ ಸಂಯೋಗಸಂಬಂಧದಿಂದ ತದ್ ಘಟಾಧಿಕರಣಗಳಾದ ದ್ರವ್ಯಾಂತರವನ್ನು ತೆಗೆದುಕೊಳ್ಳಬೇಕು. ಈ ವಿಷಯದಲ್ಲಿ ಇನ್ನೂ

ವಿಶೇಷವನ್ನು ತೋರಿಸುತ್ತಾನೆ. 'ಪರಂತು—' ಇತಿ. ಸಾಮಾನ್ಯವು ಯಾವ ಸಂಬಂಧ ದಿಂದ ತಿಳಿಯಲ್ಪಡುವುದೋ ಅದೇ ಸಂಬಂಧದಿಂದ ಅಧಿಕರಣಗಳ ಪ್ರತ್ಯಾಸತ್ತಿಯನ್ನು ತಿಳಿಯಬೇಕು.

ಸಾಮಾನ್ಯದ ಅಧಿಕರಣದಲ್ಲಿ ಯಾವ ಸಂಬಂಧದಿಂದ ಆ ಸಾಮಾನ್ಯವು ಜ್ಞಾತ ವಾಗುತ್ತದೋ, ಅದೇ ಸಂಬಂಧದಿಂದ ಆ ಅಧಿಕರಣಕ್ಕೆ ಸಮಾನವಾದ ಇತರಾಧಿಕರಣಗಳ ಅಲೌಕಿಕ ಪ್ರತ್ಯಕ್ಷವಾಗುತ್ತದೆ. ಆ ಸಂಬಂಧವೇ ಕಾರಣವಾಗುತ್ತದೆಯೆಂದರ್ಥ. ಹೀಗೆ ಹೇಳದಿದ್ದರೆ ಸಮವಾಯಸಂಬಂಧದಿಂದ ಜ್ಞಾನದಲ್ಲಿ ಪ್ರಕಾರವಾದ ಘಟತ್ವ ಸಾಮಾನ್ಯವು ಕಾಲಾಕಾಶಾದಿ ಪದಾರ್ಥಗಳ ಅಲೌಕಿಕ ಸಾಕ್ಷಾತ್ಕಾರಕ್ಕೆ ಕಾರಣವಾಗ ಬೇಕಾಗುತ್ತದೆ. ಆದರೆ ಸಕಲ ಘಟಾಧಿಕರಣಸಾಕ್ಷಾತ್ಕಾರವಾಗುವುದೇ ವಿನಾ ಕಾಲಾ ಕಾಶಾದಿಗಳ ಪ್ರತ್ಯಕ್ಷ ಉಂಟಾಗುವುದಿಲ್ಲ. ಘಟತ್ವಾದಿ ಸಾಮಾನ್ಯವು ಘಟಾದಿ ಅಧಿಕರಣ ಗಳಲ್ಲಿ ಸಮವಾಯಸಂಬಂಧದಿಂದ ಜ್ಞಾತವಾಗುವುದರಿಂದ ಸಕಲ ಘಟಗಳ ಅಲೌಕಿಕ ಸಾಕ್ಷಾತ್ಕಾರ ಮಾತ್ರ ಆಗುತ್ತದೆ.

ಇದುವರೆಗೆ ಪ್ರಾಚೀನ ಮತದಿಂದ ಜ್ಞಾಯಮಾನಸಾಮಾನ್ಯವೇ (ಜ್ಞಾನದಲ್ಲಿ ಪ್ರಕಾರವಾಗಿ ತೋರುವ ಸಾಮಾನ್ಯವೇ) ಪ್ರತ್ಯಾಸತ್ತಿಯೆಂದು ತೋರಿಸಿದ್ದಾಯಿತು. ಹೀಗೆ ಅಂಗೀಕರಿಸಿದರೆ ದೋಷ ಬರುತ್ತದೆಂದು, ಸಾಮಾನ್ಯಜ್ಞಾನವೇ ಪ್ರತ್ಯಾಸತ್ತಿ ಯೆಂದು ನವೀನ ಮತದಂತೆ ತಿಳಿಯಬೇಕೆಂದೂ, ವಿಶದಪಡಿಸುತ್ತಾನೆ. 'ಕಿಂತು—' ಇತಿ. 'ಯತ್ರ—' ಇತಿ. ಒಂದು ಭೂತಲದಲ್ಲಿ ಘಟಜ್ಞಾನ ಬಂದಿರುತ್ತದೆ. ಅಲ್ಲಿ ಆ ಘಟವೇ ನಷ್ಟವಾಗುತ್ತದೆ. ತದ್‌ಘಟನಾಶಾನಂತರಂ—ಭೂತಲಾದ್ಯಧಿಕರಣಕ್ಕೆ ಘಟಧ್ವಂಸವಾದ ಉತ್ತರಕ್ಷಣದಲ್ಲಿ. 'ತದ್‌ಘಟ—' ಇತಿ. 'ತದ್ಭೂತಲಂ ಘಟವ ದಾಸೀತ್ ಎಂಬ ಸ್ಮರಣೆ ಬರುತ್ತದೆ. (ಹಿಂದೆ ಈ ಭೂತಲವು ಘಟದಿಂದ ಕೂಡಿತ್ತು) ಅಲ್ಲಿ ಸಾಮಾನ್ಯಲಕ್ಷಣ ಪ್ರತ್ಯಾಸತ್ತಿಯಿಂದ (ಜ್ಞಾನ ಪ್ರಕಾರವಾದ ಘಟರೂಪ ಅನಿತ್ಯ ಸಾಮಾನ್ಯಜ್ಞಾನದಿಂದ) ಘಟೀಯಸಕಲಾಧಿಕರಣವಿಷಯತಾಲೌಕಿಕಜ್ಞಾನವು ಬರ ಲಾರದು. ('ಸರ್ವಾಣಿ ಭೂತಲಾನಿ ಸಂಯೋಗೇನ ಘಟವಂತಿ' ಎಂಬ ಜ್ಞಾನ) ಏಕೆಂದರ ಅಲ್ಲಿ ಘಟರೂಪ ಸಾಮಾನ್ಯಪ್ರತ್ಯಾಸತ್ತಿಯೇ ಇರುವುದಿಲ್ಲ. (ಘಟರೂಪ ಅನಿತ್ಯ ಸಾಮಾನ್ಯವಿಲ್ಲ.) ಸಾಮಾನ್ಯವೇ ಪ್ರತ್ಯಾಸತ್ತಿಯೆಂದರೆ ಇನ್ನೂ ಒಂದು ದೋಷ ವನ್ನು ತೋರಿಸುತ್ತಾನೆ. 'ಕಿಂಚ—' ಇತಿ. 'ಅಯಂ ಘಟಃ' ಎಂಬ ಇಂದ್ರಿಯ ಸಂಬದ್ಧವಿಶೇಷ್ಯಕಜ್ಞಾನವು ಮೊದಲಿನ ದಿನ ಬಂದಿರುತ್ತದೆ. ಎರಡನೇದಿನದಲ್ಲಿ ಇಂದ್ರಿಯ ಸಂಬಂಧವಿಲ್ಲದಿದ್ದರೂ (ಚಕ್ಷುರಿಂದ್ರಿಯಸಂಯುಕ್ತಸಮವಾಯರೂಪ ಸನ್ನಿಕರ್ಷ) ಜ್ಞಾನ ಪ್ರಕಾರೀಭೂತಸಾಮಾನ್ಯವು (ಘಟತ್ವಜಾತಿ ನಿತ್ಯವಾದುದರಿಂದ) 'ಸರ್ವೇಘಟಾಃ ಘಟತ್ವವಂತಃ' ಎಂಬ ಜ್ಞಾನ ಏಕೆ ಉಂಟಾಗಬಾರದು ? ಜ್ಞಾನಕಾರಣಸಾಮಗ್ರಿ (ಘಟತ್ವಸಾಮಾನ್ಯ) ಇರುವಾಗ ಜ್ಞಾನ ಬರಲೇಬೇಕು. 'ತಸ್ಮಾತ್—' ಇತಿ. ಹೀಗೆ ಜ್ಞಾಯಮಾನಸಾಮಾನ್ಯವೇ ಸನ್ನಿಕರ್ಷವೆಂದು ಅಂಗೀಕರಿಸಿದರೆ ಈ ರೀತಿ ದೋಷ

ಬರುವುದರಿಂದ ಸಾಮಾನ್ಯವಿಷಯಕಜ್ಞಾನವೇ ಪ್ರತ್ಯಾಸತ್ತಿಯೆಂದು ತಿಳಿಯಬೇಕು. (ಸಾಮಾನ್ಯವನ್ನು ವಿಷಯೀಕರಿಸುವ ಜ್ಞಾನವೆಂದರ್ಥ.) ಇದೇ ಮೊದಲಿನ ಅಲೌಕಿಕ ಸನ್ನಿಕರ್ಷವಾಗುತ್ತದೆಂದು ಕಾರಿಕೆಯಲ್ಲಿ ಹೇಳಿದೆ. 'ಆಸತ್ತಿಃ—' ಇತಿ. ಸಾಮಾನ್ಯ ಜ್ಞಾನವೇ ಇಂದ್ರಿಯಾಸನ್ನಿಕೃಷ್ಟಗಳಾದ (ಇಂದ್ರಿಯಸಂಬಂಧ ಎಲ್ಲಿ ಆಗಿದೆಯೋ ತಜ್ಜಾತೀಯಗಳಾದ ಇಂದ್ರಿಯಸಂಬಂಧವಾಗಿರುವ ಅಧಿಕರಣಗಳ) ಆಶ್ರಯಗಳ ಅಲೌಕಿಕ ಸಾಕ್ಷಾತ್ಕಾರದಲ್ಲಿ ಸನ್ನಿಕರ್ಷವಾಗುತ್ತದೆಂದು ತಾತ್ಪರ್ಯ. ಆಸತ್ತಿಯೆಂದರೆ ಪ್ರತ್ಯಾಸತ್ತಿ— ಸನ್ನಿಕರ್ಷವೆಂದರ್ಥ. 'ಇದನ್ನೇ ತಥಾಚ—' ಎಂದು ಮುಕ್ತಾವಳಿಯಲ್ಲಿ ವಿವರಿಸು ತ್ತಾನೆ. ಈ ರೀತಿಯಾದ ನವೀನರ ಸಿದ್ಧಾಂತದಲ್ಲಿ ಸಾಮಾನ್ಯಲಕ್ಷಣವೆಂಬಲ್ಲಿ ಲಕ್ಷಣ ಪದಕ್ಕೆ ಹಿಂದಿನಂತೆ ಸ್ವರೂಪವೆಂದರ್ಥವಲ್ಲ. ವಿಷಯವೆಂದು ಅರ್ಥಮಾಡಬೇಕು. 'ಸಾಮಾನ್ಯಂ ಲಕ್ಷಣಂ—ವಿಷಯಃ ಯಸ್ಯತತ್ ಸಾಮಾನ್ಯವಿಷಯಕಮ್. ಆಗ ಇಂದ್ರಿಯಸಂಬದ್ಧ ವಿಶೇಷ್ಯಕವಾಗಿಯೂ, ಸಾಮಾನ್ಯವಿಷಯಕವಾಗಿಯೂ ಇರುವ ಜ್ಞಾನವು ಪ್ರತ್ಯಾಸತ್ತಿಯೆಂದು ತಿಳಿಯಬೇಕು. ಹೀಗೆ ಸನ್ನಿಕರ್ಷ ಹೇಳಿರುವುದರಿಂದ ಹಿಂದೆ ಹೇಳಿದ ಸ್ಮರಣಸ್ಥಳದಲ್ಲಿ ದೋಷಬರುವುದಿಲ್ಲ. 'ಘಟತ್ವ ಪ್ರಕಾರಕಪ್ರತ್ಯಕ್ಷತ್ವಂ' ಕಾರ್ಯತಾವಚ್ಛೇದಕವೆಂದೂ, ಸ್ವವಿಷಯಕಘಟತ್ವಜ್ಞಾನವೇ ಕಾರಣತಾವಚ್ಛೇದಕವೆಂದೂ ತಿಳಿಯಬೇಕು.

ಒಂದು ಘಟವನ್ನು ನೋಡಿದ ಮೇಲೆ 'ಸಕಲಘಟಗಳೂ ಘಟತ್ವದಿಂದಕೂಡಿವೆ' ಎಂಬ ಜ್ಞಾನವುಂಟಾಗುತ್ತದೆ. ಅಲ್ಲಿ ಘಟತ್ವಸಾಮಾನ್ಯಜ್ಞಾನವೇ (ಪ್ರತ್ಯಾಸತ್ತಿ) ಸನ್ನಿ ಕರ್ಷವೆಂದು ತಿಳಿಯಬೇಕು. ಈ ಸನ್ನಿಕರ್ಷವೇ ಅತೀತಾನಾಗತ, ಇಂದ್ರಿಯಾಸಂಬದ್ಧ ಸಕಲಘಟವಿಷಯಕಾಲೌಕಿಕಪ್ರತ್ಯಕ್ಷವನ್ನು ಹುಟ್ಟಿಸಿಕೊಡುತ್ತದೆಂದು ತಾತ್ಪರ್ಯ. (ಜ್ಞಾನವಿಷಯವಾದ) ಜ್ಞಾಯಮಾನ್ಯಸಾಮಾನ್ಯವೇ ಪ್ರತ್ಯಾಸತ್ತಿಯೆಂದು ರಘು ನಾಥಾದಿಪ್ರಾಚೀನರ ಸಿದ್ಧಾಂತ. ಸಾಮಾನ್ಯವಿಷಯಕಜ್ಞಾನವೇ ಪ್ರತ್ಯಾಸತ್ತಿಯೆಂದು ನವೀನರ ಸಿದ್ಧಾಂತ.

**ತದಿಂದ್ರಿಯಜತದ್ಧರ್ಮಬೋಧಸಾಮಗ್ರ್ಯಪೇಕ್ಷ್ಯತೇ ॥ ೯೪ ॥**

ನನು—ಚಕ್ಷುಃಸಂಯೋಗಾದಿಕಂ ವಿನಾಪಿ ಸಾಮಾನ್ಯಜ್ಞಾನಂ ಯತ್ರ ವರ್ತತೇ ತತ್ರ ಸಕಲಘಟಾದೀನಾಂ ಚಾಕ್ಷುಷಾದಿಪ್ರತ್ಯಕ್ಷಂ ಸ್ಯಾದತ ಆಹ—ತದಿತಿ । ಅಸ್ಯಾರ್ಥಃ —ಯದಾ ಬಹಿರಿಂದ್ರಿಯೇಣ ಸಾಮಾನ್ಯಲಕ್ಷಣಯಾ ಜ್ಞಾನಂ ಜನನೀಯಂ ತದಾ ಯತ್ ಕಿಂಚಿದ್ಧರ್ಮಿಣಿ ತತ್ಸಾಮಾನ್ಯಸ್ಯ ತದಿಂದ್ರಿಯಜನ್ಯಜ್ಞಾನಸ್ಯ ಸಾಮಗ್ರೀ ಅಪೇಕ್ಷಿತಾ, ಸಾ ಚ ಸಾಮಗ್ರೀ ಚಕ್ಷುಃಸಂಯೋಗಾಲೋಕ ಸಂಯೋ ಗಾದಿಕಮ್ । ತೇನಾಂಧಕಾರಾದೌ ಚಕ್ಷುರಾದಿನಾ ತಾದೃಶಂ ಜ್ಞಾನಂ ನ ಜಾಯತೇ ॥ ೯೪ ॥

ಸಾಮಾನ್ಯಜ್ಞಾನವು ಅಲೌಕಿಕಸನ್ನಿಕರ್ಷವಷ್ಟೆ. ಇದು ಅಲೌಕಿಕ ಸ್ವಭಾವ

ದಿಂದ ಇಂದ್ರಿಯಸಂಬಂಧವಿಲ್ಲದಿದ್ದರೂ ಈ ಸನ್ನಿಕರ್ಷದಿಂದ ಸಕಲವ್ಯಕ್ತಿಸಾಕ್ಷಾತ್ಕಾರವಾಗಲಿ ಎಂದು ಆಕ್ಷೇಪ ಬಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ತದಿಂದ್ರಿಯ—' ಇತಿ. ಆಯಾಯ ಇಂದ್ರಿಯಗಳಿಂದ ಉಂಟಾದ ಯಾವಧರ್ಮಜ್ಞಾನವಿದೆಯೋ ಅರ್ಥಾತ್ ಅದೇ ಸಾಮಾನ್ಯಜ್ಞಾನವಾಗಿರುತ್ತದೆಯೋ ಅದಕ್ಕೆ ಚಕ್ಷುರಾಲೋಕಸಂಯೋಗಾದಿ ಸಾಮಗ್ರಿಯೂ ಅಪೇಕ್ಷಿತವಾಗಿ ಪ್ರತ್ಯಕ್ಷಕಾರಣವಾಗುತ್ತದೆ. ಘಟೋತ್ಪತ್ತಿಯಲ್ಲಿ ದಂಡಚಕ್ರಕುಲಾಲಾದಿ ಸಹಕಾರಿಕಾರಣಗಳು ಅಪೇಕ್ಷಿತವಾದಂತೆ ಆಲೋಕಸಂಯೋಗಾದಿಗಳೂ ಅಲೌಕಿಕ ಪ್ರತ್ಯಕ್ಷದಲ್ಲಿ ಸಹಕಾರಿಕಾರಣವಾಗಿರುತ್ತವೆ.

'ನನು—' ಎಂದು ಮುಕ್ತಾವಳಿಯಲ್ಲಿ ಇದೇ ಆಕ್ಷೇಪವನ್ನು ತೋರಿಸಿ ಕಾರಿಕಾರ್ಥವನ್ನು ವಿವರಿಸಿಸುತ್ತಾನೆ. ಚಕ್ಷುಃಸಂಯೋಗ, ಆಲೋಕಸಂಯೋಗಾದಿಗಳು ಇಲ್ಲದೇ ಇರುವಾಗ ಎಲ್ಲಿ ಸಾಮಾನ್ಯ ಜ್ಞಾನ ಮಾತ್ರ ಇರುತ್ತದೆಯೊ. ಅಲ್ಲಿ ಸಕಲ ಘಟಗಳ ಚಾಕ್ಷುಷ ಪ್ರತ್ಯಕ್ಷವಾಗಲಿ ಎಂದು ಆಕ್ಷೇಪಿಸಬಾರದು. ಅಲೌಕಿಕಪ್ರತ್ಯಕ್ಷದಲ್ಲಿ ಕೇವಲ ಸಾಮಾನ್ಯಜ್ಞಾನವೊಂದೇ ಕಾರಣವಾಗುವುದಿಲ್ಲ. ಇತರ ಸಹಕಾರಿಕಾರಣಗಳ ಅಪೇಕ್ಷೆಯೂ ಇರುತ್ತದೆಂದು ತೋರಿಸುತ್ತಾನೆ. 'ಯದಾ—' ಇತಿ. ಬಹಿರಿಂದ್ರಿಯಗಳು ಅಂದರೆ ಮನಸ್ಸು ಬಿಟ್ಟು ಉಳಿದ ಚಕ್ಷುರಾದಿಗಳು. ಇವುಗಳಿಂದಲೂ ಸಾಮಾನ್ಯಜ್ಞಾನರೂಪ ಸನ್ನಿಕರ್ಷದಿಂದಲೂ ಎಲ್ಲಿ ಜ್ಞಾನ ಉಂಟಾಗಬೇಕಾಗಿದೆಯೋ ಆಗ ಯತ್ಕಿಂಚಿದ್ಧರ್ಮಿಣಿ—ಯಾವುದಾದರೂ ಘಟಾದಿಧರ್ಮಿಗಳಲ್ಲಿ (ವ್ಯಕ್ತಿ) ತತ್ಸಾಮಾನ್ಯಸ್ಯ—ಅದರಲ್ಲಿರುವ ಘಟತ್ವಾದಿಗಳ, ತದಿಂದ್ರಿಯಜನ್ಯ ಜ್ಞಾನಸ್ಯ ಸಾಮಗ್ರೀ—ಆ ಇಂದ್ರಿಯಗಳಿಂದ ಉಂಟಾಗುವ ಜ್ಞಾನದ ಆಲೋಕಸಂಯೋಗಾದಿ ಸಾಮಗ್ರಿಯು ಅಪೇಕ್ಷಿತವಾಗಿರುತ್ತದೆ. ಆ ಸಾಮಗ್ರಿಯನ್ನು 'ಸಾ ಚ—' ಎಂಬುದರಿಂದ ತಾನೇ ವಿವರಿಸುತ್ತಾನೆ. ಹೀಗೆ ಸಹಕಾರಿ ಕಾರಣವೂ ಬೇಕೆಂದು ಹೇಳಿದುದಕ್ಕೆ ಫಲ ತೋರಿಸುತ್ತಾನೆ. 'ತೇನ—' ಇತಿ. ಅಂಧಕಾರದಲ್ಲಿ ಚಕ್ಷುಸಂಯೋಗವಿದ್ದರೂ, ಆಲೋಕಸಂಯೋಗವಿಲ್ಲದಿರುವುದರಿಂದ ಸಾಮಾನ್ಯಜ್ಞಾನದಿಂದ ಸಕಲ ಘಟಗಳ ಚಾಕ್ಷುಷಪ್ರತ್ಯಕ್ಷ ಬರುವುದಿಲ್ಲ. ಆಗ ಸ್ಪಾರ್ಶಪ್ರತ್ಯಕ್ಷ ಬರಲು ತೊಂದರೆ ಇಲ್ಲ ||

**ವಿಷಯೀ ಯಸ್ಯ ತಸ್ಯೈವ ವ್ಯಾಪಾರೋ ಜ್ಞಾನಲಕ್ಷಣಃ ||**

ನನು—ಜ್ಞಾನಲಕ್ಷಣಾ ಪ್ರತ್ಯಾಸತ್ತಿರ್ಯದಿ ಜ್ಞಾನರೂಪಾ ಸಾಮಾನ್ಯಲಕ್ಷಣಾಪಿ ಜ್ಞಾನರೂಪಾ ತದಾ ತಯೋರ್ಭೇದೋ ನ ಸ್ಯಾದತ ಆಹ—ವಿಷಯೀತಿ || ಸಾಮಾನ್ಯಲಕ್ಷಣಾ ಪ್ರತ್ಯಾಸತ್ತಿರ್ಹಿ ತದಾಶ್ರಯಸ್ಯ ಜ್ಞಾನಂ ಜನಯತಿ || ಜ್ಞಾನಲಕ್ಷಣಾ ಪ್ರತ್ಯಾಸತ್ತಿಸ್ತು ಯದ್ವಿಷಯಕಂ ಜ್ಞಾನಂ ತಸ್ಯೈವ ಪ್ರತ್ಯಾಸತ್ತಿರಿತಿ | ಅತ್ರಾಯಮರ್ಥಃ—ಪ್ರತ್ಯಕ್ಷೇ ಸನ್ನಿಕರ್ಷಂ ವಿನಾ ಭಾನಂ ನ ಸಂಭವತಿ | ತಥಾ ಚ ಸಾಮಾನ್ಯಲಕ್ಷಣಂ ವಿನಾ ಧೂಮತ್ವೇನ ಸಕಲಧೂಮಾನಾಂ ವಹ್ನಿತ್ವೇನ ಸಕಲವಹ್ನೀನಾಂ ಚ ಭಾನಂ ಕಥಂ ಭವೇತ್, ತದರ್ಥಂ ಸಾಮಾನ್ಯಲಕ್ಷಣಾ ಸ್ವೀಕ್ರಿ

ಯತೇ । ನ ಚ ಸಕಲ ವಹ್ನಿಧೂಮಭಾವಾಭಾವೇ ಕಾ ಕ್ಷತಿರಿತಿ ವಾಚ್ಯಮ್, ಪ್ರತ್ಯಕ್ಷಧೂಮೇವಹ್ನಿಸಂಬಂಧಸ್ಯ ಗೃಹೀತತ್ವಾದನ್ಯಧೂಮಸ್ಯ ಚಾನುಪಸ್ಥಿತತ್ವಾತ್ 'ಧೂಮೋವಹ್ನಿವ್ಯಾಪ್ಯೋ ನವಾ' ಇತಿ ಸಂಶಯಾನಾಪತ್ತೇಃ ॥

ಎರಡನೆಯ ಅಲೌಕಿಕಸನ್ನಿಕರ್ಷವನ್ನು ತೋರಿಸುತ್ತಾನೆ. 'ವಿಷಯೀ—' ಇತಿ. ಯಸ್ಯ—ಯಾವ ಸೌರಭದ ವಿಷಯೀ—ಜ್ಞಾನವಿದೆಯೋ, ತಸ್ಯೈವ—ಅದೇ ಸೌರಭಾದಿಗಳ ವ್ಯಾಪಾರಃ—ಸನ್ನಿಕರ್ಷವು, ಜ್ಞಾನಲಕ್ಷಣಃ—ಜ್ಞಾನರೂಪವಾಗಿರುತ್ತದೆ. ಇದೇ ಎರಡನೆಯ ಅಲೌಕಿಕಸನ್ನಿಕರ್ಷವಾಗುತ್ತದೆ.

'ಏಕಸಂಬಂಧಿಜ್ಞಾನಮಪರಸಂಬಂಧಿಸ್ಮಾರಕಮ್' ಒಂದರ ಜ್ಞಾನವು ಇನ್ನೊಂದರ ಸಂಬಂಧಸ್ಮರಣೆಯನ್ನುಂಟುಮಾಡುತ್ತದೆ ಎಂಬ ನ್ಯಾಯದಿಂದ, ಹಿಂದಿನ ದಿನದಲ್ಲಿ ಒಬ್ಬನು ಒಂದು ಅಂಗಡಿಯಲ್ಲಿ ಒಂದು ಗಂಧದಮರದ ತುಂಡನ್ನು ಮೂಸಿ 'ಸುರಭಿಚಂದನಂ' ಎಂದು ನಿಶ್ಚಯಿಸಿರುತ್ತಾನೆ; ಅವನೇ ಮರುದಿವಸ ಆ ಅಂಗಡಿಗೆ ಹೋದಾಗ ಇನ್ನೊಬ್ಬನು ಈ ಗಂಧದಮರ ಪರಿಮಳವಿದೆಯೇ ಇಲ್ಲವೇ ಎಂದು ಕೇಳುತ್ತಿರುವಾಗ ಅವನು 'ಸುರಭಿ ಚಂದನಂ' ಎಂದು ಹೊಸಬನಿಗೆ ಉತ್ತರ ಹೇಳುತ್ತಾನೆ. ಆಗ ಅವನು ಮೂಸಿ ನೋಡಿ ಹೇಳಿದ ಉತ್ತರವಲ್ಲ. ಕೇವಲ ಕಣ್ಣಿನಿಂದ ನೋಡಿರುತ್ತಾನೆ. ಆದರೂ 'ಸುರಭಿಚಂದನಂ ಎಂಬ ಸೌರಭ, ಚಂದನ, ಚಂದನತ್ವ ಈ ಮೂರನ್ನು ವಿಷಯೀಕರಿಸುವ ಜ್ಞಾನ ಬರುತ್ತದೆ. ಅಲ್ಲಿ ಚಕ್ಷುಃಸಂಯೋಗರೂಪ ಲೌಕಿಕಸನ್ನಿಕರ್ಷದಿಂದ ಚಂದನಜ್ಞಾನವೂ, ಚಕ್ಷುಃಸಂಯೋಗಸಮವಾಯರೂಪ ಲೌಕಿಕಸನ್ನಿಕರ್ಷದಿಂದ ಚಂದನತ್ವಜ್ಞಾನವೂ ಬರುತ್ತದೆ. ಲೌಕಿಕಸನ್ನಿಕರ್ಷದಿಂದ ಬಂದಿರುವುದರಿಂದ ಇದು ಲೌಕಿಕಪ್ರತ್ಯಕ್ಷವಾಗುತ್ತದೆ. ಸೌರಭಜ್ಞಾನ ಮಾತ್ರ ಅಲೌಕಿಕವಾದ ಜ್ಞಾನರೂಪ ಸನ್ನಿಕರ್ಷದಿಂದ ಬರುವುದರಿಂದ ಅಲೌಕಿಕಪ್ರತ್ಯಕ್ಷವಾಗುತ್ತದೆ. ಘ್ರಾಣೇಂದ್ರಿಯದ ಸಂಬಂಧ ಆಗ ಆಗಿರುವುದಿಲ್ಲ. ಚಕ್ಷುಃಸಂಯುಕ್ತಮನಃಸಂಯುಕ್ತ ಆತ್ಮ ಸಮವೇತ ಜ್ಞಾನರೂಪವಾದ, ಅಥವಾ 'ಚಕ್ಷುಃ ....ಸಮವೇತ ಸಂಸ್ಕಾರರೂಪವಾದ ಸನ್ನಿಕರ್ಷವು ಅಲ್ಲಿ ಕಾರಣವಾಗುತ್ತದೆ.

ಚಂದನ ಖಂಡವನ್ನು ಕಣ್ಣಿನಿಂದ ನೋಡಿದೊಡನೆಯೇ ಹಿಂದಿನದಿನವಾದ ಸೌರಭಸ್ಮೃತಿ ಬರುತ್ತವೆ. ಅಥವಾ ಸೌರಭಸ್ಮೃತಿಗೆ ಕಾರಣವಾದ ಸಂಸ್ಕಾರಗಳು ಉದ್ಬುದ್ಧವಾಗುತ್ತದೆ. ಇವು ಜ್ಞಾನರೂಪವಾಗಿವೆ. ಇವು 'ಸುರಭಿಚಂದನಮ್' ಎಂಬ ಸೌರಭವಿಷಯಕ ಚಾಕ್ಷುಷಪ್ರತ್ಯಕ್ಷವನ್ನು ಹುಟ್ಟಿಸುತ್ತವೆ. ಅಲ್ಲಿ ಸೌರಭಪ್ರತ್ಯಕ್ಷವು ಕಣ್ಣಿನಿಂದ ಬರಲಿಲ್ಲ. ಈ ಜ್ಞಾನರೂಪ ಅಲೌಕಿಕ ಸನ್ನಿಕರ್ಷದಿಂದ ಚಾಕ್ಷುಷ ಸೌರಭ ಜ್ಞಾನ ಬಂದಿದೆ.

ಸಾಮಾನ್ಯಜ್ಞಾನವು ಮೊದಲನೆಯ ಅಲೌಕಿಕಸನ್ನಿಕರ್ಷ. ಸ್ಮೃತಿ ಅಥವಾ ಸಂಸ್ಕಾರರೂಪಜ್ಞಾನವು ಎರಡನೆಯ ಅಲೌಕಿಕ ಸನ್ನಿಕರ್ಷ. ಎರಡೂ ಜ್ಞಾನರೂಪವಾದುದರಿಂದ ಇವುಗಳಿಗೆ ಪರಸ್ಪರಭೇದವನ್ನು ವಿಶದಪಡಿಸುತ್ತಾನೆ. 'ಸಾಮಾನ್ಯಲಕ್ಷಣಾ

—' ಇತಿ. ಧೂಮತ್ವಾದಿ ಸಾಮಾನ್ಯ ಜ್ಞಾನರೂಪ ಸಮಾನ್ಯಲಕ್ಷಣಾಪ್ರತ್ಯಾಸತ್ತಿಯು ಧೂಮತ್ವಾದಿಧರ್ಮವಿಶಿಷ್ಟ ಧೂಮಾದಿ ಧರ್ಮಿಗಳ ಪ್ರತ್ಯಕ್ಷವನ್ನುಂಟುಮಾಡುತ್ತದೆ. ಧೂಮಾದಿ ಲೌಕಿಕಸಾಕ್ಷಾತ್ಕಾರವಾದೊಡನೆ ಧೂಮತ್ವಜ್ಞಾನದಿಂದ ಅದೇ ಧೂಮತ ಧರ್ಮಾಕ್ರಾಂತಗಳಾದ ಅತೀತಾನಾಗತಾದಿಸಕಲ ಧೂಮ ಸಾಕ್ಷಾತ್ಕಾರ ಬರುತ್ತದೆ. ಜ್ಞಾನ ಲಕ್ಷಣಾಪ್ರತ್ಯಾಸತ್ತಿಯಾದರೋ ಯಾವುದರ ಅಲೌಕಿಕಸಾಕ್ಷಾತ್ಕಾರವಾಗಿದೆಯೋ ಅದನ್ನು ಮಾತ್ರ ಹುಟ್ಟಿಸಲು ಸನ್ನಿಕರ್ಷವಾಗುತ್ತದೆ. 'ಸುರಭಿ ಚಂದನಂ' ಎಂಬಲ್ಲಿ ಯಾವ ಸೌರಭಜ್ಞಾನವಾಗಿದೆಯೋ ಆ ಒಂದು ಸೌರಭದ ಅಲೌಕಿಕ ಸಾಕ್ಷಾತ್ಕಾರವನ್ನು ಹುಟ್ಟಿಸುತ್ತದೆ. ಅತೀತಾನಾಗತಾದಿ ಸಕಲಸೌರಭ ಜ್ಞಾನವು ಈ ಎರಡನೆಯ ಪ್ರತ್ಯಾಸತ್ತಿಯಿಂದ ಬರುವುದಿಲ್ಲ. ಜ್ಞಾನತ್ವರೂಪದಿಂದ ಎರಡೂ ಒಂದಾದರೂ ಭಿನ್ನಭಿನ್ನ ಫಲವನ್ನು ಹುಟ್ಟಿಸಿಕೊಡುವುದರಿಂದ ಪರಸ್ಪರ ಭೇದ ಇದ್ದೇ ಇದೆ. (ವಿಭಿನ್ನಫಲಜನಕತ್ವೇನ ಭಿನ್ನಾವೇವ) ಇದನ್ನೇ ಸ್ಪಷ್ಟಪಡಿಸುತ್ತಾನೆ. 'ಅತ್ರಾಯಮರ್ಥಃ—' ಇತಿ. ಇಲ್ಲಿ (ಸಾಮಾನ್ಯಲಕ್ಷಣಾ, ಜ್ಞಾನಲಕ್ಷಣಾ ಪ್ರತ್ಯಾಸತ್ತಿ ವಿಷಯದಲ್ಲಿ) ಇಷ್ಟು ಅಭಿಪ್ರಾಯವೆಂದು ತಿಳಿಯಬೇಕು. ಯಾವುದೊಂದು ಸನ್ನಿಕರ್ಷವಿಲ್ಲದೇ ಪ್ರತ್ಯಕ್ಷಜ್ಞಾನ ಬರುವುದಿಲ್ಲ. ಸನ್ನಿಕರ್ಷದಲ್ಲಿ ಪ್ರತ್ಯಕ್ಷನಿರೂಪಿತ ವಿಷಯತ್ವವ್ಯಾಪಕತ್ವವಿದೆ. ವ್ಯಾಪಕವಾದ ಸನ್ನಿಕರ್ಷವು ಇಲ್ಲದೇ ಹೋದರೆ ವ್ಯಾಪ್ಯವಾದ ಪ್ರತ್ಯಕ್ಷವಿಷಯವೂ ಇರುವುದಿಲ್ಲ. ಈಗ ಸಾಮಾನ್ಯಲಕ್ಷಣಾಪ್ರತ್ಯಾಸತ್ತಿಯನ್ನು (ಸನ್ನಿಕರ್ಷವನ್ನು) ಅಂಗೀಕರಿಸದಿದ್ದರೆ ಸಕಲ ಧೂಮಾಗ್ನಿಗಳಲ್ಲಿ ಸನ್ನಿಕರ್ಷವಿಲ್ಲದಿರುವುದರಿಂದ 'ಸರ್ವೇ ಧೂಮಾಃ,' 'ಸರ್ವೇ ಅಗ್ನಯಃ' ಎಂಬ ಸಕಲ ಧೂಮಾಗ್ನಿವಿಷಯಕ ಪ್ರತ್ಯಕ್ಷವು ಬಾರದೇ ಹೋಗಬೇಕಾಗುತ್ತದೆ. ಆಗ ಪ್ರತ್ಯಕ್ಷ ವಿಷಯತ್ವವೂ ಸಕಲಧೂಮಾಗ್ನಿಗಳಲ್ಲಿ ಬರುವುದಿಲ್ಲ. ಆದರೆ ಅದು ಬರಬೇಕಾದುದು ಇಷ್ಟವಾಗಿದೆ. ಅದಕ್ಕೋಸ್ಕರ ಧೂಮತ್ವರೂಪದಿಂದ ಸಕಲಧೂಮಗಳ, ವಹ್ನಿತ್ವರೂಪದಿಂದ ಸಕಲವಹ್ನಿಗಳ ಜ್ಞಾನಕ್ಕೋಸ್ಕರ ಸಾಮಾನ್ಯಲಕ್ಷಣ ಸನ್ನಿಕರ್ಷವನ್ನು ಅಂಗೀಕರಿಸಲೇಬೇಕು.

'ನಚ—' ಎಂಬುದರಿಂದ ಆಶಂಕಾಸಮಾಧಾನಗಳನ್ನು ತೋರಿಸುತ್ತಾನೆ. 'ಅಯಂ ಧೂಮಃ' ಎಂಬ ಲೌಕಿಕಸಾಕ್ಷಾತ್ಕಾರ ಬಂದಮೇಲೆ ಸಕಲಧೂಮಾದಿಗಳ ಜ್ಞಾನ ಬಾರದಿದ್ದರೆ ತೊಂದರೆ ಏನು ? ಎಂದು ಆಶಂಕಿಸಬಾರದು. ಪ್ರತ್ಯಕ್ಷಧೂಮೇ—ಇಂದ್ರಿಯ ಸನ್ನಿಕೃಷ್ಟವಾದ ಮಹಾನಸಾದಿಗಳಲ್ಲಿರುವ ಧೂಮದಲ್ಲಿ, ವಹ್ನಿಸಂಬಂಧಸ್ಯ—'ಯತ್ರ ಧೂಮಃ ತತ್ರವಹ್ನಿಃ' ಎಂಬ ವ್ಯಾಪ್ತಿರೂಪಸಂಬಂಧವು, ಗೃಹೀತತ್ವಾತ್—ಕಣ್ಣಿನಿಂದ ಪ್ರತ್ಯಕ್ಷೀಕರಿಸಲ್ಪಟ್ಟದುದರಿಂದ, ಅನ್ಯ ಧೂಮಸ್ಯ—ದೇಶಾಂತರ, ಕಾಲಾಂತರದಲ್ಲಿರುವ (ಪರ್ವತಾದಿಗಳಲ್ಲಿರುವ) ಧೂಮವು ಅನುಪಸ್ಥಿತತ್ವಾತ್—ಚಕ್ಷುಃಸನ್ನಿಕೃಷ್ಟವಾಗದಿರುವುದರಿಂದ, ಧೂಮಃ-ವಾ—ಧೂಮವು ವಹ್ನಿನಿರೂಪಿತ ವ್ಯಾಪ್ಯತಾಶ್ರಯವು ಆಗಿದೆಯೋ ಇಲ್ಲವೋ ಎಂಬ, ಸಂಶಯಃ—ಪಕ್ಷತಾಸಂಪಾದಕಸಂದೇಹವು ಬಾರದೇ ಹೋಗಬೇಕಾಗು

ತ್ತದೆ. ಈ ಸಂಶಯಬಾರದಿದ್ದರೆ ಪರ್ವತಾದಿಗಳಲ್ಲಿ ಧೂಮದಿಂದ ವಹ್ನ್ಯನುಮಾನವೂ ಉಂಟಾಗಲಾರದು ಎಂದು ಅರ್ಥ.

ನಮಗೆ ತೋರುವುದು ಮಹಾನಸದ ಧೂಮ. ಅದರಲ್ಲಿ ಮಾತ್ರ ವಹ್ನಿವ್ಯಾಪ್ತಿ ಸಂಬಂಧವು ಗೃಹೀತವಾಗುವುದರಿಂದ, ಇತರ ಧೂಮಗಳಲ್ಲಿ ಇಂದ್ರಿಯಸಂಬಂಧವಿಲ್ಲದಿರುವುದರಿಂದ ವಹ್ನಿನಿರೂಪಿತವ್ಯಾಪ್ತಿಸಂಬಂಧ ಬಾರದಿರುವುದರಿಂದ 'ಧೂಮಃ ವಹ್ನಿವ್ಯಾಪ್ಯೋ ನವಾ' ಎಂದ ಸಂಶಯ ಬರಲಾರದು. ಪರ್ವತದಲ್ಲಿ ಈ ಸಂಶಯವಿಲ್ಲದಿದ್ದರೆ ಪಕ್ಷತ್ವವೇ ಕೂಡುವುದಿಲ್ಲ. ಆಗ ಅನುಮಾನಕ್ಕೆ ಪ್ರಸಕ್ತಿಯೇ ಇಲ್ಲವೆಂದಾಗುತ್ತದೆ.

ಮನ್ಮತೇ ತು—ಸಾಮಾನ್ಯಲಕ್ಷಣಯಾ ಸಕಲಧೂಮೋಪಸ್ಥಿತೌ ಕಾಲಾಂತರೀಯ ದೇಶಾಂತರೀಯಧೂಮೇ ವಹ್ನಿವ್ಯಾಪ್ಯತ್ವಸಂದೇಹಃ ಭವತಿ। ನ ಚ ಸಾಮಾನ್ಯ ಲಕ್ಷಣಾಸ್ವೀಕಾರೇ ಪ್ರಮೇಯತ್ವೇನ ಸಕಲಪ್ರಮೇಯಜ್ಞಾನೇ ಜಾತೇ ಸಾರ್ವಜ್ಞ್ಯಾಪತ್ತಿರಿತಿ ವಾಚ್ಯಮ್। ಪ್ರಮೇಯತ್ವೇನ ಸಕಲಪ್ರಮೇಯಜ್ಞಾನೇ ಜಾತೇऽಪಿ ವಿಶಿಷ್ಯ ಸಕಲಪದಾರ್ಥಾನಾಮಜ್ಞಾತತ್ವೇನ ಸಾರ್ವಜ್ಞ್ಯಾಭಾವಾತ್। ಏವಂ ಜ್ಞಾನಲಕ್ಷಣಾಯ ಅಸ್ವೀಕಾರೇ ಸುರಭಿ ಚಂದನಮಿತಿ ಜ್ಞಾನೇ ಸೌರಭಸ್ಯ ಭಾನಂ ಕಥಂ ಸ್ಯಾತ್। ಯದ್ಯಪಿ ಸಾಮಾನ್ಯಲಕ್ಷಣಯಾಪಿ ಸೌರಭ ಭಾನಂ ಸಂಭವತಿ, ತಥಾಪಿ ಸೌರಭತ್ವಸ್ಯ ಭಾನಂ ಜ್ಞಾನಲಕ್ಷಣಯಾ। ಏವಂ ಯತ್ರ ಧೂಮತ್ವೇನ ಧೂಲೀಪಟಲಂ ಜ್ಞಾತಂ ತತ್ರ ಧೂಲೀಪಟಲಸ್ಯಾನುವ್ಯವಸಾಯೇ ಭಾನಂ ಜ್ಞಾನಲಕ್ಷಣಯಾ।

ಈಗ ಸಾಮಾನ್ಯಲಕ್ಷಣಾಪ್ರತ್ಯಾಸತ್ತಿಯನ್ನು ಅಂಗೀಕರಿಸಿರುವುದರಿಂದ ಯಾವ ದೋಷವೂ ಇಲ್ಲವೆಂದು ತೋರಿಸುತ್ತಾನೆ. 'ಮನ್ಮತೇ—' ಇತಿ. ಸಾಮಾನ್ಯವಿಷಯಕ ಜ್ಞಾನರೂಪ ಅಲೌಕಿಕ ಸಂಬಂಧದಿಂದ, ಧೂಮತ್ವದಿಂದ ಸಕಲಧೂಮಜ್ಞಾನ ಅಂದರೆ ಇಂದ್ರಿಯಸನ್ನಿಕೃಷ್ಟವಾಗದಿರುವ ಅತೀತಾನಾಗತಾದಿಸಕಲಧೂಮವಿಷಯಕ ಪ್ರತ್ಯಕ್ಷ ಬರುತ್ತದೆ. ಅವುಗಳಲ್ಲಿ ಸರ್ವತ್ರ 'ಅಯಂ ವಹ್ನಿನಿರೂಪಿತವ್ಯಾಪ್ತ್ಯಾಶ್ರಯೋ ನವಾ' ಎಂಬ ಸಂಶಯ ಬಂದೇ ಬರುತ್ತದೆ. ಇದರಿಂದ ಪರ್ವತಾದಿಗಳಲ್ಲಿ ವಹ್ನ್ಯನುಮಾನವೂ ಸಿದ್ಧವಾಗುತ್ತದೆ. ಆದುದರಿಂದ ಸಾಮಾನ್ಯಲಕ್ಷಣಾಪ್ರತ್ಯಾಸತ್ತಿಯನ್ನು ಅಂಗೀಕರಿಸಲೇ ಬೇಕು.

ಹೀಗೆ ಒಪ್ಪಿದ್ದರೆ ದೋಷವನ್ನಾಶಂಕಿಸಿ ಸಮಾಧಾನ ತೋರಿಸುತ್ತಾನೆ. 'ನಚ—' ಇತಿ. ಪ್ರಮೇಯತ್ವೇನ ಸಕಲಪದಾರ್ಥಜ್ಞಾನ ಬಂದರೂ ತತ್ತದ್ವಿಶೇಷರೂಪದಿಂದ ಪದಾರ್ಥಜ್ಞಾನ ಬರುವುದಿಲ್ಲ. ಪ್ರಮೇಯತ್ವಸಾಮಾನ್ಯಜ್ಞಾನದಿಂದ 'ಇಮೇ ಪ್ರಮೇಯಾಃ' ಎಂಬ ಜ್ಞಾನಬರಬಹುದು. ಹೀಗೆ ಬಂದುದರಿಂದ ಅವನು ಸರ್ವಜ್ಞನಾಗಲಾರನು. ಪ್ರಮೇಯತ್ವವ್ಯಾಪ್ಯ ಧೂಮತ್ವಾದಿ ಸಾಮಾನ್ಯಜ್ಞಾನವಿದ್ದರೆ ಸಕಲತತ್ತತ್ಪ

ದಾರ್ಥಜ್ಞಾನ ಬರಬಹುದು. ಹೀಗೆ ಯಾರಿಗೂ ಬರುವುದಿಲ್ಲ. ಆದುದರಿಂದ ದೋಷ ವಿಲ್ಲ.

ಜ್ಞಾನಲಕ್ಷಣಾಪ್ರತ್ಯಾಸತ್ತಿಯನ್ನು ಅಂಗೀಕರಿಸುವುದರಲ್ಲಿಯೂ ಫಲ ತೋರಿಸು ತ್ತಾನೆ. 'ಏವಂ—' ಇತಿ. 'ಸುರಭಿ ಚಂದನಮ್' ಎಂದು ಜ್ಞಾನ ಬಂದಾಗ ಸೌರಭ ಜ್ಞಾನ ಬರುವುದು ಹೇಗೆ ? ಅಲ್ಲಿ ಚಕ್ಷುಃಸಂಯೋಗವಿಲ್ಲ. ಇದು ಹಿಂದೆ ವಿವರಿಸಿದೆ. ಸ್ಮೃತಿರೂಪಜ್ಞಾನಸಂಬಂಧದಿಂದ ಸೌರಭವಿಷಯಕಾಲೌಕಿಕಚಾಕ್ಷುಷಪ್ರತ್ಯಕ್ಷ ಬರು ತ್ತದೆ. 'ಯದ್ಯಪಿ—' ಇತಿ. ಸೌರಭತ್ವ ಸಾಮಾನ್ಯದಿಂದ ಸಕಲ ಸೌರಭಜ್ಞಾನ ಬರ ಬಹುದು. ಆದರೆ 'ಸುರಭಿ ಚಂದನಂ—' ಎಂಬ ಚಾಕ್ಷುಷಜ್ಞಾನದಲ್ಲಿ ಸ್ವರೂಪದಿಂದ ಸೌರಭತ್ವ ಜ್ಞಾನವು ಕೇವಲ ಜ್ಞಾನಲಕ್ಷಣಸನ್ನಿಕರ್ಷದಿಂದಲೇ ಬರುತ್ತದೆ. ಏಕೆಂದರೆ ಅಲ್ಲಿ ಯಾವುದೊಂದು ಧರ್ಮಾಂತರವೂ ಜ್ಞಾತವಾಗಲಿಲ್ಲ. ಧರ್ಮಾಂತರವು ಗೃಹೀತ ವಾಗಿದ್ದರೆ ಸಾಮಾನ್ಯಲಕ್ಷಣಾಪ್ರತ್ಯಾಸತ್ತಿಯಿಂದ ಬರುತ್ತಿತ್ತು.

ಜ್ಞಾನಲಕ್ಷಣಾಪ್ರತ್ಯಾಸತ್ತಿಯನ್ನು ಅಂಗೀಕರಿಸುವುದರಿಂದ ಇನ್ನೊಂದು ಪ್ರಯೋಜನವನ್ನು ತೋರಿಸುತ್ತಾನೆ. 'ಏವಂ—' ಇತಿ ಧೂಲೀಪಟಲದಲ್ಲಿ ಧೂಮತ್ವ ಧರ್ಮಪುರಸ್ಕಾರದಿಂದ ಧೂಲೀಪಟಲವು ಧೂಮತ್ವರೂಪದಿಂದ ಗೃಹೀತವಾಗುತ್ತದೆ. ಧೂಲಿಯಸಮುದಾಯವನ್ನು ನೋಡಿ 'ಅಯಂ ಧೂಮಃ' ಎಂದು ಒಬ್ಬನು ಭ್ರಮೆ ಯಿಂದ ತಿಳಿಯುತ್ತಾನೆ. ಆಮೇಲೆ ಅವನಿಗೆ 'ಧೂಮಮಹಂ ಜಾನಾಮಿ' ಎಂಬ ಅನು ವ್ಯವಸಾಯಜ್ಞಾನವು ಬರುತ್ತದೆ. ಜ್ಞಾನವಿಷಯಕಜ್ಞಾನಕ್ಕೆ ಅನುವ್ಯವಸಾಯವೆಂದು ಹೆಸರು. (ಒಂದು ಜ್ಞಾನದಲ್ಲಿ ಒಂದು ಜ್ಞಾನವು ವಿಷಯವಾಗಿರುತ್ತದೆ.) ಈ ಅನುವ್ಯವಸಾಯಜ್ಞಾನದಲ್ಲಿ ಧೂಲೀಪಟಲದ ಜ್ಞಾನವು ಜ್ಞಾನಲಕ್ಷಣಾಪ್ರತ್ಯಾಸತ್ತಿ ಯಿಂದ ಬರುತ್ತದೆ. ಏಕೆಂದರೆ ಇಲ್ಲಿ ಧೂಲೀಪಟಲದೊಡನೆ ಮನಸ್ಸಿಗೆ ಲೌಕಿಕಸನ್ನಿ ಕರ್ಷವಾಗಿಲ್ಲ. (ಧೂಮವೆಂದು ತಿಳಿದದ್ದಷ್ಟೆ) ಹಾಗೇನಾದರೂ ಸಂಬಂಧ ಬಂದಿದ್ದರೆ ಸ್ವವಿಷಯಧೂಮತ್ವವತ್ತಾಸಂಬಂಧರೂಪವಾದ ಸಾಮಾನ್ಯಲಕ್ಷಣಾಪ್ರತ್ಯಾಸತ್ತಿಯಿಂದಲೇ ನಿರ್ವಾಹವಾಗುತ್ತಿತ್ತು. ಎರಡನೆಯಪ್ರತ್ಯಾಸತ್ತಿಅಪೇಕ್ಷೆ ಇರುತ್ತಿರಲಿಲ್ಲ. ಈಗ ಜ್ಞಾನ ಲಕ್ಷಣಾಪ್ರತ್ಯಾಸತ್ತಿಯಿಂದ (ಧೂಮತ್ವೇನ) 'ಧೂಲೀಪಟಲವಿಷಯಕಜ್ಞಾನಪ್ರಕಾರಕ ಧೂಮಜ್ಞಾನವಾನಹಂ' ಎಂಬ ಪ್ರತ್ಯಕ್ಷ ಬಂದು ಆದರಿಂದ ನಿರೂಪಿತವಾದ ವಿಷಯತ್ವವು ಧೂಲೀಪಟಲಕ್ಕೆ ಬರುತ್ತದೆ. ಈ ಅನುವ್ಯವಸಾಯರೂಪಜ್ಞಾನವು ಸ್ವಸಂಯುಕ್ತ (ಮನಃ ಸಂಯುಕ್ತ) ಆತ್ಮಸಮವೇತತ್ವರೂಪ (ಆತ್ಮನಲ್ಲಿ ಜ್ಞಾನವು ಸಮವಾಯದಿಂದ ಇರುತ್ತದೆ.) ಮಾನಸಲೌಕಿಕಸಂಬಂಧದಿಂದ, ಜ್ಞಾನವನ್ನೂ ಜ್ಞಾನವಿಷಯವಾದ ಘಟವನ್ನೂ ವಿಷಯೀಕರಿಸಿ ಹುಟ್ಟುತ್ತದೆ. ಇಲ್ಲಿ ಈ ಅನುವ್ಯವಸಾಯಜ್ಞಾನಕ್ಕೆ ಬಾಹ್ಯಘಟಾದಿ ಪದಾರ್ಥದೊಡನೆ ಯಾವ ಲೌಕಿಕಸಂಬಂಧವೂ ಇರುವುದಿಲ್ಲ. ಸಂಬಂಧವಿಲ್ಲದೇ ಜ್ಞಾನ ಹುಟ್ಟಲಾರದು. ವಿಷಯವನ್ನೂ ಪ್ರಕಾಶಿಸಲಾರದು. ಆದುದರಿಂದ ಅನುವ್ಯವಸಾಯ ಜ್ಞಾನದ ಮೂಲಕ 'ಸ್ವಸಂಯುಕ್ತಾತ್ಮಸಮವೇತಜ್ಞಾನವಿಷಯತ್ವ' ರೂಪವಾದ

ಅಲೌಕಿಕಸಂಬಂಧವನ್ನು ಒಪ್ಪಬೇಕು. ಸ್ವ—ಮನಸ್ಸು. ಇದರಿಂದ ಸಂಯುಕ್ತನಾದವನು ಆತ್ಮನು. ಇವನಲ್ಲಿ ಸಮವೇತವಾದುದು ಜ್ಞಾನ. ಇದರಲ್ಲಿ ವಿಷಯವಾಗಿ ತೋರುವಿಕೆ. ಇದೇ ಜ್ಞಾನಲಕ್ಷಣಾಪ್ರತ್ಯಾಸತ್ತಿ. ಇಲ್ಲಿಯೂ ಘಟಾದಿವಿಷಯಭಾನವು ಸಾಮಾನ್ಯಲಕ್ಷಣಾಪ್ರತ್ಯಾಸತ್ತಿಯಿಂದಲೇ ಸಾಧಿಸಬಹುದೆಂದರೂ, ಘಟತ್ವಾದಿಧರ್ಮ ಜ್ಞಾನವು ಜ್ಞಾನಲಕ್ಷಣಾಪ್ರತ್ಯಾಸತ್ತಿಯಿಂದಲೇ ನಿರ್ವಾಹವಾಗಬೇಕು. ಹೀಗೆಯೇ ಧೂಮತ್ವಧರ್ಮವಿಲ್ಲದ ಧೂಲೀಪಟಲದಲ್ಲಿ ಧರ್ಮತ್ವಪ್ರಕಾರಕಜ್ಞಾನ ಬಂದುದರಿಂದ ಧೂಲೀಪಟಲಾದಿ ಭ್ರಾಂತಿಸ್ಥಳದಲ್ಲಿಯೂ ಧೂಮತ್ವ, ಮತ್ತು ಧೂಮಜ್ಞಾನವು ಜ್ಞಾನ ಲಕ್ಷಣೆಯಿಂದಲೇ ಬರುತ್ತದೆ. ಹಿಂದೆ ಹೇಳಿದಂತೆ ಸ್ವಸಂಯುಕ್ತಾತ್ಮಸಮವೇತಜ್ಞಾನ ವಿಷಯತ್ವರೂಪ ಜ್ಞಾನಲಕ್ಷಣಾಪ್ರತ್ಯಾಸತ್ತಿಯೇ ಕಾರಣವಾಗುತ್ತದೆ.

**ಯೋಗಜೋ ದ್ವಿವಿಧಃ ಪ್ರೋಕ್ತೋ ಯುಕ್ತಯುಂಜಾನಭೇದತಃ ॥ ೬೫ ॥**

ಯೋಗಾಭ್ಯಾಸಜನಿತೋ ಧರ್ಮವಿಶೇಷಃ ಶ್ರುತಿಪುರಾಣಾದಿಪ್ರತಿಪಾದ್ಯ ಇತ್ಯರ್ಥಃ। ಯುಕ್ತಯುಂಜಾನಭೇದತ ಇತಿ। ಯುಕ್ತಯುಂಜಾನರೂಪಯೋಗಿದ್ವೈವಿಧ್ಯಾತ್ ಧರ್ಮಸ್ಯಾಪಿ ದ್ವೈವಿಧ್ಯಮಿತಿ ಭಾವಃ ॥ ೬೫ ॥

**ಯುಕ್ತಸ್ಯ ಸರ್ವದಾ ಭಾನಂ ಚಿಂತಾಸಹಕೃತೋಽಪರಃ ॥**

ಯುಕ್ತಸ್ಯ ತಾವದ್ಯೋಗಜ ಧರ್ಮಸಹಾಯೇನ ಮನಸಾ ಆಕಾಶಪರಮಾಣ್ವಾದಿ ನಿಖಿಲ ಪದಾರ್ಥಗೋಚರಂ ಜ್ಞಾನಂ ಸರ್ವದೈವ ಭವಿತುಮರ್ಹತಿ। ದ್ವಿತೀಯಸ್ಯ ಚಿಂತಾ ವಿಶೇಷೋಽಪಿ ಸಹಕಾರೀತಿ ॥

ಇತಿ ಶ್ರೀ ವಿಶ್ವನಾಥ ಪಂಚಾನನ ಭಟ್ಟಾಚಾರ್ಯವಿರಚಿತಾಯಾಂ
ಸಿದ್ಧಾಂತ ಮುಕ್ತಾವಲ್ಯಾಂ ಪ್ರತ್ಯಕ್ಷಪರಿಚ್ಛೇದಃ ॥ ೧ ॥

ಮೂರನೆಯ ಅಲೌಕಿಕ ಸನ್ನಿಕರ್ಷವನ್ನು ತೋರಿಸುತ್ತಾನೆ. 'ಯೋಗಜ—' ಇತಿ. ಯೋಗಾಜ್ಜಾತಃ ಯೋಗಜಃ' ಯೋಗಾಭ್ಯಾಸದಿಂದ ಉಂಟಾದ ಒಂದು ಧರ್ಮವಿಶೇಷವೇ ಈ ಸನ್ನಿಕರ್ಷವಾಗುತ್ತದೆ. ಚಿತ್ತವೃತ್ತಿನಿರೋಧವೇ ಯೋಗವೆಂದು ಯೋಗಸೂತ್ರದಲ್ಲಿ ಹೇಳಿದೆ. ಧ್ಯಾನಸಮಾಧಿಯೇ ಇದು. ಯುಜ—ಸಮಾಧೌ ಧಾತುವಿನಿಂದ ಯೋಗಶಬ್ದವಾಗಿದೆ. ಇದು ಶ್ರುತಿಪುರಾಣಾದಿಗಳಲ್ಲಿ ಹೇಳಿದೆ. ಈ ಯೋಗಜಪ್ರತ್ಯಾಸತ್ತಿಯು ಯುಕ್ತ, ಯುಂಜಾನ ಭೇದದಿಂದ ಎರಡುರೀತಿಯಾಗಿರುತ್ತದೆ. ಯೋಗಿಗಳಲ್ಲಿ ಯುಕ್ತ, ಯುಂಜಾನ ಎಂದು ಎರಡು ರೀತಿ ಇರುವುದರಿಂದ ಯೋಗಜ ಧರ್ಮವೂ ಎರಡು ವಿಧವಾಗುತ್ತದೆ. ಯುಕ್ತಯೋಗಜ ಸನ್ನಿಕರ್ಷದಿಂದ ಯುಕ್ತ ಯೋಗಿಗೆ ಯಾವಾಗಲೂ ಅವ್ಯಾಹತಗತಿಯಿಂದ ಸಕಲವಿಷಯಕಭಾನವಾಗುತ್ತದೆ.

ಪರಮಾಣು ಆಕಾಶಾದಿಗಳೂ ಅವನಿಗೆ ಗೋಚರಿಸುತ್ತದೆ. ಯುಂಜಾನ ಅಂದರೆ ಯೋಗ ಸಾಧನೆಯಲ್ಲಿರುವವನು. ಆವನಿಗೆ ಸಕಲ ವಿಷಯಭಾನ ಬರಬೇಕಾದರೆ ಚಿಂತಾರೂಪ ಸಹಕಾರಿಕಾರಣದ ಅಪೇಕ್ಷೆಯೂ ಇರುತ್ತದೆ. ಯೋಗಜಸನ್ನಿಕರ್ಷವಿದ್ದರೂ ಸಮಾಧಿ ಯಲ್ಲಿ ಇದ್ದರೆ ಅವನು ಧ್ಯಾನಪರನಾಗಿ ಸಕಲಪದಾರ್ಥವನ್ನು ತಿಳಿಯುತ್ತಾನೆ. ಹೀಗೆ ಇಂದ್ರಿಯಸನ್ನಿಕರ್ಷವಿಲ್ಲದಿದ್ದರೂ ಅಲೌಕಿಕ ಸನ್ನಿಕರ್ಷದಿಂದ ಅಲೌಕಿಕಪ್ರತ್ಯಕ್ಷ ವುಂಟಾಗುತ್ತದೆಂದು ತಿಳಿಯಬೇಕು.

ಹೀಗೆ ಸಿದ್ಧಾಂತ ಮುಕ್ತಾವಳೀ ಕನ್ನಡ ವ್ಯಾಖ್ಯಾನದಲ್ಲಿ
ಪ್ರತ್ಯಕ್ಷಪರಿಚ್ಛೇದವು ಮುಗಿದಿದೆ.

ಓಂ ಶ್ರೀಃ

# ಅನುಮಾನ ಖಂಡಮ್

**ವ್ಯಾಪಾರಸ್ತು ಪರಾಮರ್ಶಃ ಕರಣಂ ವ್ಯಾಪ್ತಿಧೀರ್ಭವೇತ್ ॥ ೬೬ ॥ ಅನುಮಾಯಾಮ್—**

ಪ್ರತ್ಯಕ್ಷಜ್ಞಾನ, ಅದರ ಕಾರಣ, ಕರಣ, ವ್ಯಾಪಾರಾದಿಗಳನ್ನು ವಿವರಿಸಿ ಇಲ್ಲಿ ಅನುಮಿತಿಯೆಂಬ ಎರಡನೆಯ ಯಥಾರ್ಥಜ್ಞಾನವನ್ನು ತೋರಿಸುತ್ತಾನೆ. ಒಂದಾದ ಮೇಲೆ ಒಂದು ವಿಷಯವನ್ನು (ನಿರೂಪಿಸ) ಹೇಳಬೇಕಾದರೆ ಒಂದು ಸಂಬಂಧದ ನಿಯಮ ಇರುತ್ತದೆ. ಈ ಸಂಬಂಧಕ್ಕೆ ಸಂಗತಿಯೆಂದು ಹೆಸರು. 'ಏಕವಾಕ್ಯತಾಪನ್ನತ್ವೇ ಸತಿ ಅನಂತರಾಭಿಧಾನಪ್ರಯೋಜಕಜಿಜ್ಞಾಸಾಜನಕಜ್ಞಾನವಿಷಯತ್ವಮ್' ಸಂಗತಿಲಕ್ಷಣ. ಪ್ರತ್ಯಕ್ಷವನ್ನು ಹೇಳಿದ ಮೇಲೆ 'ಪ್ರತ್ಯಕ್ಷದ ಕಾರ್ಯವೇನು' ಎಂಬ ಪ್ರತ್ಯಕ್ಷಾನಂತರಾಭಿಧಾನಪ್ರಯೋಜಕವಾಗಿರುವ ಒಂದು ಜಿಜ್ಞಾಸೆ ಉಂಟಾಗುತ್ತದೆ. ಈ ಜಿಜ್ಞಾಸಾ ಜನಕಜ್ಞಾನವೆಂದರೆ 'ಪ್ರತ್ಯಕ್ಷಜ್ಞಾನಕಾರ್ಯಂ ಮದಿಷ್ಟಸಾಧನಂ' ಎಂಬ ಜ್ಞಾನ. ತದ್ವಿಷಯ ಅಂದರೆ ಪ್ರತ್ಯಕ್ಷಕಾರ್ಯತ್ವ. (ಅನುಮಾನದಲ್ಲಿರುತ್ತದೆ.) ಈ ರೀತಿಯಿಂದ ಏಕವಾಕ್ಯತ್ವ ಸಂಗತವಾಗುತ್ತದೆ. ಈ ಸಂಗತಿಯು ಆರುವಿಧ.

ಸಪ್ರಸಂಗ ಉಪೋದ್ಘಾತಃ ಹೇತುತಾವಸರಸ್ತಥಾ ।
ನಿರ್ವಾಹಕೈಕಕಾರ್ಯತ್ವೇ ಷೋಢಾ ಸಂಗತಿರಿಷ್ಯತೇ ॥

ಉಪೋದ್ಘಾತಾದಿಭಿನ್ನವಾಗಿ ಸ್ಮರಣಪ್ರಯೋಜಕವಾದ ಸಂಬಂಧಕ್ಕೆ ಪ್ರಸಂಗ ಸಂಗತಿಯೆಂದು ಹೆಸರು. ಪ್ರಕೃತೋಪಪಾದಕವಾದದ್ದು ಉಪೋದ್ಘಾತ. ಉಪಜೀವ್ಯೋಪಜೀವಕಭಾವಕ್ಕೆ ಹೇತುತಾ ಎಂದೂ, 'ಅನಂತರವಕ್ತವ್ಯತ್ವಂ' (ಅವಶ್ಯ ಹೇಳಬೇಕಾದದ್ದು) ಅವಸರವೂ 'ಏಕಪ್ರಯೋಜಕಪ್ರಯೋಜ್ಯತ್ವಂ' (ಎರಡೂ ಒಂದೇ ಪ್ರಯೋಜಕದಿಂದ ಉಂಟಾಗುವವುಗಳು) ನಿರ್ವಾಹಕೈಕ್ಯವೂ, 'ಏಕಕಾರ್ಯಾನುಕೂಲತ್ವಂ' ಕಾರ್ಯೈಕ್ಯಸಂಗತಿಯೂ ಆಗುತ್ತದೆ.

ಪ್ರತ್ಯಕ್ಷವನ್ನು ನಿರೂಪಿಸಿದ ಮೇಲೆ ಅನುಮಿತಿನಿರೂಪಣೆಮಾಡಲು ಕಾರ್ಯಕಾರಣಭಾವರೂಪವಾದ ಉಪಜೀವ್ಯೋಪಜೀವಕಭಾವಸಂಗತಿ ಎಂದು ಹೇಳುತ್ತಾರೆ. ಪ್ರತ್ಯಕ್ಷವನ್ನುಪಜೀವಿಸಿ ಅನುಮಾನ ಬರುತ್ತದೆ. ಕೆಲವರು ಅವಸರಸಂಗತಿಯೆಂದು ಪ್ರತಿಪಾದಿಸುತ್ತಾರೆ. 'ಪ್ರತ್ಯಕ್ಷಮನುಮಿತಿಸ್ತಥಾ—' ಇತ್ಯಾದಿ ಜ್ಞಾನವಿಭಾಜಕವಾಕ್ಯದಿಂದ ಮೊದಲು ಪ್ರತ್ಯಕ್ಷದ ಉಪಸ್ಥಿತಿಯುಂಟಾಗಿದೆ. ಅನುಮಿತಿನಿರೂಪಣದಲ್ಲಿ ಅದು ಪ್ರತಿಬಂಧಕವಾಗುತ್ತದೆ. 'ಕಿಂತತ್ ಪ್ರತ್ಯಕ್ಷಂ' ಎಂದು ಮೊದಲು ಶಿಷ್ಯಜಿಜ್ಞಾಸೆ

ಬರುತ್ತದೆ. ಮೊದಲು ಪ್ರತ್ಯಕ್ಷಸ್ವರೂಪವನ್ನು ಹೇಳಿದ ಮೇಲೆ ಈ ಜಿಜ್ಞಾಸೆಯು ಶಾಂತವಾಗುವುದರಿಂದ ಅನುಮಿತಿನಿರೂಪಣ ಪ್ರತಿಬಂಧಕವೂ ಹೋಗುತ್ತದೆ. ಅನಂತರೋಪಸ್ಥಿತವಾದದ್ದು ಅನುಮಿತಿಯೇ. ಆದುದರಿಂದ ಅದೇನೆಂದು ಜಿಜ್ಞಾಸೆಯುಂಟಾಗಿ ಹೇಳಬೇಕಾಗುತ್ತದೆ. ಆದುದರಿಂದ ಅವಸರ ಸಂಗತಿಯಿಂದ ಅನುಮಿತಿ ನಿರೂಪಿತವಾಗಿದೆಯೆಂದು ಅವರ ತಾತ್ಪರ್ಯ.

ಅನುಮಿತಿತ್ವ ಜಾತಿಯಿಂದ ಕೂಡಿರುವುದು ಅನುಮಿತಿ. 'ಅನುಮಿನೋಮಿ' ಎಂಬ ಅನುಭವಸಿದ್ಧವಾದ ಜಾತಿವಿಶೇಷವೇ ಅನುಮಿತಿತ್ವರೂಪಧರ್ಮ. 'ಪರ್ವತೇ ವಹ್ನಿಜ್ಞಾನಂ ಮೇ ಜಾಯತಾಂ' (ಪರ್ವತದಲ್ಲಿ ವಹ್ನಿಜ್ಞಾನವು ನನಗುಂಟಾಗಲಿ) ಎಂಬ ಇಚ್ಛೆ (ಇದೇ ಅನುಮಿತ್ಸಾ) ಮೊದಲು ಬರುತ್ತದೆ. ಆಗ ಪರ್ವತದಲ್ಲಿ ವಹ್ನಿಗೆ ಲಿಂಗವಾದ (ವಹ್ನಿಜ್ಞಾನವನ್ನು ಹುಟ್ಟಿಸಿಕೊಡುವ) ಧೂಮವನ್ನು ನೋಡಿ, 'ಯತ್ರಧೂಮಃ ತತ್ರಾಗ್ನಿಃ' ಎಂಬ ಸಾಹಚರ್ಯಾನುಭವರೂಪವಾದ. ವಹ್ನಿಧೂಮಗಳ ವ್ಯಾಪ್ತಿಯನ್ನು (ಇದು ಅಡಿಗೆಮನೆ ಮುಂತಾದವುಗಳಲ್ಲಿ ಅನುಭೂತವಾಗಿರುತ್ತದೆ.) ಸ್ಮರಿಸುತ್ತಾನೆ. ಆಗ 'ವಹ್ನಿವ್ಯಾಪ್ಯಧೂಮವಾನಯಂ ಪರ್ವತಃ' (ವಹ್ನಿನಿರೂಪಿತವ್ಯಾಪ್ತಿಯಿಂದ ಕೂಡಿದ ಧೂಮವು ಪರ್ವತದಲ್ಲಿದೆ. ಆ ಧೂಮದಿಂದ ಕೂಡಿರುವ ಪರ್ವತವಿದು) ಎಂಬ ಒಂದು ವಿಶಿಷ್ಟಜ್ಞಾನ ಬರುತ್ತದೆ. ಇದಕ್ಕೆ ಪರಾಮರ್ಶವೆಂದು ಕರೆಯುತ್ತಾರೆ. ಆಮೇಲೆ 'ವಹ್ನಿಮಾನಯಂ' (ಈ ಪರ್ವತವಹ್ನಿಯಿಂದ ಕೂಡಿದೆ.) ಎಂಬ ಜ್ಞಾನ ಹುಟ್ಟುತ್ತದೆ. ಇದೇ ಅನುಮಿತಿರೂಪವಾದ ಜ್ಞಾನ. ಪ್ರತ್ಯಕ್ಷಕ್ಕೆ ಹೇಳಿದಂತೆ ಇದಕ್ಕೂ ಕಾರಿಕೆಯಲ್ಲಿ ಕರಣಾದಿಗಳನ್ನು ತೋರಿಸುತ್ತಾನೆ. ಅನುಮೀಯತೇ ಇತಿ ಅನುಮಾ. ಅನುಮಾಯಾಂ—ಅನುಮಿತಿಯಲ್ಲಿ ಪರಾಮರ್ಶವೆಂಬುದು ವ್ಯಾಪಾರ. ವ್ಯಾಪ್ತಿಜ್ಞಾನದಿಂದ ಜನ್ಯವಾಗಿ ವ್ಯಾಪ್ತಿಜ್ಞಾನದಿಂದ ಹುಟ್ಟಿದ ಅನುಮಿತಿಗೆ ಜನಕವಾಗುವುದರಿಂದ 'ತಜ್ಜನ್ಯತ್ವೇ ಸತಿ ತಜ್ಜನ್ಯಜನಕತ್ವರೂಪ ವ್ಯಾಪಾರಲಕ್ಷಣ ಇದಕ್ಕೆ ಸಂಗತವಾಗುತ್ತದೆ. ವ್ಯಾಪ್ತಿಜ್ಞಾನವೇ ಅಸಾಧಾರಣಕಾರಣವಾಗುವುದರಿಂದ ಕರಣವಾಗುತ್ತದೆ. ಇವುಗಳ ಸ್ವರೂಪವನ್ನು ಮುಂದೆ ವಿವರಿಸುತ್ತಾನೆ—

ಅನುಮಿತಿಂ ವ್ಯುತ್ಪಾದಯತಿ—ವ್ಯಾಪಾರಸ್ತ್ವಿತಿ । ಅನುಮಾಯಾಮನುಮಿತೌ ವ್ಯಾಪ್ತಿಜ್ಞಾನಂ ಕರಣಂ, ಪರಾಮರ್ಶೋ ವ್ಯಾಪಾರಃ । ತಥಾಹಿ—ಯೇನ ಪುರುಷೇಣ ಮಹಾನಸಾದೌ ಧೂಮೇ ವಹ್ನಿವ್ಯಾಪ್ತಿರ್ಗೃಹೀತಾ ಪಶ್ಚಾತ್ ಸ ಏವ ಪುರುಷಃ ಕ್ವಚಿತ್ಪರ್ವತಾದೌ ಅವಿಚ್ಛಿನ್ನಮೂಲಾಂ ಧೂಮಲೇಖಾಂ ಪಶ್ಯತಿ । ತದನಂತರಂ—'ಧೂಮೋವಹ್ನಿವ್ಯಾಪ್ಯಃ' ಇತ್ಯೇವಂ ರೂಪಂ ವ್ಯಾಪ್ತಿಸ್ಮರಣಂ ಭವತಿ । ಪಶ್ಚಾಚ್ಚ 'ವಹ್ನಿವ್ಯಾಪ್ಯ ಧೂಮವಾನಯಂ' ಇತಿ ಜ್ಞಾನಂ ಭವತಿ, ಸ ಏವ 'ಪರಾಮರ್ಶಃ' ಇತ್ಯುಚ್ಯತೇ ।

ತದನಂತರಂ 'ಪರ್ವತೋ ವಹ್ನಿಮಾನ್' ಇತಿ ಜ್ಞಾನಂ, ತದೇ
ವಾನುಮಿತಿಃ || ೬೬ ||

ಹಿಂದೆ ಹೇಳಿದ ಅರ್ಥವೇ ಮುಕ್ತಾವಳಿಯಲ್ಲಿ ವಿವೃತವಾಗಿದೆ. 'ವ್ಯಾಪಾರವತ್ತ್ವೇ ಸತಿ ಅಸಾಧಾರಣಂ ಕಾರಣಂ' ಕರಣಂ ಎಂಬ ಕರಣಲಕ್ಷಣವು ಹಿಂದೆ ಹೇಳಿದೆ. ಕರಣ ವನ್ನು ಮೊದಲು ಹೇಳಿದರೇ ವ್ಯಾಪಾರಜಿಜ್ಞಾಸೆ ಬರುತ್ತದೆ, ಆದುದರಿಂದ ಮೂಲದಲ್ಲಿ ಮೊದಲು ವ್ಯಾಪಾರವನ್ನು ಹೇಳಿದ್ದರೂ ಇಲ್ಲಿ ಕರಣವನ್ನೇ ಮೊದಲು ಹೇಳಿರುತ್ತಾನೆ. ಮಹಾನಸಾದಿಗಳಲ್ಲಿ 'ಧೂಮವಿದ್ದಲ್ಲಿ ವಹ್ನಿ ಇದ್ದೇ ಇರುತ್ತದೆ' ಎಂದು ದೃಢನಿಶ್ಚಯ ಬಂದಿರುತ್ತದೆ. ಹೀಗೆ ಧೂಮದಲ್ಲಿ ವಹ್ನಿವ್ಯಾಪ್ತಿಯು ಗ್ರಹಿಸಲ್ಪಡುತ್ತದೆ. ಆಮೇಲೆ ಅವನೇ ಎಲ್ಲಿಯಾದರೂ ಒಂದು ಪರ್ವತದಲ್ಲಿ ಅವಿಚ್ಛಿನ್ನಮೂಲವುಳ್ಳ ಧೂಮಪಂಕ್ತಿ ಯನ್ನು ನೋಡುತ್ತಾನೆ. ಪರ್ವತದ ಬುಡದಿಂದ ಒಂದೇ ಸಮನೆ ಎದ್ದಿರುವ, ಮಧ್ಯದಲ್ಲಿ ವಿಚ್ಛಿನ್ನವಾಗದಿರುವ ಧೂಮಪಂಕ್ತಿ ಎಂದರ್ಥ. ಮಧ್ಯವಿಚ್ಛಿನ್ನವಾಗಿದ್ದರೆ ಅದಕ್ಕೆ ವಹ್ನಿ ವ್ಯಾಪ್ತಿ ಇಲ್ಲದಿರುವುದರಿಂದ ಅದು ವಹ್ನಿಗೆ ಜ್ಞಾಪಕವಾಗುವುದಿಲ್ಲ. ಆದುದರಿಂದ ಅವಿ ಚ್ಛಿನ್ನಮೂಲವೆಂದಿದೆ. ಈ ರೀತಿಯಾದ ಹೊಗೆ ನೋಡಿದ ಮೇಲೆ 'ಏಕಸಂಬಂಧಿಜ್ಞಾನ ಮಪರಸಂಬಂಧಿಸ್ಮಾರಕಂ' ಎಂಬಂತೆ (ವ್ಯಾಪ್ತಿಸ್ಮರಣೆಯಲ್ಲಿ ಇದು ಉದ್ಬೋಧಕವಾಗು ತ್ತದೆ.) 'ಧೂಮೋ ವಹ್ನಿವ್ಯಾಪ್ಯಃ' ವಹ್ನಿನಿರೂಪಿತವ್ಯಾಪ್ಯತಾದಿಂದ ಕೂಡಿರುವುದು ಧೂಮ ಎಂಬ ವ್ಯಾಪ್ತಿಸ್ಮರಣ ಬರುತ್ತದೆ. (ಯಾವ ವಿಶೇಷಣಗಳಿಂದ ಕೂಡಿದ ಧೂಮವು ವ್ಯಾಪ್ತಿಸಂಬಂಧಿಯಾಗಿ ತಿಳಿಯಲ್ಪಟ್ಟಿದೆಯೋ ಆ ವಿಶೇಷಣಗಳಿಂದ ಕೂಡಿದ ಧೂಮವೇ ವ್ಯಾಪ್ತಿಸ್ಮರಣೆಗೆ ಉದ್ಬೋಧಕವಾಗುವುದರಿಂದ 'ಅನವಚ್ಛಿನ್ನಮೂಲಾಂ' ಎಂದಿದೆ) ಅದರಿಂದ 'ವಹ್ನಿವ್ಯಾಪ್ಯಧೂಮವಾನಯಂ ಪರ್ವತಃ' ಎಂಬ ಪರಾಮರ್ಶ ಜ್ಞಾನವುಂಟಾಗುತ್ತದೆ. ಆಮೇಲೆ 'ಪರ್ವತಃ ವಹ್ನಿಮಾನ್' ಎಂಬ ಅನುಮಿತಿರೂಪ ಜ್ಞಾನ ಬರುತ್ತದೆ. ಹೀಗೆ ಕ್ರಮವಾಗಿ ಒಂದಾದ ಮೇಲೆ ಒಂದು ಜ್ಞಾನವು ಸಕಾರಣ ವಾಗಿ ಬರುತ್ತದೆಂದು ಮೊದಲು ಕ್ರಮವನ್ನು ವಿವರಿಸಿರುತ್ತಾನೆ.

—ಜ್ಞಾಯಮಾನಂ ಲಿಂಗಂ ತು ಕರಣಂ ನಹಿ ||
ಅನಾಗತಾದಿಲಿಂಗೇನ ನ ಸ್ಯಾದನುಮಿತಿಸ್ತದಾ || ೬೭ ||

ಅತ್ರ ಪ್ರಾಚೀನಾಸ್ತು ವ್ಯಾಪ್ಯತ್ವೇನ ಜ್ಞಾಯಮಾನಂ ಲಿಂಗಮನುಮಿತಿಕರಣಮಿತಿ ವದಂತಿ, ತದ್ದೂಷಯತಿ—ಜ್ಞಾಯಮಾನಮಿತಿ | ಲಿಂಗಸ್ಯಾನುಮಿತ್ಯಕರಣತ್ವೇ ಯುಕ್ತಿಮಾಹ—ಅನಾಗತಾದೀತಿ | ಯದಿ ಅನುಮಿತೌ ಲಿಂಗಂ ಕರಣಂ ಸ್ಯಾತ್ತ ದಾಽನಾಗತೇನ ವಿನಷ್ಟೇನ ವಾ ಲಿಂಗೇನ ಅನುಮಿತಿರ್ನಸ್ಯಾತ್ |ಅನುಮಿತಿ ಕರಣಸ್ಯ ಲಿಂಗಸ್ಯ ತದಾನೀಮಭಾವಾತ್ |

ಅನುಮಿತಿಯಲ್ಲಿ ಪರಾಮೃಶ್ಯಮಾನವಾದ ಲಿಂಗವೇ ಕರಣವೆಂಬ ಪ್ರಾಚೀನರಮತವನ್ನು ಖಂಡಿಸುತ್ತಾನೆ. ಜ್ಞಾಯಮಾನ ಅಂದರೆ ಜ್ಞಾನಗೋಚರವಾದ, ಅಥವಾ ವರ್ತಮಾನಕಾಲೀನಜ್ಞಾನ (ಈಗ ಇರುವ ಜ್ಞಾನ) ವಿಷಯವಾದದ್ದೆಂದರ್ಥ. ಜ್ಞಾತವಾದ ಲಿಂಗವೇ ಕರಣವೆಂದು ಪ್ರಾಚೀನರ ಸಿದ್ಧಾಂತ. ಲಿಂಗಪರಾಮರ್ಶ, ಅಥವಾ ಪರಾಮೃಶ್ಯಮಾನಲಿಂಗವು ಅನುಮಿತಿಯಲ್ಲಿ ಕಾರಣವೆಂದರೆ ವಿಶಿಷ್ಟಕ್ಕೆ ಕಾರಣ ಹೇಳಿದಂತಾಗುತ್ತದೆ. ವಿಶಿಷ್ಟಕ್ಕೆ ಕಾರಣತ್ವಜ್ಞಾತವಾದರೆ ವಿಶೇಷಣಕ್ಕೂ ಅದು ಸಿದ್ಧವಾಗುತ್ತದೆ. ಪರಾಮರ್ಶ, ಲಿಂಗ ಎರಡು ವಿಶೇಷಣಗಳಿರುವಾಗ, ವ್ಯಾಪಾರ ಇಲ್ಲದಿರುವುದರಿಂದ ಪರಾಮರ್ಶವುಕರಣವಾಗುವುದಿಲ್ಲ. ಆಗ ಪರಾಮೃಶ್ಯಮಾನವಾದಲಿಂಗವೇ ಕರಣವೆಂದು ಪ್ರಾಚೀನರ ಸಿದ್ಧಾಂತ. ಧೂಮವು ಈಗ ತೋರುತ್ತಿದ್ದರೆ ಮಾತ್ರ ಅದು ಕರಣವೆಂದು ಹೇಳಿದಂತಾಗುತ್ತದೆ. ವಹ್ನಿನಿರೂಪಿತವ್ಯಾಪ್ತ್ಯಾಶ್ರಯಕವಾದ ಲಿಂಗವೇ ಕರಣವೆಂದು ತಾತ್ಪರ್ಯ.

ಇದು ಸಮಂಜಸವಲ್ಲವೆಂದು ನವೀನರು ಖಂಡಿಸುತ್ತಾರೆ. ಈಗ ಜ್ಞಾತವಾಗುವ ಲಿಂಗಮಾತ್ರಕರಣವೆಂದು ಹೇಳಬಾರದು. ಹೀಗೆ ಹೇಳಿದರೆ ಅತೀತ, ಭವಿಷ್ಯತ್ ಕಾಲದ ವ್ಯಾಪ್ಯವಾದ ಧೂಮದಿಂದ ಅನುಮಿತಿ ಬರಲಾರದು. ಯಜ್ಞಶಾಲೆಯಲ್ಲಿ ಈಗ ಧೂಮವಿರುವುದಿಲ್ಲ. ಆದರೂ ಹಿಂದೆ ಅನುಭೂತವಾದ ಧೂಮಜ್ಞಾನದಿಂದ ಅಥವಾ ಮುಂದೆ ಉಂಟಾಗುವ ಧೂಮಜ್ಞಾನದಿಂದ 'ಇಯಂ ಯಜ್ಞಶಾಲಾ—ವಹ್ನಿಮತೀ—(ಭವಿಷ್ಯತಿ) ॥ ಭಾವಿ—ಧೂಮಾತ್ ॥ ವಹ್ನಿಮತೀ (ಆಸೀತ್) —ಭೂತಧೂಮಾತ್' ಎಂಬ ಭಾವಿ ಅಥವಾ ಭೂತಧೂಮದಿಂದ ವಹ್ನಿಯ ಅನುಮಾನವು ಬಾರದೇಹೋಗಬೇಕಾಗುತ್ತದೆ. ಏಕೆಂದರೆ ಆಗ ತಿಳಿಯಲ್ಪಡುವ ಧೂಮವಿರುವುದಿಲ್ಲ. ಭೂತಭವಿಷ್ಯತ್ಕಾಲದಲ್ಲಿರುವ ಧೂಮವು ಜ್ಞಾಯಮಾನವಾಗುವುದಿಲ್ಲ. ಲಿಂಗಜ್ಞಾನವು ಕರಣವೆಂದರೆ ಹಿಂದೆ ಹೇಳಿದಂತೆ ಜ್ಞಾನಲಕ್ಷಣಾಪ್ರತ್ಯಾಸತ್ತಿಯಿಂದ ಯಜ್ಞಶಾಲಾದಿಗಳಲ್ಲಿ (ಪಕ್ಷ) ಲಿಂಗಜ್ಞಾನವಿರುವುದರಿಂದ (ಸ್ವಸಂಯುಕ್ತ ಆತ್ಮಸಮವೇತ ಸ್ಮೃತಿಜ್ಞಾನಸವಿಷಯತ್ವರೂಪ ಅಲೌಕಿಕಸನ್ನಿಕರ್ಷದಿಂದ) ಅನುಮಿತಿಬರಲು ಯಾವ ತೊಂದರೆಯೂ ಇಲ್ಲ. ಆದುದರಿಂದ ವಿಷಯತಾಸಂಬಂಧದಿಂದ ಧೂಮವಿಶಿಷ್ಟಜ್ಞಾನವೇ ಅನುಮಿತಿ ಹೇತುವೆಂದು ತಿಳಿಯಬೇಕು.

**ವ್ಯಾಪ್ಯಸ್ಯ ಪಕ್ಷವೃತ್ತಿತ್ವಧೀಃ ಪರಾಮರ್ಶ ಉಚ್ಯತೇ ।**

ವ್ಯಾಪ್ಯಸ್ಯೇತಿ ॥ ವ್ಯಾಪ್ತಿವಿಶಿಷ್ಟಸ್ಯ ಪಕ್ಷೇಣ ಸಹ ವೈಶಿಷ್ಟ್ಯಾವಗಾಹಿಜ್ಞಾನಂ ಅನುಮಿತಿಜನಕಮ್ । ತಚ್ಚ 'ವ್ಯಾಪ್ಯಃ ಪಕ್ಷೇ' ಇತಿ ಜ್ಞಾನಂ, ಪಕ್ಷೋ ವ್ಯಾಪ್ಯವಾನ್' ಇತಿ ಜ್ಞಾನಂ ವಾ । ಅನುಮಿತಿಸ್ತು ಪಕ್ಷೇ ವ್ಯಾಪ್ಯ ಇತಿ ಜ್ಞಾನಾತ್ಪಕ್ಷೇ ಸಾಧ್ಯಮಿತ್ಯಾಕಾರಿಕಾ । ಪಕ್ಷೋ ವ್ಯಾಪ್ಯವಾನಿತಿ ಜ್ಞಾನಾತ್ಪಕ್ಷಃ ಸಾಧ್ಯವಾನಿತ್ಯಾ

ಕಾರಿಕಾ । ದ್ವಿವಿಧಾದಪಿ ಪರಾಮರ್ಶಾತ್ಪಕ್ಷಃ ಸಾಧ್ಯವಾನಿತ್ಯೇವಾನುಮಿತಿ ರಿತ್ಯನ್ಯೇ ॥

ಅನುಮಿತಿಯಲ್ಲಿ ವ್ಯಾಪಾರರೂಪವಾದ ಪರಾಮರ್ಶದ ಲಕ್ಷಣವನ್ನು ಹೇಳುತ್ತಾನೆ. 'ವ್ಯಾಪ್ಯಸ್ಯ—' ಇತಿ. ॥ ವ್ಯಾಪ್ಯದ ಪಕ್ಷವೃತ್ತಿತ್ವದ ಜ್ಞಾನವು ಪರಾಮರ್ಶ. 'ವ್ಯಾಪ್ತಿ ವಿಶಿಷ್ಟಪಕ್ಷಧರ್ಮತಾಜ್ಞಾನವೆಂದು ನಿಷ್ಕೃಷ್ಟವಾದ ಅರ್ಥ. ವ್ಯಾಪ್ತಿಗೆ ಆಶ್ರಯವಾದದ್ದು ವ್ಯಾಪ್ತಿ. ಧೂಮಾದಿಲಿಂಗವಾಗುತ್ತದೆ. ಸಾಧ್ಯನಿರೂಪಿತವ್ಯಾಪ್ತಿಯು ಇದರಲ್ಲಿರುತ್ತದೆ. ಧೂಮಾದಿಗಳಿಗೆ ಪರ್ವತಾದಿಗಳೊಡನೆ ವೈಶಿಷ್ಟ್ಯವನ್ನು ತಿಳಿಸುವ ಜ್ಞಾನವು ಪರಾಮರ್ಶ. ಈ ವಿಶಿಷ್ಟಜ್ಞಾನವು 'ವ್ಯಾಪ್ತಿವಿಶಿಷ್ಟನಿಷ್ಠವಿಷಯತಾನಿರೂಪಕವೂ, ಪಕ್ಷನಿರೂಪಿತ ವೃತ್ತಿತ್ವನಿಷ್ಠವಿಷಯತಾನಿರೂಪಕವೂ ಆಗಿ 'ವಹ್ನಿವ್ಯಾಪ್ಯೋ ಧೂಮಃ ಪರ್ವತೇ' 'ವಹ್ನಿವ್ಯಾಪ್ಯಧೂಮವಾನ್ ಪರ್ವತಃ ' ಎಂದು ಎರಡು ಸ್ವರೂಪವನ್ನು ಹೊಂದಿರುತ್ತದೆ. ('ವಾಪ್ತ್ಯವಚ್ಛಿನ್ನಧೂಮಾದಿನಿಷ್ಠವಿಷಯತಾನಿರೂಪಿತಪರ್ವತತ್ವಾದ್ಯವಚ್ಛಿನ್ನವಿಷಯತಾಶಾಲಿತ್ವಂ ಪರಾಮರ್ಶತ್ವಮ್)

ವಿಶೇಷಣ ವಿಶೇಷ್ಯಭಾವವ್ಯತ್ಯಾಸದಿಂದ ಪರಾಮರ್ಶಜ್ಞಾನವು ಎರಡು ರೀತಿಯಾಗಿರುತ್ತದೆ. 'ಪಕ್ಷೇ ವ್ಯಾಪ್ಯಃ' (ಪರ್ವತದಲ್ಲಿ ವ್ಯಾಪ್ತ್ಯಾಶ್ರಿತವಾದ ಧೂಮವಿರುತ್ತದೆ.) ಎಂಬ ಜ್ಞಾನದಲ್ಲಿ ವ್ಯಾಪ್ತಿವಿಶಿಷ್ಟವಾದದ್ದು (ಧೂಮಾದಿ) ವಿಶೇಷ್ಯವಾಗಿ ಪಕ್ಷವು (ಪರ್ವತಾದಿಗಳು) ಪ್ರಕಾರವಾಗಿರುತ್ತದೆ. ಪಕ್ಷಪ್ರಕಾರಕವ್ಯಾಪ್ತಿವಿಶಿಷ್ಟವಿಶೇಷ್ಯಕವಾದ ಜ್ಞಾನವಾಗುತ್ತದೆ. 'ಪಕ್ಷಃ ವ್ಯಾಪ್ಯವಾನ್' ಎಂಬಲ್ಲಿ ಪಕ್ಷವು ವಿಶೇಷ್ಯವಾಗಿ ವ್ಯಾಪ್ತ್ಯಾಶ್ರಯ ವ್ಯಾಪ್ಯವು ಪ್ರಕಾರಕವಾಗಿರುತ್ತದೆ. ವ್ಯಾಪ್ತಿವಿಶಿಷ್ಟ (ವ್ಯಾಪ್ಯ) ಪ್ರಕಾರಕ ಪಕ್ಷವಿಶೇಷ್ಯಕಜ್ಞಾನವಾಗುತ್ತದೆ. ಮೊದಲನೆಯ ಪರಾಮರ್ಶದಿಂದ 'ಪಕ್ಷೇ ಸಾಧ್ಯಂ' (ಪರ್ವತೇ ಧೂಮಃ) ಎಂಬ ಪಕ್ಷಪ್ರಕಾರಕಸಾಧ್ಯವಿಶೇಷ್ಯಕ ಅನುಮಿತಿ ಬರುತ್ತದೆ. ಎರಡನೆಯ ಪರಾಮರ್ಶದಿಂದ 'ಪಕ್ಷಃ ಸಾಧ್ಯವಾವಾನ್' (ಪರ್ವತೋ ವಹ್ನಿಮಾನ್) ಎಂಬ ಸಾಧ್ಯಪ್ರಕಾರಕಪಕ್ಷವಿಶೇಷ್ಯಕವಾದ ಅನುಮಿತಿ ಬರುತ್ತದೆ. ನವ್ಯಮತವನ್ನು ತೋರಿಸುತ್ತಾನೆ. 'ದ್ವಿವಿಧಾದಪಿ—' ಇತಿ. ವ್ಯಾಪ್ಯವಿಶೇಷ್ಯಕ, ಪಕ್ಷವಿಶೇಷ್ಯಕವಾದ ಎರಡು ವಿಧವಾದ ಪರಾಮರ್ಶದಿಂದಲೂ ಪಕ್ಷಃ ಸಾಧ್ಯವಾನ್' ಎಂಬ ಪಕ್ಷವಿಶೇಷ್ಯಕಸಾಧ್ಯಪ್ರಕಾರಕವಾದ ಅನುಮಿತಿಯೇ ಬರುತ್ತದೆಂದು ಸಿದ್ಧಾಂತ. 'ವಹ್ನಿವ್ಯಾಪ್ಯಧೂಮವಾಂಶ್ಚಾಯಮ್' ಎಂದು ಪಕ್ಷವಿಶೇಷ್ಯಕವಾದ ಉಪನಯವು ಬರುವುದರಿಂದ ಪಕ್ಷವಿಶೇಷ್ಯಕ ಪರಾಮರ್ಶವೇ ಕಾರಣವೆಂದು ಅನುಭವದಿಂದ ತಿಳಿಯಬೇಕು.

ನನು—ವಹ್ನಿವ್ಯಾಪ್ಯಧೂಮವಾನ್ ಪರ್ವತಃ ಇತಿ ಜ್ಞಾನಂ ವಿನಾಪಿ ಯತ್ರ ಪರ್ವತೋ ಧೂಮವಾನ್ ಇತಿ ಪ್ರತ್ಯಕ್ಷಂ, ತತೋ ಧೂಮೋ ವಹ್ನಿವ್ಯಾಪ್ಯಃ ಇತಿ ಸ್ಮರಣಂ, ತತ್ರ ಜ್ಞಾನದ್ವಯಾದೇವಾನುಮಿತಿದರ್ಶನಾತ್ ವ್ಯಾಪ್ತಿವಿಶಿಷ್ಟವೈಶಿಷ್ಟ್ಯಾವಗಾಹಿ

ಜ್ಞಾನಂ ನ ಸರ್ವತ್ರ ಕಾರಣಮ್. ಕಿಂತು—ವ್ಯಾಪ್ಯತಾವಚ್ಛೇದಕಪ್ರಕಾರಕಪಕ್ಷ ಧರ್ಮತಾಜ್ಞಾನತ್ವೇನೈವ ಕಾರಣತ್ವಸ್ಯಾವಶ್ಯಕತ್ವಾತ್, ತತ್ರ ವಿಶಿಷ್ಟವೈಶಿಷ್ಟ್ಯ ಜ್ಞಾನಕಲ್ಪನೇ ಗೌರವಾಚ್ಚೇತಿ ಚೇನ್ನ, ವ್ಯಾಪ್ಯತಾವಚ್ಛೇದಕಾಜ್ಞಾನೇऽಪಿವಹ್ನಿ ವ್ಯಾಪ್ಯವಾನಿತಿ ಜ್ಞಾನಾದನುಮಿತ್ಯುತ್ಪತ್ತೇರ್ಲಾಘವಾಚ್ಚ ವ್ಯಾಪ್ತಿಪ್ರಕಾರಕಪಕ್ಷ ಧರ್ಮತಾಜ್ಞಾನತ್ವೇನೈವ ಹೇತುತ್ವಮ್ ||

'ನನು—' ಎಂಬುವರಿಂದ ಮೀಮಾಂಸಕನು ಆಶಂಕಿಸುತ್ತಾನೆ. ವ್ಯಾಪ್ತಿವಿಶಿಷ್ಟ ವಾದ ಧೂಮಕ್ಕೆ ಪರ್ವತದೊಡನೆ ವೈಶಿಷ್ಟ್ಯತೋರಬೇಕು. ಇಂತಹ 'ವಹ್ನಿವ್ಯಾಪ್ಯ ಧೂಮವಾನ್ ಪರ್ವತಃ' ಎಂಬ ವಿಶಿಷ್ಟಜ್ಞಾನರೂಪವಾದ ಪರಾಮರ್ಶಜ್ಞಾನ ಕಾರಣ ವೆಂದರೆ ಗುರುವಾಗುತ್ತದೆ. ಅದಕ್ಕಿಂತ ಲಘುವಾಗಿ ಕಾರ್ಯಕಾರಣಭಾವ ಹೇಳಲು ಸಾಧ್ಯ ವಿದೆಯೆಂದು ತೋರಿಸುತ್ತಾನೆ. 'ಯತ್ರ—' ಇತಿ. ಯಾವುದಾದರೊಂದು ಪರ್ವತ ದಲ್ಲಿ 'ಪರ್ವತೋ ಧೂಮವಾನ್' ಎಂಬ ಪ್ರತ್ಯಕ್ಷಜ್ಞಾನವುಂಟಾಗುತ್ತದೆ. (ಹೊಗೆಯು ಪರ್ವತದಲ್ಲಿ ಪ್ರತ್ಯಕ್ಷದೃಷ್ಟವಾಗುತ್ತದೆ.) ಆಮೇಲೆ 'ಧೂಮೋ ವಹ್ನಿವ್ಯಾಪ್ಯಃ' ಧೂಮವು ವಹ್ನಿನಿರೂಪಿತವ್ಯಾಪ್ತಿಯುಂದಕೂಡಿದೆ, ಎಂಬ ಸ್ಮೃತಿ ಬರುತ್ತದೆ. ತತ್ರ—ಈ ಪ್ರತ್ಯಕ್ಷ, ಸ್ಮರಣಾತ್ಮಕಜ್ಞಾನ ಇವೆರಡು ಯಾವ ಆತ್ಮನಲ್ಲಿ ಉಂಟಾಗಿದೆಯೋ ಅಲ್ಲಿ ಈ ಎರಡು ಜ್ಞಾನದಿಂದಲೇ (ಒಂದು ಪ್ರತ್ಯಕ್ಷ, ಒಂದು ಸ್ಮೃತಿ) 'ಪರ್ವತೋ ವಹ್ನಿಮಾನ್' ಎಂಬ ಅನುಮಿತಿ ಬರುತ್ತದೆ. ಇದಕ್ಕೋಸ್ಕರ 'ವಹ್ನಿವ್ಯಾಪ್ಯಧೂಮವಾನಯಂ ಪರ್ವತಃ' ಎಂಬ ವಿಶಿಷ್ಟವೈಶಿಷ್ಟ್ಯಾವಗಾಹಿ ಪರಾಮರ್ಶಜ್ಞಾನವು ಅನುಗತವಾದ ಕಾರಣವಾಗುವು ದಿಲ್ಲ. 'ವ್ಯಾಪ್ಯತಾವಚ್ಛೇದಕಪ್ರಕಾರಕಪಕ್ಷಧರ್ಮತಾಜ್ಞಾನತ್ವೇನ ಕಾರಣತಾ, ಸರ್ವ ಮತಸಿದ್ಧವಾಗಿದೆ. ವ್ಯಾಪ್ಯ—ವ್ಯಾಪ್ತಿವಿಶಿಷ್ಟವಾದಧೂಮ. ವ್ಯಾಪ್ಯತಾ—ಅದರಲ್ಲಿದೆ. ಅದರಲ್ಲಿ ಅವಚ್ಛೇದಕ ಅಂದರೆ ಧೂಮತ್ವಂ, (ವ್ಯಾಪ್ಯತಾವಚ್ಛೇದಕಂ) ತತ್‌ಪ್ರಕಾರಕಂ ಜ್ಞಾನಂ— 'ಪರ್ವತೋಧೂಮವಾನ್' ಎಂಬ ಪಕ್ಷಧರ್ಮತಾಜ್ಞಾನ—ಧೂಮವಿಶಿಷ್ಟ ಪರ್ವತಜ್ಞಾನ. (ಪರ್ವತವೃತ್ತಿಧೂಮಜ್ಞಾನವೂ ಆಗುತ್ತದೆ.) ಇದೇ ಅನುಮಿತಿಗೆ ಕಾರಣವೆಂದು ಅಂಗೀಕರಿಸುವುದರಿಂದ ಲಾಘವ ಬರುತ್ತದೆ. ಅನುಮಿತಿಯು ಅವ್ಯವಹಿತ ಪೂರ್ವಕ್ಷಣದಲ್ಲಿರುವ ಕಾರಣವಾದ ಜ್ಞಾನ ಇದೇ ಆಗುತ್ತದೆ. ಅದುದರಿಂದ ಮೊದಲು 'ಪರ್ವತೋಧೂಮವಾನ್' ಎಂಬ ಪ್ರತ್ಯಕ್ಷಜ್ಞಾನ. ಆಮೇಲೆ 'ಧೂಮೋವಹ್ನಿವ್ಯಾಪ್ಯಃ' ಎಂಬ ವ್ಯಾಪ್ತಿಸ್ಮರಣಾತ್ಮಕಜ್ಞಾನ. ಹೀಗೆ ಪ್ರತ್ಯಕ್ಷಸ್ಮರಣಾತ್ಮಕಗಳಾದ ಎರಡು ಜ್ಞಾನ ಗಳೇ ಕಾರಣಗಳಲ್ಲದೆ ಇವುಗಳಿಗಿಂತ ಗುರುಭೂತವಾದ ಮೂರನೆಯ ಪರಾಮರ್ಶ ಜ್ಞಾನಕ್ಕೆ ಕಾರಣತ್ವ ಹೇಳುವುದು ಅತಿಗೌರವೆಂದು ಮೀಮಾಂಸಕನ ಆಕ್ಷೇಪ.

ನೈಯಾಯಿಕನ ಮತದಲ್ಲಿ 'ಪರ್ವತೋಧೂಮವಾನ್' ಎಂದು ಮೊದಲು ಪಕ್ಷ ಧರ್ಮತಾಜ್ಞಾನ ಬರುತ್ತದೆ. ಆಮೇಲೆ 'ಯತ್ರಧೂಮಸ್ತತ್ರಾಗ್ನಿಃ' ವಹ್ನಿವ್ಯಾಪ್ಯೋ ಧೂಮಃ' ಎಂಬ ವ್ಯಾಪ್ತಿಸ್ಮರಣೆ ಬರುತ್ತದೆ. ಈ ಎರಡು ವಿಶೇಷಣಾತ್ಮಕಜ್ಞಾನಗಳಾಗು

ತ್ತವೆ. ಈ ಎರಡು ವಿಶೇಷಣಜ್ಞಾನಗಳಿಂದ 'ವಹ್ನಿವ್ಯಾಪ್ಯಧೂಮವಾನ್ ಪರ್ವತಃ' ಎಂದು ಮೂರನೆಯ ಪರಾಮರ್ಶಜ್ಞಾನ ಬಂದ ಮೇಲೆ ಅನುಮಿತಿ ಬರುತ್ತದೆ. ಸಾಹಚರ್ಯನಿಯಮರೂಪವಾದ ವ್ಯಾಪ್ತಿ, ತದ್ವಿಶಿಷ್ಟ (ವ್ಯಾಪ್ತಿಯಿಂದ ಕೂಡಿರುವುದು) ವಾದದ್ದು ಧೂಮ. ವಿಶಿಷ್ಟಧೂಮವನ್ನೈಶಿಷ್ಟ್ಯ ಅಂದರೆ 'ವಹ್ನಿವ್ಯಾಪ್ಯಧೂಮಃ' ಎಂಬುದು, ತದವಗಾಹಿಜ್ಞಾನ—ಇದನ್ನು ವಿಷಯೀಕರಿಸುವಜ್ಞಾನ ಅಂದರೆ 'ವಹ್ನಿವ್ಯಾಪ್ಯಧೂಮವಾನ್ ಪರ್ವತಃ' ಎಂಬ ಜ್ಞಾನ. ಈ ವಿಶಿಷ್ಟವೈಶಿಷ್ಟ್ಯಾವಗಾಹಿಪರಾಮರ್ಶಜ್ಞಾನವೇ ಅನುಮಿತಿಗೆಕಾರಣವಾಗುತ್ತದೆ. ಮೀಮಾಂಸಕರು ಹೇಳಿದಂತೆ ಲಘುಭೂತವಾದ ಎರಡು ಜ್ಞಾನಗಳು ಕಾರಣವೆಂದರೆ ದೋಷ ಬರುತ್ತದೆಂದು ಖಂಡಿಸುತ್ತಾನೆ. 'ಇತಿ ಚೇನ್ನ—' ಇತಿ.—ವ್ಯಾಪ್ಯತಾವಚ್ಛೇದಕ—ಪ್ರಕೃತದಲ್ಲಿ ಧೂಮತ್ವ. ಇದರ ನಿಶ್ಚಯ ವಿಲ್ಲದಿದ್ದರೂ, ಎಂದರ್ಥ. 'ವ್ಯಾಪ್ಯತಾವಚ್ಛೇದಕ ಪ್ರಕಾರಕಪಕ್ಷಧರ್ಮತಾಜ್ಞಾನತ್ವೇನ ಕಾರಣತ್ವಂ' ಎಂದು ಮೀಮಾಂಸಕನಮತ. ಆಗ ಒಬ್ಬ ಮನುಷ್ಯನಿಗೆ ಎದುರುಗಿರುವ ಪರ್ವತದಲ್ಲಿ 'ಅಯಮಾಲೋಕೋ ಧೂಮೋ ವಾ' ಎಂಬ ಸಂದೇಹ ಬಂದಿರುತ್ತದೆ. (ಧೂಮವೋ ಬೆಳಕೋ ಎಂಬ ಸಂದೇಹ) ಧೂಮತ್ವಪ್ರಕಾರಕನಿಶ್ಚಯ ಬಂದಿರುವುದಿಲ್ಲ. (ವ್ಯಾಪ್ಯತಾವ....ಚ್ಛೇದಕವೇ ಧೂಮತ್ವ) ಹಾಗಾದರೂ 'ವಹ್ನಿವ್ಯಾಪ್ಯವಾನ್ ಅಯಮಾಲೋಕೋ ಧೂಮೋವಾ' (ವಹ್ನಿನಿರೂಪಿತವ್ಯಾಪ್ತಿಯಿಂದ ಕೂಡಿರುವುದು ಆಲೋಕವಾದರೂ ಆಗಬಹುದು ಧೂಮವಾದರೂ ಆಗಬಹುದು.) ಎಂಬ ಸಂದೇಹದಿಂದ 'ಪರ್ವತೋ ವಹ್ನಿಮಾನ್' ಎಂಬ ಅನುಮಿತಿ ಬರುತ್ತದೆ. ಮೀಮಾಂಸಕನು ಹೇಳುವಂತೆ 'ವ್ಯಾಪ್ಯತಾವಚ್ಛೇದಕಪ್ರಕಾರಕಪಕ್ಷಧರ್ಮತಾಜ್ಞಾನವು' ಬಂದಿರುವುದಿಲ್ಲ. ಆಗ ಕಾರಣವಿಲ್ಲದಿದ್ದರೂ ಕಾರ್ಯವಾದುದರಿಂದ ವ್ಯಭಿಚಾರ ಬರುವುದರಿಂದ ಅದು ಕಾರಣವೆಂದು ಅಂಗೀಕರಿಸಲು ಸಾಧ್ಯವಿಲ್ಲ. ಅನುಮಿತಿರೂಪಕಾರ್ಯದಿಂದ ಕಾರಣವಿದೆಯೆಂದು ಬಲಾತ್ಕಾರದಿಂದ ಕಲ್ಪಿಸುತ್ತೇವೆ ಎಂದರೆ ಆಗ ಲಾಘವ ತೋರಿಸುತ್ತಾನೆ. 'ಲಾಘವಾಚ್ಚ —' ಇತಿ 'ವ್ಯಾಪ್ಯತಾವಚ್ಛೇದಕಪ್ರಕಾರಕ' (ಧೂಮತ್ವಪ್ರಕಾರಕ) ಎಂದು ನಿನ್ನ ಕಾರಣಶರೀರದಲ್ಲಿ ಘಟಕವಾಗಿದೆ. ಅದಕ್ಕಿಂತ 'ವ್ಯಾಪ್ತಿಪ್ರಕಾರಕ—' ಎಂಬ ನನ್ನ ಕಾರಣಶರೀರದಲ್ಲಿ ಲಘುವಾದ ಪದವು ಸೇರಿದೆ. ಆದುದರಿಂದ ಕಾರಣಲಾಘವ ನನ್ನ ಮತದಲ್ಲಿಯೇ ಇದೆ

ಲಾಘವತರ್ಕಸಹಕೃತವಾದ ಕಾರಣತ್ವವೇ ಸಕಲಗ್ರಾಹ್ಯವಾಗಿರುತ್ತದೆ. ನೈಯಾಯಿಕಮತದಲ್ಲಿ ಉಪಸ್ಥಿತಿಕೃತಲಾಘವವಿದೆ. ಮೀಮಾಂಸಕಮತದಲ್ಲಿ ಕಾರಣತಾವಚ್ಛೇದಕೋಪಸ್ಥಿತಿಕೃತವಾದ ಗೌರವವಿದೆ. ವ್ಯಾಪ್ಯತಾವಚ್ಛೇದಕಪ್ರಕಾರಕಪಕ್ಷಧರ್ಮತಾಜ್ಞಾನತ್ವೇನ, ವ್ಯಾಪ್ಯತಾವಚ್ಛೇದಕಪ್ರಕಾರಕವ್ಯಾಪ್ತಿಜ್ಞಾನತ್ವೇನ, ಎಂದು ಎರಡು ರೀತಿಯಾಗಿ ಕಾರಣತ್ವ ತಿಳಿಯಬೇಕು. ಇಲ್ಲಿ ಕೇವಲ ವ್ಯಾಪ್ತಿಪ್ರಕಾರಕಪಕ್ಷಧರ್ಮತಾಜ್ಞಾನತ್ವೇನ ಕಾರಣತ್ವ ತಿಳಿಯಬೇಕು. ಪ್ರಥಮೋಪಸ್ಥಿತಿ ವ್ಯಾಪ್ತಿಗೆ,

ಆಮೇಲೆ ವ್ಯಾಪ್ತಿವಿಶಿಷ್ಟವಾದ ವ್ಯಾಪ್ಯೋಪಸ್ಥಿತಿ. ಆಮೇಲೆ ಅವಚ್ಛೇದಕೋಪಸ್ಥಿತಿ. ಹೀಗೆ ತಾರ್ಕಿಕಮತದಲ್ಲಿಯೇ ಲಾಘವವಿದೆ.

ತಾರ್ಕಿಕಮತದಲ್ಲಿಯೂ ಸ್ಮೃತಿರೂಪವಾದ, ಪ್ರತ್ಯಕ್ಷರೂಪವಾದ ಎರಡು ಜ್ಞಾನ ಬೇಕಾಗುತ್ತದೆ. 'ವಹ್ನಿವ್ಯಾಪ್ಯೋ ಧೂಮಃ' ಎಂದು ಮೊದಲು ವ್ಯಾಪ್ಯತಾವಚ್ಛೇದಕ ಪ್ರಕಾರಕವ್ಯಾಪ್ತಿಜ್ಞಾನವು ಸ್ಮರಣಾತ್ಮಕವಾಗಿ ಬರುತ್ತದೆ. ಆಮೇಲೆ 'ಪರ್ವತೋ ಧೂಮವಾನ್' ಎಂಬ ವ್ಯಾಪ್ಯತಾವಚ್ಛೇದಕಪ್ರಕಾರಕಪಕ್ಷಧರ್ಮತಾಜ್ಞಾನವು ಪ್ರತ್ಯಕ್ಷ ವಾಗಿ ಬರುತ್ತದೆ. ಇವೆರಡರಿಂದ ಮುಂದೆ ವಿಶಿಷ್ಟವಾದ ಪರಾಮರ್ಶ ಬರುವುದು. ಇವೆರಡು ಜ್ಞಾನಗಳು ಪರಾಮರ್ಶವನ್ನು ಹುಟ್ಟಿಸುವುದರ ಮೂಲಕ ಅನುಮಿತಿಗೆ ಕಾರಣ ವಾಗುವುದಿಲ್ಲವೇ ಎಂದು ಆಶಂಕಿಸಬಹುದು. ಆದರೆ ಇದು ಮೂರನೆಯ ಅನ್ಯಥಾಸಿದ್ಧ ವಾಗುತ್ತದೆ. ಘಟವನ್ನು ಕುರಿತು ಆಕಾಶದಂತೆ ಇದು ಪರಾಮರ್ಶವನ್ನು ಕುರಿತು ಕಾರಣವೆಂದು ತಿಳಿದ ಮೇಲೆಯೇ ಅನುಮಿತಿಯನ್ನು ಕುರಿತು ಕಾರಣವೆಂದು ತಿಳಿಯ ಲ್ಪಡುವುದರಿಂದ ಅನ್ಯಥಾಸಿದ್ಧವಾಗುತ್ತದೆ. ಆದುದರಿಂದ ವ್ಯಾಪ್ತಿಪ್ರಕಾರಕಪಕ್ಷ ಧರ್ಮತಾಜ್ಞಾನತ್ವೇನ ಕಾರಣವೆಂದು ಸ್ವೀಕರಿಸಿದರೆ ಅವಚ್ಛೇದಕೋಪಸ್ಥಿತಿ ಇಲ್ಲದಿರು ವುದರಿಂದ ಲಾಘವ ಬರುತ್ತದೆ.

ಅವಚ್ಛೇದಕಪ್ರಯುಕ್ತ ಗೌರವ ಬಂದರೂ ತಾರ್ಕಿಕಮತದಲ್ಲಿ ಮೂರುಜ್ಞಾನ ಗಳಿಗೆ ಕಾರಣತ್ವ ಕಲ್ಪಿಸಬೇಕು. ಧೂಮಪ್ರತ್ಯಕ್ಷ, ವ್ಯಾಪ್ತಿಸ್ಮರಣೆ, ಪರಾಮರ್ಶ ಹೀಗೆ ಮೂರಕ್ಕೆ ಕಾರಣ ಹೇಳುವುದಕ್ಕಿಂತ ನಾನು ಹೇಳಿದಂತೆ ಪ್ರತ್ಯಕ್ಷಸ್ಮರಣಾತ್ಮಕ ಎರಡು ಜ್ಞಾನಗಳಿಗೆ ಕಾರಣತ್ವ ಕಲ್ಪಿಸುವುದು ಲಾಘವವಲ್ಲವೇ ಅಂದರೆ ಪುನಃ ಮೀಮಾಂಸಕಮತದಲ್ಲಿ 'ಕಿಂಚ' ಎಂದು ದೋಷೋದ್ಘಾಟನೆ ಮಾಡುತ್ತಾನೆ.

ಕಿಂಚ—'ಧೂಮವಾನ್ ಪರ್ವತಃ' 'ಇತಿ ಜ್ಞಾನಾದನುಮಿತ್ಯಾಪತ್ತಿಃವ್ಯಾಪ್ಯತಾವ ಚ್ಛೇದಕೀಭೂತಧೂಮತ್ವಪ್ರಕಾರಕಪಕ್ಷಧರ್ಮತಾಜ್ಞಾನಸ್ಯ ಸತ್ವಾತ್ । ನ ಚ ತದಾನೀಂ ಗೃಹ್ಯಮಾಣವ್ಯಾಪ್ಯತಾವಚ್ಛೇದಕ ಪ್ರಕಾರಕಪಕ್ಷಧರ್ಮತಾಜ್ಞಾನಸ್ಯ ಹೇತುತ್ವಮಿತಿ ವಾಚ್ಯಮ್, ಚೈತ್ರಸ್ಯ ವ್ಯಾಪ್ತಿಗ್ರಹೇ ಮೈತ್ರಸ್ಯಪಕ್ಷಧರ್ಮತಾ ಜ್ಞಾನಾತ್ ಅನುಮಿತಿಃ ಸ್ಯಾತ್ ॥

ಹಾಗೆ ಲಾಘವ ಹೇಳುವುದಾದರೆ ವ್ಯಾಪ್ತಿಸ್ಮರಣರೂಪ ಎರಡನೆಯ ಜ್ಞಾನವೂ ಬೇಡ. ಕೇವಲ 'ಧೂಮವಾನ್ ಪರ್ವತಃ' ಎಂಬ ಜ್ಞಾನದಿಂದಲೇ ಅನುಮಿತಿ ಬರಲಿ. ಆ ಧೂಮವು ಕಾಲಾಂತರೀಯ, ದೇಶಾಂತರೀಯವಾಗಿದ್ದರೂ ಅದರಿಂದ 'ಪರ್ವತೋ ವಹ್ನಿಮಾನ್' ಎಂಬ ಅನುಮಿತಿ ಬರಲಿ. ಲಾಘವವನ್ನು ಬಯಸುವ ನಿನ್ನ ಮತದಂತೆ ವ್ಯಾಪ್ಯತಾವಚ್ಛೇದಕವಾದ ಧೂಮತ್ವಪ್ರಕಾರಕಪಕ್ಷಧರ್ಮತಾಜ್ಞಾನವು ಇದ್ದೇ ಇದೆಯಷ್ಟೆ. ವ್ಯಾಪ್ತಿಸ್ಮೃತಿಯೂ ಬೇಡ ಎಂದು ನೈಯಾಯಿಕನ ಆಕ್ಷೇಪ.

ಇದಕ್ಕೆ ಮೀಮಾಂಸಕನ ಸಮಾಧಾನ ಸರಿಯಲ್ಲವೆಂದು ಆಶಂಕಿಸಿ ದೋಷ ತೋರಿಸುತ್ತಾನೆ. 'ನಚ—' ಇತಿ. 'ತದಾನೀಂ ಗೃಹ್ಯಮಾಣ—' ಎಂಬ ವಿಶೇಷಣ ವನ್ನು ಸೇರಿಸಬೇಕು. ಅನುಮಿತಿಯ ಅವ್ಯವಹಿತ ಪೂರ್ವಕ್ಷಣದಲ್ಲಿ ಚಕ್ಷುರಾದಿ ಇಂದ್ರಿಯಜನ್ಯಜ್ಞಾನವಿಷಯವಾಗಿ ತೋರುವ (ಪ್ರತ್ಯಕ್ಷವಾಗಿ ತೋರುವ) ವ್ಯಾಪ್ಯತಾವ ಚ್ಛೇದಕ (ಧೂಮತ್ವ) ವಾಗಬೇಕು. ತತ್ಪ್ರಕಾರಕಜ್ಞಾನವಾಗಬೇಕು. ಆರೀತಿ ಯಾವಧೂಮತ್ವಪ್ರಕಾರಕವಾಗಿರುವ ಪಕ್ಷಧರ್ಮತಾಜ್ಞಾನವಾಗಿರಬೇಕು. (ಧೂಮಾದಿ ಲಿಂಗಕ್ಕೆ ಪರ್ವತಾದಿವೃತ್ತಿತ್ವಜ್ಞಾನ) ಯಾವುದೋಧೂಮಜ್ಞಾನದಿಂದ ಬರುವುದಿಲ್ಲ. ಧೂಮವನ್ನು ಈಗ ಕಣ್ಣಿನಿಂದ ನೋಡಿದ್ದರೆ ಗೃಹ್ಯಮಾಣವ್ಯಾಪ್ಯತಾವಚ್ಛೇದಕತ್ವ ಧೂಮತ್ವಕ್ಕೆ ಬರುತ್ತದೆ. ಆರೀತಿಧೂಮತ್ವದಿಂದ ಕೂಡಿದ ಧೂಮವು ಪರ್ವತದಲ್ಲಿದೆ ಯೆಂದು ತಿಳಿದರೆ ಅದರಿಂದ ಅನುಮಿತಿ ಬರಲು ಯಾವ ತೊಂದರೆಯೂ ಇಲ್ಲ ಎಂದು ಸಮಾಧಾನ ಹೇಳಿದರೆ ಆಗ ಇನ್ನೊಂದು ದೋಷ ಬರುತ್ತದೆಂದು ತೋರಿಸುತ್ತಾನೆ. 'ಚೈತ್ರಸ್ಯ—' ಮಹಾನಸಾದಿಸ್ಥಳದಲ್ಲಿ ಚೈತ್ರನಿಗೆ 'ಧೂಮೋ ವಹ್ನಿವ್ಯಾಪ್ಯಃ' ಎಂದು ವ್ಯಾಪ್ತಿಜ್ಞಾನ ಬಂದಿರುತ್ತದೆ. ಅವನಸಂಗಡವಿರುವ ಮೈತ್ರನಿಗೆ 'ಪರ್ವತೋ ಧೂಮ ವಾನ್' ಎಂಬ ಪ್ರತ್ಯಕ್ಷಬರುವುದರಿಂದ ವ್ಯಾಪ್ಯತಾವಚ್ಛೇದಕಪ್ರಕಾರಕಪಕ್ಷಧರ್ಮತಾ ಜ್ಞಾನ ಬಂದಿರುತ್ತದೆ. ಆಗ ಮೈತ್ರನಿಗೆ ಅನುಮಿತಿ ಬರಲಿ. ಎರಡು ಜ್ಞಾನವಿದ್ದರೆ ಸರಿ. ಅದು ಹೇಗೇ ಇರಲಿ. ವ್ಯಾಪ್ತಿಪ್ರಕಾರಕ ನಿಶ್ಚಯ, ಪಕ್ಷಧರ್ಮತಾವಿಷಯಕನಿಶ್ಚಯ ರೂಪವಾದ ಕಾರಣಗಳೆರಡೂ ಇರುವುದರಿಂದ ಕಾರ್ಯಉಂಟಾಗಲಿ.

ಯದಿ ತು ತತ್ಪುರುಷೀಯಗೃಹ್ಯಮಾಣವ್ಯಾಪ್ಯತಾವಚ್ಛೇದಕ ಪ್ರಕಾರಕಂತತ್ಪುರುಷೀಯ ಪಕ್ಷಧರ್ಮತಾಜ್ಞಾನಂ ತತ್ಪುರುಷೀಯಾನುಮಿತೌ ಹೇತುರಿತ್ಯುಚ್ಯತೇ, ತದಾಽ ನಂತಕಾರ್ಯಕಾರಣಭಾವಃ। ಮನ್ಮತೇ ತು ಸಮವಾಯಿಸಂಬಂಧೇನ ವ್ಯಾಪ್ತಿ ಪ್ರಕಾರಕಪಕ್ಷಧರ್ಮತಾಜ್ಞಾನಂ ಸಮವಾಯಿಸಂಬಂಧೇನ ಅನುಮಿತಿಂ ಜನಯ ತೀತಿನಾನಂತಕಾರ್ಯಕಾರಣಭಾವಃ ॥

ತಾನೇ ಮೀಮಾಂಸಕನ ಸಮಾಧಾನವನ್ನು ತೋರಿಸಿ ಖಂಡಿಸುತ್ತಾನೆ. 'ಯದಿತು—' ಇತಿ. ಕಾರ್ಯಕಾರಣಗಳಿಗೆ ಒಂದೇ ಆಶ್ರಯವು ಲೋಕಪ್ರಸಿದ್ಧವಾಗಿದೆ. ಒಬ್ಬನಿಗೆ ವ್ಯಾಪ್ತಿಜ್ಞಾನ ಬಂದಾಗ ಇನ್ನೊಬ್ಬನ ಪಕ್ಷಧರ್ಮತಾಜ್ಞಾನದಿಂದ ಅನುಮಿತಿ ಬರುತ್ತದೆಂದು ಅಭಿಪ್ರಾಯವಲ್ಲ. ಯಾರಿಗೆ ವ್ಯಾಪ್ತಿಜ್ಞಾನಬಂದಿದೆಯೋ ಅವನಿಂದಲೇ ಆಗ ಪ್ರತ್ಯಕ್ಷೀಕರಿಸುವ ವ್ಯಾಪ್ಯತಾವಚ್ಛೇದಕ ಪ್ರಕಾರ ಜ್ಞಾನವಿರಬೇಕು. ಅಂತಹವನಿಗೇ ಬಂದಿರುವ ಪಕ್ಷಧರ್ಮತಾಜ್ಞಾನವು ಅನುಮಿತಿಗೆ ಕಾರಣವಾಗುತ್ತದೆ. ಭಿನ್ನಭಿನ್ನಪುರುಷ ರಿಗೆ ಬಂದಿದ್ದರೆ ಉಪಯೋಗವಿಲ್ಲವೆಂದು ಕಲ್ಪಿಸುವುದಾದರೆ ಆಗ ಅನಂತಕಾರ್ಯಕಾರಣ ಭಾವ ಕಲ್ಪಿಸಬೇಕಾದುದರಿಂದ ಮಹಾಗೌರವ ಬರುತ್ತದೆಂದು ದೂಷಿಸುತ್ತಾನೆ. 'ತದಾ —' ಇತಿ. ಚೈತ್ರಾದಿಪುರುಷರು ಅನಂತವಾದುದರಿಂದ ಪ್ರತಿಪುರುಷರಲ್ಲಿ ಈ ರೀತಿ

ಯಾದ ಜ್ಞಾನದ್ವಯವನ್ನು ಕಲ್ಪಿಸಬೇಕಾದುದರಿಂದ ಕಾರ್ಯಕಾರಣಭಾವಾನಂತ್ಯವಾಗುತ್ತದೆ.

ತಾರ್ಕಿಕಮತದಲ್ಲಿಯೂ ಪುರುಷರು ಅನೇಕವಾದುದರಿಂದ ಈ ಆನಂತ್ಯದೋಷಕ್ಕೆ ಅವಕಾಶವಿಲ್ಲವೇ ? ಎಂದರೆ ತನ್ನಮತದಲ್ಲಿ ಈ ದೋಷಕ್ಕೆ ಎಡೆಇಲ್ಲವೆಂದು ತೋರಿಸುತ್ತಾನೆ. 'ಮನ್ಮತೇ—' ಇತಿ. ತಾರ್ಕಿಕಮತದಲ್ಲಿ ವಿಶಿಷ್ಟಜ್ಞಾನವೊಂದೇ ಕಾರಣವಾದುದರಿಂದ ಈ ದೋಷಬರುವುದಿಲ್ಲ. ಸಮವಾಯಸಂಬಂಧದಿಂದ ಚೈತ್ರನಲ್ಲಾಗಲೀ ಮೈತ್ರನಲ್ಲಾಗಲೀ 'ವಹ್ನಿವ್ಯಾಪ್ಯಧೂಮವಾನಯಮ್' ಎಂಬ ವ್ಯಾಪ್ತಿಪ್ರಕಾರಕ ಪಕ್ಷಧರ್ಮತಾಜ್ಞಾನವು ಹುಟ್ಟಿದೆಯೋ ಅಲ್ಲಿಯೇ ಸಮವಾಯ ಸಂಬಂಧದಿಂದ ಅನುಮಿತಿಯುಂಟಾಗುತ್ತದೆ. ಆದುದರಿಂದ ಕಾರ್ಯಕಾರಣಭಾವದ ಆನಂತ್ಯ ದೋಷವಿಲ್ಲ.

ಯದಿತು ವ್ಯಾಪ್ತಿಪ್ರಕಾರಕಂ ಜ್ಞಾನಂ, ಪಕ್ಷಧರ್ಮತಾಜ್ಞಾನಂ ಚ ಸ್ವತಂತ್ರಂ ಕಾರಣಮಿತ್ಯುಚ್ಯತೇ, ತದಾ ಕಾರ್ಯಕಾರಣಭಾವದ್ವಯಮ್ । ವಹ್ನಿವ್ಯಾಪ್ಯೋ ಧೂಮ:, ಆಲೋಕವಾನ್ ಪರ್ವತಃ " ಇತಿ ಜ್ಞಾನಾದಪಿ ಅನುಮಿತ್ಯಾಪತ್ತಿಃ ಸ್ಯಾತ್ । ಇತ್ಥಂ ಚ ಯತ್ರ ಜ್ಞಾನದ್ವಯಂ ತತ್ರಾಪಿ ವಿಶಿಷ್ಟಜ್ಞಾನಂ ಕಲ್ಪನೀಯಂ, ಫಲಮುಖಗೌರವಸ್ಯ ಅದೋಷತ್ವಾತ್ ॥

ತಿರುಗಿಯೂ ಮೀಮಾಂಸಕಮತದಲ್ಲಿ ದೋಷ ತೋರಿಸುತ್ತಾನೆ. 'ಯದಿತು—' ಇತಿ. ತತ್ತತ್ಪುರುಷೀಯತ್ವ ವಿಶೇಷಣದಿಂದ ಆನಂತ್ಯದೋಷ ಬರುತ್ತದಷ್ಟೆ. ಈಗ ಹಾಗೆ ಹೇಳುವುದಿಲ್ಲ. 'ಧೂಮೋವಹ್ನಿವ್ಯಾಪ್ಯಃ' ಎಂಬ ವ್ಯಾಪ್ತಿಪ್ರಕಾರಕ ಜ್ಞಾನವೂ, 'ಧೂಮವಾನ್ ಪರ್ವತಃ' ಎಂಬ ಪಕ್ಷಧರ್ಮತಾಜ್ಞಾನವೂ ಸ್ವತಂತ್ರಕಾರಣಗಳಾಗುತ್ತವೆ. ಎಂದರೆ ಬೇರೆಬೇರೆಯಾಗಿ ಅನುಮಿತಿಗೆ ಕಾರಣವೆಂದು ಕಲ್ಪಿಸುತ್ತೇವೆ. ಅನುಮಿತಿಬೇಕಾದರೆ ಇವೆರಡೂ ಸ್ವತಂತ್ರವಾಗಿರುವ ಕಾರಣಗಳಿರಬೇಕು. ಆಗ ತತ್ತತ್ಪುರುಷೀಯತ್ವವಿಶೇಷಣನಿವೇಶನವೂ ಇಲ್ಲ, ಚೈತ್ರನಿಗೆ ವ್ಯಾಪ್ತಿಜ್ಞಾನಬಂದಾಗ ಮೈತ್ರನ ಪಕ್ಷಧರ್ಮತಾಜ್ಞಾನದಿಂದ ಅನುಮಿತಿ ಬರಲಿ ಎಂಬ ಆಪತ್ತಿಯೂ ಇಲ್ಲ. ಎಂದರೆ 'ಅರ್ಥಾತ್ ಪರಾಮರ್ಶಕ್ಕೆ ಕಾರಣತ್ವ ಹೇಳಿದಂತೆಯೇ ಆಗುವುದಲ್ಲದೆ (ವ್ಯಾಪ್ತಿಪ್ರಕಾರಕ ಪಕ್ಷಧರ್ಮತಾಜ್ಞಾನತ್ವೇನ, ಪಕ್ಷಧರ್ಮತಾವಿಷಯಕ ವ್ಯಾಪ್ತಿಪ್ರಕಾರಕಜ್ಞಾನತ್ವೇನ) ಇನ್ನೊಂದು ದೋಷ ಬರುತ್ತದೆ.

'ಧೂಮೋ ವಹ್ನಿವ್ಯಾಪ್ಯ :' ಎಂದು ವ್ಯಾಪ್ತಿಪ್ರಕಾರಕಜ್ಞಾನ ಒಂದುರೀತಿಯಿಂದ ಬಂದಿರುತ್ತದೆ. (ವಹ್ನಿನಿರೂಪಿತವ್ಯಾಪ್ತಿಯಿಂದ ಕೂಡಿರುವುದು ಧೂಮ.) 'ಆಲೋಕವಾನ್‌ಪರ್ವತಃ ಎಂದು ಪಕ್ಷಧರ್ಮತಾಜ್ಞಾನ. ಯಾವುದಕ್ಕಾದರೂ ಪಕ್ಷವೃತ್ತಿತ್ವಜ್ಞಾನವಿದ್ದರೆ ಸರಿ. ಹೀಗೆ ಈ ರೀತಿಯಾದ ಸ್ವತಂತ್ರ ಎರಡು ಕಾರಣಗಳಿರುವುದರಿಂದ 'ಪರ್ವತೋ ವಹ್ನಿಮಾನ್' ಎಂಬ ಅನುಮತಿ ಬರಬೇಕಾಗುತ್ತದೆ. ಒಂದಕ್ಕೊಂದು ಸಂಬಂಧವಿಲ್ಲವಾದುದರಿಂದ 'ಪರಸ್ಪರ ನಿರೂಪ್ಯ ನಿರೂಪಕಭಾವವಿಲ್ಲ. ಹಾಗೆ ಹೇಳಿದರೆ

ಗೌರವ ಬರುತ್ತದೆಂದು ಬೇರೆ ಬೇರೆಯಾಗಿ ಕಾರಣತ್ವ ಹೇಳಿರುವುದು. ಆದುದರಿಂದ ಈ ದೋಷ ತಪ್ಪಿಸಲು ಸಾಧ್ಯವಿಲ್ಲ.

ತಾರ್ಕಿಕಮತದಲ್ಲಿ ವಿಶಿಷ್ಟಜ್ಞಾನವೊಂದೇ ಹೇತುವಾದುದರಿಂದ ಎರಡು ಕಾರ್ಯ ಕಾರಣ ಭಾವಗಳಿಗೆ ಅವಕಾಶವಿಲ್ಲ. ಆದುದರಿಂದಲೇ ಬೇರೆಬೇರೆ ಆಕಾರದ ಜ್ಞಾನಗಳಿಂದ ಅನುಮಿತ್ಯಾಪತ್ತಿಯೂ ಇಲ್ಲ. ವಿಶಿಷ್ಟಪರಾಮರ್ಶಜ್ಞಾನದಲ್ಲಿ ಪರಸ್ಪರ ನಿರೂಪ್ಯನಿರೂಪಕ ಭಾವ ಇರುತ್ತದೆ. 'ವಹ್ನಿವ್ಯಾಪ್ಯಧೂಮವಾನ್ ಪರ್ವತಃ' ಎಂಬಲ್ಲಿ ಪರ್ವತವು ವಿಶೇಷ್ಯ. ಪರ್ವತದಲ್ಲಿ ಧೂಮವು ಪ್ರಕಾರ. ಧೂಮದಲ್ಲಿ ವ್ಯಾಪ್ತಿಪ್ರಕಾರ. ಪರ್ವತ ನಿಷ್ಠವಿಶೇಷ್ಯತಾನಿರೂಪಿತಪ್ರಕಾರತಾ ಧೂಮದಲ್ಲಿದೆ. ಧೂಮನಿಷ್ಠವಿಶೇಷ್ಯತಾನಿರೂಪಿತ ಪ್ರಕಾರತಾ ವ್ಯಾಪ್ತಿಯಲ್ಲಿದೆ. ವ್ಯಾಪ್ತಿನಿಷ್ಠಪ್ರಕಾರತಾ ನಿರೂಪಿತ ವಿಶೇಷ್ಯತಾ ಧೂಮ ದಲ್ಲಿದೆ. ವ್ಯಾಪ್ತಿನಿಷ್ಠಪ್ರಕಾರತಾ ನಿರೂಪಿತಾ ಯಾ ಹೇತುನಿಷ್ಠಾ ಪ್ರಕಾರತಾ, ತನ್ನಿ ರೂಪಿತಾ ಯಾ ಪಕ್ಷನಿಷ್ಠಾ ವಿಶೇಷ್ಯತಾ ತಚ್ಛಾಲಿಜ್ಞಾನದೇ ಪರಾಮರ್ಶ. ವ್ಯಾಪ್ತಿಪ್ರಕಾರತಾನಿರೂಪಿತಹೇತುಪ್ರಕಾರತಾನಿರೂಪಿತಪಕ್ಷವಿಶೇಷ್ಯತಾಶಾಲಿಜ್ಞಾನ ತ್ವೇನ ಅನುಮಿತಿಕಾರಣತ್ವಹೇಳುವುದರಿಂದ ಹಿಂದಿನ ದೋಷಕ್ಕೆ ಅವಕಾಶವಿಲ್ಲ. ಮೀಮಾಂಸಕಮತದಲ್ಲಿ ವಿಶೇಷ್ಯತಾ ಎರಡು ಸ್ವತಂತ್ರಗಳಾಗಿರುವುದರಿಂದ ಬೇರೆಬೇರೆ ಯಾದ ಜ್ಞಾನಗಳಿಂದ ಅನುಮಿತ್ಯಾಪತ್ತಿಮಾಡಲು ಸಾಧ್ಯ. 'ವಹ್ನಿವ್ಯಾಪ್ಯೋ ಧೂಮಃ' ಎಂಬಲ್ಲಿ ವಹ್ನಿವ್ಯಾಪ್ತಿಪ್ರಕಾರತಾ ನಿರೂಪಿತಧೂಮವಿಶೇಷ್ಯತಾ ತೋರುತ್ತದೆ. 'ಆಲೋಕವಾನ್ ಪರ್ವತಃ' ಎಂಬಲ್ಲಿ ಆಲೋಕ ಪ್ರಕಾರತಾನಿರೂಪಿತ ಪರ್ವತವಿಶೇಷ್ಯತಾ ತೋರುತ್ತದೆ. ಪರ್ವತವಿಶೇಷ್ಯತಾನಿರೂಪಿತಪ್ರಕಾರತಾ ಧೂಮದಲ್ಲಿರುವುದಿಲ್ಲ. ಧೂಮಪ್ರಕಾರತಾ ನಿರೂಪಿತವಿಶೇಷ್ಯತಾ ಪರ್ವತದಲ್ಲಿಲ್ಲವಾದುದರಿಂದ ಪರಸ್ಪರ ಸಂಬಂಧ ವಿರುವುದಿಲ್ಲ. ಯಾವುದುಯಾವುದೋ ಜ್ಞಾನಗಳೆರಡರಿಂದ ಅನುಮಿತ್ಯಾಪತ್ತಿಮಾಡ ಬಹುದು. ಆದುದರಿಂದ ಜ್ಞಾನದ್ವಯಕ್ಕೆ ಕಾರಣತ್ವ ಹೇಳುವಮೀಮಾಂಸಕನೂ ಪರಾ ಮರ್ಶಾತ್ಮಕ ವಿಶಿಷ್ಟ ಜ್ಞಾನಕ್ಕೇ ಕಾರಣತ್ವ ಹೇಳಬೇಕು.

· ವಿಶಿಷ್ಟಜ್ಞಾನಕ್ಕೇ ಕಾರಣತ್ವಹೇಳಿದರೆ ಗೌರವದೋಷವಿಲ್ಲವೇ ಎಂದರೆ ಗೌರವವು ಎಲ್ಲಾಕಡೆಯಲ್ಲಿ ದೋಷವಾಗುವುದಿಲ್ಲವೆಂದು ತೋರಿಸುತ್ತಾನೆ. 'ಫಲಮುಖ—' ಇತಿ. ಫಲಂ—ಕಾರ್ಯಕಾರಣಭಾವಗ್ರಹರೂಪವಾದ ಫಲ. ತನ್ಮುಖಂ—ಈ ಫಲಾಧೀನ ವಾದ ಗೌರವವು ದೋಷವಾಗುವುದಿಲ್ಲ. ಇದು ದೋಷಾಭಾವರೂಪವಾದುದರಿಂದ ಪ್ರತಿಬಂಧಕವಾಗುವುದಿಲ್ಲ. ಅನುಮಿತಿಯನ್ನು ಕುರಿತು ಪರಾಮರ್ಶರೂಪವಾದ ವಿಶಿಷ್ಟ ಜ್ಞಾನವು ಕಾರಣವೆಂದು (ಅನುಮಿತಿತ್ವಾವಚ್ಛಿನ್ನಂ ಪ್ರತಿ ಪರಾಮರ್ಶಾತ್ಮಕ ವಿಶಿಷ್ಟಜ್ಞಾನ ತ್ವಾವಚ್ಛಿನ್ನಂ ಕಾರಣಂ) ನಿಶ್ಚಿತವಾದ ಮೇಲೆ ವಿಶಿಷ್ಟಜ್ಞಾನದಲ್ಲಿ ಗೌರವಜ್ಞಾನ ಬರು ತ್ತದೆ. ಕಾರಣತಾನಿಶ್ಚಯ ಬಂದ ಮೇಲೆ ಗೌರವ ನಿಶ್ಚಯ ಬರುವುದರಿಂದ, ಕಾರ್ಯ ಆಗಿ ಹೋಗಿದೆ. ಗೌರವನಿಶ್ಚಯವು ಯಾವುದನ್ನು ಪ್ರತಿಬಂಧಕಮಾಡಬೇಕು? ಪರಾ ಮರ್ಶಃ ಅನುಮಿತ್ಯವ್ಯವಹಿತಪೂರ್ವವೃತ್ತಿಃ ಎಂದು ಕಾರಣತಾನಿಶ್ಚಯ ಬಂದ ಮೇಲೆ

ಅದು ಗುರುಭೂತವಾಗಿದೆ ಎಂದು ತಿಳಿಯುತ್ತದೆ. ವಿಶಿಷ್ಟಜ್ಞಾನವು ಅನುಮಿತಿಯನ್ನು ಹುಟ್ಟಿಸುವುದರಲ್ಲಿಯೇ (ಹುಟ್ಟಿಸಬೇಕಾದರೆ ಮೊದಲು) ಗೌರವಗ್ರಸ್ತವಾಗಿದೆಯೆಂದು ತಿಳಿಯಲ್ಪಟ್ಟಿದ್ದರೆ ವಿಶಿಷ್ಟಜ್ಞಾನದಲ್ಲಿ ದೋಷ ಬಂದಂತಾಗಿ ಕಾರ್ಯವನ್ನು ಹುಟ್ಟಿಸಲು ಸಮರ್ಥವಾಗುತ್ತಿರಲಿಲ್ಲ. ಈಗ ಕಾರಣದಿಂದ ಕಾರ್ಯವಾದ ಮೇಲೆ ಆ ಕಾರಣ ಗೌರವ ದೋಷಗ್ರಸ್ತವಾಗಿದೆ ಎಂದು ತಿಳಿದರೆ ಆಗ ಅದರಿಂದ ಏನೂ ಪ್ರಯೋಜನವಿಲ್ಲ. ಅದು ದೋಷವಾಗಿ ಪರಿಣಮಿಸುವುದೂ ಇಲ್ಲ.

ವ್ಯಾಪ್ತಿಪ್ರಕಾರತಾನಿರೂಪಿತಹೇತುಪ್ರಕಾರತಾನಿರೂಪಿತ ಪಕ್ಷ ವಿಶೇಷ್ಯತಾಶಾಲಿ ಜ್ಞಾನತ್ವೇನ ವಿಶಿಷ್ಟಜ್ಞಾನವು ಅನುಮಿತಿಯನ್ನು ಕುರಿತು ಕಾರಣವೆಂದು ಹೇಳಿದೆ. ಇಲ್ಲಿ ಹೇತುವಿನಲ್ಲಿ ಪಕ್ಷವಿಶೇಷ್ಯತಾನಿರೂಪಿತಪ್ರಕಾರತಾ, ವ್ಯಾಪ್ತಿಪ್ರಕಾರತಾನಿರೂಪಿತ ವಿಶೇಷ್ಯತಾರೂಪ ಎರಡೂ ಧರ್ಮಗಳು ಇವೆ. 'ಏಕನಿಷ್ಠ (ಒಂದರಲ್ಲಿಯೇ ಇರುವ) ಪ್ರಕಾರತಾ ವಿಶೇಷ್ಯತಯೋರಭೇದ :' ಎಂದು ಒಂದು ಮತವಿದೆ. ಇವೆರಡೂ ಒಂದು ಎಂಬ ಅಭಿಪ್ರಾಯದಿಂದ ಹಿಂದೆ ಹೇಳಿದ ಲಕ್ಷಣ ತಿಳಿಯಬೇಕು. ನವೀನರು ಈ ಪ್ರಕಾರತಾ, ವಿಶೇಷ್ಯತಾ ಧರ್ಮಗಳು ಒಂದಾಗುವುದಿಲ್ಲ. ಅವುಗಳಿಗೆ ಅವಚ್ಛೇದ್ಯ ಅವಚ್ಛೇದಕ ಭಾವ ಹೇಳಬೇಕು ಎನ್ನುತ್ತಾರೆ. ಆಗ ವಹ್ನಿವ್ಯಾಪ್ತಿಪ್ರಕಾರತಾನಿರೂಪಿತಾ ಯಾ ಧೂಮನಿಷ್ಠಾವಿಶೇಷ್ಯತಾ, ತದವಚ್ಛಿನ್ನಪ್ರಕಾರತಾನಿರೂಪಿತಾ (ಧೂಮಹೇತುನಿಷ್ಠ ವಿಶೇಷ್ಯತಾವಚ್ಛಿನ್ನಪ್ರಕಾರತಾ ನಿರೂಪಿತಾ) ಪಕ್ಷನಿಷ್ಠಾ ವಿಶೇಷ್ಯತಾ ತಚ್ಛಾಲಿಜ್ಞಾನತ್ವೇನ ಕಾರಣಮ್. 'ವ್ಯಾಪ್ತಿನಿಷ್ಠಪ್ರಕಾರತಾನಿರೂಪಿತಹೇತುನಿಷ್ಠವಿಶೇಷ್ಯತಾವಚ್ಛಿನ್ನಪ್ರಕಾರತಾನಿರೂಪಿತಪಕ್ಷನಿಷ್ಠವಿಶೇಷ್ಯತಾಶಾಲಿ ಜ್ಞಾನಂ' ಅನುಮಿತಿ ಕಾರಣವೆಂದು ತಿಳಿಯಬೇಕು. ಒಂದರಲ್ಲಿರುವ ಪ್ರಕಾರತಾ ವಿಶೇಷ್ಯತಾಧರ್ಮಗಳು ಒಂದಾದರೆ ಅನೇಕ ಸ್ಥಳದಲ್ಲಿ ದೋಷ ಬರುತ್ತದೆಂದು ನವೀನರ ಸಿದ್ಧಾಂತ.

**ವ್ಯಾಪ್ತಿಃ ಸಾಧ್ಯವದನ್ಯಸ್ಮಿನ್ನಸಂಬಂಧ ಉದಾಹೃತಃ ||೬೮||**

ಪರಾಮರ್ಶಾತ್ಮಕಜ್ಞಾನದಲ್ಲಿ ವ್ಯಾಪ್ತಿಯುಘಟಕವಾದುದರಿಂದ ವ್ಯಾಪ್ತಿಸ್ವರೂಪವನ್ನು ತೋರಿಸುತ್ತಾನೆ. ಸಾಧ್ಯಂ ಅಸ್ಮಿನ್ ಅಸ್ತಿ ಇತಿ ಸಾಧ್ಯವಾನ್. ಸಾಧ್ಯವತಃ ಅನ್ಯಃ, ಸಾಧ್ಯವದನ್ಯಃ, ತಸ್ಮಿನ್. ಅಸಂಬಂಧಃ—ಅವೃತ್ತಿತ್ವಂ. (ಇಲ್ಲದಿರುವುದು.) ವೃತ್ತಿತ್ವಾಭಾವಃ, || "ಸಾಧ್ಯವದನ್ಯನಿರೂಪಿತವೃತ್ತಿತ್ವಾಭಾವಃ ವ್ಯಾಪ್ತಿಃ। ಸಾಧ್ಯ ವಹ್ನಿ. ಸಾಧ್ಯವತ್—ಸಾಧ್ಯದಿಂದ ಕೂಡಿರುವುದು ಪರ್ವತ. ಅದಕ್ಕಿಂತಲೂ ಬೇರೆಯಾದುದು ಹ್ರದ (ಕೆರೆಮುಂತಾದ ಬೆಂಕಿ ಇಲ್ಲದ ಪ್ರದೇಶಗಳು) ಮುಂತಾದವುಗಳು. ಅಲ್ಲಿ ಇಲ್ಲದಿರುವಿಕೆ ಧೂಮಕ್ಕೆ ಬರುತ್ತದೆ. ಅರ್ಥಾತ್ ಧೂಮವು ವಹ್ನಿ ಇದ್ದಲ್ಲಿ ಇದ್ದು ವಹ್ನಿಇಲ್ಲದ ಕೆರೆ ಮುಂತಾದವುಗಳಲ್ಲಿ ಇರುವುದಿಲ್ಲ. ಧೂಮದ ವೃತ್ತಿತ್ವಾಭಾವ ಬರುತ್ತದೆ. ಇದು ವ್ಯಾಪ್ಯದಲಕ್ಷಣ ವ್ಯಾಪ್ತಿಯಸ್ವರೂಪ.

ವ್ಯಾಪ್ಯೋ ನಾಮ ವ್ಯಾಪ್ತ್ಯಾಶ್ರಯಃ, ತತ್ರ ಕಾವ್ಯಾಪ್ತಿರಿತ್ಯತ ಆಹ—ವ್ಯಾಪ್ತಿರಿತಿ ||

ಸಾಧ್ಯವದನ್ಯೇತಿ। ವಹ್ನಿಮಾನ್ ಧೂಮಾದಿತ್ಯಾದೌ ಸಾಧ್ಯೋವಹ್ನಿಃ ಸಾಧ್ಯ

ವಾನ್ ಮಹಾನಸಾದಿಃ, ತದಸ್ಯೋ ಜಲಹ್ರದಾದಿಃ, ತದವೃತ್ತಿತ್ವಂ ಧೂಮ ಸ್ಯೇತಿಲಕ್ಷಣಸಮನ್ವಯಃ। ಧೂಮವಾನ್ ವಹ್ನೇರಿತ್ಯಾದೌ ಸಾಧ್ಯವದನ್ಯಸ್ಮಿಂಸ್ತ ಪ್ತಾಯಃ ಪಿಂಡಾದೌ ವಹ್ನೇಃಸತ್ತ್ವಾನ್ನಾತಿವ್ಯಾಪ್ತಿಃ ॥

'ನಾಸಂಗತಂ ಪ್ರಯುಂಜೀತ' ಸಂಬಂಧವಿಲ್ಲದವುಗಳನ್ನು ಹೇಳಬಾರದೆಂದು ಪ್ರಾಮಾಣಿಕರ ವಚನವನ್ನನುಸರಿಸಿ ಉಪೋದ್ಘಾತಸಂಗತಿಯಿಂದ ವ್ಯಾಪ್ತಿನಿರೂಪಣೆ ಮಾಡಿರುವುದೆಂದು ತೋರಿಸುತ್ತಾನೆ. 'ವ್ಯಾಪ್ಯೋನಾಮ—' ಇತಿ. 'ಪ್ರಕೃತೋಪ ಪಾದಕತ್ವಂ' ಉಪೋದ್ಘಾತಸಂಗತಿಯಲಕ್ಷಣ. 'ಪ್ರಕೃತಸಿದ್ಧ್ಯನುಕೂಲಚಿಂತಾವಿಷಯ ತ್ವಮ್' ಎಂದು ಅದರ ಪರಿಷ್ಕಾರ. ಪ್ರಕೃತವಾದದ್ದು ವ್ಯಾಪ್ತಿ ಲಕ್ಷಣ. ವ್ಯಾಪ್ಯಪಕ್ಷ ಉಭಯವೈಶಿಷ್ಟ್ಯಾವಗಾಹಿಜ್ಞಾನವೇ ಪರಾಮರ್ಶ. ಇದು ವ್ಯಾಪ್ತಿಜ್ಞಾನಸಾಧ್ಯವಾದು ದರಿಂದ ಉಪೋದ್ಘಾತಸಂಗತಿ ಸಂಗತವಾಗುತ್ತದೆ. ವ್ಯಾಪ್ಯದಲ್ಲಿ ವ್ಯಾಪ್ತಿಘಟಕ ವಾಗಿದೆ. (ಸ್ವಾವಿಷಯಕಪ್ರತೀತ್ಯವಿಷಯತತ್ಕತ್ವಂ ತದ್ಘಟಕತ್ವಮ್) ಆದುದರಿಂದ ವ್ಯಾಪ್ತಿಸ್ವರೂಪವನ್ನು ಹೇಳುತ್ತಾನೆ. ಧೂಮರೂಪಹೇತುವಿನಲ್ಲಿ ಲಕ್ಷಣಸಮನ್ವಯ ತೋರಿಸುತ್ತಾನೆ. 'ವಹ್ನಿಮಾನ್—' ಇತಿ. ಇದು ಹಿಂದೆ ವಿವೃತವಾಗಿದೆ. 'ಧೂಮವಾನ್ ವಹ್ನೇಃ' ಎಂಬಲ್ಲಿ ವಹ್ನಿರೂಪಹೇತುವು ದುಷ್ಟವಾಗಿದೆ. ಅಸದ್ಧೇತು ಸ್ಥಲದಲ್ಲಿ ಲಕ್ಷಣವು ಅತಿವ್ಯಾಪ್ತವಾಗುವುದಿಲ್ಲವೆಂದೂ ತೋರಿಸುತ್ತಾನೆ. 'ಧೂಮವಾನ್ —' ಇತಿ.

ವ್ಯಾಪ್ತಿಯು ಅನ್ವಯವ್ಯತಿರೇಕಭೇದದಿಂದ ಎರಡುರೀತಿಯಾಗಿರುತ್ತದೆ. ವ್ಯತಿ ರೇಕ ವ್ಯಾಪ್ತಿಯನ್ನು ಮುಂದೆ ತೋರಿಸುತ್ತಾನೆ. ಇಲ್ಲಿ ಹೇಳುವುದು ಅನ್ವಯವ್ಯಾಪ್ತಿ. ಈ ವ್ಯಾಪ್ತಿಲಕ್ಷಣಕ್ಕೆ ಸದ್ಧೇತುವೇ ಲಕ್ಷ್ಯ. ಇದರಲ್ಲಿ ಪಕ್ಷ, ಸಾಧ್ಯ, ಹೇತು, ದೃಷ್ಟಾಂತ ಗಳು ಅಪೇಕ್ಷಿತವಾಗಿವೆ. ಪರ್ವತ ಪಕ್ಷ. ಸಂಯೋಗಸಂಬಂಧದಿಂದ ವಹ್ನಿ ಸಾಧ್ಯ. ಸಂಯೋಗದಿಂದ ಧೂಮವು ಹೇತು. ಮಹಾನಸ (ಅಡಿಗೆ ಮನೆ.) ದೃಷ್ಟಾಂತ. ಧೂಮವ್ಯಾಪಕವಹ್ನಿಸಾಧ್ಯಕತ್ವವೂ ಧೂಮದಲ್ಲಿರುತ್ತದೆ. 'ಧೂಮವಾನ್ ವಹ್ನೇಃ' ಎಂಬಲ್ಲಿಯೂ ಈ ನಾಲ್ಕು ಇದ್ದರೂ ವಹ್ನಿವ್ಯಾಪಕಧೂಮಸಾಧ್ಯಕತ್ವಮಾತ್ರ ಇರುವು ದಿಲ್ಲ. ಆದುದರಿಂದ ಧೂಮಸಾಧನೆಗೋಸ್ಕರ ಹೇಳಿದ ವಹ್ನಿರೂಪಹೇತುವು ಅಸದ್ಧೇತು ವಾಗುತ್ತದೆ.

ಅತ್ಯಂತಾಭಾವನೇ ಲಕ್ಷಣದಲ್ಲಿ ವಿವಕ್ಷಿತವಾಗಿದೆಯೆಂದರೆ— 'ಸಾಧ್ಯಸ್ಯ ಅಭಾವಃ' ಸಾಧ್ಯಾಭಾವಃ. ಸಾಧ್ಯಾಭಾವೋಽಸ್ಯಾಸ್ತೀತಿ ಸಾಧ್ಯಾಭಾವವಾನ್ ಸಾಧ್ಯಾಭಾವವತಿ ನ ವಿದ್ಯತೇ ವೃತ್ತಿಃ ಯಸ್ಯ ಸಃ ಸಾಧ್ಯಾಭಾವವದವೃತ್ತಿಃ, ತಸ್ಯಭಾವಃ ಸಾಧ್ಯಾಭಾವವದವೃತ್ತಿತ್ವಮ್' ಎಂದು ವಿಗ್ರಹ ತಿಳಿಯಬೇಕು. ಸಾಧ್ಯಪದಕ್ಕೆ ಸಾಧ್ಯ ಪ್ರತಿಯೋಗಿಕವೆಂದರ್ಥ. (ಲಕ್ಷಣಾ ವೃತ್ತಿಯಿಂದ ಈ ಅರ್ಥ.) ಅದಕ್ಕೆ ಅಭೇದ ಸಂಬಂಧದಿಂದ ಅಭಾವದಲ್ಲಿ ಅನ್ವಯ. ಅಭಾವಕ್ಕೆ ಸ್ವರೂಪಸಂಬಂಧದಿಂದ ಮತು ಬರ್ಥಅಧಿಕರಣದಲ್ಲಿ ಅನ್ವಯ. ಅದಕ್ಕೆ ನಿರೂಪಿತತ್ವಸಂಬಂಧದಿಂದ ವೃತ್ತಿತ್ವದಲ್ಲಿಯೂ,

ಅದಕ್ಕೆ ಪ್ರತಿಯೋಗಿತಾಸಂಬಂಧದಿಂದ ಅಭಾವದಲ್ಲಿಯೂ ಅನ್ವಯ. 'ಸಾಧ್ಯಪ್ರತಿಯೋಗಿಕಾಭಾವಾಧಿಕರಣನಿರೂಪಿತವೃತ್ತಿತ್ವಾಭಾವಃ' ಎಂದು ಫಲಿತವಾಗುತ್ತದೆ. 'ಪರ್ವತೋ ವಹ್ನಿಮಾನ್ ಧೂಮಾತ್' ಸಾಧ್ಯ—ವಹ್ನಿ. ಸಾಧ್ಯಪ್ರತಿಯೋಗಿಕಾಭಾವಃ ಅಂದರೆ ವಹ್ನ್ಯಭಾವ. ಅದಕ್ಕೆ ಅಧಿಕರಣ ಹ್ರದಾದಿ. ತನ್ನಿರೂಪಿತವೃತ್ತಿತ್ವಂ (ಇಲ್ಲಿ ಇರುವಿಕೆ) ಮೀನುಮುಂತಾದುವುಗಳಲ್ಲಿ ಬರುತ್ತದೆ. ಅವೃತ್ತಿತ್ವಂ—ವೃತ್ತಿತ್ವಾಭಾವವು ಧೂಮದಲ್ಲಿ ಬರುತ್ತದೆ.

'ಧೂಮವಾನ್ ವಹ್ನೇಃ' ಎಂಬ ಅಲಕ್ಷ್ಯದಲ್ಲಿ ಸಾಧ್ಯ—ಧೂಮ. ತತ್ಪ್ರತಿಯೋಗಿಕಾಭಾವಃ—ಧೂಮಾಭಾವ. ಅದರ ಅಧಿಕರಣ—ಅಯೋಗೋಲಕ. (ಕಾದ ಕಬ್ಬಿಣದ ಉಂಡೆ) ತನ್ನಿರೂಪಿತವೃತ್ತಿತ್ವವೇ ವಹ್ನಿಯಲ್ಲಿ ಬರುತ್ತದೆ. ವೃತ್ತಿತ್ವಾಭಾವ ಬರುವುದಿಲ್ಲ.

ಅದರೆ 'ಸಾಧ್ಯವದನ್ಯಸ್ಮಿನ್—' ಎಂದು ಅನ್ಯಪದನಿವೇಶದಿಂದ ಈ ಲಕ್ಷಣದಲ್ಲಿ ಅನ್ಯೋನ್ಯಾಭಾವವೇ ವಿವಕ್ಷಿತವಾಗಿದೆ. ಇದು ಪೂರ್ವಪಕ್ಷವ್ಯಾಪ್ತಿ. ಆಗ 'ಸಾಧ್ಯವದನ್ಯಾವೃತ್ತಿತ್ವಂ' ಎಂದು ಲಕ್ಷಣವಾಗುತ್ತದೆ. ಸಾಧ್ಯವತ್ ಪದಕ್ಕೆ ಲಕ್ಷಣಾವೃತ್ತಿಯಿಂದ 'ಸಾಧ್ಯವತ್ಪ್ರತಿಯೋಗಿಕಃ' ಎಂದರ್ಥ. ಅದಕ್ಕೆ ಅಭೇದಸಂಬಂಧದಿಂದ ಅನ್ಯಪದಾರ್ಥೈಕದೇಶ (ಭೇದಾಧಿಕರಣ) ಭೇದದಲ್ಲಿ ಅನ್ವಯ. ಭೇದಕ್ಕೆ ಸ್ವರೂಪಸಂಬಂಧದಿಂದ ಅಧಿಕರಣದಲ್ಲಿ ಅನ್ವಯ. ಅಧಿಕರಣಕ್ಕೆ ನಿರೂಪಿತಸಂಬಂಧದಿಂದ ವೃತ್ತಿತ್ವದಲ್ಲಿಯೂ ಅದಕ್ಕೆ ಪ್ರತಿಯೋಗಿತಾಸಂಬಂಧದಿಂದ ಅಭಾವದಲ್ಲಿಯೂ, ಅನ್ವಯ. ಆಗ 'ಸಾಧ್ಯವತ್ಪ್ರತಿಯೋಗಿಕ ಭೇದಾಧಿಕರಣನಿರೂಪಿತವೃತ್ತಿತ್ವಾಭಾವಃ' ಎಂದು ಲಕ್ಷಣ ಸಿದ್ಧವಾಗುತ್ತದೆ.

ಸಾಧ್ಯವತ್ಪ್ರತಿಯೋಗಿಕಭೇದವೆಂದರೆ 'ಹ್ರದಃ ವಹ್ನಿಮಾನ್ ನ' ಎಂಬ ವಹ್ನಿಮತ್ಪ್ರತಿಯೋಗಿಕ ಭೇದ. ಭೇದಾಧಿಕರಣ—ಹ್ರದಾದಿಗಳು ತನ್ನಿರೂಪಿತ ವೃತ್ತಿತ್ವವು ಮೀನಾದಿಗಳಿಗೂ, ವೃತ್ತಿತ್ವಾಭಾವವು ಧೂಮದಲ್ಲಿಯೂ ಬರುತ್ತದೆ. ಅಸದ್ಧೇತುಸ್ಥದಲ್ಲಿ ಸಾಧ್ಯ—ಧೂಮ. ಸಾಧ್ಯವತ್ಪ್ರತಿಯೋಗಿಕಭೇದ—'ಅಯೋಗೋಲಕಂ ಧೂಮವಾನ್ ನ' ಎಂಬ ಭೇದ. ಭೇದಾಧಿಕರಣವು (ಹ್ರದಾದಿಗಳಂತೆ) ಅಯೋಗೋಲಕವೂ ಆಗುತ್ತದೆ. ತನ್ನಿರೂಪಿತವೃತ್ತಿತ್ವವೇ ವಹ್ನಿಯಲ್ಲಿ ಬರುತ್ತದೆ. ವೃತ್ತಿತ್ವಾಭಾವ ಬರುವುದಿಲ್ಲ.

ಅತ್ರ—ಯೇನ ಸಂಬಂಧೇನ ಸಾಧ್ಯಂ ತೇನೈವ ಸಂಬಂಧೇನ ಸಾಧ್ಯವಾನ್ ಬೋಧ್ಯಃ । ಅನ್ಯಥಾ ಸಮವಾಯಸಂಬಂಧೇನ ವಹ್ನಿಮಾನ್ ವಹ್ನೇರವಯವಃ, ತದನ್ಯೋ ಮಹಾನಸಾದಿಃ, ತತ್ರ ಧೂಮಸ್ಯ ವಿದ್ಯಮಾನತ್ವಾದವ್ಯಾಪ್ತಿಪ್ರಸಂಗಾತ್ ॥

ಅನ್ಯೋನ್ಯಾಭಾವಘಟಿತಲಕ್ಷಣದಲ್ಲಿ ಸಾಧ್ಯತಾವಚ್ಛೇದಕಸಂಬಂಧವನ್ನೂ ಸೇರಿಸಬೇಕೆಂದು ತೋರಿಸುತ್ತಾನೆ. 'ಅತ್ರ—' ಇತಿ. ಯಾವ ಸಂಬಂಧದಿಂದ ಸಾಧ್ಯವು

ತನ್ನ ಅಧಿಕರಣದಲ್ಲಿರುವುದೋ ಅದು ಸಾಧ್ಯತಾವಚ್ಛೇದಕಸಂಬಂಧವಾಗುತ್ತದೆ. ಸಾಧ್ಯವಾನ್ ಅಂದರೆ ಸಾಧ್ಯದಿಂದ ಕೂಡಿರುವುದು. ಅದು ಯಾವಸಂಬಂಧ ದಿಂದಾದರೂ ಇರಬಹುದು. ಸಾಧ್ಯವಾದ ವಹ್ನಿಯು ಸಂಯೋಗಸಂಬಂಧದಿಂದ ಮಹಾನಸಾದಿಗಳಲ್ಲಿಯೂ, ಸಮವಾಯಸಂಬಂಧದಿಂದ ತನ್ನ ಅವಯವಗಳಲ್ಲಿಯೂ, ಕಾಲಿಕಸಂಬಂಧದಿಂದ ಎಲ್ಲಿಯಾದರೂ (ಕಾಲಸಂಬಂಧವಿರುವ ಎಲ್ಲಾ ಕಡೆಯಲ್ಲಿ) ಇರುತ್ತದೆ. ಪ್ರಕೃತಲಕ್ಷಣದಲ್ಲಿ ಸಾಧ್ಯವು ಸಂಯೋಗಸಂಬಂಧದಿಂದ ವಿವಕ್ಷಿತವಾದುದ ರಿಂದ ಅದೇ ಸಂಬಂಧದಿಂದ ಸಾಧ್ಯವತ್ತೂ ವಿವಕ್ಷಿತವಾಗಿದೆ. ಹೀಗೆ ಅಂಗೀಕರಿಸದಿದ್ದರೆ 'ವಹ್ನಿಮಾನ್ ಧೂಮಾತ್' ಎಂಬಲ್ಲಿಯೇ ಅವ್ಯಾಪ್ತಿದೋಷ ಬರುತ್ತದೆ. ಹೇಗೆಂದರೆ ಸಮವಾಯಸಂಬಂಧದಿಂದ ವಹ್ನ್ಯವಯವವು ಸಾಧ್ಯವತ್ತಾಗುತ್ತದೆ. ಅವಯವಾವಯ ವಿಗಳ ಸಂಬಂಧವು ಸಮವಾಯವೆಂದು ಹೇಳಿದೆ. ಸಾಧ್ಯವಾನ್—ವಹ್ನ್ಯ ವಯವ. ತದ್ಭಿನ್ನವಾದದ್ದು ಮಹಾನಸಾದಿಗಳು. ಅಲ್ಲಿ ಧೂಮರೂಪಹೇತುವಿನ ಅವೃತ್ತಿತ್ವ ಇರುವುದಿಲ್ಲ. ಧೂಮವಿರುವುದರಿಂದ ವೃತ್ತಿತ್ವವೇ ಬರುವುದರಿಂದ ಅವ್ಯಾಪ್ತಿ. (ಅವೃತ್ತಿತ್ವ ಬರಬೇಕು.) ಸಾಧ್ಯತಾವಚ್ಛೇದಕಸಂಬಂಧವು ಇಷ್ಟವಾದರೆ ಆಗ ಅದು ಸಂಯೋಗವಾಗುವುದರಿಂದ ಸಂಯೋಗದಿಂದ ಸಾಧ್ಯವತ್ ಅಂದರೆ ವಹ್ನ್ಯ ವಯವವಾಗುವುದಿಲ್ಲ. ಮಹಾನಸಾದಿಗಳೇ ಆಗುತ್ತವೆ. ಆಗ ಹಿಂದಿನಂತೆ ಲಕ್ಷಣ ಸಮನ್ವಯವಾಗುವುದರಿಂದ ದೋಷಕ್ಕೆ ಅವಕಾಶವಿಲ್ಲ. ಆಗ ಲಕ್ಷಣ—'ಸಾಧ್ಯತಾವ ಚ್ಛೇದಕಸಂಬಂಧಾವಚ್ಛಿನ್ನಸಾಧ್ಯವತ್‌ಪ್ರತಿಯೋಗಿಕಭೇದಾಧಿಕರಣನಿರೂಪಿತವೃತ್ತಿ ತ್ವಾಭಾವಃ' ಎಂದಾಗುತ್ತದೆ.

ಸಾಧ್ಯವದನ್ಯಚ್ಚ ಸಾಧ್ಯವತ್ತ್ವಾವಚ್ಛಿನ್ನಪ್ರತಿಯೋಗಿತಾಕಭೇದವಾನ್ ಬೋಧ್ಯಃ। ತೇನ ಯತ್ಕಿಂಚಿದ್ವಹ್ನಿಮತೋ ಮಹಾನಸಾದೇರ್ಭಿನ್ನೇ ಪರ್ವತಾದೌ ಧೂಮಸ್ಯ ಸತ್ತ್ವೇಽಪಿ ನ ಕ್ಷತಿಃ।

ಸಾಧ್ಯವದನ್ಯಃ ಅಂದರೆ ಸಾಧ್ಯವತ್ಪ್ರತಿಯೋಗಿಕಭೇದವಾನ್ ಎಂದರ್ಥ. ಭೇದದಲ್ಲಿ ಸಾಧ್ಯವತ್ಪದಾರ್ಥ ಪ್ರತಿಯೋಗಿಯಾಗಿರುತ್ತದೆ. ಪ್ರತಿಯೋಗಿತಾ ಅದ ರಲ್ಲಿದೆ. ತನ್ನಿರೂಪಕವಾದದ್ದು ಭೇದ. ಅಲ್ಲಿ ಸಾಧ್ಯವತ್ತ್ವಾವಚ್ಛಿನ್ನಪ್ರತಿಯೋಗಿ ತಾಕಭೇದವನ್ನು ಹೇಳಬೇಕು. ಎಲ್ಲಾ ಸಾಧ್ಯವಿರುವ ಸಾಧ್ಯಾಧಿಕರಣದಲ್ಲಿರುವ ಸಾಧ್ಯವತ್ತ್ವಧರ್ಮವಿದೆಯೋ ಅದು ಪ್ರತಿಯೋಗಿತೆಯಲ್ಲಿ ಅವಚ್ಛೇದಕವಾಗಿರಬೇಕು. ಪ್ರತಿಯೋಗಿತಾ ತದವಚ್ಛಿನ್ನವಾಗುತ್ತದೆ. 'ಸಾಧ್ಯವತ್ತ್ವಾವಚ್ಛಿನ್ನಪ್ರತಿಯೋಗಿತಾಕಃ ಯೋ ಭೇದಃ, ತಾದೃಶಭೇದವಾನ್' ಎಂದರ್ಥ. ಹೀಗೆ ಹೇಳದಿದ್ದರೆ 'ವಹ್ನಿಮಾನ್ ಧೂಮಾತ್' ಎಂಬಲ್ಲಿ ಪುನಃ ಅವ್ಯಾಪ್ತಿ ಬರುತ್ತದೆ. ಸಾಧ್ಯ—ವಹ್ನಿಃ, ಸಾಧ್ಯ ವಾನ್—ಎದುರಿಗಿರುವ ಪರ್ವತವಾಗುತ್ತದೆ. ಸಾಧ್ಯವತ್‌ಭಿನ್ನಃ ಅಂದರೆ ಎರಡನೆಯ ಪರ್ವತ ಅಥವಾ ಮಹಾನಸ. ತನ್ನಿರೂಪಿತವೃತ್ತಿತ್ವವೇ ಧೂಮರೂಪ ಹೇತುವಿಗೆ

ಬರುತ್ತದೆ. ಅವೃತ್ತಿತ್ವ ಬರುವುದಿಲ್ಲ. ಸಾಧ್ಯವತ್ತ್ವಧರ್ಮವನ್ನು ಭೇದಪ್ರತಿಯೋಗಿತೆಯಲ್ಲಿ ಅವಚ್ಛೇದಕವನ್ನಾಗಿ ಹೇಳಿದರೆ ಆಗ ಸಾಧ್ಯವುಳ್ಳದ್ದು ಯಾವುದೋ ಅವೆಲ್ಲವನ್ನೂ ತೆಗೆದುಕೊಳ್ಳಬೇಕಾಗುತ್ತದೆ. ಸಾಧ್ಯವತ್ತ್ವಧರ್ಮಾವಚ್ಛಿನ್ನಗಳು ಅಂದರೆ ಪುರೋವೃತ್ತಿ, ಅಪುರೋವೃತ್ತಿ ಸಕಲ ಸಾಧ್ಯಾಧಿಕರಣಗಳಾಗುತ್ತವೆ. ತನ್ನಿರೂಪಿತ ಭೇದಾಧಿಕರಣಗಳೆಂದರೆ ಕೇವಲ ಹ್ರದಾದಿಗಳು. ತನ್ನಿರೂಪಿತವೃತ್ತಿತ್ವ ಮೀನಾದಿಗಳಲ್ಲಿ ಅವೃತ್ತಿತ್ವ ಧೂಮರೂಪಹೇತುವಿನಲ್ಲಿ ಬರುತ್ತದೆ. ಆಗ ಲಕ್ಷಣ 'ಸಾಧ್ಯತಾವಚ್ಛೇದಕಸಂಬಂಧಾವಚ್ಛಿನ್ನ—ಸಾಧ್ಯವತ್ತ್ವಾವಚ್ಛಿನ್ನಪ್ರತಿಯೋಗಿತಾಕ ಭೇದಾಧಿಕರಣನಿರೂಪಿತವೃತ್ತಿತ್ವಾಭಾವಃ' ಎಂದಾಗುತ್ತದೆ.

ಯೇನ ಸಂಬಂಧೇನ ಹೇತುತಾ ತೇನೈವ ಸಂಬಂಧೇನ ಸಾಧ್ಯವದನ್ಯಾಽವೃತ್ತಿತ್ವಂ ಬೋಧ್ಯಮ್ । ತೇನ ಸಾಧ್ಯವದನ್ಯಸ್ಮಿನ್ ಧೂಮಾವಯವೇ ಧೂಮಸ್ಯ ಸಮವಾಯಸಂಬಂಧೇನ ಸತ್ತ್ವೇಽಪಿ ನ ಕ್ಷತಿಃ ॥

ಸಾಧ್ಯವದ್ಭೇದಾಧಿಕರಣದಲ್ಲಿ ವೃತ್ತಿತಾ ಹೇಳಿದೆ. ಹೇತುವು ಯಾವಸಂಬಂಧದಿಂದ ಇರುತ್ತದೆಯೋ ಅದೇ ಸಂಬಂಧದಿಂದ ಈ ವೃತ್ತಿತ್ವ ಹೇಳಬೇಕು. ವೃತ್ತಿತಾವಲ್ಲಿ ಹೇತುತಾವಚ್ಛೇದಕಸಂಬಂಧವು ಅವಚ್ಛೇದಕವಾಗುವುದರಿಂದ ವೃತ್ತಿತಾ ಹೇತುತಾವಚ್ಛೇದಕಸಂಬಂಧಾವಚ್ಛಿನ್ನವಾಗುತ್ತದೆ. ಹಾಗೆ ಹೇಳದಿದ್ದರೆ ಪುನಃ ಅವ್ಯಾಪ್ತಿ ಬರುತ್ತದೆ. ಸಾಧ್ಯವಾನ್—ಪರ್ವತಾದಿ. ಸಾಧ್ಯವದ್ಭೇದಾಧಿಕರಣವೆಂದರೆ ಹೇಗೆ ಜಲಹ್ರದಾದಿಗಳು ಆಗುತ್ತವೆಯೋ ಹಾಗೆಯೇ ಧೂಮಾವಯವಗಳೂ ಆಗುತ್ತವೆ. 'ಧೂಮಾವಯವಃ ಸಾಧ್ಯವಾನ್ (ವಹ್ನಿಮಾನ್) ನ' ಎಂದು ಅನ್ಯೋನ್ಯಾಭಾವಹೇಳಲು ಸಾಧ್ಯವಿದೆ. ಆಗ ತನ್ನಿರೂಪಿತ ವೃತ್ತಿತ್ವವೇ ಧೂಮಕ್ಕೆ ಬರುತ್ತದೆ. ಸಮವಾಯಸಂಬಂಧದಿಂದ ಧೂಮಾವಯವದಲ್ಲಿ ಧೂಮರೂಪಹೇತು ಇರುತ್ತದೆ. ಈಗ ಹೇತುತಾವಚ್ಛೇದಕಸಂಬಂಧದಿಂದ ಸಾಧ್ಯವದ್ಭೇದಾಧಿಕರಣನಿರೂಪಿತವೃತ್ತಿತಾ ಹೇಳಿದರೆ ಆಗ ಸಂಯೋಗವು ಹೇತುತಾವಚ್ಛೇದಕಸಂಬಂಧವಾಗುವುದರಿಂದ ಸಂಯೋಗಸಂಬಂಧದಿಂದ ವೃತ್ತಿತಾ ಧೂಮದಲ್ಲಿ ಬರುವುದಿಲ್ಲ. ಭೇದಾಧಿಕರಣ—ಧೂಮಾವಯವವಾಗಲಿ. ಧೂಮಾವಯವನಿರೂಪಿತ ಸಮವಾಯಸಂಬಂಧಾವಚ್ಛಿನ್ನವೃತ್ತಿತಾ ಧೂಮದಲ್ಲಿ ಬಂದರೂ ಸಂಯೋಗ ಸಂಬಂಧಾವಚ್ಛಿನ್ನ ವೃತ್ತಿತಾ ಬರುವುದಿಲ್ಲ. ಧೂಮಾವಯವದಲ್ಲಿ ಧೂಮವು ಸಂಯೋಗಸಂಬಂಧದಿಂದ ಇರುವುದಾದರೆ ಆಗ ವೃತ್ತಿತ್ವ ಬರುತ್ತಿತ್ತು. ಸಾಧ್ಯವದ್ಭೇದಾಧಿಕರಣನಿರೂಪಿತಸಂಯೋಗಸಂಬಂಧಾವಚ್ಛಿನ್ನವೃತ್ತಿತಾ ಮೀನಾದಿಗಳಲ್ಲಿ ಬರುತ್ತದೆ. ಅವೃತ್ತಿತ್ವ—ವೃತ್ತಿತ್ವಾಭಾವವು ಧೂಮರೂಪಹೇತುವಿನಲ್ಲಿ ಬರುತ್ತದೆ. ಸಂಯೋಗಸಂಬಂಧದಿಂದ ಧೂಮವು ತನ್ನಸಾಧ್ಯವಾದ ವಹ್ನಿಯ ಅಧಿಕರಣವಾದ ಪರ್ವತಾದಿಗಳಲ್ಲಿಯೇ ಇರುತ್ತದೆ. ಆಗ ಲಕ್ಷಣ—'ಸಾಧ್ಯತಾವಚ್ಛೇದಕಸಂಬಂಧಾವಚ್ಛಿನ್ನ—ಸಾಧ್ಯ

ವತ್ತ್ವಾವಚ್ಛಿನ್ನಪ್ರತಿಯೋಗಿತಾ ನಿರೂಪಕಭೇದಾಧಿಕರಣ ನಿರೂಪಿತಹೇತುತಾವಚ್ಛೇದಕ ಸಂಬಂಧಾವಚ್ಛಿನ್ನ ವೃತ್ತಿತಾಕಾಭಾವಃ' ಎಂದಾಗುತ್ತದೆ.

ಸಾಧ್ಯವದನ್ಯಾವೃತ್ತಿತ್ವಂ ಚ ಸಾಧ್ಯವದನ್ಯವೃತ್ತಿತ್ವತ್ವಾವಚ್ಛಿನ್ನಪ್ರತಿಯೋಗಿತಾಕಾಭಾವಃ । ತೇನ ಧೂಮವಾನ್ ವಹ್ನೇರಿತ್ಯತ್ರ ಸಾಧ್ಯವದನ್ಯಜಲಹ್ರದಾದಿವೃತ್ತಿತ್ವಾಭಾವೇಽಪಿ ನಾತಿವ್ಯಾಪ್ತಿಃ ॥

ಭೇದಾಧಿಕರಣನಿರೂಪಿತವೃತ್ತಿತಾಭಾವಃ ಎಂಬಲ್ಲಿ ವೃತ್ತಿತಾ ಅಂದರೂ ಆಧೇಯತಾ ಅಂದರೂ ಒಂದೇ. ಭೇದಾಧಿಕರಣಗಳು ಹ್ರದಾದಿಗಳು. ಅವುಗಳಲ್ಲಿ ಇರುವವುಗಳು ಆಧೇಯಗಳು (ವೃತ್ತಿಗಳು) ವೃತ್ತಿತಾ ಅವುಗಳಲ್ಲಿವೆ. ವೃತ್ತಿತ್ವದ ಅಭಾವ ಹೇಳಿದೆ ಅಭಾವಕ್ಕೆ ಇದು ಪ್ರತಿಯೋಗಿ. ಪ್ರತಿಯೋಗಿತಾ ವೃತ್ತಿತೆಯಲ್ಲಿದೆ. ಅಲ್ಲಿ ವೃತ್ತಿತ್ವತ್ವಾವಚ್ಛಿನ್ನತ್ವವಿಶೇಷಣ ಹೇಳಬೇಕು. ಹೀಗೆ ಹೇಳದಿದ್ದರೆ ಅತಿವ್ಯಾಪ್ತಿ ಬರುತ್ತದೆ. 'ಯಾವದ್ಭೇದಾಧಿಕರಣನಿರೂಪಿತವೃತ್ತಿತ್ವಾಭಾವಃ' ಎಂದು ತಾತ್ಪರ್ಯಾರ್ಥ. ಅಂದರೆ ಭೇದಾಧಿಕರಣಗಳು ಯಾವುದು ಯಾವುದು ಆಗುತ್ತದೆಯೋ ಅವೆಲ್ಲಾ ಅಧಿಕರಣಗಳಿಂದ ನಿರೂಪಿಸಲ್ಪಟ್ಟವೃತ್ತಿತಾ ಆಗಬೇಕು. ಆರೀತಿಯಾದ ವೃತ್ತಿತ್ವಾಭಾವ ವಿವಕ್ಷಿತವಾಗಿದೆ. ಇಲ್ಲವಾದರೆ ಅತಿವ್ಯಾಪ್ತಿದೋಷ ಬರುತ್ತದೆ. 'ಧೂಮವಾನ್ ವಹ್ನೇಃ' ಎಂಬಲ್ಲಿ ವಹ್ನಿ ರೂಪಹೇತು ದುಷ್ಟಹೇತು. ಅಲ್ಲಿ ಈ ಲಕ್ಷಣ ಬರುತ್ತದೆ. ಸಾಧ್ಯ ಧೂಮ. ಸಾಧ್ಯವಾನ್—ಪರ್ವತಾದಿಗಳು. ಸಾಧ್ಯವದ್ಭೇದಾಧಿಕರಣವೆಂದರೆ ಯಾವುದೋ ಕೆಲವು ವಹ್ನಿ ಇಲ್ಲದಿರುವ ಜಲಹ್ರದಾದಿಗಳು. ತನ್ನಿರೂಪಿತ ವೃತ್ತಿತ್ವಾಭಾವವೇ ವಹ್ನಿ ರೂಪ ಅಸದ್ಧೇತುವಿನಲ್ಲಿ ಬರುತ್ತದೆ. ಈಗ ಸಾಧ್ಯವದ್ಭೇದಾಧಿಕರಣತ್ವಾವಚ್ಛಿನ್ನನಿರೂಪಿತವೃತ್ತಿತ್ವಾಭಾವಃ' ಎಂದುದರಿಂದ ಸಾಧ್ಯವದ್ಭೇದಾಧಿಕರಣಗಳು ಎಷ್ಟು ಇವೆಯೋ ಅವೆಲ್ಲವುಗಳನ್ನೂ ತೆಗೆದುಕೊಳ್ಳಬೇಕು. ಪ್ರಕೃತ ಸಾಧ್ಯವತ್ಪ್ರತಿಯೋಗಿಕಭೇದಾಧಿಕರಣಗಳು ಅಂದರೆ (ಪರ್ವತಪ್ರತಿಯೋಗಿಕಭೇದಾಧಿಕರಣಗಳು) ಹೇಗೆ ಜಲಹ್ರದಾದಿಗಳಾಗುತ್ತವೆಯೋ ಹಾಗೆಯೇ ಅಯೋಗೋಲಕವೂ ಆಗುತ್ತದೆ. ಅಲ್ಲಿ ವಹ್ನಿ ರೂಪಹೇತುವು ಇರುವುದರಿಂದ ವೃತ್ತಿತ್ವಾಭಾವ ಅದರಲ್ಲಿ ಬರುವುದಿಲ್ಲ. ಭೇದಾಧಿಕರಣಾಯೋಗೋಲಕನಿರೂಪಿತ ಸಂಯೋಗಸಂಬಂಧಾವಚ್ಛಿನ್ನ ವೃತ್ತಿತಾ ವಹ್ನಿಯಲ್ಲಿದೆ. ಈಗ ಲಕ್ಷಣ—ಸಾಧ್ಯತಾವಚ್ಛೇದಕಸಂಬಂಧಾವಚ್ಛಿನ್ನ—ಸಾಧ್ಯವತ್ತ್ವಾವಚ್ಛಿನ್ನಪ್ರತಿಯೋಗಿತಾಕ ಭೇದಾಧಿಕರಣತ್ವಾವಚ್ಛಿನ್ನ (ಅಧಿಕರಣ) ನಿರೂಪಿತ ಹೇತುತಾವಚ್ಛೇದಕಸಂಬಂಧಾವಚ್ಛಿನ್ನವೃತ್ತಿತ್ವಾಭಾವಃ' ಎಂದಾಗುತ್ತದೆ.

ಅತ್ರ ಯದ್ಯಪಿ—ದ್ರವ್ಯಂ ಗುಣಕರ್ಮಾನ್ಯತ್ವವಿಶಿಷ್ಟಸತ್ವಾದಿತ್ಯಾದೌ ವಿಶಿಷ್ಟಸತ್ತಾಯಾಃ ಶುದ್ಧಸತ್ತಾಯಾಶ್ಚೈಕ್ಯಾತ್ಸಾಧ್ಯವದನ್ಯಸ್ಮಿನ್ ಗುಣಾದಾವವೃತ್ತಿತ್ವಂ ನಾಸ್ತಿ । ತಥಾಪಿ ಹೇತುತಾವಚ್ಛೇದಕರೂಪೇಣಾವೃತ್ತಿತ್ವಂ ವಾಚ್ಯಮ್ । ಹೇತುತಾವಚ್ಛೇ

ದಕಂ ತಾದೃಶವೃತ್ತಿತಾನವಚ್ಛೇದಕಮಿತಿ ಫಲಿತೋಽರ್ಥಃ ||

ತಿರುಗಿ ಅವ್ಯಾಪ್ತಿದೋಷವನ್ನು ಹೋಗಲಾಡಿಸಲು ಸಾಧ್ಯವದ್ಭೇದಾಧಿಕರಣದಲ್ಲಿ ಹೇತುವು ಹೇತುತಾವಚ್ಛೇದಕರೂಪದಿಂದ ಇರಬಾರದೆಂದು ತಿರುಗಿಪರಿಷ್ಕರಿಸುತ್ತಾನೆ. 'ಅತ್ರ—' ಇತಿ. ಹೇತುತಾವಚ್ಛೇದಕವು ಪೂರ್ವೋಕ್ತವೃತ್ತಿತಾವಲ್ಲಿ ಅವಚ್ಛೇದಕವಾಗಿರಬೇಕೆಂದರ್ಥ. ಹೀಗೆ ಹೇಳದಿದ್ದರೆ 'ದ್ರವ್ಯಂ—ಗುಣಕರ್ಮಾನ್ಯತ್ವವಿಶಿಷ್ಟಸತ್ವಾತ್' ಎಂಬಲ್ಲಿ ಅವ್ಯಾಪ್ತಿ ಬರುತ್ತದೆ. ದ್ರವ್ಯಂ ಎಂದರೆ ದ್ರವ್ಯತ್ವಧರ್ಮದಿಂದ ಕೂಡಿರುವುದು ಎಂದರ್ಥ. ದ್ರವ್ಯ ಪಕ್ಷ. ದ್ರವ್ಯತ್ವಸಾಧ್ಯ. ಗುಣಕ....ತ್ವಾತ್ ಹೇತು. ಅನ್ಯತ್ವವೆಂದರೆ ಭೇದ. (ಅನ್ಯತಾ, ಅನ್ಯೋನ್ಯಾಭಾವ ಇವೆಲ್ಲಾ ಒಂದೇ ಅರ್ಥಗಳು.) ಗುಣಕರ್ಮಭೇದವಿಶಿಷ್ಟಸತ್ತಾ ಎಂಬುದು ದ್ರವ್ಯದಲ್ಲಿ ಮಾತ್ರ ಇದೆ. ಶುದ್ಧ (ಕೇವಲ) ಸತ್ತಾ ಎಂಬುದು ದ್ರವ್ಯ, ಗುಣ, ಕರ್ಮ ಈ ಮೂರರಲ್ಲಿಯೂ ಇದೆಯೆಂದು ಹೇಳಿದೆ. 'ವಿಶಿಷ್ಟಂ ಶುದ್ಧಾತ್ ನಾತಿರಿಚ್ಯತೇ' ಎಂದು ಒಂದು ನ್ಯಾಯವಿದೆ. ಈ ನ್ಯಾಯದಿಂದ ಗುಣಕರ್ಮಾನ್ಯತ್ವವಿಶಿಷ್ಟಸತ್ತೆಯೂ, ಶುದ್ಧಸತ್ತೆಯೂ ಒಂದಾಗುತ್ತದೆ. ಇವುಗಳಿಗೆ ಭೇದವಿಲ್ಲ. ಆಗ ಸಾಧ್ಯವತ್—ದ್ರವ್ಯವಾಗುತ್ತದೆ. (ದ್ರವ್ಯತ್ವಧರ್ಮದಿಂದ ಕೂಡಿರುವುದು.) ಸಾಧ್ಯವತ್ ಪ್ರತಿಯೋಗಿಕ ಭೇದಾಧಿಕರಣ—ಗುಣ, ಅಥವಾ ಕರ್ಮ. ಅಲ್ಲಿ ಹಿಂದೆ ಹೇಳಿದ ನ್ಯಾಯದಂತೆ ವಿಶಿಷ್ಟಸತ್ತೆಯು ಇರುವುದರಿಂದ ಭೇದಾಧಿಕರಣ ನಿರೂಪಿತವೃತ್ತಿತ್ವಾಭಾವ ಬರುವುದಿಲ್ಲ. ಆದುದರಿಂದ ಪುನಃ ಅವ್ಯಾಪ್ತಿದೋಷ ಬರುತ್ತದೆ. ಈಗ ಹೇತುತಾವಚ್ಛೇದಕದಲ್ಲಿ ಸಾಧ್ಯವದ್ಭೇದಕದಲ್ಲಿ ನಿರೂಪಿತವೃತ್ತಿತಾನವಚ್ಛೇದಕತ್ವ ಗೃಹೀತವಾದರೆ ದೋಷ ಬರುವುದಿಲ್ಲ. ಹೇತುತಾವಚ್ಛೇದಕಧರ್ಮ—ಗುಣಕರ್ಮಾನ್ಯತ್ವವಿಶಿಷ್ಟಸತ್ತಾತ್ವ. ಶುದ್ಧಸತ್ತಾ, ವಿಶಿಷ್ಟಸತ್ತಾ ಒಂದೇ ಎಂದು ಹೇಳಿದರೂ ಶುದ್ಧಸತ್ತಾತ್ವ, ವಿಶಿಷ್ಟಸತ್ತಾತ್ವಧರ್ಮಗಳು ಒಂದಾಗುವುದಿಲ್ಲ. ಅವು ಬೇರೆಬೇರೇ ಆಗುತ್ತವೆ. ಆಗ ಸಾಧ್ಯವದ್ಭೇದಾಧಿಕರಣ ನಿರೂಪಿತವೃತ್ತಿತಾನವಚ್ಛೇದಕಧರ್ಮವು ವಿಶಿಷ್ಟಸತ್ತಾತ್ವವೇ ಆಗುತ್ತದೆ. ವಿಶಿಷ್ಟಸತ್ತಾತ್ವರೂಪದಿಂದ ವಿಶಿಷ್ಟಸತ್ತೆಯು ಗುಣಕರ್ಮಗಳಲ್ಲಿರುವುದಿಲ್ಲ. ಕೇವಲ ದ್ರವ್ಯದಲ್ಲಿ ಮಾತ್ರ ಇರುತ್ತದೆ. ಸಾಧ್ಯಂ—ದ್ರವ್ಯತ್ವ. ಸಾಧ್ಯವತ್—ದ್ರವ್ಯ. ಸಾಧ್ಯವದ್ಭೇದಾಧಿಕರಣ (ಗುಣಃ ದ್ರವ್ಯಂ ನ) ಗುಣ ಅಥವಾ ಕರ್ಮ. ತನ್ನಿರೂಪಿತಾ ಯಾ ವೃತ್ತಿತಾ. ಗುಣತ್ವನಿಷ್ಠಾ, ಕರ್ಮತ್ವನಿಷ್ಠಾವೃತ್ತಿತಾ. ವೃತ್ತಿತಾವಚ್ಛೇದಕ ಧರ್ಮವೆಂದರೆ ಗುಣತ್ವತ್ವ, ಕರ್ಮತ್ವತ್ವ. ಅನವಚ್ಛೇದಕಧರ್ಮ—(ಅವಚ್ಛೇದಕವಾಗದಿರುವುದು) ಗುಣಕರ್ಮಾನ್ಯತ್ವವಿಶಿಷ್ಟಸತ್ತಾತ್ವರೂಪಧರ್ಮ. ಅದು ಉಳ್ಳದ್ದು ಗುಣಕರ್ಮಾನ್ಯತ್ವವಿಶಿಷ್ಟಸತ್ತಾರೂಪ ಹೇತುವಾಗುತ್ತದೆ. ಈಗ ಅವ್ಯಾಪ್ತಿಗೆ ಅವಕಾಶವಿಲ್ಲ. ಈಗ ಪೂರ್ವಪಕ್ಷವ್ಯಾಪ್ತಿಸ್ವರೂಪ—"ಸಾಧ್ಯತಾವಚ್ಛೇದಕಸಂಬಂಧಾವಚ್ಛಿನ್ನ, ಸಾಧ್ಯವತ್ತ್ವಾವಚ್ಛಿನ್ನಪ್ರತಿಯೋಗಿತಾಕಭೇದಾಧಿಕರಣತ್ವಾವಚ್ಛಿನ್ನ (ಭೇದಾಧಿಕರಣ) ನಿರೂಪಿತ, ಹೇತುತಾವಚ್ಛೇದಕಸಂಬಂಧಾವಚ್ಛಿನ್ನವೃತ್ತಿತಾನವಚ್ಛೇದಕ ಹೇತುತಾವಚ್ಛೇದಕ ಧರ್ಮವತ್ವಮ್"

ಎಂದು ಫಲಿತವಾಗುತ್ತದೆ. ಅಧಿಕರಣತಾನಿರೂಪಕತಾವಚ್ಛೇದಕ ಧರ್ಮವೇ ಅಧಿಕರಣ ನಿರೂಪಿತವೃತ್ತಿತಾವಚ್ಛೇದಕ ಧರ್ಮವಾಗಿರುತ್ತದೆ. ಆದುದರಿಂದ ಶುದ್ಧಸತ್ತಾತ್ವವೇ ಗುಣಾದಿ ನಿರೂಪಿತಾಧೇಯತಾವಚ್ಛೇದಕ ಧರ್ಮವಾಗಿರುತ್ತದೆ. ವಿಶಿಷ್ಟಸತ್ತಾತ್ವ ಆಗುವುದಿಲ್ಲ.

ನನು—ಕೇವಲಾನ್ವಯಿನಿ ಜ್ಞೇಯತ್ವಾದೌ ಸಾಧ್ಯೇ ಸಾಧ್ಯವದನ್ಯಸ್ಯಾಪ್ರಸಿದ್ಧತ್ವಾದ ವ್ಯಾಪ್ತಿಃ । ಕಿಂಚ ಸತ್ತಾವಾನ್ ಜಾತೇರಿತ್ಯಾದೌ ಸಾಧ್ಯವದನ್ಯಸ್ಮಿನ್ ಸಾಮಾನ್ಯಾದೌ ಹೇತುತಾವಚ್ಛೇದಕಸಂಬಂಧೇನ ಸಮವಾಯೇನ ವೃತ್ತೇರ ಪ್ರಸಿದ್ಧತ್ವಾದವ್ಯಾಪ್ತಿಶ್ಚಾತಆಹ—

ಇದುವರೆಗೆ ಹೇಳಿದ ಲಕ್ಷಣವು ಕೇವಲ ವ್ಯತಿರೇಕಿ ಅಥವಾ ಅನ್ವಯವ್ಯತಿರೇಕಿ ಹೇತುವಿನಲ್ಲಿ ಸಮನ್ವಿತವಾಗುವುದಲ್ಲದೆ ಕೇವಲಾನ್ವಯಿ ಹೇತುವಿನಲ್ಲಿ ಸಂಗತವಾಗುವುದಿಲ್ಲವೆಂದು ತೋರಿಸುತ್ತಾನೆ. 'ನನು'—ಇತಿ. (ಭೇದಪ್ರತಿಯೋಗಿತಾನವಚ್ಛೇದಕತ್ವಂ ಕೇವಲಾನ್ವಯಿತ್ವಂ ಪ್ರಮೇಯತ್ವಾದಿ ಕೆಲವು ಹೇತುಗಳು ಕೇವಲಾನ್ವಯಿಯಾಗಿರುತ್ತವೆ.) ಇದಂ ವಾಚ್ಯಂ—(ವಾಚ್ಯತ್ವವತ್)—ಜ್ಞೇಯತ್ವಾತ್ । ಈಶ್ವರೇಚ್ಛಾವಿಷಯೀಭೂತಳಾದ ಪದಾರ್ಥಗಳೆಲ್ಲಾ ವಾಚ್ಯಗಳಾಗುತ್ತವೆ. ಹೀಗೆಯೇ ಪ್ರಮಾವಿಷಯವಾದ ಪದಾರ್ಥವೆಲ್ಲವೂ ಪ್ರಮೇಯ. ಜ್ಞಾನಕ್ಕೆ ವಿಷಯವಾದ ಪದಾರ್ಥವೆಲ್ಲವೂ ಜ್ಞೇಯಗಳು. ಆದುದರಿಂದ ಪದಾರ್ಥಸಾಮಾನ್ಯದಲ್ಲಿರುವ ಧರ್ಮಗಳೇ ವಾಚ್ಯತ್ವ, ಜ್ಞೇಯತ್ವಾದಿಗಳಾಗುತ್ತವೆ. ಅತ್ಯಂತಾಭಾವಾಪ್ರತಿಯೋಗಿತ್ವಂ, ಕೇವಲಾನ್ವಯಿತ್ವಮ್. ವಸ್ತುವೆಂದರೆ ಅದು ವಾಚ್ಯತ್ವಾದಿಧರ್ಮದಿಂದ ಕೂಡಿಯೇ ಇರುತ್ತದೆ. ವಾಚ್ಯವತ್ ಎಂದರೆ ಸಕಲಪದಾರ್ಥವೂ ಆಗುವಾಗ 'ವಾಚ್ಯತ್ವವತ್ ನ' ಎಂದು ಭೇದ ಹೇಳುವುದು ಹೇಗೆ? ಭೇದಾಧಿಕರಣವೇ ಅಪ್ರಸಿದ್ಧವಾಗುತ್ತದೆ. ವಾಚ್ಯತ್ವವಿಲ್ಲದ ವಸ್ತು ಹೇಳಬೇಕು. ಅದು ಇಲ್ಲ. ಆಗ ಭೇದಾಧಿಕರಣ ನಿರೂಪಿತ ವೃತ್ತಿತಾ ಎಂಬುದೂ ಅಪ್ರಸಿದ್ಧವಾಗಿ ಅವೃತ್ತಿತ್ವವೆಂಬುದನ್ನು ಹೇಳಲು ಸಾಧ್ಯವೇ ಇಲ್ಲ. ಅಭಾವ ಜ್ಞಾನವು ಪ್ರತಿಯೋಗಿಜ್ಞಾನಾಧೀನವಾಗಿರುವುದರಿಂದ ವೃತ್ತಿತಾ ಇದ್ದರೆ ಅದರ ಅಭಾವ ಹೇಳಬಹುದಿತ್ತು. ಕೇವಲಾನ್ವಯಿ ಸ್ಥಳದಲ್ಲಿ ಹಿಂದೆ ಹೇಳಿದಂತೆ ಭೇದಾಧಿಕರಣವನ್ನು ತೋರಿಸಲು ಸಾಧ್ಯವಿಲ್ಲವಾದುದರಿಂದ ಅವ್ಯಾಪ್ತಿ ಬರುತ್ತದೆ.

ಪಕ್ಷವೆಂದರೆ ಅದರಲ್ಲಿ ಸಾಧ್ಯಸಂಶಯವಿರಬೇಕು. ಪರ್ವತಪಕ್ಷವಾಗಬೇಕಾದರೆ ಅದರಲ್ಲಿ ವಹ್ನಿರೂಪಸಾಧ್ಯಸಂಶಯವಿರುತ್ತದೆ. ಕೇವಲಾನ್ವಯಿತ್ವಜ್ಞಾನಕಾಲದಲ್ಲಿ 'ಇದಂ ವಾಚ್ಯತ್ವವನ್ನವಾ' ಎಂಬ ಪಕ್ಷತಾಸಂಪಾದಕಸಂಶಯವೇ ಇರುವುದಿಲ್ಲ. ಆಗ ಅನುಮಿತಿಗೂ ಅವಕಾಶವಿಲ್ಲ. ಕೇವಲಾನ್ವಯಿತ್ವಜ್ಞಾನ ಇಲ್ಲದಿರುವಾಗ ಭ್ರಮಾತ್ಮಕ ವ್ಯಾಪ್ತಿಜ್ಞಾನದಿಂದ ಹೇಗಾದರೂ ಅನುಮಿತಿ ಬರಬಹುದು. ಹೀಗಿರುವಾಗ ಕೇವಲಾ

ನ್ವಯಿಸ್ಥಳದಲ್ಲಿ ಅವ್ಯಾಪ್ತ್ಯಾಶಂಕಾನಮಾಡಿರುವುದು ಸರಿಯಲ್ಲವೆಂದು. ಅಸ್ವಾರಸ್ಯವನ್ನು ಎಣಿಸಿ ಸ್ಥಳಾಂತರದಲ್ಲಿ ಅವ್ಯಾಪ್ತಿ ತೋರಿಸುತ್ತಾನೆ. 'ಕಿಂಚ—' ಇತಿ. ಘಟಃ ಸತ್ತಾವಾನ್ ಜಾತೇಃ ಎಂಬಲ್ಲಿ ಅವ್ಯಾಪ್ತಿ ಬರುತ್ತದೆ. ಘಟವು ಜಾತಿಯಿಂದ ಕೂಡಿರುವುದರಿಂದ ಸತ್ತಾಜಾತಿಯಿಂದಲೂ ಕೂಡಿರುತ್ತದೆ ಎಂದರ್ಥ. ಇಲ್ಲಿ ಸಾಧ್ಯ—ಸತ್ತಾ. ಸಾಧ್ಯವತ್—ದ್ರವ್ಯ, ಗುಣ, ಕರ್ಮ ಮೂರೂ ಆಗುತ್ತವೆ. ಮೂರುಪದಾರ್ಥಗಳಲ್ಲಿಯೂ ಸತ್ತಾ ಸಮವಾಯಸಂಬಂಧದಿಂದ ಇರುತ್ತದೆ. ಸಾಧ್ಯವದ್ಭೇದಾಧಿಕರಣಂ—ಸಾಮಾನ್ಯಾದಿಗಳಾಗುತ್ತವೆ. (ಸಾಮಾನ್ಯಂ—ಸತ್ತಾವಾನ್‌ನ ಎಂದು ಭೇದ ಹೇಳಲು ಸಾಧ್ಯ.) ಹೇತುತಾವಚ್ಛೇದಕಸಂಬಂಧ—ಸಮವಾಯ. ಭೇದಾಧಿಕರಣಗಳಾದ ಸಾಮಾನ್ಯಾದಿಗಳಲ್ಲಿ ಸಮವಾಯಸಂಬಂಧದಿಂದ ಯಾವುದಾದರೂ ಇರುವುದಾಗಿದ್ದರೆ ಆಗ ತನ್ನಿರೂಪಿತ ಹೇತುತಾವಚ್ಛೇದಕಸಂಬಂಧಾವಚ್ಛಿನ್ನವೃತ್ತಿತಾ ಹೇಳಲು ಸಾಧ್ಯವಾಗುತ್ತಿತ್ತು. ಆದರೆ ಸಾಮಾನ್ಯಾದಿಗಳಲ್ಲಿ ಸಮವಾಯಸಂಬಂಧದಿಂದ ಯಾವುದೂ ಇಲ್ಲದಿರುವುದರಿಂದ ಆರೀತಿಯಾದ ವೃತ್ತಿತಾ ಎಂಬುದೇ ಅಪ್ರಸಿದ್ಧವಾಗುವುದರಿಂದ ಹೇತುವಿನಲ್ಲಿ ವೃತ್ತಿತ್ವಾಭಾವ ಹೇಳಲೂ ಸಾಧ್ಯವಿಲ್ಲ. ಆದುದರಿಂದ ಈ ವ್ಯಾಪ್ತಿಲಕ್ಷಣವನ್ನಿಟ್ಟುಕೊಂಡರೆ ಅವ್ಯಾಪ್ತಿ ಬಂದೇ ಬರುತ್ತದೆ. ಅದಕ್ಕೋಸ್ಕರ ಸಿದ್ಧಾಂತಲಕ್ಷಣವನ್ನು ಕಾರಿಕೆಯಲ್ಲಿ ಪ್ರದರ್ಶಿಸುತ್ತಾನೆ.

**ಅಥವಾ ಹೇತುಮನ್ನಿಷ್ಠವಿರಹಾಪ್ರತಿಯೋಗಿನಾ ।**
**ಸಾಧ್ಯೇನ ಹೇತೋರೈಕಾಧಿಕರಣ್ಯಂ ವ್ಯಾಪ್ತಿರುಚ್ಯತೇ ॥ ೬೯ ॥**

ಹೇತುಮತಿ (—ಸಾಧನಾಧಿಕರಣದಲ್ಲಿ) ನಿಷ್ಠಾ (—ಸ್ಥಿತಿಃ) ಯಸ್ಯ ಸಃ, ಹೇತುಮನ್ನಿಷ್ಠಃ (ಸಾಧನಾಧಿಕರಣದಲ್ಲಿರುವುದು) ಹೇತುಮನ್ನಿಷ್ಠಶ್ಚಾಸೌ ವಿರಹಶ್ಚ. ತಸ್ಯ ಅಪ್ರತಿಯೋಗಿ. ತೇನ ಐಕಾಧಿಕರಣ್ಯಂ—ಸಾಮಾನಾಧಿಕರಣ್ಯಂ. ಒಂದೇ ಆಶ್ರಯದಲ್ಲಿರುವಿಕೆ. ಹೇತುವಿನ ಅಧಿಕರಣದಲ್ಲಿರುವ ಅತ್ಯಂತಾಭಾವಕ್ಕೆ ಅಪ್ರತಿಯೋಗಿಯಾದ (ಪ್ರತಿಯೋಗಿಯಾಗದಿರುವ ಸಾಧ್ಯದೊಡನೆ ಹೇತುವಿಗೆ ಸಾಮಾನಾಧಿಕರಣ್ಯವೇನಿದೆಯೋ ಅದೇ ವ್ಯಾಪ್ತಿ. 'ಹೇತ್ವಧಿಕರಣವೃತ್ತ್ಯತ್ಯಂತಾಭಾವಾಽಪ್ರತಿಯೋಗಿಸಾಧ್ಯಸಾಮಾನಾಧಿಕರಣ್ಯಂ' ಎಂದು ಫಲಿತವಾಗುತ್ತದೆ. ಸಮನ್ವಯವನ್ನು ಮುಕ್ತಾವಳಿಯಲ್ಲಿ ತೋರಿಸುತ್ತಾನೆ. ಈ ಲಕ್ಷಣವನ್ನಾಶ್ರಯಿಸಿದರೆ ಕೇವಲಾನ್ವಯಿಸ್ಥಳದಲ್ಲಿ ಅವ್ಯಾಪ್ತಿ ಬರುವುದಿಲ್ಲ. ಹೇತು—ಜ್ಞೇಯತ್ವ. ಹೇತ್ವಧಿಕರಣಂ—ವಾಚ್ಯವಾದ ಘಟಪಟಾದಿಗಳು. ತದ್ವೃತ್ತಿಃ ಅಭಾವಃ (ಅದರಲ್ಲಿರುವ ಅಭಾವ) —ವಾಚ್ಯತ್ವಾಭಾವವಾಗುವುದಿಲ್ಲ. ವಾಚ್ಯತ್ವ ಅದರಲ್ಲಿದೆ. ಅಲ್ಲಿ ಇಲ್ಲದಿರುವುದು ಅಂದರೆ ಪಟಾಭಾವಾದಿ. ಅಭಾವಕ್ಕೆ ಪ್ರತಿಯೋಗಿ—ಪಟಾದಿಗಳು ಅಪ್ರತಿಯೋಗಿ ಯತ್ ಸಾಧ್ಯಂ—ವಾಚ್ಯತ್ವ. ಇದರೊಡನೆ ಜ್ಞೇಯತ್ವಕ್ಕೆ ಸಾಮಾನಾಧಿಕರಣ್ಯವಿರುತ್ತದೆ. ವಾಚ್ಯತ್ವರೂಪಸಾಧನವಿರುವ ಘಟರೂಪ ಅಧಿಕರಣದಲ್ಲಿ ಜ್ಞೇಯತ್ವರೂಪಹೇತುವೂ ಇರುತ್ತದೆಂದರ್ಥ.

ಹೇತುಮತಿ ನಿಷ್ಠಾ ವೃತ್ತಿರ್ಯಸ್ಯ ಸ ತಥಾ ವಿರಹೋಽಭಾವಃ. ತಥಾ ಚ ಹೇತ್ವಧಿಕರಣ ವೃತ್ತ್ಯೋರ್ಯೋಽಭಾವಃ ತದಪ್ರತಿಯೋಗಿನಾ ಸಾಧ್ಯೇನ ಸಹ ಹೇತೋಃ ಸಾಮಾನಾಧಿಕರಣ್ಯಂ ವ್ಯಾಪ್ತಿರುಚ್ಯತೇ । ಅತ್ರ ಯದ್ಯಪಿ ವಹ್ನಿಮಾನ್ ಧೂಮಾದಿತ್ಯಾದೌ ಹೇತ್ವಧಿಕರಣಪರ್ವತಾದಿ ವೃತ್ತ್ಯಭಾವಪ್ರತಿಯೋಗಿತ್ವಂ ತತ್ತದ್ವಹ್ನ್ಯಾದೇರಸ್ತೀತ್ಯವ್ಯಾಪ್ತಿಃ, ನ ಚ ಸಮಾನಾಧಿಕರಣ ವಹ್ನಿಧೂಮಯೋರೇವ ವ್ಯಾಪ್ತಿರಿತಿ ವಾಚ್ಯಮ್ । ತತ್ತದ್ವಹ್ನ್ಯಾದೇ ರಪ್ಯುಭಯಾಭಾವಸತ್ವಾದೇಕಸತ್ವೇಽಪಿ ದ್ವಯಂ ನಾಸ್ತೀತಿ ಪ್ರತೀತೇಃ । ಗುಣವಾನ್ ದ್ರವ್ಯತ್ವಾದಿತ್ಯಾದಾವವ್ಯಾಪ್ತಿಶ್ಚ, ತಥಾಪಿ ಪ್ರತಿಯೋಗಿತಾನವಚ್ಛೇದಕಂ ಯತ್ಸಾಧ್ಯತಾವಚ್ಛೇದಕಂ ತದವಚ್ಛಿನ್ನಸಾಮಾನಾಧಿಕರಣ್ಯಂ ವ್ಯಾಪ್ತಿರಿತಿ ಜ್ಞೇಯಮ್ ॥

ಕಾರಿಕೆಯ ಅರ್ಥವನ್ನು ವಿವರಿಸುತ್ತಾನೆ. 'ಹೇಮುಮತಿ—' ಇತಿ. ಹೇತ್ವಧಿಕರಣದಲ್ಲಿರುವ ಅಭಾವಕ್ಕೆ ಅಪ್ರತಿಯೋಗಿಯಾಗಿರುವ ಸಾಧ್ಯದೊಡನೆ ಏಕಾಶ್ರಯವುಳ್ಳದ್ದು. ವ್ಯಾಪ್ತಿಯಸ್ವರೂಪ. ವ್ಯಾಪ್ಯದಲಕ್ಷಣ. ಪರ್ವತೋ—ವಹ್ನಿಮಾನ್—ಧೂಮಾತ್' ಎಂಬಲ್ಲಿ ಧೂಮವಲ್ಲಿ ಸಮನ್ವಯ ಹೇತುಃ—ಧೂಮ. ಹೇತ್ವಧಿಕರಣಂ—ಪರ್ವತ. ತದ್ವೃತ್ತಿಃ ಯಃ ಅಭಾವಃ—ಅದರಲ್ಲಿರುವ ಅಭಾವ ಅಂದರೆ ವಹ್ನಿಯಅಭಾವ ಹೇಳಲು ಬರುವುದಿಲ್ಲ. ಪ್ರತಿಯೋಗಿ ಇದ್ದಲ್ಲಿ ಅಭಾವವಿರುವುದಿಲ್ಲ. ವಹ್ನಿ ಇರುವಾಗ ವಹ್ನಿರ್ನಾಸ್ತಿ' ಎಂದು ಹೇಳಲು ಬರುವುದಿಲ್ಲ. 'ಘಟಃ ನಾಸ್ತಿ' ಇತಿಪ್ರತೀತಿಸಾಕ್ಷಿಕಾಭಾವಃ, ಅಭಾವದ ಪ್ರತಿಯೋಗೀ—ಘಟಃ. ಅಪ್ರತಿಯೋಗಿ ಯತ್ ಸಾಧ್ಯಂ—ವಹ್ನಿ. ಇದರೊಡನೆ ಧೂಮಕ್ಕೆ ಸಾಮಾನಾಧಿಕರಣ್ಯ ಅಂದರೆ ಏಕಾಶ್ರಯವಿರುತ್ತದೆ. 'ಧೂಮವಾನ್ ವಹ್ನೇಃ' ಎಂಬ ಅಸದ್ಧೇತುಸ್ಥಳದಲ್ಲಿ ಹೇತು.—ವಹ್ನಿ. ಅದರ ಅಧಿಕರಣ ಪರ್ವತಾದಿಗಳು ಆದಂತೆ ಅಯೋಗೋಲಕವೂ ಆಗುತ್ತದೆ. ಅಲ್ಲಿರುವ ಅತ್ಯಂತಾಭಾವವೆಂದರೆ ಧೂಮದ ಅತ್ಯಂತಾಭಾವವೂ ಆಗುತ್ತದೆ. ಅತ್ಯಂತಾಭಾವದ ಪ್ರತಿಯೋಗಿಯೇ ಸಾಧ್ಯವಾದ ಧೂಮವಾಗುತ್ತದೆ. ಸಾಧ್ಯವು ಅಪ್ರತಿಯೋಗಿ ಆಗಬೇಕಾದದ್ದು. ಅಪ್ರತಿಯೋಗಿಸಾಧ್ಯವಿಲ್ಲವಾದುದರಿಂದ ಅಲ್ಲಿ ಲಕ್ಷಣವು ಅತಿವ್ಯಾಪ್ತವಾಗುವುದಿಲ್ಲ. 'ಸತ್ತಾವಾನ್—ಜಾತೇಃ' ಎಂಬಲ್ಲಿ ಅವ್ಯಾಪ್ತಿಯೂ ಬರುವುದಿಲ್ಲ. ಹೇತು—ಜಾತಿ. ಹೇತ್ವಧಿಕರಣ—ದ್ರವ್ಯ, ಗುಣ, ಕರ್ಮ, ಮೂರೂ ಆಗುತ್ತವೆ. ಪ್ರಕೃತಘಟರೂಪದ್ರವ್ಯವನ್ನು ತೆಗೆದುಕೊಂಡರೆ ಅದರಲ್ಲಿರುವ ಅತ್ಯಂತಾಭಾವವೆಂದರೆ ಸತ್ತಾತ್ಯಂತಾಭಾವ ತೆಗೆದುಕೊಳ್ಳಲು ಸಾಧ್ಯವಿಲ್ಲ. ಸತ್ತಾ ಅಲ್ಲಿ ಇದ್ದೇ ಇದೆ. ಆದುದರಿಂದ ಪಟಾಭಾವಾದಿಗಳನ್ನು ತೆಗೆದುಕೊಂಡರೆ ಅತ್ಯಂತಾಭಾವದ ಪ್ರತಿಯೋಗೀ ಪಟಾದಿ. ಅಪ್ರತಿಯೋಗಿ ಯತ್ ಸಾಧ್ಯಂ—ಸತ್ತಾ. ಅದರೊಡನೆ ಜಾತಿ ರೂಪ ಹೇತುವಿಗೆ ಏಕಾಶ್ರಯವೃತ್ತಿತ್ವ ಬರುತ್ತದೆ.

ಪ್ರಸಿದ್ಧಾನುಮಾನದಲ್ಲಿ ಅವ್ಯಾಪ್ತಿಯನ್ನು ಆಶಂಕಿಸಿ ಪರಿಹಾರವನ್ನು ತೋರಿಸು

ತ್ತಾನೆ. 'ಅತ್ರ—' ಇತಿ. 'ವಹ್ನಿಮಾನ್ ಧೂಮಾತ್' ಎಂಬಲ್ಲಿ ಹೇತ್ವಧಿಕರಣವೆಂದರೆ ಯಾವುದೋ ಒಂದು ಪರ್ವತ. ಅದರಲ್ಲಿರುವ ಅತ್ಯಂತಾಭಾವವೆಂದರೆ ಮಹಾನಸೀಯವಹ್ನ್ಯಭಾವ (ಅಡಿಗೆ ಮನೆಯಲ್ಲಿರುವ ವಹ್ನಿಯ ಅಭಾವ) 'ಪರ್ವತೇ ಮಹಾನಸೀಯವಹ್ನಿಃನಾಸ್ತಿ' ಎಂದು ಹೇಳಬಹುದು. ಆಗ ಅತ್ಯಂತಾಭಾವಪ್ರತಿಯೋಗಿಯೇ ವಹ್ನಿರೂಪಸಾಧ್ಯವಾಗುತ್ತದೆ. ಚಾಲಿನೀ (ಜರಡಿ) ನ್ಯಾಯದಿಂದ ಎಲ್ಲಾ ವಹ್ನಿಗಳೂ ಪ್ರತಿಯೋಗಿಯೇ ಆಗುತ್ತವೆ. ಮಹಾನಸತೆಗೆದುಕೊಂಡರೆ ಅಲ್ಲಿ ಚತ್ವರವಹ್ನಿ ಇಲ್ಲವೆನ್ನಬಹುದು. ಚತ್ವರತೆಗೆದುಕೊಂಡರೆ ಅಲ್ಲಿ ಪರ್ವತದಬೆಂಕಿ ಇಲ್ಲವೆನ್ನಬಹುದು. ಹೀಗೆ ಯಾವ ವಹ್ನಿ ತೆಗೆದುಕೊಂಡರೂ ಅದು ಒಂದು ರೀತಿಯಿಂದ ಅಭಾವಪ್ರತಿಯೋಗಿಯೇ ಆಗುವುದರಿಂದ ಅಪ್ರತಿಯೋಗಿಸಾಧ್ಯವನ್ನು ತರಲು ಸಾಧ್ಯವಿಲ್ಲವಾದುದರಿಂದ ಅವ್ಯಾಪ್ತಿ ಬರುತ್ತದೆ.

ಪರ್ವತೀಯವಹ್ನ್ಯಾದಿಗಳಿಗೆ ಪರ್ವತೀಯಧೂಮಾದಿಗಳೊಡನೆಮಾತ್ರ ವ್ಯಾಪ್ತಿ ಹೇಳಿದರೆ ದೋಷಬರುವುದಿಲ್ಲವೆಂದು ಆಶಂಕಿಸುತ್ತಾನೆ. 'ನಚ'—ಇತಿ. ಸಮಾನಾಧಿಕರಣ ವಹ್ನಿಧೂಮಗಳಿಗೆ ಮಾತ್ರ ವ್ಯಾಪ್ತಿಯೆಂದು ತಾತ್ಪರ್ಯ. ಒಂದುಪರ್ವತದಲ್ಲಿರುವ ಧೂಮ ತೆಗೆದುಕೊಂಡರೆ ಅಲ್ಲಿರುವ ವಹ್ನಿರೂಪ ಸಾಧ್ಯವನ್ನೇ ತೆಗೆದುಕೊಳ್ಳುತ್ತೇವೆ. ಅಡಿಗೆಮನೆಯಲ್ಲಿರುವ ವಹ್ನಿಸಾಧನೆಗೆ ಅಡಿಗೆಮನೆಯಲ್ಲಿರುವ ಧೂಮವನ್ನೇ ಹೇಳುತ್ತೇವೆ. ಚತ್ವರೀಯ ಧೂಮದೊಡನೆ ಚತ್ವರೀಯವಹ್ನಿಗೇ ವ್ಯಾಪ್ತಿ. ಹೀಗೆ ವಿಶೇಷರೂಪದಿಂದ ವ್ಯಾಪ್ತಿ ಹೇಳಿದರೆ ಆಗ ಹಿಂದೆ ಹೇಳಿದ ಅವ್ಯಾಪ್ತಿಗೆ ಅವಕಾಶವಿಲ್ಲ. ಪರ್ವತೀಯ ಧೂಮರೂಪ ಹೇತ್ವಧಿಕರಣಪರ್ವತವೇ. ಅಲ್ಲಿ ಪರ್ವತೀಯವಹ್ನ್ಯತ್ಯಂತಾಭಾವ ಹೇಳಲು ಸಾಧ್ಯವಿಲ್ಲ. ಘಟಾದಿಗಳ ಅತ್ಯಂತಾಭಾವ ಹೇಳಿದರೆ ಆಗ ಅಪ್ರತಿಯೋಗಿಸಾಧ್ಯವು ಪರ್ವತೀಯವಹ್ನಿಯೇ ಆಗುತ್ತದೆ. ಅದರೊಡನೆ ಪರ್ವತೀಯಧೂಮಕ್ಕೆ ಸಾಮಾನಾಧಿಕರಣ್ಯ ಬಂದೇ ಬರುತ್ತದೆ.

ಹೀಗೆ ಹೇಳಿದರೂ ಬೇರೆ ರೀತಿಯಿಂದ ಅವ್ಯಾಪ್ತಿ ತೋರಿಸುತ್ತಾನೆ, 'ತತ್ರಾತ್—' ಇತಿ. 'ಏಕಸತ್ವೇಽಪಿ ದ್ವಯಂ ನಾಸ್ತಿ' ಎಂಬ ನಿಯಮ. ಘಟವಿದ್ದರೆ ಘಟಪಟಗಳು ಭಯವಿಲ್ಲವೆಂದು ಹೇಳಬಹುದು. ಹಾಗೆ ಪರ್ವತದಲ್ಲಿ ಪರ್ವತೀಯವಹ್ನಿ ಇದ್ದರೂ 'ಪರ್ವತೀಯವಹ್ನಿಘಟೋಭಯಂ ನಾಸ್ತಿ' ಎಂಬ ಪ್ರತೀತಿ ಬರುತ್ತದೆ. ಇದಕ್ಕೆ ಉಭಯಾಭಾವವೆಂದು ಹೆಸರು. ಈ ಉಭಯಾಭಾವಕ್ಕೆ ಹೇಗೆ ಘಟವು ಪ್ರತಿಯೋಗಿಯಾಗುತ್ತದೋ ಅದರಂತೆ ಪರ್ವತವಹ್ನಿಯೂ ಪ್ರತಿಯೋಗಿಯಾಗುತ್ತದೆ. ಅಪ್ರತಿಯೋಗಿಯಾದ ಸಾಧ್ಯ ಇಲ್ಲದಿರುವುದರಿಂದ ತಿರುಗಿ ಅವ್ಯಾಪ್ತಿ ಬರುತ್ತದೆ.

ಈ ರೀತಿಯಾದ ಉಭಯಾಭಾವವನ್ನು ತೆಗೆದುಕೊಂಡು ಅವ್ಯಾಪ್ತಿ ಹೇಳುವುದಾದರೆ ಆಗ ಹೇತ್ವಧಿಕರಣವೃತ್ತ್ಯಭಾವನಿರೂಪಿತಪ್ರತಿಯೋಗಿತೆಯಲ್ಲಿ ವ್ಯಾಸಜ್ಯವೃತ್ತಿಧರ್ಮಾನವಚ್ಛಿನ್ನತ್ವವಿಶೇಷಣ ಹೇಳುತ್ತೇವೆ. ವಹ್ನಿಘಟೋಭಯದಲ್ಲಿರುವ ಧರ್ಮವು

ವ್ಯಾಸಜ್ಯವೃತ್ತಿಯಾಗಿರುತ್ತದೆ ಈಗ ಪರ್ವತದಲ್ಲಿ 'ವಹ್ನಿಘಟದ್ವಯಂನಾಸ್ತಿ' ಎಂಬ ಅಭಾವ ಬಂದರೆ ಅಭಾವಪ್ರತಿಯೋಗಿತಾ ವಹ್ನಿಯಲ್ಲಿ ಬಂದಿದೆಯೆಂದು ಹಿಂದೆ ಹೇಳಿದೆ. ಆದರೆ ಅದು ವ್ಯಾಸಜ್ಯವೃತ್ತಿಧರ್ಮಾನವಚ್ಛಿನ್ನವಾಗುವುದಿಲ್ಲ. ವಹ್ನಿಘಟಗಳೆರಡರಲ್ಲಿರುವ ವಹ್ನಿಘಟೋಭಯತ್ವರೂಪಧರ್ಮಾವಚ್ಛಿನ್ನವಾಗಿರುತ್ತದೆ. ವಹ್ನಿಘಟೋಭಯತ್ವರೂಪ ಧರ್ಮವು ವ್ಯಾಸಜ್ಯವೃತ್ತಿಯಾಗಿರುತ್ತದೆ. ವಹ್ನಿನಿಷ್ಠಪ್ರತಿಯೋಗಿತಾ ತದವಚ್ಛಿನ್ನವಾಗು ವುದರಿಂದ ಉಭಯಾಭಾವತಗೆದುಕೊಳ್ಳಲು ಬರುವುದಿಲ್ಲ. ಶುದ್ಧಘಟಾಭಾವವನ್ನು ತೆಗೆದುಕೊಂಡೇ ಸಮನ್ವಯಮಾಡಬೇಕು. ಆಗ ಅವ್ಯಾಪ್ತಿಗೆ ಅವಕಾಶವಿರುವುದಿಲ್ಲ. ಆಗ ಲಕ್ಷಣ—'ಹೇತ್ವಧಿಕರಣವೃತ್ತಿವ್ಯಾಸಜ್ಯವೃತ್ತಿಧರ್ಮಾನವಚ್ಛಿನ್ನಪ್ರತಿಯೋಗಿತಾ ನಿರೂಪಕಾಭಾವಾಪ್ರತಿಯೋಗಿ ಸಾಧ್ಯಸಾಮಾನಾಧಿಕರಣ್ಯಂ' (ಹೇತೋಃ) ಎಂದಾಗು ತ್ತದೆ.

ಹೀಗೆ ಹೇಳಿದರೆ ಸ್ಥಳಾಂತರದಲ್ಲಿ ಅವ್ಯಾಪ್ತಿ ತೋರಿಸುತ್ತಾನೆ. 'ಗುಣವಾನ್—' ಇತಿ. ಘಟಃ—ಗುಣವಾನ್—ದ್ರವ್ಯತ್ವಾತ್' (ಘಟ ದ್ರವ್ಯವಾದುದರಿಂದ ಗುಣದಿಂದ ಕೂಡಿದೆ.) ಇಲ್ಲಿ ಹೇತು—ದ್ರವ್ಯತ್ವ. ಅದಕ್ಕೆ ಅಧಿಕರಣ ರಕ್ತಘಟಃ ಅಲ್ಲಿರುವ ಅತ್ಯಂತಾ ಭಾವ ಅಂದರೆ ಪೀತಗುಣಾಭಾವ. ಹೀಗೆ ಪೀತಘಟವಾದರೆ ಶ್ಯಾಮಗುಣಾತ್ಯಂತಾಭಾವ, ಶ್ಯಾಮಘಟವಾದರೆ ಶ್ವೇತಗುಣಾತ್ಯಂತಾಭಾವಾದಿಗಳನ್ನು ತಿಳಿಯಬೇಕು. ಆಗ ಎಲ್ಲಾ ಗುಣಗಳೂ ಪ್ರತಿಯೋಗಿಯೇ ಆಗುತ್ತವೆ. ಅಪ್ರತಿಯೋಗಿಯಾದ ಗುಣರೂಪ ಸಾಧ್ಯ ಸಿಗದಿರುವುದರಿಂದ ಅವ್ಯಾಪ್ತಿ ಬರುತ್ತದೆ.

ಆಗ ಸಿದ್ಧಾಂತಿಯು ಪರಿಷ್ಕೃತಲಕ್ಷಣವನ್ನು ತೋರಿಸುತ್ತಾನೆ. 'ತಥಾಪಿ—' ಇತಿ. ಹೇತ್ವಧಿಕರಣವೃತ್ತ್ಯಭಾವಪ್ರತಿಯೋಗಿತಾಯಾಃ ಅನವಚ್ಛೇದಕಂ ಯತ್ ಸಾಧ್ಯ ತಾವಚ್ಛೇದಕಂ, ತದವಚ್ಛಿನ್ನೇನ ಸಾಧ್ಯೇನ ಹೇತೋಃ ಸಾಮಾನಾಧಿಕರಣ್ಯಂ ವ್ಯಾಪ್ತಿಃ' ಎಂದು ಹೇಳುವುದರಿಂದ ಹಿಂದಿನ ದೋಷಕ್ಕೆ ಅವಕಾಶವಿಲ್ಲ. ಸಾಧ್ಯತಾವಚ್ಛೇದಕ ಧರ್ಮವು ಅಭಾವೀಯಪ್ರತಿಯೋಗಿತೆಯಲ್ಲಿ ಅವಚ್ಛೇದಕವಾಗಿರಬಾರದು. ಹಿಂದಿನ ಲಕ್ಷ್ಯದಲ್ಲಿ ಸಾಧ್ಯ—ಗುಣ. ಸಾಧ್ಯತಾವಚ್ಛೇದಕಧರ್ಮ—ಗುಣತ್ವ. ಹೇತ್ವಧಿ ಕರಣವಾದ ಘಟದಲ್ಲಿ 'ಗುಣತ್ವೇನ ಗುಣೋ ನಾಸ್ತಿ' ಎಂದು ಗುಣಸಾಮಾನ್ಯಾಭಾವ ಹೇಳಲು ಬರುವುದಿಲ್ಲ. ಯಾವುದಾದರೊಂದು ಗುಣವಿದ್ದೇ ಇರುತ್ತದೆ. ಹಿಂದೆ ಹೇಳಿ ದಂತೆ ರಕ್ತ ಘಟದಲ್ಲಿ 'ಪೀತಗುಣಾಭಾವಃ' ಎಂದು ವಿಶೇಷರೂಪದಿಂದ ಅಭಾವ ಹೇಳ ಬಹುದು. ಅಭಾವಕ್ಕೆ ಪ್ರತಿಯೋಗೀ ಪೀತಗುಣಾದಿಗಳು. ಪ್ರತಿಯೋಗಿತಾ ಪೀತ ಗುಣಾದಿನಿಷ್ಠಾ, ಪ್ರತಿಯೋಗಿತಾವಚ್ಛೇದಕ—ಪೀತಗುಣತ್ವ, ಶಾಮಗುಣತ್ವಾದಿಗಳಾಗು ತ್ತವೆ. ಪ್ರತಿಯೋಗಿತಾನವಚ್ಛೇದಕಂ ಯತ್ಸಾಧ್ಯತಾವಚ್ಛೇದಕಂ—ಶುದ್ಧ (ಕೇವಲ) ಗುಣತ್ವಂ, ತದವಚ್ಛಿನ್ನಂ ಸಾಧ್ಯಂ— ಗುಣಃ ಗುಣದೊಡನೆ ದ್ರವ್ಯತ್ವರೂಪಹೇತುವಿಗೆ ಘಟರೂಪೈಕಾಶ್ರಯದಲ್ಲಿ ವೃತ್ತಿತ್ವ ಇರುತ್ತದೆ. ಆದುದರಿಂದ ಅವ್ಯಾಪ್ತಿ ಇಲ್ಲ. ಈಗ

ಲಕ್ಷಣ. 'ಹೇತ್ವಧಿಕರಣವೃತ್ತ್ಯಭಾವೀಯಪ್ರತಿಯೋಗಿತಾನವಚ್ಛೇದಕ ಸಾಧ್ಯತಾವಚ್ಛೇದಕಾವಚ್ಛಿನ್ನಸಾಧ್ಯಸಮಾನಾಧಿಕರಣ್ಯಮ್' ಎಂದಾಗುತ್ತದೆ.

ನನು–ರೂಪತ್ವವ್ಯಾಪ್ಯಜಾತಿಮತ್ತ್ವಾನ್ ಪೃಥಿವೀತ್ವಾದಿತ್ಯಾದೌ ಸಾಧ್ಯತಾವಚ್ಛೇದಿಕಾ ರೂಪತ್ವವ್ಯಾಪ್ಯಜಾತಯಸ್ತಾಸಾಂ ಚ ಶುಕ್ಲತ್ವಾದಿಜಾತೀನಾಂ ನೀಲಘಟಾದಿವೃತ್ತ್ಯಭಾವ ಪ್ರತಿಯೋಗಿತಾಽವಚ್ಛೇದಕತ್ವಮಸ್ತೀತ್ಯವ್ಯಾಪ್ತಿರಿತಿ ಚೇನ್ನ, ತತ್ರ ಪರಂಪರಯಾ ರೂಪತ್ವವ್ಯಾಪ್ಯಜಾತಿತ್ವಸ್ಯೈವ ಸಾಧ್ಯತಾವಚ್ಛೇದಕತ್ವಾತ್। ನಹಿ ತಾದೃಶ ಧರ್ಮಾವಚ್ಛಿನ್ನಾಭಾವಃ ಕ್ವಾಪಿ ಪೃಥಿವ್ಯಾಮಸ್ತಿ ! ರೂಪತ್ವವ್ಯಾಪ್ಯ ಜಾತಿಮಾನ್ ನಾಸ್ತೀತಿ ಬುದ್ಧ್ಯಾಪತ್ತೇಃ । ಏವಂ ದಂಡ್ಯಾದಿಸಾಧ್ಯೇ ಪರಂಪರಾ ಸಂಬದ್ಧಂ ದಂಡತ್ವಾದಿಕಮೇವ ಸಾಧ್ಯತಾವಚ್ಛೇದಕಂ ತಚ್ಚ ಪ್ರತಿಯೋಗಿತಾನವಚ್ಛೇದಕಮಿತಿ ॥

ಹೀಗೆ ಪರಿಷ್ಕಾರ ಮಾಡಿದರೂ ಸ್ಥಳಾಂತರದಲ್ಲಿ ಅವ್ಯಾಪ್ತಿಯನ್ನು ತೋರಿಸುತ್ತಾನೆ. 'ನನು—'ಇತಿ. 'ಘಟಃ :—ರೂಪತ್ವವ್ಯಾಪ್ಯಜಾತಿಮತ್ತ್ವಾನ್—ಪೃಥಿವೀತ್ವಾತ್' ಎಂದು ಅನುಮಾನಾಕಾರ. ಘಟದಲ್ಲಿ ಪೃಥಿವೀತ್ವಧರ್ಮವಿರುವುದರಿಂದ (ರೂಪತ್ವ ವ್ಯಾಪ್ಯವಾದ ಜಾತಿ ಅಂದರೆ ನೀಲತ್ವಾದಿಗಳು—ಜಾತಿಮತ್—ನೀಲಾದಿಗಳು.) ನೀಲಾದಿಗಳುಳ್ಳದ್ದಾಗುತ್ತದೆ. ನೀಲಪೀತಾದಿ ಏಳು ರೂಪಗಳಲ್ಲಿ ಯಾವುದಾದರೊಂದು ರೂಪವಿದ್ದೇ ಇರುತ್ತದೆ. ರೂಪತ್ವ ಏಳು ರೂಪಗಳಲ್ಲಿರುವುದರಿಂದ ವ್ಯಾಪಕ ಜಾತಿ. ನೀಲತ್ವಾದಿಗಳು ಆಯಾಯ ನೀಲಾದಿರೂಪಗಳಲ್ಲಿರುವುದರಿಂದ ವ್ಯಾಪ್ಯ ಜಾತಿ. ನೀಲತ್ವಾದಿಗಳು ರೂಪತ್ವವ್ಯಾಪ್ಯಗಳಾಗುತ್ತವೆ. ರೂಪತ್ವವ್ಯಾಪ್ಯ ನೀಲತ್ವಾದಿ ಜಾತಿಗಳುಳ್ಳವುಗಳು ನೀಲಾದಿರೂಪಗಳು. ಅವು ಘಟಾದಿಗಳಲ್ಲಿರುತ್ತವೆ. ಇಲ್ಲಿ ಪಕ್ಷ—ಘಟ. ರೂಪತ್ವವ್ಯಾಪ್ಯಜಾತಿಮಾನ್—ನೀಲಾದಿಗುಣಗಳೇ ಸಾಧ್ಯವಾಗುತ್ತವೆ. (ಮತು ಬರ್ಥಕಪ್ರತ್ಯಯದ ಮೇಲೆ ಮತುಬರ್ಥಕಪ್ರತ್ಯಯ ಬರುವುದಿಲ್ಲ. ಆದರೂ ಸರೂಪ ಪ್ರತ್ಯಯವಿಲ್ಲವೆಂದುದರಿಂದ ಇಲ್ಲಿ ಭಿನ್ನರೂಪಗಳಾದುದರಿಂದ ದೋಷವಿಲ್ಲ.) ಸಾಧ್ಯತಾವಚ್ಛೇದಕ—ರೂಪತ್ವವ್ಯಾಪ್ಯಗಳಾದ ನೀಲತ್ವಾದಿ ಜಾತಿಗಳಾಗುತ್ತವೆ. ಈಗ ಪೃಥಿವೀತ್ವರೂಪ ಹೇತುವಿನ ಅಧಿಕರಣವಾದ ಘಟದಲ್ಲಿ ಯಾವುದಾದರೊಂದು ರೂಪವಿದ್ದರೆ ಇತರ ರೂಪಗಳ ಅತ್ಯಂತಾಭಾವ ಬರುತ್ತದೆ. ನೀಲಘಟವಾದರೆ ಪೀತಗುಣಾಭಾವ ಹೇಳಬಹುದು. ಪೀತಘಟವಾದರೆ ರಕ್ತಾದ್ಯಭಾವ ಹೇಳಬಹುದು. ಅಭಾವಕ್ಕೆ ಪ್ರತಿಯೋಗಿ ನೀಲರೂಪಾದಿಗಳು. ಪ್ರತಿಯೋಗಿತಾವಚ್ಛೇದಕವೆಂದರೂ ರೂಪತ್ವವ್ಯಾಪ್ಯಜಾತಿಗಳೇ ಅಂದರೆ ನೀಲತ್ವ, ಪೀತತ್ವಾದಿಗಳೇ ಆಗುತ್ತವೆ. ನೀಲತ್ವಾದಿಗಳು ಅನವಚ್ಛೇದಕಗಳಾಗುವುದಿಲ್ಲ. ಸಾಧ್ಯ—ನೀಲಾದಿಗಳು. ಸಾಧ್ಯತಾವಚ್ಛೇದಕಗಳಾದ ನೀಲತ್ವಾದಿಗಳು ಪ್ರತಿಯೋಗಿತಾನವಚ್ಛೇದಕಗಳಾಗದಿರುವುದರಿಂದ ಅವ್ಯಾಪ್ತಿ ಬರುತ್ತದೆ.

ಇದಕ್ಕೆ ಸಮಾಧಾನ ಹೇಳುತ್ತಾನೆ. 'ನ—'ಇತಿ. ಸಾಧ್ಯತಾವಚ್ಛೇದಕ ನೀಲತ್ವಾದಿಜಾತಿಗಳೆಂದರೆ ಈ ಅವ್ಯಾಪ್ತಿಗೆ ಅವಕಾಶ. ಆದರೆ ಇಂತಹ ಲಕ್ಷ್ಯಗಳಲ್ಲಿ ಸ್ವಾಶ್ರಾಯ ಸಮವಾಯರೂಪ ಪರಂಪರಾಸಂಬಂಧದಿಂದ ರೂಪತ್ವ ವ್ಯಾಪ್ಯ ಜಾತಿತ್ವವೇ ಸಾಧ್ಯತಾವಚ್ಛೇಕಧರ್ಮವೆಂದು ಅಂಗೀಕರಿಸುತ್ತೇವೆ. ಆಗ ದೋಷ ಬರುವುದಿಲ್ಲ. ರೂಪತ್ವ ವ್ಯಾಪ್ಯಗಳಾದ ನೀಲತ್ವಪೀತತ್ವಾದಿ ಜಾತಿಗಳಲ್ಲಿರುವ ಜಾತಿತ್ವ ಧರ್ಮವೇ ಸಾಧ್ಯತಾವಚ್ಛೇದಕ ಧರ್ಮ. ರೂಪತ್ವ ವ್ಯಾಪ್ಯ ನೀಲತ್ವಾದಿ ಜಾತಿಗಳಲ್ಲವೆಂದು ತಾತ್ಪರ್ಯ. ಸ್ವಂ—ರೂಪತ್ವವ್ಯಾಪ್ಯ ಜಾತಿತ್ವ. ಸ್ವಾಶ್ರಯಃ—ಆ ಜಾತಿತ್ವಕ್ಕೆ ಆಶ್ರಯಗಳಾದ ರೂಪತ್ವ ವ್ಯಾಪ್ಯಗಳಾದ ನೀಲತ್ವಾದಿ ಜಾತಿಗಳು. ಅವುಗಳು ಸಮವಾಯದಿಂದ ನೀಲಾದಿ ಗುಣಗಳಲ್ಲಿರುತ್ತವೆ. (ನೀಲಪೀತಾದಿಗಳಲ್ಲಿ ಅವುಗಳ ಸಮವಾಯವಿದೆ.) ಘಟದಲ್ಲಿ ನೀಲಾದಿ ಗುಣಗಳು ಸಮವಾಯಸಂಬಂಧದಿಂದ ಸಾಧ್ಯಗಳು. ಸ್ವಾಶ್ರಯ ಸಮವಾಯರೂಪ ಪರಂಪರಾಸಂಬಂಧದಿಂದ ರೂಪತ್ವವ್ಯಾಪ್ಯಜಾತಿತ್ವವು ನೀಲಪೀತಾದಿಗಳಲ್ಲಿದ್ದು ಸಾಧ್ಯತಾವಚ್ಛೇದಕ ಧರ್ಮವಾಗುತ್ತದೆ. ಈಗ ಹೇತ್ವಧಿಕರಣವಾದ ಘಟದಲ್ಲಿರುವ ಅಭಾವವೆಂದರೆ (ರೂಪತ್ವವ್ಯಾಪ್ಯಜಾತಿ) ನೀಲತ್ವಾದಿಜಾತಿಮದ್—ನೀಲಾದ್ಯಭಾವವಾಗಬಹುದು. ಆದರೆ ರೂಪತ್ವವ್ಯಾಪ್ಯಜಾತಿತ್ವೇನರೂಪೇಣ ಜಾತಿಮದಭಾವ ಹೇಳಲು ಸಾಧ್ಯವಿಲ್ಲವೆಂದು ತೋರಿಸುತ್ತಾನೆ. 'ನಹಿ—' ಇತಿ. ಸಾಧ್ಯತಾವಚ್ಛೇದಕಾವಚ್ಛಿನ್ನ ಸಾಧ್ಯಾಭಾವ ಹೇಳಬೇಕು. 'ರೂಪತ್ವವ್ಯಾಪ್ಯಜಾತಿತ್ವಾವಚ್ಛಿನ್ನವದಭಾವಃ' ಎಂದು ಹೇಳಬೇಕು. ರಕ್ತಘಟದಲ್ಲಿ ಪೀತತ್ವಾವಚ್ಛಿನ್ನ ಪೀತಗುಣಾಭಾವ ಹೇಳಲು ಸಾಧ್ಯವಿಲ್ಲ. ಅದು ನೀರೂಪವಾಗಿ ಯಾವ ರೂಪವೂ ಅಲ್ಲೀದಿದ್ದರೆ ಆಗ ಆರೀತಿಯ ಅಭಾವ ಹೇಳಬಹುದು. ಜಾತಿಧರ್ಮದಿಂದ ಕೂಡಿದ ಜಾತಿಮತ್ ಆದ ರಕ್ತಾದಿಗಳಲ್ಲಿ ಒಂದು ಇದ್ದೇ ಇರುತ್ತದೆ. ಪೃಥಿವಿಯಾದ ಘಟದಲ್ಲಿ ಏಳು ರೂಪಗಳ ಮಧ್ಯವಲ್ಲಿರುವ ಯಾವುದಾದರೊಂದು ರೂಪವು ಇದ್ದೇ ಇರುತ್ತದೆ. ಆದುದರಿಂದ ಜಾತಿತ್ವೇನರೂಪೇಣ 'ರೂಪತ್ವವ್ಯಾಪ್ಯಜಾತಿಮಾನ್‌ನಾಸ್ತಿ' ಎಂದು ಹೇಳಲು ಸಾಧ್ಯವಿಲ್ಲ. ಆಗ ಪ್ರತಿಯೋಗಿತಾನವಚ್ಛೇದಕವೇ ರೂಪತ್ವವ್ಯಾಪ್ಯಜಾತಿತ್ವವು ಆಗುತ್ತದೆ. ಇದು ಪ್ರತಿ—ನವಚ್ಛೇದಕವಾಗಿ ಸಾಧ್ಯತಾವಚ್ಛೇದಕವಾಗುತ್ತದೆ. ತದವಚ್ಛಿನ್ನಂ ಯತ್ಸಾಧ್ಯಂ ಅಂದರೆ ಪರಂಪರಾಸಂಬಂಧದಿಂದ ರೂಪತ್ವವ್ಯಾಪ್ಯಜಾತಿಮತ್ತಾದ ನೀಲಾದಿಗಳಾಗುತ್ತವೆ. ಅವುಗಳೊಡನೆ ಪೃಥಿವೀತ್ವ ಹೇತುವಿಗೆ ಘಟದಲ್ಲಿ ಏಕಾಶ್ರಯ ವೃತ್ತಿತ್ವ ಬರುತ್ತದೆ

ಹೀಗೆಯೇ ಸ್ಥಳಾಂತರದಲ್ಲಿಯೂ ಅವ್ಯಾಪ್ತಿಪರಿಹಾರಮಾಡಿಕೊಳ್ಳಬೇಕೆಂದು ತೋರಿಸುತ್ತಾನೆ. 'ಏವಂ—' ಇತಿ. 'ಮಠಃ–ದಂಡಿಮಾನ್–ದಂಡಿಸಂಯೋಗಾತ್' ಎಂದು ಅನುಮಾನ. ದಂಡವುಳ್ಳವರು ದಂಡಿಗಳು. ಸನ್ಯಾಸಿಗಳು. ಈ ಸಂನ್ಯಾಸಿಗಳ ಸಂಬಂಧವಿರುವುದರಿಂದ ಮಠವು ಸನ್ಯಾಸಿಗಳಿಂದ ಕೂಡಿರುತ್ತದೆಂದರ್ಥ. ಇಲ್ಲಿಯೂ ಪರಂಪರಾ ಸಂಬಂಧದಿಂದ ಅಂದರೆ ಸ್ವಸಮವಾಯಿ ಸಂಯೋಗಸಂಬಂಧದಿಂದ ದಂಡತ್ವವೇ

ಸಾಧ್ಯತಾವಚ್ಛೇದಕ ಧರ್ಮವೆಂದು ಸ್ವೀಕರಿಸಬೇಕು. ಇಲ್ಲವಾದರೆ ಅವ್ಯಾಪ್ತಿ ಬರುತ್ತದೆ.

ಪಕ್ಷ—ಮಠ. ಹೇತು—ದಂಡಿಸಂಯೋಗ ಹೇತ್ವಧಿಕರಣ ಮಠ (ಸಂಯೋಗಕ್ಕೆ ಅನುಯೋಗೀ ಮಠ) ಅಲ್ಲಿ ಅಭಾವವೆಂದರೆ ತರುಣಸನ್ಯಾಸಿ ಇರುವಾಗ 'ವೃದ್ಧ ದಂಡೀ ನಾಸ್ತಿ.' ವೃದ್ಧದಂಡಿಇರುವಾಗ 'ಯುವದಂಡೀ ನಾಸ್ತಿ' ಎಂದು ತೋರುವ ಅಭಾವ. ಅಭಾವಕ್ಕೆ ಪ್ರತಿಯೋಗೀ—ಎಲ್ಲಾ ದಂಡಿಗಳಾಗುತ್ತಾರೆ ಪ್ರತಿಯೋಗಿತಾ ತತ್ತದ್ದಂಡಿನಿಷ್ಠಾ. ಪ್ರತಿಯೋಗಿತಾವಚ್ಛೇದಕ ಧರ್ಮವೆಂದರೆ ದಂಡವಾಗುತ್ತದೆ. ಇದೇ ಇಲ್ಲಿ ಸಾಧ್ಯತಾವಚ್ಛೇದಕ ಧರ್ಮವೂ ಆಗಿದೆ. (ದಂಡಿಮಾನ್ ಎಂಬಲ್ಲಿ ದಂಡೀ ಸಾಧ್ಯ. ಸಾಧ್ಯದಲ್ಲಿರುವ ಧರ್ಮ ದಂಡಿತ್ವ—ದಂಡವೇ ಸಾಧ್ಯತಾವಚ್ಛೇದಕವಾಗುತ್ತದೆ. ಮತುಪ್‌ಪ್ರತ್ಯಯಾಂತದ ಮೇಲೆ ಭಾವ ಪ್ರತ್ಯಯಬಂದರೆ ಅದು ಮತುಪಿನ ಪ್ರಕೃತ್ಯರ್ಥವನ್ನು ಹೇಳುತ್ತದೆ. ದಂಡಿತ್ವ ಎಂಬಲ್ಲಿ ಭಾವಪ್ರತ್ಯಯ—ತ್ವ. ಮತುಪಿಗೆ ಪ್ರಕೃತಿ—ದಂಡ) ದಂಡರೂಪಸಾಧ್ಯತಾವಚ್ಛೇದಕವು ಪ್ರತಿಯೋಗಿತಾನವಚ್ಛೇದಕವಾಗಲಿಲ್ಲ. ಆದುದರಿಂದ ಅವ್ಯಾಪ್ತಿ. ಈಗ ಸ್ವಸಮವಾಯಸಂಯೋಗಸಂಬಂಧದಿಂದ ದಂಡತ್ವವೇ ಸಾಧ್ಯತಾವಚ್ಛೇದಕವೆಂದರೆ ಅವ್ಯಾಪ್ತಿದೋಷ ಬರುವುದಿಲ್ಲ. ಸ್ವಂ—ದಂಡತ್ವಧರ್ಮ. ಸ್ವಸಮವಾಯಿದಂಡ (ದಂಡದಲ್ಲಿ ದಂಡತ್ವವು ಸಮವಾಯ ಸಂಬಂಧದಿಂದ ಇದೆ. ಅನುಯೋಗಿತಾಸಂಬಂಧದಿಂದ ದಂಡವಾಗುತ್ತದೆ.) ತತ್ಸಂಯೋಗ ಪುರುಷನಲ್ಲಿದೆ ಇದು ಸಾಧ್ಯತಾವಚ್ಛೇದಕವಾದುದರಿಂದ ಪ್ರತಿಯೋಗಿತಾನವಚ್ಛೇದಕವೂ ಆಗುತ್ತದೆ. ಮಠದಲ್ಲಿ ದಂಡಿಸಾಮಾನ್ಯವೂ ಇಲ್ಲದಿದ್ದರೆ ಅದು ಅಭಾವೀಯ ಪ್ರತಿಯೋಗಿತಾವಚ್ಛೇದಕವಾಗುತ್ತಿತ್ತು. ಆದರೆ ಯಾವುದಾದರೊಂದು ದಂಡಿಯು ಇರುವುದರಿಂದ 'ದಂಡೀ ನಾಸ್ತಿ' ಎಂದು ಹೇಳಲು ಸಾಧ್ಯವಿಲ್ಲ. ಆದುದರಿಂದ ದಂಡತ್ವವು ಪ್ರ...ಕವಾಗಿ ಸಾಧ್ಯತಾವಚ್ಛೇದಕವಾಗುತ್ತದೆ ತದವಚ್ಛಿನ್ನಸಾಧ್ಯವೆಂದರೆ ಉಕ್ತ ಪರಂಪರಾಸಂಬಂಧದಿಂದ ದಂಡಿಯಾಗುತ್ತದೆ. ದಂಡಿಯೊಡನೆ ದಂಡಿಸಂಯೋಗವು ಏಕಾಶ್ರಯದಲ್ಲಿರುತ್ತದೆ. ಆದುದರಿಂದ ದೋಷವಿಲ್ಲ.

ಸಾಧ್ಯಾದಿಭೇದೇನ ವ್ಯಾಪ್ತೇರ್ಭೇದಾತ್ತಾದೃಶಸ್ಥಲೇ ಸಾಧ್ಯತಾವಚ್ಛೇದಕತಾವಚ್ಛೇದಕಂ ಪ್ರತಿಯೋಗಿತಾವಚ್ಛೇದಕತಾನಾವಚ್ಛೇದಕಮಿತ್ಯೇವ ಲಕ್ಷಣಘಟಕಮಿತ್ಯಪಿ ವದಂತಿ ॥

ಪರಂಪರಾಸಂಬಂಧವನ್ನು ಅಂಗೀಕರಿಸದಿರುವವರ ಮತವನ್ನು ತೋರಿಸುತ್ತಾನೆ. 'ಸಾಧ್ಯಾದಿ—' ಇತಿ. ಪರಂಪರಾಸಂಬಂಧವನ್ನು ಕಲ್ಪಿಸಿ ದೋಷನಿವಾರಣೆಮಾಡುವ ಉದ್ದೇಶವೇನು ? ಸಾಧ್ಯಸಾಧನಗಳ ಭೇದದಿಂದ ವ್ಯಾಪ್ತಿಗೂ ಭಿನ್ನಭಿನ್ನಲಕ್ಷಣ ಹೇಳಿ ಅವ್ಯಾಪ್ತಿದೋಷವನ್ನು ಹೋಗಲಾಡಿಸಬಹುದು. 'ಹೇತ್ವಧಿಕರಣವೃತ್ತ್ಯಭಾವೀಯ ಪ್ರತಿಯೋಗಿತಾವಚ್ಛೇದಕತಾನವಚ್ಛೇದಕಂ ಯತ್ ಸಾಧ್ಯತಾವಚ್ಛೇದಕತಾವ

ಚ್ಛೇದಕಂ, ತದವಚ್ಛಿನ್ನಾವಚ್ಛಿನ್ನ ಸಾಧ್ಯಸಾಮಾನಾಧಿಕರಣ್ಯಂ' ವ್ಯಾಪ್ತಿಯೆಂದು ಹಿಂದಿನ ಸ್ಥಳದಲ್ಲಿ ಹೇಳುತ್ತೇವೆ. 'ಘಟಃ—ರೂಪತ್ವವ್ಯಾಪ್ಯಜಾತಿಮತ್ತ್ವಾನ್—ಪೃಥಿವೀತ್ವಾತ್' ಎಂಬಲ್ಲಿ ಪೃಥಿವೀತ್ವರೂಪಹೇತ್ವಧಿಕರಣ—ಘಟಃ; ತತ್ರವರ್ತತೇ ಯೋಽಭಾವಃ (ಅಲ್ಲಿರುವ ಅಭಾವ) - (ರೂಪತ್ವವ್ಯಾಪ್ಯಜಾತಿಮತ್ತ್ವಾದ) ನೀಲಪೀತಾದ್ಯಭಾವಃ, ಅಭಾವೀಯಪ್ರತಿಯೋಗಿತಾ—ರೂಪತ್ವವ್ಯಾಪ್ಯಜಾತಿಮನ್ನೀಲಾದಿನಿಷ್ಠಾ, ತಾದೃಶ ಪ್ರತಿಯೋಗಿತಾಯಾ ಅವಚ್ಛೇದಿಕಾ-ರೂಪತ್ವವ್ಯಾಪ್ಯನೀಲತ್ವಪೀತತ್ವಜಾತಯಃ, ಪ್ರತಿಯೋಗಿತಾವಚ್ಛೇದಕತಾ ನೀಲತ್ವಾದಿಜಾತಿನಿಷ್ಠಾ. ಪ್ರತಿಯೋಗಿತಾವಚ್ಛೇದಕತಾಯಾ ಅನವಚ್ಛೇದಕಂ ಯತ್ ಸಾಧ್ಯತಾವಚ್ಛೇದಕತಾವಚ್ಛೇದಕಂ-ರೂಪತ್ವವ್ಯಾಪ್ಯಜಾತಿತ್ವಂ, ತದವಚ್ಛಿನ್ನಾಃ-ರೂಪತ್ವವ್ಯಾಪ್ಯಜಾತಯಃ, ತದವಚ್ಛಿನ್ನಾಃ-ನೀಲಪೀತಾದಿ ಗುಣಗಳು. ಇವರೊಡನೆ ಹೇತುವಿಗೆ ಸಾಮಾನಾಧಿಕರಣ್ಯವಿರುತ್ತದೆ. ಹಿಂದೆ ಪರಂಪರಾಸಂಬಂಧದಿಂದ ಒಂದು ಧರ್ಮಕ್ಕೆ ಅವಚ್ಛೇದಕತ್ವ ಹೇಳಿದೆ. ಈಗ ಅವಚ್ಛೇದಕ ಧರ್ಮದಲ್ಲಿರುವ ಧರ್ಮದವರೆಗೆ ಲಕ್ಷಣವೇ ಹೋಗಿದೆ.

'ಮಠಃ-ದಂಡಿಮಾನ್-ದಂಡಸಂಯೋಗಾತ್' ಎಂಬಲ್ಲಿಯೂ ಹೇತ್ವಧಿಕರಣವೆಂದರೆ ಮಠ. ಹೇತ್ವಧಿಕರಣವೃತ್ತ್ಯಭಾವೀಯಪ್ರತಿಯೋಗಿತಾ ತತ್ತದ್ದಂಡಿಯಲ್ಲಿ ಬರುತ್ತದೆ. ಪ್ರತಿಯೋಗಿತಾವಚ್ಛೇದಕಧರ್ಮವೆಂದರೆ ದಂಡ. ಪ್ರತಿ....ಕತಾಯಾ ಅನವಚ್ಛೇದಕಂ, ಯತ್ ಸಾಧ್ಯತಾವಚ್ಛೇದಕತಾವಚ್ಛೇದಕಂ ಎಂದರೆ ದಂಡತ್ವ. ತದವಚ್ಛಿನ್ನವಾದದ್ದು ದಂಡ. ತದವಚ್ಛಿನ್ನ ಎಂದರೆ ದಂಡೀ. ಅದೇ ಸಾಧ್ಯ. ಅದರೊಡನೆ ಹೇತುವಿಗೆ ಮಠಸಾಮಾನಾಧಿಕರಣ್ಯವಿರುತ್ತದೆ

ಹೇತ್ವಧಿಕರಣಂ ಚ ಹೇತುತಾವಚ್ಛೇದಕವಿಶಿಷ್ಟಾಧಿಕರಣಂ ವಾಚ್ಯಮ್ । ತೇನ ದ್ರವ್ಯಂ ಗುಣಕರ್ಮಾನ್ಯತ್ವವಿಶಿಷ್ಟಸತ್ತ್ವಾದಿತ್ಯಾದೌ - ಶುದ್ಧಸತ್ತಾಧಿಕರಣ ಗುಣಾದಿನಿಷ್ಠಾಭಾವ ಪ್ರತಿಯೋಗಿತ್ವೇಽಪಿ ದ್ರವ್ಯತ್ವಸ್ಯ ನಾವ್ಯಾಪ್ತಿಃ ॥

ಸ್ಥಳಾಂತರದಲ್ಲಿ ಅವ್ಯಾಪ್ತಿರೂಪ ದೋಷವನ್ನು ಹೋಗಲಾಡಿಸಲು ಹೇತ್ವಧಿಕರಣ ಪದದಿಂದ ತೆಗೆದುಕೊಳ್ಳಬೇಕಾದ ಅರ್ಥವನ್ನು ವಿವರಿಸುತ್ತಾನೆ. 'ಹೇತ್ವಧಿ'—ಇತಿ. 'ಹೇತುತಾವಚ್ಛೇದಕವಾದ ಯಾವ ಧರ್ಮವಿದೆಯೋ ಆಧರ್ಮವಿಶಿಷ್ಟವಾದಹೇತ್ವಧಿಕರಣವೆಂದು ತಿಳಿಯಬೇಕು. ಇಲ್ಲವಾದರೆ 'ದ್ರವ್ಯಂ-ಗುಣ....ಸತ್ವಾತ್ ಎಂಬಲ್ಲಿ ಅವ್ಯಾಪ್ತಿ ಬರುತ್ತದೆ. 'ವಿಶಿಷ್ಟಂ-ಶುದ್ಧಾನ್ನಾತಿರಿಚ್ಯತೇ' ಎಂಬ ನಿಯಮ ಹಿಂದೆ ಹೇಳಿದೆ. ಆದುದರಿಂದ ಗುಣಕರ್ಮಾನ್ಯತ್ವವಿಶಿಷ್ಟಸತ್ತಾ, ಶುದ್ಧಸತ್ತಾ ಒಂದೇ ಆಗುತ್ತದೆ. ಆಗ ಹೇತ್ವಧಿಕರಣವು ಘಟಾದಿದ್ರವ್ಯವಾದಂತೆ ಗುಣಕರ್ಮಗಳೂ ಆಗುತ್ತವೆ. ಗುಣಕರ್ಮಗಳಲ್ಲಿ ಶುದ್ಧಸತ್ತಾ ಇರುವುದರಿಂದ ಹಿಂದಿನ ನಿಯಮದಂತೆ ವಿಶಿಷ್ಟಸತ್ತೆಯೂ ಇದ್ದಂತಾಗುತ್ತದೆ. ಅಲ್ಲಿರುವ ಅಭಾವವೆಂದರೆ 'ದ್ರವ್ಯತ್ವಂ ನಾಸ್ತಿ' ಎಂದು ತೋರುವ

ದ್ರವ್ಯತ್ವದ ಅಭಾವ. ಅಭಾವೀಯಪ್ರತಿಯೋಗಿತಾ ದ್ರವ್ಯತ್ವರೂಪಸಾಧ್ಯದಲ್ಲಿ (ಸಾಧ್ಯನಿಷ್ಠಾ) ಬರುತ್ತದೆ. ಪ್ರತಿಯೋಗಿತಾವಚ್ಛೇದಕವೇ ದ್ರವ್ಯತ್ವತ್ವವಾಗುತ್ತದೆ. ಸಾಧ್ಯತಾವಚ್ಛೇದಕವಾದ ಈ ದ್ರವ್ಯತ್ವತ್ವವು ಅನವಚ್ಛೇದಕವಾಗದಿರುವುದರಿಂದ ಅವ್ಯಾಪ್ತಿ ಬರುತ್ತದೆ.

ಈಗ ಹೇತ್ವಧಿಕರಣವು ಹೇತುತಾವಚ್ಛೇದಕವಿಶಿಷ್ಟಾಧಿಕರಣವಾಗಬೇಕೆಂದುದರಿಂದ ಗುಣಕರ್ಮಾನ್ಯತ್ವವಿಶಿಷ್ಟಸತ್ತಾತ್ವೇನ ಗುಣ....ವಿಶಿಷ್ಟಸತ್ತಾಧಿಕರಣವು ಘಟಾದಿ ದ್ರವ್ಯವೇ ಆಗುತ್ತದೆ. ಗುಣಕರ್ಮಗಳಾಗುವುದಿಲ್ಲ. ವಿಶಿಷ್ಟಸತ್ತಾ ಶುದ್ಧಸತ್ತಾ ಒಂದಾದರೂ ಗುಣಕರ್ಮಾನ್ಯತ್ವವಿಶಿಷ್ಟಸತ್ತಾತ್ವರೂಪದಿಂದ ಶುದ್ಧಸತ್ತಾತ್ವವು ಬೇರೆಯೇ ಆಗಿರುತ್ತದೆ. ಹೇತುತಾವಚ್ಛೇದಕ—ಗುಣಕರ್ಮಾನ್ಯತ್ವವಿಶಿಷ್ಟಸತ್ತಾತ್ವ. ಹೇತುತಾವಚ್ಛೇದಕವಿಶಿಷ್ಟಹೇತ್ವಧಿಕರಣವೆಂದರೆ ಘಟಾದಿದ್ರವ್ಯ. ಅಲ್ಲಿ ದ್ರವ್ಯತ್ವರೂಪಸಾಧ್ಯಾಭಾವ ಹೇಳಲು ಸಾಧ್ಯವಿಲ್ಲ. ಪ್ರತಿಯೋಗಿಯಾದ ದ್ರವ್ಯತ್ವರೂಪಸಾಧ್ಯವು ಅಲ್ಲಿ ಇದ್ದೇ ಇರುತ್ತದೆ. ಪ್ರತಿಯೋಗಿ ಇದ್ದಲ್ಲಿ ಅಭಾವವಿರುವುದಿಲ್ಲ. ಪಟಾಭಾವಾದಿಗಳನ್ನು ತೆಗೆದುಕೊಂಡರೆ ಅಭಾವಕ್ಕೆ ಪ್ರತಿಯೋಗಿ—ಪಟ. ಪ್ರತಿಯೋಗಿತಾವಚ್ಛೇದಕ—ಪಟತ್ವ. ಪ್ರತಿಯೋಗಿತಾನವಚ್ಛೇದಕವಾದ ಸಾಧ್ಯತಾವಚ್ಛೇದಕವೆಂದರೆ ದ್ರವ್ಯತ್ವತ್ವ. ತದವಚ್ಛಿನ್ನಸಾಧ್ಯವೆಂದರೆ ದ್ರವ್ಯತ್ವ. ಅದರೊಡನೆ ಗುಣಕ....ಸತ್ತಾತ್ವಾವಚ್ಛಿನ್ನ ಗುಣ....ತ್ವಾ ಹೇತುವಿಗೆ ಘಟದಲ್ಲಿ ಸಾಮಾನಾಧಿಕರಣ್ಯ ಬರುತ್ತದೆ. ಆದುದರಿಂದ ಅವ್ಯಾಪ್ತಿಗೆ ಅವಕಾಶವಿಲ್ಲ.

ಏವಂ ಹೇತುತಾವಚ್ಛೇದಕಸಂಬಂಧೇನ ಹೇತ್ವಧಿಕರಣಂ ಬೋಧ್ಯಮ್ । ತೇನ ಸಮವಾಯೇನ ಧೂಮಾಧಿಕರಣತದವಯವನಿಷ್ಠಾಭಾವ ಪ್ರತಿಯೋಗಿತ್ವೇಽಪಿ ವಹ್ನೇರ್ನಾವ್ಯಾಪ್ತಿಃ ॥

ಹೇತುವಚ್ಛೇದಕವಿಶಿಷ್ಟಹೇತ್ವಧಿಕರಣವನ್ನು ತಿಳಿದಿಂತೆ ಹೇತುತಾವಚ್ಛೇದಕ ಸಂಬಂಧದಿಂದಲೂ ಹೇತ್ವಧಿಕರಣವಾಗಬೇಕೆಂದು ತಿಳಿಯಬೇಕು. ಹೇತುವು ಸಾಧ್ಯಾಧಿಕರಣದಲ್ಲಿ ಯಾವಸಂಬಂಧದಿಂದ ಇರುತ್ತದೆಯೋ ಅದೇ ಸಂಬಂಧದಿಂದ ಹೇತುವಿನ ಅಧಿಕರಣವೆಂದು ತಿಳಿಯಬೇಕು. ಇಲ್ಲವಾದರೆ 'ವಹ್ನಿಮಾನ್–ಧೂಮಾತ್' ಎಂಬ ಪ್ರಸಿದ್ಧಾನುಮಾನಸ್ಥಳದಲ್ಲಿಯೇ ಅವ್ಯಾಪ್ತಿ ಬರುತ್ತದೆ. ಹೇತು—ಧೂಮ. ಧೂಮತ್ವಾವಚ್ಛಿನ್ನ ಧೂಮದ ಅಧಿಕರಣವೆಂದರೆ ಸಮವಾಯಸಂಬಂಧದಿಂದ ಧೂಮಾವಯವವಾಗುತ್ತದೆ. ('ಅವಯವಾವಯವಿನೋಃ ಸಮವಾಯಃ') ಅಲ್ಲಿರುವ ಅಭಾವವೆಂದರೆ ಧೂಮಾವಯವದಲ್ಲಿ ವಹ್ನಿ ಇಲ್ಲದಿರುವುದರಿಂದ 'ವಹ್ನಿರ್ನಾಸ್ತಿ' ಎಂದು ತೋರುವ ಅಭಾವ. ಅಭಾವ ಪ್ರತಿಯೋಗಿ ವಹ್ನಿರೂಪಸಾಧ್ಯವಾಗುತ್ತದೆ. ಪ್ರತಿಯೋಗಿತಾವಚ್ಛೇದಕವೇ ವಹ್ನಿತ್ವರೂಪಸಾಧ್ಯತಾವಚ್ಛೇದಕವಾಗುವುದಲ್ಲದೆ ಅನವಚ್ಛೇದಕವಾಗುವುದಿಲ್ಲ. ಆದುದರಿಂದ ಈ ಅವ್ಯಾಪ್ತಿಯನ್ನು ಹೋಗಲಾಡಿಸಲು ಹೇತುತಾವಚ್ಛೇದಕಸಂಬಂಧದಿಂದ ಹೇತ್ವಧಿ

ಕರಣವನ್ನು ತೆಗೆದುಕೊಳ್ಳಬೇಕು. ಪ್ರಕೃತ ಹೇತು—ಧೂಮ. ಹೇತುತಾ—ಧೂಮ ನಿಷ್ಠಾ. ಹೇತುತಾವಚ್ಛೇದಕಸಂಬಂಧವೆಂದರೆ ಸಂಯೋಗಸಂಬಂಧ. ಸಂಯೋಗದಿಂದ ಹೇತ್ವಧಿಕರಣವೆಂದರೆ ಧೂಮಾವಯವವಾಗುವುದಿಲ್ಲ. ಪರ್ವತಾದಿಗಳೇ ಆಗುತ್ತವೆ. ಅಲ್ಲಿ ವಹ್ನಿರೂಪಸಾಧ್ಯಾಭಾವವನ್ನು ಹೇಳಲುಸಾಧ್ಯವಿಲ್ಲ. ಘಟಾಭಾವಾದಿಗಳನ್ನು ಹೇಳಿದರೆ ಅಭಾವೀಯಪ್ರತಿಯೋಗಿತಾ ಘಟಾದಿಗಳಲ್ಲಿ ಬರುತ್ತದೆ. ಪ್ರತಿಯೋಗಿತಾ ವಚ್ಛೇದಕವೆಂದರೆ ಘಟತ್ವಾದಿ. ಪ್ರತಿ ...ನವಚ್ಛೇದಕವಾದ ಸಾಧ್ಯತಾವಚ್ಛೇದಕ— ವಹ್ನಿತ್ವ. ತದವಚ್ಛಿನ್ನಸಾಧ್ಯ—ವಹ್ನಿ. ಅದರೊಡನೆ ಧೂಮಕ್ಕೆ ಸಾಮಾನಾಧಿಕರಣ್ಯ ಪ್ರಸಿದ್ಧವಾಗಿದೆ. ಅಧಿಲಕ್ಷಣ—"ಹೇತುತಾವಚ್ಛೇದಕಸಂಬಂಧಾವಚ್ಛಿನ್ನ ಹೇತುತಾ ವಚ್ಛೇದಕಾವಚ್ಛಿನ್ನ ಹೇತ್ವಧಿಕರಣವೃತ್ತ್ಯಭಾವೀಯಪ್ರತಿಯೋಗಿತಾನವಚ್ಛೇದಕಸಾಧ್ಯ ತಾವಚ್ಛೇದಕಾವಚ್ಛಿನ್ನಸಾಧ್ಯಸಾಮಾನಾಧಿಕರಣ್ಯಂ' ಎಂದಾಗುತ್ತದೆ.

ಅಭಾವಶ್ಚ ಪ್ರತಿಯೋಗಿವ್ಯಧಿಕರಣೋ ಬೋಧ್ಯಃ। ತೇನ ಕಪಿಸಂಯೋಗೀ ಏತದ್ವೃಕ್ಷತ್ವಾತ್. ಇತ್ಯತ್ರ ಮೂಲಾವಚ್ಛೇದೇನ ಏತದ್ವೃಕ್ಷವೃತ್ತಿ ಕಪಿ ಸಂಯೋಗಾಭಾವಪ್ರತಿಯೋಗಿತ್ವೇಽಪಿ ಕಪಿಸಂಯೋಗಸ್ಯ ನಾವ್ಯಾಪ್ತಿಃ ॥

ಹೇತ್ವಧಿಕರಣದಲ್ಲಿರುವ ಅಭಾವವು ಹೇಗಿರಬೇಕೆಂದು ತಿಳಿಸುತ್ತಾನೆ. 'ಅಭಾವಶ್ಚ—' ಇತಿ. ಪ್ರತಿಯೋಗಿವ್ಯಧಿಕರಣವಾದ ಅಭಾವವನ್ನು ತೆಗೆದುಕೊಳ್ಳಬೇಕು. ಪ್ರತಿಯೋಗಿವ್ಯಧಿಕರಣವೆಂದರೆ ಪ್ರತಿಯೋಗ್ಯಧಿಕರಣಕ್ಕಿಂತ ಭಿನ್ನವಾದ ಅಧಿಕರಣ ವಾಗಿರಬೇಕು. ಸ್ವಪ್ರತಿಯೋಗ್ಯಧಿಕರಣ ಭಿನ್ನಾಧಿಕರಣವುಳ್ಳ ಅಭಾವ. ಅಭಾವಕ್ಕೆ ಯಾವುದು ಪ್ರತಿಯೋಗಿಯೋ, ಆ ಪ್ರತಿಯೋಗಿಯ ಅಧಿಕರಣದಲ್ಲಿರುವ ಅಭಾವವಾಗಿರ ಬಾರದು. ಅದಕ್ಕಿಂತ ಬೇರೆಯಾದ ಅಧಿಕರಣದಲ್ಲಿರುವ ಅಭಾವವಾಗಬೇಕು. ಅಭಾವ ಅದರ ಪ್ರತಿಯೋಗಿಯೂ ಒಂದೇ ಅಧಿಕರಣದಲ್ಲಿ ಇರಬಾರದು. ಹೀಗೆ ಹೇಳದಿದ್ದರೆ 'ವೃಕ್ಷಃ—ಕಪಿಸಂಯೋಗೀ-ಏತದ್ವೃಕ್ಷತ್ವಾತ್' ಎಂಬಲ್ಲಿ ಅವ್ಯಾಪ್ತಿ ಬರುತ್ತದೆ. ಹೇತು —ಏತದ್ವೃಕ್ಷತ್ವ. ತನ್ನಿಷ್ಠ ಆಧೇಯತಾನಿರೂಪಿತಾ ಯಾ ಅಧಿಕರಣತಾ, ಏತದ್ ವೃಕ್ಷನಿಷ್ಠಾ ಅಧಿಕರಣತಾ. ಏತದ್ವೃಕ್ಷ ಅಧಿಕರಣವಾದರೆ ಅದರಲ್ಲಿ ಅಧಿಕರಣತಾ ಇರುತ್ತದೆ. ಅದು ಆಧೇಯತಾನಿರೂಪಿತವಾಗುತ್ತದೆ. ಹೇತುವೇ ಆಧೇಯ. ಆಧೇಯತಾ ಅದರಲ್ಲಿದೆ. ಹೇತುವು ಸ್ವರೂಪಸಂಬಂಧದಿಂದ ಇರುವುದರಿಂದ ಆಧೇ ಯತಾ ಸ್ವರೂಪಸಂಬಂಧಾವಚ್ಛಿನ್ನವೂ, ಏತದ್ವೃಕ್ಷತ್ವಾವಚ್ಛಿನ್ನವೂ ಆಗುತ್ತದೆ. ಸ್ವರೂಪಸಂ....ನ್ನ, ಏತದ್....ಚ್ಛಿನ್ನ ಏತದ್ವೃಕ್ಷತ್ವನಿಷ್ಠಾಧೇಯತಾನಿರೂಪಿತ ಅಧಿ ಕರಣತಾವತ್ ಅಂದರೆ ಏತದ್ವೃಕ್ಷ. ಅಲ್ಲಿರುವ ಅಭಾವವೆಂದರೆ 'ಮೂಲಾವಚ್ಛೇದೇನ ಕಪಿಸಂಯೋಗೋನಾಸ್ತಿ' ಎಂದು ತೋರುವ ಕಪಿಸಂಯೋಗಾಭಾವ. ಕಪಿ ಸಂಯೋಗವು ಅಗ್ರಾವಚ್ಛೇದದಿಂದ ಇದ್ದರೂ ಮೂಲಾವಚ್ಛೇದದಿಂದ ಇರುವುದಿಲ್ಲ. ಅಭಾವ ಪ್ರತಿಯೋಗಿ ಕಪಿಸಂಯೋಗವಾಗುತ್ತದೆ. ಪ್ರತಿಯೋಗಿತಾ—ಕಪಿಸಂಯೋಗ

ನಿಷ್ಠಾ. ಕಪಿಸಂಯೋಗತ್ವರೂಪ ಸಾಧ್ಯತಾವಚ್ಛೇದಕವು ಪ್ರತಿಯೋಗಿತಾವಚ್ಛೇದಕವೇ ಆಗುವುದಲ್ಲದೆ ಅನವಚ್ಛೇದಕವಾಗುವುದಿಲ್ಲ. ಆದುದರಿಂದ ಅವ್ಯಾಪ್ತಿ. ಹೇತ್ವಧಿಕರಣದಲ್ಲಿರುವ ಅಭಾವವು ಪ್ರತಿಯೋಗಿವ್ಯಧಿಕರಣವು ವಿವಕ್ಷಿತವಾದರೆ ಆಗ ಕಪಿಸಂಯೋಗಾಭಾವವನ್ನು ತೆಗೆದುಕೊಳ್ಳಬಾರದು. ಕಪಿಸಂಯೋಗಾಭಾವರೂಪಸಾಧ್ಯಾಭಾವವು ಸ್ವಪ್ರತಿಯೋಗ್ಯಧಿಕರಣಭಿನ್ನಾಧಿಕರಣಕವಾಗುವುದಿಲ್ಲ. ಕಪಿಸಂಯೋಗರೂಪ ಪ್ರತಿಯೋಗಿಯೂ ಅದರ ಅಭಾವವೂ ಒಂದೇ ವೃಕ್ಷರೂಪಾಧಿಕರಣದಲ್ಲಿ ಇರುತ್ತವೆ. ಬುಡದಲ್ಲಿ ಅದರ ಅಭಾವವೂ ತುದಿಯಲ್ಲಿ ಕಪಿಸಂಯೋಗವೂ ಇರುತ್ತದೆ. ಕಪಿಸಂಯೋಗಾಭಾವವು ಸ್ವಪ್ರತಿಯೋಗಿವ್ಯಧಿಕರಣಕವಾಗದಿರುವುದರಿಂದ ಅದನ್ನು ಬಿಟ್ಟು ಘಟಾಭಾವಾದಿಗಳನ್ನು ತೆಗೆದುಕೊಳ್ಳಬೇಕು. ಆಗ ಅಭಾವೀಯ ಪ್ರತಿಯೋಗಿತಾವಚ್ಛೇದಕ ಘಟತ್ವಾದಿಗಳಾಗುತ್ತವೆ. ಪ್ರತಿಯೋಗಿತಾನವಚ್ಛೇದಕವು ಸಾಧ್ಯತಾವಚ್ಛೇದಕವಾದ ಕಪಿಸಂಯೋಗತ್ವವಾಗುತ್ತದೆ. ತದವಚ್ಛಿನ್ನಸಾಧ್ಯ—ಕಪಿಸಂಯೋಗ. ಅದರೊಡನೆ ಏತದ್ವೃಕ್ಷತ್ವರೂಪಹೇತುವಿಗೆ ಸಾಮಾನಾಧಿಕರಣ್ಯವಿರುವುದರಿಂದ ಅವ್ಯಾಪ್ತಿ ಬರುವುದಿಲ್ಲ.

ನ ಚ ಪ್ರತಿಯೋಗಿವ್ಯಧಿಕರಣತ್ವಂ ಯದಿ ಪ್ರತಿಯೋಗ್ಯನಧಿಕರಣವೃತ್ತಿತ್ವಂ ತದಾ ತಥೈವಾವ್ಯಾಪ್ತಿಃ । ಪ್ರತಿಯೋಗಿನಃ ಕಪಿಸಂಯೋಗಸ್ಯಾನಧಿಕರಣೇ ಗುಣಾದೌ ವರ್ತಮಾನೋ ಯೋಽಭಾವಸ್ತಸ್ಯೈವ ವೃಕ್ಷೇಽಪಿ ಮೂಲಾವಚ್ಛೇದೇನ ಸತ್ವಾತ್ । ಯದಿ ತು ಪ್ರತಿಯೋಗ್ಯಧಿಕರಣಾವೃತ್ತಿತ್ವಂ ತದಾ ಸಂಯೋಗೀ ಸತ್ವಾದಿತ್ಯಾದಾವತಿವ್ಯಾಪ್ತಿಃ । ಸತ್ತಾಧಿಕರಣೇ ಗುಣಾದೌ ಯಃ ಸಂಯೋಗಾಭಾವಸ್ತಸ್ಯ ಪ್ರತಿಯೋಗ್ಯಧಿಕರಣದ್ರವ್ಯವೃತ್ತಿತ್ವಾದಿತಿ ವಾಚ್ಯಮ್ ।ಹೇತ್ವಧಿಕರಣೇ ಪ್ರತಿಯೋಗ್ಯನಧಿಕರಣವೃತ್ತಿತ್ವವಿಶಿಷ್ಟಸ್ಯ ವಿವಕ್ಷಿತತ್ವಾತ್ । 'ಸ್ವಪ್ರತಿಯೋಗ್ಯನಧಿಕರಣೀಭೂತಹೇತ್ವಧಿಕರಣವೃತ್ತ್ಯಭಾವಃ' ಇತಿ ನಿಷ್ಕರ್ಷಃ॥

'ಕಪಿಸಂಯೋಗೀ —ಏತದ್ವೃಕ್ಷತ್ವಾತ್' ಎಂಬಲ್ಲಿ ಅವ್ಯಾಪ್ತಿಪರಿಹಾರಕ್ಕೋಸ್ಕರ ಹೇತ್ವಧಿಕರಣದಲ್ಲಿರುವ ಅಭಾವವು ಪ್ರತಿಯೋಗಿವ್ಯಧಿಕರಣವಾಗಿರಬೇಕೆಂದು ಹೇಳಿದೆ. ಅಲ್ಲಿ ಪ್ರತಿಯೋಗಿವ್ಯಧಿಕರಣವೆಂಬುದಕ್ಕೆ ನಾನಾರೀತಿಯಿಂದ ಅರ್ಥ ಹೇಳಬಹುದು. ಆದರೆ ಆ ಅರ್ಥವನ್ನಂಗೀಕರಿಸಿದರೆ ಅವ್ಯಾಪ್ತಿಪರಿಹಾರವಾಗಲಾರದು. ಅದಕ್ಕೋಸ್ಕರ ನಿಷ್ಕೃಷ್ಟವಾದ ಒಂದರ್ಥವನ್ನು ಹೇಳಬೇಕೆಂದು ವಿಕಲ್ಪಿತಾರ್ಥವನ್ನು ದೂಷಿಸುತ್ತಾನೆ. 'ನಚ' — ಇತಿ. ಸ್ವಪ್ರತಿಯೋಗ್ಯನಧಿಕರಣವೃತ್ತಿತ್ವಂ, ಸ್ವಪ್ರತಿಯೋಗ್ಯಧಿಕರಣಾವೃತ್ತಿತ್ವಂ ಎಂದು ಪ್ರತಿಯೋಗಿವ್ಯಧಿಕರಣಪದಕ್ಕೆ ಎರಡು ಅರ್ಥವಾಗುತ್ತದೆ. ಮೊದಲನೆಯ ಪಕ್ಷವನ್ನು ಅನುಸರಿಸಿದರೆ ಆಗ ಸ್ವಸ್ಯ–ಅಭಾವಕ್ಕೆ ಪ್ರತಿಯೋಗಿ–ಯಾವುದು ಪ್ರತಿಯೋಗಿಯಾಗಿರುತ್ತದೆಯೋ (ತಸ್ಯ ಯದನಧಿಕರಣಂ) ಅದರ ಅಧಿಕರಣಕ್ಕಿಂತ ಬೇರೆಯಾದ ಅಧಿಕರಣವುಳ್ಳದ್ದು. ಪ್ರತಿಯೋಗಿಯ ಅಧಿಕರಣಕ್ಕಿಂತ ಬೇರೆಯಾದ

ಅಧಿಕರಣದಲ್ಲಿರುವ ಅಭಾವ ಎಂದಾಗುತ್ತದೆ. ಈ ರೀತಿಯಾದ ಅಭಾವವು ಸಂಮತವಾದರೆ ಆಗ 'ವೃಕ್ಷಃ—ಕಪಿಸಂಯೋಗೀ—ಏತದ್ವೃಕ್ಷತ್ವಾತ್' ಎಂಬ ಪೂರ್ವೋಕ್ತ ಸ್ಥಳದಲ್ಲಿಯೇ ಅವ್ಯಾಪ್ತಿ ಬರುತ್ತದೆ. ಪ್ರತಿಯೋಗ್ಯಧಿಕರಣಭಿನ್ನಾಧಿಕರಣವು ಇಷ್ಟವಾದರೆ ಆಗ ಹೇತ್ವಧಿಕರಣವಾದ ವೃಕ್ಷದಲ್ಲಿ ಕಪಿಸಂಯೋಗರೂಪಸಾಧ್ಯಾಭಾವವನ್ನು ತೆಗೆದುಕೊಳ್ಳಬಹುದು. ಸ್ವಂ—ಕಪಿಸಂಯೋಗಾಭಾವ. ಅದಕ್ಕೆ ಪ್ರತಿಯೋಗೀ ಕಪಿಸಂಯೋಗ. ಇದರ ಅನಧಿಕರಣ (ಅಧಿಕರಣಕ್ಕಿಂತ ಬೇರೆಯಾದ ಅಧಿಕರಣ)ವೆಂದರೆ ಗುಣಕರ್ಮಾದಿ. ಸಂಯೋಗ ಗುಣವಾದುದರಿಂದ ಗುಣದಲ್ಲಿ ಗುಣವಿಲ್ಲವೆಂದುದರಿಂದ ಗುಣವಾಗುತ್ತದೆ. ತನ್ನ ಅಧಿಕರಣ ವೃಕ್ಷ. ಅದಕ್ಕಿಂತ ಬೇರೆಯಾದ ಅಧಿಕರಣ ಗುಣಾದಿಗಳು. ಅಲ್ಲಿರುವ ಅಭಾವವೆಂದರೆ ಕಪಿಸಂಯೋಗಾಭಾವ. ಈ ಅಭಾವವೇ ಮೂಲಾವಚ್ಛೇದದಿಂದ ವೃಕ್ಷದಲ್ಲಿಯೂ ಇರುತ್ತದೆ. ಆಗ ಅಭಾವೀಯ ಪ್ರತಿಯೋಗಿತಾವಚ್ಛೇದಕವೇ ಕಪಿಸಂಯೋಗತ್ವವಾಗುತ್ತದೆ. ಸಾಧ್ಯತಾವಚ್ಛೇದಕವಾದ ಈ ಧರ್ಮವು ಅನವಚ್ಛೇದಕವಾಗುವುದಿಲ್ಲ. ಆದುದರಿಂದ ಅವ್ಯಾಪ್ತಿ. ಅಧಿಕರಣಭೇದದಿಂದ ಅಭಾವಭೇದವಿಲ್ಲವೆಂಬ ಮತವನ್ನನುಸರಿಸಿ ಈ ಅವ್ಯಾಪ್ತಿ ಹೇಳಿದೆ. ಅನೇಕಾಧಿಕರಣಗಳಲ್ಲಿರುವ ಅಭಾವವು ಒಂದೇ ಆಗಿರುತ್ತದೆ. ಆದುದರಿಂದ ಗುಣದಲ್ಲಿರುವ ಸಂಯೋಗಾಭಾವವೂ, ವೃಕ್ಷ ಮೂಲದಲ್ಲಿರುವ ಸಂಯೋಗಾಭಾವವು ಆಗಿರುತ್ತದೆ. ಆಗ ಸಾಧ್ಯತಾವಚ್ಛೇದಕವಾದ ಕಪಿಸಂಯೋಗತ್ವವು ಪ್ರತಿಯೋಗಿತಾವಚ್ಛೇದಕವೇ ಆಗುವುದರಿಂದ ದೋಷ ಬರುತ್ತದೆ. ನಮಗೆ ಅನವಚ್ಛೇದಕತ್ವ ಬರಬೇಕು. ಅದು ಉಕ್ತವಾದ ವಿವರಣೆಯಿಂದ ಬರುವುದಿಲ್ಲ.

ಈ ದೋಷವನ್ನು ಹೋಗಲಾಡಿಸಲು ಸ್ವಪ್ರತಿಯೋಗ್ಯನಧಿಕರಣವೆಂದು ಮೊದಲಿನ ಅರ್ಥವನ್ನು ಬಿಟ್ಟು ಸ್ವಪ್ರತಿಯೋಗ್ಯಧಿಕರಣಾವೃತ್ತಿತ್ವರೂಪ ಎರಡನೆಯ ಅರ್ಥವನ್ನು ಸ್ವೀಕರಿಸುವುದಾದರೆ ಹಿಂದಿನ ಸ್ಥಳದಲ್ಲಿ ದೋಷ ಬರುವುದಿಲ್ಲ. ಸಂಯೋಗವು ಯಾವಾಗಲೂ ಅವ್ಯಾಪ್ಯವೃತ್ತಿಯಾಗಿರುತ್ತದೆ. 'ಸ್ವಾಧಿಕರಣವೃತ್ತ್ಯಭಾವ ಪ್ರತಿಯೋಗಿತ್ವಂ ಅವ್ಯಾಪ್ಯವೃತ್ತಿತ್ವಂ' ಸಂಯೋಗಸ್ವಭಾವವೇ ಇದು. ತನಗೆ ಆಶ್ರಯವಾದ ದ್ರವ್ಯದಲ್ಲಿ ಕೆಲವು ಕಡೆ (ಕಿಂಚಿದವಯವಾವಚ್ಛೇದೇನ) ಇರುತ್ತದೆ. ಇನ್ನು ಕೆಲವು ಕಡೆ ಇರುವುದಿಲ್ಲ. ಆದುದರಿಂದ ಏತದ್‌ವೃಕ್ಷರೂಪಾಧಿಕರಣದಲ್ಲಿ ಅಗ್ರಾವಯವದಲ್ಲಿದ್ದರೆ ಮೂಲಾವಯವದಲ್ಲಿ ಇರುವದಿಲ್ಲ. ಕಪಿಸಂಯೋಗಾಭಾವವನ್ನು ಹೇಳಲು ಸಾಧ್ಯವಿಲ್ಲ. ಹೀಗೆ ಹೇಳುವುದಾದರೆ ಅದು ಪ್ರತಿಯೋಗ್ಯಧಿಕರಣಾವೃತ್ತಿಯಾಗುವುದಿಲ್ಲ. ಪ್ರತಿಯೋಗಿಯಾದ ಕಪಿಸಂಯೋಗದ ಅಧಿಕರಣದಲ್ಲಿ ವೃತ್ತಿಯೇ ಆಗಿರುತ್ತದೆ. ನಮಗೆ ಅಲ್ಲಿ ಇಲ್ಲದಿರುವ ಅಭಾವವಾಗಬೇಕು. ಆದುದರಿಂದ ಪ್ರತಿಯೋಗ್ಯಧಿಕರಣದಲ್ಲಿ ಅವೃತ್ತಿಯಾದ ಅಭಾವವೆಂದರೆ ಘಟಾಭಾವ. ಅಭಾವೀಯಪ್ರತಿಯೋಗಿತಾವಚ್ಛೇದಕ ಘಟತ್ವಾದಿಗಳು. ಕಪಿಸಂಯೋಗತ್ವರೂಪಸಾಧ್ಯತಾವಚ್ಛೇದಕವು ಪ್ರತಿ—ನವಚ್ಛೇದಕ

ವಾಗುತ್ತದೆ. ತದವಚ್ಛಿನ್ನವಾದ ಕಪಿಸಂಯೋಗರೂಪಸಾಧ್ಯದೊಡನೆ ಹೇತುವಿಗೆ ಏಕಾಶ್ರಯವೃತ್ತಿತ್ವ ಸಿದ್ಧವಾಗುತ್ತದೆ.

ಆದರೆ 'ಘಟಃ—ಸಂಯೋಗವಾನ್—ಸತ್ತ್ವಾತ್' ಎಂಬ ಅಸದ್ಧೇತುವಿನಲ್ಲಿ ಅತಿವ್ಯಾಪ್ತಿ ಬರುತ್ತದೆ. ಇಲ್ಲಿ ಸತ್ತ್ವರೂಪ ಹೇತು ಸಂಯೋಗರೂಪಸಾಧ್ಯದಅಭಾವ ವಿರುವ ಗುಣಕರ್ಮಗಳಲ್ಲಿಯೂ ಇರುವುದರಿಂದ ವ್ಯಭಿಚಾರಿಯಾಗುತ್ತದೆ. ಪ್ರತಿಯೋಗಿ ವ್ಯಧಿಕರಣಪದದಿಂದ ಪ್ರತಿಯೋಗ್ಯಧಿಕರಣಾವೃತ್ತಿತ್ವರೂಪಾರ್ಥವು ಇಷ್ಟವಾದರೆ ಇಲ್ಲಿ ಸಾಧ್ಯಾಭಾವವನ್ನು ತೆಗೆದುಕೊಳ್ಳಲು ಸಾಧ್ಯವಿಲ್ಲ. ಹೇತ್ವಧಿಕರಣದಲ್ಲಿ ಸಾಧ್ಯಾಭಾವ ವನ್ನು ಹೇಳಲು ಬರುತ್ತಿದ್ದರೆ ಆಗ ಅತಿವ್ಯಾಪ್ತಿ ಬರುತ್ತಿರಲಿಲ್ಲ. ಇಲ್ಲಿ ಹೇತು—ಸತ್ತ್ವ. ಹೇತ್ವಧಿಕರಣವೆಂದರೆ ಗುಣಕರ್ಮಾದಿಗಳು. ಇಲ್ಲಿರುವ ಅಭಾವವೆಂದರೆ ಯದ್ಯಪಿ. ಸಂಯೋಗಾಭಾವ ಹೇಳಬಹುದು. (ಗುಣದಲ್ಲಿ ಗುಣವಿಲ್ಲವೆಂಬ ನ್ಯಾಯದಿಂದ) ಆದರೆ ಈ ಸಂಯೋಗಾಭಾವರೂಪ ಅಭಾವವು ಸ್ವಪ್ರತಿಯೋಗ್ಯಧಿಕರಣಾವೃತ್ತಿಯಾದ ಅಭಾವವಾಗುವುದಿಲ್ಲ. ಹಿಂದೆ ಹೇಳಿದಂತೆ ಅವ್ಯಾಪ್ಯವೃತ್ತಿಯಾದುದರಿಂದ ಸ್ವಪ್ರತಿ ಯೋಗ್ಯಧಿಕರಣದಲ್ಲಿ (ಸಂಯೋಗಾಧಿಕರಣದಲ್ಲಿ) ಇರುವ ಅಭಾವವೇ ಆಗುತ್ತದೆ. ಸಂಯೋಗರೂಪಪ್ರತಿಯೋಗಿಯ ಅಧಿಕರಣದಲ್ಲಿ ಒಂದು ಕಡೆ ಇದ್ದೇ ಇರುತ್ತದೆ. ಆದುದ ರಿಂದ ಘಟಾದ್ಯಭಾವವನ್ನೇ ತೆಗೆದುಕೊಳ್ಳಬೇಕು. ಅಭಾವೀಯಪ್ರತಿಯೋಗಿತಾವ ಚ್ಛೇದಕ ಘಟತ್ವಾದಿಗಳು. ಅನವಚ್ಛೇದಕವಾದ ಸಾಧ್ಯತಾವಚ್ಛೇದಕವೆಂದರೆ ಸಂ ಯೋಗತ್ವ. ತದವಚ್ಛಿನ್ನವಾದ ಸಾಧ್ಯ—ಸಂಯೋಗ. ಅದರೊಡನೆ ಸತ್ತ್ವರೂಪ ಹೇತುವಿಗೆ ದ್ರವ್ಯದಲ್ಲಿ ಸಾಮಾನಾಧಿಕರಣ್ಯ ಬರುವುದರಿಂದ ಅತಿವ್ಯಾಪ್ತಿದೋಷ ಬರುತ್ತದೆ.

ಇದಕ್ಕೆ ಸಮಾಧಾನ ತೋರಿಸುತ್ತಾನೆ. 'ಹೇತ್ವಧಿಕರಣೇ—' ಇತಿ. ಹೇತ್ವಧಿ ಕರಣವಾದ ಪಕ್ಷದಲ್ಲಿ ಪ್ರತಿಯೋಗ್ಯನಧಿಕರಣತ್ವವಿಶಿಷ್ಟವಾದ ಅಭಾವವು ಇಷ್ಟವಾಗಿದೆ. (ವಿವಕ್ಷಿತತ್ವಾತ್) ಪ್ರತಿಯೋಗಿವ್ಯಧಿಕರಣಪದದಿಂದ 'ಪ್ರತಿಯೋಗ್ಯನಧಿಕರವೃತ್ತಿತ್ವ ವಿಶಿಷ್ಟವಾದ ಅಭಾವವು ಹೇತ್ವಧಿಕರಣದಲ್ಲಿರಬೇಕೆಂದರ್ಥ. ಹೇತ್ವಧಿಕರಣದಲ್ಲಿ ಹೇಳುವ ಅಭಾವವು ಸ್ವಪ್ರತಿಯೋಗ್ಯನಧಿಕರಣವಾದ ಹೇತ್ವಧಿಕರಣದಲ್ಲಿ ಇರಬೇಕೆಂದು ತಾತ್ಪರ್ಯ. ಸ್ವಪ್ರತಿಯೋಗ್ಯನಧಿಕರಣವೂ ಹೇತ್ವಧಿಕರಣವೂ ಒಂದಾಗಿದ್ದು ಅಲ್ಲಿರುವ ಅಭಾವವಾಗಿರಬೇಕು. ಹೀಗೆ ವಿವಕ್ಷಾಮಾಡಿದರೆ ಹಿಂದೆ ಹೇಳಿದ ಎರಡು ದೋಷಗಳೂ ಬರುವುದಿಲ್ಲ.

'ವೃಕ್ಷಃ—ಕಪಿಸಂಯೋಗೀ—ಏತದ್ವೃಕ್ಷತ್ವಾತ್' ಎಂಬ ಸದ್ಧೇತುಕಾನು ಮಾನಸ್ಥಳದಲ್ಲಿ ಸಾಧ್ಯಾಭಾವವನ್ನು ಹೇತ್ವಧಿಕರಣದಲ್ಲಿ ಹೇಳಲು ಸಾಧ್ಯವಿಲ್ಲ. ಸಾಧ್ಯಾ ಭಾವವನ್ನು ತೆಗೆದುಕೊಂಡಿದ್ದರೆ ಅವ್ಯಾಪ್ತಿದೋಷ ಬರುತ್ತಿತ್ತು. ಹೇತ್ವಧಿಕರಣ ದಲ್ಲಿರುವ ಅಭಾವವು ಸ್ವಪ್ರತಿಯೋಗ್ಯನಧಿಕರಣವಾದ ಹೇತ್ವಧಿಕರಣದಲ್ಲಿರಬೇಕೆಂದುದ

ರಿಂದ ಕಪಿಸಂಯೋಗಾಭಾವ ಹಾಗಾಗುವುದಿಲ್ಲ. ಯದ್ಯಪಿ ಮೂಲಾವಚ್ಛೇದದಿಂದ ಕಪಿಸಂಯೋಗಾಭಾವವು ಹೇತ್ವಧಿಕರಣವಾದ ವೃಕ್ಷದಲ್ಲಿ ಬರುತ್ತದೆ. ಆದರೆ ಹೇತ್ವಧಿಕರಣವು ಸ್ವಪ್ರತಿಯೋಗ್ಯನಧಿಕರಣವೂ ಆಗಿರಬೇಕೆಂದುದರಿಂದ ವೃಕ್ಷವು ಪ್ರತಿಯೋಗ್ಯನಧಿಕರಣವಾದ ಹೇತ್ವಧಿಕರಣವಾಗಲಿಲ್ಲ. ಅಭಾವಕ್ಕೆ ಪ್ರತಿಯೋಗಿಯಾದ ಕಪಿ ಸಂಯೋಗಕ್ಕೆ ಅಧಿಕರಣವೇ ಆದುದರಿಂದ ಸ್ವಪ್ರತಿಯೋಗ್ಯಧಿಕರಣವಾದ ಹೇತ್ವಧಿಕರಣವಾಗುತ್ತದೆ. ನಮಗೆ ಪ್ರತಿಯೋಗ್ಯನಧಿಕರಣವಾದ ಹೇತ್ವಧಿಕರಣದಲ್ಲಿರುವ ಅಭಾವವಾಗಬೇಕು. ಆದುದರಿಂದ ಕಪಿಸಂಯೋಗಾಭಾವರೂಪಸಾಧ್ಯಾಭಾವವನ್ನು ತೆಗೆದುಕೊಳ್ಳಬಾರದು. ಘಟಾಭಾವಾದಿಗಳನ್ನು ತೆಗೆದುಕೊಂಡರೆ ಹಿಂದಿನಂತೆ ಪ್ರತಿಯೋಗಿತಾನವಚ್ಛೇದಕಸಾಧ್ಯತಾವಚ್ಛೇದಕವು ಕಪಿಸಂಯೋಗತ್ವವಾಗುತ್ತದೆ. ಇದರಿಂದ ಕೂಡಿದ ಸಾಧ್ಯಕ್ಕೂ ಹೇತುವಿಗೂ ಸಾಮಾನಾಧಿಕರಣ್ಯವಿರುವುದರಿಂದ ಅವ್ಯಾಪ್ತಿಗೆ ಅವಕಾಶವಿಲ್ಲ.

'ಘಟಃ—ಸಂಯೋಗವಾನ್–ಸತ್ತ್ವಾತ್' ಎಂಬ ಅಸದ್ಧೇತುಸ್ಥಲದಲ್ಲಿ ಸಾಧ್ಯಾಭಾವವನ್ನು ತೆಗೆದುಕೊಳ್ಳಲು ಸಾಧ್ಯವಿಲ್ಲವಾದುದರಿಂದ ಹಿಂದೆ ಅತಿವ್ಯಾಪ್ತ್ಯಾಶಂಕೆ ಮಾಡಿತ್ತು. ಈಗ ಅಭಾವವು ಸ್ವಪ್ರತಿಯೋಗ್ಯನಧಿಕರಣವಾದ ಹೇತ್ವಧಿಕರಣದಲ್ಲಿರುವುದು ಆಗಬೇಕೆಂದುದರಿಂದ ಸಾಧ್ಯಾಭಾವವನ್ನು ತೆಗೆದುಕೊಳ್ಳಬಹುದು. ಸಂಯೋಗರೂಪಸಾಧ್ಯದ ಅಭಾವವು ಸ್ವಪ್ರತಿಯೋಗಿಯಾದ ಸಂಯೋಗಕ್ಕೆ ಅನಧಿಕರಣವಾದ, ಸತ್ತ್ವರೂಪಹೇತುವಿಗೆ ಅಧಿಕರಣವಾದ, ಗುಣದಲ್ಲಿ (ಅಥವಾ ಕರ್ಮದಲ್ಲಿ) ಬರುತ್ತದೆ. ಸ್ವಪ್ರತಿಯೋಗ್ಯನಧಿಕರಣಹೇತ್ವಧಿಕರಣವೃತ್ತ್ಯಭಾವವೆಂದರೆ ಸಂಯೋಗಾಭಾವರೂಪ ಸಾಧ್ಯಾಭಾವವಾಗುತ್ತದೆ. ಅಭಾವೀಯಪ್ರತಿಯೋಗಿತಾವಚ್ಛೇದಕವೇ ಸಾಧ್ಯತಾವಚ್ಛೇದಕವಾದ ಸಂಯೋಗತ್ವವು ಆಗುವುದರಿಂದ ಅನವಚ್ಛೇದಕವಾಗುವುದಿಲ್ಲ. ಹೀಗೆ ಲಕ್ಷಣ ಸಂಗಮನವಿಲ್ಲವಾದುದರಿಂದ ಅತಿವ್ಯಾಪ್ತಿಗೂ ಅವಕಾಶವಿಲ್ಲ. ಪ್ರತಿಯೋಗಿವ್ಯಧಿಕರಣ ಹೇತುಸಮಾನಾಧಿಕರಣಕಾಭಾವವಾಗಬೇಕೆಂದರೆ ಸ್ವಪ್ರತಿಯೋಗ್ಯನಧಿಕರಣವಾದ ಹೇತ್ವಧಿಕರಣದಲ್ಲಿರುವ ಅಭಾವವೆಂದು ನಿಷ್ಕರ್ಷ. ಈಗ ಲಕ್ಷಣಾಕಾರ—

ಸ್ವಪ್ರತಿಯೋಗ್ಯನಧಿಕರಣೀಭೂತಂ ಯತ್ ಹೇತುತಾವಚ್ಛೇದಕಸಂಬಂಧಾವಚ್ಛಿನ್ನಹೇತುತಾವಚ್ಛೇದಕಾವಚ್ಛಿನ್ನಹೇತ್ವಧಿಕರಣಂ, ತಾದೃಶಹೇತ್ವಧಿಕರಣವೃತ್ತ್ಯಭಾವೀಯಪ್ರತಿಯೋಗಿತಾನವಚ್ಛೇದಕಂ ಯತ್ ಸಾಧ್ಯತಾವಚ್ಛೇದಕಂ, ತದವಚ್ಛಿನ್ನಸಾಧ್ಯಸಾಮಾನಾಧಿಕರಣ್ಯಮ್—ವ್ಯಾಪ್ತಿಃ ॥

ಪ್ರತಿಯೋಗ್ಯನಧಿಕರಣತ್ವಂ ಪ್ರತಿಯೋಗಿತಾವಚ್ಛೇದಕಾವಚ್ಛಿನ್ನಾಽನಧಿಕರಣತ್ವಂ ವಾಚ್ಯಮ್ । ತೇನ ವಿಶಿಷ್ಟಸತ್ತಾವಾನ್—ಜಾತೇರಿತ್ಯಾದೌ ಜಾತ್ಯಧಿಕರಣ ಗುಣಾದೌ ವಿಶಿಷ್ಟಸತ್ತಾಭಾವಪ್ರತಿಯೋಗಿ ಸತ್ತಾಧಿಕರಣತ್ವೇಽಪಿನ ಕ್ಷತಿಃ ॥

ಸ್ಥಲಾಂತರದಲ್ಲಿ ಅತಿವ್ಯಾಪ್ತಿದೋಷವನ್ನು ಹೋಗಲಾಡಿಸಲು ಪ್ರತಿಯೋಗ್ಯನಧಿ

ಕರಣಪದದಿಂದ ತಿಳಿಯಬೇಕಾದ ಅರ್ಥವನ್ನು ತೋರಿಸುತ್ತಾನೆ. 'ಪ್ರತಿಯೋ—' ಇತಿ ಹೇತ್ವಧಿಕರಣದಲ್ಲಿ ಪ್ರತಿಯೋಗ್ಯನಧಿಕರಣತ್ವರೂಪ ವಿಶೇಷಣ ಹೇಳಿದೆ. ಪ್ರತಿಯೋಗಿಯ ಅಧಿಕರಣವಾಗದಿರುವ ಹೇತ್ವಧಿಕರಣವೆಂದಿದೆ. ಪ್ರತಿಯೋಗಿಗೆ ಅಧಿಕರಣವಾಗಬಾರದು ಎಂಬಲ್ಲಿ ಪ್ರತಿಯೋಗಿತಾವಚ್ಛೇದಕ ಧರ್ಮದಿಂದ ಕೂಡಿದ ಪ್ರತಿಯೋಗಿಗೆ ಅನಧಿಕರಣ ವಾದ ಹೇತ್ವಧಿಕರಣವೆಂದು ಅರ್ಥಮಾಡಬೇಕು. ಪ್ರತಿಯೋಗಿತಾ ಪ್ರತಿಯೋಗಿ ಯಲ್ಲಿದೆ. ಪ್ರತಿಯೋಗಿತೆಯಲ್ಲಿ ಯಾವ ಅವಚ್ಛೇದಕ ಧರ್ಮವಿದೆಯೋ ತದ್ಧರ್ಮಾವ ಚ್ಛಿನ್ನ (ಆ ಧರ್ಮದಿಂದ ಕೂಡಿದ) ಪ್ರತಿಯೋಗಿಗೆ ಅನಧಿಕರಣವಾಗಿರಬೇಕು. ಪ್ರತಿ ಯೋಗಿ ಆಧೇಯ. ಆಧೇಯತಾ ಪ್ರತಿಯೋಗಿನಿಷ್ಠಾ. ಪ್ರತಿಯೋಗಿತಾವಚ್ಛೇದಕಾ ವಚ್ಛಿನ್ನ ಪ್ರತಿಯೋಗಿನಿಷ್ಠಾಧೇಯತಾ ನಿರೂಪಿತಅಧಿಕರಣತಾ, ಹೇತ್ವಧಿಕರಣದಲ್ಲಿರ ಬಾರದೆಂದು ತಾತ್ಪರ್ಯ. ಸಾಮಾನ್ಯವಾದ (ಅವಚ್ಛೇದಕ ಧರ್ಮದಿಂದ ಕೂಡಿರದ) ಪ್ರತಿಯೋಗಿಗೆ ಅನಧಿಕರಣವಾದ ಹೇತ್ವಧಿಕರಣವೃತ್ತ್ಯಭಾವವೆಂದು ಹೇಳಿದರೆ 'ವಿಶಿಷ್ಟ ಸತ್ತಾವಾನ್—ಜಾತೇಃ' ಎಂಬ ಅಸದ್ಧೇತು ಸ್ಥಳದಲ್ಲಿ ಅತಿವ್ಯಾಪ್ತಿ ಬರುತ್ತದೆ. ಗುಣ ಕರ್ಮಾನ್ಯತ್ವವಿಶಿಷ್ಟಸತ್ತಾರೂಪ ಸಾಧ್ಯದ ಅಭಾವವಿರುವ ಗುಣಕರ್ಮಾದಿಗಳಲ್ಲಿ ಜಾತಿ ರೂಪ ಹೇತುವಿರುವುದರಿಂದ ಹೇತುವು ವ್ಯಭಿಚಾರಿಯಾಗಿದೆ. ಇಲ್ಲಿ ಲಕ್ಷಣ ಬರಬಾರದು. ಹಿಂದೆ ಹೇಳಿದಂತೆ ವಿವಕ್ಷಾಮಾಡದಿದ್ದರೆ ಈ ಹೇತುವಿನಲ್ಲಿಯೂ ಲಕ್ಷಣಬರುವುದರಿಂದ ಅತಿವ್ಯಾಪ್ತಿ ಬರುತ್ತದೆ, ಜಾತಿರೂಪ ಹೇತ್ವಧಿಕರಣದಲ್ಲಿ ಸಾಧ್ಯಾಭಾವ ಹೇಳಲು ಬರುವುದಾದರೆ ದೋಷ ಬರುವುದಿಲ್ಲ. ಯಥಾಶ್ರುತಲಕ್ಷಣವಿಟ್ಟುಕೊಂಡರೆ ಸಾಧ್ಯಾ ಭಾವ ಹೇಳಲು ಸಾಧ್ಯವಿಲ್ಲ. ಗುಣರೂಪ ಹೇತ್ವಧಿಕರಣದಲ್ಲಿ ಯದ್ಯಪಿ ವಿಶಿಷ್ಟಸತ್ತಾ ಇಲ್ಲ. ಆದರೂ ಹಿಂದೆ ಹೇಳಿದಂತೆ 'ವಿಶಿಷ್ಟಂ ಶುದ್ಧಾತ್ ನಾತಿರಿಚ್ಯತೇ' ಎಂಬ ನಿಯಮ ದಿಂದ ಗುಣಕರ್ಮಾನ್ಯತ್ವವಿಶಿಷ್ಟಸತ್ತೆಯೂ, ಶುದ್ಧಸತ್ತೆಯೂ ಒಂದಾದುದರಿಂದ ಗುಣ ದಲ್ಲಿ ಶುದ್ಧಸತ್ತಾ ಇರುವುದರಿಂದ ವಿಶಿಷ್ಟಸತ್ತೆಯೂ ಇದ್ದಂತಾಗಿ ಗುಣಕರ್ಮಾನ್ಯತ್ವ ವಿಶಿಷ್ಟಸತ್ತಾರೂಪಸಾಧ್ಯದ ಅಭಾವ ಹೇಳಲು ಬರುವುದಿಲ್ಲ. ಗುಣಕರ್ಮಾನ್ಯತ್ವ ವಿಶಿಷ್ಟಸತ್ತಾಭಾವಕ್ಕೆ ಪೂರ್ವೋಕ್ತನ್ಯಾಯದಿಂದ ಶುದ್ಧಸತ್ತೆಯೂ ಪ್ರತಿಯೋಗಿಯಾಗು ತ್ತದೆ. ಶುದ್ಧಸತ್ತಾರೂಪಪ್ರತಿಯೋಗಿಗೆ ಅಧಿಕರಣವಾದ ಹೇತ್ವಧಿಕರಣ ಗುಣವಾಗು ವುದರಿಂದ ಸಾಧ್ಯಾಭಾವ ತೆಗೆದುಕೊಳ್ಳಬಾರದು. ಆದುದರಿಂದ ಘಟಾದ್ಯಭಾವವನ್ನು ತೆಗೆದುಕೊಳ್ಳಬೇಕು. ಅಭಾವಪ್ರತಿಯೋಗೀ ಘಟಾದಿಗಳು. ಪ್ರತಿಯೋಗಿತಾವ ಚ್ಛೇದಕ ಘಟತ್ವಾದಿ. ಅನವಚ್ಛೇದಕ ಸಾಧ್ಯತಾವಚ್ಛೇದಕವೆಂದರೆ ವಿಶಿಷ್ಟಸತ್ತಾತ್ವ. ತದವಚ್ಛಿನ್ನವಾದ ಸಾಧ್ಯ—ವಿಶಿಷ್ಟಸತ್ತಾ. ಇದರೊಡನೆ ಜಾತಿರೂಪಹೇತುವಿಗೆ ಸಾಮಾನಾಧಿಕರಣ್ಯ ಸಂಭವಿಸುವುದರಿಂದ ಅತಿವ್ಯಾಪ್ತಿ ಬರುತ್ತದೆ.

ಪ್ರತಿಯೋಗಿತಾವಚ್ಛೇದಕಧರ್ಮಾವಚ್ಛಿನ್ನವಾದ ಪ್ರತಿಯೋಗಿಗೆ ಅನಧಿಕರಣವಾದ ಹೇತ್ವಧಿಕರಣದಲ್ಲಿರುವ ಅಭಾವವೆಂದು ಪರಿಷ್ಕರಿಸಿದರೆ ಪೂರ್ವೋಕ್ತವಾದ ಅಸದ್ಧೇತು ಸ್ಥಳದಲ್ಲಿ ಸಾಧ್ಯಾಭಾವವನ್ನೇ ತೆಗೆದುಕೊಳ್ಳಬಹುದು. ಸಾಧ್ಯಾಭಾವವನ್ನು ತೆಗೆದು

ಕೊಂಡರೆ ಪ್ರತಿಯೋಗಿತಾನವಚ್ಛೇದಕವು ಸಾಧ್ಯತಾವಚ್ಛೇದಕವಾಗದಿರುವುದರಿಂದ ಅತಿವ್ಯಾಪ್ತಿ ಬರುವುದಿಲ್ಲ. ಹೇತ್ವಧಿಕರಣ—ಗುಣಕರ್ಮಗಳು. ಅಲ್ಲಿ ವಿಶಿಷ್ಟಸತ್ತಾತ್ವ ರೂಪದಿಂದ ವಿಶಿಷ್ಟಸತ್ತಾ ಇರುವುದಿಲ್ಲ. ಪ್ರತಿಯೋಗಿತಾನವಚ್ಛೇದಕ (ವಿಶಿಷ್ಟಸತ್ತಾತ್ವ) ವಿಶಿಷ್ಟಪ್ರತಿಯೋಗಿಗೆ ಅನಧಿಕರಣವಾದ ಹೇತ್ವಧಿಕರಣವೆಂದರೆ ಗುಣ. ಅಲ್ಲಿರುವ ಅಭಾವ—ವಿಶಿಷ್ಟಸತ್ತಾಭಾವ. ಅಭಾವೀಯಪ್ರತಿಯೋಗಿತಾವಚ್ಛೇದಕವೇ ಸಾಧ್ಯ ತಾವಚ್ಛೇದಕವಾದ ವಿಶಿಷ್ಟಸಾತ್ತತ್ವ ಆಗುತ್ತದೆ. ಅನವಚ್ಛೇದಕವಾಗದಿರುವುದರಿಂದ ಅತಿವ್ಯಾಪ್ತಿ ಬರುವುದಿಲ್ಲ. ಆಗ ಲಕ್ಷಣ—'ಪ್ರತಿಯೋಗಿತಾವಚ್ಛೇದಕಾವಚ್ಛಿನ್ನಪ್ರತಿ ಯೋಗ್ಯನಧಿಕರಣೀಭೂತಂ ಯತ್ ಹೇತುತಾವಚ್ಛೇದಕಸಂಬಂಧಾವಚ್ಛಿನ್ನ, ಹೇತು ತಾವಚ್ಛೇದಕಾವಚ್ಛಿನ್ನಹೇತ್ವಧಿಕರಣಂ ತಾದೃಶಹೇತ್ವಧಿಕರಣ ವೃತ್ತ್ಯಭಾವೀಯಪ್ರತಿ ಯೋಗಿತಾನವಚ್ಛೇದಕ ಸಾಧ್ಯತಾವಚ್ಛೇದಕಾವಚ್ಛಿನ್ನಸಾಧ್ಯಸಾಮಾನಾಧಿಕರಣ್ಯಂ ವ್ಯಾಪ್ತಿಃ'

ಏವಂ ಸಾಧ್ಯತಾವಚ್ಛೇದಕಸಂಬಂಧೇನ ಪ್ರತಿಯೋಗ್ಯನಧಿಕರಣತ್ವಂ ಬೋಧ್ಯಮ್ । ತೇನ ಜ್ಞಾನವಾನ್ ದ್ರವ್ಯತ್ವಾದಿತ್ಯಾದೌ ದ್ರವ್ಯತ್ವಾಧಿಕರಣ ಘಟಾದೇರ್ವಿಷಯ ತಾಸಂಬಂಧೇನ ಜ್ಞಾನಾಧಿಕರಣತ್ವೇಽಪಿ ನ ನಕ್ಷತಿಃ ! ಇತ್ಥಂಚ ವಹ್ನಿಮಾನ್ ಧೂಮಾದಿತ್ಯಾದೌ ಧೂಮಾಧಿಕರಣೇ ಸಮವಾಯೇನ ವಹ್ನಿವಿರಹಸತ್ವೇಽಪಿ ನ ಕ್ಷತಿಃ ॥

ಸ್ಥಳಾಂತರದಲ್ಲಿ ಅತಿವ್ಯಾಪ್ತಿಯನ್ನು ಹೋಗಲಾಡಿಸಲು ಪ್ರತಿಯೋಗ್ಯನಧಿಕರಣ ದಲ್ಲಿ ಸಾಧ್ಯತಾವಚ್ಛೇದಕಸಂಬಂಧವನ್ನೂ ಸೇರಿಸಬೇಕೆಂದು ತೋರಿಸುತ್ತಾನೆ.—'ಏವಂ' ಇತಿ. ಸಾಧ್ಯತಾವಚ್ಛೇದಕಸಂಬಂಧದಿಂದ ಪ್ರತಿಯೋಗಿಗೆ ಅನಧಿಕರಣವಾದ ಹೇತ್ವಧಿ ಕರಣದಲ್ಲಿರುವ ಅಭಾವವೆಂದು ತಿಳಿಯಬೇಕು. ಹೀಗೆ ವಿವಕ್ಷಾಮಾಡದಿದ್ದರೆ 'ಆತ್ಮಾ—ಜ್ಞಾನವಾನ್—ದ್ರವ್ಯತ್ವಾತ್ (ಸತ್ತಾವ್ವತ್ ಎಂದೂ ಪಾಠಾಂತರ) ಎಂಬ ಅಸದ್ಧೇತು ಸ್ಥಳದಲ್ಲಿ ಅತಿವ್ಯಾಪ್ತಿ ಬರುತ್ತದೆ. ಇಲ್ಲಿ ದ್ರವ್ಯತ್ವರೂಪ ಹೇತುವ್ಯಭಿಚಾರಿ. ಸಮ ವಾಯದಿಂದ ಜ್ಞಾನವು ಸಾಧ್ಯ. ಸಮವಾಯದಿಂದ ಜ್ಞಾನವುಳ್ಳವನು ಆತ್ಮಾ. ಸಮ ವಾಯಸಂಬಂಧದಿಂದ ಜ್ಞಾನರೂಪಸಾಧ್ಯವಿಲ್ಲದ ಘಟದಲ್ಲಿ ದ್ರವ್ಯತ್ವರೂಪ ಹೇತು ಇರು ವುದರಿಂದ ದುಷ್ಟವಾಗುತ್ತದೆ. ಸಾಧ್ಯತಾವಚ್ಛೇದಕಸಂಬಂಧದಿಂದ ಪ್ರತಿಯೋಗಿಯ ಅನಧಿಕರಣವೆಂದು ಹೇಳದೆ ಯಾವುದಾದರೊಂದು ಸಂಬಂಧದಿಂದ ಪ್ರತಿಯೋಗ್ಯ ನಧಿಕರಣವಾದ ಹೇತ್ವಧಿಕರಣವೆಂದರೆ ಈ ಅಸದ್ಧೇತುಸ್ಥಳದಲ್ಲಿ ಸಾಧ್ಯಾಭಾವವನ್ನು ಹೇತ್ವಧಿಕರಣದಲ್ಲಿ ಹೇಳಲುಸಾಧ್ಯವಿಲ್ಲ. ದ್ರವ್ಯತ್ವರೂಪ ಹೇತುವಿನ ಅಧಿಕರಣವೆಂದರೆ ಘಟ. ಅದರಲ್ಲಿ ಯದ್ಯಪಿ ಜ್ಞಾನಾಭಾವ ಹೇಳಬೇಕು. ಆದರೆ ಘಟವು ಪ್ರತಿಯೋಗ್ಯ ನಧಿಕರಣವಾಗುವುದಿಲ್ಲ. ಘಟದಲ್ಲಿ ಸಮವಾಯಸಂಬಂಧದಿಂದ ಜ್ಞಾನವಿಲ್ಲದಿದ್ದರೂ ವಿಷಯತಾಸಂಬಂಧದಿಂದ ಇದ್ದೇ ಇರುತ್ತದೆ. ಆದುದರಿಂದ ಘಟವು ಪ್ರತಿಯೋಗ್ಯ

ದಿಕರಣವಾದ ಹೇತ್ವದಿಕರಣವಾಗುತ್ತದೆ ಜ್ಞಾನಭಾವ ಹೇಳಲು ಸಾಧ್ಯವಿಲ್ಲವಾದುದರಿಂದ ಪಟಾಭಾವವನ್ನು ತೆಗೆದುಕೊಂಡರೆ ಅಭಾವೀಯಪ್ರತಿಯೋಗಿತಾವಚ್ಛೇದಕ—ಘಟತ್ವ. ಅನವಚ್ಛೇದಕವಾಡ ಸಾಧ್ಯತಾನಚ್ಛೇದಕವೆಂದರೆ ಜ್ಞಾನತ್ವ. ತದವಚ್ಛಿನ್ನ ಸಾಧ್ಯ—ಜ್ಞಾನ. ಅದರೊಡನೆ ದ್ರವ್ಯತ್ವರೂಪಹೇತುವಿಗೆ ಸಾಮಾನಾಧಿಕರಣ್ಯ ಬರುತ್ತದೆ. ಈ ಅವ್ಯಾಪ್ತಿಯನ್ನು ಹೋಗಲಾಡಿಸಲು ಸಾಧ್ಯತಾವಚ್ಛೇದಕಸಂಬಂಧವನ್ನು ಸೇರಿಸಿದರೆ ಹೇತ್ವದಿಕರಣವಾದ ಘಟದಲ್ಲಿ ಜ್ಞಾನರೂಪಸಾಧ್ಯದ ಅಭಾವ ಹೇಳಲು ಸಾಧ್ಯ. ಇದು ಪ್ರತಿಯೋಗ್ಯನಧಿಕರಣತ್ವ ವಿಶಿಷ್ಟಹೇತ್ವಧಿಕರಣಕಾಭಾವವಾಗುತ್ತದೆ. ಜ್ಞಾನಾಭಾವವೆಂದರೆ ಅಭಾವಪ್ರತಿಯೋಗಿ—ಜ್ಞಾನ. ಪ್ರತಿಯೋಗಿತಾ—ಜ್ಞಾನದಲ್ಲಿ ಇದೆ. ಸಾಧ್ಯತಾವಚ್ಛೇದಕಸಂಬಂಧ—ಸಮವಾಯ. ಸಮವಾಯ ಸಂಬಂಧದಿಂದ ಜ್ಞಾನಕ್ಕೆ ಅಧಿಕರಣವಾದದ್ದು ಕೇವಲ ಆತ್ಮಾ. ಘಟಪಟಾದಿಗಳಾಗುವುದಿಲ್ಲ. ಆದುದರಿಂದ ದ್ರವ್ಯತ್ವರೂಪಹೇತ್ವಧಿಕರಣವಾದ ಘಟಪಟಾದಿಗಳಲ್ಲಿರುವ ಅಭಾವವೆಂದರೆ ಸಮವಾಯಸಂಬಂಧಾವಚ್ಛಿನ್ನ ಪ್ರತಿಯೋಗಿತಾಕ ಜ್ಞಾನರೂಪಸಾಧ್ಯದ ಅಭಾವ. ಜ್ಞಾನತ್ವರೂಪಸಾಧ್ಯತಾವಚ್ಛೇದಕಧರ್ಮವು ಅಭಾವೀಯಪ್ರತಿಯೋಗಿತಾವಚ್ಛೇದಕವೇ ಆಗುತ್ತದೆ. ಅನವಚ್ಛೇದಕವಾಗದಿರುವುದರಿಂದ ಅತಿವ್ಯಾಪ್ತಿ ಬರುವುದಿಲ್ಲ.

ಇಲ್ಲಿ ಅತಿವ್ಯಾಪ್ತಿಯನ್ನು ಹೋಗಲಾಡಿಸಲು ಪ್ರತಿಯೋಗಿತಾವಚ್ಛೇದಕಸಂಬಂಧದಿಂದ ಪ್ರತಿಯೋಗ್ಯನಧಿಕರಣವೆಂದು ವಿವಕ್ಷಾ ಮಾಡಿದರೂ ಸಾಕು. ಹೇತ್ವಧಿಕರಣವಾದ ಘಟಾದಿಯಲ್ಲಿ ಪ್ರತಿಯೋಗಿತಾವಚ್ಛೇದಕಸಂಬಂಧವಾದ ಸಮವಾಯದಿಂದ ಜ್ಞಾನಾಭಾವದ ಪ್ರತಿಯೋಗಿಯಾದ ಜ್ಞಾನದ ಅನಧಿಕರಣತ್ವ ಬರುವುದರಿಂದ ಸಾಧ್ಯಾಭಾವವನ್ನು ತೆಗೆದುಕೊಂಡು ಅತಿವ್ಯಾಪ್ತಿಯನ್ನು ದೂರಮಾಡಬಹುದು. ಆದರೆ ಮುಂದೆ ಹೇತ್ವಧಿಕರಣದಲ್ಲಿರುವ ಅಭಾವೀಯಪ್ರತಿಯೋಗಿತೆಯಲ್ಲಿ ಸಾಧ್ಯತಾವಚ್ಛೇದಕ ಸಂಬಂಧವನ್ನು ಆವಶ್ಯಕವಾಗಿ ಸೇರಿಸಬೇಕಾದುದರಿಂದ ಸಂಬಂಧವನ್ನು ಎರಡು ಸಾರಿ ಸೇರಿಸುವುದರಿಂದ ಗೌರವ ಬರುವುದರಿಂದ ಈಗ ಇಲ್ಲಿಯೇ ಒಂದು ಸಾರಿ ಆಸಂಬಂಧವನ್ನು ಸೇರಿಸಿದರೆ ಲಾಘವವುಂಟಾಗುವುದಲ್ಲದೆ ಪ್ರಸಿದ್ಧ ಹೇತುಕಸ್ಥಳವಲ್ಲಿ ಅವ್ಯಾಪ್ತಿಯೂ ಇಲ್ಲವೆಂದು ತೋರಿಸುತ್ತಾನೆ. 'ಇತ್ಥಂಚ—' ಇತಿ.

ಪ್ರತಿಯೋಗ್ಯನಧಿಕರಣತ್ವದಲ್ಲಿ ಸಾಧ್ಯತಾವಚ್ಛೇದಕಸಂಬಂಧವನ್ನು ಸೇರಿಸಿರುವುದರಿಂದ 'ವಹ್ನಿಮಾನ್—ಧೂಮಾತ್' ಎಂಬ ಸದ್ಧೇತುಸ್ಥಳದಲ್ಲಿ ಅವ್ಯಾಪ್ತಿ ಬರುವುದಿಲ್ಲ. ಇಲ್ಲವಾದರೆ ಸಂಯೋಗಸಂಬಂಧದಿಂದ ಹೇತುವಾದ ಧೂಮಕ್ಕೆ ಅಧಿಕರಣವಾದ ಪರ್ವತದಲ್ಲಿ ಸಾಧ್ಯಾಭಾವವನ್ನು ಹೇಳಬಹುದು. ಸಂಯೋಗದಿಂದ ಅಲ್ಲಿ ವಹ್ನಿ ಇದ್ದರೂ ಸಮವಾಯಸಂಬಂಧದಿಂದ ವಹ್ನಿ ಇರುವುದಿಲ್ಲ. ವಹ್ನ್ಯಭಾವವು ಸಮವಾಯದಿಂದ ಪ್ರತಿಯೋಗ್ಯನಧಿಕರಣಕ ಹೇತ್ವಧಿಕರಣಕವಾಗುತ್ತದೆ. ಸಮವಾಯಸಂಬಂಧಾವಚ್ಛಿನ್ನಪ್ರತಿಯೋಗಿತಾಕವಹ್ನಿರೂಪ ಸಾಧ್ಯಾಭಾವವನ್ನು ಹೇಳಬಹುದು. ಆಗ ವಹ್ನಿತ್ವ

ರೂಪಸಾಧ್ಯತಾವಚ್ಛೇದಕವು ಅಭಾವೀಯಪ್ರತಿಯೋಗಿತಾವಚ್ಛೇದಕವೇ ಆಗಿ ಅನವಚ್ಛೇದಕವಾಗದಿರುವುದರಿಂದ ಅವ್ಯಾಪ್ತಿ ಬರುತ್ತದೆ.

ಪ್ರತಿಯೋಗ್ಯನಧಿಕರಣದಲ್ಲಿ ಸಾಧ್ಯತಾವಚ್ಛೇದಕಸಂಬಂಧಕ್ಕೆ ಪ್ರವೇಶ ಇದ್ದರೆ ಪ್ರಕೃತ ಸಂಯೋಗಸಂಬಂಧದಿಂದ ಸಾಧ್ಯವಾದ ವಹ್ನಿ ಪರ್ವತದಲ್ಲಿ ಇರುವುದರಿಂದ ಸಂಯೋಗಸಂಬಂಧದಿಂದ ಸಾಧ್ಯಾಭಾವವನ್ನು ಹೇಳಲು ಸಾಧ್ಯವಿಲ್ಲ. ಹೇತ್ವಧಿಕರಣವಾದ ಪರ್ವತದಲ್ಲಿರುವ ಅಭಾವವೆಂದರೆ ಘಟಾದ್ಯಭಾವ. ಅಭಾವೀಯಪ್ರತಿಯೋಗಿತಾವಚ್ಛೇದಕವೆಂದರೆ ಘಟತ್ವ. ವಹ್ನಿತ್ವರೂಪಸಾಧ್ಯತಾವಚ್ಛೇದಕವು ಪ್ರತಿಯೋಗಿತಾನವಚ್ಛೇದಕವಾಗುತ್ತದೆ. ವಹ್ನಿತ್ವಾವಚ್ಛಿನ್ನವಹ್ನಿರೂಪಸಾಧ್ಯಸಾಮಾನಾಧಿಕರಣ್ಯ ಹೇತುವಾದ ಧೂಮಕ್ಕೆ ಸಂಭವಿಸುವುದರಿಂದ ಅವ್ಯಾಪ್ತಿಗೆ ಅವಕಾಶವಿಲ್ಲ.

ಈಗ ಲಕ್ಷಣಾಕಾರ—'ಸಾಧ್ಯತಾವಚ್ಛೇದಕಸಂಬಂಧಾವಚ್ಛಿನ್ನಾ ಯಾ ಪ್ರತಿಯೋಗಿತಾ ತಾದೃಶ ಪ್ರತಿಯೋಗಿತಾವಚ್ಛೇದಕಾವಚ್ಛಿನ್ನಪ್ರತಿಯೋಗ್ಯನಧಿಕರಣಂ ಯತ್ ಹೇತುತಾವಚ್ಛೇದಕಸಂಬಂಧಾವಚ್ಛಿನ್ನ ಹೇತುತಾವಚ್ಛೇದಕಾವಚ್ಛಿನ್ನ ಹೇತ್ವಧಿಕರಣಂ, ತಾದೃಶ ಹೇತ್ವಧಿಕರಣವೃತ್ತ್ಯಭಾವೀಯಪ್ರತಿಯೋಗಿತಾನವಚ್ಛೇದಕಂ ಯತ್ ಸಾಧ್ಯತಾವಚ್ಛೇದಕಂ ತದವಚ್ಛಿನ್ನಸಾಧ್ಯಸಾಮಾನಾಧಿಕರಣ್ಯಂ—' ವ್ಯಾಪ್ತಿಃ ||

ನನು—ಪ್ರತಿಯೋಗಿತಾವಚ್ಛೇದಕಾವಚ್ಛಿನ್ನಸ್ಯ ಯಸ್ಯಕಸ್ಯಚಿತ್ ಪ್ರತಿಯೋಗಿನೋಽನಧಿಕರಣತ್ವಂ, ತತ್ಸಾಮಾನ್ಯಸ್ಯವಾ, ಯತ್ ಕಿಂಚಿತ್—ಪ್ರತಿಯೋಗಿತಾವಚ್ಛೇದಕಾವಚ್ಛಿನ್ನಾಽನಧಿಕರಣತ್ವಂ ವಾ ವಿವಕ್ಷಿತಮ್ | ಆದ್ಯೇ ಕಪಿಸಂಯೋಗೀ ಏತದ್ವೃಕ್ಷತ್ವಾದಿತ್ಯಾದೌ ತಥೈವಾಽವ್ಯಾಪ್ತಿಃ | ಕಪಿಸಂಯೋಗಾಭಾವಸ್ಯ ಪ್ರತಿಯೋಗಿತಾವಚ್ಛೇದಕಾವಚ್ಛಿನ್ನೋ ವೃಕ್ಷಾವೃತ್ತಿಕಪಿಸಂಯೋಗೋಽಪಿಭವತಿ, ತದನಧಿಕರಣಂ ವೃಕ್ಷಃ ಇತಿ ||

ಪ್ರತಿಯೋಗಿತಾವಚ್ಛೇದಕಾವಚ್ಛಿನ್ನಪ್ರತಿಯೋಗ್ಯನಧಿಕರಣ ಪದಕ್ಕೆ ವಿವಕ್ಷಿತವಾದ ಅರ್ಥವನ್ನು ತೋರಿಸುತ್ತಾನೆ. 'ನನು—' ಇತಿ. ಪ್ರತಿಯೋಗಿತಾವಚ್ಛೇದಕಧರ್ಮದಿಂದ ಕೂಡಿದ ಪ್ರತಿಯೋಗಿಗಳು ಅಸಂಖ್ಯಾಕಗಳಾಗಿವೆ. ಅವುಗಳಲ್ಲಿ ಯಾವುದಾದರೊಂದು ಪ್ರತಿಯೋಗಿಯ ಅನಧಿಕರಣವೆಂದು ಅರ್ಥವೇ ; ಎಂದು ಪ್ರಥಮಕಲ್ಪ. ಪ್ರತಿ....ಕಧರ್ಮದಿಂದ ಕೂಡಿದ ಯಾವತ್ ಪ್ರತಿಯೋಗಿ (ಎಷ್ಟು ಪ್ರತಿಯೋಗಿಗಳಿವೆಯೋ ಅವುಗಳಿಗೆ) ಗಳಿಗೆ ಅನಧಿಕರಣವಾಗಿರಬೇಕೆಂದು ಅರ್ಥವೇ ? ಎಂದು ಎರಡನೆಯ ಕಲ್ಪ. (ಪ್ರತಿಯೋಗಿತಾವಚ್ಛೇದಕೀಭೂತಃ ಯಾವಂತೋ ಧರ್ಮಾಃ ತದವಚ್ಛಿನ್ನಾಧೇಯತಾನಿರೂಪಿತಅಧಿಕರಣತಾವಚ್ಛೇದಕಕೂಟವತ್ತ್ವಂ) ಅಥವಾ ಯಾವುದೋ ಒಂದು ಪ್ರತಿಯೋಗಿತಾವಚ್ಛೇದಕ ಧರ್ಮದಿಂದ ಕೂಡಿದ ಪ್ರತಿಯೋಗಿಗೆ ಅನಧಿಕರಣವಾಗಿರಬೇಕೆಂದು ಅರ್ಥವೇ ? ಎಂದು ಮೂರನೆಯಕಲ್ಪ. (ಪ್ರತಿಯೋಗಿತಾವಚ್ಛೇದಕ ಕಿಂಚಿ

ದ್ಧರ್ಮಾವಚ್ಛಿನ್ನಾಧೇಯತಾನಿರೂಪಿತಾಧಿಕರಣತಾವಚ್ಛಿನ್ನತ್ವಂ) ಹೀಗೆ ಮೂರು ರೀತಿಗಳಿಂದಲೂ ಅರ್ಥಮಾಡಬಹುದು. ಮೊದಲನೆಯ ಕಲ್ಪವನ್ನು ಸ್ವೀಕರಿಸಿದರೆ ದೋಷವನ್ನು ತೋರಿಸುತ್ತಾನೆ. 'ಆದ್ಯೇ—' ಇತಿ. ಕಪಿಸಂಯೋಗೀ—ಏತದ್ವೃಕ್ಷತ್ವಾತ್' ಎಂಬಲ್ಲಿ ಸಾಧ್ಯ—ಕಪಿಸಂಯೋಗ. ಸಾಧ್ಯತಾವಚ್ಛೇದಕಸಂಬಂಧಃ—ಸಮವಾಯಸಂಬಂಧ. ತದನವಚ್ಛಿನ್ನಪ್ರತಿಯೋಗಿತಾವಚ್ಛೇದಕಧರ್ಮವೆಂದರೆ ಕಪಿಸಂಯೋಗತ್ವ. ತದವಚ್ಛಿನ್ನವಾದ ಯಾವುದಾದರೊಂದು ಪ್ರತಿಯೋಗಿಯೆಂದರೆ ಭೂತಲವೃತ್ತಿ (ಇರುವ) ಕಪಿಸಂಯೋಗ. ಈ ಕಪಿಸಂಯೋಗಕ್ಕೆ ಅನಧಿಕರಣವಾಗಿದ್ದು ಹೇತ್ವಧಿಕರಣವಾಗಿರುವುದು ಏತದ್ವೃಕ್ಷ. ಅದರಲ್ಲಿರುವ ಅಭಾವವೆಂದರೆ ವೃಕ್ಷದಲ್ಲಿ ಭೂತಲದಲ್ಲಿರುವ ಕಪಿಸಂಯೋಗವಿಲ್ಲವೆನ್ನಬಹುದು. (ಭೂತಲವೃತ್ತಿಕಪಿಸಂಯೋಗಾಭಾವ.) ಆಗ ಕಪಿಸಂಯೋಗತ್ವರೂಪ ಸಾಧ್ಯತಾವಚ್ಛೇದಕಧರ್ಮವು ಅಭಾವೀಯಪ್ರತಿಯೋಗಿತಾವಚ್ಛೇದಕವೇ ಆಗುತ್ತದೆ. ಅನವಚ್ಛೇದಕವಾಗದಿರುವುದರಿಂದ ಅವ್ಯಾಪ್ತಿ ಬರುತ್ತದೆ.

ದ್ವಿತೀಯಕಲ್ಪದಂತೆ ಪ್ರತಿಯೋಗಿತಾವಚ್ಛೇದಧರ್ಮದಿಂದ ಕೂಡಿ ಎಲ್ಲಾ ಪ್ರತಿಯೋಗಿಗಳ ಅನಧಿಕರಣವೆಂದರೆ ಆಗ ಇಲ್ಲಿ ದೋಷ ಬರುವುದಿಲ್ಲ. ಪ್ರತಿಯೋಗಿತಾವಚ್ಛೇದಕವಾದ ಕಪಿಸಂಯೋಗತ್ವದಿಂದ ಕೂಡಿದ ಸಕಲಕಪಿಸಂಯೋಗಗಳಿಗೂ ಅನಧಿಕರಣವಾಗಿ ವೃಕ್ಷವು ಹೇತ್ವಧಿಕರಣವಾಗುವುದಿಲ್ಲ. ಶಾಖಾವಚ್ಛೇದದಿಂದಿರುವ ಕಪಿಸಂಯೋಗಕ್ಕೆ ಅದು ಅಧಿಕರಣವಾಗಿಯೇ ಇರುತ್ತದೆ. ಆದುದರಿಂದ ಘಟತ್ವಾವಚ್ಛಿನ್ನ ಸಕಲಘಟರೂಪಪ್ರತಿಯೋಗ್ಯನಧಿಕರಣವಾಗಿ ಹೇತ್ವಧಿಕರಣವಾದ ವೃಕ್ಷದಲ್ಲಿ ಘಟಾಭಾವ ಹೇಳಿ ಅಭಾವೀಯಪ್ರತಿಯೋಗಿತಾವಚ್ಛೇದಕತ್ವ ಘಟತ್ವಕ್ಕೆ ಬಂದು ಅನವಚ್ಛೇದಕತ್ವವು ಸಾಧ್ಯತಾವಚ್ಛೇದಕವಾದ ಕಪಿಸಂಯೋಗತ್ವಕ್ಕೆ ಸಿದ್ಧವಾಗುವುದರಿಂದ ಅವ್ಯಾಪ್ತಿಗೆ ಅವಕಾಶವಿಲ್ಲ.

ದ್ವಿತೀಯೇ ತು ಪ್ರತಿಯೋಗಿವ್ಯಧಿಕರಣಾಭಾವಾಪ್ರಸಿದ್ಧಿಃ ಸರ್ವಸ್ಯೈವಾಭಾವಸ್ಯ ಪೂರ್ವಕ್ಷಣವೃತ್ತಿತ್ವವಿಶಿಷ್ಟ ಸ್ವಾಭಾವಾತ್ಮಕ ಪ್ರತಿಯೋಗಿ ಸಮಾನಾಧಿಕರಣತ್ವಾತ್ ||

ಆದರೆ ಎರಡನೆಯ ಕಲ್ಪದಲ್ಲಿ ಅಸಂಭವದೋಷವನ್ನು ತೋರಿಸುತ್ತಾನೆ.

'ದ್ವಿತೀಯೇ—' ಇತಿ. ಪ್ರತಿಯೋಗಿತಾವಚ್ಛೇದಕಾವಚ್ಛಿನ್ನ ಯಾವತ್ಪ್ರತಿಯೋಗ್ಯನಧಿಕರಣವೆಂದು ಅಂಗೀಕರಿಸುವುದಾದರೆ 'ವಹ್ನಿಮಾನ್—ಧೂಮಾತ್' ಇತ್ಯಾದಿಸದ್ಧೇತುಸ್ಥಳದಲ್ಲಿಯೇ ಅಸಂಭವರೂಪದೋಷ ಬರುತ್ತದೆ. ದ್ವಿತೀಯಕಲ್ಪದಂತೆ ಪ್ರತಿಯೋಗಿವ್ಯಧಿಕರಣಾಭಾವವೇ ಅಪ್ರಸಿದ್ಧವಾಗುತ್ತದೆ. ಯದ್ಯಪಿ ಇಲ್ಲಿ ಲಕ್ಷಣಸಮನ್ವಯ ಮಾಡಲು ಘಟಾಭಾವವನ್ನು ತೆಗೆದುಕೊಳ್ಳಬೇಕು. ಆದರೆ ಈ ಅಭಾವವೂ ಪ್ರತಿಯೋಗ್ಯನಧಿಕರಣಕವಾಗುವುದಿಲ್ಲ. ಘಟಾಭಾವಾಭಾವರೂಪಪ್ರತಿಯೋಗಿ ಸಮನಾಧಿ

ಕರಣವೇ ಆಗುತ್ತದೆ. ಯಾವ ಅಭಾವವೇ ಆಗಲಿ, ಅದು ಪೂರ್ವಕ್ಷಣವೃತ್ತಿತ್ವವಿಶಿಷ್ಟ ಸ್ವಾಭಾವರೂಪಪ್ರತಿಯೋಗಿಯ ಅಧಿಕರಣದಲ್ಲಿ ಇದ್ದೇ ಇರುತ್ತದೆ. ಘಟಾಭಾವದ ಅಧಿಕರಣದಲ್ಲಿ ಪೂರ್ವಕ್ಷಣವೃತ್ತಿತ್ವವಿಶಿಷ್ಟಘಟಾಭಾವದಅಭಾವದಅಭಾವವು ಇರುತ್ತದೆ. (ಅರ್ಥಾತ್ ಮೂರನೆಯು ಅಭಾವವು ಉತ್ತರಕ್ಷಣಾವಚ್ಛೇದದಿಂದ ಇರುತ್ತದೆ. ತೃತೀಯಾಭಾವಕ್ಕೆ ದ್ವಿತೀಯಾಭಾವವೇ ಪ್ರತಿಯೋಗೀ. ಇದು ಇದ್ದಲ್ಲಿ ಘಟಾಭಾವವೂ ಇರುವುದರಿಂದ ಪ್ರತಿಯೋಗಿಸಮಾನಾಧಿಕರಣಕವಾದ ಅಭಾವವೇ ಆಗುತ್ತದೆ.

ಇಲ್ಲಿ ಸೂಕ್ಷ್ಮವಾಗಿ ತಿಳಿಯಬೇಕಾಗಿದೆ. ಧೂಮರೂಪಹೇತುವಿನ ಅಧಿಕರಣವಾದ ಪರ್ವತದಲ್ಲಿ ಘಟಾಭಾವವು ಇರುವಂತೆ ಪೂರ್ವಕ್ಷಣವೃತ್ತಿತ್ವವಿಶಿಷ್ಟಘಟಾಭಾವದ ಅಭಾವವೂ ಇರುತ್ತದೆ. ಪೂರ್ವಕ್ಷಣವೃತ್ತಿತ್ವವಿಶಿಷ್ಟವಾದ ಘಟಾಭಾವವು ಪೂರ್ವಕ್ಷಣದಲ್ಲಿ ಮಾತ್ರ ಇರುತ್ತದೆ. ಉತ್ತರಕ್ಷಣದಲ್ಲಿ ಅದರ ಅಭಾವ ಬರುತ್ತದೆ. ಈ ಘಟಾಭಾವವೂ, ಪೂರ್ವಕ್ಷಣವೃತ್ತಿತ್ವವಿಶಿಷ್ಟಘಟಾಭಾವಾಭಾವೂ ಒಂದೇ ರೂಪವಾಗಿರುತ್ತದೆ. ಏಕರೂಪವನ್ನು ಹೊಂದಿದ, ಈ ಅಭಾವಕ್ಕೆ ಎರಡು ಪ್ರತಿಯೋಗಿಗಳು ಇರುತ್ತವೆ. ಘಟ ಒಂದು, ಎರಡನೆಯದು ಘಟಾಭಾವಾಭಾವ. ಹಿಂದೆ ಹೇಳಿದ ಲಕ್ಷಣಘಟಕವಾದ ಘಟಾಭಾವವು ಘಟಾತ್ಮಕಪ್ರತಿಯೋಗಿ ಸಮಾನಾಧಿಕರಣವಾಗದಿದ್ದರೂ ಘಟಾಭಾವಭಾವರೂಪಪ್ರತಿಯೋಗಿ ಸಮಾನಾಧಿಕರಣಕವಾಗಿಯೇ ಆಗುತ್ತದೆ. ಯನ್ಯಸಿ ಘಟಾಭಾವವಿದ್ದಲ್ಲಿ ಘಟಾಭಾವಾಭಾವವು ಇರಲು ಸಾಧ್ಯವಿಲ್ಲ. ಘಟಾಭಾವಾಭಾವವೆಂದರೆ ಘಟಸ್ವರೂಪವಾಗುತ್ತದೆ. ಆಗ ಪ್ರತಿಯೋಗಿತದಭಾವಗಳಿಗೆ ಸಾಮಾನಾಧಿಕರಣ್ಯ ಬರುವುದಿಲ್ಲ. ತನ್ನ ಪ್ರತಿಯೋಗಿ ಇದ್ದಲ್ಲಿ ಅಭಾವ ಬರುವುದಿಲ್ಲ. ಅದಕ್ಕೋಸ್ಕರ ಘಟಾಭಾವದಲ್ಲಿ ಪೂರ್ವಕ್ಷಣವೃತ್ತಿತ್ವವಿಶಿಷ್ಟವೆಂದು ವಿಶೇಷಣ ಹೇಳಿದೆ. ಆಗ ಘಟಾಭಾವಾಧಿಕರಣದಲ್ಲಿ ಘಟರೂಪ ಪ್ರತಿಯೋಗಿ ಇರದಿದ್ದರೂ ಪೂರ್ವಕ್ಷಣವೃತ್ತಿತ್ವವಿಶಿಷ್ಟ ಘಟಾಭಾವದ ಅಭಾವವು ಉತ್ತರಕ್ಷಣದಲ್ಲಿ ಸಂಭವಿಸುವುದರಿಂದ ಅದು ಇರಬಹುದು. ಪೂರ್ವಕ್ಷಣವೃತ್ತಿತ್ವವಿಶಿಷ್ಟ ಘಟಾಭಾವಾಭಾವಾಭಾವವು (ಮೂರನೇ ಅಭಾವ) ಪೂರ್ವಕ್ಷಣವೃತ್ತಿತ್ವವಿಶಿಷ್ಟಘಟಾಭಾವಸ್ವರೂಪ (ಮೊದಲನೆಯ ಅಭಾವ) ವಾಗುತ್ತದೆ. 'ಆಗ ವಿಶಿಷ್ಟಂ ಶುದ್ಧಾತ್ ನಾತಿರಿಚ್ಯತೇ' ನ್ಯಾಯದಂತೆ ವಿಶಿಷ್ಟಘಟಾಭಾವವೂ ಶುದ್ಧ ಘಟಾಭಾವವೂ ಒಂದೇ ಆಗುವುದರಿಂದ ಶುದ್ಧಘಟಾಭಾವಕ್ಕೆ ಘಟವು ಪ್ರತಿಯೋಗಿಯಾದಂತೆ ವಿಶಿಷ್ಟಘಟಾಭಾವಾಭಾವವೂ ಪ್ರತಿಯೋಗಿಯಾಗುತ್ತದೆ. ಈಗ ಪ್ರತಿಯೋಗಿತಾವಚ್ಛೇದಕಾವಚ್ಛಿನ್ನಯಾವತ್ ಪ್ರತಿಯೋಗಿಗಳು ಅಂದರೆ ವಿಶಿಷ್ಟಘಟಾಭಾವಾಭಾವವೂ ಆಗುವುದರಿಂದ ಅದರೊಡನೆ ಘಟಾಭಾವಕ್ಕೆ ಸಾಮಾನಾಧಿಕರಣ್ಯವೇ ಬರುತ್ತದೆ. ಆಗ ಪ್ರತಿಯೋಗಿವ್ಯಧಿಕರಣವಾದ ಅಭಾವವೇ ಅಪ್ರಸಿದ್ಧವಾಗುತ್ತದೆ.

ತೃತೀಯಾಭಾವಕ್ಕೆ ಸಾಕ್ಷಾತ್ತಾಗಿ ಪೂರ್ವಕ್ಷಣವೃತ್ತಿತ್ವವಿಶಿಷ್ಟಘಟಾಭಾವದ ಅಭಾವವು ಪ್ರತಿಯೋಗಿಯಾದರೂ ತೃತೀಯಾಭಾವ ಪ್ರಥಮಾಭಾವ ಸ್ವರೂಪವಾದುದ

ರಿಂದಲೂ ವಿಶಿಷ್ಟಾಭಾವವೂ ಶುದ್ಧಾಭಾವವೂ ಒಂದೇ ಆದುದರಿಂದಲೂ. ಘಟಾಭಾವಕ್ಕೆ ಘಟವು ಪ್ರತಿಯೋಗಿಯಾದಂತೆ ಪೂರ್ವೋಕ್ತವಿಶಿಷ್ಟಾಭಾವಾಭಾವವೂ ಪ್ರತಿಯೋಗಿ ಯಾಗುತ್ತದೆ. ಇದು ಘಟಾಭಾವವಿದ್ದಲ್ಲಿ ಇರುವುದರಿಂದ ಪ್ರತಿಯೋಗಿಸಮಾನಾಧಿ ಕರಣಕವಾದ ಘಟಾಭಾವವೇ ಆಗುತ್ತದೆ. ಈ ರೀತಿಯಿಂದ ಎಲ್ಲಿಯೂ ಪ್ರತಿಯೋಗಿ ವ್ಯಧಿಕರಣಾಭಾವ ಹೇಳುವುದು ಸಾಧ್ಯವಾಗಲಾರದು. ಆದುದರಿಂದ ಅಸಂಭವರೂಪ ಲಕ್ಷಣ ದೋಷ ಬರುತ್ತದೆ.

ನ ಚ ವಹ್ನಿಮಾನ್ ಧೂಮಾದಿತ್ಯಾದೌ ಘಟಾಭಾವಾದೇಃ ಪೂರ್ವಕ್ಷಣವೃತ್ತಿತ್ವವಿಶಿಷ್ಟ ಸ್ವಾಭಾವಾತ್ಮಕಪ್ರತಿಯೋಗ್ಯಧಿಕರಣತ್ವಂ ಯದ್ಯಪಿ ಪರ್ವತಾದೇಃ, ತಥಾಪಿ ಸಾಧ್ಯತಾವಚ್ಛೇದಕಸಂಬಂಧೇನ ತತ್ ಪ್ರತಿಯೋಗ್ಯನಧಿ ಕರಣತ್ವಮಸ್ತ್ಯೇವೇತಿ ಕಥಂ ಪ್ರತಿಯೋಗಿವ್ಯಧಿಕರಣಾಭಾವಾಪ್ರಸಿದ್ಧಿರಿತಿ ವಾಚ್ಯಮ್, ಘಟಾಭಾವೇ ಯೋ ವಹ್ನ್ಯಭಾವಸ್ತಸ್ಯಘಟಾಭಾವಾತ್ಮಕತಯಾ ಘಟಾಭಾವಸ್ಯ ವಹ್ನಿರಪಿ ಪ್ರತಿಯೋಗೀ, ತದಧಿಕರಣಂ ಚ ಪರ್ವತಾದಿರಿತ್ಯೇವಂ ಕ್ರಮೇಣ ಪ್ರತಿಯೋಗಿ ವ್ಯಧಿಕರಣಸ್ಯಾ ಪ್ರಸಿದ್ಧತ್ವಾತ್ ॥

ಪೂರ್ವಪಕ್ಷಿಯು ಸಿದ್ಧಾಂತಿಯ ಅಭಿಪ್ರಾಯವನ್ನು ವ್ಯಕ್ತಪಡಿಸಿ ಪುನಃ ಆಕ್ಷೇಪಿ ಸುತ್ತಾನೆ. 'ನಚ—' ಇತಿ. 'ವಹ್ನಿಮಾನ್‌ಧೂಮಾತ್' ಎಂಬಲ್ಲಿ ಧೂಮರೂಪ ಹೇತ್ವಧಿಕರಣವಾದ ಪರ್ವತದಲ್ಲಿ ಹೇಳುವ ಘಟಾಭಾವವು ಯದ್ಯಪಿ ಹಿಂದೆ ಹೇಳಿದಂತೆ ಪೂರ್ವಕ್ಷಣವೃತ್ತಿತ್ವವಿಶಿಷ್ಟಸ್ವಾಭಾವಾತ್ಮಕ (ಸ್ವಂ—ಘಟಾಭಾವ. ಅದರ ಅಭಾವ) ಪ್ರತಿಯೋಗಿ ಸಮಾನಾಧಿಕರಣವಾಗುತ್ತದೆ. ಆದರೂ ಹಿಂದೆ 'ಜ್ಞಾನವಾನ್ ದ್ರವ್ಯ ತ್ವಾತ್' ಇತ್ಯಾದಿ ಅಸದ್ಧೇತುಸ್ಥಳದಲ್ಲಿ ಅತಿವ್ಯಾಪ್ತಿಯನ್ನು ಹೋಗಲಾಡಿಸಲು ಸಾಧ್ಯ ತಾವಚ್ಛೇದಕಸಂಬಂಧದಿಂದ ಪ್ರತಿಯೋಗ್ಯನಧಿಕರಣವಾಗಬೇಕೆಂದು ಹೇಳಿದೆಯಷ್ಟೆ. ಈಗ ಇಲ್ಲಿ ಅದನ್ನು ವಿವಕ್ಷಮಾಡುವುದರಿಂದ, ಸಾಧ್ಯತಾವಚ್ಛೇದಕಸಂಬಂಧವೆಂದರೆ ಇಲ್ಲಿ ಸಂಯೋಗವಾಗುತ್ತದೆ. ಸಂಯೋಗಸಂಬಂಧದಿಂದ ಘಟರೂಪಪ್ರತಿಯೋಗಿ ಗಾಗಲೀ, ಸ್ವಾಭಾವಾತ್ಮಕ (ವಿಶಿಷ್ಟಘಟಾಭಾವಾಭಾವ) ಪ್ರತಿಯೋಗಿಯಾಗಲೀ ಹೇತ್ವ ಧಿಕರಣವಾದ ಪರ್ವತದಲ್ಲಿ ಇರುವುದಿಲ್ಲ. ಆದುದರಿಂದ ಹೇತ್ವಧಿಕರಣವಾದ ಪರ್ವತವು ಪ್ರತಿಯೋಗ್ಯನಧಿಕರಣವೇ ಆಗುತ್ತದೆ. ಸ್ವಾಭಾವಾತ್ಮಕಪ್ರತಿಯೋಗಿಯು ಸ್ವರೂಪ ಸಂಬಂಧದಿಂದ ಪರ್ವತದಲ್ಲಿರುತ್ತದೆ. ಘಟವಂತೂ ಸಂಯೋಗದಿಂದ ಇರುವುದೇ ಇಲ್ಲ. ಈ ರೀತಿಯಿಂದ ಪ್ರತಿಯೋಗಿವ್ಯಧಿಕರಣಾಭಾವವು ಅಪ್ರಸಿದ್ಧವಾಗುವುದಿಲ್ಲ. ಸಂಯೋಗ ಸಂಬಂಧಾವಚ್ಛಿನ್ನಪ್ರತಿಯೋಗಿತಾನಿರೂಪಕವಾದ ಘಟಾಭಾವವು ಪ್ರತಿಯೋಗಿವ್ಯಧಿಕರಣ ವಾಗುತ್ತದೆ ; ಎಂದು ಸಮಾಧಾನ ಹೇಳುವುದಾದರೆ ಆಗ ಪೂರ್ವಪಕ್ಷಿಯು ಬೇರೆ ರೀತಿ ಯಿಂದ ದೋಷವನ್ನು ಆಶಂಕಿಸುತ್ತಾನೆ. 'ಘಟಾಭಾವೇ—' ಇತಿ.

'ಅಭಾವಾಧಿಕರಣಕಾಭಾವಸ್ಯ ಅಧಿಕರಣಸ್ವರೂಪತ್ವಂ' ಎಂದು ಕೆಲವರ ಮತ.

ಇದನ್ನು ಆಶ್ರಯಿಸಿ ಇಲ್ಲಿ ಅಸಂಭವವನ್ನಾಶಂಕಿಸಿರುವುದೆಂದು ತಿಳಿಯಬೇಕು. ಅಭಾವದಲ್ಲಿ ಇನ್ನೊಂದು ಅಭಾವಹೇಳಿದರೆ ಅದು ಅಧಿಕರಣರೂಪವಾಗುತ್ತದೆ. ಯಾವ ಅಭಾವ ಹೇಳಿವೆಯೋ ಆ ಅಭಾವರೂಪವೇ ಆಗುತ್ತದೆ. 'ಘಟಾಭಾವೇ ವಹ್ನ್ಯಭಾವಃ' ವೆಂದರೆ ವಹ್ನ್ಯಭಾವಕ್ಕೆ ಘಟಾಭಾವವು ಅಧಿಕರಣವಾಗುವುದರಿಂದ ವಹ್ನ್ಯಭಾವವು ಘಟಾಭಾವರೂಪವೇ ಆಗುತ್ತದೆ. ಪ್ರಕೃತ ಪರ್ವತದಲ್ಲಿರುವ ಅಭಾವವೆಂದರೆ ಘಟಾಭಾವಃ ಅಲ್ಲಿ 'ಘಟಾಭಾವೇ ವಹ್ನಿರ್ನಾಸ್ತಿ' ಎಂದು ತೋರುವುದರಿಂದ ವಹ್ನ್ಯಭಾವವೂ ಆಗಬಹುದು. ಘಟಾಭಾವಕ್ಕಿಂತ ವಹ್ನ್ಯಭಾವವು ಬೇರಾಗುವುದಿಲ್ಲ. ವಹ್ನ್ಯಭಾವವು ಘಟಾಭಾವರೂಪವಾದರೆ ಘಟಾಭಾವಕ್ಕೆ ಘಟವು ಪ್ರತಿಯೋಗಿಯಾದಂತೆ ವಹ್ನಿಯೂ ಪ್ರತಿಯೋಗಿಯಾಗುತ್ತದೆ. ವಹ್ನಿರೂಪ ಪ್ರತಿಯೋಗಿಯ ಅಧಿಕರಣವೇ ಪರ್ವತವಾದುದರಿಂದ ಪ್ರತಿಯೋಗಿಸಮಾನಾಧಿಕರಣವಾದ ಅಭಾವವೇ ಆಗುತ್ತದೆ. ಪ್ರತಿಯೋಗಿವ್ಯಧಿಕರಣಾಭಾವವಾಗದಿರುವುದರಿಂದ ಪ್ರತಿಯೋಗಿವ್ಯಧಿಕರಣಾಭಾವವು ಅಪ್ರಸಿದ್ಧವಾಗುತ್ತದೆಂದು ತಾತ್ಪರ್ಯ.

ಯದಿ ಚ ಘಟಾಭಾವಾದೌ ವಹ್ನ್ಯಭಾವಾದಿರ್ಭಿನ್ನ ಇತ್ಯುಚ್ಯತೇ, ತಥಾಪಿ ಧೂಮಾಭಾವವಾನ್ ವಹ್ನ್ಯಭಾವಾದಿತ್ಯಾದಾವವ್ಯಾಪ್ತಿಃ ತತ್ರ ಸಾಧ್ಯತಾವಚ್ಛೇದಕಸಂಬಂಧಃ, ಸ್ವರೂಪಸಂಬಂಧಃ, ತೇನ ಸಂಬಂಧೇನ ಸರ್ವಸ್ಯೈವಾಭಾವಸ್ಯ ಪೂರ್ವಕ್ಷಣವೃತ್ತಿತ್ವವಿಶಿಷ್ಟಸ್ವಾಭಾವಾತ್ಮಕೇ ಪ್ರತಿಯೋಗ್ಯಧಿಕರಣತ್ವಂ ಹೇತ್ವಧಿಕರಣಸ್ಯೇತಿ॥

ಅಭಾವಾಧಿಕರಣಕಾಭಾವವು ಭಿನ್ನವಾದದ್ದು, ಒಂದಲ್ಲವೆಂಬ ಮತವನ್ನು ಆಶ್ರಯಿಸಿದರೆ ಹಿಂದೆ ಹೇಳಿದ ಅಪ್ರಸಿದ್ಧಿ ಮೂಲಕವಾದ ದೋಷವು ಬರುವುದಲ್ಲ. ಆದರೂ ಸ್ಥಲಾಂತರದಲ್ಲಿ ದೋಷವನ್ನು ತೋರಿಸುತ್ತಾನೆ. 'ಯದಿಚ'—ಇತಿ. ಘಟಾಭಾವಾದಿಗಳಲ್ಲಿರುವ ವಹ್ನ್ಯಭಾವವು ಘಟಾಭಾವಸ್ವರೂಪವಲ್ಲ. ಅದೊಂದು ಸ್ವತಂತ್ರವಾದ ಅಭಾವವಾಗುತ್ತದೆ ಎಂದು ಅಂಗೀಕರಿಸಿದರೆ ಆಗ ಘಟಾಭಾವವು ನಿಯತವಾಗಿ ಪ್ರತಿಯೋಗ್ಯಧಿಕರಣ ಭಿನ್ನಾಧಿಕರಣವೃತ್ತಿಯೇ ಆಗುತ್ತದೆ. ವಹ್ನಿರೂಪಪ್ರತಿಯೋಗಿಸಮಾನಾಧಿಕರಣವಾಗುವುದಿಲ್ಲ. ಆದುದರಿಂದ ಪ್ರತಿಯೋಗಿವ್ಯಧಿಕರಣಾಭಾವವು ಅಪ್ರಸಿದ್ಧವೆಂದು ಹೇಳಿದ ಅಸಂಭವರೂಪದೋಷವು ಬರುವುದಿಲ್ಲ. ಆದರೂ 'ಹ್ರದಃ—ಧೂಮಾಭಾವವಾನ್—ವಹ್ನ್ಯಭಾವಾತ್' ಎಂಬ ಅಭಾವಸಾಧ್ಯಕಸದ್ಧೇತುಸ್ಥಲದಲ್ಲಿ ಅವ್ಯಾಪ್ತಿ ಬರುತ್ತದೆ. ಹ್ರದದಲ್ಲಿ (ತಟಾಕ) ವಹ್ನ್ಯಭಾವವಿರುವುದರಿಂದ ಧೂಮಾಭಾವವಿರುತ್ತದೆ. ಇಲ್ಲಿ ಸಾಧ್ಯ—ಧೂಮಾಭಾವ. ಸಾಧ್ಯತಾವಚ್ಛೇದಕಸಂಬಂಧ—ಸ್ವರೂಪಸಂಬಂಧ. ಹೇತು—ವಹ್ನ್ಯಭಾವ. ಹೇತ್ವಧಿಕರಣವಾದ ಹ್ರದದಲ್ಲಿ ಯಾವ ವಸ್ತುವಿನ ಅಭಾವ ಹೇಳಿದರೂ ಅದು ಪ್ರತಿಯೋಗಿಸಮಾನಾಧಿಕರಣವೇ ಆಗುತ್ತದೆ. ಹಿಂದೆ ಹೇಳಿದಂತೆ ಘಟಾಭಾವವನ್ನು ತೆಗೆದುಕೊಂಡರೆ ಅದರ ಪ್ರತಿಯೋಗಿ ಘಟವಾದಂತೆ

ಪೂರ್ವಕ್ಷಣವೃತ್ತಿತ್ವವಿಶಿಷ್ಟಸ್ವಾಭಾವ (ಘಟಾಭಾವಾಭಾವ)ವೂ ಪ್ರತಿಯೋಗಿಯಾಗುವುದರಿಂದ ಅದು ಹ್ರದದಲ್ಲಿರುವುದರಿಂದ (ಸ್ವರೂಪಸಂಬಂಧದಿಂದಲೇ) ಪ್ರತಿಯೋಗಿಸಮಾನಾಧಿಕರಣವೇ ಆಗುತ್ತದೆ. ಹೀಗೆ ಅಭಾವಸಾಧ್ಯಕಸ್ಥಲದಲ್ಲಿ ಪ್ರತಿಯೋಗಿವ್ಯಧಿಕರಣಾಭಾವವು ಅಪ್ರಸಿದ್ಧವಾಗುವುದರಿಂದ ಅವ್ಯಾಪ್ತಿ ಬರುತ್ತದೆ.

ಇದಕ್ಕೋಸ್ಕರ ಪ್ರತಿಯೋಗಿತಾವಚ್ಛೇದಕಾವಚ್ಛಿನ್ನಯಾವತ್ಪ್ರತಿಯೋಗ್ಯನಧಿಕರಣವೆಂಬ ಎರಡನೆಯಕಲ್ಪವನ್ನು ಬಿಟ್ಟು 'ಯತ್ಕಿಂಚಿತ್—' ಎಂಬ ಮೂರನೆಯ ಕಲ್ಪವನ್ನು ಆಶ್ರಯಿಸಿದರೆ ಈ ದೋಷ ಬರುವುದಿಲ್ಲ. 'ಯತ್ಕಿಂಚಿತ್‌ಯಃ ಪ್ರತಿಯೋಗಿತಾವಚ್ಛೇದಕೋ ಧರ್ಮಃ, ತದವಚ್ಛಿನ್ನಸಾಮಾನ್ಯಸ್ಯ ಅನಧಿಕರಣತ್ವಂ' ಯಾವುದೋ ಒಂದು ಪ್ರತಿಯೋಗಿತಾವಚ್ಛೇದಕಧರ್ಮದಿಂದ ಕೂಡಿದ ಪ್ರತಿಯೋಗಿಸಾಮಾನ್ಯಕ್ಕೆ ಅಧಿಕರಣವಾಗದಿರುವ ಹೇತ್ವಧಿಕರಣವೆಂದರ್ಥ. ಯತ್ಕಿಂಚಿತ್‌ಪ್ರತಿಯೋಗಿತಾವಚ್ಛೇದಕಪದದಿಂದ ಘಟತ್ವಧರ್ಮ ತೆಗೆದುಕೊಂಡರೆ, ತದವಚ್ಛಿನ್ನವಾದದ್ದು ಘಟ. ತದವಚ್ಛಿನ್ನಘಟಾದಿಸಾಮಾನ್ಯಕ್ಕೆ ಅನಧಿಕರಣವಾಗಿ, ವಹ್ನ್ಯಭಾವರೂಪಹೇತ್ವಧಿಕರಣವಾಗಿರುವುದು ಹ್ರದ. ಅಲ್ಲಿರುವ ಅಭಾವೀಯಪ್ರತಿಯೋಗಿತಾವಚ್ಛೇದಕವೆಂದರೆ ಘಟತ್ವ. ಅನವಚ್ಛೇದಕವಾದ ಸಾಧ್ಯತಾವಚ್ಛೇದಕವೆಂದರೆ ಧೂಮಾಭಾವತ್ವ. ತದವಚ್ಛಿನ. ವಾದದ್ದು ಧೂಮಾಭಾವರೂಪಸಾಧ್ಯ. ಇದರೊಡನೆ ಹ್ರದದಲ್ಲಿ ವಹ್ನ್ಯಭಾವರೂಪ ಹೇತುವಿಗೆ ಸಾಮಾನಾಧಿಕರಣ್ಯ ಸಂಭವಿಸುವುದರಿಂದ ಅವ್ಯಾಪ್ತಿಗೆ ಅವಕಾಶವಿಲ್ಲ. ಆದರೆ ಇತರ ಸ್ಥಲದಲ್ಲಿ ಅವ್ಯಾಪ್ತಿ ತೋರಿಸುತ್ತಾನೆ.

ತೃತೀಯೇ ತು ಕಪಿಸಂಯೋಗಾಭಾವವಾನ್ ಆತ್ಮತ್ವಾದಿತ್ಯಾದಾವವ್ಯಾಪ್ತಿಃ । ತತ್ರ ಆತ್ಮವೃತ್ತಿಕಪಿಸಂಯೋಗಾಭಾವಾಭಾವಃ ಕಪಿಸಂಯೋಗಃ ತಸ್ಯ ಚ ಗುಣತ್ವಾತ್ ತತ್‌ಪ್ರತಿಯೋಗಿತಾವಚ್ಛೇದಕಂ ಗುಣಸಾಮಾನ್ಯಾಭಾವತ್ವಮಪಿ ತದವಚ್ಛಿನ್ನಾಽನಧಿಕರಣತ್ವಂ ಹೇತ್ವಧಿಕರಣಸ್ಯಾತ್ಮನಃ ಇತಿ ॥

ಪ್ರತಿಯೋಗಿತಾವಚ್ಛೇದಕವಾದ ಯಾವುದಾದರೊಂದು ಧರ್ಮವನ್ನು ತೆಗೆದುಕೊಂಡು ತದವಚ್ಛಿನ್ನಪ್ರತಿಯೋಗಿಸಾಮಾನ್ಯಕ್ಕೆ ಅನಧಿಕರಣವೆಂದು ಮೂರನೆಯ ಕಲ್ಪವನ್ನಾಶ್ರಯಿಸಿದರೆ 'ಅಯಮಾತ್ಮಾ—ಕಪಿಸಂಯೋಗಾ ಭಾವವಾನ್—ಆತ್ಮತ್ವಾತ್' ಎಂಬಲ್ಲಿ ಅವ್ಯಾಪ್ತಿ ಬರುತ್ತದೆ. ಯನ್ವಪಿ ಸಮನ್ವಯಮಾಡಬಹುದು. ಆತ್ಮತ್ವರೂಪ ಹೇತುವಿಗೆ ಅಧಿಕರಣ—ಆತ್ಮಾ. ಇದರಲ್ಲಿರುವ ಅಭಾವವೆಂದರೆ ಹಿಂದಿನಂತೆಘಟಾಭಾವ ಹೇಳಬಹುದು. ಘಟಾಭಾವೀಯ ಪ್ರತಿಯೋಗಿತಾವಚ್ಛೇದಕವು ಯಾವುದಾದರೂ ಒಂದು ಧರ್ಮವಾಗಬಹುದೆಂದುದರಿಂದ ಘಟತ್ವವನ್ನು ತೆಗೆದುಕೊಂಡರೆ ತದವಚ್ಛಿನ್ನಪ್ರತಿಯೋಗಿಸಾಮಾನ್ಯವೆಂದರೆ ಸಕಲಘಟಗಳಾಗುತ್ತವೆ. ಅವುಗಳಿಗೆ ಅನಧಿಕರಣವಾಗಿ ಹೇತ್ವಧಿಕರಣವಾಗಿರುವುದು ಆತ್ಮಾ. ಅಲ್ಲಿರುವ ಅಭಾವೀಯಪ್ರತಿಯೋಗಿತಾವಚ್ಛೇದಕ ಘಟತ್ವ. ಅನವಚ್ಛೇದಕವಾದ ಸಾಧ್ಯತಾವಚ್ಛೇದಕವೆಂದರೆ ಕಪಿಸಂಯೋಗಾಭಾವತ್ವ.

ತದವಚ್ಛಿನ್ನಸಾಧ್ಯ—ಕಪಿಸಂಯೋಗಾಭಾವ. ಇವರೊಡನೆ ಆತ್ಮತ್ವರೂಪಹೇತುವಿಗೆ ಆತ್ಮನಲ್ಲಿ ಸಾಮಾನಾಧಿಕರಣ್ಯ ಬರುತ್ತದೆ. ಆತ್ಮತ್ವವಿರುವುದರಿಂದ ಆತ್ಮನು ಕಪಿ ಸಂಯೊಂಗಾಭಾವದಿಂದ ಕೂಡಿರುತ್ತಾನೆ ಎಂದರ್ಥ.

ಆದರೆ ಯಾವುದೋ ಒಂದು ಪ್ರತಿಯೋಗಿತಾವಚ್ಛೇದಕಧರ್ಮವೆಂದುವರಿಂದ ಇಲ್ಲಿ ಸಾಧ್ಯತಾವಚ್ಛೇದಕವಾದ ಕಪಿಸಂಯೋಗಾಭಾವತ್ವರೂಪಧರ್ಮಕ್ಕೆ ವ್ಯಾಪಕವಾದ ಧರ್ಮ ಅಂದರೆ ಗುಣಸಾಮಾನ್ಯಭಾವತ್ವವನ್ನು ತೆಗೆದುಕೊಂಡು ಅವ್ಯಾಪ್ತಿ ಹೇಳಲು ಸಾಧ್ಯ. ಆತ್ಮತ್ವ ಹೇತು. ಹೇತ್ವಧಿಕರಣ—ಆತ್ಮಾ. ಅಲ್ಲಿರುವ ಅಭಾವವೆಂದರೆ ಕಪಿಸಂಯೋಗಾಭಾವಾಭಾವಃ. ಇದು ಕಪಿಸಂಯೋಗರೂಪವಾಗಿರುತ್ತದೆ. ಈ ಸಂಯೋಗಗುಣವು ಸಂಖ್ಯಾ ಮುಂತಾದ ಹತ್ತು ಸಾಮಾನ್ಯಗುಣಗಳಲ್ಲಿ ಸೇರಿರುತ್ತದೆ (ರೂಪಾದಿ ಹದಿನಾಲ್ಕು ವಿಶೇಷ ಗುಣಗಳು. ಸಂಖ್ಯಾದಿ ೧೦ ಸಾಮಾನ್ಯಗುಣಗಳು.

ಅದು ಗುಣಸಾಮಾನ್ಯಾಭಾವಾಭಾವ ಅಂದರೆ ಗುಣಸಾಮಾನ್ಯರೂಪವಾಗುತ್ತದೆ. ಸಾಧ್ಯಾಭಾವವಾದ ಕಪಿಸಂಯೋಗವು ಗುಣಸಾಮಾನ್ಯರೂಪವಾಗಿ ಪರ್ಯವಸಾನ ಹೊಂದುತ್ತದೆ. ಆಗ ಕಪಿಸಂಯೋಗಾಭಾವಾಭಾವದ (ಸಾಧ್ಯಾಭಾವ) ಪ್ರತಿಯೋಗಿತಾ ಕಪಿ ಸಂಯೋಗಾಭಾವದಲ್ಲಿ ಇರುತ್ತದೆ. ಹಾಗೆಯೇ ಗುಣಸಾಮಾನ್ಯಾಭಾವದಲ್ಲಿಯೂ ಇರುತ್ತದೆ. ಅಭಾವೀಯಪ್ರತಿಯೋಗಿತಾವಚ್ಛೇದಕವು ಹೇಗೆ ಕಪಿಸಂಯೋಗಾಭಾವತ್ವವಾಗುತ್ತದೆಯೋ ಹಾಗೆ ಅದಕ್ಕೆ ವ್ಯಾಪಕವಾದ ಗುಣಸಾಮಾನ್ಯಾಭಾವತ್ವವೂ ಆಗುತ್ತದೆ. ಹೇತ್ವಧಿಕರಣವಾದ ಆತ್ಮನಲ್ಲಿ ಸಾಮಾನ್ಯಗುಣವಿಲ್ಲವೆಂದು ಹೇಳಲು ಬರುವುದಿಲ್ಲ. ಆದುದರಿಂದ ಗುಣಸಾಮಾನ್ಯಾಭಾವಾಭಾವ (ಗುಣಸಾಮಾನ್ಯ) ಹೇಳಬೇಕು. ಅಭಾವಪ್ರತಿಯೋಗಿ ಗುಣಸಾಮಾನ್ಯಾಭಾವ. ಪ್ರತಿಯೋಗಿತಾ ತನ್ನಿಷ್ಠಾ (ಗುಣ ಸಾಮಾನ್ಯಾಭಾವದಲ್ಲಿದೆ) ಪ್ರತಿ....ಚ್ಛೇದಕಂ—ಗುಣಸಾಮಾನ್ಯಾಭಾವತ್ವಂ. ಯತ್ಕಿಂಚಿತ್ ಪ್ರತಿಯೋಗಿತಾವಚ್ಛೇದಕಧರ್ಮದಿಂದ ಇದನ್ನು ತೆಗೆದುಕೊಂಡರೆ ತದವಚ್ಛಿನ್ನವಾದದ್ದು ಗುಣಸಾಮಾನ್ಯಾಭಾವರೂಪಪ್ರತಿಯೋಗಿಯಾಗುತ್ತದೆ. ಅದಕ್ಕೆ ಅನಧಿಕರಣವಾಗಿ ಹೇತ್ವಧಿಕರಣವಾಗಿರುವುದು ಆತ್ಮಾ. ಅಲ್ಲಿರುವ ಅಭಾವವೆಂದರೆ ಕಪಿಸಂಯೋಗಾಭಾವಾಭಾವ. (ಗುಣಸಾಮಾನ್ಯಾಭಾವಾಭಾವರೂಪದಿಂದ) ಅಭಾವೀಯಪ್ರತಿಯೋಗಿತಾವಚ್ಛೇದಕವೇ ಕಪಿಸಂಯೋಗಾಭಾವತ್ವರೂಪಸಾಧ್ಯತಾವಚ್ಛೇದಕವಾಗುವುದರಿಂದ ಅವ್ಯಾಪ್ತಿ. ಅದು ಅನವಚ್ಛೇದಕವಾಗುವುದಿಲ್ಲ.

ಕಪಿ ಸಂಯೋಗವು ಗುಣಸಾಮಾನ್ಯದಲ್ಲಿ ಸೇರಿರುವುದರಿಂದ ಕಪಿಸಂಯೋಗಾಭಾವದಲ್ಲಿ ಎರಡು ಧರ್ಮಗಳು ಸಂಭವಿಸುತ್ತವೆ. (ವ್ಯಾಪ್ಯಧರ್ಮ, ವ್ಯಾಪಕಧರ್ಮ) ಕಪಿಸಂಯೋಗಾಭಾವತ್ವ, ಗುಣಸಾಮಾನ್ಯಾಭಾವತ್ವರೂಪ ಎರಡು ಧರ್ಮಗಳಿರುತ್ತವೆ. ಈಗ ಯತ್ಕಿಂಚಿತ್ ಪ್ರತಿಯೋಗಿತಾವಚ್ಛೇದಕಪದದಿಂದ ವ್ಯಾಪಕವಾದ ಗುಣಸಾಮಾನ್ಯಭಾವತ್ವರೂಪಧರ್ಮವನ್ನು ತೆಗೆದುಕೊಳ್ಳಬಹುದು. ತದವಚ್ಛಿನ್ನಗುಣಸಾಮಾನ್ಯಾಭಾವರೂಪಪ್ರತಿಯೋಗಿಗೆ ಹೇತ್ವಧಿಕರಣವಾದ ಆತ್ಮನು ಅನಧಿಕರಣವೇ ಆಗುತ್ತಾನೆ. ಕಪಿ

ಸಂಯೋಗಾಭಾವತ್ವರೂಪದಿಂದ ಆತ್ಮನಲ್ಲಿ ಕಪಿ ಸಂಯೋಗಾಭಾವಿರುವುದಿಲ್ಲ. ತದಭಾವವೇ ಅಂದರೆ ತೃತೀಯಾಭಾವವೇ ಇರುತ್ತದೆ.

ಆದರೆ ಗುಣಸಾಮಾನ್ಯಾಭಾವತ್ವರೂಪದಿಂದ ಕಪಿಸಂಯೋಗಾಭಾವಾಭಾವವನ್ನು ಹೇಳಬಹುದು. (ಗುಣಸಾಮಾನ್ಯ ಇರುವುದರಿಂದ ಗುಣಸಾಮಾನ್ಯಾಭಾವ ಬರುವುದಿಲ್ಲ. ತದಭಾವ ಬರುತ್ತದೆ. ಸಂಯೋಗ ಗುಣಸಾಮಾನ್ಯಾಭಾವಾಭಾವಸ್ವರೂಪವೆಂದು ಹಿಂದೆ ವಿವರಿಸಿದೆ.) ಯತ್ಕಿಂಚಿತ್ ಪ್ರತಿಯೋಗಿತಾವಚ್ಛೇದಕಾವಚ್ಛಿನ್ನವೆಂದರೆ ಹಿಂದೆ ಹೇಳಿದಂತೆ ಗುಣಸಾಮಾನ್ಯಾಭಾವರೂಪ ಸಾಧ್ಯವಾಗುತ್ತದೆ. ಅದರ ಅಭಾವ ಗುಣಸ್ಯಾಭಾವಾಭಾವ ಅದು ಹೇತ್ವಧಿಕರಣವಾದ ಆತ್ಮನಲ್ಲಿದೆ. ಅಭಾವೀಯಪ್ರತಿಯೋಗಿತಾವಚ್ಛೇದಕ—ಕಪಿಸಂಯೋಗಾಭಾವತ್ವವಾಗುತ್ತದೆ. ಅನವಚ್ಛೇದಕವಾಗುವುದಿಲ್ಲ. ಅದೂ ಅಲ್ಲದೆ ಸಾಧ್ಯಾಭಾವಸಾಮಾನಾಧಿಕರಣ್ಯ ಹೇತುವಿಗೆ ಸಂಭವಿಸುವುದರಿಂದ ವಿರುದ್ಧವಾಗಬೇಕಾಗುತ್ತದೆ. ಸಾಧ್ಯಸಾಧನೆಗೆ ಪ್ರವೃತ್ತವಾದ ಹೇತು ಸಾಧ್ಯಾಭಾವವನ್ನು ಸಾಧಿಸಿದರೆ ವಿರುದ್ಧವಾಗುತ್ತದೆ. ಹೀಗೆ ಪೂರ್ವಪಕ್ಷವು ವಿಸ್ತೃತವಾಗಿ ಪ್ರಾಪ್ತವಾದರೆ 'ಮೈವಂ' ಎಂಬುದರಿಂದ ಸಿದ್ಧಾಂತಿಯು ಸಮಾಧಾನ ತೋರಿಸುತ್ತಾನೆ.

ಮೈವಮ್ । ಯಾದೃಶಪ್ರತಿಯೋಗಿತಾವಚ್ಛೇದಕಾವಚ್ಛಿನ್ನಾನಧಿಕರಣತ್ವಂ ಹೇತುಮತಃ ತಾದೃಶಪ್ರತಿಯೋಗಿತಾನವಚ್ಛೇದಕತ್ವಸ್ಯ ವಿವಕ್ಷಿತತ್ವಾತ್ ॥

ಯಾವ ಪ್ರತಿಯೋಗಿತಾವಚ್ಛೇದಕಧರ್ಮವನ್ನು ತೆಗೆದುಕೊಂಡರೆ ತದವಚ್ಛಿನ್ನಪ್ರತಿಯೋಗಿಗೆ ಹೇತ್ವಧಿಕರಣವು ಅನಧಿಕರಣವಾಗುತ್ತದೆಯೋ ಆ ಪ್ರತಿಯೋಗಿತೆಯಲ್ಲಿ ಅನವಚ್ಛೇದಕವಾದ ಸಾಧ್ಯತಾವಚ್ಛೇದಕಧರ್ಮದಿಂದ ಕೂಡಿದ ಸಾಧ್ಯಸಾಮಾನಾಧಿಕರಣ್ಯ ಇಲ್ಲಿ ಇಷ್ಟವಾಗಿದೆ. 'ಆತ್ಮಾ—ಕಪಿಸಂಯೋಗಾಭಾವವಾನ್—ಆತ್ಮತ್ವಾತ್' ಎಂಬಲ್ಲಿ ಗುಣಸಾಮಾನ್ಯಾಭಾವತ್ವರೂಪ ಪ್ರತಿಯೋಗಿತಾವಚ್ಛೇದಕಧರ್ಮವನ್ನು ತೆಗೆದುಕೊಂಡರೆ ಅವ್ಯಾಪ್ತಿಗೆ ಅವಕಾಶವಿರುವುದಿಲ್ಲ. ಇಲ್ಲಿ ಪಕ್ಷ - ಆತ್ಮಾ; ಕಪಿಸಂಯೋಗಾಭಾವ, ಸಾಧ್ಯ. ಆತ್ಮತ್ವ ಹೇತು. ಸಾಧ್ಯತಾವಚ್ಛೇದಕಧರ್ಮ—ಕಪಿಸಂಯೋಗಾಭಾವತ್ವ. ಸಾಧ್ಯತಾವಚ್ಛೇದಕಸಂಬಂಧವೆಂದರೆ ಸ್ವರೂಪಸಂಬಂಧವಾಗುತ್ತದೆ. ಗುಣಸಾಮಾನ್ಯಾಭಾವಾಭಾವವು ಹೇತ್ವಧಿಕರಣವೃತ್ತಿಯಾದ ಅಭಾವ. ಆಗ ಗುಣಸಾಮಾನ್ಯಾಭಾವ ಪ್ರತಿಯೋಗಿಯಾಗುತ್ತದೆ. ಗುಣಸಾಮಾನ್ಯಾಭಾವೀಯಪ್ರತಿಯೋಗಿತಾ—ಸಾಧ್ಯತಾವಚ್ಛೇದಕ ಸಂಬಂಧಾ (ಸ್ವರೂಪ) ವಚ್ಛಿನ್ನವಾಗಿ ಗುಣಸಾಮಾನ್ಯಾಭಾವತ್ವರೂಪ ಪ್ರತಿಯೋಗಿತಾವಚ್ಛೇದಕಾವಚ್ಛಿನ್ನವೂ ಆಗಿರುತ್ತದೆ. ತಾದೃಶಪ್ರತಿಯೋಗಿತಾವಚ್ಛೇದಕಧರ್ಮದಿಂದ ಕೂಡಿರುವ ಪ್ರತಿಯೋಗಿಯೆಂದರೆ ಗುಣಸಾಮಾನ್ಯಾಭಾವ. ಅದಕ್ಕೆ ಅನಧಿಕರಣವಾಗಿ (ಸಂಖ್ಯಾದಿ ಗುಣಸಾಮಾನ್ಯ ಆತ್ಮನಲ್ಲಿರುವುದರಿಂದ ಗುಣಸಾಮಾನ್ಯಾಭಾವಕ್ಕೆ ಅನಧಿಕರಣವಾಗುವುದಿಲ್ಲ.) ಹೇತುತಾವಚ್ಛೇದಕವಾದ ಸಮವಾಯಸಂಬಂಧದಿಂದ ಇರುವ ಹೇತುವಿಗೆ (ಆತ್ಮತ್ವ) ಅಧಿಕರಣ

ವಾಗಿರುವುದು ಆತ್ಮಾ. ಅಲ್ಲಿರುವ ಅಭಾವವೆಂದರೆ ಗುಣಸಾಮಾನ್ಯಾಭಾವಾಭಾವ. ತದಭಾವೀಯಪ್ರತಿಯೋಗಿತಾ ಗುಣಸಾಮಾನ್ಯಾಭಾವನಿಷ್ಠಾ. ಪ್ರತಿಯೋಗಿತಾವಚ್ಛೇದಕ—ಗುಣಸಾಮಾನ್ಯಾಭಾವತ್ವ. ಪ್ರತಿಯೋಗಿತಾನವಚ್ಛೇದಕವಾಗಿ ಸಾಧ್ಯತಾವಚ್ಛೇದಕವಾಗಿರುವ ಧರ್ಮವೆಂದರೆ ಕಪಿಸಂಯೋಗಾಭಾವತ್ವ. ಅದರಿಂದ ಕೂಡಿರುವ (ತದವಚ್ಛಿನ್ನ) ಸಾಧ್ಯ—ಕಪಿಸಂಯೋಗಾಭಾವ. ಇದರೊಡನೆ ಆತ್ಮತ್ವರೂಪ ಹೇತುವಿಗೆ ಆತ್ಮರೂಪೈಕಾಧಿಕರಣದಲ್ಲಿ ಸಾಮಾನಾಧಿಕರಣ್ಯ ಬಂದೇ ಬರುತ್ತದೆ. ಹೀಗೆ ಸದ್ಧೇತುಸ್ಥಳದಲ್ಲಿ ಯಾವ ಪ್ರತಿಯೋಗಿತಾವಚ್ಛೇದಕಧರ್ಮವನ್ನು ತೆಗೆದುಕೊಂಡರೆ ತದವಚ್ಛಿನ್ನಪ್ರತಿಯೋಗಿಗೆ ಹೇತ್ವಧಿಕರಣವು ಅಧಿಕರಣವಾಗುವುದಿಲ್ಲವೋ ಆ ರೀತಿಯಾದ ಪ್ರತಿಯೋಗಿತಾವಚ್ಛೇದಕಧರ್ಮವನ್ನಾಶ್ರಯಿಸಿ ಲಕ್ಷಣ ಸಮನ್ವಯಮಾಡಬೇಕು. ಆಗ ಎಲ್ಲಿಯೂ ದೋಷ ಬರುವುದಿಲ್ಲ.

ನನು ಕಾಲೋ ಘಟವಾನ್ ಕಾಲಪರಿಮಾಣಾದಿತ್ಯತ್ರ ಪ್ರತಿಯೋಗಿ ವ್ಯಧಿಕರಣಾಭಾವಾಪ್ರಸಿದ್ಧಿಃ, ಹೇತ್ವಧಿಕರಣಸ್ಯ ಮಹಾಕಾಲಸ್ಯ ಜಗದಾಧಾರತಯಾ ಸರ್ವೇಷಾಮಭಾವಾನಾಂ ಸಾಧ್ಯತಾವಚ್ಛೇದಕಸಂಬಂಧೇನ ಕಾಲಿಕವಿಶೇಷಣತಯಾ ಪ್ರತಿಯೋಗ್ಯಧಿಕರಣತ್ವಾತ್ ||

ಸ್ಥಳಾಂತರದಲ್ಲಿ ಅವ್ಯಾಪ್ತಿಯನ್ನು ತೋರಿಸುತ್ತಾನೆ. 'ನನು—' ಇತಿ. ಸಾಧ್ಯತಾವಚ್ಛೇದಕಸಂಬಂಧದಿಂದ ಪ್ರತಿಯೋಗಿಗೆ ಅನಧಿಕರಣವಾಗಿರಬೇಕೆಂದು ಹೇಳಿದರೆ 'ಕಾಲ:—ಘಟವಾನ್—ಕಾಲಪರಿಮಾಣಾತ್' ಎಂಬಲ್ಲಿ ಅವ್ಯಾಪ್ತಿ ಬರುತ್ತದೆ. ಇಲ್ಲಿ ಕಾಲವು ಪಕ್ಷ. ಕಾಲಿಕಸಂಬಂಧದಿಂದ ಘಟವು ಸಾಧ್ಯ (ಕಾಲಿಕಸಂಬಂಧದಿಂದ ಘಟವು ಕಾಲದಲ್ಲಿದೆ) ಸಮವಾಯಸಂಬಂಧದಿಂದ ಕಾಲಪರಿಮಾಣ ಹೇತು. (ಅದು ಗುಣವಾದುದರಿಂದ ಕಾಲದ್ರವ್ಯದಲ್ಲಿ ಸಮವಾಯದಿಂದ ಇದೆ.) ಈಗ ಸಾಧ್ಯತಾವಚ್ಛೇದಕಸಂಬಂಧ ಕಾಲಿಕಸಂಬಂಧವೂ, ಹೇತುತಾವಚ್ಛೇದಕಸಂಬಂಧವು ಸಮವಾಯ ಸಂಬಂಧವೂ ಆಗುತ್ತದೆ. ಕಾಲಪರಿಮಾಣರೂಪ ಹೇತ್ವಧಿಕರಣವು ಮಹಾಕಾಲ. ಕಾಲಿಕವಿಶೇಷಣತಾಸಂಬಂಧದಿಂದ ಸಕಲಜಗತ್ತಿಗೆ ಆಶ್ರಯವಾದದ್ದು ಮಹಾಕಾಲ. 'ಜನ್ಯಾನಾಂ ಜನಕಃ ಕಾಲೋ ಜಗತಾಮಾಶ್ರಯೋ ಮತಃ' ಎಂದು ಹಿಂದೆ ಹೇಳಿದೆ. ಆದುದರಿಂದ ಹೇತ್ವಧಿಕರಣದಲ್ಲಿ ಯಾವ ಅಭಾವ ಹೇಳಿದರೂ ಅದರ ಪ್ರತಿಯೋಗಿಗೆ ಕಾಲಿಕರೂಪ ಸಾಧ್ಯತಾವಚ್ಛೇದಕಸಂಬಂಧದಿಂದ ಮಹಾಕಾಲವು ಅಧಿಕರಣವೇ ಆಗುವುದಲ್ಲದೆ (ಸ್ವ (ಅಭಾವ) ಪ್ರತಿಯೋಗಿಸಮಾನಾಧಿಕರಣ) ಅನಧಿಕರಣವಾಗದಿರುವುದರಿಂದ ಪ್ರತಿಯೋಗಿನಧಿಕರಣವಾದ ಅಭಾವ ಅಪ್ರಸಿದ್ಧವಾಗುತ್ತದೆ. ಆದುದರಿಂದ ಈ ಸ್ಥಳದಲ್ಲಿ ಅವ್ಯಾಪ್ತಿದೋಷ ಸಂಭವಿಸುತ್ತದೆ.

ಅತ್ರ ಕೇಚಿತ್. ಮಹಾಕಾಲಭೇದವಿಶಿಷ್ಟಘಟಾಭಾವಸ್ತತ್ರ ಪ್ರತಿಯೋಗಿವ್ಯಧಿಕರಣಃ,

ಮಹಾಕಾಲಸ್ಯ ಘಟಾಧಾರತ್ವೇಽಪಿ ಮಹಾಕಾಲಭೇದವಿಶಿಷ್ಟಘಟಾನಾಧಾರ ತ್ವಾತ್, ಮಹಾಕಾಲೇ ಮಹಾಕಾಲಭೇದಾಭಾವಾತ್ ||

ಏಕದೇಶಿಮತದಿಂದ ಅವ್ಯಾಪ್ತಿಗೆ ಸಮಾಧಾನ ತೋರಿಸುತ್ತಾನೆ. 'ಅತ್ರ—' ಇತಿ. ಮಹಾಕಾಲಭೇದ ವಿಶಿಷ್ಟಾಘಟಾಭಾವವು ಪ್ರತಿಯೋಗಿವ್ಯಧಿಕರಣವಾಗುತ್ತದೆ. ಅದಕ್ಕೆ ಕಾರಣತೋರಿಸುತ್ತಾನೆ. 'ಮಹಾಕಾಲಸ್ಯ—' ಇತಿ. ಮಹಾಕಾಲವು ಘಟಕ್ಕೆ ಅಧಿಕರಣವಾದರೂ ಮಹಾಕಾಲಭೇದವಿಶಿಷ್ಟವಾದ ಘಟಕ್ಕೆ ಅಧಿಕರಣವಾಗುವುದಿಲ್ಲ. ಮಹಾಕಾಲದಲ್ಲಿ ಸ್ವರೂಪಸಂಬಂಧದಿಂದ (ಅಭಾವೀಯವಿಶೇಷಣತಾಸಂಬಂಧದಿಂದ) ಮಹಾಕಾಲದಭೇದವಿರುವುದಾದರೆ ಆಗ ಹೇಳಬಹುದಿತ್ತು. ತನ್ನಲ್ಲಿ ತನ್ನ ಭೇದ ವಿರುವುದಿಲ್ಲ. ಮಹಾಕಾಲವು ಸರ್ವಾದಾರವಾಗಿದೆಯೆಂದುದರಿಂದ ಕಾಲಿಕಸಂಬಂಧದಿಂದ ಘಟವಿದ್ದಂತೆ ವಿಶೇಷಣತಾಸಂಬಂಧದಿಂದ (ಸ್ವರೂಪ) ಅದರ ಅಭಾವವೂ ಇರಬೇಕಾಗುತ್ತದೆ. ಆದರೂ 'ಘಟಃ ಮಹಾಕಾಲೋನ' ಎಂಬ ಪ್ರತ್ಯಯವಿರುವುದರಿಂದ ಮಹಾಕಾಲಭೇದವಿಶಿಷ್ಟವಾದ ಘಟವು ಮಹಾಕಾಲದಲ್ಲಿ ಬರುವುದಿಲ್ಲ. (ಮಹಾಕಾಲಃ ಮಹಾಕಾಲೋನ' ಎಂದು ಹೇಳಬಹುದಾದರೆ ಬರುತ್ತಿತ್ತು. ಅದೂ ಎಲ್ಲಿಯೂ ಇಲ್ಲ) ವಿಶಿಷ್ಟಾಧಿಕರಣತ್ವ ಬರಬೇಕಾದರೆ ವಿಶೇಷಣ ವಿಶೇಷ್ಯೋಭಯಸಂಬಂಧದಿಂದ ವಿಶೇಷಣವಿಶೇಷ್ಯಗಳೆರಡೂ ಇರಬೇಕು. ಇವುಗಳಲ್ಲಿ ಒಂದು ಬರದಿದ್ದರೆ ವಿಶಿಷ್ಟವೂ ಇಲ್ಲವೆಂದೇ ತಾತ್ಪರ್ಯ. 'ವಿಶೇಷಣವಿಶೇಷ್ಯೋಭಯಸಂಬಂಧಾಭ್ಯಾಂ ವಿಶೇಷಣ ವಿಶೇಷ್ಯೋಭಯಸತ್ವಂ ತತ್ರೈವ ವಿಶಿಷ್ಟಾಧಿಕರಣತ್ವ' ಎಂದು ನಿಯಮ. ಮಹಾಕಾಲಭೇದವಿಶಿಷ್ಟಘಟನೆಂದರೆ ವಿಶಿಷ್ಟವಾಗಿದೆ. ಮಹಾಕಾಲಭೇದವು ವಿಶೇಷಣ. ಘಟವುವಿಶೇಷ್ಯ. ಕಾಲಿಕಸಂಬಂಧದಿಂದ ವಿಶೇಷ್ಯವಿದ್ದರೂ ವಿಶೇಷಣತಾಸಂಬಂಧದಿಂದ ಮಹಾಕಾಲಭೇದರೂಪವಿಶೇಷಣವು ಮಹಾಕಾಲದಲ್ಲಿಲ್ಲದಿರುವುದರಿಂದ ವಿಶೇಷಣಾಭಾವ ಪ್ರಯುಕ್ತವಿಶಿಷ್ಟಾಭಾವ ಬರುತ್ತದೆ. ಆದುದರಿಂದ ಹೇತ್ವಧಿಕರಣವಲ್ಲಿರುವ ಅಭಾವ ವೆಂದರೆ ಮಹಾಕಾಲಭೇದವಿಶಿಷ್ಟಘಟಾಭಾವವಾಗುತ್ತದೆ. ಇದು ಪ್ರತಿಯೋಗಿ ವ್ಯಧಿಕರಣವಾಗುತ್ತದೆ. ಈ ಅಭಾವದಪ್ರತಿಯೋಗಿಯೆಂದರೆ ಮಹಾಕಾಲಭೇದವಿಶಿಷ್ಟ ಘಟ. ಇದಕ್ಕೆ ಮಹಾಕಾಲರೂಪಹೇತ್ವಧಿಕರಣವು ಅನಧಿಕರಣವಾಗುತ್ತದೆ. (ಅಧಿಕರಣ ವಾಗುವುದಿಲ್ಲ. ಪ್ರತಿಯೋಗ್ಯಧಿಕರಣಭಿನ್ನಾಧಿಕರಣ ಮಹಾಕಾಲವಾಗುತ್ತದೆ.) ಆದುದರಿಂದ ಅವ್ಯಾಪ್ತಿ ಇಲ್ಲವೆಂದು ಕೆಲವರ ಅಭಿಪ್ರಾಯ.

ವಸ್ತುತ ತಸ್ತುಪ್ರತಿಯೋಗಿತಾವಚ್ಛೇದಕಸಂಬಂಧೇನ ಪ್ರತಿಯೋಗ್ಯನಧಿಕರಣೀಭೂತ ಹೇತ್ವಧಿಕರಣವೃತ್ತ್ಯಭಾವಪ್ರತಿಯೋಗಿತಾಸಾಮಾನ್ಯೇ ಯತ್ಸಂಬಂಧಾವಚ್ಛಿನ್ನತ್ವ ಯದ್ಧರ್ಮಾವಚ್ಛಿನ್ನತ್ವೋಭಯಾಭಾವಃ, ತೇನಸಂಬಂಧೇನ ತದ್ಧರ್ಮಾವ ಚ್ಛಿನ್ನಸ್ಯ ತದ್ಧೇತುವ್ಯಾಪಕತ್ವಂ ಬೋಧ್ಯಮ್ | ವ್ಯಾಪಕಸಾಮಾನಾಧಿಕರಣ್ಯಂ ಚ ವ್ಯಾಪ್ತಿಃ ||

ಹಿಂದೆ ಕಾಲಿಕಸಂಬಂಧದಿಂದ ಘಟವು ಸಾಧ್ಯವಾದುದರಿಂದ ಅವ್ಯಾಪ್ತಿ ಪ್ರಾಪ್ತ ವಾಗಿ ಅಲ್ಲಿ ಮಹಾಕಾಲಭೇದವಿಶಿಷ್ಟಘಟಾಭಾವವು ಪ್ರತಿಯೋಗಿವ್ಯಧಿಕರಣವಾಗುತ್ತ ದೆಂದು ಸಮಾಧಾನ ಹೇಳಿದ್ದಾಯಿತು. ಆದರೆ ಮಹಾಕಾಲಮಾತ್ರವೃತ್ತಿವಿಶೇಷಣತಾ ಸಂಬಂಧದಿಂದ (ಇದಾನೀಂ ಘಟೋ ವರ್ತತೇ ಎಂಬ ಪ್ರತೀತಿಯಿಂದ) ಸಾಧ್ಯವಿವಕ್ಷಾ ಮಾಡಿದರೆ ಆಗ ಮಹಾಕಾಲಭೇದವಿಶಿಷ್ಟವಾದ ಘಟಾಭಾವವೂ ಪ್ರತಿಯೋಗಿವ್ಯಧಿಕರಣ ವಾಗುವುದಿಲ್ಲ. ಏಕೆಂದರೆ ಆಸಂಬಂಧದಿಂದ ಮಹಾಕಾಲಾನ್ಯತ್ವವಿಶಿಷ್ಟಘಟಾಧಿಕರಣವು ಅಪ್ರಸಿದ್ಧವಾಗುತ್ತದೆ. ಅದುದರಿಂದ ಅಸ್ವಾರಸ್ಯ ತಿಳಿದು ಸಿದ್ಧಾಂತವನ್ನು ತೋರಿಸು ತ್ತಾನೆ. 'ವಸ್ತು ತಸ್ತು—' ಇತಿ. ಇನ್ನು ಕೆಲವರು 'ಕಾಲೋಽಯಂ ಮಹಾಕಾಲಭೇದ ವಿಶಿಷ್ಟಘಟವಾನ್' ಎಂಬ ಪ್ರತೀತಿ ಅನುಭವಸಿದ್ಧವಾದುದರಿಂದ ಮಹಾಕಾಲದಲ್ಲಿ ಮಹಾಕಾಲಭೇದವಿಶಿಷ್ಟವಾದ ಘಟವು ಇದ್ದೇ ಇರುತ್ತದೆ. ಇಲ್ಲವಾದರೆ ಕಾಲಕ್ಕೆ ಜಗದಾ ಧಾರತ್ವವು ಸಂಭವಿಸಲಾರದು, ಆಗ ಪ್ರತಿಯೋಗಿವ್ಯಧಿಕರಣಾಭಾವ ಅಪ್ರಸಿದ್ಧವಾಗು ವುವರಿಂದ 'ವಸ್ತುತಸ್ತು—' ಎಂಬುದರಿಂದ ಕಲ್ಪಾಂತರ ತೋರಿಸಿದೆಯೆಂದು ಹೇಳುತ್ತಾರೆ.

ಪ್ರತಿಯೋಗಿತಾವಚ್ಛೇದಕಸಂಬಂಧದಿಂದ ಪ್ರತಿಯೋಗಿಗೆ ಅನಧಿಕರಣವಾಗಿರುವ ಹೇತ್ವಧಿಕರಣದಲ್ಲಿ ಯಾವ ಅಭಾವವಿದೆಯೋ ಆ ಅಭಾವದ ಪ್ರತಿಯೋಗಿಯಲ್ಲಿರುವ ಪ್ರತಿಯೋಗಿತಾ ಸಾಮಾನ್ಯದಲ್ಲಿ (ಯಾವ ಯಾವ ಪ್ರತಿಯೋಗಿತಾ ಹೇಳಲು ಸಾಧ್ಯವೋ ಅಲ್ಲಿ) ಯತ್ಸಂಬಂಧಾವಚ್ಛಿನ್ನತ್ವ, ಯದ್ಧರ್ಮಾವಚ್ಛಿನ್ನತ್ವರೂಪ ಉಭಯಾಭಾವವಿದೆಯೋ ಆ ಸಂಬಂಧದಿಂದ, ಆ ಧರ್ಮದಿಂದ ಕೂಡಿದ ವ್ಯಾಪಕವಾದ ಯಾವ ಸಾಧ್ಯವಿದೆಯೋ, ಅದರೊಡನೆ ಹೇತುವಿಗೆ ಸಾಮಾನಾಧಿಕರಣ್ಯವಿರಬೇಕೆಂದರ್ಥ. ಅಭಾವೀಯ ಪ್ರತಿ ಯೋಗಿತಾ ಸಾಮಾನ್ಯದಲ್ಲಿ ಸಾಧ್ಯತಾವಚ್ಛೇದಕ ಸಂಬಂಧವೂ, ಸಾಧ್ಯತಾವಚ್ಛೇದಕ ಧರ್ಮವೂ ಅವಚ್ಛೇದಕವಾಗಿರಬಾರದು. ಯಾವ ಅಭಾವದ ಪ್ರತಿಯೋಗಿತಾವಚ್ಛೇದ ಕತ್ವವು ದ್ವಿತ್ವವಾಗಿರುತ್ತದೆಯೋ ಅದು ಉಭಯಾಭಾವವಾಗುತ್ತದೆ. 'ಘಟಪಟೌ' 'ನಸ್ತಃ' ಎಂಬಲ್ಲಿ ಅಭಾವೀಯಪ್ರತಿಯೋಗಿತಾ ಘಟಪಟೋಭಯನಿಷ್ಠಾ. ಪ್ರತಿಯೋಗಿ ತಾವಚ್ಛೇದಕ ದ್ವಿತ್ವವಾಗುತ್ತದೆ. ಆದುದರಿಂದ ಇದು ಉಭಯಾಭಾವವಾಗುತ್ತದೆ.

ಪ್ರತಿಯೋಗಿತಾ ಸಾಮಾನ್ಯದಲ್ಲಿ ಹಿಂದೆ ಹೇಳಿದ ಉಭಯಾಭಾವವನ್ನು ಏಕೆ ಹೇಳಬೇಕು ? ಪ್ರತಿಯೋಗಿತಾವಚ್ಛೇದಕಸಂಬಂಧದಿಂದ ಪ್ರತಿಯೋಗಿಗೆ ಅನಧಿಕರಣ ವಾದ ಹೇತ್ವಧಿಕರಣದಲ್ಲಿರುವ ಅಭಾವೀಯಪ್ರತಿಯೋಗಿತಾಸಾಮಾನ್ಯದಲ್ಲಿ (ಯತ್ಸಂ ಬಂಧಾವಚ್ಛಿನ್ನತ್ವಾಭಾವವನ್ನು ಹೇಳದೆ) ಯದ್ಧರ್ಮಾವಚ್ಛಿನ್ನತ್ವಾಭಾವವಿದೆಯೋ (ಯಾವಸಾಧ್ಯತಾವಚ್ಛೇದಕಧರ್ಮವು ಅವಚ್ಛೇದಕವಾಗಿರುವುದಿಲ್ಲವೋ) ಎಂದು ಒಂದೇ ಹೇಳಿ ತದ್ಧರ್ಮಾವಚ್ಛಿನ್ನವಾದ ಸಾಧ್ಯಕ್ಕೆ ತದ್ಧೇತುಸಾಮಾನಾಧಿಕರಣ್ಯವಿರಬೇಕೆಂದು ಒಂದೇ ಅಭಾವವನ್ನು ಹೇಳಿವರೆ 'ವಹ್ನಿಮಾನ್ ಧೂಮಾತ್' ಎಂಬ ಪ್ರಸಿದ್ಧಹೇತುಕ ಸ್ಥಳದಲ್ಲಿಯೇ ಅವ್ಯಾಪ್ತಿ ಬರುತ್ತದೆ. ಲಕ್ಷಣದಲ್ಲಿ ಪ್ರತಿಯೋಗಿತಾಸಾಮಾನ್ಯವೆಂದುದ ರಿಂದ ಎಷ್ಟುಪ್ರತಿಯೋಗಿತಾ ಸಂಭವಿಸುತ್ತದೆಯೋ ಅವೆಲ್ಲವನ್ನೂ ತೆಗೆದುಕೊಳ್ಳಬೇಕು.

ಯಾವ ಯಾವ ಸಂಬಂಧದಿಂದ, ಯಾವ ಯಾವಧರ್ಮದಿಂದ ಯಾವ ಯಾವ ಅಭಾವ ಗಳನ್ನು ತೆಗೆದುಕೊಳ್ಳಬಹುದೋ. ಆಯಾಯ ಅಭಾವ ನಿರೂಪಿತ ಪ್ರತಿಯೋಗಿತಾದಲ್ಲಿ ಹಿಂದೆ ಹೇಳಿದ ಉಭಯಾಭಾವವಿರಬೇಕು. ಪ್ರಕೃತ ಹೇತ್ವಧಿಕರಣ ಪರ್ವತದಲ್ಲಿ ಸಂಯೋಗ ಸಂಬಂಧದಿಂದ ವಹ್ನಿ ಇದ್ದರೂ, 'ಸಮವಾಯೇನ ವಹ್ನಿರ್ನಾಸ್ತಿ' ಎಂದು ಹೇಳಬಹುದು. ಸಮವಾಯಸಂಬಂಧಾವಚ್ಛಿನ್ನವಹ್ನ್ಯಭಾವ ಪರ್ವತದಲ್ಲಿ ಬರುತ್ತದೆ. ಅಭಾವೀಯ ಪ್ರತಿಯೋಗಿತಾ ವಹ್ನಿಯಲ್ಲಿದೆ. ಪ್ರತಿಯೋಗಿತಾಸಾಮಾನ್ಯದಿಂದ ಈ ವಹ್ನಿನಿಷ್ಠಪ್ರತಿ ಯೋಗಿತಾ ಎಂಬುದೂ ಸೇರುತ್ತದೆ. ಆದರೆ ಇದರಲ್ಲಿ ಯದ್ಧರ್ಮಾವಚ್ಛಿನ್ನತ್ವಾಭಾವ ಬರುವುದಿಲ್ಲ. ಯದ್ಧರ್ಮವೆಂದರೆ ಸಾಧ್ಯತಾವಚ್ಛೇದಕವಾದ ವಹ್ನಿತ್ವವಾಗುತ್ತದೆ. ಪ್ರತಿಯೋಗಿತಾ ತದ್ಧರ್ಮಾವಚ್ಛಿನ್ನವಾಗಿಯೇ ಇರುವುದರಿಂದ ಅವ್ಯಾಪ್ತಿ ಬರುತ್ತದೆ. ಉಭಯಾಭಾವ ಹೇಳಿದರೆ ಸಾಧ್ಯತಾವಚ್ಛೇದಕಸಂಬಂಧಾವಚ್ಛಿನ್ನತ್ವಾಭಾವವೂ ಸೇರಿರು ವುದರಿಂದ ಉಕ್ತಪ್ರತಿಯೋಗಿತೆಯಲ್ಲಿ ಸಾಧ್ಯತಾವಚ್ಛೇದಕಧರ್ಮದ ಅಭಾವ ಇಲ್ಲ ದಿದ್ದರೂ, ಸಾಧ್ಯತಾವಚ್ಛೇದಕಸಂಯೋಗಸಂಬಂಧದ ಅಭಾವವಿರುವುದರಿಂದ 'ಏಕಸತ್ತ್ವೇ ದ್ವಯಂ ನಾಸ್ತಿ' ಎಂಬ ನ್ಯಾಯದಿಂದ ಉಭಯಾಭಾವ ಬಂದೇ ಬರುತ್ತದೆ. ತತ್ಸಂಬಂ ಧೇನ, ತದ್ಧರ್ಮಾವಚ್ಛಿನ್ನ ಸಾಮಾನಾಧಿಕರಣ್ಯವು ಹೇತುವಿಗೆ ಸಂಭವಿಸುವುದರಿಂದ ದೋಷಕ್ಕೆ ಅವಕಾಶವಿಲ್ಲ.

ಹೀಗೆಯೇ ಅಭಾವೀಯಪ್ರತಿಯೋಗಿತೆಯಲ್ಲಿ ಸಾಧ್ಯತಾವಚ್ಛೇದಕಧರ್ಮವನ್ನು ಸೇರಿಸದೇ 'ಪ್ರತಿಯೋಗಿತಾವಚ್ಛೇದಕಸಂಬಂಧೇನ ಪ್ರತಿಯೋಗ್ಯನಧಿಕರಣೀಭೂತ ಹೇತ್ವಧಿಕರಣ ವೃತ್ತ್ಯಭಾವೀಯ ಪ್ರತಿಯೋಗಿತಾಸಾಮಾನ್ಯೇ ಯತ್ಸಂಬಂಧಾವಚ್ಛಿನ್ನತ್ವಾ ಭಾವಃ ತೇನ ಸಂಬಂಧೇನ ತದ್ಧೇತೋಃ ಸಾಮಾನಾಧಿಕರಣ್ಯಂ' ವ್ಯಾಪ್ತಿಯೆಂದು ಲಕ್ಷಣ ಹೇಳಿದರೆ ಪುನಃ ಅವ್ಯಾಪ್ತಿ ಬರುತ್ತದೆ. ಸಂಯೋಗಸಂಬಂಧದಿಂದ ಘಟರೂಪಪ್ರತಿ ಯೋಗಿಗೆ ಅನಧಿಕರಣವಾದ ಪರ್ವತದಲ್ಲಿರುವ ಘಟಾಭಾವದ ಪ್ರತಿಯೋಗಿತೆಯಲ್ಲಿ ಯತ್ಸಂಬಂಧಾವಚ್ಛಿನ್ನತ್ವಾಭಾವ ಬರುವುದಿಲ್ಲ. ಸಾಧ್ಯತಾವಚ್ಛೇದಕಸಂಬಂಧವಾದ ಸಂಯೋಗಸಂಬಂಧಾವಚ್ಛಿನ್ನತ್ವವೇ ಬರುತ್ತದೆ. ಉಭಯಾಭಾವವನ್ನೂ ಸೇರಿಸಿದರೆ ಆಗ ಹಿಂದಿನಂತೆ 'ಏಕಸತ್ತ್ವೇ ದ್ವಯಂ ನಾಸ್ತಿ' ಎಂಬ ನ್ಯಾಯದಿಂದ ಯತ್ಸಂಬಂಧಾವ ಚ್ಛಿನ್ನತ್ವವಿದ್ದರೂ ಯದ್ಧರ್ಮಾವಚ್ಛಿನ್ನತ್ವಾಭಾವವಿರುವುದರಿಂದ ತತ್ಪ್ರಯುಕ್ತ ಉಭಯಾ ಭಾವವು ಬರುತ್ತದೆ. ಘಟಾಭಾವೀಯ ಪ್ರತಿಯೋಗಿತಾದಲ್ಲಿ ವಹ್ನಿತ್ವಾವಚ್ಛಿನ್ನತ್ವವು ಬರುವುದಿಲ್ಲ. ಆದುದರಿಂದ ತತ್ಸಂಬಂಧದಿಂದ ತದ್ಧರ್ಮಾವಚ್ಛಿನ್ನ ಸಾಧ್ಯದೊಡನೆ ಹೇತುವಿಗೆ ಐಕಾಧಿಕರಣ್ಯಸಂಭವಿಸುವುದರಿಂದ ದೋಷ ಬರುವುದಿಲ್ಲ.

ಇತ್ಥಂ ಚ—ಕಾಲೋ ಘಟವಾನ್—ಕಾಲಪರಿಮಾಣಾತ್—ಇತ್ಯಾದೌ ಸಂಯೋಗ ಸಂಬಂಧೇನ ಯೋ ಘಟಾಭಾವಃ, ತತ್ಪ್ರತಿಯೋಗಿನೋ ಘಟಸ್ಯಾನಧಿಕರಣೇ ಹೇತ್ವಧಿಕರಣೇ ಮಹಾಕಾಲೇ ವರ್ತಮಾನಃ ಸ ಏವ ಸಂಯೋಗೇನ ಘಟಾಭಾವ

ಸ್ತಸ್ಯ ಪ್ರತಿಯೋಗಿತಾಯಾಂ ಕಾಲಿಕಸಂಬಂಧಾವಚ್ಛಿನ್ನತ್ವ ಘಟತ್ವಾವಚ್ಛಿನ್ನತ್ವೋಭಯಾಭಾವಸತ್ತ್ವಾನ್ನಾವ್ಯಾಪ್ತಿಃ । 'ಧೂಮವಾನ್ ವಹ್ನೇಃ' ಇತ್ಯಾದಾವತಿವ್ಯಾಪ್ತಿವಾರಣಾಯ ಸಾಮಾನ್ಯಪದಮುಪಾತ್ತಮ್ ॥

ಪೂರ್ವೋಕ್ತಸ್ಥಳದಲ್ಲಿ ಲಕ್ಷಣ ಸಮನ್ವಯ ತೋರಿಸುತ್ತಾನೆ. 'ಇತ್ಥಂಚ—' ಇತಿ. ಕಾಲಃ—ಘಟವಾನ್—ಕಾಲಪರಿಮಾಣಾತ್' ಎಂಬಲ್ಲಿ ಪ್ರತಿಯೋಗಿವ್ಯಧಿಕರಣವಾದ ಅಭಾವ ಅಪ್ರಸಿದ್ಧವಾಗಿದೆಯೆಂದು ಹಿಂದೆ ದೋಷೋದ್ಭಾವನೆ ಮಾಡಿತ್ತು. ಈ ಲಕ್ಷಣಾಶ್ರಯಣದಿಂದ ಆ ದೋಷಕ್ಕೆ ಅವಕಾಶವಿಲ್ಲ. ಇಲ್ಲಿ ಹೇತ್ವಧಿಕರಣವಾದ ಕಾಲದಲ್ಲಿ ಸಂಯೋಗ ಸಂಬಂಧದಿಂದ ಘಟಾಭಾವವನ್ನು ತೆಗೆದುಕೊಳ್ಳುತ್ತೇವೆ. ಕಾಲಿಕ ಸಂಬಂಧದಿಂದ ಘಟವಿದ್ದರೂ ಸಂಯೋಗಸಂಬಂಧದಿಂದ ಕಾಲದಲ್ಲಿ ಘಟವಿಲ್ಲ. ಪ್ರತಿಯೋಗಿತಾವಚ್ಛೇದಕಸಂಬಂಧವೇ ಸಂಯೋಗಸಂಬಂಧವಾಗುತ್ತದೆ. ಸಂಯೋಗಸಂಬಂಧದಿಂದ ಪ್ರತಿಯೋಗಿ (ಘಟಕ್ಕೆ) ಗೆ ಅನಧಿಕರಣವಾಗಿ ಹೇತ್ವಧಿಕರಣವಾಗಿರುವ ಕಾಲದಲ್ಲಿರುವ ಅಭಾವವೆಂದರೆ ಘಟಾಭಾವ. ಘಟಾಭಾವೀಯಪ್ರತಿಯೋಗಿತಾದಲ್ಲಿ ಯದ್ಧರ್ಮಾವಚ್ಛಿನ್ನತ್ವಾಭಾವ (ಘಟತ್ವಾವಚ್ಛಿನ್ನತ್ವಾಭಾವವಿಲ್ಲ, ಘಟತ್ವದಿಂದಲೇ ಕೂಡಿದೆ) ಬಾರದಿದ್ದರೂ ಯತ್ಸಂಬಂಧಾವಚ್ಛಿನ್ನತ್ವಾಭಾವ ಬಂದೇ ಬರುತ್ತದೆ. ಯತ್ಸಂಬಂಧವೆಂದರೆ ಸಾಧ್ಯತಾವಚ್ಛೇದಕಕಾಲಿಕಸಂಬಂಧ. ಪ್ರತಿಯೋಗಿತಾ ಸಂಯೋಗಸಂಬಂಧಾವಚ್ಛಿನ್ನವಾದುದಲ್ಲದೆ ಕಾಲಿಕಸಂಬಂಧಾವಚ್ಛಿನ್ನವಾಗಲಿಲ್ಲ. ಆಗ 'ಏಕಸತ್ವೇ—' ನ್ಯಾಯದಿಂದ ಉಭಯಾಭಾವ ಬರುವುದರಿಂದ ಕಾಲಿಕವಿಶೇಷಣತಾಸಂಬಂಧದಿಂದ ತತ್ ಘಟತ್ವಧರ್ಮಾವಚ್ಛಿನ್ನವಾದ ಘಟದೊಡನೆ ತದ್ಧೇತುವಿಗೆ ಕಾಲದಲ್ಲಿ ಸಾಮಾನಾಧಿಕರಣ್ಯ ಬಂದೇ ಬರುತ್ತದೆ.

ಪ್ರತಿಯೋಗಿತಾಸಾಮಾನ್ಯದಲ್ಲಿ ಎಂದುದರಿಂದ 'ಧೂಮವಾನ್ ವಹ್ನೇಃ' ಎಂಬ ಅಸದ್ಧೇತುವಿನಲ್ಲಿ ಅತಿವ್ಯಾಪ್ತಿ ಬರುವುದಿಲ್ಲ. ಪ್ರತಿಯೋಗಿತಾಸಾಮಾನ್ಯಪದವನ್ನು ಹೇಳದೆ 'ಅಭಾವೀಯಯತ್ಕಿಂಚಿತ್ ಪ್ರತಿಯೋಗಿತಾಯಾಂ' ಎಂದು ಯಾವುದಾದರೊಂದು ಪ್ರತಿಯೋಗಿತಾದಲ್ಲಿ ಈ ಉಭಯಾಭಾವವಿದ್ದರೆ ಸಾಕೆಂದು ಹೇಳಿದರೆ ಅತಿವ್ಯಾಪ್ತಿ ಬರುತ್ತದೆ. ಹೇತ್ವಧಿಕರಣವಾದ ಪರ್ವತದಲ್ಲಿರುವ ಅಭಾವವೆಂದರೆ ಸಂಯೋಗದಿಂದ ಘಟಾಭಾವವನ್ನು ತಗೆದುಕೊಂಡರೆ ತದಭಾವೀಯಪ್ರತಿಯೋಗಿತಾದಲ್ಲಿ ಸಂಯೋಗಸಂಬಂಧಾವಚ್ಛಿನ್ನತ್ವವಿದ್ದರೂ, ಧೂಮತ್ವಾವಚ್ಛಿನ್ನವಿಲ್ಲವಾದುದರಿಂದ ಏಕಸತ್ವ—ನ್ಯಾಯದಿಂದ ಉಭಯಾಭಾವ ಬಂದು ಲಕ್ಷಣ ಸಮನ್ವಿತವಾಗಿ ಅತಿವ್ಯಾಪ್ತಿದೋಷ ಬರುತ್ತದೆ. ಯಾವತ್ ಪ್ರತಿಯೋಗಿತಾ (ಯಾವ ಯಾವ ಪ್ರತಿಯೋಗಿತಾ ಹೇಳಲು ಸಾಧ್ಯವೋ ಅವೆಲ್ಲವನ್ನೂ ತೆಗೆದುಕೊಳ್ಳಬೇಕು.) ಎಂಬ ಅರ್ಥಕೊಡುವ ಸಾಮಾನ್ಯಪದವನ್ನು ಹೇಳಿದರೆ ಸಂಯೋಗಸಂಬಂಧದಿಂದ ಧೂಮಾಭಾವೀಯ ಪ್ರತಿಯೋಗಿತಾ ಕೂಡಾ ಸಾಮಾನ್ಯಾಂತರ್ಗತವಾಗುತ್ತದೆ. ವಹ್ನಿರೂಪ ಹೇತ್ವಧಿಕರಣವಾದ ಅಯೋಗೋಲಕದಲ್ಲಿ

ಸಂಯೋಗದಿಂದ ಧೂಮಾಭಾವ ಹೇಳಿದರೆ ಅಯೋಗೋಲಕವು ಸಂಯೋಗರೂಪಪ್ರತಿಯೋಗಿತಾವಚ್ಛೇದಕಸಂಬಂಧದಿಂದ ಪ್ರತಿಯೋಗಿಗೆ (ಧೂಮಕ್ಕೆ) ಅನಧಿಕರಣವಾಗುತ್ತದೆ. ಅಭಾವೀಯ ಧೂಮನಿಷ್ಠಪ್ರತಿಯೋಗಿತಾದಲ್ಲಿ ಉಭಯಾಭಾವ ಬರುವುದಿಲ್ಲ. ಸಂಯೋಗಸಂಬಂಧಾವಚ್ಛಿನ್ನತ್ವ, ಧೂಮತ್ವಾವಚ್ಛಿನ್ನತ್ವೋಭಯವೂ ಇರುವುದರಿಂದ ಲಕ್ಷಣ ಸಮನ್ವಯವಾಗುವುದಿಲ್ಲ. ಆದುದರಿಂದ ಅತಿವ್ಯಾಪ್ತಿ ದೋಷಕ್ಕೆ ಅವಕಾಶವಿಲ್ಲ. ಈಗ ಲಕ್ಷಣ—'ಪ್ರತಿಯೋಗಿತಾವಚ್ಛೇದಕಸಂಬಂಧೇನ ಪ್ರತಿಯೋಗ್ಯನಧಿಕರಣೀಭೂತಹೇತ್ವಧಿಕರಣವೃತ್ತ್ಯಭಾವೀಯಾ ಯಾ ಪ್ರತಿಯೋಗಿತಾ, ತಾದೃಶಪ್ರತಿಯೋಗಿತಾಸಾಮಾನ್ಯೇ ಯತ್ಸಂಬಂಧಾವಚ್ಛಿನ್ನತ್ವ ಯದ್ಧರ್ಮಾವಚ್ಛಿನ್ನತ್ವೋಭಯಾಭಾವಃ, ತೇನ ಸಂಬಂಧೇನ ತದ್ಧರ್ಮಾವಚ್ಛಿನ್ನಸ್ಯ ತದ್ಧೇತುವ್ಯಾಪಕತ್ವಂ, ತಾದೃಶವ್ಯಾಪಕ(ಸಾಧ್ಯ) ಸಾಮಾನಾಧಿಕರಣ್ಯಂ ವ್ಯಾಪ್ತಿಃ' ಎಂದು ಫಲಿತವಾಗುತ್ತದೆ.

ನನು—ಪ್ರಮೇಯವಹ್ನಿಮಾನ್ ಧೂಮಾದಿತ್ಯಾದೌ ಪ್ರಮೇಯವಹ್ನಿತ್ವಾವಚ್ಛಿನ್ನತ್ವಮಪ್ರಸಿದ್ಧಂ, ಗುರುಧರ್ಮಸ್ಯಾನವಚ್ಛೇದಕತ್ವಾದಿತಿ ಚೇನ್ನ ಕಂಬುಗ್ರೀವಾದಿಮಾನ್ನಾಸ್ತೀತಿ ಪ್ರತೀತ್ಯಾ ಕಂಬುಗ್ರೀವಾದಿಮತ್ತ್ವಾವಚ್ಛಿನ್ನ ಪ್ರತಿಯೋಗಿತಾವಿಷಯೀಕರಣೇನ ಗುರುಧರ್ಮಸ್ಯಾಪ್ಯವಚ್ಛೇದಕತ್ವ ಸ್ವೀಕಾರಾದಿತಿ ಸಂಕ್ಷೇಪಃ ॥ ೭೯ ॥

ಪೂರ್ವೋಕ್ತ ಸಕಲಲಕ್ಷಣಗಳಿಗೆ ಅವ್ಯಾಪ್ತಿ ತೋರಿಸುತ್ತಾನೆ. 'ನನು—' ಇತಿ. ಪರ್ವತಃ—ಪ್ರಮೇಯವಹ್ನಿಮಾನ್—ಧೂಮಾತ್' ಎಂಬಲ್ಲಿ ಸಾಧ್ಯ—ಪ್ರಮೇಯವಹ್ನಿ. ಸಾಧ್ಯತಾವಚ್ಛೇದಕಧರ್ಮ ಪ್ರಮೇಯವಹ್ನಿತ್ವವಾಗುತ್ತದೆ. ಆದರೆ 'ಸಂಭವತಿ ಲಘುಧರ್ಮೇ ಗುರೌ ತದಭಾವಾತ್' ಎಂಬ ನ್ಯಾಯದಿಂದ ಪ್ರಮೇಯವಹ್ನಿತ್ವಸಮನಿಯತವಾದ (ಅದು ಇದ್ದಲ್ಲಿ ನಿಯಮದಿಂದ ಇರುವ) ವಹ್ನಿತ್ವವೇ ಲಾಘವದಿಂದ ಅವಚ್ಛೇದಕವಾಗುವಾಗ ಪ್ರಮೇಯವಹ್ನಿತ್ವಕ್ಕೆ ಅವಚ್ಛೇದಕತ್ವ ಕೊಡುವುದಿಲ್ಲ. ಸ್ವರೂಪ ಸಂಬಂಧವಿಶೇಷವೇ ಅವಚ್ಛೇದಕತ್ವವೆಂದೂ, ಇನ್ನು ಕೆಲವರು ಅದು ಅನತಿರಿಕ್ತವೃತ್ತಿತ್ವರೂಪವಾಗುವುದೆಂದೂ ಹೇಳುತ್ತಾರೆ. ಅದು ಹೇಗಾದರೂ ಪ್ರಕೃತ ವಹ್ನಿತ್ವ ಸಾಧ್ಯತಾವಚ್ಛೇದಕವಲ್ಲ. ಸಾಧ್ಯತಾವಚ್ಛೇದಕಧರ್ಮವಾದ ಪ್ರಮೇಯವಹ್ನಿತ್ವಕ್ಕೆ ಗುರುಧರ್ಮವಾದುದರಿಂದ ಅವಚ್ಛೇದಕತ್ವವಿಲ್ಲ. ಸಾಧ್ಯತಾವಚ್ಛೇದಕತ್ವವಿಲ್ಲ. ಸಾಧ್ಯತಾವಚ್ಛೇದಕಪದನಿವೇಶವಿಲ್ಲದ ಲಕ್ಷಣವಿಲ್ಲ ಆದುದರಿಂದ ಅವಚ್ಛೇದಕಾಪ್ರಸಿದ್ಧಿಮೂಲಕವಾದ ಅವ್ಯಾಪ್ತಿರೂಪದೋಷ ಬರುತ್ತದೆ.

ಸಿದ್ಧಾಂತಿಯು ಇದನ್ನು ಖಂಡಿಸುತ್ತಾನೆ. 'ನ—' ಇತಿ. ಪದಾರ್ಥಗಳ ಸಿದ್ಧಿಯಾಗಲೀ ಅಸಿದ್ಧಿಯಾಗಲೀ ಕಲ್ಪನೆಯಿಂದಾಗುವುದಿಲ್ಲ. ಪ್ರತೀತಿಯನ್ನನುಸರಿಸಿ ಅವುಗಳನ್ನು ನಿರ್ಣಯಿಸಬೇಕು. ಪ್ರಕೃತ 'ಇಹ ಭೂತಲೇ ಕಂಬುಗ್ರೀವಾದಿಮಾನ್ ನಾಸ್ತಿ' ಎಂಬ ಪ್ರತೀತಿಯುಂಟಾದರೆ ಅಲ್ಲಿ ಕಂಬುಗ್ರೀವಾದಿಮತ್ತ್ವಾವಚ್ಛಿನ್ನಪ್ರತಿ

ಯೋಗಿತಾಕಾತ್ಯಂತಾಭಾವ ತೋರುತ್ತದೆ. ಅಭಾವೀಯಪ್ರತಿಯೋಗಿತಾವಚ್ಛೇದಕ ಕಂಬುಗ್ರೀವಾದಿಮತ್ತ್ವವಾಗುತ್ತದೆ. (ಪ್ರತಿಯೋಗಿತಾ ತದವಚ್ಛಿನ್ನಾ) ಇಂತಹ ಸ್ಥಳದಲ್ಲಿ ಗುರುಧರ್ಮಕ್ಕೆ ಅವಚ್ಛೇದಕತ್ವ ಅಂಗೀಕೃತವಾದುದರಿಂದ ಪ್ರಕೃತ ಪ್ರಮೇಯವಹ್ನಿತ್ವಕ್ಕೂ ಅವಚ್ಛೇದಕತ್ವವನ್ನು ಅಂಗೀಕರಿಸುತ್ತೇವೆ ಎಂದು ತಾತ್ಪರ್ಯ. ಅನುಗತವಾದ ಬಂದು ಅವಚ್ಛೇದಕತ್ವದ ಸ್ವರೂಪ ಹೇಳಲು ಸಾಧ್ಯವಿಲ್ಲ. ಯದ್ಧರ್ಮವಿಶಿಷ್ಟವಾಗಿ ಕಾರಣವಾಗುವುದೋ ಆ ಧರ್ಮವೇ ಕಾರಣತಾವಚ್ಛೇದಕವಾಗುತ್ತದೆ. ಹೀಗೆಯೇ ಕಾರ್ಯತಾವಚ್ಛೇದಕಾದಿಗಳನ್ನು ತಿಳಿಯಬೇಕು.

'ಸಂಕ್ಷೇಪತಃ' ಎಂದುದರಿಂದ ಇಲ್ಲಿ ಕಂಬುಗ್ರೀವಾದಿಮತ್ತ್ವರೂಪಧರ್ಮವು ಗುರುವಾಗುವುದೆಂದು ಅದಕ್ಕೆ ಅವಚ್ಛೇದಕತ್ವವನ್ನು ಅಂಗೀಕರಿಸುವುದಿಲ್ಲ. ಪೂರ್ವೋಕ್ತ ಪ್ರತೀತಿಯಲ್ಲಿ 'ಕಂಬುಗ್ರೀವಾದಿಮತ್‌ಪ್ರತಿಯೋಗಿತಾಕಾಭಾವವೇ' ವಿಷಯವಾಗಿತ್ತದೆ. ಕಂಬುಗ್ರೀವಾದಿಮತ್ತ್ವದಲ್ಲಿ ಅವಚ್ಛೇದಕತ್ವವನ್ನು ವಿಷಯೀಕರಿಸುವುದಿಲ್ಲವೆಂದು ಹೇಳುವುದಾದರೆ ಆಗ ಯಾವುದಾದರೊಂದು ಘಟವಿರುವ ಪ್ರದೇಶದಲ್ಲಿಯೂ 'ಕಂಬುಗ್ರೀವಾದಿಮಾನ್ನಾಸ್ತಿ' ಎಂದು ಬರಲಿ. ಬರುತ್ತದೆ ಎಂದರೆ ಅದು ಪ್ರಮಾಣಸಿದ್ಧವೂ ಆಗಲಿ ಎಂದು ಆಪಾದಿಸಬಹುದು. ಆದರೆ ಹಾಗೆ ಬರುವುದಿಲ್ಲ. ಆದುದರಿಂದ ಗುರುಧರ್ಮದಲ್ಲಿ ಅವಚ್ಛೇದಕತ್ವವನ್ನು ಸ್ವೀಕರಿಸಲೇಬೇಕೆಂದು ತಾತ್ಪರ್ಯಾರ್ಥ ದಿನಕರಿಯಲ್ಲಿ ವಿವೃತವಾಗಿದೆ.

ಇನ್ನು ಕೆಲವರು ಗುರುಧರ್ಮಕ್ಕೆ ಅವಚ್ಛೇದಕತ್ವ ಇಲ್ಲವೇ ಇಲ್ಲ. ಹೀಗೆ ಗುರುಧರ್ಮಕ್ಕೆ ಅವಚ್ಛೇದಕತ್ವವನ್ನು ಒಪ್ಪಿದರೆ 'ಗಂಧವತ್ ಘಟೋ ನಾಸ್ತಿ' ಇತ್ಯಾದಿ ಸ್ಥಲದಲ್ಲಿ ಗಂಧವತ್‌ಘಟತ್ವಾದಿಗಳಿಗೂ ಅವಚ್ಛೇದಕತ್ವ ಸಿದ್ಧವಾಗಿ ಅಪ್ರಾಮಾಣಿಕವಾದ ಅನಂತಾಭಾವಗಳನ್ನು ಕಲ್ಪಿಸಬೇಕಾಗುತ್ತದೆ. ಪೂರ್ವೋಕ್ತ ಸ್ಥಳದಲ್ಲಿ ದೋಷವನ್ನು ಹೋಗಲಾಡಿಸಲು ಕಂಬಗ್ರೀವಾದಿಮತ್ತ್ವಸಮನಿಯತ ಘಟತ್ವಾವಚ್ಛಿನ್ನ ಪ್ರತಿಯೋಗಿತಾಕಾಭಾವವು ಅಲ್ಲಿ ವಿಷಯವಾಗಿ ತೋರುತ್ತದೆಂದು ಅಂಗೀಕರಿಸುವುದರಿಂದ ಯಾವುದಾದರೊಂದು ಘಟವಿರುವಾಗ 'ಕಂಬುಗ್ರೀವಾದಿಮಾನ್ನಾಸ್ತಿ' ಎಂಬ ಪ್ರತೀತಿ ಬರುವುದಿಲ್ಲ. ಅಲ್ಲಿ ತದ್‌ಘಟತ್ವಕ್ಕೆ ಕಂಬುಗ್ರೀವಾದಿಮತ್ತ್ವಸಮನ್ನೈಯತ್ಯವಿರುವುದಿಲ್ಲವೆಂದು ಪ್ರತಿಪಾದಿಸುತ್ತಾರೆ.

ಹೀಗೆ ವ್ಯಾಪ್ತಿಲಕ್ಷಣ ಮುಗಿದಿದೆ.

**ಸಿಷಾಧಯಿಷಯಾ ಶೂನ್ಯಾ ಸಿದ್ಧಿರ್ಯತ್ರ ನ ವಿದ್ಯತೇ ।**
**ಸ ಪಕ್ಷಸ್ತತ್ರ ವೃತ್ತಿತ್ವಜ್ಞಾನಾದನುಮಿತಿರ್ಭವೇತ್ ॥ ೭೦ ॥**

ವ್ಯಾಪ್ತಿಯಲಕ್ಷಣ ಅಥವಾ ವ್ಯಾಪ್ಯ (ಹೇತು) ದ ಸ್ವರೂಪ ಹೇಳಿದ್ದಾಯಿತು. 'ವ್ಯಾಪ್ಯಸ್ಯ ಪಕ್ಷವೃತ್ತಿತ್ವಂ' ಎಂದು ಹಿಂದೆ ಪರಾಮರ್ಶಲಕ್ಷಣ ಹೇಳುವಾಗ ಪಕ್ಷಪದ

ಹೇಳಿದೆ. ಪಕ್ಷವೆಂದರೇನು ಎಂದು ಜಿಜ್ಞಾಸೆ ಬರುವುದರಿಂದ ಈಗ ಈ ಕಾರಿಕೆಯಿಂದ ಪಕ್ಷಲಕ್ಷಣ ಹೇಳುತ್ತಾನೆ. 'ಸಿಷಾಧ—' ಇತಿ. ಸಾಧಯಿತುಂ ಇಚ್ಛಾ—ಸಿಷಾಧಯಿಷಾ. 'ಪರ್ವತದಲ್ಲಿ ವಹ್ನ್ಯನುಮಿತಿ ನನಗಾಗಲಿ' (ಪರ್ವತೇ ವಹ್ನ್ಯನುಮಿತಿಃ ಮೇ ಜಾಯತಾಂ)' ಎಂಬ ಇಚ್ಛೆಗೆ ಸಿಷಾಧಯಿಷಾ ಎಂದು ಹೆಸರು. ಅನುಮಿತ್ಸಾ ಎಂದೂ ಕರೆಯುತ್ತಾರೆ. ತಯಾಶೂನ್ಯಾ—ವಿರಹಿತಾ. ತದಭಾವವಿಶಿಷ್ಟವಾದ ಸಿದ್ಧಿ. ಸಿದ್ಧಿಯೆಂದರೆ ಸಾಧ್ಯನಿಶ್ಚಯ. ಇಂದ್ರಿಯಾರ್ಥಸನ್ನಿಕರ್ಷದಿಂದ ಉಂಟಾದ 'ಪರ್ವತೋ ವಹ್ನಿಮಾನ್' ಎಂಬ ಚಾಕ್ಷುಷನಿಶ್ಚಯವೇ ಸಿದ್ಧಿ. ಎಲ್ಲಿ ಈ ರೀತಿಯಾದ ಸಿದ್ಧಿ ಇರುವುದಿಲ್ಲವೋ ಅದೇ ಪಕ್ಷ. ತತ್ರ—ಆಪಕ್ಷದಲ್ಲಿ (ಹೇತುವಿನ) ವೃತ್ತಿತ್ವಜ್ಞಾನದಿಂದ (ಇರುವಿಕೆಯ) ಅನುಮಿತಿಯುಂಟಾಗುತ್ತದೆ ಎಂದು ಕಾರಿಕಾರ್ಥ.

ಪಕ್ಷವೃತ್ತಿತ್ವಮಿತ್ಯತ್ರ ಪಕ್ಷತ್ವಂ ಕಿಂ ತದಾಹ ಸಿಷಾಧಯಿಷೇತಿ । ಸಿಷಾಧಯಿಷಾವಿರಹವಿಶಿಷ್ಟಸಿದ್ಧ್ಯಭಾವಃ ಪಕ್ಷತಾ ತದ್ವಾನ್ ಪಕ್ಷ ಇತ್ಯರ್ಥಃ । ಸಿಷಾಧಯಿಷಾಮಾತ್ರಂ ನ ಪಕ್ಷತಾ, ವಿನಾಪಿ ಸಿಷಾಧಯಿಷಾಂ ಘನಗರ್ಜಿತೇನ ಮೇಘಾನುಮಾನಾತ್ । ಅತ ಏವ ಸಾಧ್ಯಸಂದೇಹೋಽಪಿ ನಪಕ್ಷತಾ—,ವಿನಾಪಿಸಂದೇಹಂ ತದನುಮಾನಾತ್ । ಸಿದ್ಧೌ ಸತ್ಯಾಮಪಿ ಸಿಷಾಧಯಿಷಾಸತ್ವೇ ಅನುಮಿತಿರ್ಭವತ್ಯೇವ । ಅತಃ ಸಿಷಾಧಯಿಷಾವಿರಹವಿಶಿಷ್ಟತ್ವಂ ಸಿದ್ಧೌ ವಿಶೇಷಣಮ್ । ತಥಾ ಚ ಯತ್ರಸಿದ್ಧಿರ್ನಾಸ್ತಿ ತತ್ರ ಸಿಷಾಧಯಿಷಾಯಾಂ ಸತ್ಯಾಮಸತ್ಯಾಮಪಿ ಪಕ್ಷತಾ । ಯತ್ರ ಸಿಷಾಧಯಿಷಾ ಅಸ್ತಿ ತತ್ರಸಿದ್ಧೌ ಸತ್ಯಾಮಸತ್ಯಾಮಪಿ ಪಕ್ಷತಾ । ಯತ್ರ ಸಿದ್ಧಿರಸ್ತಿ ಸಿಷಾಧಯಿಷಾ ಚ ನಾಸ್ತಿ ತತ್ರ ನ ಪಕ್ಷತಾ ಸಿಷಾಧಯಿಷಾವಿರಹವಿಶಿಷ್ಟಸಿದ್ಧೇಃ ಸತ್ತ್ವಾತ್ ॥

ಪಕ್ಷ ನಿರೂಪಣೆಯಲ್ಲಿ ಸಂಗತಿಯನ್ನು ತೋರಿಸುತ್ತಾನೆ. 'ಪಕ್ಷವೃತ್ತಿ—' ಇತಿ. ಪರಾಮರ್ಶಪ್ರಕೃತವಾಗಿರುವಾಗ ತದ್ಘಟಕವಾದ (ಅದರಲ್ಲಿ ಸೇರಿರುವ) ಪಕ್ಷಧರ್ಮತ್ವವೂ ಪ್ರಕೃತವಾಗಿರುತ್ತದೆ. ಪ್ರಕೃತೋಪಪಾದಕತ್ವವಿರುವುದರಿಂದ ಉಪೋದ್ಘಾತಸಂಗತಿಯಾಗುತ್ತದೆ. ವ್ಯಾಪ್ತಿನಿರೂಪಣಮಾಡಿದ ಮೇಲೆ ಪಕ್ಷತಾನಿರೂಪಣದಲ್ಲಿ ಏಕಕಾರ್ಯಕಾರಿತ್ವಸಂಗತಿ ಹೇಳಬೇಕು. ಅನುಮಿತಿರೂಪವಾದ ಏಕಾಕಾರ್ಯ ನಿರ್ವಾಹಕತ್ವವು ವ್ಯಾಪ್ತಿಗೆ ಇದ್ದಂತೆ ಪಕ್ಷತೆಗೂ ಇದೆ.

ಕಾರಿಕೆಯಿಂದ ತೋರಿದ ವಿಶಿಷ್ಟಲಕ್ಷಣವನ್ನು ತೋರಿಸುತ್ತಾನೆ. 'ಸಿಷಾಧ—' ಇತಿ. 'ಸಿಷಾಧಯಿಷಯಾ ಯೋ ವಿರಹಃ—ಆಭಾವಃ, ತದ್ವಿಶಿಷ್ಟಾಯಾಸಿದ್ಧಿಃ, ತಾದೃಶಸಿದ್ಧೇರ್ಯೋಽಭಾವಃ ಸ ಏವ ಪಕ್ಷತಾ' ಪಕ್ಷದಲ್ಲಿರುವ ಧರ್ಮವಾಗುತ್ತದೆ' ಇದು ಉಳ್ಳದ್ದು ಪರ್ವತಾದಿಪಕ್ಷವಾಗುತ್ತದೆ. ಅನುಮಿತಿಯುಂಟಾಗಲಿ ಎಂಬ ಇಚ್ಛೆ ಇಲ್ಲದಿರುವಾಗ 'ಪರ್ವತೋ ವಹ್ನಿಮಾನ್' ಎಂಬ ಚಾಕ್ಷುಷನಿಶ್ಚಯವಿಲ್ಲದಿರುವುದು ಎಂದರ್ಥ. ಈ ರೀತಿಯಾದ ಸಿದ್ಧ್ಯಭಾವರೂಪಪಕ್ಷತಾದಿಂದ ಸ್ವಪ್ರತಿಯೋಗಿ

ವಿಶೇಷ್ಯತಾಸಂಬಂಧದಿಂದ ಕೂಡಿರುವುದೇ ಪಕ್ಷ. ಸ್ವಂ—ಸಿಷಾಧಯಿಷಾವಿರಹವಿಶಿಷ್ಟ ಸಿದ್ಧ್ಯಭಾವ. ಸ್ವಪ್ರತಿಯೋಗಿ— 'ಪರ್ವತೋವಹ್ನಿಮಾನ್' ಎಂಬ ಚಾಕ್ಷುಷ ನಿಶ್ಚಯಾತ್ಮಕಸಿದ್ಧಿ. ಇಲ್ಲಿ ಪರ್ವತವೇ ವಿಶೇಷ್ಯ. ವಿಶೇಷ್ಯತಾ ಪರ್ವತನಿಷ್ಠಾ. ಈ ಸಂಬಂಧದಿಂದ ಪಕ್ಷತಾಕ್ಕೆ ಪರ್ವತವು ಆಶ್ರಯವಾಗುತ್ತದೆ. ಸಿದ್ಧಾಂತ ಲಕ್ಷಣವನ್ನು ಹೇಳಿ ಪ್ರಾಚೀನರ ಲಕ್ಷಣವನ್ನು ಖಂಡಿಸುತ್ತಾನೆ. 'ಸಿಷಾಧಯಿಷಾಮಾತ್ರಂ—' ಇತಿ. ಕೇವಲ ಅನುಮಾನಕರಣೇಚ್ಛೆಯೇ ಪಕ್ಷತಾ ಎಂದು ಕೆಲವು ಪ್ರಾಚೀನರ ಮತ. 'ಪರ್ವತೋ ವಹ್ನಿಮಾನ್' ಇತ್ಯಾದಿ ಸ್ಥಳದಲ್ಲಿ ಈ ಲಕ್ಷಣ ಸಂಭವಿಸಿದರೂ 'ಗಗನಂ—ಮೇಘವತ್—ಘನಗರ್ಜನಾತ್' ಎಂಬಲ್ಲಿ ಅವ್ಯಾಪ್ತಿ ಬರುತ್ತದೆ. ಒಬ್ಬನಿಗೆ ಮನೆಯಲ್ಲಿರುವಾಗ ಅನುಮಾನೇಚ್ಛಾರೂಪವಾದ ಸಿಷಾಧಯಿಷಾ ಉಂಟಾಗಿರುವುದಿಲ್ಲ. ಆಗ ಮೇಘಗರ್ಜನೆಯಾಗುತ್ತದೆ. ಅದನ್ನು ಕೇಳಿ ಆತನು ಹಿಂದೆ ಹೇಳಿದಂತೆ ಅನುಮಾನದಿಂದ ಅನುಮಿತಿ ಜ್ಞಾನ ಹೊಂದುತ್ತಾನೆ. ಹೀಗೆ ಇನ್ನು ಕೆಲವರು 'ಸಾಧ್ಯ ಸಂದೇಹಃ ಪಕ್ಷತಾ' ಎಂದು ಹೇಳುತ್ತಾರೆ. ಅದೂ ಯುಕ್ತವಲ್ಲ. ಹಿಂದಿನ ಸ್ಥಳದಲ್ಲಿ ಸಾಧ್ಯಸಂದೇಹ ಅವನಿಗೆ ಇಲ್ಲದಿದ್ದರೂ ಅನುಮಿತಿಯುಂಟಾದುದರಿಂದ ಸಮಂಜಸವಾಗುವುದಿಲ್ಲ.

ಅನುಮಿತಿಯ ಜ್ಞಾನವಲ್ಲಿ ಸಿಷಾಧಯಿಷಾ ಎಂಬುದು ಉತ್ತೇಜಕವಾಗುತ್ತದೆ. ಪ್ರತಿಬಂಧಕವಿದ್ದರೂ ಕಾರ್ಯವನ್ನು ಹುಟ್ಟಿಸಿಕೊಡುವುದೇ ಉತ್ತೇಜಕ. ಸಿಷಾಧಯಿಷಾವಿರಹ ವಿಶಿಷ್ಟಸಿದ್ಧಿಯು ಅನುಮಿತಿಗೆ ಪ್ರತಿಬಂಧಕ. ಕಾರ್ಯವಿಘಾತಕಕ್ಕೆ ಪ್ರತಿಬಂಧಕವೆಂದು ಹೆಸರು. ಸಿದ್ಧಿರೂಪ ಪ್ರತಿಬಂಧಕವಿದ್ದರೂ ಸಿಷಾಧಯಿಷಾರೂಪ ಉತ್ತೇಜಕವಿದ್ದರೆ ಪಕ್ಷತಾ ಬಂದಂತಾಗಿ ಅನುಮಿತಿ ಹುಟ್ಟುತ್ತದೆ. ಆದುದರಿಂದ ಸಿದ್ಧಿಯಲ್ಲಿ ಸಿಷಾಧಯಿಷಾವಿರಹವಿಶಿಷ್ಟತ್ವ (ವೈಶಿಷ್ಟ್ಯ) ವಿಶೇಷಣ ಹೇಳಿವೆ. ಆಗ ಸಿದ್ಧ್ಯಭಾವವು ವಿಶಿಷ್ಟಾಭಾವವಾಗುತ್ತದೆ, (ಪಕ್ಷತಾ ವಿಶಿಷ್ಟಾಭಾವರೂಪವಾಗುತ್ತದೆ.) ಇಲ್ಲಿ ಕೆಲವು ಕಡೆ ವಿಶೇಷಣಾಭಾವಪ್ರಯುಕ್ತವಿಶಿಷ್ಟಾಭಾವವೂ, ಕೆಲವು ಕಡೆ ವಿಶೇಷ್ಯಾಭಾವಪ್ರಯುಕ್ತ ವಿಶಿಷ್ಟಾಭಾವವೂ, ಇನ್ನು ಕೆಲವು ಕಡೆ ಉಭಯಾಭಾವಪ್ರಯುಕ್ತವಿಶಿಷ್ಟಾಭಾವವೂ ಸಂಭವಿಸುತ್ತದೆಂದು ತೋರಿಸುತ್ತಾನೆ. 'ತಥಾಚ—' ಇತಿ. ಪರ್ವತದಲ್ಲಿ ವಹ್ನಿಯ ಪ್ರತ್ಯಕ್ಷಜ್ಞಾನವೇ ಸಿದ್ಧಿ. ಚಾಕ್ಷುಷಪ್ರತ್ಯಕ್ಷವಾಗಿದ್ದರೂ 'ಪರ್ವತೇ ವಹ್ನಿವಿಷಯಕಾನುಮಿತಿರ್ಮೇ ಜಾಯತಾಮ್' ಎಂದು ಸಾಧ್ಯೇಚ್ಛಾ (ಸಿಷಾಧಯಿಷಾ) ಉಂಟಾದರೆ ಆಗ ಸಾಧ್ಯನಿಶ್ಚಯರೂಪಸಿದ್ಧಿಪ್ರತಿಬಂಧಕವಿದ್ದರೂ ಸಿಷಾಧಯಿಷಾರೂಪ ಉತ್ತೇಜಕವಿರುವುದರಿಂದ ಪಕ್ಷತಾ ಬರುತ್ತದೆ. ಇದರಿಂದ ಅನುಮಿತಿ ಬರಲು ತೊಂದರೆ ಇಲ್ಲ. ಸಿಷಾಧಯಿಷಾವಿರಹವಿಶಿಷ್ಟಸಿದ್ಧಿ ಮಾತ್ರ ಪ್ರತಿಬಂಧಕವಾಗುತ್ತದೆ. ಕೇವಲ ಸಿದ್ಧಿಯಲ್ಲ. ಇದರಿಂದಲೇ 'ಪ್ರತ್ಯಕ್ಷಸಿದ್ಧಮಪ್ಯರ್ಥಮನುಮಾನೇನ ಬುಭುತ್ಸಂತೇ ತರ್ಕರಸಿಕಾಃ' ಎಂಬ ಉಕ್ತಿ ಹಿಂದಿನಿಂದ ಬಂದಿದೆ.

'ಯತ್ರ—' ಇತಿ. ಎಲ್ಲಿ ಸಿದ್ಧಿ ಇಲ್ಲವೋ (ಪ್ರತ್ಯಕ್ಷಜ್ಞಾನ) ಸಿಷಾಧಯಿಷಾ

ಇದ್ದರೆ—ತದಭಾವರೂಪವಿಶೇಷಣ ವಿಲ್ಲದಿರುವುದರಿಂದಲೂ ವಿಶೇಷ್ಯ (ಸಿದ್ಧಿ) ವಿಲ್ಲದಿರುವುದರಿಂದ ಉಭಯಾಭಾವಪ್ರಯುಕ್ತವಿಶಿಷ್ಟಾಭಾವ ಬರುವುದರಿಂದ ಪಕ್ಷತಾ ಇದೆಯೆಂದು ತಿಳಿಯಬೇಕು. ಸಿದ್ಧಿಯೂ ಇಲ್ಲದೆ ಸಿಷಾಧಯಿಷಾ ಕೂಡಾ ಇಲ್ಲದಿದ್ದರೆ ವಿಶೇಷ್ಯಾಭಾವಪ್ರಯುಕ್ತವಿಶಿಷ್ಟಾಭಾವ ಬರುತ್ತದೆ. ಸಿದ್ಧಿರೂಪ ವಿಶೇಷ್ಯವಿರುವುದಿಲ್ಲ ವಿಶೇಷಣವಿದ್ದರೂ ವಿಶೇಷ್ಯವಿಲ್ಲವಾದುದರಿಂದ 'ಏಕಸತ್ವೇ—' ನ್ಯಾಯದಿಂದ ಉಭಯಾಭಾವಸಂಗತವಾಗುತ್ತದೆ. ಸಿಷಾಧಯಿಷಾ ಇರುವಾಗ ಸಿದ್ಧಿ ಇದ್ದರೆ ವಿಶೇಷಣಾಭಾವ ಪ್ರಯುಕ್ತವಿಶಿಷ್ಟಾಭಾವ ಬರುವುದರಿಂದ ಪಕ್ಷತಾ ಇರುತ್ತದೆ. (ಸಿಷಾಧಯಿಷಾಭಾವ ರೂಪ ವಿಶೇಷಣವಿರುವುದಿಲ್ಲ.) ಸಿಷಾಧಾಯಿಷಾ ಇರುವಾಗ ಸಿದ್ಧಿ ಇರದಿದ್ದರೆ ಉಭಯಾಭಾವಪ್ರಯುಕ್ತವಿಶಿಷ್ಟಾಭಾವ ಬರುವುದರಿಂದ ಪಕ್ಷತಾ ಬಂದು ಅನುಮಿತಿ ಜ್ಞಾನವುಂಟಾಗುತ್ತದೆ.

'ಯತ್ರ ಚ ಸಿದ್ಧಿರಸ್ತಿ—' ಇತಿ. ಸಿದ್ಧಿರೂಪ ಪ್ರತ್ಯಕ್ಷಜ್ಞಾನವಿರುವಾಗ ಉತ್ತೇಜಕವಾದ ಸಿಷಾಧಯಿಷಾ ಕೂಡಾ ಇಲ್ಲದಿದ್ದರೆ ಪ್ರತಿಬಂಧಕವೇ ಇದ್ದಂತಾಗಿ ಪಕ್ಷತಾ ಬರುವುದಿಲ್ಲ. ಸಿಷಾಧಯಿಷಾಭಾವದಿಂದ ಕೂಡಿದ ಸಿದ್ಧಿಯು ಪ್ರತಿಬಂಧಕವೆಂದು ಹಿಂದೆ ಹೇಳಿದೆ. ಹೀಗೆ ಪಕ್ಷತಾ ಬಂದರೆ ಅದರ ಮೂಲಕ ಅನುಮಿತಿಜ್ಞಾನ ಬರುತ್ತದೆ.

ನನು ಯತ್ರ ಪರಾಮರ್ಶಾನಂತರಂ ಸಿದ್ಧಿಸ್ತತಃ ಸಿಷಾಧಯಿಷಾ, ತತ್ರ ಸಿಷಾಧಯಿಷಾ ಕಾಲೇ ಪರಾಮರ್ಶನಾಶಾನ್ನಾನುಮಿತಿಃ। ಯತ್ರ ಸಿದ್ಧಿಪರಾಮರ್ಶಸಿಷಾಧಯಿಷಾಃ ಕ್ರಮೇಣ ಭವಂತಿ ತತ್ರ ಸಿಷಾಧಯಿಷಾಕಾಲೇ ಸಿದ್ಧೇರ್ನಾಶಾತ್ ಪ್ರತಿಬಂಧಕಾಭಾವಾದೇವಾನುಮಿತಿಃ! ಯತ್ರ ಸಿಷಾಧಯಷಾ ಸಿದ್ಧಿಪರಾಮರ್ಶಾಃ ಸಂತಿತತ್ರ ಪರಾಮರ್ಶಕಾಲೇ ಸಿಷಾಧಯಿಷೈವ ನಾಸ್ತಿ। ಏವಮನ್ಯತ್ರಾಪಿ ಸಿದ್ಧಿಕಾಲೇ ಪರಾಮರ್ಶಕಾಲೇ ಚ ನ ಸಿಷಾಧಯಿಷಾ, ಯೋಗ್ಯವಿಭುವಿಶೇಷಗುಣಾನಾಂ ಯೌಗಪದ್ಯ ನಿಷೇಧಾತ್, ತತ್‌ಕಥಂ ಸಿಷಾಧಯಿಷಾವಿರಹವಿಶಿಷ್ಟತ್ವಂ ಸಿದ್ಧೇ ರ್ವಿಶೇಷಣಮಿತಿ ಚೇನ್ನ, ಯತ್ರ ವಹ್ನಿವ್ಯಾಪ್ಯಧೂಮವಾನ್ ಪರ್ವತೋ ವಹ್ನಿ ಮಾನಿತಿ ಪ್ರತ್ಯಕ್ಷಂ ಸ್ಮರಣಂ ವಾ, ತತಃ ಸಿಷಾಧಯಿಷಾ ತತ್ರ ಪಕ್ಷತಾ ಸಂಪತ್ತಯೇ ತದ್ವಿಶೇಷಣಸ್ಯಾವಶ್ಯಕತ್ವಾತ್ ॥

ಪಕ್ಷತಾಲಕ್ಷಣದಲ್ಲಿ ಸಿಷಾಧಯಿಷಾವಿರಹವಿಶಿಷ್ಟತ್ವರೂಪ ವಿಶೇಷಣವು ಸಿದ್ಧಿಯಲ್ಲಿ ಹೇಳಿದೆ. ಇದು ವ್ಯರ್ಥವೆಂದು ಪೂರ್ವಪಕ್ಷಿಯು ಆಶಂಕಿಸುತ್ತಾನೆ. 'ನನು—' ಇತಿ. ಈ ವಿಶೇಷಣವಿಶೇಷ್ಯಗಳೆಲ್ಲಾ ಏಕಾಕಾಲಾವಚ್ಛೇದದಿಂದ ಏಕಾತ್ಮವೃತ್ತಿತ್ವಸಂಬಂಧದಿಂದ ಇದ್ದರೆ ಆಗ ಸಂಗತವಾಗುತ್ತವೆ. ಅನುಮಾನ ಮಾಡುವವನಲ್ಲ ಏಕಕಾಲದಲ್ಲಿ ಇವೆಲ್ಲಾ ಇರಬೇಕು. ಆದರೆ ಆತ್ಮನವಿಶೇಷಗುಣಗಳಾದ ಜ್ಞಾನಸುಖಾದಿಗಳು ಏಕಕಾಲದಲ್ಲಿ ಉಂಟಾಗುವುದಿಲ್ಲ. ಕ್ರಮವಾಗಿ ಅವು ಉಂಟಾಗುತ್ತವೆಂದು ನೈಯಾಯಿಕರ ಸಿದ್ಧಾಂತ. ಆದುದರಿಂದ ಆ ವಿಶೇಷಣ ವ್ಯರ್ಥವಾಗುತ್ತವೆ

ಪ್ರಥಮ ಕ್ಷಣದಲ್ಲಿ 'ವಹ್ನಿವ್ಯಾಪ್ಯಧೂಮವಾನಯಂ ಪರ್ವತಃ' ಎಂದು ಪರಾಮರ್ಶ ಇರುತ್ತದೆ. ಆಮೇಲೆ ಎರಡನೆಯ ಕ್ಷಣದಲ್ಲಿ ಪ್ರತ್ಯಕ್ಷ ನಿಶ್ಚಯಾತ್ಮಕವಾದ ಸಿದ್ಧಿಯುಂಟಾಗುತ್ತದೆ. ಸಿದ್ಧಿಯುಂಟಾಗಿ ಅದರ ಎರಡನೆಯ ಕ್ಷಣದಲ್ಲಿ ಸಿಷಾಧಯಿಷಾ ಬರುತ್ತದೆ. 'ತತ್ರ—' ಇತಿ. ಇಂತಹ ಸ್ಥಳದಲ್ಲಿ ಸಿಷಾಧಯಿಷಾ ಕಾಲದಲ್ಲಿ ಅನುಮಿತಿಗೆ ಕಾರಣವಾದ ಪರಾಮರ್ಶವೇ ಇಲ್ಲದಿರುವಾಗ (ವ್ಯಾಪ್ತಿಜ್ಞಾನದಲ್ಲಿ ಪರಾಮರ್ಶವು ವ್ಯಾಪಾರವಾಗಿರುತ್ತದೆ.) ಅನುಮಿತಿಯುಂಟಾಗುವುದಾದರೂಹೇಗೆ ? ಆ ಸಮಯದಲ್ಲಿ ಅದು ನಾಶ ಹೊಂದಿರುತ್ತದೆ.

'ಯತ್ರ ಸಿದ್ಧಿ—' ಇತಿ. ಪ್ರಥಮ ಕ್ಷಣದಲ್ಲಿ ಸಿದ್ಧಿ, ಅದರ ದ್ವಿತೀಯ ಕ್ಷಣದಲ್ಲಿ ಪರಾಮರ್ಶ. ಅದರ ಮೂರನೆಯ ಕ್ಷಣದಲ್ಲಿ ಸಿಷಾಧಯಿಷಾ ಹೀಗೆ ಕ್ರಮವಾಗಿ ಬಂದಾಗ ಸಿಷಾಧಯಿಷಾ ಕಾಲದಲ್ಲಿ ಸಿದ್ಧಿಯು ನಾಶವಾದುದರಿಂದ, ಸಿಷಾಧಯಿಷಾಭಾವವಿಶಿಷ್ಟಸಿದ್ಧಿರೂಪಪ್ರತಿಬಂಧಕವಿಲ್ಲದಿರುವುದರಿಂದಲೇ ಅನುಮಿತಿ ಬರುತ್ತದೆ.

'ಯತ್ರ ಸಿಷಾ—' ಪ್ರಥಮಕ್ಷಣದಲ್ಲಿ ಸಿಷಾಧಯಿಷಾ, ದ್ವಿತೀಯ ಕ್ಷಣದಲ್ಲಿ ಪರಾಮರ್ಶ, ತೃತೀಯ ಕ್ಷಣದಲ್ಲಿ ಸಿದ್ಧಿಜ್ಞಾನ, ಬಂದಾಗ ಸಿದ್ಧಿಕಾಲದಲ್ಲಿ ಸಿಷಾಧಯಿಷಾ ಎಂಬುದೇ ಇಲ್ಲದಿರುವುದರಿಂದ ಅನುಮಿತಿ ಹುಟ್ಟುವುದಿಲ್ಲ. ಹೀಗೆ ಸಿದ್ಧಿಕಾಲದಲ್ಲಿಯಾಗಲೀ, ಪರಾಮರ್ಶಕಾಲದಲ್ಲಾಗಲೀ ಸಿಷಾಧಯಿಷಾ ಎಂಬುದೇ ಸಂಭವಿಸದಿರುವುದರಿಂದ ಅದರ ಅಭಾವವೈಶಿಷ್ಟ್ಯವನ್ನು ಸಿದ್ಧಿಯಲ್ಲಿ ಕೊಟ್ಟದ್ದು ವ್ಯರ್ಥವಾಗುತ್ತದೆ. ಕೇವಲ 'ಸಿದ್ಧ್ಯಭಾವಃ' ಪಕ್ಷತಾ ಎಂದರೆ ಸಾಕಾಗುತ್ತದೆ. ಏಕೆಂದರೆ ಪ್ರತ್ಯಕ್ಷಯೋಗ್ಯಗಳಾದ ವಿಭುಗಳಲ್ಲಿರುವ ಜ್ಞಾನಾದಿ ವಿಶೇಷಗುಣಗಳು ಯಾವಾಗಲೂ ಏಕಕಾಲಾವಚ್ಛೇದದಿಂದ (ಒಂದೇ ಕಾಲದಲ್ಲಿ) ಹುಟ್ಟುವುದಿಲ್ಲವೆಂಬುದು ಪ್ರಸಿದ್ಧವಾಗಿವೆ. (ಇದೇ 'ಯೋಗ್ಯ—' ಇತ್ಯಾದಿಗಳಿಂದ ಹೇಳಿದೆ.) ಹೀಗೆ ಪೂರ್ವಪಕ್ಷಿಯು ಆಕ್ಷೇಪಿಸಿದರೆ ಅದಕ್ಕೆ ಸಿದ್ಧಾಂತಿಯು ಸಮಾಧಾನ ತೋರಿಸುತ್ತಾನೆ. 'ನ—' ಇತಿ.

'ಯತ್ರ—' ಯಾವ ಅನುಮಾನ ಮಾಡುವ ಆತ್ಮನಲ್ಲಿ 'ವಹ್ನಿವ್ಯಾಪ್ಯಧೂಮವಾನಯಂ ಪರ್ವತಃ ವಹ್ನಿಮಾನ್' ಎಂಬ ಪರಾಮರ್ಶ ಘಟಿತ ಸಿದ್ಧಿಯು ಪ್ರಥಮ ಕ್ಷಣದಲ್ಲಿ ಉಂಟಾಗುತ್ತದೆ. (ಅದು ಪ್ರತ್ಯಕ್ಷವಾಗಿರಲಿ, ಅಥವಾ ಸ್ಮರಣಾತ್ಮಕವಾಗಿರಲಿ.) ದ್ವಿತೀಯ ಕ್ಷಣದಲ್ಲಿ 'ಪರ್ವತೇ ವಹ್ನ್ಯನುಮಿತಿರ್ಮೇ ಜಾಯತಾಮ್' ಎಂಬ ಸಿಷಾಧಯಿಷಾ ಹುಟ್ಟುತ್ತದೆ. ಇಂತಹ ಸ್ಥಳದಲ್ಲಿ ಅಂದರೆ ಅನುಮಿತ್ಯವ್ಯವಹಿತ ಪೂರ್ವಕ್ಷಣದಲ್ಲಿ ಸಿಷಾಧಯಿಷಾ ಇರುವಾಗ ಪಕ್ಷತಾಲಕ್ಷಣ ಸಿದ್ಧಿಸಲು 'ಸಿಷಾಧಯಿಷಾವಿರಹವಿಶಿಷ್ಟತ್ವವಿಶೇಷಣವನ್ನು ಸಿದ್ಧಿಯಲ್ಲಿ ಹೇಳಬೇಕಾಗುತ್ತದೆ. ತೃತೀಯಕ್ಷಣದಲ್ಲಿ ಅನುಮಿತಿಯುಂಟಾಗುವುದು ಇಷ್ಟವಾದುದರಿಂದ ದ್ವಿತೀಯಕ್ಷಣದಲ್ಲಿ ಸಿದ್ಧಿನಾಶವಾಗಿರುವುದಿಲ್ಲ. ಪ್ರತಿಬಂಧಕವಿದ್ದಂತಾಗುತ್ತದೆ. ಪ್ರತಿಬಂಧಕ ನಿವೃತ್ತಿಗೋಸ್ಕರ ಈ ವಿಶೇಷಣವನ್ನು ಕೊಡಬೇಕು. ಹಾಗೆ ವಿಶೇಷಣ ಹೇಳದಿದ್ದರೆ ಪ್ರತಿಬಂಧಕವಿರುವುದರಿಂದ ಅನುಮಿತಿ ಹುಟ್ಟಲಾರದು. ಪೂರ್ವಪಕ್ಷಿಯ ಮತದಂತೆ ಇಲ್ಲಿ ಕೇವಲ ಸಿದ್ಧ್ಯಭಾವವಿರುವುದಿಲ್ಲ.

ಸಿದ್ಧ್ಯಾತ್ಮಕ ಪರಾಮರ್ಶವಿರುತ್ತದೆ. ದ್ವಿತೀಯಕ್ಷಣದಲ್ಲಿ ಸಿಷಾಧಯಿಷಾರೂಪ ಉತ್ತೇಜಕವಿದ್ದರೆ ಅದೇ ಪರಾಮರ್ಶತ್ವೇನ ಕಾರಣವಾಗುತ್ತದೆ. ಸಿಷಾಧಯಿಷಾ ಇಲ್ಲದಿದ್ದರೆ. ಅದೇ ಸಿದ್ಧಿ ರೂಪದಿಂದ ಪ್ರತಿಬಂಧಕವಾಗುತ್ತದೆ. ಆದುದರಿಂದ ಪರಾಮರ್ಶಘಟಿತ ಸಿದ್ಧಿ ಮೊದಲನೆಯ ಕ್ಷಣದಲ್ಲಿದ್ದು, ತೃತೀಯ ಕ್ಷಣದಲ್ಲಿ ಅನುಮಿತಿಯುಂಟಾಗಲ ದ್ವಿತೀಯ ಕ್ಷಣದಲ್ಲಿ ಪಕ್ಷತಾ ಸಿದ್ಧಿಸಲು ವಿಶೇಷಣ ಕೊಟ್ಟದ್ದಕ್ಕೆ ಸಾರ್ಥಕ್ಯ ಬರುತ್ತದೆ. ಆಗ ಸಿಷಾಧಯಿಷಾವಿರಹವಿಶಿಷ್ಟಸಿದ್ಧ್ಯಭಾವರೂಪ ಪಕ್ಷತಾ ದ್ವಿತೀಯ ಕ್ಷಣದಲ್ಲಿ ಸಿಷಾಧಯಿಷಾ ಇರುವುದರಿಂದ ಯಾವ ದೋಷವೂ ಬರುವುದಿಲ್ಲ.

ಅತ್ರೇದಂ ಬೋಧ್ಯಮ್ । ಯಾದೃಶಯಾದೃಶಸಿಷಾಧಯಿಷಾಸತ್ತ್ವೇಸಿದ್ಧಿಸತ್ತ್ವೇ ಯಲ್ಲಿಂಗಕಾಽನುಮಿತಿಸ್ತಾತ್ತಾದೃಶತಾದೃಶಸಿಷಾಧಯಿಷಾವಿರಹವಿಶಿಷ್ಟಸಿದ್ಧ್ಯಭಾವಸ್ತಲ್ಲಿಂಗಕಾಽನುಮಿತೌ ಪಕ್ಷತಾ । ತೇನ ಸಿದ್ಧಿಪರಾಮರ್ಶಸತ್ತ್ವೇಽಪಿಯತ್ ಕಿಂಚಿತ್ ಜ್ಞಾನಂ ಮೇ ಜಾಯತಾಮಿತೀಚ್ಛಾಯಾಮಪಿ ನಾನುಮಿತಿಃ । ವಹ್ನಿವ್ಯಾಪ್ಯಧೂಮವಾನ್ ಪರ್ವತೋ ವಹ್ನಿಮಾನಿತಿ ಪ್ರತ್ಯಕ್ಷಸತ್ತ್ವೇ ಪ್ರತ್ಯಕ್ಷಾತಿರಿಕ್ತಂ ವಹ್ನಿಜ್ಞಾನಂ ಮೇ ಜಾಯತಾಮಿತೀಚ್ಛಾಯಾಂ ತು ಭವತ್ಯೇವ ॥

ಸಿಷಾಧಯಿಷಾ ಪದದಿಂದ ಅಭಿಮತವಾದ ಅರ್ಥವನ್ನು ತೋರಿಸುತ್ತಾನೆ. 'ಯಾದೃಶ—' ಇತಿ. 'ಪರ್ವತೇ ವಹ್ನಿಮನುಮಿನುಯಾಮ್' ಎಂಬ ಸಿಷಾಧಯಿಷಾ ಇರುವಾಗ, ಯಲ್ಲಿಂಗಕಾನುಮಿತಿಃ—ಧೂಮಲಿಂಗಕಾನುಮಿತಿಯು (ಉಂಟಾಗುತ್ತದೆ. 'ತಾದೃಶ—ಇತಿ. ತತ್ತದ್ರೂಪದಿಂದ ಕೂಡಿದ ಅನುಮಿತ್ಸಾಭಾವವಿಶಿಷ್ಟ (ಪ್ರತ್ಯಕ್ಷ ನಿಶ್ಚಯಾತ್ಮಕ) ಸಿದ್ಧ್ಯಭಾವವು, ತಲ್ಲಿಂಗಕಾನುಮಿತೌ—ಧೂಮಹೇತುಕಾನುಮಿತಿಯಲ್ಲಿ ಪಕ್ಷತಾ ಆಗುತ್ತದೆ. ವಿಶೇಷ್ಯತಾಸಂಬಂಧದಿಂದ ಆಪಕ್ಷತಾದಿಂದ ಕೂಡಿರುವುದು ಪಕ್ಷ. ವಹ್ನಿವ್ಯಾಪ್ಯಧೂಮವಾನಯಂ ಪರ್ವತೋ ವಹ್ನಿಮಾನ್' ಎಂಬ ಸಿದ್ಧ್ಯಾತ್ಮಕಪರಾಮರ್ಶವಿರುವಾಗ ಯತ್ಕಿಂಚಿತ್ ಜ್ಞಾನಂ ಮೇ ಜಾಯತಾಮ್' (ಯಾವುದಾದರೊಂದು ಜ್ಞಾನಂ ವುಂಟಾಗಲಿ) ಎಂಬ ಇಚ್ಛಾ ಉಂಟಾದರೆ ಆಗ ವಹ್ನ್ಯನುಮಿತಿ ಬರುವುದಿಲ್ಲ. ಆ ರೀತಿ ಪರಾಮರ್ಶ ಮೊದಲನೆಯ ಕ್ಷಣದಲ್ಲಿದ್ದು ಎರಡನೆಯ ಕ್ಷಣದಲ್ಲಿ 'ಪ್ರತ್ಯಕ್ಷಭಿನ್ನಂ ವಹ್ನಿಜ್ಞಾನಮೇ ಜಾಯತಾಂ' ಎಂಬ ಇಚ್ಛೆ ಉಂಟಾದರೆ ಆಗ ಮೂರನೆಯ ಕ್ಷಣದಲ್ಲಿ ವಹ್ನ್ಯನುಮಿತಿ ಬರುತ್ತದೆ. ಪ್ರತ್ಯಕ್ಷಾತಿರಿಕ್ತವಹ್ನ್ಯನುಮಿತಿಜ್ಞಾನದಲ್ಲಿ ಆ ರೀತಿಯಾದ ಇಚ್ಛೆಯೇ ಉತ್ತೇಜಕವಾಗುತ್ತದೆ. ಇಚ್ಛೆಯಲ್ಲಿ ಯತ್ಕಿಂಚಿತ್ ಜ್ಞಾನವಿಷಯಕತ್ವವಿದ್ದರೆ ಅದು ಉತ್ತೇಜಕವಾಗುವುದಿಲ್ಲ 'ತೇನ—' ಇತಿ. ಹೀಗೆ ತತ್ತದ್ವ್ಯಕ್ತಿರೂಪದಿಂದಲೇ ಇಚ್ಛೆಯು ಉತ್ತೇಜಕವಾಗುವುದರಿಂದ ಎಂದರ್ಥ. ಯತ್ಕಿಂಚಿತ್ ಜ್ಞಾನವೆಂದರೆ ಪರ್ವತವಿಶೇಷ್ಯಕಪಟಪ್ರಕಾರಕಜ್ಞಾನ ಅಥವಾ ಪರ್ವತವಿಶೇಷ್ಯಕಘಟಪ್ರಕಾರಕಜ್ಞಾನ. ಏತದ್ವಿಷಯಕೇಚ್ಛಾ ಉತ್ತೇಜಕವಾಗುವುದಿಲ್ಲ. ಪರ್ವತವಿಶೇಷ್ಯಕವಹ್ನಿಪ್ರಕಾರಕಜ್ಞಾನ

ವಿಷಯಕೇಚ್ಛೆಯೇ ಪರ್ವತವಿಶೇಷ್ಯಕವಹ್ನಿ ಪ್ರಕಾರಕ ಅನುಮಿತಿಯಲ್ಲಿ ಉತ್ತೇಜಕವಾಗುತ್ತದೆ.

ಏವಂ ಧೂಮಪರಾಮರ್ಶಸತ್ತ್ವೇ ಆಲೋಕೇನ ವಹ್ನಿಮನುಮಿನುಯಾಮಿತೀಚ್ಛಾಯಾಮಪಿ ನಾನು ಮಿತಿಃ । ಸಿಷಾಧಯಿಷಾವಿರಹಕಾಲೇ ಯಾದೃಶಸಿದ್ಧಿಸತ್ತ್ವೇ ನಾನುಮಿತಿಃ, ತಾದೃಶೀಸಿದ್ಧಿರ್ವಿಶಿಷ್ಯೈವ ತತ್ತದನುಮಿತೌಪ್ರತಿಬಂಧಿಕಾ ವಕ್ತವ್ಯಾ ತೇನ ಪರ್ವತಸ್ತೇಜಸ್ವೀ ಪಾಷಾಣಮಯೋವಹ್ನಿಮಾನಿತಿ ಜ್ಞಾನಸತ್ತ್ವೇಽಪ್ಯನುಮಿತೇರ್ನ ವಿರೋಧಃ ॥

ಸಿದ್ಧ್ಯಾತ್ಮಕಪರಾಮರ್ಶವಿರುವಾಗ ಯಾವುದೋ ಜ್ಞಾನೇಚ್ಛೆ ಇರಬಾರದು. ತತ್ಪಕ್ಷಕ, ತತ್ಸಾಧ್ಯಕ, ತದ್ಧೇತುಕ ಜ್ಞಾನವಿಷಯಕೇಚ್ಛೆಯೇ ಇರಬೇಕೆಂದುದರಿಂದ ಉಂಟಾದ ಫಲವನ್ನು ತೋರಿಸುತ್ತಾನೆ. 'ಏವಂ—' ಇತಿ. ಪ್ರಸಿದ್ಧಧೂಮಹೇತುಕಾನುಮಾನ ಸ್ಥಳದಲ್ಲಿ 'ವಹ್ನಿವ್ಯಾಪ್ಯಧೂಮವಾನ್ ಪರ್ವತೋ ವಹ್ನಿಮಾನ್' ಎಂಬ ಸಿದ್ಧ್ಯಾತ್ಮಕ ಪರಾಮರ್ಶ ಬಂದು ಅದರ ದ್ವಿತೀಯಕ್ಷಣದಲ್ಲಿ 'ಆಲೋಲೇಕೇನ ಹೇತುನಾ ಮನುಮಾನುಮಿತಿರ್ಜಾಯತಾಮ್' ಎಂಬ ಇಚ್ಛೆಯುಂಟಾದರೂ ಅನುಮಿತಿ ಬರುವುದಿಲ್ಲ. ಪರಾಮರ್ಶವು ಧೂಮಹೇತುಕವಾಗಿ ಬಂದುದರಿಂದ ಮುಂದೆ ಬಂದ ಇಚ್ಛೆಯು ಆಲೋಕ ಹೇತುಕವಾದುದರಿಂದ ಭಿನ್ನಭಿನ್ನ ವಿಷಯಕವಾಗುತ್ತದೆ. ಯಲ್ಲಿಂಗಪರಾಮರ್ಶವೋ ತಲ್ಲಿಂಗಕೇಚ್ಛೆಯಿದ್ದರೆ ಉತ್ತೇಜಕವಾಗುವುದು.

ಸಿದ್ಧ್ಯನುಮಿತಿಗಳಿಗೆ ಪ್ರತಿಬಧ್ಯಪ್ರತಿಬಂಧಕಭಾವ ಹೇಗಿರಬೇಕೆಂದು ತೋರಿಸುತ್ತಾನೆ. 'ಸಿಷಾಧಯಿಷಾ—' ಇತಿ. ಅನುಮಿತ್ಸಾ ಇಲ್ಲದಿದುವಾಗ ಯಾವ ಸಿದ್ಧಿ ಇರುವಾಗ (ಯದ್ರೂಪಾವಚ್ಛಿನ್ನನಿಶ್ಚಯಾತ್ಮಕಜ್ಞಾನ.) ಅನುಮಿತಿ ಹುಟ್ಟುವುದಿಲ್ಲವೋ, ತಾದೃಶ ಸಿದ್ಧಿಯೆಂದರೆ ತದ್ರೂಪಾವಚ್ಛಿನ್ನಪ್ರತ್ಯಕ್ಷಾದಿನಿಶ್ಚಯಾತ್ಮಕಜ್ಞಾನವು, ವಿಶಿಷ್ಯೈವ–ಬೇರೆ ಬೇರೆಯಾಗಿ, ತತ್ತದನುಮಿತೌ—ತತ್ತತ್ಸಾಧ್ಯಕಾನುಮಿತಿವ್ಯಕ್ತಿಯಲ್ಲಿ ಪ್ರತಿಬಂಧಕವಾಗುತ್ತದೆಂದು ಹೇಳಬೇಕು. 'ಪರ್ವತೋ ವಹ್ನಿಮಾನ್' ಎಂಬ ಅನುಮಿತಿಯಲ್ಲಿ ಪರ್ವತತ್ವಾವಚ್ಛಿನ್ನವಿಶೇಷ್ಯತಾನಿರೂಪಿತ ವಹ್ನಿತ್ವಾವಚ್ಛಿನ್ನ ಪ್ರಕಾರತಾಶಾಲಿ ನಿಶ್ಚಯತ್ವ ರೂಪದಿಂದ ಸಿದ್ಧಿಜ್ಞಾನವು ಪ್ರತಿಬಂಧಕವಾಗುತ್ತದೆ. ಇತರ ವಿಶೇಷ್ಯಕ ಇತರ ಪ್ರಕಾರಕ ವಾಗಿದ್ದರೆ ಪ್ರತಿಬಂಧಕವಾಗುವುದಿಲ್ಲ. 'ತೇನ—' ಹೀಗೆ ವಿಶಿಷ್ಯಪ್ರತಿಬಂಧಕ ಹೇಳಿರುವುದರಿಂದ 'ಪರ್ವತೋ ವಹ್ನಿಮಾನ್' ಎಂಬ ಅನುಮಿತಿಯ ಪೂರ್ವಕ್ಷಣದಲ್ಲಿ 'ಪರ್ವತಸ್ತೇಜಸ್ವೀ', ಅಥವಾ 'ಪಾಷಾಣಮಯಃ ವಹ್ನಿಮಾನ್' ಎಂಬ ಸಿದ್ಧ್ಯಾತ್ಮಕಜ್ಞಾನವಿದ್ದರೂ ಅದು ಪೂರ್ವೋಕ್ತಾನುಮಿತಿಗೆ ಪ್ರತಿಬಂಧಕವಾಗುವುದಿಲ್ಲ. 'ತದ್ವಿಶೇಷ್ಯಕ ತತ್ಪ್ರಕಾರಕಾನುಮಿತಿಯನ್ನು ಕುರಿತು ತದ್ವಿಶೇಷ್ಯಕತತ್ಪ್ರಕಾರಕ ಸಿದ್ಧಿ ಜ್ಞಾನವೇ ಪ್ರತಿಬಂಧಕವಾಗುತ್ತದೆಂದು ನಿಯಮ ಹೇಳಿರುವುದರಿಂದ ಪರ್ವತಃ ತೇಜಸ್ವೀ' ಎಂಬಲ್ಲಿ ಪರ್ವತವಿಶೇಷ್ಯಕತ್ವವಿದ್ದರೂ (ಪರ್ವತತ್ವಾವಚ್ಛಿನ್ನವಿಶೇಷ್ಯತಾನಿರೂಪಕತ್ವಂ) ವಹ್ನಿ

ಪ್ರಕಾರಕತ್ವವಿಲ್ಲ. (ವಹ್ನಿತ್ವಾವಚ್ಛಿನ್ನಪ್ರಕಾರತಾನಿರೂಪಕ ಜ್ಞಾನವಾಗಲಿಲ್ಲ.) ಪಾಷಾಣಮಯೋವಹ್ನಿಮಾನ್' ಎಂಬಲ್ಲಿ ವಹ್ನಿತ್ವಾವಚ್ಛಿನ್ನಪ್ರಕಾರತಾಕತ್ವವಿದ್ದರೂ ಪರ್ವತತ್ವಾವಚ್ಛಿನ್ನವಿಶೇಷ್ಯತಾನಿರೂಪಕವಾಗಲಿಲ್ಲ. (ಪಾಷಾಣಮಯತ್ವಾವಚ್ಛಿನ್ನ ವಿಶೇಷ್ಯತಾನಿರೂಪಿತವಾಗಿರುತ್ತದೆ.) ಆದುದರಿಂದ ಪ್ರತಿಬಂಧಕವಾಗುವುದಿಲ್ಲ.

ಪರಂತು–ಪಕ್ಷತಾವಚ್ಛೇದಕಸಾಮಾನಾಧಿಕರಣ್ಯೇನ ಸಾಧ್ಯಸಿದ್ಧಾವಪಿ ತದವಚ್ಛೇದೇನ ಅನುಮಿತಿದರ್ಶನಾತ್ ಪಕ್ಷತಾವಚ್ಛೇದಕಾವಚ್ಛೇದೇನ ಅನುಮಿತಿಂ ಪ್ರತಿ ಪಕ್ಷತಾವಚ್ಛೇದಕಾವಚ್ಛೇದೇನ ಸಾಧ್ಯಸಿದ್ಧೇರೇವ ಪ್ರತಿಬಂಧಿಕಾ, ಪಕ್ಷತಾವಚ್ಛೇದಕಸಾಮಾನಾಧಿಕರಣ್ಯೇನಾನುಮಿತಿಂ ಪ್ರತಿ ತು ಸಿದ್ಧಿಮಾತ್ರಂ ವಿರೋಧಿ ॥

ಸಿದ್ಧ್ಯನುಮಿತಿಗಳಿಗೆ ಪ್ರತಿಬಂಧ್ಯಪ್ರತಿಬಧಕಭಾವವಿಷಯವಲ್ಲಿ ಇನ್ನೂ ತಿಳಿಯಬೇಕಾದ ವಿಷಯವನ್ನು ತೋರಿಸುತ್ತಾನೆ. 'ಪರಂತು—' ಇತಿ. ಪಕ್ಷತಾವಚ್ಛೇದಕಸಾಮಾನಾಧಿಕರಣ್ಯೇನ—ಯಾವುದಾದರೊಂದು ಪರ್ವತದಲ್ಲಿ ವಹ್ನಿರೂಪ ಸಾಧ್ಯದ ಸಿದ್ಧಿಯು (ಸಾಧ್ಯವಿಷಯಕಪ್ರತ್ಯಕ್ಷಜ್ಞಾನ) ಬಂದಿದ್ದರೆ, 'ತದವಚ್ಛೇದೇನ ಅನುಮಿತಿದರ್ಶನಾತ್—ಪಕ್ಷತಾವಚ್ಛೇದಕಾವಚ್ಛೇದದಿಂದ (ಪಕ್ಷಮಾತ್ರವನ್ನು ವಿಷಯೀಕರಿಸುವ) ಅಂದರೆ ಪಕ್ಷತಾತ್ವಾವಚ್ಛೇದದಿಂದ, 'ಪರ್ವತೋವಹ್ನಿಮಾನ್' ಎಂಬ ಅನುಮಿತಿ ರೂಪ ಪ್ರಮಾಜ್ಞಾನವುಂಟಾಗುವುದರಿಂದ, (ಪಕ್ಷದ ಏಕದೇಶದಲ್ಲಿ ಬಂದಿರುವ ವಹ್ನಿನಿಶ್ಚಯವು ಎಲ್ಲಾ ಪಕ್ಷಗಳಲ್ಲಿ ಮಾಡಬಹುದಾದ ಅನುಮಿತಿಗೆ ಪ್ರತಿಬಂಧಕವಾಗದಿರುವುದರಿಂದ) 'ಪಕ್ಷತಾವಚ್ಛೇದಕಾವಚ್ಛೇದೇನ ಅನುಮಿತಿಂ ಪ್ರತಿ— ಯಾವತ್‌ಪಕ್ಷತಾವಚ್ಛೇದದಿಂದ ಅನುಮಿತಿಯನ್ನು ಕುರಿತು (ಎಲ್ಲಾ ಪಕ್ಷಗಳ ವಿಶೇಷ್ಯವಾಗಿತೋರುವ ಅನುಮಿತಿಜ್ಞಾನದಲ್ಲಿ, ಪಕ್ಷತಾವಚ್ಛೇದಕಾವಚ್ಛೇದೇನ—ಯಾವತ್‌ಪಕ್ಷಗಳಲ್ಲಿರುವ (ಸಕಲಪಕ್ಷಗಳಲ್ಲಿ) ಸಾಧ್ಯಸಿದ್ಧಿರೇವ ಪ್ರತಿ ಬಂಧಿಕಾ—ಪ್ರತ್ಯಕ್ಷರೂಪವಾದ ಸಾಧ್ಯನಿಶ್ಚಯವು ಪ್ರತಿಬಂಧಕವಾಗುತ್ತದೆ. ಪಕ್ಷತಾವಚ್ಛೇದಕ ಸಾಮಾನಾಧಿಕರಣ್ಯೇನ—ಪಕ್ಷೈಕವ್ಯಕ್ತಿಗತತ್ವೇನ (ಒಂದು ಪಕ್ಷವಿಶೇಷ್ಯಕವಾದ) ಅನುಮಿತಿಯನ್ನು ಕುರಿತು ಸಿದ್ಧಿಮಾತ್ರಂ—ಏಕಪಕ್ಷವ್ಯಕ್ತಿಗತವಾದ, ಅಥವಾ ಯಾವತ್ಪಕ್ಷಗತವಾದ ಸಾಧ್ಯನಿಶ್ಚಯವು ಪ್ರತಿಬಂಧಕವಾಗುತ್ತದೆ.

ಹೇತುವಿನಲ್ಲಿ ಸಾಧ್ಯದವ್ಯಾಪ್ತಿ ಮೂಲಕವಾಗುವ ನಿಶ್ಚಯ ಅಂದರೆ ಸಾಧ್ಯನಿಶ್ಚಯನೇ ಸಿದ್ಧಿಯಾಗುತ್ತದೆ. ಇದು ಅನುಮಿತಿಗೆ ಪ್ರತಿಬಂಧಕವಾಗುತ್ತದೆ. ಆದರೆ ಎಲ್ಲಿ ಸಾಧ್ಯಾನುಮಾನಮಾಡುತ್ತೇವೋ, ಅಲ್ಲಿರುವ ಅಥವಾ ಅದಕ್ಕಿಂತಲೂ ಅಧಿಕ ದೇಶದಲ್ಲಿರುವ ಸಾಧ್ಯನಿಶ್ಚಯವೇ ಅನುಮಿತಿಗೆ ಪ್ರತಿಬಂಧಕವಾಗುವುದು. ಎಂದೂ ಅದಕ್ಕಿಂತ ಕಡಿಮೆ ದೇಶದಲ್ಲಿರುವ ಸಾಧ್ಯನಿಶ್ಚಯ ಪ್ರತಿಬಂಧಕವಾಗುವುದಿಲ್ಲ. ಯಾವುದಾದರೊಂದು ಪರ್ವತದಲ್ಲಿ ವಹ್ನ್ಯನುಮಿತಿಯುಂಟಾಗಬೇಕಾದರೆ ಆಗ ಪರ್ವತದಲ್ಲಿರುವ ವಹ್ನಿನಿಶ್ಚಯ, ಅಥವಾ ಪರ್ವತ ಮಾತ್ರವೃತ್ತಿ (ಸಕಲಪರ್ವತದಲ್ಲಿರುವ) ವಹ್ನಿ

ನಿಶ್ಚಯವು ಅನುಮಿತಿಗೆ ಪ್ರತಿಬಂಧಕವಾಗುತ್ತದೆ. ಯಾವಾಗ ಸಕಲಪರ್ವತಗಳಲ್ಲಿ ವಹ್ನ್ಯನುಮಾನ ಬರಬೇಕೆಂದಿದ್ದರೆ ಆಗ ಸಕಲಪರ್ವತಗಳಲ್ಲಿರುವ ವಹ್ನಿನಿಶ್ಚಯವು ಪರ್ವತಮಾತ್ರದಲ್ಲಿಉಂಟಾಗುವ ವಹ್ನ್ಯನುಮಿತಿಗೆ ಪ್ರತಿಬಂಧಕವಾಗುತ್ತದೆ. ಆಗ ಒಂದು ಪರ್ವತದಲ್ಲಿ ಮಾತ್ರ ವಹ್ನಿನಿಶ್ಚಯ ಬಂದಿದ್ದರೆ ಪ್ರತಿಬಂಧಕವಾಗುವುದಿಲ್ಲ. ಇದು ಪರ್ವತಮಾತ್ರವೃತ್ತ್ಯನುಮಿತ್ಯಪೇಕ್ಷೆಯಿಂದ ನ್ಯೂನದೇಶವೃತ್ತಿಯಾಗಿರುತ್ತದೆ. ಪಕ್ಷತಾವಚ್ಛೇದಕಸಾಮಾನಾಧಿಕರಣ್ಯೇನ ವಹ್ನ್ಯನುಮಿತಿಯೆಂದರೆ ಪಕ್ಷತಾವಚ್ಛೇದಕವಾದ ಪರ್ವತತ್ವದಿಂದ ಕೂಡಿದ ಯಾವುದಾದರೊಂದು ಪರ್ವತದಲ್ಲಿ ವಹ್ನ್ಯನುಮಿತಿಯೆಂದರ್ಥ. ಪಕ್ಷತಾವಚ್ಛೇದೇನ ವಹ್ನ್ಯನುಮಿತಿಯೆಂದರೆ ಪರ್ವತತ್ವಧರ್ಮದಿಂದ ಕೂಡಿದ ಸಕಲ ಪರ್ವತಗಳಲ್ಲಿಯೂ ಆಗುವ ವಹ್ನ್ಯನುಮಿತಿಯೆಂದರ್ಥ.

ಇದಂ ತು ಬೋಧ್ಯಮ್ । ಯತ್ರಾಯಂ ಪುರುಷೋ ನವಾ ಇತಿ ಸಂಶಯಾನಂತರಂ ಪುರುಷತ್ವವ್ಯಾಪ್ಯಕರಾದಿಮಾನಯಮಿತಿಜ್ಞಾನಂ ತತ್ರಾಽಸತ್ಯಾಮನುಮಿತ್ಸಾಯಾಂ ಪುರುಷಸ್ಯ ಪ್ರತ್ಯಕ್ಷಂ ಭವತಿ, ನತ್ವನುಮಿತಿರತೋಽನುಮಿತ್ಸಾವಿರಹವಿಶಿಷ್ಟಸಮಾನವಿಷಯಕಪ್ರತ್ಯಕ್ಷಸಾಮಗ್ರೀ ಕಾಮಿನೀಜಿಜ್ಞಾಸಾದಿವತ್ ಸ್ವಾತಂತ್ರ್ಯೇಣ ಪ್ರತಿಬಂಧಿಕಾ । ಏವಂ ಪರಾಮರ್ಶಾನಂತರಂ ವಿನಾಪಿಪ್ರತ್ಯಕ್ಷೇಚ್ಛಾಂ ಪಕ್ಷದೇಃ ಪ್ರತ್ಯಕ್ಷಾನುತ್ಪತ್ತೇಃ ಪ್ರತ್ಯಕ್ಷೇಚ್ಛಾವಿರಹವಿಶಿಷ್ಟಾನುಮಿತಿಸಾಮಗ್ರೀ ಭಿನ್ನವಿಷಯಕಪ್ರತ್ಯಕ್ಷೇ ಪ್ರತಿಬಂಧಿಕಾ ॥ ೭೦ ॥

ಉಪಾಧ್ಯಾಯಮತವನ್ನು ಖಂಡಿಸಲು ತನ್ನ ಸಿದ್ಧಾಂತವನ್ನು ತೋರಿಸುತ್ತಾನೆ. 'ಇದಂತು—' ಇತಿ. 'ಸಿಷಾಧಯಿಷಾವಿರಹವಿಶಿಷ್ಟಸಿದ್ಧಿಪ್ರತ್ಯಕ್ಷಸಾಮಗ್ರ್ಯೋರನ್ಯತರಸ್ಯಾಭಾವಃ ಪಕ್ಷತಾ' ಎಂದು ಉಪಾಧ್ಯಾಯಮತ. ಪಕ್ಷತಾಶರೀರದಲ್ಲಿ ಪ್ರತ್ಯಕ್ಷಸಾಮಗ್ರಿಯನ್ನು ಸೇರಿಸದಿದ್ದರೂ ಅನುಮಿತ್ಯಾಪತ್ತಿ ಬರುವುದಿಲ್ಲವೆಂದು ವಿಶದಪಡಿಸುತ್ತಾನೆ: 'ಯತ್ರ—' ಇತಿ. ಯತ್ರ—ಅಂಧಕಾರಾದಿದೋಷವಶದಿಂದ ಯಾವ ಪ್ರಮಾತೃಪುರುಷನಿಗೆ 'ಅಯಂ ಪುರುಷೋ ನವಾ' ಎಂಬ ಸಂಶಯವುಂಟಾಗುತ್ತದೆ. ಉತ್ತರದ್ವಿತೀಯಲಕ್ಷಣದಲ್ಲಿ ಚೆನ್ನಾಗಿ ಕಣ್ಣು ಬಿಟ್ಟು ನೋಡುವುದರಿಂದ 'ಪುರುಷತ್ವವ್ಯಾಪ್ಯಕರಚರಣಾದಿಮಾನಯಂ' ಎಂಬ ಪರಾಮರ್ಶಜ್ಞಾನ ಬರುತ್ತದೆ. ಆಗ ಸಂಶಯಯಾತ್ಮಕಪಕ್ಷತಾವಿಶಿಷ್ಟವಾದ ಅನುಮಿತಿ ಸಾಮಗ್ರಿ ಇರುತ್ತದೆ. (ಸಾಧ್ಯಸಂಶಯರೂಪಪಕ್ಷತಾ) ಆದರೆ ಸಹಕಾರಿಕಾರಣದಂತಿರುವ ಸಿಷಾಧಯಿಷಾ ಇರುವುದಿಲ್ಲ. ಆಗ ಪುರುಷವಿಷಯಕಪ್ರತ್ಯಕ್ಷಾತ್ಮಕಜ್ಞಾನವೇ ಬರುವುದಲ್ಲದೆ ಅನುಮಿತಿ ಬರುವುದಿಲ್ಲ. 'ಅತ—' ಇತಿ. ಆದುದರಿಂದ ಅನುಮಿತ್ಸಾಭಾವವಿಶಿಷ್ಟ (ಸಿಷಾಧಯಿಷಾ ಇಲ್ಲದಿರುವಾಗ ಇರುವ) ತುಲ್ಯವಿಷಯಕಪ್ರತ್ಯಕ್ಷಜ್ಞಾನದ ಚಕ್ಷುಃ ಸಂಪ್ರಯೋಗ ಮುಂತಾದ ಸಾಮಗ್ರಿಗಳು ಕಾಮಿನೀಜಿಜ್ಞಾಸಾದಿವತ್—ವಿರಹಿಪುರುಷನಿಗೆ ಸುಂದರಸ್ತ್ರೀಭೋಗೇಚ್ಛಾದಿಗಳಂತೆ ಸ್ವಾತಂತ್ರ್ಯದಿಂದಲೇ ಪಕ್ಷತಾ ಶರೀರದಲ್ಲಿ ಸೇರದೆ ಸ್ವಭಾವದಿಂದಲೇ-ಪ್ರತಿ

ಬಂಧಿಕಾ—ಅನುಮಿತಿಜ್ಞಾನ ಪ್ರತಿಬಂಧಕವಾಗುತ್ತದೆ. ಸಮಾನವಿಷಯಕವೆಂದರೆ ಯದ್ವಿಷಯಕಾನುಮಿತಿ ಸಾಮಗ್ರಿ ಇದೆಯೋ ತದ್ವಿಷಯಕವೆಂದರ್ಥ. ಕಾಮಿನೀಜಿಜ್ಞಾಸೆಯು ಹೇಗೆ ಸ್ವತಂತ್ರವಾಗಿ ಸಕಲಕಾರ್ಯಪ್ರತಿಬಂಧಕವಾಗುತ್ತದೆಯೋ ಅದರಂತೆ ಸಿಷಾಧಯಿಷಾವಿರಹವಿಶಿಷ್ಟಪ್ರತ್ಯಕ್ಷಸಾಮಗ್ರಿಯು ಸಮಾನವಿಷಯಕಾನುಮಿತಿಯನ್ನು ಕುರಿತು ಸ್ವಭಾವದಿಂದಲೇ ಪ್ರತಿಬಂಧಕವಾಗುತ್ತದೆ. (ಸ್ವಭಾವದಿಂದ ಅಂದರೆ ಪಕ್ಷತಾಕುಕ್ಷಿಪ್ರವೇಶವಿಲ್ಲದೆ ಸ್ವತಂತ್ರವಾಗಿ ಎಂದರ್ಥ)

ಪ್ರತ್ಯಕ್ಷವು ಅನುಮಿತಿಗೆ ಪ್ರತಿಬಂಧಕವಾಗುವುದನ್ನು ತೋರಿಸಿ ಈಗ ಅನುಮಿತಿಯೂ ಕೆಲವು ಕಡೆ ಪ್ರತ್ಯಕ್ಷಕ್ಕೆ ಪ್ರತಿಬಂಧಕವಾಗುತ್ತದೆಂದು ತೋರಿಸುತ್ತಾನೆ. 'ಏವಮಿತಿ—' 'ವಹ್ನಿವ್ಯಾಪ್ಯಧೂಮವಾನಯಂ ಪರ್ವತಃ' ಇತ್ಯಾದಿಪರಾಮರ್ಶ ಬಂದ ಮೇಲೆ 'ಪಕ್ಷಾದಿವಿಷಯಕಂ ಪ್ರತ್ಯಕ್ಷಂ ಜ್ಞಾನಂ ಮೇ ಜಾಯತಾಮ್' ಎಂಬ ಉತ್ತೇಜಕವಾದ ಇಚ್ಛೆ ಬಂದಿರುವುದಿಲ್ಲ. ಆಗ ಪಕ್ಷವಿಷಯಕಪ್ರತ್ಯಕ್ಷವೊ ಬರುವುದಿಲ್ಲ. ಅಲ್ಲಿ 'ಪರ್ವತೋ ವಹ್ನಿಮಾನ್' ಎಂಬ ಪಕ್ಷಸಾಧ್ಯವಿಷಯಕ ಅನುಮಿತಿಯೇ ಬರುತ್ತದೆ. ಆದುದರಿಂದ ಅನುಮಿತಿವಿಷಯಾತಿರಿಕ್ತ ವಿಷಯಕಪ್ರತ್ಯಕ್ಷದಲ್ಲಿ ಪ್ರತ್ಯಕ್ಷೇಚ್ಛಾಭಾವವಿಶಿಷ್ಟವಾದ ಅನುಮಿತಿ ಸಾಮಗ್ರಿಯು ಪ್ರತಿಬಂಧಕವಾಗುತ್ತದೆ. ಅನುಮಿತಿ ಸಮಾನವಿಷಯಕವಾದ ಪ್ರತ್ಯಕ್ಷದಲ್ಲಿ ಸಿಷಾಧಯಿಷಾಭಾವವಿಶಿಷ್ಟಪ್ರತ್ಯಕ್ಷಸಾಮಗ್ರಿಯು ಪ್ರಬಲವಾಗುವುದರಿಂದ ಅನುಮಿತಿ ಪ್ರತಿಬಂಧಕವಾಗುತ್ತದೆಂದು ತಿಳಿಯಬೇಕು.

ಪಕ್ಷತಾಲಕ್ಷಣ ಮುಗಿದಿದೆ.

## ಹೇತುಪ್ರಸಂಗಾದ್ಧೇತ್ವಾಭಾಸಾನ್ ವಿಭಜತೇ—॥

ಪ್ರಸಂಗ ಸಂಗತಿಯಿಂದ ಈಗ ಹೇತ್ವಾಭಾಸಗಳ ವಿಭಾಗವನ್ನು ತೋರಿಸುತ್ತಾನೆ. 'ಹೇತು—' ಇತಿ. 'ಸ್ಮೃತಸ್ಯ ಉಪೇಕ್ಷಾನರ್ಹತ್ವಂ' ಪ್ರಸಂಗ ಸಂಗತಿಯಲಕ್ಷಣ. ಹೇತುನಿರೂಪಣ ಪ್ರಸಂಗದಿಂದ ಅದರ ದೋಷವೂ ಸ್ಮೃತವಾದುದರಿಂದ ಅವುಗಳನ್ನು ವಿವರಿಸುತ್ತಾನೆ. ಇನ್ನು ಕೆಲವರು ಏಕಕಾರ್ಯ ಕಾರಿತ್ವ ಸಂಗತಿ ಹೇಳುತ್ತಾರೆ. ವಾದಿಗೆ ವಿಜಯರೂಪವಾದ ಏಕಕಾರ್ಯವು ಪ್ರಸಕ್ತವಾಗಿದೆ. ತತ್ಪ್ರಯೋಜಕತ್ವ ಹೇತ್ವಾಭಾಸಕ್ಕೂ ಇರುತ್ತದೆ. ತಾನು ಹೇಳಿದ ಹೇತುವಿಗೆ ಸದ್ಧೇತುತ್ವಪ್ರತಿಪಾದನ, ಪ್ರತಿವಾದಿ ಹೇಳಿದ ಪ್ರತಿಹೇತುವಿಗೆ ದುಷ್ಟತ್ವಪ್ರತಿಪಾದನ ಮಾಡಿದರೆ ಆಗ ಇವೆರಡರಿಂದ ವಾದಿಗೆ ವಿಜಯವಾಗುತ್ತದೆ. 'ಸ್ವಸಮಭಿವ್ಯಾಹೃತ ಪದಾರ್ಥತಾವಚ್ಛೇದಕಧರ್ಮವ್ಯಾಪ್ಯವಿರುದ್ಧನಾನಾಧರ್ಮಪ್ರಕಾರಕಜ್ಞಾನಾನುಕೂಲವ್ಯಾಪಾರಃ, ವಿಪೂರ್ವಕಭಜ ಧಾತುವಿನ ಅರ್ಥ. ಸ್ವಂ—ವಿ ಉಪಸರ್ಗದಿಂದ ಕೂಡಿದಭಜಧಾತುವಿನ ಅರ್ಥ. ತತ್ಸಮಭಿವ್ಯಾಹೃತಿ (ಅದರೊಡನೆ ಹೇಳಿದ ಪದ) ಪದವೆಂದರೆ ಪ್ರಕೃತಿ ಹೇತ್ವಾಭಾಸಪದ ತದರ್ಥತಾವಚ್ಛೇದಕಧರ್ಮ—ಹೇತ್ವಾಭಾಸತ್ವ. ತದ್ವ್ಯಾಪ್ಯವಾಗಿ ಪರಸ್ಪರ ವಿರುದ್ಧ

ವಾಗಿರುವ ಧರ್ಮಗಳೆಂದರೆ ಅನೈಕಾಂತಿಕತ್ವಾದಿಗಳು. ತತ್ಪ್ರಕಾರಕವಾದ ಜ್ಞಾನವೆಂದರೆ 'ಅನೈಕಾಂತಃ ವಿರುದ್ಧಃ—' ಇತ್ಯಾದಿ ಜ್ಞಾನ. ತದನುಕೂಲವ್ಯಾಪಾರವೆಂದರೆ ಪದ್ಯಾತ್ಮಕ ವಾಕ್ಯಪ್ರಯೋಗರೂಪವಾದದ್ದು. ತದನುಕೂಲಕೃತಿಯುಳ್ಳವನು ಗ್ರಂಥಕರ್ತಾ ಎಂದು ತಿಳಿಯಬೇಕು. (ಹೇತುನಿರೂಪಿತ ಪ್ರಸಂಗಸಂಗತಿ ಪ್ರಯೋಜ್ಯ ಹೇತ್ವಾಭಾಸಕರ್ಮಕ ವಿಭಾಗಾನುಕೂಲಕೃತಿಮಾನ್ ಗ್ರಂಥಕಾರಃ' ಎಂದು ಬೋಧವಾಗುತ್ತದೆ.)

'ಹೇತುವತ್ ಆಭಾಸಂತೇ ಇತಿ ಹೇತ್ವಾಭಾಸಾಃ' ಯಾವುದು ವಾಸ್ತವಾಗಿ ಹೇತುವಾಗದೆ ಹೇತುವಿನಂತೆ ಪಂಚರೂಪ್ಯಾದಿ ಘಟಿತವಾಗಿ ಹೇತುವಿನಂತೆ ತೋರುವುದೆಂದರ್ಥ. ವ್ಯಭಿಚಾರಾದಿ ಹೇತು ದೋಷಗಳಿಂದ ದುಷ್ಟವಾಗುವುದರಿಂದ ಅಸದ್ಧೇತುಗಳಾಗುತ್ತವೆ. ಯಾವ ಜ್ಞಾನವು ಸಾಕ್ಷಾತ್ತಾಗಿ ಅಥವಾ ಪರಂಪರೆಯಿಂದ ಅನುಮಿತಿಯನ್ನು ಪ್ರತಿಬಂಧಿಸುವುದೋ ಹುಟ್ಟದಂತೆ ಮಾಡುವುದೋ ಆದರ ಜ್ಞಾನವೇ ಹೇತ್ವಾಭಾಸವಾಗುತ್ತದೆ. 'ಹೇತೋಃಆಭಾಸಾ:' ಎಂದು ವಿಗ್ರಹ ಮಾಡಿದರೆ ಹೇತುವಿನಲ್ಲಿರುವ ದೋಷಗಳೆಂದರ್ಥವಾಗುತ್ತದೆ. (ತೇಷಾಂ ಭಾವಃ ಹೇತ್ವಾಭಾಸತ್ವಮ್.) ಲಕ್ಷಣವನ್ನು ಮುಂದೆ ವಿವರಿಸುತ್ತಾನೆ.

**ಅನೈಕಾಂತೋ ವಿರುದ್ಧಶ್ಚಾಪ್ಯಸಿದ್ಧಃ ಪ್ರತಿಪಕ್ಷಿತಃ ।**
**ಕಾಲಾತ್ಯಯಾಪದಿಷ್ಟಶ್ಚ ಹೇತ್ವಾಭಾಸಾಸ್ತು ಪಂಚಧಾ ॥ ೭೧ ॥**

ತಲ್ಲಕ್ಷಣಂ ತು—ಯದ್ವಿಷಯಕತ್ವೇನ ಜ್ಞಾನಸ್ಯ ಅನುಮಿತಿ ವಿರೋಧಿತ್ವಂತತ್ತ್ವಂ । ತಥಾಹಿ—ವ್ಯಭಿಚಾರಾದಿವಿಷಯಕತ್ವೇನ ಜ್ಞಾನಸ್ಯ ಅನುಮಿತಿವಿರೋಧಿತ್ವಾತ್ತೇ ದೋಷಾಃ। ಯದ್ವಿಷಯಕತ್ವಂ ಚ ಯಾದೃಶವಿಶಿಷ್ಟವಿಷಯಕತ್ವಂ ಬೋಧ್ಯಮ್ ತೇನ ಬಾಧಭ್ರಮಸ್ಯಾನುಮಿತಿವಿರೋಧಿತ್ವೇಽಪಿ ನಕ್ಷತಿಃ । ತತ್ರ ಪರ್ವತೋ ವಹ್ನ್ಯಭಾವವಾನಿತಿ ವಿಶಿಷ್ಟಸ್ಯಾಪ್ರಸಿದ್ಧತ್ವಾನ್ನ ಹೇತುದೋಷಃ । ನ ಚ ವಹ್ನ್ಯಭಾವವ್ಯಾಪ್ಯಪಾಷಾಣಮಯತ್ವವಾನ್ ಪರ್ವತ ಇತಿ ಪರಾಮರ್ಶಕಾಲೇ ವಹ್ನಿವ್ಯಾಪ್ಯಧೂಮಸ್ಯಾಭಾಸತ್ವಂ ನ ಸ್ಯಾತ್, ತತ್ರ ವಹ್ನ್ಯಭಾವವ್ಯಾಪ್ಯವಾನ್ ಪಕ್ಷಃ ಇತಿ ವಿಶಿಷ್ಟಸ್ಯಾಽಪ್ರಸಿದ್ಧತ್ವಾದಿತಿ ವಾಚ್ಯಮ್ । ಇಷ್ಟಾಪತ್ತೇಃ । ಅನ್ಯಥಾ ಬಾಧಸ್ಯಾನಿತ್ಯದೋಷತ್ವಾಪತ್ತೇಃ । ತಸ್ಮಾತ್ತತ್ರ 'ವಹ್ನ್ಯಭಾವವ್ಯಾಪ್ಯಪಾಷಾಣಮಯತ್ವವಾನ್ ಪರ್ವತಃ' ಇತಿ ಪರಾಮರ್ಶಕಾಲೇ ವಹ್ನಿವ್ಯಾಪ್ಯಧೂಮಸ್ಯ ನಾಭಾಸತ್ವಮ್,—ಭ್ರಮಾದನುಮಿತಿಪ್ರತಿಬಂಧಮಾತ್ರಂ, ಹೇತುಸ್ತು ನ ದುಷ್ಟಃ । ಇತ್ಥಂ ಚ ಸಾಧ್ಯಾಭಾವವದ್ವೃತ್ತಿಹೇತ್ವಾದಿಕಂ ದೋಷಃ, ತದ್ವತ್ತ್ವಂ ಚ ಹೇತೌ ಯೇನ ಕೇನಾಪಿ ಸಂಬಂಧೇನೇತಿ ನವ್ಯಾಃ ॥

ಕಾರಿಕೆಯಲ್ಲಿ ಹೇತ್ವಾಭಾಸದ ಐದು ವಿಭಾಗಗಳನ್ನು ತೋರಿಸುತ್ತಾನೆ. ಅನೈಕಾಂತ (ವ್ಯಭಿಚಾರ) ವಿರುದ್ಧ, ಅಸಿದ್ಧ, ಪ್ರತಿಪಕ್ಷಿತ (ಸತ್ಪ್ರತಿಪಕ್ಷ) ಕಾಲಾತ್ಯಯಾ

ಪದಿಷ್ಟ (ಬಾಧ) ವೆಂದು ಅವುಗಳ ಹೆಸರು. ಲಕ್ಷಣ ರೂಪವಾದ ಸಾಧಾರಣ ಧರ್ಮ ಜ್ಞಾನವಿಲ್ಲದೇ ಮೊದಲು ಲಕ್ಷ್ಯದಭೇದದಲ್ಲಿ ಜಿಜ್ಞಾಸೆ ಯುಂಟಾಗುವುದಿಲ್ಲ. ಆದುದ ರಿಂದ ವಿಭಾಗಕ್ಕಿಂತ ಮೊದಲು ಲಕ್ಷಣ ಹೇಳಲು ಪ್ರಾರಂಭಿಸಿರುತ್ತಾನೆ. 'ತಲ್ಲಕ್ಷಣಂ—' ಇತಿ. ಇಲ್ಲಿ ಮಣಿಕಾರರಿಂದ ತೋರಿಸಲ್ಪಟ್ಟ ಲಕ್ಷಣವನ್ನು ಮೊದಲು ಹೇಳಿರುತ್ತಾನೆ. ಯದ್ವಿಷಯಕತ್ವೇನ — ಯಾವವ್ಯಭಿಚಾರಾದಿವಿಷಯವನ್ನೊಳಗೊಂಡುದರಿಂದ, ಜ್ಞಾನಸ್ಯ—'ಪರ್ವತೋ ವಹ್ನಿಮಾನ್—ಪ್ರಮೇಯತ್ವಾತ್' ಇತ್ಯಾದಿ ಸ್ಥಳದಲ್ಲಿ 'ಅಯಂ ಪ್ರಮೇಯತ್ವಹೇತುರ್ವ್ಯಭಿಚಾರೀ' ಎಂಬ ಜ್ಞಾನಕ್ಕೆ ಅನುಮಿತಿವಿರೋಧಿತ್ವಂ— 'ಪರ್ವತೋ ವಹ್ನಿಮಾನ್' ಎಂಬ ಅನುಮಿತಿಜ್ಞಾನವನ್ನು ಕುರಿತು ಪ್ರತಿಬಂಧಕತ್ವ ವಿದೆಯೋ (ಅನುಮಿತಿಗೆ ಪ್ರತಿಬಂಧಕವಾಗುತ್ತದೆಯೋ, ಹುಟ್ಟದಂತೆ ಮಾಡುತ್ತದೆಯೋ) ತತ್ತ್ವಂ—ಅದೇ ಹೇತ್ವಾಭಾಸವಾಗುತ್ತದೆ. ಯಾವ ಪ್ರಮೇಯತ್ವಾದಿ ಹೇತುಗಳಲ್ಲಿ ವ್ಯಭಿಚಾರಾದಿ (ಮುಂದೆ ಹೇಳುವ) ದೋಷಗಳ ನಿಶ್ಚಯ ಜ್ಞಾನವುಂಟಾಗುವುದರಿಂದ 'ಪರ್ವತೋ ವಹ್ನಿಮಾನ್' ಎಂಬ ಅನುಮಿತಿ ಜ್ಞಾನ ಹುಟ್ಟುವುದಿಲ್ಲವೋ., ಆ ಅನು ಮಿತಿಗೆ ಪ್ರತಿಬಂಧಕವಾದದ್ದೇ ಹೇತ್ವಾಭಾಸವಾಗುತ್ತದೆ. 'ಹ್ರದೋ—ವಹ್ನಿಮಾನ್— ಧೂಮತ್' ಎಂಬ ಬಾಧಾದಿ ಸ್ಥಳದಲ್ಲಿಯೂ ವಹ್ನ್ಯಭಾವವುಳ್ಳಹ್ರದವನ್ನು ವಿಷಯೀ ಕರಿಸುವ 'ಹ್ರದೋ ವಹ್ನ್ಯಭಾವವಾನ್' ಎಂಬ ಜ್ಞಾನಕ್ಕೆ 'ಹ್ರದೋ ವಹ್ನಿಮಾನ್' ಎಂಬ ಅನುಮಿತಿ ಜ್ಞಾನವನ್ನು ಕುರಿತು ಪ್ರತಿಬಂಧಕತ್ವ ಬರುವುದರಿಂದ ಧೂಮರೂಪ ಹೇತುವಿನಲ್ಲಿ ಹೇತ್ವಾಭಾಸತ್ವ ಬರುತ್ತದೆ. ಅನುಮಿತಿ ಪ್ರತಿಬಂಧಕತ್ವಂ ಅಂದರೆ ಅನುಮಿತಿನಿಷ್ಟಪ್ರತಿಬಧ್ಯತಾನಿರೂಪಿತಪ್ರತಿಬಂಧಕತಾ ಎಂದರ್ಥ. ಪ್ರತಿಬಂಧಕಜ್ಞಾನ ದಿಂದ ಅನುಮಿತಿಪ್ರತಿಬಧ್ಯವಾಗುತ್ತದೆ. ಯದ್ವಿಷಯಕತ್ವೇನ ಎಂಬಲ್ಲಿ ತೃತೀಯೆಗೆ ಅವಚ್ಛಿನ್ನತ್ವ ಎಂದರ್ಥ (ಕೂಡಿರುವುದು) ಪ್ರತಿಬಂಧಕತ್ವದಲ್ಲಿ ಅದಕ್ಕೆ ಅನ್ವಯ. 'ಜ್ಞಾನನಿಷ್ಠಯದ್ವಿಷಯಕತ್ವಾಚ್ಛಿನ್ನ ಅನುಮಿತಿಗೆ ನಿಷ್ಠಪ್ರತಿಬಧ್ಯತಾನಿರೂಪಿತಪ್ರತಿ ಬಂಧಕತ್ವಂ ತತ್ತ್ವಂ ಹೇತ್ವಾಭಾಸತ್ವಂ' ಎಂದು ಪರಿಷ್ಕೃತಲಕ್ಷಣ ವಾಗುತ್ತದೆ. ಜ್ಞಾನಸ್ಯ ಎಂಬಲ್ಲಿರುವ ಷಷ್ಠಿಗೆ ವರ್ತಮಾನತ್ವಂ (ಇರುವಿಕೆ) ಅರ್ಥ. ಆದುದರಿಂದ ಜ್ಞಾನನಿಷ್ಠ—ಎಂದಿದೆ. 'ಹ್ರದೋ ವಹ್ನ್ಯಭಾವವಾನ್' ಎಂಬ ಜ್ಞಾನದಲ್ಲಿ ವಹ್ನ್ಯ ಭಾವವದ್‌ಹ್ರದಾದಿವಿಷಯತೋರಿರುವುದರಿಂದ (ವಿಷಯನಿರೂಪಕತ್ವಜ್ಞಾನದಲ್ಲಿರುವುದ ರಿಂದ ವಿಷಯಕತ್ವ ಎಂದಿದೆ.) 'ಹ್ರದೋ ವಹ್ನಿಮಾನ್' ಎಂಬ ಅನುಮಿತಿ ಪ್ರತಿಬಧ್ಯ ವಾಗುತ್ತದೆ. ಪ್ರತಿಬಧ್ಯತಾ ತನ್ನಿಷ್ಠಾ. ತನ್ನಿರೂಪಿತ ಪ್ರತಿಬಂಧಕತ್ವ ಪೂರ್ವೋಕ್ತ ಜ್ಞಾನಕ್ಕೆ ಬರುತ್ತದೆ. 'ತಥಾಹಿ—' ಎಂಬುದರಿಂದ ಇದನ್ನು ವಿವರಿಸಿರುತ್ತಾನೆ. 'ಅಯಂ ಹೇತುಃ ವ್ಯಭಿಚಾರೀ' ಎಂಬ ಜ್ಞಾನವು ವ್ಯಭಿಚಾರಿಹೇತುವಾಗಿರುವ ಸರ್ವಾನು ಮಿತಿಗೆ ಪ್ರತಿಬಂಧಕವಾಗುವುದರಿಂದ ಈ ರೀತಿ ಜ್ಞಾನವೇ ಅನುಮಿತಿವಿರೋಧಿಯಾಗು ವುದರಿಂದ ವ್ಯಭಿಚಾರಾದಿ ದೋಷಗಳಿಗೆ ಹೇತ್ವಾಭಾಸವೆಂದು ಹೆಸರು.

'ಯದ್ವಿಷಯಕತ್ವೇನ' (ಯಾವ ವಿಷಯವನ್ನು ವಿಷಯೀಕರಿಸುವುದರಿಂದ ಯದ್ವಿ

ಷಯ ನಿರೂಪಕತ್ವವಿರುವುದರಿಂದ)ಪದಕ್ಕೆ 'ಯಾದೃಶವಿಶಿಷ್ಟವಿಷಯಕತ್ವೇನ' ಎಂದು ಅರ್ಥಮಾಡಬೇಕೆಂದು ತಿಳಿಸುತ್ತಾನೆ. 'ಯದ್ವಿಷ—' ಇತಿ. ಯಾವ ವಿಶಿಷ್ಟ ವಿಷಯಕ್ಕೆ ನಿರೂಪಕವಾದ ಜ್ಞಾನವು ಪ್ರತಿಬಂಧಕವಾಗುತ್ತದೆಯೋ ಅದು ಹೇತ್ವಾಭಾಸವೆಂದುದಕ್ಕೆ ಪ್ರಯೋಜನ ತೋರಿಸುತ್ತಾನೆ. 'ತೇನ—' ಇತಿ. ಯಾವನಾದರೊಬ್ಬನಿಗೆ ಯಾವುದಾದರೊಂದು ಪರ್ವತದಲ್ಲಿ 'ಪರ್ವತೋ ವಹ್ನ್ಯಭಾವವಾನ್' ಎಂದು ಬಾಧಭ್ರಮ ಉಂಟಾಗಿರುತ್ತದೆ. ಆಗ ಅಲ್ಲಿ ಬಾಧವಿಷಯಕತ್ವವಿರುವುದರಿಂದ ಧೂಮರೂಪಸದ್ಧೇತುವೂ ದುಷ್ಟವಾದುದರಿಂದ 'ಪರ್ವತೋ ವಹ್ನಿಮಾನ್' ಎಂಬ ಅನುಮಿತಿಯು ಬಾರದೇ ಹೋಗಬೇಕಾಗುತ್ತದೆ. ಧೂಮಸದ್ಧೇತುಕಾನುಮಿತಿಗೆ ಬಾಧಭ್ರಮವೂ ಪ್ರತಿಬಂಧಕವಾಗಬೇಕಾಗುತ್ತದೆ. (ಬಾಧಭ್ರಮವೂ ಬಾಧವೂ ಒಂದೇ ಜ್ಞಾನವಾದುದರಿಂದ ಪ್ರತಿಬಂಧಕವೆಂಬ ಆಕ್ಷೇಪ.) ವಿಶಿಷ್ಟವಿಷಯಕತ್ವ ಹೇಳದಿದ್ದರೆ ಸದ್ಧೇತುವಿನಲ್ಲಿಯೇ ಅತಿವ್ಯಾಪ್ತಿ ಬರುತ್ತದೆ. ವಿಶಿಷ್ಟಗ್ರಹಣ ಮಾಡಿದರೆ ಆಗ ವಹ್ನ್ಯಭಾವವಿಶಿಷ್ಟಪರ್ವತವು ಲೋಕದಲ್ಲಿ ಅಪ್ರಸಿದ್ಧವಾದುದರಿಂದ ಅತಿವ್ಯಾಪ್ತಿವಾರಿತವಾಗುತ್ತದೆ. ಧರ್ಮ್ಯಂಶದಲ್ಲಿ ಜ್ಞಾನವು ಪ್ರಮಾತ್ಮಕವಾಗಿಯೂ, ಪ್ರಕಾರಾಂಶದಲ್ಲಿ ಮಾತ್ರ ಭ್ರಮಾತ್ಮಕವಾಗಿರುತ್ತದೆಂದು ನಿಯಮ. ಪರ್ವತದಲ್ಲಿ ವಹ್ನ್ಯಭಾವ ಪ್ರಕಾರಕ ಭ್ರಮಜ್ಞಾನ ಬರಬಹುದು. ವಹ್ನ್ಯಭಾವವುಳ್ಳ ಪರ್ವತವೆಂದು ಎಂದೂ ಭ್ರಮ ಬರುವುದಿಲ್ಲ. ವಾಸ್ತವವಾಗಿ ಸಾಧ್ಯಾಭಾವವು ಪಕ್ಷದಲ್ಲಿ ಇರುವುದಾದರೆ ಆಗ ಬಾಧವಾಗುತ್ತದೆ. ವಾಸ್ತವವಾಗಿ ಅದು ಇಲ್ಲದೆ ತದ್ವಿಷಯಕಭ್ರಮ ಬಂದರೆ ಆಗ ಅನುಮಾನದಲ್ಲಿ ಹೇತು ದುಷ್ಟವಾಗುವುದಿಲ್ಲ. ಭ್ರಮ ನಿವಾರಣೆಯಾದಾಗ ಅನುಮಿತಿ ಹುಟ್ಟುತ್ತದೆ.

ಅತಿವ್ಯಾಪ್ತಿ ಬರುವುದಿಲ್ಲವೆಂಬುದರಲ್ಲಿ ಕಾರಣ ತೋರಿಸುತ್ತಾನೆ. 'ತತ್ರ—' ಇತಿ. ಭ್ರಮಕಾಲದಲ್ಲಿ ಪರ್ವತವಿಶೇಷ್ಯಕ ವಹ್ನ್ಯಭಾವಪ್ರಕಾರಕ ನಿಶ್ಚಯದಿಂದ ಪ್ರಕೃತಾನುಮಿತಿಯು ಹುಟ್ಟದಿದ್ದರೂ ಅದಕ್ಕೆ ಅದು ಪ್ರತಿಬಂಧಕವಾದರೂ ವಹ್ನ್ಯಭಾವವಿಶಿಷ್ಟವಾದ ಪರ್ವತವು ಅಪ್ರಸಿದ್ಧವಾದುದರಿಂದ ಸದ್ಧೇತುಸ್ಥಲದಲ್ಲಿ ಹೇತುದುಷ್ಟವಾಗುವುದಿಲ್ಲ. ಸತ್ಪ್ರತಿಪಕ್ಷಕ್ಕೆ ಅನಿತ್ಯದೋಷತ್ವವನ್ನು ಹೇಳುವವನು ಆಶಂಕಿಸುತ್ತಾನೆ. 'ನಚ—' ಇತಿ. ಮೊದಲು 'ಪರ್ವತೋ ವಹ್ನಿಮಾನ್—ಧೂಮಾತ್' ಎಂಬ ಅನುಮಾನದಲ್ಲಿ ಸಿದ್ಧಾಂತಿಗೆ ಧೂಮ ಹೇತುವಿನಿಂದ 'ವಹ್ನಿವ್ಯಾಪ್ಯಧೂಮವಾನ್ ಪರ್ವತಃ' ಎಂಬ ಪರಾಮರ್ಶಜ್ಞಾನ ಬರುತ್ತದೆ. ಅದೇ ಸಮಯದಲ್ಲಿ ಪೂರ್ವಪಕ್ಷಿಗೆ 'ಪರ್ವತೋ ವಹ್ನ್ಯಭಾವವಾನ್—ಪಾಷಾಣಮಯತ್ವಾತ್' ಎಂದು ಅನುಮಾನವುಂಟಾಗಿ ಅದರಿಂದ 'ವಹ್ನ್ಯಭಾವವ್ಯಾಪ್ಯಪಾಷಾಣಮಯತ್ವವಾನ್ ಪರ್ವತಃ' ಎಂಬ ಪರಾಮರ್ಶ ಬರುತ್ತದೆ. ಇಲ್ಲಿ ಎರಡನೆಯ ಪರಾಮರ್ಶದಿಂದ ಮೊದಲನೆಯ ಪರಾಮರ್ಶದಲ್ಲಿ ಸೇರಿರುವ ಧೂಮರೂಪ ಹೇತುವು ಸತ್ಪ್ರತಿಪಕ್ಷಿತವಾದುದರಿಂದ ಹೇತ್ವಾಭಾಸತ್ವ ಬರಬೇಕು. ಆದರೆ 'ಯಾದೃಶವಿಶಿಷ್ಟವಿಷಯಕತ್ವ' ಎಂದುದರಿಂದ ಇಲ್ಲಿ ವಿರೋಧಿಪರಾಮರ್ಶ ಬಂದಾಗಲೂ ಧೂಮಹೇತುವು ಸತ್ಪ್ರತಿಪಕ್ಷಿತವಾಗಲಾರದು. ವಹ್ನ್ಯಭಾವವ್ಯಾಪ್ಯವಿಶಿಷ್ಟವಾದ

ಪರ್ವತವು ಲೋಕದಲ್ಲಿ ವಹ್ನ್ಯಭಾವವತ್ಪರ್ವತದಂತೆ ಅಪ್ರಸಿದ್ಧವೇ ಆಗಿರುತ್ತದೆ. ವಹ್ನ್ಯಭಾವ ನಿರೂಪಿತ ವ್ಯಾಪ್ತಿಯೂ ಪಾಷಾಣಮಯತ್ವರೂಪ ಹೇತುವಿಗೆ ಸಂಭವಿಸುವುದೂ ಇಲ್ಲ. ಆದುದರಿಂದ ಇಲ್ಲಿ ಧೂಮರೂಪ ಹೇತುವಿಗೆ ಹೇತ್ವಾಭಾಸತ್ವ ಬಾರದೇ ಹೋಗುತ್ತದೆ ಎಂದು ಆಕ್ಷೇಪಿಸಿದರೆ ಇಷ್ಟಾಪತ್ತಿಯಿಂದ ಅದನ್ನು ಪರಿಹರಿಸುತ್ತಾನೆ. 'ಇಷ್ಟಾಪತ್ತೇಃ—' ಇತಿ. ವಿರೋಧಿ ಹೇತುವಿದ್ದರೂ ಧೂಮಾದಿಸದ್ಧೇತುವಿಗೆ ಹೇತ್ವಾಭಾಸತ್ವ ವ್ಯವಹಾರವಿಲ್ಲವೇ ಇಲ್ಲ. ಪ್ರತಿಬಂಧಕವಾದ ಭ್ರಮವಿಷಯಕ್ಕೆ ದೋಷತ್ವವನ್ನಂಗೀಕರಿಸಿದರೆ ಆಗ ಬಾಧವೂ ಅನಿತ್ಯದೋಷವಾಗಬೇಕಾಗುತ್ತದೆ. ಆದರೆ ಅದು ಅನಿತ್ಯದೋಷವಲ್ಲ.

ಸಾಧ್ಯಾಭಾವವ್ಯಾಪ್ಯದ ಭ್ರಮದಿಂದ ವಾಸ್ತವಿಕವಾಗಿ ಸದ್ಧೇತುವು ಎಂದೂ ದುಷ್ಟವಾಗುವುದಿಲ್ಲ. ಹಿಂದಿನ ಸ್ಥಳದಲ್ಲಿ ತೋರಿಸಿದಂತೆ ವಿರೋಧಿಪರಾಮರ್ಶವಿರುವಾಗಲೂ ಸದ್ಧೇತುವು ದುಷ್ಟವಾಗುವುದಾದರೆ ಪಕ್ಷದಲ್ಲಿ ಸಾಧ್ಯಾಭಾವಭ್ರಮದಿಂದ ಸದ್ಧೇತುವಿನಲ್ಲಿ ಬಾಧದೋಷ ಬರುವುದರಿಂದ ದುಷ್ಟತ್ವವ್ಯವಹಾರ ಬಂದು ಬಾಧವೂ ಅನಿತ್ಯದೋಷವಾಗಬೇಕಾಗುತ್ತದೆ. ಅನಿತ್ಯದೋಷವೆಂದರೆ ಭ್ರಮಜ್ಞಾನವಿರುವಾಗ ದುಷ್ಟವೆಂದೂ, ಆ ಜ್ಞಾನವಿಲ್ಲದಿರುವಾಗ ಅದುಷ್ಟವೂ ಆಗಿ ಅನಿತ್ಯವಾಗುವುದು. ಬಾಧ ನಿತ್ಯದೋಷವೆಂದು ಸಕಲ ಸಂಮತವಾದವಿಷಯ. ಆದುದರಿಂದ 'ವಹ್ನ್ಯಭಾವವ್ಯಾಪ್ಯಪಾಷಾಣಮಯತ್ವವಾನ್ ಪರ್ವತಃ' ಎಂಬ ಪರಾಮರ್ಶ ಬಂದಕಾಲದಲ್ಲಿ 'ವಹ್ನ್ಯಭಾವವ್ಯಾಪ್ಯಧೂಮರೂಪಹೇತುವಿಗೆ ಆಭಾಸತ್ವವಿರುವುದಿಲ್ಲ. ಆದರೆ ಈ ಭ್ರಮಜ್ಞಾನದಿಂದ ಅನುಮಿತಿ ಮಾತ್ರ ಹುಟ್ಟುವುದಿಲ್ಲ. (ಅನುಮಿತಿ ಪ್ರತಿಬಂಧಕತ್ವ ಬರಬಹುದು.) ಭ್ರಮಜ್ಞಾನ ಹೋದಮೇಲೆ ಅನುಮಿತಿಯೂ ಹುಟ್ಟಬಹುದು. ಯಾದೃಶವಿಶಿಷ್ಟವಿಷಯವೆಂದರೆ ಯದ್ರೂಪಾವಚ್ಛಿನ್ನವಿಷಯವೆಂದು ಮುಂದೆ ವಿವರಿಸುತ್ತಾನೆ. 'ಸಾಧ್ಯಾಭಾವವತಿ—' ಇತಿ. ಸಾಧ್ಯದ ಅಭಾವವಿರುವಲ್ಲಿ, ಹೇತ್ವಾದಿಗಳ ವೃತ್ತಿತ್ವವೇ (ಇರುವಿಕೆ) ದೋಷಗಳಾಗುತ್ತವೆ. ಆದಿ ಪದದಿಂದ ಪಕ್ಷಾದಿಗಳನ್ನು ತೆಗೆದುಕೊಳ್ಳಬೇಕು. ತದ್ವತ್ತ್ವಾ— ಆ ರೀತಿ ದೋಷದಿಂದ ಕೂಡಿರುವುದು. (ತಾದೃಶದೋಷವತ್ತ್ವಾ) ಯಾವ ಯಾವ ಸಂಬಂಧದಿಂದ ದೋಷವಿಶಿಷ್ಟವಾಗುವುದೋ ಅದು ದುಷ್ಟ ಹೇತು. ವ್ಯಭಿಚಾರಾದಿಸ್ಥಳದಲ್ಲಿ ತಾದಾತ್ಮ್ಯಸಂಬಂಧವಾಗುತ್ತದೆ. ಬಾಧಾದಿ ಸ್ಥಳದಲ್ಲಿ 'ಹ್ರದೋವಹ್ನ್ಯಭಾವವಾನ್ ಧೂಮಶ್ಚ' ಎಂಬ ಸಮೂಹಾಲಂಬನಜ್ಞಾನವನ್ನು ಸ್ವೀಕರಿಸಿ ಏಕಜ್ಞಾನವಿಷಯತ್ವಸಂಬಂಧ ಹೇಳಬೇಕು. ಇದು ನವ್ಯಮತ. ಇವರು 'ಹೇತುವತ್ ಆಭಾಸಂತೇ ಎಂಬ ವ್ಯುತ್ಪತ್ತಿಯಿಂದ ಹೇತ್ವಾಭಾಸಪದಕ್ಕೆ ದುಷ್ಟಹೇತುವೆಂದು ಅರ್ಥ ಮಾಡುತ್ತಾರೆ.

ಪರೇತು—ಯದ್ವಿಷಯಕತ್ವೇನ ಜ್ಞಾನಸ್ಯಾನುಮಿತಿವಿರೋಧಿತ್ವಂ ತದ್ವತ್ತ್ವಂ ಹೇತ್ವಾಭಾಸತ್ವಂ । ಸತ್ಪ್ರತಿಪಕ್ಷೇ ವಿರೋಧಿವ್ಯಾಪ್ತ್ಯಾದಿಕಮೇವ ತಥಾ । ತದ್ವತ್ತ್ವಂ ಚ

ಹೇತೋರ್ಜ್ಞಾನರೂಪಸಂಬಧೇನ । ನ ಚೈವಂ ವಹ್ನಿಮಾನ್ ಧೂಮಾದಿತ್ಯಾದೌ ಪಕ್ಷೇ ಬಾಧಭ್ರಮಸ್ಯ ಸಾಧ್ಯಾಭಾವವಷಯಕತ್ವೇನಾನುಮಿತಿವಿರೋಧಿತ್ವಾತ್ ಜ್ಞಾನರೂಪಸಂಬಂಧೇನ ತದ್ವತ್ತ್ವಸ್ಯಾಪಿ ಸತ್ವಾತ್ಸದ್ಧೇತೋರಪಿ ಬಾಧಿತತ್ವಾ ಪತ್ತಿರಿತಿವಾಚ್ಯಮ್ । ತತ್ರ ಜ್ಞಾನಸ್ಯ ಸಂಬಂಧತ್ವಸ್ಯಾಕಲ್ಪನಾತ್ । ಅತ್ರ ಸತ್ಪ್ರತಿಪಕ್ಷಿತ ಇತಿ ವ್ಯವಹಾರೇಣ ತತ್ಕಲ್ಪನಾತ್ । ತತ್ರ ಬಾಧಿತ ಇತಿ ವ್ಯವ ಹಾರಾಭಾವಾದಿತ್ಯಾಹುಃ । ಅನುಮಿತಿ ವಿರೋಧಿತ್ವಂ ಚ ಅನುಮಿತಿ ತತ್ಕರಣಾ ನ್ಯತರವಿರೋಧಿತ್ವಂ, ತೇನ ವ್ಯಭಿಚಾರಿಣಿ ನ್ಯಾವ್ಯಾಪ್ತಿಃ । ದೋಷಜ್ಞಾನಂ ಚ ಯದ್ಧೇತುವಿಷಯಕಂ ತದ್ಧೇತುಕಾನುಮಿತೌ ಪ್ರತಿಬಂಧಕಮ್ । ತೇನೈಕಹೇತೌ ವ್ಯಭಿಚಾರಗ್ರಹೇ ಹೇತ್ವಂತರೇಣಾನುಮಿತ್ಯುತ್ಪತ್ತೇಸ್ತದಭಾವಾದ್ಯನವಗಾಹಿ ತ್ವಾಚ್ಚ ವ್ಯಭಿಚಾರಜ್ಞಾನಸ್ಯಾನುಮಿತಿವಿರೋಧಿತ್ವಾಭಾವೇಽಪಿ ನ ಕ್ಷತಿ ರಿತಿ ಸಂಕ್ಷೇಪಃ । ಯಾದೃಶಪಕ್ಷಸಾಧ್ಯಹೇತೌ ಯಾವಂತೋ ದೋಷಾಸ್ತಾವದನ್ಯಾ ನ್ಯತ್ವಂ ತತ್ರ ಹೇತ್ವಾಭಾಸತ್ವಮ್ । ಪಂಚತ್ವಕಥನಂತು ತತ್ಸಂಭವಸ್ಥಲಾಭಿ ಪ್ರಾಯೇಣ ॥

ಸತ್ಪ್ರತಿಪಕ್ಷಾದಿಗಳು ಅನಿತ್ಯದೋಷಗಳೆಂದು ಹೇಳುವವರ ಮತವನ್ನು ತೋರಿಸು ತ್ತಾನೆ. 'ಪರೇತು—' ಇತಿ. 'ಆಹುಃ' ಎಂಬಲ್ಲಿ ಇದಕ್ಕೆ ಅನ್ವಯ. ಇವರ ಮತ ದಲ್ಲಿ 'ಹೇತೋಃ ಆಭಾಸಾಃ ಹೇತ್ವಾಭಾಸಾಃ' ಎಂಬ ವ್ಯುತ್ಪತ್ತಿಯಿಂದ ಹೇತ್ವಾಭಾಸ ಪದಕ್ಕೆ ವ್ಯಭಿಚಾರಾದಿದೋಷವೆಂದರ್ಥ. ಎಲ್ಲಾ ಕಡೆಯಲ್ಲಿಯೂ 'ಏಕಜ್ಞಾನ ವಿಷಯತ್ವ' ಸಂಬಂಧದಿಂದ ದೋಷವಿಶಿಷ್ಟತ್ವವನ್ನು ಹೇಳಬೇಕು. "ಯಾವವಿಷಯ ವನ್ನೊಳಗೊಂಡದ್ದರಿಂದ ಜ್ಞಾನವು ಅನುಮಿತಿಪ್ರತಿಬಂಧಕವಾಗುತ್ತದೆಯೋ 'ತತ್ವಂ' ಎಂದು ದೋಷಲಕ್ಷಣವೇ ಆಗುತ್ತದೆ. ಆ ದೋಷವುಳ್ಳದ್ದೇ ಹೇತ್ವಾಭಾಸ. (ದುಷ್ಟ ಹೇತುಲಕ್ಷಣವಾಗುತ್ತದೆ.) ವ್ಯಭಿಚಾರಾದಿದೋಷವಿಶಿಷ್ಟಹೇತುಗಳಲ್ಲಿ 'ಸಾಧ್ಯಾಭಾವ ವಾನ್ ಪಕ್ಷಃ ಹೇತುಶ್ಚ' ಎಂಬ ಏಕಜ್ಞಾನವಿಷಯತ್ವಸಂಬಂಧದಿಂದ ಹೇತ್ವಾಭಾಸ ವ್ಯವಹಾರ ವಿರುತ್ತದೆ. ಸತ್ಪ್ರತಿಪಕ್ಷಾದಿಸ್ಥಳದಲ್ಲಿ ವಿರೋಧಿವ್ಯಾಪ್ತ್ಯಾದಿಗಳಿಗೇ ದೋಷತ್ವ ಸಂಭವಿಸುತ್ತದೆ. ಅಲ್ಲಿ 'ಅಯಂ ವಿರುದ್ಧವ್ಯಾಪ್ತಿವಿಶಿಷ್ಟೋ ಹೇತುಃ' ಎಂದು ಏಕಜ್ಞಾನ ವಿಷಯತ್ವಸಂಬಂಧದಿಂದ ದೋಷವೈಶಿಷ್ಟ್ಯ ಬರುತ್ತದೆ. 'ನ ಚ—' ಎಂಬುದರಿಂದ ಆಶಂಕಿಸುತ್ತಾನೆ. ಸತ್ಪ್ರತಿಪಕ್ಷವು ಅನಿತ್ಯದೋಷವಾಗುವುದಾದರೆ ಬಾಧವೂ ಅನಿತ್ಯ ದೋಷವಾಗಲಿ ಎಂದು ಆಕ್ಷೇಪಿಸುತ್ತಾನೆ. 'ಏಕಜ್ಞಾನವಿಷಯತ್ವ' ಸಂಬಂಧದಿಂದ ದೋಷವತ್ತ್ವವನ್ನು ಹೇಳುವುದಾದರೆ ಇಲ್ಲಿಯೂ ದೋಷ ಸಂಭವಿಸುತ್ತದೆ. 'ವಹ್ನಿ ಮಾನ್—ಧೂಮಾತ್' ಇತ್ಯಾದಿ ಪ್ರಸಿದ್ಧಸದ್ಧೇತುಸ್ಥಲದಲ್ಲಿ ಪರ್ವತಪಕ್ಷದಲ್ಲಿ ವಾಸ್ತವ ವಾಗಿ ಸಾಧ್ಯಾಭಾವ ಇರುವುದಿಲ್ಲ. ಆದುದರಿಂದ ಬಾಧದೋಷಕ್ಕೆ ಅವಕಾಶವಿಲ್ಲ. ಆದರೂ ಯಾವನಿಗಾದರೂ ಒಬ್ಬನಿಗೆ 'ಪರ್ವತಃ, ವಹ್ನ್ಯಭಾವವಾನ್' ಎಂದು ಬಾಧ

ಭ್ರಮ ಬರಬಹುದು. ಆಗ ಬಾಧಭ್ರಮಜ್ಞಾನವು ವಹ್ನ್ಯಭಾವವಿಷಯಕವಾದುದರಿಂದ ವಹ್ನ್ಯನುಮಿತಿಗೆ ಪ್ರತಿಬಂಧಕವಾಗುತ್ತದೆ. 'ವಹ್ನ್ಯಭಾವವಾನ್ ಪರ್ವತೋ ಧೂಮಶ್ಚ' ಎಂಬ ಬಾಧಭ್ರಮಾತ್ಮಕ ಏಕಜ್ಞಾನವಿಷಯತ್ವಸಂಬಂಧದಿಂದ ಧೂಮರೂಪ ಸದ್ಧೇತುವೂ ಬಾಧದೋಷಾಕ್ರಾಂತವಾಗಿ ಬಾಧಿತವಾಗಬೇಕಾಗುತ್ತದೆ. ಇದರಿಂದ ಸದ್ಧೇತುವಿನಲ್ಲಿ ಅತಿವ್ಯಾಪ್ತಿ ಬರುತ್ತದೆ. ಭ್ರಮನಾಶವಾದಾಗ ಆ ಹೇತುವಿನಲ್ಲಿ ಬಾಧಿತವ್ಯವಹಾರವಿಲ್ಲದಿರುವುದರಿಂದ ಬಾಧವು ಅನಿತ್ಯದೋಷವಾಗ ಬೇಕಾಗುತ್ತದೆ. ಇದಕ್ಕೆ ಸಮಾಧಾನ ತೋರಿಸುತ್ತಾನೆ. 'ತತ್ರ—' ಇತಿ. ಬಾಧಭ್ರಮ ಬಂದಾಗ 'ಸಾಧ್ಯಾಭಾವವಾನ್ ಪಕ್ಷಃ ಹೇತುಶ್ಚ' ಎಂಬ ಜ್ಞಾನಕ್ಕೆ ಏಕಜ್ಞಾನವಿಷಯಕತ್ವಸಂಬಂಧ ವನ್ನು ಕಲ್ಪಿಸುವುದಿಲ್ಲ. ಸದ್ಧೇತುವಿನಲ್ಲಿ 'ಅಯಂ ಹೇತುಃ ನ ಬಾಧಿತಃ' ಎಂಬ ವ್ಯವಹಾರ ಇಲ್ಲದಿರುವುದೇ ಸಂಬಂಧತ್ವ ಕಲ್ಪಿಸದಿರುವುದರಲ್ಲಿ ಪ್ರಮಾಣ. ಸತ್ಪ್ರತಿಪಕ್ಷ ಸ್ಥಳದಲ್ಲಿ 'ಅಯಂ ಹೇತುಃ ಸತ್ಪ್ರತಿಪಕ್ಷಃ' ಎಂಬ ವ್ಯವಹಾರವಿರುವುದರಿಂದ ಅಲ್ಲಿ ಏಕ ಜ್ಞಾನವಿಷಯಕತ್ವಸಂಬಂಧ ಕಲ್ಪನೆಗೆ ತೊಂದರೆ ಇಲ್ಲ. ಆದುದರಿಂದ ಅದು ಅನಿತ್ಯ ದೋಷವಾಗಬಹುದು.

'ಆಹುಃ' ಎಂದುದರಿಂದ ಅಸ್ವಾರಸ್ಯ ಸೂಚಿತವಾಗುತ್ತದೆ. ಬಾಧವ್ಯಾಪ್ಯ ವಾದದ್ದು ಸತ್ಪ್ರತಿಪಕ್ಷ. ವ್ಯಾಪ್ಯಸತ್ಪ್ರತಿಪಕ್ಷದಲ್ಲಿ ಅನಿತ್ಯತ್ವವಿದ್ದ ಮೇಲೆ ವ್ಯಾಪಕವಾದ ಬಾಧದಲ್ಲಿಯೂ ಇರಬೇಕಾಗುತ್ತದೆ.

'ಅನುಮಿತಿವಿರೋ—' ಇತಿ. 'ಯಾವ್ಧರ್ಮವಿಶಿಷ್ಟವಿಷಯಕತ್ವೇನ ಜ್ಞಾನಸ್ಯ ಅನುಮಿತಿವಿರೋಧಿತ್ವಂ' ಎಂಬ ಲಕ್ಷಣದಲ್ಲಿ 'ಅನುಮಿತಿ, ತತ್ಕರಣಾನ್ಯತರವಿರೋಧಿತ್ವಂ' ಎಂದು ಹೇಳಬೇಕು. ಹೀಗೆ ಹೇಳದಿದ್ದರೆ ವ್ಯಭಿಚಾರಾದಿ ಕೆಲವು ಹೇತುಗಳಲ್ಲಿ ಸಾಕ್ಷಾತ್ ಅನುಮಿತಿ ಪ್ರತಿಬಂಧಕತ್ವವಿರುವುದಿಲ್ಲವಾದುದರಿಂದ ಅವ್ಯಾಪ್ತಿ ಬರುತ್ತದೆ. ವ್ಯಭಿಚಾರಿಯಾದ ಹೇತುವು ಅನುಮಿತಿಗೆ ಕರಣವಾದ ವ್ಯಾಪ್ತಿಜ್ಞಾನ (ವನ್ನು ಹುಟ್ಟದಂತೆ ಮಾಡಿ) ಕ್ಕೆ ಪ್ರತಿಬಂಧಕವಾಗಿ ತದ್ದ್ವಾರಾ ಅನುಮಿತಿಗೆ ಪ್ರತಿಬಂಧಕವಾಗುತ್ತದೆ.

ಯಾವ ಹೇತುವಿಷಯಕವಾಗಿ ದೋಷ ಜ್ಞಾನ ಬಂದಿದೆಯೋ ಅದು ಅದೇ ಹೇತು ವಿನಿಂದ ಬಂದ ಅನುಮಿತಿ ಜ್ಞಾನಕ್ಕೆ ಪ್ರತಿಬಂಧಕವಾಗುತ್ತದೆ. 'ಪರ್ವತೋ ವಹ್ನಿ ಮಾನ್—ಪ್ರಮೇಯತ್ವಾತ್'. ಇಲ್ಲಿ ವಹ್ನಿರೂಪಸಾಧ್ಯಾಭಾವವುಳ್ಳ ಹ್ರದದಲ್ಲಿಯೂ ಪ್ರಮೇಯತ್ವರೂಪಹೇತುವಿರುವುದರಿಂದ ಅದು ವ್ಯಭಿಚಾರಿಯಾಗುತ್ತದೆ. 'ಅಯಂ ಪ್ರಮೇಯತ್ವಹೇತುಃ-ವ್ಯಭಿಚಾರೀ-ವಹ್ನ್ಯಭಾವವತಿ ಹ್ರದೇ ವಿದ್ಯಮಾನತ್ವಾತ್' ಎಂಬ ಅನುಮಾನದಿಂದ ಪ್ರಮೇಯತ್ವ ಹೇತುವಿನಲ್ಲಿ ವ್ಯಭಿಚಾರಾತ್ಮಕದೋಷವು ಜ್ಞಾತ ವಾದುದರಿಂದ ಪ್ರಮೇಯತ್ವಹೇತುಕಾನುಮಿತಿಗೇ ಈ ದೋಷಜ್ಞಾನವು ಪ್ರತಿಬಂಧಕ ವಾಗುತ್ತದೆ. ಧೂಮವು ಪ್ರಮೇಯವಾಗಿದ್ದರೂ ಧೂಮಹೇತುಕಾನುಮಿತಿಗೆ ಅದು ಪ್ರತಿಬಂಧಕವಾಗುವುದಿಲ್ಲವೆಂದು ತೋರಿಸುತ್ತಾನೆ. 'ದೋಷಜ್ಞಾನಂ ಚ—' ಇತಿ. ಕೇನ—ಅಯಾಯ ಹೇತು ವಿಶೇಷವನ್ನು ಹೇಳಿ ಪ್ರತಿಬಧ್ಯಪ್ರತಿಬಂಧಕಭಾವ ಹೇಳಿರು

ವುದರಿಂದ, ಏಕಹೇತೌ—ಪ್ರಮೇಯತ್ವಾದಿ ಒಂದು ಹೇತುವಿನಲ್ಲಿ ವ್ಯಭಿಚಾರ ಜ್ಞಾನೇಽಪಿ—ಸಾಧ್ಯಾಭಾವವುಳ್ಳದ್ದರಲ್ಲಿರುವುದೆಂಬ ದೋಷ ಜ್ಞಾನ ಬಂದಿದ್ದರೂ (ವಹ್ನಿ ವಿಶೇಷ್ಯಕ ವಹ್ನಿಸಮಾನಾಧಿಕರಣಾಭಾವಪ್ರತಿಯೋಗಿತಾವಚ್ಛೇದಕಧೂಮತ್ವಾತ್ಮಕವ್ಯಭಿಚಾರನಿಷ್ಠಯತ್ ಕಿಂಚಿತ್ಸಂಬಂಧಾವಚ್ಛಿನ್ನ ಪ್ರಕಾರತಾಶಾಲಿನಿಶ್ಚಯೇಽಪಿ) ಹೇತ್ವಂತರೇಣ—ಇತರ ಧೂಮಾದಿ ಹೇತುಗಳಿಂದ (ವಹ್ನ್ಯಾದಿಸಾಧ್ಯಾಽವ್ಯಭಿಚರಿತವಾಗಿರುತ್ತದೆ.) 'ಪರ್ವತೋ ವಹ್ನಿಮಾನ್' ಎಂಬ ಅನುಮಿತಿ ಬಂದೇ ಬರುತ್ತದೆ. ಅದಕ್ಕೆ ಕಾರಣ ತೋರಿಸುತ್ತಾನೆ. 'ತದಭಾವಾ—' ಇತಿ. ಇದು ಸಾಧ್ಯಾಭಾವಾದ್ಯನವಗಾಹಿಯಾಗಿರುವುದರಿಂದ, 'ಪರ್ವತೋ ವಹ್ನ್ಯಭಾವವಾನ್' ಎಂದು ವಹ್ನ್ಯಭಾವ ಅವಿಷಯಕವಾದುದರಿಂದ 'ಪ್ರಮೇಯತ್ವಂ ವ್ಯಭಿಚಾರೀ' ಎಂಬ ವ್ಯಭಿಚಾರಜ್ಞಾನಕ್ಕೆ, 'ಪರ್ವತೋ ವಹ್ನಿಮಾನ್' ಎಂಬ ಧೂಮಹೇತುಕಾನುಮಿತಿಗೆ ಪ್ರತಿಬಂಧಕತ್ವವಿಲ್ಲದಿದ್ದರೂ ಅವ್ಯಾಪ್ತಿ ಬರುವುದಿಲ್ಲವೆಂದರ್ಥ. ಸಾಕ್ಷಾತ್ ಪ್ರತಿಬಂಧಕತ್ವವಿಲ್ಲವಾದರೂ ಪರಂಪರೆಯಿಂದ ಪ್ರತಿಬಂಧಕವಾಗುತ್ತದೆಂದು ತಾತ್ಪರ್ಯ.

'ತದಭಾವಾದ್ಯನವಗಾಹಿತ್ವಾತ್' ಎಂಬುದಕ್ಕೆ ಕೆಲವರು ಹೀಗೆ ಅರ್ಥ ಕಲ್ಪಿಸುತ್ತಾರೆ. "ಹ್ರದೋ ವಹ್ನ್ಯಭಾವವಾನ್" ಎಂಬ ಬಾಧದೋಷಕ್ಕೆ ಹೇಗೆ 'ಹ್ರದೋ ವಹ್ನಿಮಾನ್' ಎಂಬ ಅನುಮಿತ್ಯಭಾವಾವಗಾಹಿತ್ವವಿದೆಯೋ (ಅನುಮಿತ್ಯಭಾವವನ್ನು ಒಳಗೊಂಡಿರುವಿಕೆ) ಹಾಗೆ 'ವಹ್ನ್ಯಭಾವವದ್ವೃತ್ತಿಪ್ರಮೇಯತ್ವಂ' ಎಂಬ ವ್ಯಭಿಚಾರ ಜ್ಞಾನವು 'ಪರ್ವತೋ ವಹ್ನಿಮಾನ್' ಎಂಬ ಅನುಮಿತ್ಯಭಾವವನ್ನು ವಿಷಯೀಕರಿಸುವುದಿಲ್ಲ. ಅನುಮಿತಿಗೆ ಸಾಕ್ಷಾತ್ತಾಗಿ ಪ್ರತಿಬಂಧಕವಾಗದಿದ್ದರೂ ತತ್ಕರಣವೆಂದು ಹೆಚ್ಚಾಗಿ ಹೇಳಿರುವುದರಿಂದ-ಕರಣವಾದ ವ್ಯಾಪ್ತಿಜ್ಞಾನಕ್ಕೆ ವ್ಯಭಿಚಾರಜ್ಞಾನವು ಪ್ರತಿಬಂಧಕವಾಗುವುದರಿಂದ ಹೇತ್ವಾಭಾಸಸಾಮಾನ್ಯಲಕ್ಷಣಕ್ಕೆ ದೋಷ ಬರುವುದಿಲ್ಲ. ಬಾಧಾದಿ ದೋಷಗಳಿಗೆ ಅನುಮಿತಿ ಸಾಕ್ಷಾತ್ ಪ್ರತಿಬಂಧಕತ್ವವಿರುತ್ತದೆ. ವ್ಯಭಿಚಾರಾದಿಗಳಿಗೆ ಅನುಮಿತಿ ಕರಣವಾದ ವ್ಯಾಪ್ತಿ ಜ್ಞಾನಪ್ರತಿಬಂಧಕತ್ವವಿರುವುದರಿಂದ ಪರಂಪರೆಯಿಂದ ಅನುಮಿತಿ ಪ್ರತಿಬಂಧಕತ್ವ ಹೇಳಿದಂತಾಗುತ್ತದೆ.

'ಯಾದೃಶಪಕ್ಷಸಾಧ್ಯ—' ಇತಿ. ಹೇತ್ವಾಭಾಸಗಳು ಇಷ್ಟೇ ಎಂದು ನಿರ್ಣಯಿಸಲು ಸಾಧ್ಯವಿಲ್ಲ. ಆದರೆ ಹಿಂದಿನ ಆಚಾರ್ಯರು ಹೇಳಿದಂತೆ ಒಂದೇ ಹೇತುವಿನಲ್ಲಿ ಸಂಭವಿಸಬಹುದಾದ ದೋಷಗಳು ಐದೆಂದು ತೋರಿಸಲು ಮುಖ್ಯವಾದ ಐದು ಹೇತ್ವಾಭಾಸಗಳು ಹೇಳಲ್ಪಟ್ಟಿವೆ. ('ಸವ್ಯಭಿಚಾರ, ವಿರುದ್ಧ, ಪ್ರಕರಣಸಮ, ಸಾಧ್ಯಸಮ, ಅತೀತಕಾಲಾ ಹೇತ್ವಾಭಾಸಾಃ' ನ್ಯಾ. ಸೂ. ೨-೨-೪೫)

'ವಾಯುಃ—ಗಂಧವಾನ್—ಸ್ನೇಹಾತ್' ಇಲ್ಲಿ ಐದು ಹೇತ್ವಾಭಾಸಗಳನ್ನೂ ಹೇಳಬಹುದು. ಗಂಧರೂಪಸಾಧ್ಯಾಭಾವವುಳ್ಳ ಜಲದಲ್ಲಿ ಸ್ನೇಹರೂಪ ಹೇತುವಿರುವುದರಿಂದ ವ್ಯಭಿಚಾರಿಯಾಗುತ್ತದೆ. ಗಂಧವುಳ್ಳ ಪೃಥಿವಿಯಲ್ಲಿ ಇಲ್ಲದಿರುವುದರಿಂದ ವಿರುದ್ಧವೂ ವಾಯುರೂಪ ಪಕ್ಷದಲ್ಲಿ ಸಾಧ್ಯ, ಹೇತುಗಳೆರಡೂ ಇಲ್ಲದಿರುವುದರಿಂದ ಬಾಧವೂ,

'ಪಾಕಜಗುಣವತ್ತ್ವ' ಉಪಾಧಿಯಿಂದ ಸೋಪಾಧಿಕಹೇತುವಾದುದರಿಂದ ಅಸಿದ್ಧವೂ, ವಾಯುಃ—ಗಂಧಾಭಾವವಾನ್—ಅಪೃಥಿವೀತ್ವಾತ್' ಎಂಬ ವಿರೋಧ ಹೇತುವಿನಿಂದ ಸತ್ಪ್ರತಿಪಕ್ಷವೂ ಆಗುವುದರಿಂದ ಸಂಭವಾಭಿಪ್ರಾಯದಿಂದ ಹೇಳಿದೆ.

**ಆದ್ಯಃ ಸಾಧಾರಣಸ್ತು ಸ್ಯಾದಸಾಧಾರಣಕೋಽಪರಃ ।**
**ತಥೈವಾನುಪಸಂಹಾರೀ ತ್ರಿಧಾಽನೈಕಾಂತಿಕೋಽಭಪೇತ್ ॥ ೭೨ ॥**

ಏವಂಚ ಸಾಧಾರಣಾದ್ಯನ್ಯತಮತ್ವಮನೈಕಾಂತಿಕತ್ವಮ್ । ಸಾಧಾರಣಃ ಸಾಧ್ಯವದನ್ಯವೃತ್ತಿರ್ಹೇತುಃ । ತೇನ ವ್ಯಾಪ್ತಿಗ್ರಹಪ್ರತಿಬಂಧಃ ಕ್ರಿಯತೇ । ಅಸಾಧಾರಣಃ ಸಾಧ್ಯಾಸಮಾನಾಧಿಕರಣೋ ಹೇತುಃ । ಸಾಧ್ಯಸಾಮಾನಾಧಿಕರಣ್ಯಗ್ರಹಃ ಪ್ರತಿಬಧ್ಯತೇ । ಯಥಾ—ಶಬ್ದೋ ನಿತ್ಯಃ—ಶಬ್ದತ್ವಾದಿತ್ಯಾದೌ ಅಸಾಧಾರಣ್ಯಂ, ಶಬ್ದೋಽನಿತ್ಯಃ ಶಬ್ದತ್ವಾದಿತ್ಯಾದೌ ತ್ವಸಾಧಾರಣ್ಯಭ್ರಮಃ । ಅನ್ಯೇತು ಸಪಕ್ಷಾವೃತ್ತಿರಸಾಧಾರಣಃ, ಸಪಕ್ಷಶ್ಚ ನಿಶ್ಚಿತಸಾಧ್ಯವಾನ್ । ಇತ್ಥಂ ಚ ಶಬ್ದೋಽನಿತ್ಯಃ ಶಬ್ದತ್ವಾದಿತ್ಯಾದೌ ಯದಾ ಪಕ್ಷೇ ಸಾಧ್ಯನಿಶ್ಚಯಃತದಾ ನಾಸಾಧಾರಣ್ಯಂ ತತ್ರ ಹೇತುನಿಶ್ಚಯಾದಿತಿ ವದಂತಿ । ಅನುಪಸಂಹಾರೀ ಚಾತ್ಯಂತಾಭಾವಾಪ್ರತಿಯೋಗಿಸಾಧ್ಯಕಾದಿಃ । ಅನೇನಚ ವ್ಯತಿರೇಕವ್ಯಾಪ್ತಿ ಪ್ರತಿಬಂಧಃ ಕ್ರಿಯತೇ ॥

ಕಾರಿಕೆಯಲ್ಲಿ ಮೊದಲನೆಯ ಹೇತ್ವಾಭಾಸದ ವಿಭಾಗವನ್ನು ತೋರಿಸಿರುತ್ತಾನೆ. ಸಾಧಾರಣ, ಅಸಾಧಾರಣ, ಅನುಪಸಂಹಾರೀ ಎಂದು ಅನೈಕಾಂತಿಕವು (ವ್ಯಭಿಚಾರೀ, ಸವ್ಯಭಿಚಾರ) ಮೂರು ವಿಧ. ಲಕ್ಷಣ ಹೇಳದೇ ವಿಭಾಗ ತೋರಿಸಿರುವುದು ಅಸಮಂಜಸವೆಂದು ಅನೈಕಾಂತಿಕದ ಲಕ್ಷಣವನ್ನು ತೋರಿಸುತ್ತಾನೆ. 'ಏವಂಚ—' ಇತಿ. 'ಸಾಧಾರಣತ್ವ, ಅಸಾಧಾರಣತ್ವ, ಅನುಪಸಂಹಾರಿತ್ವರೂಪ ಉಪಾಧಿತ್ರಯಾನ್ಯತಮತ್ವವ್ಯಾಪ್ಯತ್ವಂ' ಎಂದು ಸಾಮಾನ್ಯ ಲಕ್ಷಣ. ಸಾಧಾರಣದ ಲಕ್ಷಣ ತೋರಿಸುತ್ತಾನೆ. 'ಸಾಧಾರಣ—' ಇತಿ. 'ಸಾಧ್ಯಂ ಅಸ್ಮಿನ್ನಸ್ತೀತಿ ಸಾಧ್ಯವಾನ್' ಸಾಧ್ಯವುಳ್ಳ ಪರ್ವತಾದಿಗಳು. (ಪಕ್ಷ) ಸಾಧ್ಯವತಃ ಅನ್ಯಃ ಸಾಧ್ಯವದನ್ಯಃ ಅದಕ್ಕಿಂತ ಬೇರೆಯಾದ ಜಲಹ್ರದಾದಿಗಳು. (ವಿಪಕ್ಷವಾಗುತ್ತವೆ). 'ಸಾಧ್ಯವದನ್ಯಸ್ಮಿನ್ ವರ್ತತೇ ಇತಿ. ಸಾಧ್ಯವದನ್ಯವೃತ್ತಿಃ' ಸಾಧ್ಯಾಭಾವವದ್ವೃತ್ತಿತ್ವಂ' ಸಾಧಾರಣದ ಲಕ್ಷಣ. ಸಾಧ್ಯದ ಅಭಾವವಿರುವಲ್ಲಿ ಇರುವ ಹೇತು ಸಾಧಾರಣವಾಗುತ್ತದೆ. 'ತೇನಚ—' ಇತಿ. ಇದರಿಂದ, ಸಾಧ್ಯವದನ್ಯಾವೃತ್ತಿತ್ವ'ರೂಪವಾದ ಸಾಧ್ಯಸಾಮಾನಾಧಿಕರಣ್ಯರೂಪವ್ಯಾಪ್ತಿ ಜ್ಞಾನಪ್ರತಿಬಂಧವಾಗುತ್ತದೆ, ತನ್ಮೂಲಕ ಅನುಮಿತಿಗೆ ಪ್ರತಿಬಂಧಕವಾಗುತ್ತದೆ. ಉದಾಹರಣೆಗೆ—'ಪರ್ವತೋ ವಹ್ನಿಮಾನ್ ಪ್ರಮೇಯತ್ವಾತ್' ಎಂಬಲ್ಲಿ ಪ್ರಮೇಯತ್ವ ಹೇತುವು ವಹ್ನಿರೂಪಸಾಧ್ಯವುಳ್ಳಪರ್ವತಾದಿಗಳಿಗಿಂತ ಅನ್ಯವಾದ ಹ್ರದಾದಿಗಳಲ್ಲಿರುವುದ

ರಿಂದ ಸಾಧಾರಣ ವ್ಯಭಿಚಾರಿಯಾಗುತ್ತದೆ. ಸಾಧ್ಯಸಾಮಾನಾಧಿಕರಣ್ಯವಿಲ್ಲದಿರುವ ಹೇತುವೇ ಅಸಾಧಾರಣವಾಗುತ್ತದೆ. ಇದರಿಂದ ಸಾಧ್ಯಸಾಮಾನಾಧಿಕರಣ್ಯ ಜ್ಞಾನ ರೂಪವಾದ ಸಿದ್ಧಾಂತ ವ್ಯಾಪ್ತಿ ಪ್ರತಿಬಂಧವಾಗುತ್ತದೆ. ಉದಾಹರಣೆ ತೋರಿಸುತ್ತಾನೆ. 'ತಥಾ—' ಇತಿ. 'ಶಬ್ದಃ—ನಿತ್ಯಃ—ಶಬ್ದತ್ವಾತ್ । ಇಲ್ಲಿ ಶಬ್ದತ್ವರೂಪಹೇತುವು ಎಲ್ಲಾ ನಿತ್ಯ ಮತ್ತು ಅನಿತ್ಯ ಪದಾರ್ಥಗಳಿಂದ ವ್ಯಾವೃತ್ತವಾಗಿ (ಅಲ್ಲಿರದೆ) ಕೇವಲ ಶಬ್ದ ಮಾತ್ರದಲ್ಲಿ ಇರುತ್ತದೆ. ಹೀಗಿರುವಾಗ ಅದಕ್ಕೆ ಸಾಧ್ಯಸಾಮಾನಾಧಿಕರಣ್ಯ ಬರುವುದು ಹೇಗೆ ? ಶಬ್ದತ್ವವು ನಿತ್ಯತ್ವರೂಪಸಾಧ್ಯಸಮಾನಾಧಿಕರಣವಾಗುವುದಿಲ್ಲವೆಂದು ನಿಶ್ಚಯವುಂಟಾದರೆ ಆಗ 'ಶಬ್ದಃ—ನಿತ್ಯಃ' ಎಂಬ ಅನುಮಿತಿ ಬರುವುದಿಲ್ಲ. ಮೀಮಾಂಸಕರು 'ಶಬ್ದಃ—ಅನಿತ್ಯಃ—ಶಬ್ದತ್ವಾತ್' ಎಂಬುದು ಅಸಾಧಾರಣಕ್ಕೆ ಉದಾಹರಣವೆಂದು ಹೇಳುತ್ತಾರೆ. ಆದರೆ ಶಬ್ದಕಾರ್ಯವಾದುದರಿಂದ ಕಾರ್ಯತ್ವಹೇತುವಿನಿಂದ ಶಬ್ದವು ಅನಿತ್ಯವೆಂದು ನಿಶ್ಚಯ ಜ್ಞಾನ ಉಂಟಾಗುತ್ತದೆ. ಇದರಿಂದ ಅನಿತ್ಯತ್ವರೂಪ ಸಾಧ್ಯಸಾಮಾನಾಧಿಕರಣ್ಯ ಬರಲು ಯಾವ ತೊಂದರೆಯೂ ಇಲ್ಲ. ಆದುದರಿಂದ ಅಸಾಧಾರಣತ್ವಭ್ರಮದಿಂದ ಇದು ಅಸಾಧಾರಣವೆಂದು ಹೇಳಬೇಕೆಂದು ತಿಳಿಸುತ್ತಾನೆ. 'ಶಬ್ದೋಽನಿತ್ಯಃ—' ಇತಿ.

ಈ ವಿಷಯದಲ್ಲಿ ಪ್ರಾಚೀನರ ಮತ ತೋರಿಸುತ್ತಾನೆ. 'ಅನ್ಯೇತು—' ಇದಕ್ಕೆ 'ವದಂತಿ" ಎಂಬಲ್ಲಿ ಅನ್ವಯ. ನಿಶ್ಚಿತ ಸಾಧ್ಯವುಳ್ಳದಕ್ಕೆ ಸಪಕ್ಷವೆಂದು ಹೆಸರು. ಸಪಕ್ಷದಲ್ಲಿಲ್ಲದಿರುವ ಹೇತುವೇ ಅಸಾಧಾರಣವಾಗುತ್ತದೆ. ಪಕ್ಷವೆಂದರೆ ಯಾವಾಗಲೂ ಸಾಧ್ಯಸಂದೇಹವುಳ್ಳದ್ದಾಗಿರಬೇಕು. ಪಕ್ಷದಲ್ಲಿ ಸಾಧ್ಯಸಂದೇಹವಿರುವಾಗಲೇ ಅಸಾಧಾರಣ್ಯವನ್ನು ಹೇಳಬೇಕು. ಸಾಧ್ಯನಿಶ್ಚಯವಿರುವುದಾದರೆ ಆಗ ನಿಶ್ಚಿತ ಸಾಧ್ಯಾಭಾವವದ್ವ್ಯಾವೃತ್ತತ್ವಬಾರದಿರುವುದರಿಂದ ಅಸಾಧಾರಣವೂ ಅನಿತ್ಯದೋಷವಾಗ ಬೇಕಾಗುತ್ತದೆ. ಅನುಪಸಂಹಾರೀಲಕ್ಷಣ ತೋರಿಸುತ್ತಾನೆ. 'ಅತ್ಯಂತಾ—' ಇತಿ. ಅತ್ಯಾಂತಾಭಾವಕ್ಕೆ ಪ್ರತಿಯೋಗಿಯಾಗದಿರುವ ಸಾಧ್ಯ, ಹೇತು, ಪಕ್ಷಗಳು ಆಗುತ್ತವೆ. ಸಾಧ್ಯಮೇವ ಸಾಧ್ಯಕವಮ್....ಪಕ್ಷವಾಗಲೀ ಸಾಧ್ಯವಾಗಲೀ, ಹೇತುವಾಗಲೀ ಕೇವಲಾನ್ವಯಿಯಾಗಿದ್ದರೆ (ಅತ್ಯಂತಾಭಾವಕ್ಕೆ ಅಪ್ರತಿಯೋಗಿರುವುದು.) ಆಗ ಅನುಪಸಂಹಾರಿಯಾದ ಅನೈಕಾಂತಿಕ ಹೇತ್ವಾಭಾಸವಾಗುತ್ತದೆ. 'ಸರ್ವಂ—ಅನಿತ್ಯಂ—ಪ್ರಮೇಯತ್ವಾತ್' ಇಲ್ಲಿ ಸರ್ವವೂ ಪಕ್ಷವಾಗುವುದರಿಂದ ವ್ಯಾಪ್ತಿ ತೋರಿಸುವ ಇನ್ನೊಂದು ಸ್ಥಳವೇ ಇರುವುದಿಲ್ಲ. ಹೇತು ಅಥವಾ ಪಕ್ಷ ಇವೆರಡೂ ಅತ್ಯಂತಾಭಾವಾಽಪ್ರತಿಯೋಗಿಯಾಗಿರುತ್ತವೆ. ಇದಕ್ಕೆ ಫಲ ತೋರಿಸುತ್ತಾನೆ. 'ಅನೇನ—' ಇತಿ. 'ಸಾಧ್ಯಾಭಾವವ್ಯಾಪಕೀಭೂತಾಭಾವಪ್ರತಿಯೋಗಿತ್ವಂ' ವ್ಯತಿರೇಕವ್ಯಾಪ್ತಿಲಕ್ಷಣ. ಅನ್ವಯವ್ಯಾಪ್ತಿಯಲ್ಲಿ ವಹ್ನಿ ಧೂಮಗಳಿಗೆ ವ್ಯಾಪ್ಯವ್ಯಾಪಕಭಾವವಿರುತ್ತದೆ. ವಹ್ನಿವ್ಯಾಪಕ. ಧೂಮವ್ಯಾಪ್ಯ. ವ್ಯತಿರೇಕದಲ್ಲಿ ಸಾಧ್ಯಾಭಾವವು ವ್ಯಾಪ್ಯವಾಗಿ ಹೇತ್ವಭಾವವು ವ್ಯಾಪಕವಾಗುತ್ತದೆ. 'ಯತ್ರ ಧೂಮಃ' ತತ್ರವಹ್ನಿಃ' ಎಂದು ಅನ್ವಯದಲ್ಲಿ;' 'ಯತ್ರ ವಹ್ನ್ಯಭಾವಃ ತತ್ರ

ಧೂಮಾಭಾವಃ' ಎಂದು ವ್ಯತಿರೇಕದಲ್ಲಿ ವ್ಯಾಪ್ತಿ ತಿಳಿಯಬೇಕು. ವಹ್ನ್ಯಭಾವಕ್ಕೆ ವ್ಯಾಪಕೀಭೂತವಾದ ಅಭಾವ—ಧೂಮಾಭಾವ. ತತ್ಪ್ರತಿಯೋಗಿತ್ವ ಧೂಮರೂಪ ಹೇತುವಿಗೆ ಬರುತ್ತದೆ. ಪ್ರಕೃತ ಪ್ರಮೇಯತ್ವರೂಪಹೇತುವು ಅನಿತ್ಯತ್ವಾಭಾವವದ್ವೃತ್ತಿಯೆಂಬ ನಿಶ್ಚಿತ ಜ್ಞಾನವಿರುವುದರಿಂದ ವ್ಯತಿರೇಕ ವ್ಯಾಪ್ತಿ ಬರುವುದಿಲ್ಲ. (ತದಭಾವವದವೃತ್ತಿತ್ವರೂಪ.) ಆದುದರಿಂದ 'ಸರ್ವಂ ಅನಿತ್ಯಂ' ಎಂಬ ಅನುಮಿತಿಜ್ಞಾನವೂ ಬರುವುದಿಲ್ಲ.

ಕೇವಲಾನ್ವಯಿಸಾಧ್ಯಕ ಸ್ಥಲದಲ್ಲಿ ಅನ್ವಯ ವ್ಯಾಪ್ತಿ ಜ್ಞಾನದಿಂದಲೇ ಅನುಮಿತಿ ಬರುತ್ತದೆ. ಘಟಃ—ಅಭಿಧೇಯಃ—ಪ್ರಮೇಯತ್ವಾತ್' ಇಲ್ಲಿ 'ಯತ್ರ ಯತ್ರ ಪ್ರಮೇಯತ್ವಂ ತತ್ರ ತತ್ರ ಅಭಿಧೇಯತ್ವಂ' ಎಂಬ ಅನ್ವಯವ್ಯಾಪ್ತಿ ನಿಶ್ಚಯವು, ಪಟಾದಿಗಳಲ್ಲಿ ಉಂಟಾಗುವುದರಿಂದ ಅನುಮಿತಿ ಬರುತ್ತದೆ.

ವಿರುದ್ಧಸ್ತು ಸಾಧ್ಯವ್ಯಾಪಕೀಭೂತಾಭಾವಪ್ರತಿಯೋಗೀ । ಅಯಂ ಸಾಧ್ಯಾಭಾವಗ್ರಹ
ಸಾಮಗ್ರೀತ್ವೇನ ಪ್ರತಿಬಂಧಕಃ । ಸತ್ಪ್ರತಿಪಕ್ಷೇ ತು ಪ್ರತಿಹೇತುಃ ಸಾಧ್ಯಾಭಾವ
ಸಾಧಕಃ, ಅತ್ರ ತು ಹೇತುರೇಕ ಏವೇತಿ ವಿಶೇಷಃ । ಸಾಧ್ಯಾಭಾವಸಾಧಕ ಏವ
ಹೇತುಃ ಸಾಧ್ಯಸಾಧಕತ್ವೇನೋಪನ್ಯಸ್ತ ಇತ್ಯಶಕ್ತಿವಿಶೇಷಸ್ಥಾಪಕತ್ವಾಚ್ಚ
ವಿಶೇಷಃ । ಸತ್ಪ್ರತಿಪಕ್ಷಃ ಸಾಧ್ಯಾಭಾವವ್ಯಾಪ್ಯವಾನ್ ಪಕ್ಷಃ ।
ಅಗೃಹೀತಾಪ್ರಾಮಾಣ್ಯಕಸಾಧ್ಯವ್ಯಾಪ್ಯವತ್ತ್ವೋಪಸ್ಥಿತಿಕಾಲೀನಾಽಗೃಹೀತಾ
ಪ್ರಾಮಾಣ್ಯಕಸಾಧ್ಯಾಭಾವವ್ಯಾಪ್ಯವತ್ತ್ವೋಪಸ್ಥಿತಿ ವಿಷಯಸ್ತಥೇತ್ಯನ್ಯೇ ।
ಅತ್ರ ಚ ಪರಸ್ಪರಾಭಾವವ್ಯಾಪ್ಯವತ್ತಾಜ್ಞಾನಾತ್ ಪರಸ್ಪರಾನುಮಿತಿ ಪ್ರತಿಬಂಧಃ
ಫಲಮ್ ॥

ವಿರುದ್ಧದಲಕ್ಷಣ ಹೇಳುತ್ತಾನೆ. 'ಸಾಧ್ಯ—' ಇತಿ. ಸಾಧ್ಯಸ್ಯ ವ್ಯಾಪಕೀಭೂತಃ. ಯೋ ಅಭಾವಃ, ತಸ್ಯ ಪ್ರತಿಯೋಗೀ ಸಾಧ್ಯಾಧಿಕರಣದಲ್ಲಿರುವ ಅಭಾವಕ್ಕೆ ಪ್ರತಿಯೋಗಿಯಾಗಿರುವುದು ವಿರುದ್ಧ ಹೇತ್ವಾಭಾಸವಾಗುತ್ತದೆ. (ಸಾಧ್ಯಾಭಾವದಿಂದ ನಿರೂಪಿತವಾದ ವ್ಯಾಪ್ತಿಗೆ ಆಶ್ರಯವಾದ ಹೇತು.) 'ಶಬ್ದಃ—ನಿತ್ಯಃ—ಕೃತಕತ್ವಾತ್'. ಇಲ್ಲಿ ಶಬ್ದವೇ ಪಕ್ಷ. ನಿತ್ಯತ್ವ ಸಾಧ್ಯ. ಕೃತಕತ್ವ ಹೇತು. ಶಬ್ದದಲ್ಲಿ ನಿತ್ಯತ್ವಸಾಧನೆಗೋಸ್ಕರ ಕೃತಕತ್ವಹೇತು ಹೇಳಿದೆ. ಇದು ವಿರುದ್ಧ. ನಿತ್ಯತ್ವಸಾಧ್ಯಕ್ಕೆ ವ್ಯಾಪಕೀಭೂತವಾದ ಅಭಾವವೆಂದರೆ (ನಿತ್ಯತ್ವಾಧಿಕರಣವೃತ್ತ್ಯಂತಾಭಾವಾಽಪ್ರತಿಯೋಗೀ) ಕೃತಕತ್ವಾಭಾವ. ಯತ್ರಯತ್ರ ನಿತ್ಯತ್ವಂ (ಗಗನಾದಿಗಳು) ತತ್ರತತ್ರ ಕೃತಕತ್ವಾಭಾವಃ' ಎಂದು ವ್ಯಾಪ್ತಿ ಇರುವುದರಿಂದ ಕೃತಕತ್ವಾಭಾವವು ವ್ಯಾಪಕವಾಗುತ್ತದೆ. ವ್ಯಾಪಕವಾದ ಕೃತಕತ್ವಾಭಾವಕ್ಕೆ ಪ್ರತಿಯೋಗಿ—ಕೃತಕತ್ವ. ಇದು ಸಾಧ್ಯವ್ಯಾಪ್ತವಾಗಿರಬೇಕು. ಆದರೆ ಇಲ್ಲಿ ಸಾಧ್ಯಾಭಾವದಿಂದ ಅಂದರೆ ನಿತ್ಯತ್ವಾಭಾವದಿಂದ ಅಂದರೆ ಅನಿತ್ಯತ್ವದಿಂದ ವ್ಯಾಪ್ತವಾಗಿದೆ. 'ಯತ್ರ ಕೃತಕತ್ವಂ, ತತ್ರ ಅನಿತ್ಯತ್ವಂ' ಎಂದು ವ್ಯಾಪ್ತಿ. ಸಾಧ್ಯಸಾಧನೆಗೋಸ್ಕರ ಪ್ರಯುಕ್ತವಾದ ಹೇತುವು ಸಾಧ್ಯಾಭಾವವನ್ನೇ ಸಾಧಿಸುತ್ತದೆ. ಆದುದರಿಂದ

ವಿರುದ್ಧವಾಗುತ್ತದೆ. ಇದರಿಂದ 'ಅನಿತ್ಯತ್ವ (ನಿತ್ಯತ್ವಾಭಾವ) ವ್ಯಾಪ್ಯಕೃತಕತ್ವವಾನಯಂ ಶಬ್ದಃ' ಸಾಧ್ಯಾಭಾವದಿಂದ ವ್ಯಾಪ್ಯವಾದ ಕೃತಕತ್ವಹೇತುವಿನಿಂದ ಈ ಶಬ್ದ ಕೂಡಿದೆ ಯೆಂಬ ವಿರೋಧಿಪರಾಮರ್ಶ ಬರುವುದರಿಂದ 'ಶಬ್ದಃ—ನಿತ್ಯಃ—' ಎಂಬ ಅನುಮಿತಿ ಬರುವುದಿಲ್ಲ. ವಿರೋಧಿಪರಾಮರ್ಶ ಹುಟ್ಟಿಸುವುದರ ಮೂಲಕ (ಅನುಮಿತಿ ಪ್ರತಿಬಂಧಕ ವಾಗುತ್ತದೆ.) ಇದನ್ನೇ 'ಅಯಂ—' ವಾಕ್ಯದಿಂದ ವಿವರಿಸುತ್ತಾನೆ. ಸಾಧ್ಯಾಭಾವ ಗ್ರಹಃ—ಸಾಧ್ಯಾಭಾವದಜ್ಞಾನ. ಇದರ ಸಾಮಾಗ್ರೀ ಅಂದರೆ ಸಾಧಕ. ಸಾಧ್ಯಾ ಭಾವಜ್ಞಾನಸಾಧಕವಾಗುವುದರಿಂದ ಪ್ರತಿಬಂಧಕವೆಂದರ್ಥ. ಸತ್ಪ್ರತಿಪಕ್ಷದಲ್ಲಿ ಸಾಧ್ಯಾ ಭಾವಸಾಧಕವಾದ ಹೇತುವಿರುವುದರಿಂದ ವಿರುದ್ಧಕ್ಕೂ ಅದಕ್ಕೂ ಭೇದವೇನೆಂದು ಜಿಜ್ಞಾಸೆ ಬಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಸತ್ಪ್ರ—' ಇತಿ. ಸತ್ಪ್ರತಿ ಪಕ್ಷದಲ್ಲಿ ಎರಡು ಹೇತುಗಳಿರುತ್ತವೆ. ಅದರಲ್ಲಿ ಪ್ರತಿಹೇತು ಅಂದರೆ ದ್ವಿತೀಯಹೇತುವು ಸಾಧ್ಯಾಭಾವಸಾಧಕವಾಗಿರುತ್ತದೆ. ವಿರುದ್ಧದಲ್ಲಿ (ಹೇತು ಬಂದೇ ಇರುವುದರಿಂದ) ಹೇತುವೇ ಹಾಗಿರುತ್ತದೆ. ಸತ್ಪ್ರತಿಪಕ್ಷದಲ್ಲಿ ಎರಡು ಹೇತುಗಳೂ ಪರಸ್ಪರವ್ಯಾಪ್ತಿಪ್ರತಿ ಬಂಧಕವಾಗಿರುತ್ತವೆ. ಇದರಲ್ಲಿ ಹೇಳಿದ ಹೇತುವು ಸಾಧ್ಯಾಭಾವವ್ಯಾಪ್ತವಾಗಿ ವ್ಯಾಪ್ತಿ ಜ್ಞಾನಕ್ಕೆ ಪ್ರತಿಬಂಧಕವಾಗುವುದರ ಮೂಲಕ ಅನುಮಿತಿಗೆ ಪ್ರತಿಬಂಧಕವಾಗುತ್ತದೆ.

ಇನ್ನೊಂದು ರೀತಿಯಿಂದ ಭೇದ ತೋರಿಸುತ್ತಾನೆ. 'ಸಾಧ್ಯಾಭಾವ—' ಇತಿ. ವಿರುದ್ಧದಲ್ಲಿ ಸಾಧ್ಯಾಭಾವಸಾಧಕವಾದ ಹೇತುವೇ ಸಾಧ್ಯಸಾಧನೆಗೋಸ್ಕರ ಉಪಾತ್ತ ವಾಗಿ ಅಶಕ್ತಿವಿಶೇಷೋಪಸ್ಥಾಪಕವಾಗುತ್ತದೆ. ಅಂದರೆ ಸಾಧ್ಯಾಭಾವಸಾಧಕ ವಾದ ಹೇತುವಿನಲ್ಲಿ ಸಾಧ್ಯಸಾಧಕತ್ವಭ್ರಮದಿಂದ ಸ್ಥಾಪಿಸಲು ಹೊರಟಿರುವುದರಿಂದ ಭ್ರಮರೂಪ ಅಶಕ್ತಿ ಸೂಚಕವಾಗುತ್ತದೆ. ಯದ್ಯಪಿ 'ಸಾಧ್ಯಾಭಾವವ್ಯಾಪ್ಯವಾನ್ ಪಕ್ಷಃ' ಎಂದು ಸತ್ಪ್ರತಿಪಕ್ಷಸ್ವರೂಪವೂ, ಸಾಧ್ಯವ್ಯಾಪಕೀಭೂತಾಭಾವಪ್ರತಿಯೋಗೀ ಪ್ರಕೃತ ಹೇತುಃ' ಎಂದು ವಿರುದ್ಧಸ್ವರೂಪವಿರುವುದರಿಂದ ಭೇದ ವ್ಯಕ್ತವಾಗುತ್ತದೆ. ಆದರೂ ವಿರೋಧಿಯಾದ ಅನುಮಿತಿ ಸಾಮಗ್ರೀರೂಪದಿಂದ ಪ್ರತಿಬಂಧಕತ್ವರೂಪದೂಷ ಕತಾಬೀಜವು ಸಮಾನವಾದುದರಿಂದ ಭೇದ ಜಿಜ್ಞಾಸೆ ಬರುತ್ತದೆ. ಆದುದರಿಂದ ಭೇದ ಹೇಳಿದೆ.

ಸತ್ಪ್ರತಿಪಕ್ಷ ಸ್ವರೂಪ ತೋರಿಸುತ್ತಾನೆ. 'ಸಾಧ್ಯಾಭಾವವ್ಯಾಪ್ಯವಾನ್ ಪಕ್ಷಃ—' ಇತಿ. ಸಾಧ್ಯಾಭಾವಸ್ಯ ವ್ಯಾಪ್ಯಃ, ಸಾಧ್ಯಾಭಾವಕ್ಕೆ ವ್ಯಾಪ್ಯವಾದ ಹೇತುವು ಯಾವ ಪಕ್ಷದಲ್ಲಿದೆಯೋ ಅದು ಸಾಧ್ಯಾಭಾವವ್ಯಾಪ್ಯವುಳ್ಳಪಕ್ಷವಾಗುತ್ತದೆ. ಏಕಜ್ಞಾನವಿಷಯತ್ವ ಸಂಬಂಧದಿಂದ ಈ ದೋಷವು ಹೇತುವಿನಲ್ಲಿ ಬರುತ್ತದೆ. ಉದಾ :—ಹ್ರದೋ—ವಹ್ನಿ ಮಾನ್—ಧೂಮಾತ್ । ಹ್ರದೋ—ವಹ್ನ್ಯಭಾವವಾನ್—ಜಲಾತ್ ॥ ಇಲ್ಲಿ ಹ್ರದ ರೂಪಪಕ್ಷದಲ್ಲಿ ವಹ್ನಿಸಾಧನೆಗೋಸ್ಕರ ಉಪಾತ್ತವಾದ ಧೂಮರೂಪಹೇತುವು ಸತ್ಪ್ರತಿಪಕ್ಷ ಹೇತ್ವಾಭಾಸವಾಗುತ್ತದೆ. ಏಕೆಂದರೆ ಸಾಧ್ಯಾಭಾವದಿಂದ ಅಂದರೆ ವಹ್ನ್ಯಭಾವದಿಂದ ವ್ಯಾಪ್ಯವಾದ ಜಲರೂಪ ಹೇತುವಿನಿಂದ ಹ್ರದಪಕ್ಷವು ಕೂಡಿರುತ್ತದೆ. ಎರಡು ಹೇತು

ಗಳೂ ಪರಸ್ಪರ ವಿರೋಧಿಗಳಾದುದರಿಂದ ಎರಡು ಹೇತುಗಳಲ್ಲಿಯೂ ಸತ್ಪ್ರತಿಪಕ್ಷ ವ್ಯವಹಾರವಿದೆ.

ಇತರ ಆಚಾರ್ಯರು ತೋರಿಸಿದ ಲಕ್ಷಣವನ್ನೂ ತೋರಿಸುತ್ತಾನೆ. 'ಅಗೃಹೀತ—' ಇತಿ. ನ ಗೃಹೀತಂ—ನಿಶ್ಚಿತಂ ಅಪ್ರಾಮಾಣ್ಯಂ ಯಸ್ಯ ತದಗೃಹೀತಪ್ರಾಮಾಣ್ಯಕಮ್. ತಾದೃಶಂ ಯತ್ಸಾಧ್ಯವ್ಯಾಪ್ಯವತ್ತ್ವಂ, ತತ್ತ್ವೇನ ಯಾ ಉಪಸ್ಥಿತಿಃ, ತತ್ಕಾಲೀನಂ ಯತ್ ಅಗೃಹೀತಾ ಪ್ರಾಮಾಣ್ಯಕಸಾಧ್ಯಾಭಾವವ್ಯಾಪ್ಯವತ್ತ್ವಂ, ತದ್ರೂಪತ್ವೇನ ಯಃ ಉಪಸ್ಥಿತಿವಿಷಯಃ, ಹೇತುಃ ಸತ್ಪ್ರತಿಪಕ್ಷಹೇತ್ವಾಭಾಸಃ ‖ 'ಸಾಧ್ಯವ್ಯಾಪ್ಯಹೇತುಮಾನಯಂ ಪಕ್ಷಃ' ಎಂಬ ಪರಾಮರ್ಶ ಬಂದಾಗ ಆಜ್ಞಾನಕಾಲದಲ್ಲಿ ಹೇತುವಿನಲ್ಲಿ ಅಪ್ರಾಮಾಣ್ಯನಿಶ್ಚಯ ಬಂದಿರಬಾರದು. (ಇದು ಅಪ್ರಮಾ ಎಂಬ ನಿಶ್ಚಯ ಬಂದಿರಬಾರದು.) ಅದೇ ಹೇತುವಿನಲ್ಲಿ 'ಸಾಧ್ಯಾಭಾವವ್ಯಾಪ್ಯಹೇತುಮಾನಯಂ ಪಕ್ಷಃ' ಎಂಬ ಪರಾಮರ್ಶ ಬಂದು ಅದರಲ್ಲಿಯೂ ಅಪ್ರಾಮಾಣಿಕ ನಿಶ್ಚಯವುಂಟಾಗದಿದ್ದರೆ ಆಗ ಆ ಹೇತುವು ಸತ್ಪ್ರತಿಪಕ್ಷವಾಗುತ್ತದೆ. ಇಲ್ಲಿ ದೂಷಕತಾಬೀಜ ತೋರಿಸುತ್ತಾನೆ. 'ಅತ್ರ—' ಇತಿ. ಈ ರೀತಿಯಾದ ಸತ್ಪ್ರತಿಪಕ್ಷದಲ್ಲಿ ಪರಸ್ಪರಸಾಧ್ಯಾಭಾವವ್ಯಾಪ್ತಿಜ್ಞಾನದಿಂದ ಪರಸ್ಪರಾನುಮಿತಿ ಪ್ರತಿಬಂಧ ಉಂಟಾಗುತ್ತದೆ. ಅಂದರೆ 'ಹ್ರದೋ—ವಹ್ನಿಮಾನ್' 'ಹ್ರದೋ—ವಹ್ನ್ಯಭಾವವಾನ್' ಎಂದು ಎರಡು ಅನುಮಿತಿಗಳೂ ಬರುವುದಿಲ್ಲವೆಂದರ್ಥ. ಇದರ ಮತ ಸಮಂಜಸವಾಗಿ ತೋರುವುದಿಲ್ಲ. ಏಕೆಂದರೆ ಅವ್ಯಾಪ್ಯವೃತ್ತಿಸಾಧ್ಯಕ ಹೇತು ಸ್ಥಳದಲ್ಲಿ ವಿರುದ್ಧವಾದರೂ ಅನುಮಿತಿ ಬಂದೇ ಬರುತ್ತದೆ. ಅಲ್ಲಿ ಸತ್ಪ್ರತಿಪಕ್ಷವೆಂಬ ವ್ಯವಹಾರ ಇರುವುದಿಲ್ಲ. ಒಂದೇ ವೃಕ್ಷದಲ್ಲಿ ಶಾಖಾವಚ್ಛೇದದಿಂದ ಕಪಿಸಂಯೋಗವೂ, ಮೂಲಾವಚ್ಛೇದದಿಂದ ಕಪಿಸಂಯೋಗಾಭಾವವೂ ಏತದ್ವೃಕ್ಷತ್ವರೂಪ ಒಂದೇ ಹೇತುವಿನಿಂದ ಸಾಧಿಸಲ್ಪಡುತ್ತದೆ. ಇಲ್ಲಿ ಕಪಿಸಂಯೋಗವ್ಯಾಪ್ಯಪುರೋವೃತ್ತಿವೃಕ್ಷತ್ವವಾನಯಂ ವೃಕ್ಷಃ, ಕಪಿ ಸಂಯೋಗಾಭಾವವ್ಯಾಪ್ಯ ಪುರೋವೃತ್ತಿತ್ವವಾನಯಂ ವೃಕ್ಷಃ' ಎಂಬ ಸಂಯೋಗ, ಸಂಯೋಗಾಭಾವವಿಷಯಕ ವಿರೋಧಿಪರಾಮರ್ಶದಿಂದ ಒಂದೇ ವೃಕ್ಷತ್ವರೂಪ ಹೇತುವಿನಲ್ಲಿ ಯಾರಿಗೂ ಸತ್ಪ್ರತಿಪಕ್ಷತ್ವವ್ಯವಹಾರ ಬಂದಿಲ್ಲ. ಆದುದರಿಂದ ಎರಡು ಹೇತುಗಳೇ ಪರಸ್ಪರ ವಿರುದ್ಧವಾಗಿದ್ದು, ಸಾಧ್ಯಸಾಧ್ಯಾಭಾವವಿಷಯಕ ಪರಸ್ಪರಪ್ರತಿಸ್ಪರ್ಧಿಗಳಾದ ಪರಾಮರ್ಶಯಥಾರ್ಥಜ್ಞಾನಗಳುಂಟಾದರೆ ಅವುಗಳಿಂದ ಹೇತುವಿನಲ್ಲಿ ಸತ್ಪ್ರತಿಪಕ್ಷತ್ವಕಲ್ಪನೆಯೇ ನ್ಯಾಯ್ಯವಾಗಿರುತ್ತದೆ. ಅನ್ಯೇತುಕಾರರ ಲಕ್ಷಣ ಸಂಗತವಲ್ಲ.

ಸ್ವಸಾಧ್ಯವಿರುದ್ಧ ಸಾಧ್ಯಾಭಾವವ್ಯಾಪ್ಯವತ್ತಾ ಪರಾಮರ್ಶಕಾಲೀನ ಸಾಧ್ಯವ್ಯಾಪ್ಯವತ್ತಾಪರಾಮರ್ಶವಿಷಯಃ' ಎಂದು ಸತ್ಪ್ರತಿಪಕ್ಷದನಿರ್ದುಷ್ಟವಾದ ಲಕ್ಷಣ. 'ಹ್ರದೋ ವಹ್ನಿಮಾನ್—ಧೂಮಾತ್' ‖ ಹ್ರದೋ — ವಹ್ನ್ಯಭಾವವಾನ್—ಜಲಾತ್ ‖ ಎಂಬಲ್ಲಿ ಸಮನ್ವಯ. ಸ್ವಪದದಿಂದ ಜಲರೂಪ ಹೇತುವನ್ನು ತೆಗೆದುಕೊಂಡರೆ ಅದರ ಸಾಧ್ಯ—ವಹ್ನ್ಯಭಾವ. ತದ್ವಿರುದ್ಧವಾದ ಸಾಧ್ಯವೆಂದರೆ ವಹ್ನಿ. ತದಭಾವವ್ಯಾಪ್ಯವತ್ತಾಪರಾಮರ್ಶ ಅಂದರೆ 'ವಹ್ನ್ಯಭಾವವ್ಯಾಪ್ಯಜಲವಾನ್ ಹ್ರದಃ' ಎಂಬ ಪರಾಮರ್ಶ

ತತ್ಕಾಲೀನ—ಆಪರಾಮರ್ಶಕಾಲದಲ್ಲಿಯೇ, ಸಾಧ್ಯವ್ಯಾಪ್ಯ ವತ್ತಾಪರಾಮರ್ಶವೆಂದರೆ 'ವಹ್ನಿವ್ಯಾಪ್ಯಧೂಮವಾನಯಂ ಹ್ರದಃ' ಎಂಬ ಪರಾಮರ್ಶ. ಈ ಪರಾಮರ್ಶ ಜ್ಞಾನ ದಲ್ಲಿ ವಿಷಯವಾಗಿ ತೋರುವ ಹೇತು ಅಂದರೆ ಧೂಮಹೇತುವೇ ಆದುದರಿಂದ ಅದೇ ಸತ್ಪ್ರತಿಪಕ್ಷವಾಗುತ್ತದೆ. ಕೆಲವರು 'ಪಕ್ಷೇಸಾಧ್ಯಧೀಪ್ರತಿಬಂಧಕಃ ಸತ್ಪ್ರತಿಪಕ್ಷಃ' ಎಂದೂ ಲಕ್ಷಣ ಹೇಳುತ್ತಾರೆ. ಪಕ್ಷದಲ್ಲಿ ಸಾಧ್ಯಜ್ಞಾನ ಬಾರದಂತೆ ಪ್ರತಿಬಂಧಕ ಮಾಡುವುದೇ ಸತ್ಪ್ರತಿಪಕ್ಷವೆಂದು ತಾತ್ಪರ್ಯ.

ಅತ್ರ ಕೇಚಿತ್—ಯಥಾ ಘಟಾಭಾವವ್ಯಾಪ್ಯವತ್ತಾಜ್ಞಾನೇ ವಿದ್ಯಮಾನೇಽಪಿ ಘಟಚಕ್ಷುಃ ಸಂಯೋಗೇ ಸತಿ ಘಟವತ್ತಾಜ್ಞಾನಂ ಜಾಯತೇ । ಯಥಾ ಚ ಶಂಖೇ ಸತ್ಯಪಿ ಪೀತತ್ವಾಭಾವವ್ಯಾಪ್ಯಶಂಖವತ್ತಾಜ್ಞಾನೇ ಸತಿ ಪಿತ್ತಾದಿದೋಷೇ ಪೀತಃ ಶಂಖ ಇತಿ ಧೀರ್ಜಾಯತೇ । ಏವಂ ಕೋಟಿದ್ವಯವ್ಯಾಪ್ಯದರ್ಶನೇಽಪಿ ಕೋಟಿದ್ವಯಸ್ಯ ಪ್ರತ್ಯಕ್ಷರೂಪಃ ಸಂಶಯೋ ಭವತಿ । ತಥಾ ಸತ್ಪ್ರತಿಪಕ್ಷಸ್ಥಲೇ ಸಂಶಯರೂಪಾನು ಮಿತಿರ್ಭವತ್ಯೇವ । ಯತ್ರ ಚೈಕಕೋಟಿವ್ಯಾಪ್ಯದರ್ಶನಂ ತತ್ರಾಧಿಕಬಲತಯಾ ದ್ವಿತೀಯ ಕೋಟಿಭಾನಪ್ರತಿಬಂಧಾನ್ನ ಸಂಶಯಃ । ಫಲಬಲೇನ ಚಾಧಿಕಸಮಬಲ ಭಾವಃ ಕಲ್ಪ್ಯತ ಇತಿ ವದಂತಿ । ತನ್ನ । ತದಭಾವವ್ಯಾಪ್ಯವತ್ತಾಜ್ಞಾನೇ ಸತಿ ತದುಪನೀತಭಾನವಿಶೇಷಶಾಬ್ದ ಬೋಧಾದೇರನುದಯಾಲ್ಲೌಕಿಕಸನ್ನಿಕರ್ಷಾಜನ್ಯ ದೋಷವಿಶೇಷಾಜನ್ಯಜ್ಞಾನಮಾತ್ರೇ ತಸ್ಯ ಪ್ರತಿಬಂಧಕತಾ ಲಾಘವಾತ್ । ನ ತೂಪನೀತಭಾನವಿಶೇಷೇ ಶಾಬ್ದಬೋಧೇ ಚ ಪೃಥಕ್ಪ್ರತಿಬಂಧಕತಾ ಗೌರ ವಾತ್ । ತಥಾಚ ಪ್ರತಿಬಂಧಕಸತ್ವಾತ್ ಕಥಮನುಮಿತಿಃ । ನಹಿ ಲೌಕಿಕ ಸನ್ನಿ ಕರ್ಷಸ್ಥಲೇ ಪ್ರತ್ಯಕ್ಷಮಿವ ಸತ್ಪ್ರತಿಪಕ್ಷಸ್ಥಲೇ ಸಂಶಯಾಕಾರಾನುಮಿತಿಃ ಪ್ರಾಮಾಣಿಕೀ, ಯೇನಾನುಮಿತಿಭಿನ್ನತ್ವೇನಾಪಿ ವಿಶೇಷಣೀಯಮ್ । ಯತ್ರ ಚ ಕೋಟಿದ್ವಯವ್ಯಾಪ್ಯವತ್ತಾಜ್ಞಾನಂ ತತ್ರೋಭಯತ್ರಾಪ್ರಾಮಾಣ್ಯಜ್ಞಾನಾತ್ ಸಂಶಯೋ ನಾನ್ಯಥಾಽಪ್ರಾಮಾಣ್ಯಕಸ್ಯೈವ ವಿರೋಧಿಜ್ಞಾನಸ್ಯ ಪ್ರತಿಬಂಧ ಕತ್ವಾದಿತಿ ॥

ಸತ್ಪ್ರತಿಪಕ್ಷದಿಂದ ಅನುಮಿತಿಪ್ರತಿಬಂಧಕವಾಗುವುದಿಲ್ಲ. ತದಭಾವವ್ಯಾಪ್ಯವತ್ತಾ ಜ್ಞಾನದಿಂದ ಅನುಮಿತಿಪ್ರತಿಬಂಧಕವಾಗುವುದು ಅಪ್ರಸಿದ್ಧವೇ ಆದುದರಿಂದ ಸತ್ಪ್ರತಿಪಕ್ಷ ಸ್ಥಳದಲ್ಲಿ ಸಾಧ್ಯತದಭಾವಸಂಶಯಜ್ಞಾನವುಂಟಾಗುತ್ತದೆಂದು ರತ್ನಕೋಶಕಾರನ ಮತ ವನ್ನು ಖಂಡಿಸಲು ಮೊದಲು ಅವನ ಮತವನ್ನು ತೋರಿಸುತ್ತಾನೆ. 'ಅತ್ರ—' ಇತಿ. 'ವದಂತಿ' ಎಂಬಲ್ಲಿ ಇದಕ್ಕೆ ಅನ್ವಯ. ಜ್ಞಾನಗಳಿಗೆ ಪರಸ್ಪರ ಪ್ರತಿಬಧ್ಯಪ್ರತಿಬಂಧಕ ಭಾವವನ್ನು ಅನುಭವಬಲದಿಂದ ಹೇಳಬೇಕು. ಕಾರ್ಯಹುಟ್ಟದಂತೆ ಮಾಡುವ ಧರ್ಮವು ಪ್ರತಿಬಂಧಕವಾಗುತ್ತದೆ. ಪ್ರತಿಬಂಧಕದಿಂದ ಹುಟ್ಟದಿರುವುದೇ ಪ್ರತಿಬಧ್ಯ. ಒಂದು

ಭೂಮಿಯಲ್ಲಿ ಘಟವಿದ್ದರೂ ಕತ್ತಲೆ ಅಥವಾ ಇತರ ವಸ್ತುವಿನವ್ಯವಧಾನಗಳಿಂದ ಮೊದಲು ಘಟ ತೋರುವುದಿಲ್ಲ. 'ಘಟಾಭಾವವತ್ ಭೂತಲಂ' ಎಂಬ ಜ್ಞಾನ ಬರುತ್ತದೆ. 'ಘಟಾಭಾವವ್ಯಾಪ್ಯವತ್ತಾಜ್ಞಾನ'ವೆಂದರೆ ಇದೇ. ಘಟಾಭಾವವೇ ಆಧೇಯ. ಭೂತಲವೇ ಅಧಿಕರಣ. ಘಟಾಭಾವನಿಷ್ಠಆಧೇಯತಾನಿರೂಪಿತ ಭೂತಲನಿಷ್ಠಾಧಿಕರಣತಾಜ್ಞಾನ. ಅಥವಾ ಭೂತಲನಿಷ್ಠಾಧಿಕರಣತಾನಿರೂಪಿತ ಘಟಾಭಾವನಿಷ್ಠಾಧೇಯತಾಜ್ಞಾನ. ಈ ಜ್ಞಾನ ಬಂದಿದ್ದರೂ (ಕತ್ತಲೆ ಹೋಗಿ) ಘಟಚಕ್ಷುಃಸಂಯೋಗಉಂಟಾದರೆ ಆಗ 'ಘಟವತ್ ಭೂತಲಮ್' ಎಂಬ ಜ್ಞಾನ ಬರುತ್ತದೆ. ಇದೇ. ಘಟವತ್ತಾಜ್ಞಾನ. ಇಲ್ಲಿ ಚಕ್ಷುಃ ಸಂಯೋಗರೂಪಗುಣವೇ ಪ್ರಬಲವಾದುದರಿಂದ ಘಟಾಭಾವವಿಷಯಕಜ್ಞಾನವು ಪ್ರತಿಬಧ್ಯವಾಗುತ್ತದೆ. ಘಟವತ್ತಾಜ್ಞಾನವು ಪ್ರತಿಬಂಧಕವಾಗುತ್ತದೆ. ಇಲ್ಲಿ ದೋಷಕ್ಕಿಂತ ಗುಣವೇ ಪ್ರಬಲವೆಂದು ಅನುಭವ ಸಿದ್ಧವಾಗಿದೆ.

'ಯಥಾ ಚ—' ಇತಿ. ಶುದ್ಧವಾದ ಕಣ್ಣುಳ್ಳ ಮನುಷ್ಯನಿಗೆ ಶಂಖವು ಬೆಳ್ಳಗಾಗಿಯೇ ತೋರುವುದರಿಂದ 'ಪೀತತ್ವಾಭಾವವ್ಯಾಪ್ಯ ಶಂಖತ್ವವಾನಯಂ ಶಂಖಃ (ಯತ್ರಶಂಖತ್ವಂತತ್ರ ಪೀತತ್ವಾಭಾವಃ) ಎಂಬ ಪರಾಮರ್ಶನಿಶ್ಚಯ ಬಂದಿರುತ್ತದೆ. ಆದರೆ ಕಾಲಕ್ರಮದಿಂದ ಅವನಿಗೆ ಕಾಮಾಲೆರೋಗ ಬಂದಾಗ ಪಿತ್ತಾದಿದೋಷದಿಂದ ಪೀತತ್ವಾಭಾವವ್ಯಾಪ್ಯಶಂಖತ್ವವತ್ತಾಜ್ಞಾನವಿದ್ದರೂ (ಶಂಖ ಬೆಳ್ಳಗಿದೆಯೆಂದು ತಿಳಿದಿದ್ದರೂ) 'ಶಂಖಃ ಪೀತಃ' (ಹಳದಿ ಶಂಖ) ಎಂಬ ಜ್ಞಾನ ಬರುತ್ತದೆ. ಇಲ್ಲಿ ಗುಣಕ್ಕಿಂತ ದೋಷಜ್ಞಾನವೇ ಪ್ರಬಲವಾದುದರಿಂದ ಶಂಖಶ್ವೇತತಾಜ್ಞಾನವು ಪ್ರತಿಬಧ್ಯವೂ ಪೀತತಾಜ್ಞಾನವು ಪ್ರತಿಬಂಧಕವೂ ಆಗುತ್ತದೆ.

'ಏವಂ ಕೋಟಿ—' ಇತಿ. ಎಲ್ಲಿ ದೂರಾದಿದೋಷದಿಂದ ಮೋಟುಮರ ಅಥವಾ ಒಬ್ಬ ಮನುಷ್ಯನಲ್ಲಿ 'ಸ್ಥಾಣುರ್ವಾ ಪುರುಷೋವಾ' ಎಂದು ಒಂದೇ ಧರ್ಮಿಯಲ್ಲಿ ವಿರುದ್ಧ ಕೋಟಿ (ಪ್ರಕಾರ) ದ್ವಯೋಪಸ್ಥಾಪಕಜ್ಞಾನ ಬರುತ್ತದೆ. (ಸ್ಥಾಣುತ್ವವಿದ್ದಲ್ಲಿ ಮನುಷ್ಯತ್ವವಿಲ್ಲ. ಮನುಷ್ಯತ್ವವಿದ್ದಲ್ಲಿ ಸ್ಥಾಣುತ್ವವಿಲ್ಲ. ಆದುದರಿಂದ ವಿರುದ್ಧ ಪ್ರಕಾರಕಗಳು) ಅಲ್ಲಿ ಸ್ಥಾಣುತ್ವವ್ಯಾಪ್ಯವಕ್ರಕೋಟರಾದಿಮಾನಯಮ್' (ಸ್ಥಾಣುತ್ವವಿದ್ದಲ್ಲಿ ಇರುವ ಪೊಟರೆ ಮುಂತಾದವುಗಳಿಂದ ಕೂಡಿರುವುದು ಈ ಮೋಟುಮರ.) 'ಪುರುಷತ್ವವ್ಯಾಪ್ಯಕರಚರಣಾದಿಮಾನಯಮ್' (ಪುರುಷತ್ವವಿದ್ದಲ್ಲಿ ಕರಚರಣಾದಿಗಳು ಇರುತ್ತವೆ.) ಎಂದು ಪರಸ್ಪರವಿರುದ್ಧಪರಾಮರ್ಶಗಳೆರಡು ಬಂದರೂ ಆ ಹೇತುವಿನಿಂದ ಪ್ರತ್ಯಕ್ಷ ಸಂಶಯ ಬರುತ್ತದೆ. (ಭಾವ, ಅಭಾವವನ್ನು ಗ್ರಹಿಸುವ ಜ್ಞಾನವೇ ಸಂಶಯ.) ಇಲ್ಲಿ ಚಕ್ಷುಃ ಸಂಯೋಗರೂಪಗುಣಕ್ಕಾಗಲೀ, ದೂರಾದಿದೋಷಕ್ಕಾಗಲೀ ಪ್ರಾಬಲ್ಯದೌರ್ಬಲ್ಯ ಹೇಳಲು ಶಕ್ಯವಿಲ್ಲ. ಆದುದರಿಂದ ಯಾವುದೂ ಯಾವುದರಿಂದಲೂ ಪ್ರತಿಬಧ್ಯವಾಗದಿರುವುದರಿಂದ ಸಂಶಯ ಬರುತ್ತದೆ. ಹಾಗೆಯೇ ಸತ್ಪ್ರತಿಪಕ್ಷದಲ್ಲಿಯೂ ಹೇಳಬೇಕೆಂದು ಅವನ ಸಿದ್ಧಾಂತ. ಇದನ್ನೇ 'ತಥಾಚ—' ಎಂಬುದರಿಂದ ವಿವರಿಸುತ್ತಾನೆ. ಸತ್ಪ್ರತಿಪಕ್ಷದಲ್ಲಿಯೂ ಹೇತುಗಳಿಗೆ ಸಮಬಲವಿರುವುದರಿಂದ ಯಾವುದೂ ಪ್ರತಿಬಧ್ಯವಾಗದಿರು

ವುದರಿಂದ ಸಾಧ್ಯತದಭಾವಪ್ರಕಾರಕವಾದ ಸಂಶಯಾತ್ಮಕವಾದ ಅನುಮಿತಿ (ಪರಾಮರ್ಶ ದಿಂದ ಹುಟ್ಟಿದ ಜ್ಞಾನ.) ಹುಟ್ಟುತ್ತದೆ; ಅಂದರೆ 'ಪರ್ವತಃ, ವಹ್ನಿಮಾನ್, ನ ವಾ' ಎಂಬ ಸಂಶಯಾತ್ಮಕವಾದ ಅನುಮಿತಿಯುಂಟಾಗುತ್ತದೆ. ಸತ್ಪ್ರತಿಪಕ್ಷದಿಂದ ಅನುಮಿತಿ ಪ್ರತಿಬಂಧಕವೆಂದೂ ಆಗುವುದಿಲ್ಲ. ಪರಸ್ಪರವಿರೋಧಿಪರಾಮರ್ಶನಿಶ್ಚಯವಿದ್ದಾಗಲೂ ಸಂಶಯ ಬರುವುದಾದರೆ ಏಕಕೋಟಿವ್ಯಾಪ್ಯವತ್ತಾನಿಶ್ಚಯಸ್ಥಲದಲ್ಲಿಯೂ ಕೋಟಿದ್ವಯ ಉಪಸ್ಥಿತಿ ಇರುವುದರಿಂದ ಸಂಶಯ ಬರಲಿ ಎಂದರೆ ಅಲ್ಲಿ ಅವನ ಸಮಾಧಾನ ಹೀಗಿದೆ ಯೆಂದು ತೋರಿಸುತ್ತಾನೆ. 'ಯತ್ರ ಚ—' ಇತಿ. ಎಲ್ಲಿ ಏಕಕೋಟಿವ್ಯಾಪ್ಯನಿಶ್ಚಯ ವಿದ್ದಾಗ ಅಧಿಕಬಲವಿರುವುದರಿಂದ ದ್ವಿತೀಯಕೋಟಿಭಾನಪ್ರತಿಬಂಧವುಂಟಾಗುವುದರಿಂದ ಸಂಶಯಕ್ಕೆ ಅವಕಾಶವಿಲ್ಲ. ಹಿಂದೆ ಶಂಖಾದಿ ಉದಾಹರಣೆ ಹೇಳಿದಾಗ ಅಲ್ಲಿ ದೋಷಾದಿ ಗಳಿಗೇ ಪ್ರಾಬಲ್ಯವಿರುತ್ತದೆಂದು ಹೇಳಿವೆ. ಸಂಶಯ ಸ್ಥಳದಲ್ಲಿ ದೂರತ್ವವಿದ್ದರೂ ಸ್ಥಾಣುತ್ವ, ಪುರುಷತ್ವಸ್ಮೃತಿಯಿಂದ ಸಂಶಯವುಂಟಾಗುವುದರಿಂದ ಅಲ್ಲಿ ಸಾಮಗ್ರಿ ಗಳಿಗೆ ಸಮಬಲವಿದೆಯೆಂದು ಫಲದಿಂದ ಕಲ್ಪಿಸಬೇಕು. ಪಿತ್ತಾದಿದೋಷವಿರುವಾಗ ಪೀತತ್ವಪ್ರಕಾರಕನಿಶ್ಚಯವೇ ಬರುವುದರಿಂದ ದೋಷವೇ ಪ್ರತಿಬಂಧಕವಾಗುತ್ತದೆ. ದೂರತ್ವಾದಿದೋಷವಿದ್ದರೂ ಕೋಟಿದ್ವಯವ್ಯಾಪ್ಯವತ್ತಾನಿಶ್ಚಯವಿರುವುದರಿಂದ ಸಂಶಯ ಬರುವುದರಿಂದ ಸಮಬಲತ್ವಕಲ್ಪಿತವಾಗುತ್ತದೆ. ಇದರಿಂದ ಅನುಮಾನ ಹೀಗೆ ಸಿದ್ಧ ವಾಗುತ್ತದೆ. 'ಪೀತತಾ ಸಾಕ್ಷಾತ್ಕಾರ ಸಾಮಗ್ರೀ ಪ್ರಬಲಾ—ಸತ್ಯಪಿ ಶಂಖೇ ಶುಕ್ಲತ್ವ ಜ್ಞಾನೇ ಪೀತಃ ಶಂಖಃ ಇತ್ಯನುಭವಾತ್ ॥ "ಸ್ಥಾಣುರ್ವಾ ಪುರುಷೋವಾ' ಇತಿ ಜ್ಞಾನಂ—ಸಮಬಲದೋಷಜನ್ಯಂ—ದ್ವಯೋಃ ಸ್ಮೃತೌ ಸತ್ಯಾಮಪಿ ಉಭಯಕೋಟ್ಯ ವಗಾಹನಾತ್" 'ಯನ್ನೈವ ತನ್ನೈವಂ' ಯಥಾ ಘಟಃ ॥

ಹೀಗೆ ರತ್ನಕೋಶಕಾರನ ಮತವನ್ನು ತೋರಿಸಿ ಖಂಡಿಸುತ್ತಾನೆ. 'ತನ್ನ—' ಇತಿ. ಎಲ್ಲಿ ಸಾಧ್ಯಾಭಾವವ್ಯಾಪ್ಯವತ್ತಾಜ್ಞಾನವಿರುವಾಗ (ಹ್ರದಾದಿಗಳಲ್ಲಿ ವಹ್ನಿರೂಪ ಸಾಧ್ಯವಿಲ್ಲವೆಂದೂ, ವಹ್ನ್ಯಭಾವವ್ಯಾಪ್ಯಜಲವಿದೆಯೆಂದೂ ನಿಶ್ಚಯವಿರುವಾಗ,) ಸಾಧ್ಯವಿಷಯಕ ಅಲೌಕಿಕ ಸನ್ನಿಕರ್ಷಜನ್ಯಸಾಕ್ಷಾತ್ಕಾರವಾಗಲೀ, ಅನುಮಿತಿಯಾಗಲೀ ಶಾಬ್ದಬೋಧವಾಗಲೀ ಉಂಟಾಗುವುದಿಲ್ಲವೋ ಅಲ್ಲಿ ಪ್ರತಿಬಂಧಕತ್ವ ಹೇಳಬೇಕು. ಉಪನೀತಭಾನಂ—ಅಲೌಕಿಕಸನ್ನಿಕರ್ಷದಿಂದ ಉಂಟಾಗುವ ಪ್ರತ್ಯಕ್ಷ. ಆದಿ ಪದದಿಂದ ಅನುಮಿತಿಯನ್ನು ತೆಗೆದುಕೊಳ್ಳಬೇಕು. ಸಾಧ್ಯಾಭಾವವಿಷಯಕವಾದ ಪರಾಮರ್ಶ ವಿಷಯಕಪ್ರತ್ಯಕ್ಷಜ್ಞಾನವು ('ಹ್ರದಃ ವಹ್ನ್ಯಭಾವವ್ಯಾಪ್ಯಜಲವಾನ್' ಎಂಬ ಪ್ರತ್ಯಕ್ಷಾ ತ್ಮಕವಾದ ಜ್ಞಾನ.) ಲೌಕಿಕಸನ್ನಿಕರ್ಷಾಜನ್ಯದೋಷವಿಶೇಷಾಜನ್ಯಜ್ಞಾನಸಾಮಾನ್ಯ ವನ್ನು ಕುರಿತು ಪ್ರತಿಬಂಧಕವೆಂಬುದು ಲೋಕಸಿದ್ಧವಾಗಿದೆ. ಲೌಕಿಕಸನ್ನಿಕರ್ಷಾಜನ್ಯ ಜ್ಞಾನವೆಂದರೆ ಲೌಕಿಕಸನ್ನಿಕರ್ಷನಿಷ್ಠಜನಕತಾನಿರೂಪಿತಜನ್ಯತಾಶೂನ್ಯಜ್ಞಾನವೆಂದರ್ಥ. (ಹೀಗೆಯೇ ದೋಷವಿಶೇಷನಿಷ್ಠಜನಕತಾನಿರೂಪಿತಜನ್ಯತಾಶೂನ್ಯಜ್ಞಾನವೂ ಪ್ರತಿಬಧ್ಯ ವೆಂದು ತಿಳಿಯಬೇಕು.) ಸಾಧ್ಯಾಭಾವವ್ಯಾಪ್ಯವತ್ತಾನಿಶ್ಚಯವು ಪ್ರತಿಬಂಧಕವಾಗುತ್ತ

ದೆಂದರೆ ಆ ಪ್ರತಿಬಧ್ಯಜ್ಞಾನವು ಲೌಕಿಕಸನ್ನಿಕರ್ಷದಿಂದ ಬಂದಿರಬಾರದು, ಮತ್ತು ದೋಷವಿಶೇಷದಿಂದಲೂ ಹುಟ್ಟಿರಬಾರದು. ಶಾಬ್ದಬೋಧಾದಿಜ್ಞಾನವು ಲೌಕಿಕಸನ್ನಿಕರ್ಷಜನ್ಯವಲ್ಲ. ಪದಜ್ಞಾನಾದಿಗಳಿಂದ ಉಂಟಾಗುತ್ತದೆ. ಆದುದರಿಂದ ಇದಕ್ಕೆ ಪ್ರತಿಬಂಧಕವಾಗಬಹುದು. 'ಪೀತಃ ಶಂಖಃ' ಎಂಬ ಜ್ಞಾನವು ದೋಷವಿಶೇಷದಿಂದ ಉಂಟಾಗುವುದರಿಂದ ದೋಷವಿಶೇಷಾಜನ್ಯವಾಗದಿರುವುದರಿಂದ ಅದಕ್ಕೆ ಪ್ರತಿಬಂಧಕವಾಗುವುದಿಲ್ಲ. ಆದುದರಿಂದ ಸಾಧ್ಯಾಭಾವವಿಷಯಕಪರಾಮರ್ಶರೂಪ ಜ್ಞಾನವು ಲೌಕಿಕ ಸನ್ನಿಕರ್ಷದಿಂದ ಉಂಟಾಗದಿರುವ, ದೋಷವಿಶೇಷದಿಂದ ಉಂಟಾಗದಿರುವ ಶಾಬ್ದಬೋಧ, ಅನುಮಿತಿ ಮುಂತಾದ ಜ್ಞಾನಕ್ಕೆ ಪ್ರತಿಬಂಧಕವಾಗುತ್ತದೆ.

'ನತು—' ಇತಿ. ಹೀಗೆ ಒಂದೇ ರೀತಿ ಪ್ರತಿಬಂಧಕತ್ವವನ್ನು ಹೇಳಬೇಕಲ್ಲದೆ ಅಲೌಕಿಕ ಸಾಕ್ಷಾತ್ಕಾರವಿಶೇಷದಲ್ಲಿಯೂ, ಶಾಬ್ದಬೋಧದಲ್ಲಿಯೂ ಬೇರೆ ಬೇರೆಯಾಗಿ ಪ್ರತಿಬಂಧಕತ್ವವನ್ನು ಹೇಳುವುದು ನ್ಯಾಯವಲ್ಲ. ಎಲ್ಲಿ ಸಾಧ್ಯಾಭಾವವಿಷಯಕಜ್ಞಾನವುಂಟಾಗಿದೆಯೋ ಅಲ್ಲಿಯೇ ಅಲೌಕಿಕಸನ್ನಿಕರ್ಷದಿಂದ ಉಂಟಾದ ಸಾಧ್ಯಾಭಾವವಿಷಯಕಜ್ಞಾನವಾದ ಅನುಮಿತಿಯನ್ನು ಕುರಿತು ಪ್ರತಿಬಂಧಕವೆಂದು ಹೇಳಬೇಕು. ಆದುದರಿಂದ ಸತ್ಪ್ರತಿಪಕ್ಷದಲ್ಲಿ ಸಾಧ್ಯಾಭಾವವ್ಯಾಪ್ಯವತ್ತಾಜ್ಞಾನವಿರುವುದರಿಂದ ಅನುಮಿತಿ ಬರುವುದೇ ಇಲ್ಲ. ಲೌಕಿಕಸನ್ನಿಕರ್ಷವಿರುವಾಗ ಹೇಗೆ ಪ್ರತ್ಯಕ್ಷ ಬರುತ್ತದೆಯೋ ಅದರಂತೆ ಸತ್ಪ್ರತಿಪಕ್ಷಸ್ಥಳದಲ್ಲಿ ಸಂಶಯಾಕಾರವಾದ ಅನುಮಿತಿಯು ಪ್ರಾಮಾಣಿಕವಾಗಿ ಯಾರಿಗೂ ಬರುವುದಿಲ್ಲ.

'ಸ್ಥಾಣುರ್ವಾ ಪುರುಷೋವಾ' ಎಂಬಲ್ಲಿ (ಪ್ರತ್ಯಕ್ಷ) ಸಂಶಯ ಬಂದಂತೆ ಸತ್ಪ್ರತಿಪಕ್ಷಸ್ಥಳದಲ್ಲಿಯೂ ಸಂಶಯಾನುಮಿತಿಬರಬಹುದೆಂದು ಹೇಳಿರುವುದೂ ಸರಿಯಲ್ಲವೆಂದು ತೋರಿಸುತ್ತಾನೆ. 'ಯತ್ರ ಚ—' ಇತಿ. 'ಸ್ಥಾಣುರ್ವಾ ಪುರುಷೋವಾ' ಎಂಬಲ್ಲಿ ಉಭಯಕೋಟಿವ್ಯಾಪ್ಯವತ್ತಾಜ್ಞಾನ ಬಂದಿರುತ್ತದೆ. (ಉಭಯಕೋಟಿನಿಷ್ಠವ್ಯಾಪಕತಾನಿರೂಪಿತವ್ಯಾಪ್ಯವತ್ತಾಜ್ಞಾನ.) ಅಲ್ಲಿ ಎರಡರಲ್ಲಿಯೂ ಅಪ್ರಾಮಾಣ್ಯಜ್ಞಾನವಿರುವುದರಿಂದ ಅಂದರೆ ಪ್ರಮಾತ್ವಾಭಾವನಿಶ್ಚಯವಿರುವುದರಿಂದ (ಎರಡೂ ಯಥಾರ್ಥಜ್ಞಾನಗಳಲ್ಲ) ಸಂಶಯ ಉಂಟಾಗುತ್ತದೆ. ಅಲ್ಲಿ ಯಾವುದಾದರೊಂದು ಕೋಟಿಯಲ್ಲಿ (ಪ್ರಕಾರ) ಪ್ರಾಮಾಣ್ಯನಿಶ್ಚಯ ಉಂಟಾಗಿದ್ದರೆ ಆಗ ಸಂಶಯ ಬರುವುದಿಲ್ಲ. 'ಅಗೃಹೀತ—' ಇತಿ. 'ನ ಗೃಹಿತಂ (ಜ್ಞಾತಂ) ಅಪ್ರಾಮಾಣ್ಯಂ ಯಸ್ಯ ತತ್—ಅಗೃಹೀತಾಪ್ರಾಮಾಣ್ಯಕಮ್'. ಅಪ್ರಾಮಾಣ್ಯವು ಜ್ಞಾತವಾಗಿರಬಾರದು. ಅಂದರೆ ಯಾವ ಜ್ಞಾನದ ಪ್ರಾಮಾಣ್ಯವು ನಿಶ್ಚಿತವಾಗಿದೆಯೋ (ನಿಜವಾದ ಜ್ಞಾನವೋ) ಅಂತಹ ವಿರೋಧಿಜ್ಞಾನಕ್ಕೆ ಪ್ರತಿಬಂಧಕತ್ವವಿರುತ್ತದೆ. ನಿಶ್ಚಿತವಾದ ಅಪ್ರಾಮಾಣ್ಯವುಳ್ಳ ಜ್ಞಾನವೇ ಪ್ರತಿಬಧ್ಯವಾಗುತ್ತದೆ. ಸತ್ಪ್ರತಿಪಕ್ಷದಲ್ಲಿ ಯಾವುದೊಂದು ಕೋಟಿಯಲ್ಲಿಯೂ ಅಪ್ರಾಮಾಣ್ಯನಿಶ್ಚಯ ಬಂದಿರುವುದಿಲ್ಲ. ಪರಸ್ಪರಾಭಾವವ್ಯಾಪ್ಯವತ್ತಾಜ್ಞಾನವಿರುವಾಗ

ಅನುಮಿತಿಸಂಶಯು ಬರುವುದು ಹೇಗೆ ? ಆದುದರಿಂದ ರತ್ನಕೋಶಕಾರನು ಹೇಳಿರುವುದು ಅಸಮಂಜಸವೆಂದು ವ್ಯಕ್ತವಾಗುತ್ತದೆ.

ಅಸಿದ್ಧಿಸ್ತ್ವಾಶ್ರಯಾಸಿದ್ಧ್ಯಾದ್ಯನ್ಯತಮತ್ವಮ್ । ಆಶ್ರಯಾಸಿದ್ಧಿಃ ಪಕ್ಷೇಪಕ್ಷತಾವಚ್ಛೇದಕಸ್ಯಾಭಾವಃ । ಯದಿ ಚ ಕಾಂಚನಮಯಃ ಪರ್ವತೋ ವಹ್ನಿಮಾನ್ ಇತಿ ಸಾಧ್ಯತೇ ತತ್ರ ಪರ್ವತೋ ನ ಕಾಂಚನಮಯಃ ಇತಿ ಜ್ಞಾನೇ ವಿದ್ಯಮಾನೇ ಕಾಂಚನಮಯೇ ಪರ್ವತೇ ಪರಾಮರ್ಶಪ್ರತಿಬಂಧಃ ಫಲಮ್ । ಸ್ವರೂಪಾಸಿದ್ಧಿಸ್ತು ಪಕ್ಷೇ ವ್ಯಾಪ್ಯತ್ವಾಭಿಮತಸ್ಯ ಹೇತೋರಭಾವಃ । ಅತ್ರ ಚ 'ಹ್ರದೋ ದ್ರವ್ಯಂಧೂಮಾತ್' ಇತ್ಯಾದೌ ಪಕ್ಷೇ ವ್ಯಾಪ್ಯತಾಭಿಮತಸ್ಯ ಹೇತೋರಭಾವೇ ಜ್ಞಾತೇ ಪಕ್ಷೇಸಾಧ್ಯವ್ಯಾಪ್ಯಹೇತುಮತ್ತಾಜ್ಞಾನರೂಪಸ್ಯ ಪರಾಮರ್ಶಸ್ಯ ಪ್ರತಿಬಂಧಃ ಫಲಮ್ । ಸಾಧ್ಯಾಪ್ರಸಿದ್ಧ್ಯಾದಯಸ್ತು ವ್ಯಾಪ್ಯತ್ವಾಸಿದ್ಧಿಮಧ್ಯೇಂತರ್ಭೂತಾಃ । ಸಾಧ್ಯಾಪ್ರಸಿದ್ಧಿರಪಿ ವ್ಯಾಪ್ಯತ್ವಾಸಿದ್ಧಿಃ । ಸಾ ಚ ಸಾಧ್ಯೇಸಾಧ್ಯತಾವಚ್ಛೇದಕಸ್ಯಾಭಾವಃ । ತಥಾ ಚ ಕಾಂಚನಮಯವಹ್ನಿಮಾನಿತ್ಯಾದೌ ಸಾಧ್ಯೇ ಸಾಧ್ಯತಾವಚ್ಛೇದಕಾಭಾವೇ ಜ್ಞಾತೇ ಸಾಧ್ಯತಾವಚ್ಛೇದಕವಿಶಿಷ್ಟಸಾಧ್ಯವ್ಯಾಪ್ಯವತ್ತಾಜ್ಞಾನರೂಪ ಪರಾಮರ್ಶ ಪ್ರತಿಬಂಧಃ ಫಲಮ್ । ಏವಂ ಹೇತೌ ಹೇತುತಾವಚ್ಛೇದಕಾಭಾವಃ ಸಾಧನಾಪ್ರಸಿದ್ಧಿಃ । ಯಥಾ ಚ ಕಾಂಚನಮಯಧೂಮಾದಿತ್ಯಾದೌ ಅತ್ರ । ಹೇತುತಾವಚ್ಛೇದಕವಿಶಿಷ್ಟಹೇತೋರ್ಜ್ಞಾನಾಭಾವಾತ್ತದ್ಧೇತುಕವ್ಯಾಪ್ತಿಜ್ಞಾನಾದೇರಭಾವಃ ಫಲಮ್ । ಏವಂ ವಹ್ನಿಮಾನ್ ನೀಲಧೂಮಾದಿತ್ಯಾದೌ ನೀಲಧೂಮತ್ವಂ ಹೇತುತಾವನವಚ್ಛೇದಕಮಪಿ ವ್ಯಾಪ್ಯತ್ವಾಸಿದ್ಧಿರಿತ್ಯಪಿ ವದಂತಿ ॥

ಅಸಿದ್ಧಿಲಕ್ಷಣ ಹೇಳುತ್ತಾನೆ. 'ಅಸಿದ್ಧಿ—' ಇತಿ. ಆಶ್ರಯಾಸಿದ್ಧಿ, ವ್ಯಾಪ್ಯತ್ವಾಸಿದ್ಧಿ, ಸಾಧನಾಪ್ರಸಿದ್ಧಿಗಳೆಂದು ಅಸಿದ್ಧಿ ಮೂರುವಿಧವಾಗಿರುತ್ತದೆ. ಆಶ್ರಯಾಸಿದ್ಧಿ ಲಕ್ಷಣ ತೋರಿಸುತ್ತಾನೆ. 'ಪಕ್ಷೇ—' ಇತಿ. ಪಕ್ಷವಾದ ಪರ್ವತಾದಿಗಳಲ್ಲಿ ಪಕ್ಷದಲ್ಲಿರುವ ಧರ್ಮವಾದ ಪಕ್ಷತಾವಚ್ಛೇದಕವಿಲ್ಲದಿರುವುದು. ಇದಕ್ಕೆ ಉದಾಹರಣೆ ಮತ್ತು ಫಲವನ್ನು ತೋರಿಸುತ್ತಾನೆ. 'ಯತ್ರ—' ಇತಿ 'ಕಾಂಚನಮಯಃ ಪರ್ವತೋವಹ್ನಿಮಾನ್—ಧೂಮಾತ್' ಇಲ್ಲಿ ಕಾಂಚನಮಯಪರ್ವತರೂಪಪಕ್ಷದಲ್ಲಿ ಪಕ್ಷತಾವಚ್ಛೇದಕಧರ್ಮವಾದ ಕಾಂಚನಮಯತ್ವವು ಇರುವುದಿಲ್ಲ. (ಚಿನ್ನದ ಪರ್ವತ ಅಪ್ರಸಿದ್ಧ.) ಪಕ್ಷತಾವಚ್ಛೇದಕಾಭಾವವೇ ದೋಷ ಆಶ್ರಯಸಿದ್ಧಿವಾಗುತ್ತದೆ. ಆ ಪಕ್ಷದಲ್ಲಿರುವ ಹೇತುವಾದ ಧೂಮವು ತದ್ದೋಷವಿಶಿಷ್ಟವಾದುದರಿಂದ ಆಶ್ರಯಾಸಿದ್ಧ ಹೇತ್ವಾಭಾಸವಾಗುತ್ತದೆ. 'ಪರ್ವತಃ ನ ಕಾಂಚನಮಯಃ' ಎಂಬ ಜ್ಞಾನವುಂಟಾದರೆ 'ವಹ್ನಿವ್ಯಾಪ್ಯಧೂಮವಾನಯಂ ಕಾಂಚನಮಯಪರ್ವತಃ' ಎಂಬ ಪರಾಮರ್ಶಜ್ಞಾನ ಬರುವುದಿಲ್ಲ. (ಅವೇ

ಪ್ರತಿಬಧ್ಯವಾಗುವುದು) ಪರಾಮರ್ಶಜ್ಞಾನವಿಲ್ಲವಾದರೆ ಅದರಿಂದ 'ಪರ್ವತೋ ವಹ್ನಿ ಮಾನ್' ಎಂಬ ಅನುಮಿತಿಯೂ ಬರುವುದಿಲ್ಲ.

'ಗಗನಾರವಿಂದಂ ಸುರಭಿ—ಅರವಿಂದತ್ವಾತ್ । ಸರೋಜಾರವಿಂದವತ್ ।' ಇಲ್ಲಿ ಅರವಿಂದತ್ವ ಹೇತುವೂ ಆಶ್ರಯಾಸಿದ್ಧವಾಗುತ್ತದೆ. ಅರವಿಂದದಲ್ಲಿ (ಕಮಲ) ಗಗನೀಯತ್ವರೂಪ ಪಕ್ಷತಾವಚ್ಛೇದಕಧರ್ಮವು ಇಲ್ಲವೆಂಬ ನಿಶ್ಚಯವಿರುವುದರಿಂದ 'ಸುರಭಿ ವ್ಯಾಪ್ಯ ಅರವಿಂದತ್ವವತ್‌ಗಗನಾರವಿಂದಂ' ಎಂಬ ಪರಾಮರ್ಶಜ್ಞಾನ ಹುಟ್ಟುವದಿಲ್ಲ. ಇದರಿಂದ ಅನುಮಿತಿಯೂ ಉಂಟಾಗುವುದಿಲ್ಲ. 'ಗಗನಾರವಿಂದಂ ನಾಸ್ತಿ' ಎಂಬಲ್ಲಿ ನಿಷೇಧ ಯಾವುದಕ್ಕೆ ಎಂಬ ವಿಚಾರ ಬರುತ್ತದೆ. ಅರವಿಂದತ್ವ ನಿಷೇಧವೇ ? ಗಗನೀಯತ್ವ ನಿಷೇಧವೇ ? ಸಾಮಾನಾಧಿಕರಣ್ಯಸಂಬಂಧದಿಂದ ಗಗನೀಯತ್ವವಿಶಿಷ್ಟ ಅರವಿಂದತ್ವವನ್ನು ಅರವಿಂದದಲ್ಲಿ ಹೇಳಲು ಸಾಧ್ಯವಿಲ್ಲ. ಅರವಿಂದ ಲೋಕಪ್ರಸಿದ್ಧವಾಗಿದೆ. ಆದುದರಿಂದ ವಿಶಿಷ್ಟದಲ್ಲಿ ಹೇಳಿದ ವಿಧಿಯಾಗಲೀ ನಿಷೇಧವಾಗಲೀ ವಿಶೇಷ್ಯದಲ್ಲಿ ಭಾಧಿತವಾದರೆ ವಿಶೇಷಣದಲ್ಲಿ ಪರ್ಯವಸಾನವಾಗುತ್ತದೆಂಬ "ಸವಿಶೇಷಣೇವಿಧಿನಿಷೇಧೌ ಸತಿ ವಿಶೇಷ್ಯೇನ್ವಯಬಾಧೇ ವಿಶೇಷಣಮುಪಸಂಕ್ರಾಮತಃ" ಎಂಬ ನ್ಯಾಯದಿಂದ ಗಗನೀಯತ್ವ ನಿಷೇಧದಲ್ಲಿ ಪರ್ಯವಸಾನವಾಗುತ್ತದೆ. ಹೀಗೆ ಪಕ್ಷತಾವಚ್ಛೇದಕ ಬಾರದಿರುವುದರಿಂದ ಇದೂ ಆಶ್ರಯಾಸಿದ್ಧವಾಗುತ್ತದೆ.

ಸ್ವರೂಪಾಸಿದ್ಧಿಲಕ್ಷಣ ತೋರಿಸುತ್ತಾನೆ. 'ಪಕ್ಷೇ—' ಇತಿ. ವ್ಯಾಪ್ಯತ್ವೇನ ಹೇತುರೂಪದಿಂದ, ಅಭಿಮತಸ್ಯ—ಇಷ್ಟವಾದ ಹೇತುವಿಗೆ ಪಕ್ಷವೃತ್ತಿತ್ವ ಇಲ್ಲದಿದ್ದರೆ, ಅಭಿಮತವಾದ ಹೇತುವು ಪಕ್ಷದಲ್ಲಿಯೇ ಬಾರದಿದ್ದರೆ ಅದು ಸ್ವರೂಪಾಸಿದ್ಧಿಯಾಗುತ್ತದೆ. ತದ್ವಿಶಿಷ್ಟಹೇತುವೇ ಸ್ವರೂಪಾಸಿದ್ಧವಾಗುತ್ತದೆ. ಉದಾ :—'ಹ್ರದಃ—ದ್ರವ್ಯಂ—ಧೂಮಾತ್ । ಇಲ್ಲಿ ಪಕ್ಷವಾದ ಹ್ರದದಲ್ಲಿ ವ್ಯಾಪ್ಯತ್ವಾಭಿಮತವಾದ ಧೂಮರೂಪ ಹೇತುವು ಇಲ್ಲವೆಂಬ ಜ್ಞಾನವುಂಟಾದಾಗ 'ದ್ರವ್ಯತ್ವವ್ಯಾಪ್ಯ ಧೂಮವಾನಯಂ 'ಹ್ರದಃ' ಎಂಬ ಪರಾಮರ್ಶಉಂಟಾಗದಿರುವುದೇ ಪ್ರಯೋಜನ. ಇದರಿಂದ 'ಹ್ರದೋ ವಹ್ನಿಮಾನ್' ಎಂಬ ಅನುಮಿತಿ ಹುಟ್ಟುವುದಿಲ್ಲ.

ಸಾಧ್ಯಾಪ್ರಸಿದ್ಧಿಯೂ ವ್ಯಾಪ್ಯತ್ವಾಸಿದ್ಧಿಯಲ್ಲಿಯೇ (ಸ್ವರೂಪಾಸಿದ್ಧಿಯೆಂದರೂ ಒಂದೇ.) ಸೇರುತ್ತದೆಂದು ತೋರಿಸುತ್ತಾನೆ. 'ಸಾಧ್ಯಾಪ್ರ—' ಇತಿ. ಸಾಧ್ಯಾಪ್ರಸಿದ್ಧಿಯೆಂದು ಬೇರೆ ಗಣನೆ ಮಾಡಬೇಕಾಗಿಲ್ಲ. ಅದೂ ಇದರಲ್ಲಿಯೇ ಅಡಕವಾಗುತ್ತದೆ. ಸಾಧ್ಯದಲ್ಲಿರುವ ಧರ್ಮವೇ ಸಾಧ್ಯತಾವಚ್ಛೇದಕವಾಗುತ್ತದೆ. ಸಾಧ್ಯದಲ್ಲಿ ಸಾಧ್ಯತಾವಚ್ಛೇದಕವಿಲ್ಲದಿರುವುದೇ ಸಾಧ್ಯಾಪ್ರಸಿದ್ಧಿ. ಸಾಧ್ಯತಾವಚ್ಛೇದಕಾಭಾವವೂ ಒಂದು ಹೇತು ದೋಷ. ಇದರಿಂದ ಕೂಡಿದ ಹೇತುವು ವ್ಯಾಪ್ಯತ್ವಾಸಿದ್ಧವಾಗುತ್ತದೆ (ಇದಕ್ಕೆ ಸಾಧ್ಯಾಪ್ರಸಿದ್ಧ ಹೇತ್ವಾಭಾಸವೆಂದು ಹೆಸರು.) ಉದಾ :—'ಪರ್ವತಃ—ಕಾಂಚನಮಯವಹ್ನಿಮಾನ್—ಧೂಮಾತ್' ಇಲ್ಲಿ 'ಕಾಂಚನಮಯವಹ್ನಿ' ಸಾಧ್ಯ. ವಹ್ನಿಯಲ್ಲಿ ಕಾಂಚನಮಯವಹ್ನಿತ್ವರೂಪವಾದ ಅವಚ್ಛೇದಕಧರ್ಮವಿಲ್ಲವೆಂಬ ಜ್ಞಾನ

ಬಂದಾಗ 'ಕಾಂಚನಮಯವಹ್ನಿತ್ವವಿಶಿಷ್ಟವಹ್ನಿವ್ಯಾಪ್ಯಧೂಮವಾನಯಂ ಪರ್ವತಃ' ಎಂಬ ಪರಾಮರ್ಶಜ್ಞಾನ ಬರುವುದಿಲ್ಲ. ಪರಾಮರ್ಶಪ್ರತಿಬಂಧಕವೇ ಫಲ. ಈ ಪರಾಮರ್ಶ ಬಾರದಿದ್ದರೆ 'ಪರ್ವತಃ—ಕಾಂಚನಮಯವಹ್ನಿಮಾನ್' ಎಂಬ ಅನುಮಿತಿಯೂ ಬರುವುದಿಲ್ಲ. ಕಾಂಚನಮಯವಹ್ನಿಸಾಧನೆಗೋಸ್ಕರ ಉಪಾತ್ತವಾದ ಧೂಮರೂಪ ಹೇತುವು ವ್ಯಾಪ್ಯತ್ವಾಸಿದ್ಧವಾಗುತ್ತದೆ.

ಸಾಧನಾಪ್ರಸಿದ್ಧಿಯನ್ನು ತೋರಿಸುತ್ತಾನೆ. 'ಏವಂ—' ಇತಿ. ಹೇತುವಿನಲ್ಲಿ ಹೇತುತಾವಚ್ಛೇದಕಧರ್ಮವಿಲ್ಲದಿರುವುದೇ ಸಾಧನಾಪ್ರಸಿದ್ಧಿ. ಇದರಿಂದ ಕೂಡಿದ ಹೇತುವು ಸಾಧನಾಪ್ರಸಿದ್ಧ ಹೇತ್ವಾಭಾಸವಾಗುತ್ತದೆ. ಉದಾ :—'ಪರ್ವತಃ—ವಹ್ನಿಮಾನ್—ಕಾಂಚನಮಯಧೂಮಾತ್ ॥ ಇಲ್ಲಿ ಕಾಂಚನಮಯತ್ವಧರ್ಮವು ಧೂಮದಲ್ಲಿ ಇಲ್ಲವಾದುದರಿಂದ ಧೂಮಕ್ಕೆ ಅನವಚ್ಛೇದಕವಾಗುತ್ತದೆ. 'ಧೂಮಃ ನ ಕಾಂಚನಮಯಃ' ಎಂಬ ಜ್ಞಾನ ಬಂದಾಗ 'ಯತ್ರ ಕಾಂಚನಮಯಧೂಮಃ ತತ್ರ ವಹ್ನಿಃ' ಎಂಬ ವ್ಯಾಪ್ತಿ ಜ್ಞಾನವೇ ಬರುವುದಿಲ್ಲ. ವ್ಯಾಪ್ತಿಜ್ಞಾನ ಹುಟ್ಟದಂತೆ ಮಾಡುವುದೇ ಸಾಧನಾಪ್ರಸಿದ್ಧ ಹೇತ್ವಾಭಾಸಕ್ಕೆ ಫಲ. ವ್ಯಾಪ್ತಿಜ್ಞಾನ ಬಾರದಿದ್ದರೆ ಅನುಮಿತಿಯೂ ಬರುವುದಿಲ್ಲ. ವ್ಯಾಪ್ತಿಜ್ಞಾನಾದಿ ಎಂಬಲ್ಲಿ ಆದಿಪದದಿಂದ ಪರಾಮರ್ಶ ಪ್ರತಿಬಂಧವೂ ಫಲವೆಂದು ತಿಳಿಯಬೇಕು. ಮೇಲೆ ಹೇಳಿದ ಸಾಧನಾಪ್ರಸಿದ್ಧಿಯಿಂದ 'ವಹ್ನಿವ್ಯಾಪ್ಯಕಾಂಚನಮಯಧೂಮವಾನ್ ಪರ್ವತಃ' ಎಂಬ ಪರಾಮರ್ಶಜ್ಞಾನವೂ ಬರುವುದಿಲ್ಲ. ಕಾಂಚನಮಯಧೂಮತ್ವರೂಪ ಹೇತುತಾವಚ್ಛೇದಕಧರ್ಮವು ಎಲ್ಲಿಯೂ ಇರುವುದಿಲ್ಲವಾದುದರಿಂದ ಅದರಿಂದ ವ್ಯಾಪ್ತಿ ಜ್ಞಾನವಾಗಲೀ, ಪರಾಮರ್ಶವಾಗಲೀ ಯಾವುದೂ ಬರುವುದಿಲ್ಲ.

ಏನಮಿತಿ. ಕೆಲವರ ಸಿದ್ಧಾಂತವನ್ನು ತೋರಿಸುತ್ತಾನೆ. 'ಪರ್ವತಃ—ವಹ್ನಿಮಾನ್—ನೀಲಧೂಮಾತ್ । ಇಲ್ಲಿ ನೀಲಧೂಮತ್ವ ಹೇತುತಾವಚ್ಛೇದಕವಾಗುತ್ತದೆ. 'ಸಂಭವತಿ ಲಘುಧರ್ಮೇ ಗುರುಧರ್ಮಸ್ಯ ಅನವಚ್ಛೇದಕತ್ವಂ' ಎಂಬ ನಿಯಮದಿಂದ ಧೂಮತ್ವರೂಪ ಲಘುವಾದ ಧರ್ಮಕ್ಕೆ ಅವಚ್ಛೇದಕತ್ವ ಸಂಭವಿಸುತ್ತಿರುವಾಗ ನೀಲಧೂಮತ್ವಕ್ಕೆ ಹೇತುತಾವಚ್ಛೇದಕತ್ವವಿರುವುದಿಲ್ಲ. ಅದಕ್ಕೆ ಅವಚ್ಛೇದಕತ್ವ ಹೇಳಿದರೆ ಗೌರವ ಬರುತ್ತದೆ. ಆಗ ನೀಲಧೂಮತ್ವವಿಶಿಷ್ಟಹೇತುವಿನಲ್ಲಿ ವಹ್ನಿನಿರೂಪಿತವ್ಯಾಪ್ತಿ ಬಾರದಿರುವುದರಿಂದ ವ್ಯಾಪ್ತಿಜ್ಞಾನಪ್ರತಿಬಂಧಕತ್ವವೇ ಇದಕ್ಕೆ ಫಲವಾಗುವುದರಿಂದ ಇದೂ ವ್ಯಾಪ್ಯತ್ವಾಸಿದ್ಧಿಯಲ್ಲಿಯೇ ಸೇರುತ್ತದೆ. ಗುರುಧರ್ಮಕ್ಕೂ ಅವಚ್ಛೇದಕತ್ವವಿದೆಯೆಂದು ಅಂಗೀಕರಿಸುವುದಾದರೆ ಆಗ 'ನೀಲಧೂಮಾತ್' ಎಂಬಲ್ಲಿ ಹೇತುವು ಸದ್ಧೇತುವೇ ಆಗುತ್ತದೆ. ಅವರ ಮತದಲ್ಲಿ ಅದು ಹೇತ್ವಾಭಾಸವಾಗುವುದಿಲ್ಲ.

'ಸಂಭವತಿ ಲಘೌ ಗುರೌ ತದಭಾವಃ' ಎಂಬ ನಿಯಮವು ಸ್ವರೂಪಸಂಬಂಧರೂಪ ಅವಚ್ಛೇದಕತ್ವವನ್ನು ಹೇಳಿದಾಗ ಮಾತ್ರ. ಅನತಿರಿಕ್ತವೃತ್ತಿತ್ವರೂಪಾವಚ್ಛೇದಕತ್ವವನ್ನಂಗೀಕರಿಸಿದರೆ ಆಗ ಈ ನಿಯಮಕ್ಕೆ ಅವಕಾಶವಿಲ್ಲ. 'ಪ್ರಮೇಯಧೂಮಾಭಾವದಲ್ಲಿ ಪ್ರತಿಯೋಗಿ ಪ್ರಮೇಯಧೂಮ. ಇಲ್ಲಿ ಸ್ವರೂಪಸಂಬಂಧರೂಪ ಅವ

ಚ್ಛೇದಕವೆಂದರೆ ಧೂಮತ್ವವಾಗುತ್ತದೆ. ("ಪ್ರತಿಯೋಗ್ಯಂಶೇ ಪ್ರಕಾರೀಭೂತೋಧರ್ಮಃ ಸ್ವರೂಪಸಂಬಂಧರೂಪಾವಚ್ಛೇದಕಮ್".) ಘಟಾಭಾವದ ಪ್ರತಿಯೋಗೀಘಟಃ ಪ್ರತಿಯೋಗಿತಾವಚ್ಛೇದಕ ಘಟತ್ವ. ಇದು ಅನತಿರಿಕ್ತವೃತ್ತಿತ್ವರೂಪಾವಚ್ಛೇದಕವಾಗುತ್ತದೆ. 'ತಚ್ಛೂನ್ಯಾವೃತ್ತಿತ್ವೇಸತಿ (ಘಟತ್ವಶೂನ್ಯಪಟದಲ್ಲಿಲ್ಲ.) ತದಧಿಕರಣವೃತ್ತ್ಯಭಾವಪ್ರತಿಯೋಗಿತ್ವಂ' ಎಂದು ಈ ಅವಚ್ಛೇದಕದ ಲಕ್ಷಣ. ಕೆಲವು ಕಡೆ ಒಂದು ವಸ್ತುವಿನಲ್ಲಿರುವ ಧರ್ಮಕ್ಕೆ ಆ ಅಧಿಕರಣವೇ ಅವಚ್ಛೇದಕವಾಗುತ್ತದೆ. 'ಮೂಲೇ ವೃಕ್ಷೇ ನ ಕಪಿಸಂಯೋಗಃ, ಶಾಖಾಯಾಮ್. ಕಪಿಸಂಯೋಗ ಮರದ ಬುಡದಲ್ಲಿಲ್ಲ. ಕೊಂಬೆಯಲ್ಲಿದೆ. ಇಲ್ಲಿ ವೃಕ್ಷದಲ್ಲಿರುವ ಕಪಿಸಂಯೋಗಾಭಾವಕ್ಕೆ ಅದರ ಅಧಿಕರಣವಾದ ಮೂಲವೇ ಅವಚ್ಛೇದಕವಾಗುತ್ತದೆ. ಶಾಖಾದಿಗಳ ಕಪಿಸಂಯೋಗಕ್ಕೆ ಅವಚ್ಛೇದಕವಾಗುತ್ತವೆ. 'ಪರ್ವತತ್ವಾವಚ್ಛೇದೇನ ಪರ್ವತೋ ವಹ್ನಿಮಾನ್' (ಸಕಲಪರ್ವತದಲ್ಲಿ ವಹ್ನಿ ಇದೆಯೆಂದರ್ಥ.) ಎಂಬಲ್ಲಿ ವ್ಯಾಪಕತ್ವವೇ ಅವಚ್ಛೇದಕವಾಗುತ್ತದೆ. ವಹ್ನಿಪ್ರತಿಯೋಗಿಕ ಸಂಯೋಗತ್ವಕ್ಕೆ ಪರ್ವತತ್ವವ್ಯಾಪಕತ್ವವಿದೆ. 'ಯತ್ರ ಪರ್ವತತ್ವಂ ತತ್ರ ವಹ್ನೇಃ ಸಂಯೋಗಃ' ಎಂದು ವ್ಯಾಪ್ತಿ ಹೇಳಬಹುದು. ಸಂಸರ್ಗತಾವಚ್ಛೇದಕತ್ವ ವ್ಯಾಪಕತ್ವಕ್ಕಿರುವುದರಿಂದ ಅದೇ ಅವಚ್ಛೇದಕವಾಗುತ್ತದೆ. ಹೀಗೆ ಅವಚ್ಛೇದಕಗಳು ನಾನಾ ರೀತಿಯಾಗಿರುತ್ತವೆ.

> ಬಾಧಸ್ತು ಪಕ್ಷೇ ಸಾಧ್ಯಾಭಾವಾದಿಃ । ಏತಸ್ಯಾನುಮಿತಿಪ್ರತಿಬಂಧಃ ಫಲಮ್ । ತದ್ಧರ್ಮಿಕತದಭಾವನಿಶ್ಚಯಃ ಲೌಕಿಕಸನ್ನಿಕರ್ಷಾಜನ್ಯದೋಷವಿಶೇಷಾಜನ್ಯ ತದ್ಧರ್ಮಿಕತತ್ಜ್ಞಾನಮಾತ್ರೇ ವಿರೋಧೀತಿ । ನ ತು ಸಂಶಯಸಾಧಾರಣಂ ಪಕ್ಷೇ ಸಾಧ್ಯಸಂಸೃಷ್ಟತ್ವಜ್ಞಾನಮನುಮಿತಿಕಾರಣಂ, ತದ್ವಿರೋಧಿತಯಾಚ ಬಾಧಸತ್ಪ್ರತಿಪಕ್ಷಯೋರ್ಹೇತ್ವಾಭಾಸತ್ವಮಿತಿ ಯುಕ್ತಮ್ । ಅಪ್ರಸಿದ್ಧಸಾಧ್ಯಕಾನುಮಿತ್ಯನಾಪತ್ತೇಃ, ಸಾಧ್ಯಸಂಶಯಾದಿಕಂ ವಿನಾಽಪ್ಯನುಮಿತ್ಯುತ್ಪತ್ತೇಶ್ಚ ॥

ಬಾಧಹೇತ್ವಾಭಾಸವನ್ನು ತೋರಿಸುತ್ತಾನೆ. 'ಬಾಧಃ—' ಇತಿ. ಪಕ್ಷದಲ್ಲಿ ಸಾಧ್ಯಾದಿಗಳು ಇಲ್ಲದಿರುವುದೇ ಭಾಧದೋಷವಾಗುತ್ತದೆ. ಆದಿಪದದಿಂದ ಸಾಧ್ಯವದನ್ಯತ್ವ, ಪಕ್ಷಾವೃತ್ತಿಸಾಧ್ಯ ಮುಂತಾದುವುಗಳನ್ನು ತೆಗೆದುಕೊಳ್ಳಬೇಕು. ಈ ದೋಷದಿಂದ ಕೂಡಿದ ಹೇತುವು ಬಾಧಿತರೂಪ ಹೇತ್ವಾಭಾಸವಾಗುತ್ತದೆ. ಪಕ್ಷದಲ್ಲಿ ಸಾಧ್ಯಾಭಾವವಿದೆಯೆಂದು ಪ್ರಮಾಣಾಂತರದಿಂದ ನಿಶ್ಚಿತವಾಗಿರಬೇಕು. ಉದಾಃ —ವಹ್ನಿಃ—ಅನುಷ್ಣಃ—ದ್ರವ್ಯತ್ವಾತ್ । ಇಲ್ಲಿ ದ್ರವ್ಯತ್ವ ಹೇತುವು ಬಾಧಿತವಾಗುತ್ತದೆ. ಸ್ಪಾರ್ಶನ ಪ್ರತ್ಯಕ್ಷ ಪ್ರಮಾಣದಿಂದ (ಮುಟ್ಟಿ ತಿಳಿಯುವುದರಿಂದ) 'ಅನುಷ್ಣತ್ವಾಭಾವವಾನ್ ವಹ್ನಿಃ' ಎಂದು (ಬೆಂಕಿಯಲ್ಲಿ ಅನುಷ್ಣತ್ವ ಇಲ್ಲ. ಅದು ಅನುಷ್ಣತ್ವಾಭಾವ (ಬಿಸಿ) ವುಳ್ಳದ್ದು) ನಿಶ್ಚಿತವಾದುದರಿಂದ ದ್ರವ್ಯತ್ವ ಹೇತುವಿನಿಂದ ಸಾಧ್ಯವಾದ ಅನುಷ್ಣತ್ವದ ಅಭಾವವು ಪಕ್ಷದಲ್ಲಿ ನಿಶ್ಚಿತವಾಗುತ್ತದೆ. ಇದರಿಂದ 'ವಹ್ನಿಃ—'ಅನುಷ್ಣಃ' ಎಂಬ ಅನುಮಿತಿ

ಬರುವುದಿಲ್ಲ. ಆದುದರಿಂದ ಇದು ಸಾಕ್ಷಾತ್ತಾಗಿ ಅನುಮಿತಿಗೇ ಪ್ರತಿಬಂಧಕವಾಗುತ್ತದೆ. ಅನುಮಿತಿಬಾರದಿರಲು ನಿಯಾಮಕ ತೋರಿಸುತ್ತಾನೆ. 'ತದ್ಧರ್ಮಿಕ—' ಇತಿ. 'ಅನಾಹಾರ್ಯಾಪ್ರಾಮಾಣ್ಯಜ್ಞಾನಾನಾಸ್ಕಂದಿತ ತದ್ಧರ್ಮಿಕತದಭಾವನಿಶ್ಚಯಃ— ಲೌಕಿಕಸನ್ನಿಕರ್ಷಾಜನ್ಯದೋಷ ವಿಶೇಷಾಜನ್ಯತದ್ಧರ್ಮಿಕತತ್ ಜ್ಞಾನಮಾತ್ರಂ ಪ್ರತಿ ವಿರೋಧೀ' ಎಂದು ನಿಯಮ. ಇಲ್ಲಿ ಎರಡು ತಚ್ಛಬ್ದಗಳು ಸೇರಿರುವುದರಿಂದ ಮೊದಲ ನೆಯ ತತ್‌ಪದದಿಂದ ಪ್ರಕೃತದಲ್ಲಿರುವ ಧರ್ಮವನ್ನೂ, ಎರಡನೆಯ ತತ್‌ಪದದಿಂದ ಆ ಧರ್ಮವುಳ್ಳ ಧರ್ಮಿಯನ್ನೂ ತೆಗೆದುಕೊಳ್ಳಬೇಕು. ಘಟತ್ವ ಧರ್ಮಿಕಘಟಾಭಾವದ ನಿಶ್ಚಯವಿರುವಾಗ ಘಟತ್ವಧರ್ಮಿಕಘಟವಿಷಯಕ ಜ್ಞಾನ ಬರುವುದಿಲ್ಲವೆಂದು ಸಾಮಾ ನ್ಯಾರ್ಥ. ಘಟವಿಲ್ಲವೆಂದು ನಿಶ್ಚಯವಿರುವಾಗ ಘಟಜ್ಞಾನ ಬರುವುದು ಹೇಗೆ? ಈ ಘಟಾಭಾವಾದಿ ನಿಶ್ಚಯವು ಅನಾಹಾರ್ಯವಾಗಿರಬೇಕು. 'ಬಾಧಕಾಲೀನೇಚ್ಛಾಜನ್ಯಂ ಜ್ಞಾನಂ ಆಹಾರ್ಯಮ್' ಮುಖನೋಡಿ ಚಂದ್ರನೆಂದು ತಿಳಿಯುವುದು ಆಹಾರ್ಯ. ಮುಖವು ಚಂದ್ರನಲ್ಲವೆಂಬ ಬಾಧಜ್ಞಾನವಿದ್ದೇ ಇದೆ. ಆದರೂ 'ಚಂದ್ರಾಭೇದ ಜ್ಞಾನಂ ಮೇ ಜಾಯತಾಂ' ಎಂಬ ಇಚ್ಛಾವುಂಟಾಗಿ ಚಂದ್ರತ್ವಪ್ರಕಾರಕಬುದ್ಧಿ ಬರುತ್ತದೆ. 'ಹ್ರದಃ ವಹ್ನಿಮಾನ್' ಎಂದು ಒಬ್ಬನಿಗೆ ಜ್ಞಾನ ಬಂದ ಮೇಲೆ 'ಹ್ರದೇ ವಹ್ನ್ಯಭಾವ ಪ್ರತ್ಯಕ್ಷಂ ಮೇ ಜಾಯತಾಂ' ಎಂಬ ಇಚ್ಛೆಯುಂಟಾದರೆ ಆಗ 'ಹ್ರದೋ ವಹ್ನ್ಯಭಾವ ವಾನ್' ಎಂಬ ಜ್ಞಾನ ಬರುತ್ತದೆ. ಇದೇ ಆಹಾರ್ಯಜ್ಞಾನ. ಇದು ಯಾವುದಕ್ಕೂ ಪ್ರತಿಬಂಧಕವಾಗುವುದಿಲ್ಲ. ಆದುದರಿಂದ ನಿಶ್ಚಯದಲ್ಲಿ ಅನಾಹಾರ್ಯತ್ವವಿಶೇಷಣ ಕೊಟ್ಟಿದೆ. ಪ್ರತಿಬಂಧಕವಾದ ನಿಶ್ಚಯವು ಆಹಾರ್ಯವಾಗಿರಬಾರದೆಂದರ್ಥ. ಹೀಗೆಯೇ ಸಂಶಯಾದಿಜ್ಞಾನವೂ ಅಪ್ರಾಮಾಣ್ಯ ಜ್ಞಾನವಾಗುತ್ತದೆ. ಆಸ್ಕಂದಿತ, ಸಂಮಿಶ್ರ, ಸಂಭಿನ್ನ ಇವೆಲ್ಲವೂ ಪರ್ಯಾಯಪದಗಳು. ಕೂಡಿರುವುದು ಎಂದರ್ಥ. ನ ಆಸ್ಕಂದಿತಂ ಅನಾಸ್ಕಂದಿತಮ್. ಸಂಶಯಾದಿಜ್ಞಾನದಿಂದ ಕೂಡಿಲ್ಲದಿರುವುದೇ ಅಪ್ರಾ ಮಾಣ್ಯಜ್ಞಾನಾನಾ ಸ್ಕಂದಿತವಾಗುತ್ತದೆ. ಅನಾಹಾರ್ಯವೂ, ಅಪ್ರಾಮಾಣ್ಯ ಜ್ಞಾನ ರಹಿತವೂ ಆಗಿ ಪ್ರಕೃತಧರ್ಮವಿಶಿಷ್ಟವಾದ, ಧರ್ಮಿಯ ಅಭಾವದ ಯಥಾರ್ಥಜ್ಞಾನವು ಲೌಕಿಕಸನ್ನಿಕರ್ಷದಿಂದ ಹುಟ್ಟದಿರುವ (ಲೌಕಿಕಸನ್ನಿಕರ್ಷಾಜನ್ಯ) ಪಿತ್ತಾದಿ ದೋಷ ವಿಶೇಷದಿಂದ ಹುಟ್ಟದಿರುವ ಪ್ರಕೃತಧರ್ಮ ವಿಶಿಷ್ಟವಾದ ಧರ್ಮಿವಿಷಯಕಜ್ಞಾನಕ್ಕೆ ಪ್ರತಿ ಬಂಧಕವಾಗುತ್ತದೆಂದು ತಾತ್ಪರ್ಯ. ಪ್ರತಿಬಂಧಕವಾದ ಜ್ಞಾನವು ಆಹಾರ್ಯ ವಾಗದೇ, ಅಪ್ರಾಮಾಣ್ಯ ಜ್ಞಾನಾಕ್ರಾಂತವಾಗದೇ, ಯಥಾರ್ಥವಾಗಿರಬೇಕು. ಪ್ರತಿ ಬಧ್ಯಜ್ಞಾನವೂ ಕೂಡಾ ಲೌಕಿಕಸನ್ನಿಕರ್ಷದಿಂದ ಬಂದಿರಬಾರದು, ದೋಷವಿಶೇಷ ದಿಂದಲೂ ಹುಟ್ಟದ ಯಥಾರ್ಥಜ್ಞಾನವಾಗಿರಬೇಕೆಂದರ್ಥ. ಪ್ರತ್ಯಕ್ಷ ಭಿನ್ನವಾದ ಜ್ಞಾನ ಗಳೆಲ್ಲಾ ಲೌಕಿಕಸನ್ನಿಕರ್ಷಾಜನ್ಯವಾಗಿರುತ್ತವೆ. 'ಪೀತಃ ಶಂಖಃ' ಇತ್ಯಾದಿಜ್ಞಾನಗಳು ದೋಷವಿಶೇಷಜನ್ಯಗಳಾಗಿರುತ್ತವೆ.

ಪ್ರಕೃತ ವಹ್ನಿಯಲ್ಲಿ 'ವಹ್ನಿಃ ಉಷ್ಣಃ' ಎಂದು ಸ್ಪಾರ್ಶನಪ್ರತ್ಯಕ್ಷದಿಂದ 'ಅನುಷ್ಣತ್ವ

ಧರ್ಮವುಳ್ಳ ಅನುಷ್ಣಾಭಾವದ ಧರ್ಮಿವಿಷಯಕಜ್ಞಾನವು ಆಹಾರ್ಯವಲ್ಲ. ಬಾಧಕಾಲೀನೇಚ್ಛಾದಿಂದ ಹುಟ್ಟಲಿಲ್ಲ. ಸಂಶಯಾದಿ ಮಿಥ್ಯಾಜ್ಞಾನಗ್ರಸ್ತವಾಗದಿರುವುದರಿಂದ ಅಪ್ರಾಮಾಣ್ಯಜ್ಞಾನಾನಾಸ್ಕಂದಿತವೂ ಆಗಿದೆ. (ಅನುಷ್ಣಾ ಭಾವವುಳ್ಳದ್ದು ಅಂದರೆ ಉಷ್ಣವಾದದ್ದು ಎಂದರ್ಥ.) ಇದರಿಂದ 'ವಹ್ನಿಃ ಅನುಷ್ಣಃ' ಎಂಬ ಅನುಮಿತಿ ಬರುವುದಿಲ್ಲ. ಮೇಲಿನ ಜ್ಞಾನವು ಅನುಮಿತ್ಯಾತ್ಮಕಜ್ಞಾನಕ್ಕೆ ಪ್ರತಿಬಂಧಕವಾಗುತ್ತದೆ. ಅನುಮಿತಿರೂಪಜ್ಞಾನವು ಯಾವ ಲೌಕಿಕಸನ್ನಿಕರ್ಷದಿಂದಲೂ ಹುಟ್ಟುವುದಿಲ್ಲ. ದೋಷವಿಶೇಷದಿಂದಲೂ ಬಂದಿಲ್ಲ.

ಬಾಧವಿಷಯದಲ್ಲಿ ಕೆಲವರ ಮತವನ್ನು ಖಂಡಿಸುತ್ತಾನೆ- 'ನತು—' ಇತಿ. ಸಾಧ್ಯಸಂಬಂಧವಿಷಯಕಜ್ಞಾನಕ್ಕೆ ಸಾಧ್ಯಸಂಸೃಷ್ಟತ್ವಜ್ಞಾನವೆಂದು ಹೆಸರು. ಇದು ಸಂಶಯಾದಿ ಸಾಧಾರಣವಾಗಿರಬೇಕು ಅಂದರೆ ಸಂಶಯಾದಿಗಳಿಂದ ಕೂಡಿದ ಸಾಧ್ಯಸಂಸೃಷ್ಟತ್ವಜ್ಞಾನವು ಅನುಮಿತಿಗೆ ಕಾರಣವಾಗಿರುತ್ತದೆ. ಸಂಶಯಾದಿಗಳಿಂದಕೂಡಿದ ಸಾಧ್ಯಸಂಸೃಷ್ಟತ್ವಜ್ಞಾನಕ್ಕೆ ಪ್ರತಿಬಂಧಕವಾಗಿರುವುದು ಎಂದರೆ ಆಗ ಬಾಧಸತ್ಪ್ರತಿಪಕ್ಷಗಳಿಗೆ ಸೇರಿ ಒಂದೇ ಲಕ್ಷಣವಾಗುತ್ತದೆ. ಸಾಕ್ಷಾದನುಮಿತಿಗೆ ಪ್ರತಿಬಂಧಕವಾದದ್ದು ಬಾಧ, ಪರಸ್ಪರ ಸಾಧ್ಯಾಭಾವವಿಷಯಕ ಪರಾಮರ್ಶಪ್ರತಿಬಂಧಕವಾದದ್ದು ಸತ್ಪ್ರತಿಪಕ್ಷವೆಂದು ಬೇರೆ ಬೇರೆಯಾಗಿ ಲಕ್ಷಣ ಹೇಳಬೇಕಾಗಿಲ್ಲವೆಂದು ಅವರಸಿದ್ಧಾಂತ. ಇದು ಸರಿಯಲ್ಲವೆಂದು ತೋರಿಸುತ್ತಾನೆ. 'ಅಪ್ರಸಿ—' ನಪ್ರಸಿದ್ಧಂ ಸಾಧ್ಯಂ ಯಸ್ಯಾಃ ಸಾ, ಅಪ್ರಸಿದ್ಧಸಾಧ್ಯಕಾ. ಅಪ್ರ—ಕಾ ಚ ಸಾ ಅನುಮಿತಿಶ್ಚ. ತಸ್ಯಾಃ ಅನಾಪತ್ತಿಃ ॥ ತಸ್ಯಾಃ ॥ ಹೀಗೆ ಉಭಯಾನುಗತವಾಗಿ ಲಕ್ಷಣ ಹೇಳಿದರೆ ಅಪ್ರಸಿದ್ಧಸಾಧ್ಯವಿಷಯಕವಾದ ಅನುಮಿತಿಯೇ ಇಲ್ಲವೆಂದಾಗಬೇಕಾಗುತ್ತದೆ. 'ಪೃಥಿವೀ—ಇತರಭೇದವತೀ—ಗಂಧವತ್ತ್ವಾತ್ ॥' ಇಲ್ಲಿ ಪೃಥಿವೀರೂಪಪಕ್ಷದಲ್ಲಿ ಅನುಮಿತಿ ಬರಬೇಕಾದರೆ ಮೊದಲು ಇತರ (ಜಲಾದಿ) ಭೇದರೂಪ ಸಾಧ್ಯಸಂಬಂಧ ಜ್ಞಾನವು ಯಾವ ರೀತಿಯಿಂದಲೂ ಬಂದಿರುವುದಿಲ್ಲ. ಪಕ್ಷದಲ್ಲಿ ಸಾಧ್ಯಸಂಬಂಧ ಜ್ಞಾನವು ಅನುಮಿತಿಗೆ ಕಾರಣವೆಂದು ಕೆಲವರ ಮತವಷ್ಟೆ. ಅದು ಯಾವಾಗ ಬಂದಿಲ್ಲವೋ ಆಗ ಅನುಮಿತಿಯೂ ಬರಲಾರದು. ಈ ಸಾಧ್ಯಸಂಸೃಷ್ಟತ್ವರೂಪಪಕ್ಷತಾಜ್ಞಾನವೂ ಸಂಶಯಾದಿ ಸಾಧಾರಣವಾಗಿರಬೇಕೆಂದು ಹೇಳಿದೂ ಸಮಂಜಸವಲ್ಲ. ಆಕಾಶದಲ್ಲಿ ಮೇಘದ ಸಂಶಯವಿಲ್ಲದಿದ್ದರೂ (ಗಗನಂ ಮೇಘವನ್ನವಾ) ಮೇಘ ಗರ್ಜನೆಯನ್ನು ಕೇಳಿ 'ಗಗನಂ—ಮೇಘವತ್—ಘನಗರ್ಜನಾತ್' ಎಂದು ಅನುಮಾನವಾಡಿ 'ಗಗನಂ—ಮೇಘವತ್' ಎಂಬ ಅನುಮಿತಿ ಬರುವುದು ಸ್ವಾಭಾವಿಕವಾಗಿದೆ. ಆದುದರಿಂದ ಸಂಶಯವಿರಬೇಕೆಂಬ ನಿಯಮವಿಲ್ಲ. ಸಾಕ್ಷಾದನುಮಿತಿಪ್ರತಿಬಂಧಕರೂಪದಿಂದ ಬಾಧಕ್ಕೂ, ಪರಸ್ಪರಸಾಧ್ಯಾಭಾವವಿಷಯಕಪರಾಮರ್ಶಪ್ರತಿ ಬಂಧಕರೂಪದಿಂದ ಸತ್ಪ್ರತಿಪಕ್ಷಕ್ಕೂ ಹೇತ್ವಾಭಾಸತ್ವ ಹೇಳಬೇಕು.

ಏವಂ ಸಾಧ್ಯಾಭಾವಜ್ಞಾನೇ ಪ್ರಮಾತ್ವಜ್ಞಾನಮಪಿ ನ ಪ್ರತಿಬಂಧಕಂ, ಪ್ರಮಾಣಾಭಾವಾದ್ಗೌರವಾಚ್ಚ । ಅನ್ಯಥಾ ಸತ್ಪ್ರತಿಪಕ್ಷಾದಾವಪಿ ತದಭಾವವ್ಯಾಪ್ಯವತ್ತಾಜ್ಞಾನೇ ಪ್ರಮಾತ್ವವಿಷಯಕತ್ವೇನ ಪ್ರತಿಬಂಧಕತಾಪತ್ತೇಃ । ಕಿಂತು ಭ್ರಮತ್ವಜ್ಞಾನಾನಾಸ್ಕಂದಿತಬಾಧಾದಿ ಬುದ್ಧೇಃ ಪ್ರತಿಬಂಧಕತಾ, ತತ್ರ ಭ್ರಮತ್ವಶಂಕಾವಿಘಟನೇನ ಪ್ರಾಮಾಣ್ಯಜ್ಞಾನಂ ಕ್ವಚಿದುಪಯುಜ್ಯತೇ ॥

ಪ್ರಸಂಗಸಂಗತಿಯಿಂದಮತವ ಪ್ರಾಚೀನರನ್ನು ಖಂಡಿಸುತ್ತಾನೆ. 'ಏವಂ—' ಇತಿ. 'ಹ್ರದೋವಹ್ನಿಮಾನ್' ಎಂಬ ಅನುಮಿತಿಗೆ ಕೇವಲ ಸಾಧ್ಯಾಭಾವವಿಷಯಕವಾದ ಜ್ಞಾನವು ಪ್ರತಿಬಂಧಕವಾಗುವುದಿಲ್ಲ. ಸಾಧ್ಯಾಭಾವಜ್ಞಾನವಲ್ಲಿ ಪ್ರಮಾತ್ವಜ್ಞಾನ ಬಂದಿರಬೇಕು. ಅಂದರೆ 'ಹ್ರದೋ ವಹ್ನ್ಯಭಾವವಾನ್' ಎಂಬ ವಹ್ನ್ಯಭಾವವಿಷಯಕವಾಗಿ 'ಇದಂ ಜ್ಞಾನಂ ಪ್ರಮಾ' ಎಂದು ಬಂದಿರುವ ಯಥಾರ್ಥನಿಶ್ಚಯ ಯಾವುದಿದೆಯೋ ಅದೇ ಪ್ರತಿಬಂಧಕವಾಗುತ್ತದೆ. ಎಂದು ಪ್ರಾಚೀನರ ಅಭಿಪ್ರಾಯ. ಇದೂ ಯುಕ್ತವಲ್ಲ. ಏಕೆಂದರೆ ಲೋಕದಲ್ಲಿ ಜ್ಞಾನವು ಗ್ರಾಹ್ಯಾಭಾವಾವಗಾಹಿಯಾಗಿದ್ದರೆ ಅದು ಪ್ರತಿಬಂಧಕವೆಂದು ಎಲ್ಲರಿಗೂ ತಿಳಿದ ವಿಷಯ. ಗ್ರಾಹ್ಯವೆಂದರೆ ಪ್ರಕೃತದಲ್ಲಿ ವಹ್ನಿ. ಗ್ರಾಹ್ಯಾಭಾವವೆಂದರೆ ವಹ್ನ್ಯಭಾವ. ತದ್ವಿಷಯಕವಾದ ಜ್ಞಾನ (ಅವಗಾಹಿಯೆಂದರೆ ವಿಷಯೀಕರಿಸುವುದು.) 'ವಹ್ನ್ಯಭಾವವತ್‌ಹ್ರದಃ' ಎಂಬ ಜ್ಞಾನ. ಇದೇ ಪ್ರತಿಬಂಧಕವಾಗುವುದಲ್ಲದೆ ಈ ಜ್ಞಾನದಲ್ಲಿ ಉಂಟಾದ ಪ್ರಮಾತ್ವನಿಶ್ಚಯ ಎಂದೂ ಪ್ರತಿಬಂಧಕವಾಗುವುದಿಲ್ಲ. ಅದೂ ಅಲ್ಲದೆ ತದಭಾವವದ್ಧರ್ಮಿಕಜ್ಞಾನ ಬಂದು ಅದರಲ್ಲಿ ಪ್ರಮಾತ್ವನಿಶ್ಚಯವುಂಟಾಗಿ ಪ್ರತಿಬಂಧಕವಾಗುತ್ತದೆಯೆಂದರೆ ಗೌರವ ಬರುತ್ತದೆ.

ಬಾಧಸ್ಥಲದಲ್ಲಿ 'ಇದಂ ಜ್ಞಾನಂ ಪ್ರಮಾ' ಎಂಬ ಪ್ರಮಾತ್ವನಿಶ್ಚಯವು ಸ್ವತಂತ್ರವಾಗಿ ಪ್ರತಿಬಂಧಕವಾಗುವುದಿಲ್ಲ. ಗ್ರಾಹ್ಯಾಭಾವಮೂಲಕವಾಗಿಯೇ (ತದಭಾವವತ್ತಾಮುದ್ರಯಾ) ಪ್ರತಿಬಂಧಕವಾಗುತ್ತದೆ. ಆದುದರಿಂದ ಘಟಕ್ಕೆ ರಾಸಭಾದಿಗಳಂತೆ ಅನ್ಯಥಾಸಿದ್ಧವಾಗುತ್ತವೆ. ಕ್ಲೃಪ್ತವಾದ ವಹ್ನ್ಯಭಾವನಿಶ್ಚಯವೇ ಪ್ರತಿಬಂಧಕವಾಗುತ್ತಿರುವಾಗ ಇದನ್ನು ಬಿಟ್ಟು ಉಳಿದವುಗಳಿಗೆ ಕಲ್ಪಿಸುವುದು ಗೌರವಾಸ್ಪದವಾಗುವುದಲ್ಲದೆ ಅನ್ಯಾಥಾಸಿದ್ಧಗಳೂ ಆಗುತ್ತವೆ. 'ಅನ್ಯಥಾ—' ಇತಿ. ಹೀಗೆ ಹೇಳದಿದ್ದರೆ ಸತ್ಪ್ರತಿಪಕ್ಷಾದಿಸ್ಥಳಗಳಲ್ಲಿಯೂ ತದಭಾವವ್ಯಾಪ್ಯವತ್ತಾಜ್ಞಾನಕ್ಕೆ ಪ್ರತಿಬಂಧಕತ್ವ ಹೇಳಿರುವುದು ತಪ್ಪಾಗುತ್ತದೆ. ಅಲ್ಲಿಯೂ ತದಭಾವವ್ಯಾಪ್ಯ ವತ್ತಾಜ್ಞಾನವಿಷಯಕವಾದ ಪ್ರಮಾತ್ವನಿಶ್ಚಯವೇ ಪ್ರತಿಬಂಧಕವಾಗಲಿ ಎಂದು ಏಕೆ ಹೇಳಬಾರದು ? ಆದರೆ ಯಾರೂ ಹಾಗೆ ಹೇಳುವುದಿಲ್ಲ. ಆದುದರಿಂದ ಪ್ರಮಾತ್ವನಿಶ್ಚಯಕ್ಕೆ ಪ್ರತಿಬಂಧಕತ್ವ ಹೇಳಿರುವುದು ಅಸಂಗತವೇ. ಹಾಗಾದರೆ ಅದಕ್ಕೆ ಉಪಯೋಗವೇನು ? ಎಂದು ಜಿಜ್ಞಾಸೆ ಬಂದರೆ ಆಗ ಪ್ರಯೋಜನ ತೋರಿಸುತ್ತಾನೆ. 'ತತ್ರ—' ಇತಿ. ಬಾಧ ಸ್ಥಲವಲ್ಲಿ ಭ್ರಮತ್ವಶೂನ್ಯವಾದ (ಭ್ರಮತ್ವಜ್ಞಾನದಿಂದ ಅನಾಸ್ಕಂದಿತವಾದ) ಬಾಧ ಜ್ಞಾನವೇ (ತದಭಾವವ

ದ್ವಿವಿಷಯಕ ನಿಶ್ಚಯ.) ಪ್ರತಿಬಂಧಕವೆಂಬುದು ಸರ್ವಸಂಮತ. ಆ ಬಾಧಜ್ಞಾನದಲ್ಲಿ ಭ್ರಮತ್ವಶಂಕಾನಿವಾರಣೆಮಾಡುವುದೇ ಪ್ರಮಾತ್ವನಿಶ್ಚಯದ ಕಾರ್ಯ. ಕೆಲವು ಕಡೆ ಈ ಪ್ರಮಾತ್ವಜ್ಞಾನವು ಬಾಧ ಜ್ಞಾನದಲ್ಲಿ ಉಂಟಾಗುವ ಭ್ರಮೆಯನ್ನು ಹೋಗಲಾಡಿಸುತ್ತದೆ. ಇದೇ ಇವಕ್ಕೆ ಪ್ರಯೋಜನ. ಅನುಮಿತಿ, ಅಥವಾ ತತ್ಕರಣಕ್ಕೆ ಸಾಕ್ಷಾತ್ತಾಗಿ ಪ್ರತಿಬಂಧಕವಾದ ಜ್ಞಾನ ವಿಷಯತ್ವ ಇದರಲಿಲ್ಲದಿರುವುದರಿಂದ ಇದಕ್ಕೆ ಪ್ರತಿಬಂಧಕತ್ವ ಹೇಳಿರುವುದು ಸಮಂಜಸವಲ್ಲ.

ನಚ ಬಾಧಸ್ಥಲೇ ಪಕ್ಷೇ ಹೇತುಸತ್ವೇ ವ್ಯಭಿಚಾರಃ, ಪಕ್ಷೇ ಹೇತ್ವಭಾವೇ ಸ್ವರೂಪಾಸಿದ್ಧಿರೇವ ದೋಷ ಇತಿ ವಾಚ್ಯಮ್ । ಬಾಧಜ್ಞಾನಸ್ಯ ವ್ಯಭಿಚಾರಿಜ್ಞಾನಾದೇರ್ಭೇದಾತ್ । ಕಿಂಚ ಯತ್ರ ಪರಾಮರ್ಶಾನಂತರಂ ಬಾಧಬುದ್ಧಿಸ್ತತ್ರ ವ್ಯಭಿಚಾರಜ್ಞಾನಾದೇರಕಿಂಚಿತ್ಕರತ್ವಾತ್ ಬಾಧಸ್ಯಾನುಮಿತಿ ಪ್ರತಿಬಂಧಕತ್ವಂ ವಾಚ್ಯಮ್ । ಏವಂ ಯತ್ರೋತ್ಪತ್ತಿಕ್ಷಣಾವಚ್ಛಿನ್ನೇ ಘಟಾದೌ ಗಂಧವ್ಯಾಪ್ಯ ಪೃಥಿವೀತ್ವವತ್ತಾಜ್ಞಾನಂ ತತ್ರ ಬಾಧಸ್ಯೈವ ಪ್ರತಿಬಂಧಕತ್ವಂ ವಾಚ್ಯಮ್ । ನ ಚ ಪಕ್ಷೇ ಘಟೇ ಗಂಧಸತ್ತ್ವಾತ್ಕಥಂ ಬಾಧ ಇತಿ ವಾಚ್ಯಂ, ಪಕ್ಷತಾವಚ್ಛೇದಕದೇಶಕಾಲಾವಚ್ಛೇದೇನಾನುಮಿತೇರನುಭವಸಿದ್ಧತ್ವಾದಿತಿ । ಬಾಧಸತ್ಪ್ರತಿಪಕ್ಷಭಿನ್ನಾ ಯೇ ಹೇತ್ವಾಭಾಸಾಸ್ತದ್ವ್ಯಾಪ್ಯಾ ಅಪಿ ತನ್ಮಧ್ಯ ಏವಾಂತರ್ಭವಂತಿ ! ಅನ್ಯಥಾ ಹೇತ್ವಾಭಾಸಾಧಿಕ ಪ್ರಸಂಗಾತ್ । ಬಾಧವ್ಯಾಪ್ಯ ಸತ್ಪ್ರತಿಪಕ್ಷಸ್ತು ಭಿನ್ನ ಏವ, ಸ್ವತಂತ್ರೇಚ್ಛೇನ ಮುನಿನಾ ಪೃಥಗುಪದೇಶಾತ್ । ಸತ್ಪ್ರತಿಪಕ್ಷವ್ಯಾಪ್ಯಸ್ತು ನ ಪ್ರತಿಬಂಧಕ ಇತಿ ಪ್ರಘಟ್ಟಕಾರ್ಥಃ ॥ ೭೧ ॥ ೭೨ ॥

ಬಾಧವನ್ನು ಐದನೆಯ ಹೇತ್ವಾಭಾಸವನ್ನಾಗಿ ಹೇಳಿದೆ. ಇದು ಸರಿಯಲ್ಲ. ಉಳಿದ ನಾಲ್ಕರಲ್ಲಿಯೇ ಇದು ಸೇರಿ ಹೋಗುತ್ತೆ ಎಂದು ಆಶಂಕಿಸಿ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ನಚ—' ಇತಿ. 'ವಹ್ನಿಃ—ಅನುಷ್ಣಃ—ದ್ರವ್ಯತ್ವಾತ್' ಇಲ್ಲಿ ದ್ರವ್ಯತ್ವ ಹೇತು ಬಾಧಿತವೆಂದು ಹೇಳಿದೆ. ಈ ದ್ರವ್ಯತ್ವ ಹೇತುವು ವಹ್ನಿರೂಪಪಕ್ಷದಲ್ಲಿ ಇದೆಯೋ ಇಲ್ಲವೇ ? ಇದೆಯೆಂದರೆ ಆಗ ಸವ್ಯಭಿಚಾರ (ವ್ಯಭಿಚಾರದೋಷಗ್ರಸ್ತ) ವಾಗುತ್ತದೆ. ಅನುಷ್ಣತ್ವ ವಹ್ನಿಯಲ್ಲಿ ಇಲ್ಲ. ಅನುಷ್ಣತ್ವಾಭಾವರೂಪಸಾಧ್ಯಾಭಾವವುಳ್ಳ ಜಲಾದಿಗಳಲ್ಲಿ ದ್ರವ್ಯತ್ವಹೇತು ಬರುವುದರಿಂದ ಅಸಾಧಾರಣಾನೈಕಾಂತಿಕವಾಗುತ್ತದೆ. (ಸಾಧ್ಯಾಭಾವವದ್ವೃತ್ತಿಃ ಸಾಧಾರಣೋ ಅನೈಕಾಂತಿಕಃ ಎಂದು ಹೇಳಿದೆ.) ಪಕ್ಷದಲ್ಲಿ ಹೇತುವಿಲ್ಲವೆಂದು ಹೇಳುವುದಾದರೆ ಆಗ ಸ್ವರೂಪಾಸಿದ್ಧಿಯಾಗುತ್ತದೆ. (ಪಕ್ಷೇ ಹೇತ್ವಭಾವಃ ಸ್ವರೂಪಾಸಿದ್ಧಿಃ) 'ಹ್ರದೋ—ವಹ್ನಿಮಾನ್—ಧೂಮಾತ್' ಎಂದರೆ ಇಲ್ಲಿ ಧೂಮವು ಹ್ರದರೂಪಪಕ್ಷದಲ್ಲಿ ಇಲ್ಲವಾದುದರಿಂದ ಸ್ವರೂಪಾಸಿದ್ಧವಾಗುತ್ತದೆ. ಹೀಗೆ ವ್ಯಭಿಚಾರ, ಸ್ವರೂಪಾಸಿದ್ಧಿ ಇವೆರಡರಲ್ಲಿ ಯಾವುದಾದರೊಂದರಲ್ಲಿ ಬಾಧ ದೋಷ ಸೇರು

ವುದರಿಂದ ಬೇರೆಯಾಗಿ ಹೇತ್ವಾಭಾಸವನ್ನು ಇದಕ್ಕೆ ಹೇಳಿಸುವುದು ಯುಕ್ತವಲ್ಲವೆಂದು ಆಕ್ಷೇಪ.

ಇದು ಸರಿಯಲ್ಲವೆಂದು ಸಮಾಧಾನ ತೋರಿಸುತ್ತಾನೆ. 'ಬಾಧಜ್ಞಾನ—' ಇತಿ. ಯದ್ಯಪಿ ವ್ಯಭಿಚಾರಸ್ವರೂಪಾಸಿದ್ಧ್ಯನ್ಯತರದೋಷವೇ ಬಾಧದೋಷವಾಗುವುದರಿಂದ ಬೇರೆಯಾಗಿ ಆರನೇದಾಗಿ ಇದಕ್ಕೆ ಹೇತ್ವಾಭಾಸತ್ವಹೇಳಬೇಕಾಗಿಲ್ಲ; ಆದರೂ ಇದು ಸ್ವತಂತ್ರದೋಷವಾಗಿಯೂ ಪ್ರತೀತವಾಗುತ್ತದೆ. ವ್ಯಭಿಚಾರಾದಿದೋಷಭಿನ್ನಸ್ವರೂಪದಿಂದ ಇದು ದೋಷವಾಗಿ ಈ ದೋಷದಿಂದ ಕೂಡಿದ ಹೇತುವು ಬಾಧಿತವೆಂದು ಐದನೇದಾಗಿ ಹೇಳಲ್ಪಡುತ್ತದೆ. ಈ ವಿಷಯದಲ್ಲಿ ಯುಕ್ತಿಯನ್ನೂ ತೋರಿಸುತ್ತಾನೆ. 'ಕಿಂಚ—' ಇತಿ. 'ಅಯೋಗೋಲಕಂ—ಧೂಮವತ್—ವಹ್ನೇಃ' ಎಂಬಲ್ಲಿ 'ಧೂಮವ್ಯಾಪ್ಯವಹ್ನಿವತ್ ಅಯೋಗೋಲಕಂ' ಎಂಬ ಪರಾಮರ್ಶಜ್ಞಾನ ಬಂದಿರುತ್ತದೆ. ಅಲ್ಲಿ ವ್ಯಭಿಚಾರಜ್ಞಾನವಿಲ್ಲದಿದ್ದರೂ (ಯದ್ಯಪಿ ಅದು ವ್ಯಭಿಚಾರಿಹೇತು. ಧೂಮರೂಪಸಾಧ್ಯವಿಲ್ಲದ ಅಯೋಗೋಲಕದಲ್ಲಿದೆ.) 'ಅಯೋಗೋಲಕಂ—ನ ಧೂಮವತ್' ಎಂಬ ಬಾಧಬುದ್ಧಿಯುಂಟಾದರೆ (ಸಾಧ್ಯಾಭಾವವುಳ್ಳಪಕ್ಷ) ಅದರಿಂದಲೇ ಅನುಮಿತಿಯುಂಟಾಗುವುದಿಲ್ಲ. ಅಲ್ಲಿ ವ್ಯಭಿಚಾರಜ್ಞಾನವಾಗಲೀ ಸ್ವರೂಪಾಸಿದ್ಧಿ ಜ್ಞಾನವಾಗಲೀ ವ್ಯರ್ಥವೇ ಆಗುತ್ತದೆ. 'ಅಕಿಂಚಿತ್ಕರತ್ವಾತ್'—ಅಸಮರ್ಥತ್ವಾತ್) ಅಂದರೆ ಇಲ್ಲಿ ಬಾಧಜ್ಞಾನದಿಂದಲೇ ಅನುಮಿತಿ ಪ್ರತಿಬದ್ಧವಾಗುವುದಲ್ಲದೆ ವ್ಯಭಿಚಾರಾದಿಗಳು ಅನುಮಿತಿ ಪ್ರತಿಬಂಧಕವಾಗುವದಿಲ್ಲ. ವ್ಯಭಿಚಾರಾದಿಗಳು ಪರಾಮರ್ಶಪ್ರತಿಬಂಧಕವಾಗಿ ಅದರ ಮೂಲಕ ಅನುಮಿತಿಪ್ರತಿಬಂಧಕವಾಗಬೇಕು. ಸ್ವತಂತ್ರಬಾಧಕತ್ವವಿಲ್ಲ. ಬಾಧವಾದರೋ ಅನುಮಿತಿಗೆ ಸ್ವತಂತ್ರಪ್ರತಿಬಂಧಕವಾಗಿದೆ. ಪರಾಮರ್ಶಪ್ರತಿಬಂಧಕವಾಗಿ ಅನುಮಿತಿಗೆ ಪ್ರತಿಬಂಧಕವಾಗಲಿ ಎಂದು ಹೇಳಲೂ ಸಾಧ್ಯವಿಲ್ಲ. ಪರಾಮರ್ಶಜ್ಞಾನ ಮೊದಲೇ ಬಂದಿರುತ್ತದೆ. ಬಂದ ಮೇಲೆ ವ್ಯಭಿಚಾರದೋಷ ಪ್ರತಿಬಂಧಕಮಾಡುವುದು ಹೇಗೆ? ಆದುದರಿಂದ ಇಂತಹ ಸ್ಥಳದಲ್ಲಿ ಬಾಧವೇ ಪ್ರತಿಬಂಧಕವೆಂದು ಒಪ್ಪಬೇಕು. 'ಭೇದಾತ್—'ಬಾಧಜ್ಞಾನದಲ್ಲಿ ವ್ಯಭಿಚಾರವಿಷಯವಿಲ್ಲದಿರುವುದರಿಂದ ಅದು ಸ್ವತಂತ್ರ ಹೇತ್ವಾಭಾಸವೇ ಆಗುತ್ತದೆಂದರ್ಥ

ಪೂರ್ವಸ್ಥಳದಲ್ಲಿ ವ್ಯಭಿಚಾರ ಸಂಕೀರ್ಣವಾದುದರಿಂದ ಅಸಂಕೀರ್ಣವಾದ ಬಾಧಸ್ಥಲವನ್ನು ತೋರಿಸುತ್ತಾನೆ. 'ಏವಂ ಯತ್ರ—' ಇತಿ. ಉತ್ಪತ್ತಿಕ್ಷಣಾವಚ್ಛಿನ್ನೇ—ಉತ್ಪತ್ತಿಕಾಲಕ್ಷಣದಲ್ಲಿರುವ ಘಟಾದಿಗಳಲ್ಲಿ ಎಂದರ್ಥ. 'ಉತ್ಪತ್ತಿಕ್ಷಣಾವಚ್ಛಿನ್ನೋಘಟಃ ಗಂಧವಾನ್—ಪೃಥಿವೀತ್ವಾತ್' ಇಲ್ಲಿ ಪೃಥಿವೀತ್ವ ಹೇತು ಬಾಧಿತವಾಗುತ್ತದೆ. ಹುಟ್ಟಿದ ಮೊದಲನೆಯ ಕ್ಷಣದಲ್ಲಿರುವ ಘಟದಲ್ಲಿ ಪೃಥಿವೀತ್ವರೂಪಹೇತುವಿದೆ. ಆದರೆ ಗಂಧರೂಪಸಾಧ್ಯವಿಲ್ಲ. 'ಉತ್ಪನ್ನಂ ದ್ರವ್ಯಂ ಕ್ಷಣಮಗುಣಂ ಅಕ್ರಿಯಾಕಂ ಭವತಿ' ಎಂದು ನ್ಯಾಯವಿದೆ. ಹುಟ್ಟಿದ ಮೊದಲನೇ ಕ್ಷಣದಲ್ಲಿರುವ ವಸ್ತುವಿನಲ್ಲಿ ಯಾವ ಗಂಧವೂ ಕ್ರಿಯೆಯೂ ಇರುವುದಿಲ್ಲ. ಇಲ್ಲಿ ಪಕ್ಷದಲ್ಲಿ ಹೇತುವಿರುವುದರಿಂದ ಪಕ್ಷದಲ್ಲಿ

ಹೇತ್ವಾಭಾವರೂಪಸ್ವರೂಪಾಸಿದ್ಧಿ ಹೇಳಲು ಸಾಧ್ಯವಿಲ್ಲ. ಸಾಧ್ಯಾಭಾವವದ್ವೃತ್ತಿತ್ವ ರೂಪ ವ್ಯಭಿಚಾರದೋಷವೂ ಇಲ್ಲ. ಗಂಧಾಭಾವವುಳ್ಳ ಜಲಾದಿಗಳಲ್ಲಿ ಪೃಥಿವೀತ್ವ ಹೇತು ಇರುವುದಾಗಿದ್ದರೆ ವ್ಯಭಿಚಾರದೋಷ ಹೇಳಬಹುದಿತ್ತು. ಇವೆರಡು ದೋಷ ಗಳೂ ಇಲ್ಲಿ ಇಲ್ಲದಿರುವುದರಿಂದ 'ಉತ್ಪತ್ತಿಕ್ಷಣಾವಚ್ಛಿನ್ನೋಘಟಃ—ಗಂಧಾಭಾವವಾನ್' ಎಂಬ ಬಾಧ ಜ್ಞಾನವೇ 'ಉತ್ಪತ್ತಿಕ್ಷಣಾವಚ್ಛಿನ್ನಘಟಃ ಗಂಧವಾನ್' ಎಂಬ ಅನುಮಿತಿಗೆ ಪ್ರತಿಬಂಧಕವಾಗುವುದರಿಂದ ಇದು ಸ್ವತಂತ್ರವಾದ ಐದನೆಯ ಹೇತ್ವಾಭಾಸವಾಗುತ್ತದೆ.

ಇದರ ಮೇಲೆ ಆಕ್ಷೇಪಿಸಿ ಸಮಾಧಾನ ತೋರಿಸುತ್ತಾನೆ. 'ನಚ—' ಇತಿ. ಪೂರ್ವೋಕ್ತಾನುಮಾನದಲ್ಲಿ ಪೃಥಿವೀತ್ವಹೇತು ಬಾಧಿತವಾಗುವುದು ಹೇಗೆ? ಘಟದಲ್ಲಿ ಗಂಧವಿರುವುದರಿಂದ ಇದು ಸದ್ಧೇತುವೇ ಆಗುತ್ತದೆ. ಗಂಧವಿಲ್ಲದ ಪೃಥಿವಿಯೇ ಲೋಕ ದಲ್ಲಿರುವುದಿಲ್ಲ. ಅಂದರೆ ಅದಕ್ಕೆ ಸಮಾಧಾನ. 'ಪಕ್ಷತಾವಚ್ಛೇದಕ—' ಇತಿ. ಪಕ್ಷತಾವಚ್ಛೇದಕಗಳಾದ ಯಾವ ದೇಶಕಾಲಗಳಿವೆಯೋ ತದವಚ್ಛೇದೇನ—ಅ ತದ್ವ್ಯಾವರ್ತಕರೂಪದಿಂದ (ಅವುಗಳ ಮೂಲಕ ಇತರ ದೇಶಕಾಲ ವ್ಯಾವೃತ್ತವಾಗಿ) ಅನುಮಿತಿಯುಂಟಾಗುವುದು ಸಕಲಾನುಭವಸಿದ್ಧವಾಗಿದೆ. ಘಟತ್ವ ಪರ್ವತತ್ವಗಳು ಹೇಗೆ ಪಕ್ಷತಾವಚ್ಛೇದಕಗಳಾಗುತ್ತವೆಯೋ ಹಾಗೆ ದೇಶಕಾಲಗಳೂ ಕೂಡಾ ಪಕ್ಷತಾವ ಚ್ಛೇದಕಗಳಾಗುತ್ತವೆ. ಅವಚ್ಛೇದಕವು ಇತರ ವ್ಯಾವರ್ತಕವಾಗುತ್ತದೆ. ದೇಶಕಾಲ ಗಳು ಅವಚ್ಛೇದಕವಾಗಿ ಕಾಲಾಂತರ, ದೇಶಾಂತರಗಳಲ್ಲಿರುವ ಪಕ್ಷಗಳಿಗಿಂತ ತತ್ಕಾಲದ ಪಕ್ಷವನ್ನು ವ್ಯಾವೃತ್ತಪಡಿಸುತ್ತವೆ. ಆದುದರಿಂದ ಅನುಮಿತಿಯೂ ಕಾಲಾವಚ್ಛಿನ್ನ, ದೇಶಾವಚ್ಛಿನ್ನವಾಗಿರುತ್ತದೆ. ಪ್ರಕೃತ ಘಟರೂಪ ಪಕ್ಷಕ್ಕೆ ಉತ್ಪತ್ತಿಕ್ಷಣರೂಪವಾದ ಕಾಲವೂ ಅವಚ್ಛೇದಕವಾಗುತ್ತದೆ. ಘಟದಲ್ಲಿ ಗಂಧವಿದ್ದರೂ ಉತ್ಪತ್ತಿಕ್ಷಣದಲ್ಲಿ ಗಂಧ ವಿರುವುದಿಲ್ಲ. ಘಟಗಂಧಗಳಿಗೆ ಕಾರ್ಯಕಾರಣ ಭಾವವಿರುವುದರಿಂದ ಕಾರಣವು ಕಾರ್ಯ ಕ್ಕಿಂತ ಮೊದಲು ಇರಬೇಕಾದುದರಿಂದ ಘಟ ಹುಟ್ಟಿದ ಒಂದು ಕ್ಷಣದಲ್ಲಿ ಅದರಲ್ಲಿ ಗಂಧ ವಿಲ್ಲವೆಂದು ಅಂಗೀಕರಿಸಲೇಬೇಕು. ಇಂತಹ ಸ್ಥಳದಲ್ಲಿ ಯಾವ ದೋಷಗಳಿಂದಲೂ ಮಿಶ್ರಿತವಾಗದೇ ಇರುವುದರಿಂದ ಬಾಧವು ಸ್ವತಂತ್ರ ಹೇತ್ವಾಭಾಸವಾಗುತ್ತದೆ.

ಬಾಧದಂತೆಯೇ ಅಸಾಧಾರಣಾದಿಗಳೂ ಸ್ವತಂತ್ರವಾಗಿ ಬೇರೆ ಬೇರೆ ಹೇತ್ವಾಭಾಸ ಗಳಾಗಲಿ ಎಂಬ ಶಂಕೆ ಬಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಬಾಧ ಸತ್ಪ್ರ—' ಇತಿ. ಸಾಧ್ಯಾಭಾವದಿಂದ ಕೂಡಿದ ಪಕ್ಷಾದಿಗೆ ಬಾಧವೆಂದು ಹೆಸರು. ವಿರೋಧಿವ್ಯಾಪ್ತಿವಿಶಿಷ್ಟಹೇತುವುಳ್ಳಪಕ್ಷಾದಿಗಳು ಸತ್ಪ್ರತಿಪಕ್ಷವಾದುದರಿಂದ ಅದೂ ಬಾಧ ವ್ಯಾಪ್ಯವಾಗುತ್ತದೆ. ಆದರೂ ಅದನ್ನು ಬೇರೆಯಾಗಿ ಪರಿಗಣಿಸುವುದರಿಂದ ಅವೆರಡನ್ನೂ ಬೇರೆಬೇರೆಯಾಗಿ ಹೇಳಿದೆ. ಬಾಧ, ಸತ್ಪ್ರತಿಪಕ್ಷ ಇವೆರಡಕ್ಕಿಂತ ಬೇರೆಯಾದ ಯಾವ ವ್ಯಭಿಚಾರ, ವಿರುದ್ಧ, ಅಸಿದ್ಧವೆಂದು ಮೂರು ಹೇತ್ವಾಭಾಸಗಳಿವೆಯೋ ತದ್ವ್ಯಾಪ್ಯವಾದ (ಅದರ ಅವಾಂತರ ಭೇದಗಳು.) ಸಾಧಾರಣ, ಆಶ್ರಯಾಸಿದ್ಧ ಮುಂತಾದವುಗಳು ವ್ಯಭಿ ಚಾರಾದಿಗಳಲ್ಲಿಯೇ ಅಂತರ್ಭಾವ ಹೊಂದುತ್ತವೆ. ಅವುಗಳೇ ಬೇರೆ ಬೇರೆಯಾಗಿ

ಗಣನೆಗೆ ಬರುವುದಿಲ್ಲ. 'ಅನ್ಯಥಾ—' ಇತಿ. ಹೀಗೆ ಹೇಳದಿದ್ದರೆ ಗೌತಮರಿಂದ 'ಸವ್ಯಭಿಚಾರ ವಿರುದ್ಧ, ಪ್ರಕರಣಸಮ, ಸಾಧ್ಯಸಮ, ಕಾಲಾತೀತಾ ಹೇತ್ವಾಭಾಸಾಃ' ಎಂದು ಐದನ್ನೇ ಹೇಳಿರುವುದು ಅಸಂಗತವಾಗುತ್ತದೆ. ಅಧಿಕವಾಗಬೇಕಾಗುತ್ತದೆ. ಸತ್ಪ್ರತಿಪಕ್ಷವು ಬಾಧವ್ಯಾಪ್ಯವಾದರೂ ಮುನಿಗಳು ಸ್ವತಂತ್ರೇಚ್ಛೆಯುಳ್ಳವರಾದುದರಿಂದ ಅವರು ಹಾಗೆ ಬೇರೆಯಾಗಿ ಹೇಳಿದುದರಿಂದ ಬೇರೆ ಬೇರೆಯೆಂದು ತಿಳಿಯಬೇಕು. 'ಅಯಂ ಹೇತುರ್ಬಾಧಿತಃ' 'ಅಯಂ ಹೇತುಃ ಸತ್ಪ್ರತಿಪಕ್ಷಿತಃ' ಎಂಬ ವ್ಯವಹಾರವಿರುವುದರಿಂದ ಸ್ವಾತಂತ್ರ್ಯದಿಂದ ಪ್ರತಿಬಂಧಕತ್ವವಿದೆ. ಸಾಧಾರಣಾದಿವ್ಯಭಿಚಾರ ವ್ಯಾಪ್ಯಾದಿಗಳಿಗೆ ಸಾಧಾರಣತ್ವಾದಿರೂಪದಿಂದ ಪ್ರತಿಬಂಧಕತ್ವವಿಲ್ಲ. 'ಅಯಂ ಹೇತುಃ ವ್ಯಭಿಚಾರೀ' ಎಂದು ವ್ಯಭಿಚಾರಾದಿರೂಪದಿಂದಲೇ ಪ್ರತಿಬಂಧಕತ್ವವು ಪ್ರಸಿದ್ಧವಾಗಿದೆ. ಸತ್ಪ್ರತಿಪಕ್ಷವ್ಯಾಪ್ಯಕ್ಕೆ ಪ್ರತಿಬಂಧಕತ್ವವೇ ಇರುವುದಿಲ್ಲ. ಸಾಧ್ಯಾಭಾವವ್ಯಾಪ್ಯವ್ಯಾಪ್ಯವತ್ತಾಜ್ಞಾನವು ಸಾಧ್ಯವತ್ತಾಜ್ಞಾನಕ್ಕೆ ಎಂದೂ ವಿರೋಧಿಯಾಗುವುದಿಲ್ಲ.

**ಯಃ ಸಪಕ್ಷೇ ವಿಪಕ್ಷೇ ಚ ಭವೇತ್ಸಾಧಾರಣಸ್ತು ಸಃ ||**

ಯಃ ಸಪಕ್ಷ ಇತಿ || ಸಪಕ್ಷವಿಪಕ್ಷವೃತ್ತಿಃ ಸಾಧಾರಣ ಇತ್ಯರ್ಥಃ | ಸಪಕ್ಷೋ ನಿಶ್ಚಿತ ಸಾಧ್ಯವಾನ್ | ವಿಪಕ್ಷಃ ಸಾಧ್ಯಾಭಾವವಾನ್ | ವಿರುದ್ಧವಾರಣಾಯ ಸಪಕ್ಷ ವೃತ್ತಿತ್ವಮುಕ್ತಮ್ | ವಸ್ತುತೋ ವಿಪಕ್ಷವೃತ್ತಿತ್ವಮೇವ ವಾಚ್ಯಮ್, ವಿರುದ್ಧಸ್ಯ ಸಾಧಾರಣತ್ವೇಽಪಿ ದೂಷಕತಾಬೀಜಸ್ಯ ಭಿನ್ನತಯಾ ತಸ್ಯ ಪಾರ್ಥಕ್ಯಾತ್ ||

ವ್ಯಭಿಚಾರಿವ್ಯಾಪ್ಯವಾದ ಸಾಧಾರಣದ ಲಕ್ಷಣವನ್ನು ತೋರಿಸುತ್ತಾನೆ. 'ಸಪಕ್ಷ—' ಇತಿ. ಸಪಕ್ಷದಲ್ಲಿಯೂ ವಿಪಕ್ಷದಲ್ಲಿಯೂ ಇರುವ ಹೇತುವೇ ಸಾಧಾರಣವಾಗುತ್ತದೆ. ನಿಶ್ಚಿತವಾದ ಸಾಧ್ಯವುಳ್ಳಮಹಾನಸಾದಿಗಳು ಸಪಕ್ಷವಾಗುತ್ತವೆ. 'ಸಾಧ್ಯವತ್ತ್ವಪ್ರಕಾರತಾನಿರೂಪಿತ ನಿಶ್ಚಯೀಯ ವಿಶೇಷ್ಯತ್ವಂ' ಎಂದು ಸಪಕ್ಷದ ಲಕ್ಷಣ. 'ಮಹಾನಸಂ ಸಾಧ್ಯವತ್ (ವಹ್ನಿ)' ಎಂಬ ನಿಶ್ಚಯದಲ್ಲಿ ಸಾಧ್ಯವು (ವಹ್ನಿ) ಪ್ರಕಾರವಾಗಿಯೂ, ಮಹಾನಸವು ವಿಶೇಷ್ಯವಾಗಿಯೂ ಇರುವುದರಿಂದ ಮಹಾನಸವು ಸಪಕ್ಷವಾಗುತ್ತದೆ. ಸಾಧ್ಯಾಭಾವವುಳ್ಳದ್ದು (ಸಾಧ್ಯವಿಲ್ಲದಿರುವ ಹ್ರದಾದಿಗಳು) ವಿಪಕ್ಷ. 'ಸಾಧ್ಯಾಭಾವವತ್ತ್ವಪ್ರಕಾರತಾನಿರೂಪಿತನಿಶ್ಚಯೀಯ ವಿಶೇಷ್ಯತ್ವಂ' ಎಂದು ನಿಷ್ಕೃಷ್ಟವಾದ ಲಕ್ಷಣ. 'ವಹ್ನ್ಯಭಾವವತ್ ಹ್ರದಃ' ಎಂಬಲ್ಲಿ ವಹ್ನ್ಯಭಾವ ಪ್ರಕಾರ. ಹ್ರದ ವಿಶೇಷ್ಯವಾದುದರಿಂದ ವಿಪಕ್ಷವಾಗುತ್ತದೆ. ಹೇತುವು ಸಪಕ್ಷದಲ್ಲಿಯೂ ಇದ್ದು ವಿಪಕ್ಷದಲ್ಲಿಯೂ ಇರುವುದಾದರೆ ಆಗ ಅದು ಸಾಧಾರಣವಾಗುತ್ತದೆ. ಕೇವಲ 'ವಿಪಕ್ಷವೃತ್ತಿತ್ವಂ' ಎಂದರೆ ವಿರುದ್ಧದಲ್ಲಿ ಅತಿವ್ಯಾಪ್ತಿ ಬರುತ್ತದೆ. ಸಾಧ್ಯಾಭಾವವ್ಯಾಪ್ಯವಾದದ್ದು ವಿರುದ್ಧ. ಅದೂ ಕೇವಲ ವಿಪಕ್ಷದಲ್ಲಿರುತ್ತದೆ. ಆದುದರಿಂದ 'ಸಪಕ್ಷವೃತ್ತಿತ್ವೇ ಸತಿ' ಎಂಬ ಸತ್ಯಂತದಳವನ್ನು ಹೇಳಬೇಕು. ವಿರುದ್ಧ ಸಪಕ್ಷದಲ್ಲಿ ಇರುವು

ದಿಲ್ಲ. 'ವಸ್ತುತಃ—' ಇತಿ. ಸಪಕ್ಷವೃತ್ತಿತ್ವರೂಪವಳನನ್ನು ಹೇಳದಿದ್ದರೂ ದೋಷ ವಿಲ್ಲ. ಎರಡೂ ವಿಪಕ್ಷದಲ್ಲಿರುವವುಗಳಾಗಲಿ. ಆದರೂ ದೂಷಕತಾಬೀಜ ಬೇರೆ ಯಾದುದರಿಂದ ಅವುಗಳ ಸ್ವರೂಪ ಬೇರೆಯಾಗಿರುತ್ತದೆ. ಸಾಧಾರಣವು ಅವ್ಯಭಿಚಾರಿ ಜ್ಞಾನಕ್ಕೆ ಪ್ರತಿಬಂಧಕವಾಗುತ್ತದೆ. ವಿರುದ್ಧವು ಸಾಧ್ಯಸಾಮಾನಾಧಿಕರಣ್ಯಜ್ಞಾನಕ್ಕೆ ಪ್ರತಿಬಂಧಕವಾಗುತ್ತದೆ. ಆದುದರಿಂದ ಎರಡಕ್ಕೂ ಭೇದವಿದೆ. ಸಾಧಾರಣಕ್ಕೆ ಉದಾಃ—'ಪರ್ವತೋ—ಧೂಮವಾನ್—ವಹ್ನೇಃ' ಇಲ್ಲಿ ವಹ್ನಿರೂಪಹೇತುವು ನಿಶ್ಚಿತ ಸಾಧ್ಯವುಳ್ಳ ಮಹಾನಸಾದಿಸಪಕ್ಷಗಳಲ್ಲಿದ್ದು, ನಿಶ್ಚಿತಸಾಧ್ಯಾಭಾವ (ಧೂಮಾಭಾವ) ವುಳ್ಳ ಅಯೋಗೋಲಕರೂಪ ವಿಪಕ್ಷದಲ್ಲಿಯೂ ಇರುವುದರಿಂದ ಸಾಧಾರಣವಾಗುತ್ತದೆ. ಇದು ಸಾಧ್ಯಾಭಾವವದವೃತ್ತಿತ್ವರೂಪವ್ಯಾಪ್ತಿಗೆ ಪ್ರತಿಬಂಧಕವಾಗಿ ತನ್ಮೂಲಕವಾಗಿ ಅನುಮಿತಿಗೆ ಪ್ರತಿಬಂಧಕವಾಗುತ್ತದೆ.

**ಯಸ್ತೂಭಯಸ್ಮಾದ್ವ್ಯಾವೃತ್ತಃ ಸ ಚಾಸಾಧಾರಣೋ ಮತಃ ॥ ೭೩ ॥**

ಯಸ್ತೂಭಯಸ್ಮಾದಿತಿ । ಸಪಕ್ಷ ವಿಪಕ್ಷವ್ಯಾವೃತ್ತ ಇತ್ಯರ್ಥಃ । ಸಪಕ್ಷಃ ಸಾಧ್ಯವತ್ತಯಾ ನಿಶ್ಚಿತಃ । ವಿಪಕ್ಷಃ ಸಾಧ್ಯಶೂನ್ಯತಯಾ ನಿಶ್ಚಿತಃ । ಶಬ್ದೋಽನಿತ್ಯಃ ಶಬ್ದತ್ವಾದಿತ್ಯಾದೌ ಯದಾ ಶಬ್ದೇಽನಿತ್ಯತ್ವಸಂದೇಹಸ್ತದಾ ಸಪಕ್ಷತ್ವಂ ಘಟಾದೀನಾಮೇವ ! ತದ್ವ್ಯಾವೃತ್ತಂ ಚ ಶಬ್ದತ್ವಮಿತಿ ತದಾ ತದಾಸಾಧಾರಣಮ್ । ಯದಾ ತು ಶಬ್ದೇಽನಿತ್ಯತ್ವನಿಶ್ಚಯಸ್ತದಾ ನಾಸಾಧಾರಣಃ । ಇದಂ ಚ ಪ್ರಾಚಾಂಮತಮ್ । ನವೀನಮತಂ ತು ಪೂರ್ವಮುಕ್ತಮ್ ॥ ೭೩ ॥

ಅಸಾಧಾರಣರೂಪ ಅನೈಕಾಂತದ ಲಕ್ಷಣ ಹೇಳುತ್ತಾನೆ. 'ಸಪಕ್ಷ—' ಇತಿ. ಸಪಕ್ಷದಲ್ಲಿಯೂ ವಿಪಕ್ಷದಲ್ಲಿಯೂ ಇರದೆ ಕೇವಲ ಪಕ್ಷದಲ್ಲಿ ಮಾತ್ರ ಇರುವ ಹೇತು ಅಸಾಧಾರಣವಾಗುತ್ತದೆ. ಸಪಕ್ಷವಿಪಕ್ಷಲಕ್ಷಣ ಹಿಂದೆ ಹೇಳಿದೆ. 'ಶಬ್ದಃ—ಅನಿತ್ಯಃ—ಶಬ್ದತ್ವಾತ್' ಇಲ್ಲಿ ಅನಿತ್ಯತ್ವಕ್ಕೆ ಸಾಧಕವಾಗಿ ಶಬ್ದತ್ವರೂಪ ಹೇತು ಹೇಳಿದೆ. ಶಬ್ದ ಪಕ್ಷ. ಇದರಲ್ಲಿ ಅನಿತ್ಯತ್ವರೂಪಸಾಧ್ಯದ ಸಂದೇಹವಿದ್ದರೆ ಆಗ ಘಟಪಟಾದಿಗಳು ಸಪಕ್ಷವಾಗುತ್ತವೆ. ಅವುಗಳಲ್ಲಿ ಅನಿತ್ಯತ್ವವಿದೆಯೆಂದು ನಿಶ್ಚಿತವಾಗಿದೆ. ಗಗನಾದಿಗಳು ನಿತ್ಯವಾದುದರಿಂದ ಅವು ವಿಪಕ್ಷವಾಗುತ್ತವೆ. ಅನಿತ್ಯತ್ವರೂಪಸಾಧ್ಯದ ಅಭಾವವು ಅಲ್ಲಿ ನಿಶ್ಚಿತವಾಗಿದೆ. ಶಬ್ದತ್ವ ರೂಪಹೇತುವು ಈ ಸಪಕ್ಷ ವಿಪಕ್ಷಗಳೆರಡರಲ್ಲಿಯೂ ವ್ಯಾವೃತ್ತವಾಗಿ ಅಂದರೆ ಇಲ್ಲದಿದ್ದು ಶಬ್ದರೂಪಪಕ್ಷದಲ್ಲಿ ಮಾತ್ರ ವಿರುವುದರಿಂದ ಅಸಾಧಾರಣವಾಗುತ್ತದೆ. ಶಬ್ದೋ ಅನಿತ್ಯಃ ಕಾರ್ಯತ್ವಾತ್' ಎಂದು ಕಾರ್ಯತ್ವ ಹೇತುವಿನಿಂದ ಶಬ್ದದಲ್ಲಿ ಅನಿತ್ಯತ್ವನಿಶ್ಚಯವಿದ್ದರೆ ಆಗ ಶಬ್ದತ್ವರೂಪಹೇತುವು ಅಸಾಧಾರಣವಾಗುವುದಿಲ್ಲ. (ಸಪಕ್ಷದಲ್ಲಿಯೂ ಇದ್ದಂತಾಗುವುದರಿಂದ) ಅಲ್ಲಿ ಅಸಾಧಾರಣ್ಯಭ್ರಮ ಬರಬಹುದೆಂದು ಪ್ರಾಚೀನರ ಮತ. ನವೀನರು ಮಾತ್ರ ಅಸಾಧಾರಣಕ್ಕೆ ಈ ಲಕ್ಷಣ

ವನ್ನು ಅಂಗೀಕರಿಸುವುದಿಲ್ಲವೆಂದು ಹಿಂದೆ ಹೇಳಿದೆ. 'ಸಾಧ್ಯಸಾಮಾನಾಧಿಕರಣ್ಯವಿಲ್ಲದ, ಸಾಧ್ಯಾಸಮಾನಾಧಿಕರಣವಾದ ಹೇತುವು ಅಸಾಧಾರಣವಾಗುತ್ತದೆ'ಂದು ಅವರ ಸಿದ್ಧಾಂತ. 'ಭೂಮಿಃ—ನಿತ್ಯಾ—ಗಂಧವತ್ತ್ವಾತ್' ಇಲ್ಲಿ ಗಂಧವತ್ತ್ವ ಹೇತುವಿಗೆ ನಿತ್ಯತ್ವಸಾಮಾನಾಧಿಕರಣ್ಯವಿಲ್ಲದಿರುವುದರಿಂದ ಅಸಾಧಾರಣವಾಗುತ್ತದೆ.

**ತಥೈವಾನುಪಸಂಹಾರೀ ಕೇವಲಾನ್ವಯಿಪಕ್ಷಕಃ ||**

'ಕೇವಲಾನ್ವಯಿ' ಇತಿ । ಕೇವಲಾನ್ವಯಿ ಧರ್ಮಾವಚ್ಛಿನ್ನಪಕ್ಷಕ ಇತ್ಯರ್ಥಃ । ಸರ್ವಂ— ಅಭಿಧೇಯಂ — ಪ್ರಮೇಯತ್ವಾತ್ — ಇತ್ಯಾದೌ ಸರ್ವಸ್ಯೈವ ಪಕ್ಷತ್ವಾತ್ ಸಾಮಾನಾಧಿಕರಣ್ಯಸ್ಥಲಾಂತರಾಭಾವಾತ್, ನಾನುಮಿತಿಃ । ಇದಂ ತು ನ ಸಮ್ಯಕ್, ಪಕ್ಷೈಕದೇಶೇ ಸಹಚಾರಗ್ರಹೇಪಿ ಕ್ಷತೇರಭಾವಾತ್ । ಅಸ್ತು ವಾ ಸಹಚಾರಾಗ್ರಹಃ, ತಾವತಾಸ್ಯಜ್ಞಾನರೂಪಾಸಿದ್ಧಿರೇವ ನತು ಹೇತ್ವಾಭಾಸತ್ವಂ ತಸ್ಯ ತಥಾಪಿ ಕೇವಲಾನ್ವಯಿಸಾಧ್ಯಕತ್ವಂ ತತ್ತ್ವಮಿತ್ಯುಕ್ತಮ್ ||

ಸವ್ಯಭಿಚಾರದ ಮೂರನೆಯ ಭೇದವಾದ ಅನುಪಸಂಹಾರಿಯ ಲಕ್ಷಣವನ್ನು ತೋರಿಸುತ್ತಾನೆ. 'ಕೇವಲಾನ್ವ—' ಇತಿ. ಕೇವಲಂ ಅನ್ವಯಧರ್ಮಾವಚ್ಛಿನ್ನಃ ಪಕ್ಷಃ ಯಸ್ಯಸಃ' ಕೇವಲಾನ್ವಯಿಪಕ್ಷಕಃ । 'ಸರ್ವಂ—ಅಭಿಧೇಯಂ—ಪ್ರಮೇಯತ್ವಾತ್'. ಇಲ್ಲಿ ಪ್ರಪಂಚದಲ್ಲಿರುವ ವಸ್ತು ಮಾತ್ರವೂ ಅಂದರೆ ನಿಖಿಲಪದಾರ್ಥಗಳೂ ಪಕ್ಷವಾಗುವುದರಿಂದ 'ಯತ್ರ ೨ ಪ್ರಮೇಯತ್ವಂ, ತತ್ರ ೨—ಅಭಿಧೇಯತ್ವಂ' ಎಂದು ಸಾಧ್ಯಹೇತುಗಳಿಗೆ ಸಾಮಾನಾಧಿಕರಣ್ಯಜ್ಞಾನರೂಪ ವ್ಯಾಪ್ತಿಯನ್ನು ತೋರಿಸಲು ಬೇರೆ ದೃಷ್ಟಾಂತ ಸ್ಥಲವು ಸಿಗುವುದೇ ಇಲ್ಲ. 'ಯಥಾ ಮಹಾನಸಂ' ಎಂದು ವಹ್ನಿಧೂಮಗಳಿಗೆ ವ್ಯಾಪ್ತಿ ತೋರಿಸುವ ಉದಾಹರಣೆ ಸಿಗುವಂತೆ ಇಲ್ಲಿ ಅಂತಹ ಒಂದು ಸ್ಥಳವೂ ಇಲ್ಲ. ಆದುದರಿಂದ 'ಸರ್ವಂ—ಅಭಿಧೇಯಂ—' ಎಂಬ ಅನುಮಿತಿಯೂ ಬರುವುದಿಲ್ಲ. ಇದು ಪ್ರಾಚೀನ ಮತ. ಇದು ಸರಿಯಲ್ಲವೆಂದು ತೋರಿಸುತ್ತಾನೆ. 'ಇದಂತು—' ಇತಿ. ಸಾಧ್ಯಹೇತುಗಳಿಗೆ ಸಾಮಾನಾಧಿಕರಣ್ಯಜ್ಞಾನ ತೋರಿಸಲು ದೃಷ್ಟಾಂತ ಸ್ಥಲವೇ ಇರಬೇಕೆಂಬ ನಿಯಮವಿಲ್ಲ. ಪಕ್ಷೈಕದೇಶದಲ್ಲಿ ಅಂದರೆ ಯಾವುದಾದರೊಂದು ಪಕ್ಷದಲ್ಲಿ ಸಾಧ್ಯಹೇತುಗಳಿಗೆ ಸಾಮಾನಾಧಿಕರಣ್ಯದೃಷ್ಟವಾದರೂ ಅದರಿಂದ ಅನುಮಿತಿಯು ಬಂದೇ ಬರುತ್ತದೆ. ಸರ್ವದಲ್ಲಿ ಸೇರಿದ ಘಟಾದಿಗಳಲ್ಲಿ ಸಹಚಾರಜ್ಞಾನ ಬರುವುದರಿಂದ ಅದರಿಂದ ಅನುಮಿತಿ ಬರುತ್ತದೆ. ಸರ್ವಪಕ್ಷದಲ್ಲಿ ಸಾಧ್ಯಸಂಶಯವಿರುವಾಗ ಪಕ್ಷದ ಏಕದೇಶವಾದ ಘಟಾದಿಗಳಲ್ಲಿ ಸಾಧ್ಯನಿಶ್ಚಯ ಬರುವುದು ಹೇಗೆ ? ಸರ್ವತ್ವ ಧರ್ಮಿತಾವಚ್ಛೇದಕ ಸಂಶಯ ಸಾಮಗ್ರಿಯು ನಿಶ್ಚಯಕ್ಕೆ ಪ್ರತಿಬಂಧಕವಾಗುವುದಿಲ್ಲವೆ ? ಎಂದರೆ ಪ್ರತಿಬಧ್ಯಪ್ರತಿಬಂಧಕಗಳಿಗೆ ಸಮಾನಪ್ರಕಾರಕತ್ವವಿದ್ದರೇ ಆಗ ವಿರೋಧ ಕೊಡುತ್ತದೆ. ಸಮಾನವಿಷಯಕತ್ವೇನ ವಿರೋಧವಿಲ್ಲವೆಂದು ನವೀನರ ಮತ.

ಸಮಾನವಿಷಯಕತ್ವವಿದ್ದರೂ ಪ್ರತಿಬಂಧಕವಾಗುತ್ತದೆಂದು ಪ್ರಾಚೀನರ ಸಿದ್ಧಾಂತವನ್ನಾಶ್ರಯಿಸುವುದಾದರೆ ಆಗಲೂ ಸಮಾಧಾನ ತೋರಿಸುತ್ತಾನೆ. 'ಅಸ್ತುವಾ—' ಇತಿ. ಎಲ್ಲಿ ಸಾಧ್ಯದೊಡನೆ ಹೇತುವಿಗೆ ಸಹಚಾರಗ್ರಹ (ಜ್ಞಾನ) ಬಂದಿಲ್ಲವೋ ಅಲ್ಲಿ ಹೇತ್ವಾಭಾಸತ್ವ ಹೇಳುವುದು ನ್ಯಾಯವಲ್ಲ. ಅಲ್ಲಿ ಅಜ್ಞಾನರೂಪಾಽಸಿದ್ಧಿಯನ್ನು ಹೇಳಬೇಕು. ಹೀಗಿದ್ದರೂ ಕೇವಲಾನ್ವಯಿಃಸಾಧ್ಯಕಸ್ಥಳದಲ್ಲಿ ಅನುಪಸಂಹಾರಿಯೆಂಬ ವ್ಯವಹಾರವು ಸಂಪ್ರದಾಯದಿಂದ ಬಂದಿದೆಯೆಂದು ತೋರಿಸುತ್ತಾನೆ. 'ತಥಾಪಿ—' ಇತಿ. ||

**ಯಃ ಸಾಧ್ಯವತಿ ನೈವಾಸ್ತಿ ಸ ವಿರುದ್ಧ ಉದಾಹೃತಃ || ೭೪ ||**

ಯಃ ಸಾಧ್ಯವತೀತಿ | ಏವಕಾರೇಣ ಸಾಧ್ಯವತ್ತ್ವಾವಚ್ಛೇದೇನ ಹೇತ್ವಭಾವೋ ಬೋಧಿತಃ | ತಥಾ ಚ ಸಾಧ್ಯವ್ಯಾಪಕೀಭೂತಾಭಾವಪ್ರತಿಯೋಗಿತ್ವಂ ತದರ್ಥಃ || ೭೪ ||

ವಿರುದ್ಧದ ಲಕ್ಷಣ ತೋರಿಸುತ್ತಾನೆ. 'ಯಃ—' ಇತಿ. ಸಾಧ್ಯಾಧಿಕರಣದಲ್ಲಿ ಇಲ್ಲದಿರುವ ಹೇತುವು ವಿರುದ್ಧವಾಗುತ್ತದೆ. ಏವಕಾರಕ್ಕೆ ಪ್ರಯೋಜನ ತೋರಿಸುತ್ತಾನೆ. 'ಏವ—' ಇತಿ. ಸಾಧ್ಯಾಧಿಕರಣಗಳು ಎಷ್ಟಿವೆಯೋ ಅಲ್ಲಿ ಎಲ್ಲಾ ಕಡೆ ಹೇತುವಿರಬಾರದು ಎಂದರ್ಥ. ಹೀಗೆ ಹೇಳಿರುವುದರಿಂದ ಅಸಾಧಾರಣದಲ್ಲಿ ಅತಿವ್ಯಾಪ್ತಿ ಬರುವುದಿಲ್ಲ. ನಿಷ್ಕೃಷ್ಟವಾದ ಲಕ್ಷಣ ತೋರಿಸುತ್ತಾನೆ 'ತಥಾಚ—' ಇತಿ. ಸಾಧ್ಯಕ್ಕೆ ವ್ಯಾಪಕವಾದ ಯಾವ ಅಭಾವವಿದೆಯೋ ಆ ಅಭಾವಕ್ಕೆ ಪ್ರತಿಯೋಗಿಯಾಗಿರುವ ಹೇತುವೇ ವಿರುದ್ಧವಾಗುತ್ತದೆ. 'ಘಟಃ—ನಿತ್ಯಃ—ಕೃತಕತ್ವಾತ್' ಇಲ್ಲಿ ಸಾಧ್ಯ—ನಿತ್ಯತ್ವ. ಇದು ಇದ್ದಲ್ಲಿ ಕೃತಕತ್ವಾಭಾವವಿರುವುದರಿಂದ ನಿತ್ಯತ್ವಕ್ಕೆ ಕೃತಕತ್ವಾಭಾವ ವ್ಯಾಪಕವಾಗುತ್ತದೆ. ಅಭಾವಪ್ರತಿಯೋಗಿತ್ವ ಕೃತಕತ್ವದಲ್ಲಿ ಬರುವುದರಿಂದ ಅದು ವಿರುದ್ಧರೂಪಹೇತ್ವಾಭಾಸವಾಗುತ್ತದೆ. 'ಕೃತಕತ್ವಾಭಾವೋ ಹಿ ನಿತ್ಯತ್ವವ್ಯಾಪಕಃ' ಎಂದು ತಿಳಿಯುವುದರಿಂದ ಸಾಧ್ಯಾಭಾವಗ್ರಹಸಾಮಗ್ರೀರೂಪದಿಂದ ಸಾಕ್ಷಾದನುಮಿತಿಗೆ ಪ್ರತಿಬಂಧಕವಾಗುತ್ತದೆ.

**ಆಶ್ರಯಾಸಿದ್ಧಿರಾದ್ಯಾ ಸ್ಯಾತ್ ಸ್ವರೂಪಾಸಿದ್ಧಿರಪ್ಯಥ |**
**ವ್ಯಾಪ್ಯತ್ವಾಸಿದ್ಧಿರಪರಾ ಸ್ಯಾದಸಿದ್ಧಿರತಸ್ತ್ರಿಧಾ || ೭೫ ||**
**ಪಕ್ಷಾಸಿದ್ಧಿರ್ಯತ್ರ ಪಕ್ಷೋ ಭವೇನ್ಮಣಿಮಯೋ ಗಿರಿಃ |**
**ಹ್ರದೋ ದ್ರವ್ಯಂ ಧೂಮವತ್ತ್ವಾದತ್ರಾಸಿದ್ಧಿರಥಾಪರಾ || ೭೬ ||**
**ವ್ಯಾಪ್ಯತ್ವಾಸಿದ್ಧಿರಪರಾ ನೀಲಧೂಮಾದಿಕೇ ಭವೇತ್ ||**

ಅಸಿದ್ಧಿಂ ವಿಭಜತೇ | ಆಶ್ರಯಾಸಿದ್ಧಿರಿತ್ಯಾದಿ | ಪಕ್ಷಾಸಿದ್ಧಿರಿತಿ | ಆಶ್ರಯಾಸಿದ್ಧಿರಿತ್ಯರ್ಥಃ | ಅಪರೇತಿ | ಸ್ವರೂಪಾಸಿದ್ಧಿರಿತ್ಯರ್ಥಃ | ನೀಲಧೂಮಾದಿಕ ಇತಿ |

ನೀಲಧೂಮತ್ವಂ ಗುರುತಯಾ ನ ಹೇತುತಾವಚ್ಛೇದಕಂ ಸ್ವಸಮಾನಾಧಿಕರಣ ವ್ಯಾಪ್ಯತಾವಚ್ಛೇದಕಧರ್ಮಾಂತರಾಘಟಿತಸ್ಯೈವ ವ್ಯಾಪ್ಯತಾವಚ್ಛೇದಕತ್ವಾತ್ । ಧೂಮಪ್ರಾಗಭಾವತ್ವಸಂಗ್ರಹಾಯ ಸ್ವಸಮಾನಾಧಿಕರಣೇತಿ ॥

ಮೂರನೆಯ ಅಸಿದ್ಧಹೇತ್ವಾಭಾಸದ ವಿಭಾಗವನ್ನು ತೋರಿಸುತ್ತಾನೆ. 'ಆಶ್ರಯಾಸಿದ್ಧಿ—' ಇತಿ. 'ಆಶ್ರಯಾಸಿದ್ಧ್ಯಾದ್ಯನ್ಯತಮತ್ವಂ' ಎಂದು ಅಸಿದ್ಧಿಯ ಸಾಮಾನ್ಯ ಲಕ್ಷಣ. ಇದು ಉಳ್ಳದ್ದು ಅಸಿದ್ಧವಾಗುತ್ತದೆ. ಇದನ್ನು ತಿಳಿಯದಿದ್ದರೆ ವಿಭಾಗ ಮಾಡಿರುವುದು ಅಸಂಗತವಾಗುತ್ತದೆ. ಆಶ್ರಯ—ಸಾಧ್ಯಹೇತುಗಳಧರ್ಮಿ ಅಂದರೆ ಪಕ್ಷ. ಪಕ್ಷದಲ್ಲಿ ಅಸಿದ್ಧಿ ಅಂದರೆ ಪಕ್ಷತಾವಚ್ಛೇದಕಧರ್ಮವಿಲ್ಲದಿರುವುದು ಎಂದರ್ಥ. ಪಕ್ಷದಲ್ಲಿ ವ್ಯಾಪ್ಯವಾಗಿ ಅಂಗೀಕರಿಸಿದ ಹೇತುವಿಲ್ಲದಿರುವುದು ಸ್ವರೂಪಾಸಿದ್ಧವಾಗುತ್ತದೆ. ಹೇತುವಿನಲ್ಲಿ ಹೇತುತಾವಚ್ಛೇದಕ ಧರ್ಮಬಾರದಿದ್ದರೂ ಸ್ವರೂಪಾಸಿದ್ಧಿಯಾಗುತ್ತದೆ. ವ್ಯಾಪ್ಯವೆಂದರೆ ವ್ಯಾಪ್ತಿಕ್ರಿಯೆಯಲ್ಲಿ ಕರ್ಮವಾದದ್ದು. ಧೂಮಾದಿಹೇತುಗಳಾಗುತ್ತವೆ. ವಿಪೂರ್ವಕ ಆಪ್ ಧಾತುವಿಗೆ ಕರ್ಮಣಿಯಲ್ಲಿ ಣ್ಯತ್ ಪ್ರತ್ಯಯ ಬಂದಿದೆ. ವ್ಯಾಪ್ಯಸ್ಯಭಾವಃ ವ್ಯಾಪ್ಯತ್ವಂ. (ವ್ಯಾಪ್ತಿ) ವ್ಯಾಪ್ಯತ್ವದ ಅಂದರೆ ವ್ಯಾಪ್ತಿಯ (ವ್ಯಾಪ್ಯದಲ್ಲಿರುವ ಧರ್ಮವ್ಯಾಪ್ತಿ) ಅಸಿದ್ಧಿ—ಅಭಾವವೇ ವ್ಯಾಪ್ಯತ್ವಾಸಿದ್ಧಿಯಾಗುತ್ತದೆ. ವ್ಯಾಪ್ತಿ ಕ್ರಿಯೆಯಲ್ಲಿ ಕರ್ತೃವಾದದ್ದು ವ್ಯಾಪಕ. ಕರ್ತ್ರರ್ಥದಲ್ಲಿ ಣ್ವುಲ್ (ಅಕ) ಬಂದಿದೆ. ಯಾವ ಹೇತುವಿಗೆ ವ್ಯಾಪ್ತಿಯೇ ಸಿದ್ಧಿಸುವುದಿಲ್ಲವೋ ಅದು ವ್ಯಾಪ್ಯತ್ವಾಸಿದ್ಧವಾಗುತ್ತದೆ.

ಕ್ರಮವಾಗಿ ಉದಾಹರಣೆ ತೋರಿಸುತ್ತಾನೆ. 'ಪಕ್ಷಾಸಿದ್ಧಿಃ—' ಇತಿ. ಆಶ್ರಯಾಸಿದ್ಧಿ, ಪಕ್ಷಾಸಿದ್ಧಿ ಇವುಗಳಿಗೆ ಒಂದೇ ಅರ್ಥ. 'ಮಣಿಮಯಃ ಪರ್ವತಃ.... ವಹ್ನಿಮಾನ್....ಧೂಮಾತ್' ಎಂಬಲ್ಲಿ ಮಣಿಮಯಪರ್ವತವು ಅಸಿದ್ಧವಾದುದರಿಂದ ಮಣಿಮಯಪರ್ವತತ್ವರೂಪ ಪಕ್ಷತಾವಚ್ಛೇದಕಧರ್ಮವೂ ಅಪ್ರಸಿದ್ಧವಾಗುವುದರಿಂದ ಅನುಮಿತಿ ಬರುವುದಿಲ್ಲ. 'ಪರ್ವತೋ ನ ಮಣಿಮಯಃ' ಎಂಬ ಜ್ಞಾನ ಉಂಟಾಗಿ ಅದರಿಂದ 'ವಹ್ನಿವ್ಯಾಪ್ಯಧೂಮವಾನಯಂ ಮಣಿಮಯಃ ಪರ್ವತಃ' ಎಂಬ ಪರಾಮರ್ಶ ಪ್ರತಿಬಂಧವಾಗುವುದೇ ದೂಷಕತಾಬೀಜವೆಂದು ತಿಳಿಯಬೇಕು. ಪರಾಮರ್ಶ ಉಂಟಾಗದಿದ್ದರೆ ಅದರಿಂದ ಅನುಮಿತಿಯೂ ಬರುವುದಿಲ್ಲ. ಸ್ವರೂಪಾಸಿದ್ಧಿಗೆ ಉದಾಹರಣೆ ತೋರಿಸುತ್ತಾನೆ. 'ಹ್ರದೋ....ದ್ರವ್ಯಂ....ಧೂಮಾತ್' ಇಲ್ಲಿಯೂ ಪರಾಮರ್ಶಪ್ರತಿಬಂಧಕತ್ವವೇ ದೂಷಕತಾಬೀಜವಾಗುತ್ತದೆ. 'ಹ್ರದಃ ನ ಧೂಮವಾನ್' ಎಂಬ ಜ್ಞಾನ ಬಂದಾಗ 'ವಹ್ನಿವ್ಯಾಪ್ಯಧೂಮವಾನಯಂ ಹ್ರದಃ' ಎಂಬ ಪರಾಮರ್ಶಜ್ಞಾನ ಉಂಟಾಗುವುದಿಲ್ಲ. ವ್ಯಾಪ್ಯತ್ವಾಸಿದ್ಧಿಗೆ ಉದಾಃ....'ಪರ್ವತೋ.... ವಹ್ನಿಮಾನ್....ನೀಲಧೂಮಾತ್ ಇಲ್ಲಿ ನೀಲಧೂಮತ್ವವು ಗುರುಧರ್ಮವಾಗುವುದರಿಂದ ಅದಕ್ಕೆ ಹೇತುತಾವಚ್ಛೇದಕತ್ವವಿಲ್ಲ. 'ಲಘುಧರ್ಮಸಮನಿಯತಗುರು ಧರ್ಮಸ್ಯಾನವ

ಚ್ಛೇದಕತ್ವಂ' ಎಂದು ನಿಯಮ. ಧೂಮತ್ವ ಲಘುಧರ್ಮ. ಏತತ್ಸಮಾನಾಧಿಕರಣ ವಾಗಿ ಅಂದರೆ ಇದರ ಅಧಿಕರಣದಲ್ಲಿಯೇ ಇರುವ ನೀಲಧೂಮತ್ವವು ಅವಚ್ಛೇದಕವಾಗು ವುದಿಲ್ಲ. ಇದನ್ನೇ 'ಸ್ವ'....ಎಂಬುದರಿಂದ ವಿಶದಪಡಿಸುತ್ತಾನೆ. ಸ್ವಪದದಿಂದ ನೀಲ ಧೂಮತ್ವಧರ್ಮತೆಗೆದುಕೊಳ್ಳಬೇಕು. ಸ್ವಸಮಾನಾಧಿಕರಣಂ....ನೀಲಧೂಮತ್ವಾಧಿ ಕರಣದಲ್ಲಿರುವ (ನೀಲಧೂಮತ್ವದ ಅಧಿಕರಣವೇ ಅಧಿಕರಣವಾಗಿರುವ) ವ್ಯಾಪ್ಯತಾವ ಚ್ಛೇದಕಂ ಧರ್ಮಾಂತರಂ ಯತ್....ಶುದ್ಧ ಧೂಮತ್ವರೂಪಧರ್ಮಾಂತರ (ಬೇರೆ ಧರ್ಮ.) ತದಘಟಿತವಾದದ್ದೇ ವ್ಯಾಪ್ಯತಾವಚ್ಛೇದಕವಾಗುತ್ತದೆಯೆಂದುದರಿಂದ ಪ್ರಕೃತ ನೀಲಧೂಮತ್ವವು ತದ್ಘಟಿತವಾಗಿಯೇ ಇರುವುದರಿಂದ (ನೀಲಧೂಮತ್ವದಲ್ಲಿ ಧೂಮತ್ವವು ಸೇರಿಕೊಂಡೇ ಇರುತ್ತದೆ.) ಅದು ಹೇತುತಾವಚ್ಛೇದಕವಾಗುವುದಿಲ್ಲ. ಆಗ 'ಯತ್ರ ಯತ್ರ ನೀಲಧೂಮಃ ತತ್ರ ತತ್ರ ವಹ್ನಿಃ ಎಂಬ ವ್ಯಾಪ್ತಿಯು ಬರುವುದಿಲ್ಲ.

'ಸ್ವಸಮಾನಾಧಿಕರಣ'.... ಪದವನ್ನು ಹೇಳಿರುವುದಕ್ಕೆ ಪ್ರಯೋಜನ ತೋರಿಸು ತ್ತಾನೆ. 'ಧೂಮ—' ಇತಿ. । 'ಇಯಂ ಯಜ್ಞಶಾಲಾ....ವಹ್ನಿಮತೀ ಭವಿಷ್ಯತಿ ಧೂಮಪ್ರಾಗಭಾವಾತ್ । ಮುಂದೆ ಧೂಮವುಂಟಾಗುವುದರಿಂದ ಮುಂದೆ ಉಂಟಾಗುವ ವಹ್ನಿಯಿಂದ ಕೂಡಿದೆಯೆಂದರ್ಥ. ಇಂತಹ ಸ್ಥಳದಲ್ಲಿ ಧೂಮಪ್ರಾಗಭಾವತ್ವರೂಪ ಧರ್ಮಕ್ಕೆ ಅವಚ್ಛೇದಕತ್ವಸಿದ್ಧಿಗೋಸ್ಕರ 'ಸ್ವಸಮಾನಾಧಿಕರಣ' ಎಂದು ಹೇಳಿದೆ. ಕೇವಲ ವ್ಯಾಪ್ಯತಾವಚ್ಛೇದಕ ಧರ್ಮಾಂತರಾಘಟಿತವಾದದ್ದು ವ್ಯಾಪ್ಯತಾವಚ್ಛೇದಕ ವೆಂದರೆ ಆಗ ಧೂಮಪ್ರಾಗಭಾವಕ್ಕೆ ಹೇತುತ್ವವಿಲ್ಲದೇ ಹೋಗಬೇಕಾಗುತ್ತದೆ. ಏಕೆಂದರೆ ಧೂಮಪ್ರಾಗಭಾವತ್ವವೂ ವ್ಯಾಪ್ಯತಾವಚ್ಛೇದಕಧರ್ಮಾಂತರದಿಂದ ಘಟಿತವೇ ಆಗಿದೆ. ವ್ಯಾ....ಧರ್ಮಾಂತರವೆಂದರೆ ಧೂಮತ್ವ. ಅದರಿಂದ ಧೂಮಪ್ರಾಗಭಾವ ತ್ವವು ಕೂಡಿಯೇ ಇವೆ. ಆದುದರಿಂದ ಅದಕ್ಕೆ ಅವಚ್ಛೇದಕತ್ವ ಬರಲಾರದು. ಆದರೆ ಅದಕ್ಕೆ ಅವಚ್ಛೇದಕತ್ವವು ಎಲ್ಲರಿಂದಲೂ ಅಂಗೀಕೃತವಾಗಿದೆ. ಈಗ ಸ್ವಸಮಾನಾಧಿ ಕರಣವೆಂದು ಸೇರಿಸಿದರೆ ಯಾವ ದೋಷಕ್ಕೂ ಅವಕಾಶವಿಲ್ಲ. ಧೂಮಪ್ರಾಗ ಭಾವತ್ವ ಕೇವಲ ಧೂಮಪ್ರಾಗಭಾವದಲ್ಲಿ ಇರುತ್ತದೆ. ಧೂಮತ್ವ ಕೇವಲ ಧೂಮ ದಲ್ಲಿದೆ. ಎರಡಕ್ಕೂ ಪರಸ್ಪರ ಸಾಮಾನಾಧಿಕರಣ್ಯವಿರುವುದಿಲ್ಲ. ವ್ಯಧಿಕರಣವೃತ್ತಿ ಧರ್ಮಗಳಾಗುತ್ತವೆ. ವ್ಯಧಿಕರಣವೃತ್ತಿಧರ್ಮವು ಗುರುಭೂತವಾಗಿ ವ್ಯಾಪ್ಯತಾವಚ್ಛೇದ ಕಾಂತಃ ಪಾತಿಯಾಗಿ ತೋರಿದರೂ ಯಾವ ದೋಷವೂ ಇಲ್ಲ ॥

## ವಿರುದ್ಧಯೋಃ ಪರಾಮರ್ಶೇ ಹೇತ್ವೋಃ ಸತ್ಪ್ರತಿ ಪಕ್ಷತಾ ॥ ೭೩ ॥

ವಿರುದ್ಧಯೋರಿತಿ । ಕಪಿಸಂಯೋಗ ತದಭಾವವ್ಯಾಪ್ಯವತ್ತ್ವಾಪರಾಮರ್ಶೇಽಪಿ ನ ಸತ್ಪ್ರತಿ ಪಕ್ಷತ್ವಮತ ಉಕ್ತಂ ವಿರುದ್ಧಯೋರಿತಿ । ತಥಾಚ ಸ್ವಸಾಧ್ಯ ವಿರುದ್ಧಸಾಧ್ಯಾ

ಭಾವ ವ್ಯಾಪ್ಯವತ್ತಾಪರಾಮರ್ಶಕಾಲೀನ ಸಾಧ್ಯವ್ಯಾಪ್ಯವತ್ತಾಪರಾಮರ್ಶ ವಿಷಯ ಇತ್ಯರ್ಥಃ || ೭೭ ||

ಸತ್ಪ್ರತಿಪಕ್ಷದ ಲಕ್ಷಣ ತೋರಿಸುತ್ತಾನೆ. ಎರಡು ವಿರುದ್ಧ ಹೇತುಗಳಿಗೆ ಪರಾಮರ್ಶ ಬಂದಾಗ ಸತ್ಪ್ರತಿಪಕ್ಷದೋಷ ವುಂಟಾಗುತ್ತದೆ. 'ವಿರುದ್ಧಯೋಃ' ಪದಕ್ಕೆ ಪ್ರಯೋಜನ ತೋರಿಸುತ್ತಾನೆ. 'ವಿರುದ್ಧಯೋಃ' ಎಂಬುದು ಹೇತುವಿಗೆ ವಿಶೇಷಣ ವಾಗಿ ಹೇಳಿದೆ. ಕಪಿಸಂಯೋಗೀ—ಏತದ್ವೃಕ್ಷತ್ವಾತ್' ಇತ್ಯಾದಿ ಸ್ಥಳಗಳಲ್ಲಿ ಕಪಿ ಸಂಯೋಗ, ತದಭಾವವ್ಯಾಪ್ಯ ವತ್ತಾಪರಾಮರ್ಶವುಂಟಾದರೂ ಅಲ್ಲಿ ಸತ್ಪ್ರತಿಪಕ್ಷತ್ವ ವ್ಯವಹಾರವಿಲ್ಲ. ಇಲ್ಲಿ ಪರಸ್ಪರ ಹೇತುಗಳಿಗೆ ವಿರೋಧವ್ಯವಹಾರವಿಲ್ಲ. ವೃಕ್ಷತ್ವ ಹೇತುವಿನಲ್ಲಿ ಕಪಿಸಂಯೋಗವ್ಯಾಪ್ಯತ್ವವೂ, ಕಪಿಸಂಯೋಗಾಭಾವವ್ಯಾಪ್ಯತ್ವವೂ ಇದ್ದು ಅದರಿಂದ ವಿರುದ್ಧಪರಾಮರ್ಶಜ್ಞಾನ ಬಂದರೂ ಪರಸ್ಪರ ಹೇತುವಿರೋಧ ತೋರ ದಿರುವುದರಿಂದ ಸತ್ಪ್ರತಿಪಕ್ಷತ್ವ ವ್ಯವಹಾರವಿಲ್ಲ. 'ತಥಾಚ—' ಎಂಬುದರಿಂದ ನಿಷ್ಕೃಷ್ಟ ಲಕ್ಷಣವನ್ನು ತೋರಿಸುತ್ತಾನೆ. ಸ್ವಂ—ಸತ್ಪ್ರತಿಪಕ್ಷತ್ವರೂಪದಿಂದ ಅಂಗೀ ಕೃತವಾದ ಹೇತು. ತತ್ಸಾಧ್ಯವಿರುದ್ಧಃ—ಅದರಿಂದ ಯಾವ ಸಾಧ್ಯವಿದೆಯೋ ಅದಕ್ಕೆ ವಿರುದ್ಧವಾದ ಸಾಧ್ಯಾಭಾವ ಯಾವುದಿದೆಯೋ 'ತದ್ವ್ಯಾಪ್ಯವತ್ತಾ ಪರಾಮರ್ಶಕಾಲಿಕಃ ಯಃ ಸಾಧ್ಯವ್ಯಾಪ್ಯವತ್ತಾಪರಾಮರ್ಶಃ'—ಸಾಧ್ಯಾಭಾವವ್ಯಾಪ್ಯವತ್ತಾಪರಾಮರ್ಶ ಕಾಲದಲ್ಲಿ ಬಂದ ಯಾವ ಸಾಧ್ಯವ್ಯಾಪ್ಯವತ್ತಾಪರಾಮರ್ಶವಿದೆಯೋ ಅಲ್ಲಿ ವಿಷಯ ವಾಗಿರುವ ಹೇತುವೇ ಸತ್ಪ್ರತಿಪಕ್ಷವಾಗುತ್ತದೆ. 'ಹ್ರದೋ—ವಹ್ನಿಮಾನ್— ಧೂಮಾತ್—' ಎಂದು ವಾದಿಯೊಬ್ಬನು ಹೇಳುತ್ತಾನೆ. ಆಗ ಸಿದ್ಧಾಂತಿಯು ಹ್ರದಃ—ವಹ್ನ್ಯಭಾವವಾನ್—ಜಲಾತ್' ಎಂದು ಪೂರ್ವೋಕ್ತ ಹೇತುವನ್ನು ಸತ್ಪ್ರತಿ ಪಕ್ಷಿತವಾಗಿ ಮಾಡುತ್ತಾನೆ. ಇಲ್ಲಿ ಸ್ವಂ—ಜಲರೂಪ ಹೇತುವನ್ನು ತೆಗೆದುಕೊಂಡರೆ ಅದರ ಸಾಧ್ಯ ವಹ್ನ್ಯಭಾವ. ತದ್ವಿರುದ್ಧಸಾಧ್ಯ—ವಹ್ನಿ. ತದಭಾವವ್ಯಾಪ್ಯವತ್ತಾ ಪರಾಮರ್ಶಃ—'ವಹ್ನ್ಯಭಾವವ್ಯಾಪ್ಯ ಜಲವಾನಯಂ ಹ್ರದಃ' ಎಂಬ ಪರಾಮರ್ಶ. ತತ್ಕಾಲೀನ ಸಾಧ್ಯವ್ಯಾಪ್ಯವತ್ತಾಪರಾಮರ್ಶಃ—ಅದೇ ಕಾಲದಲ್ಲಿ ಉಂಟಾಗುವ ಪರಾಮರ್ಶ—'ವಹ್ನಿವ್ಯಾಪ್ಯಧೂಮವಾನಯಂ ಹ್ರದಃ' ಎಂಬ ಪರಾಮರ್ಶ. ಈ ಪರಾಮರ್ಶವಿಷಯತ್ವ ಧೂಮಹೇತುವಿನಲ್ಲಿ ಬರುವುದರಿಂದ ಹ್ರದಪಕ್ಷದಲ್ಲಿ ವಹ್ನಿ ಸಾಧನೆಗೆ ಪ್ರಯುಕ್ತವಾದ ಧೂಮಹೇತುವು ಸತ್ಪ್ರತಿಪಕ್ಷವಾಗುತ್ತದೆ. ಇದಕ್ಕೆ ಪ್ರಾಚೀನರು ಪ್ರಕರಣಸಮವೆಂದು ಕರೆಯುತ್ತಾರೆ.

**ಸಾಧ್ಯಶೂನ್ಯೋ ಯತ್ರ ಪಕ್ಷಸ್ತ್ವಸೌ ಬಾಧ ಉದಾಹೃತಃ |**
**ಉತ್ಪತ್ತಿಕಾಲೀನಘಟೇ ಗಂಧಾದಿರ್ಯತ್ರ ಸಾಧ್ಯತೇ || ೭೮ ||**

ಸಾಧ್ಯಶೂನ್ಯ ಇತಿ | ಪಕ್ಷಃ ಪಕ್ಷತಾವಚ್ಛೇದಕವಿಶಿಷ್ಟ ಇತ್ಯರ್ಥಃ | ತೇನ ಘಟೇ ಗಂಧ

ಸತ್ವೇಽಪಿ ನ ಕ್ಷತಿಃ । ಏವಂ ಮೂಲಾವಚ್ಛಿನ್ನೋ ವೃಕ್ಷಃ ಕಪಿಸಂಯೋಗೀತ್ಯತ್ರಾಪಿ ಬೋಧ್ಯಮ್ ॥ ೭೮ ॥

ಇತಿ ವಿಶ್ವನಾಥ ನ್ಯಾಯ ಪಂಚಾನನ ಭಟ್ಟಾಚಾರ್ಯವಿರಚಿತಾಯಾಂ
ಸಿದ್ಧಾಂತಮುಕ್ತಾವಲ್ಯಾಮನುಮಾನಖಂಡಮ್ ॥

ಬಾಧಲಕ್ಷಣವನ್ನು ತೋರಿಸುತ್ತಾನೆ. 'ಸಾಧ್ಯಶೂನ್ಯ—' ಇತಿ. ಸಾಧ್ಯವಿಲ್ಲದಿರುವ ಪಕ್ಷವೇ ಬಾಧವಾಗುತ್ತದೆ. ಈ ದೋಷದಿಂದ ಕೂಡಿದ ಹೇತುವು ಬಾಧಿತವಾಗುತ್ತದೆ. ಪಕ್ಷಪದದಿಂದ ಪಕ್ಷತಾವಚ್ಛೇದಕದೇಶಕಾಲಾದಿವಿಶಿಷ್ಟವಾದ ಪಕ್ಷವನ್ನೇ ತೆಗೆದುಕೊಳ್ಳಬೇಕು. ಇದರಿಂದ ಘಟೋತ್ಪತ್ತಿಕಾಲದ ಉತ್ತರಕಾಲದಲ್ಲಿ ಘಟದಲ್ಲಿ ಗಂಧವಿದ್ದರೂ ಬಾಧಲಕ್ಷಣಕ್ಕೆ ಚ್ಯುತಿಯಿಲ್ಲ. ಇದು ಹಿಂದೆ ವಿವೃತವಾಗಿದೆ. (ಪು–) 'ಮೂಲಾವಚ್ಛಿನ್ನಃ ವೃಕ್ಷಃ—ಕಪಿಸಂಯೋಗೀ–ಏತದ್ವೃಕ್ಷತ್ವಾತ್.' ಪೂರ್ವೋಕ್ತ ಘಟದಲ್ಲಿ ಕಾಲ ಅವಚ್ಛೇದಕವಾದಂತೆ ಇಲ್ಲಿ ದೇಶವು ಅವಚ್ಛೇದಕವಾಗುವುದರಿಂದ ಮೂಲದೇಶಾವಚ್ಛೇದದಿಂದ ಕಪಿಸಂಯೋಗಾಭಾವವು ಪ್ರತ್ಯಕ್ಷಪ್ರಮಾಣಸಿದ್ಧವಾಗುವುದರಿಂದ ಬಾಧವಾಗುತ್ತದೆ. ಮೂಲಾವಚ್ಛಿನ್ನವೃಕ್ಷವೇ ಇಲ್ಲಿ ಪಕ್ಷವಾಗಿದೆ. ಆದುದರಿಂದ ಇಲ್ಲಿ ಏತದ್ವೃಕ್ಷತ್ವರೂಪಹೇತುವು ಬಾಧಿತವಾಗುತ್ತದೆ. ಈ ಬಾಧಿತಕ್ಕೆ ಕಾಲಾತ್ಯಯಾಪದಿಷ್ಟ'ವೆಂದೂ ಹೆಸರಿದೆ. ಕೆಲವರು ಬಾಧಿತಸಾಧ್ಯಕವೆಂದು ಕರೆಯುತ್ತಾರೆ. ಲಕ್ಷಣದಿಂದ ಇತರ ಭೇದಸಾಧನೆಮಾಡುವ ಅನುಮಾನದಲ್ಲಿ ಅತಿವ್ಯಾಪ್ತಲಕ್ಷಣವು ವ್ಯಾಪ್ಯತ್ವಾಸಿದ್ಧದಲ್ಲಿಯೂ, ಅವ್ಯಾಪ್ತಲಕ್ಷಣವು ಭಾಗಾಸಿದ್ಧವೂ, ಅಸಂಭವಗ್ರಸ್ತಲಕ್ಷಣವು ಸ್ವರೂಪಾಸಿದ್ಧವೂ ಆಗುತ್ತದೆ. ಹೀಗೆ ಮುಕ್ತಾವಳಿಯಲ್ಲಿ ಅನುಮಾನಖಂಡದ ಕನ್ನಡ ವ್ಯಾಖ್ಯಾನವು ಮುಗಿದಿದೆ.

ಇಲ್ಲಿ ಮುಖ್ಯವಾಗಿ ತಿಳಿಯಬೇಕಾದವಿಷಯ. ಪಕ್ಷಸತ್ವ, ಸಪಕ್ಷಸತ್ವ ವಿಪಕ್ಷವ್ಯಾವೃತ್ತತ್ವ, ಅಬಾಧಿತವಿಷಯತ್ವ, ಅಸತ್ ಪ್ರತಿಪಕ್ಷಿತತ್ವ, ಈ ಐದರಿಂದ–ಕೂಡಿರುವ ಹೇತುವೇ ಸದ್ಧೇತುವಾಗುತ್ತದೆ. ಸಾಧ್ಯ (ರೂಪಧರ್ಮ) ದಿಂದ ಕೂಡಿದ ಧರ್ಮಿಯೇ ಪಕ್ಷ. ಧೂಮಹೇತುಕವಹ್ನ್ಯನುಮಾನದಲ್ಲಿ ಪರ್ವತವು ಪಕ್ಷ. ಅಲ್ಲಿ ವ್ಯಾಪ್ಯವಾದ ಹೇತುವಿನವೃತ್ತಿತ್ವವೇ ಪಕ್ಷಧರ್ಮತ್ವವಾಗುತ್ತದೆ. (ಹೇತು ಅಲ್ಲಿರುವುದೇ ಪಕ್ಷಸತ್ವ.) ಸಾಧ್ಯಸಜಾತೀಯಧರ್ಮವುಳ್ಳದ್ದು, ನಿಶ್ಚಿತ ಸಾಧ್ಯವುಳ್ಳದ್ದು ಸಪಕ್ಷ. ಪ್ರಕೃತ ಮಹಾನಸ (ಅಡಿಗೆಮನೆ.)ವು ಸಪಕ್ಷ. ಅಲ್ಲಿ ಏಕದೇಶದಲ್ಲಿಯಾಗಲೀ, ಸರ್ವತ್ರವಾಗಲೀ ಹೇತುವಿದ್ದರೆ ಸಪಕ್ಷಸತ್ವ ಬಂದಂತಾಗುತ್ತದೆ. ಸಾಧ್ಯವಿರುದ್ಧ ಧರ್ಮಉಳ್ಳದ್ದು ವಿಪಕ್ಷವಾಗುತ್ತದೆ. ಪೂರ್ವೋಕ್ತಾನುಮಾನದಲ್ಲಿ ಹ್ರದ (ಕೆರೆ) ವಿಪಕ್ಷ. ಅಲ್ಲಿ ಹೇತುವಿಲ್ಲದಿರುವುದೇ ವಿಪಕ್ಷವ್ಯಾವೃತ್ತತ್ವ. ಹ್ರದಾದಿಗಳಲ್ಲಿ ಧೂಮ ಎಂದೂ ಇರುವುದಿಲ್ಲ. ಅಬಾಧಿತವಿಷಯತ್ವವೆಂದರೆ 'ಸಾಧ್ಯಾಭಾವನಿಶ್ಚಾಯಕಪ್ರಬಲಪ್ರಮಾಣಾವಿಷಯೀಕೃತತ್ವಮ್.' ಸಾಧ್ಯಾಭಾವವನ್ನು ನಿಶ್ಚಯಿಸುವ ಒಂದು ಪ್ರಬಲಪ್ರಮಾಣಕ್ಕೆ ವಿಷಯ

ವಾಗದಿರುವುದು. ಪ್ರಕೃತ ಧೂಮವತ್ತ್ವಹೇತುವಿಗೆ ವಿಷಯವಾದ ವಹ್ನಿರೂಪ ಸಾಧ್ಯಕ್ಕೆ ಪ್ರತ್ಯಕ್ಷಾದಿಪ್ರಮಾಣಗಳಿಂದ ಎಂದೂ ಬಾಧವಿಲ್ಲ. ಸಾಧ್ಯಾಭಾವನಿಶ್ಚಾಯಕ ಸಮಬಲಪ್ರಮಾಣಶೂನ್ಯತ್ವಂ—ಅಸತ್ಪ್ರತಿಪಕ್ಷಿತತ್ವಮ್. ಪ್ರಸಿದ್ಧ ಪ್ರತ್ಯಕ್ಷವಹ್ನ್ಯನುಮಾನದಲ್ಲಿ ವಹ್ನ್ಯಭಾವಸಾಧಕವಾದ ಸಮಬಲಪ್ರಮಾಣ ಯಾವುದೂ ಇಲ್ಲ. ಧೂಮವು ವಹ್ನಿಸಾಧಕವಾಗಬೇಕಾದರೆ ಈ ಐದುಧರ್ಮಗಳಿಂದ ಕೂಡಿರಬೇಕು. ಈ ಐದರಲ್ಲಿ ಯಾವುದಾದರೊಂದು ನ್ಯೂನವಾದರೆ ಆಗ ಐದು ಹೇತ್ವಾಭಾಸಗಳಾಗುತ್ತವೆ. ೧) 'ಶಬ್ದಃ–ಅನಿತ್ಯಃ–ಚಾಕ್ಷುಷತ್ವಾತ್' ಇಲ್ಲಿ ಚಾಕ್ಷುಷತ್ವಹೇತುವಿಗೆ ಪಕ್ಷಸತ್ವವಿಲ್ಲ. ಶಬ್ದವು ಶ್ರಾವಣವಾದುದರಿಂದ ಚಕ್ಷುರ್ಗೋಚರವಾಗುವುದಿಲ್ಲ. ಆದುದರಿಂದ ಅಸಿದ್ಧವಾದ ಹೇತ್ವಾಭಾಸವಾಗುತ್ತದೆ. ೨) ಶಬ್ದಃ-ನಿತ್ಯಃ-ಕೃತಕತ್ವಾತ್ । ಆಕಾಶವತ್ । ಇಲ್ಲಿ ನಿಶ್ಚಿತಸಾಧ್ಯವುಳ್ಳ (ನಿತ್ಯತ್ವವುಳ್ಳ) ಆಕಾಶಸಪಕ್ಷವಾಗುತ್ತದೆ. ಅದರಲ್ಲಿ ಕೃತಕತ್ವ ಹೇತುವಿಲ್ಲ. ಆದುದರಿಂದ ಹೇತುವಿಗೆ ಸಪಕ್ಷಸತ್ವ ಬರಲಿಲ್ಲ. ಸಾಧ್ಯವಾದ ನಿತ್ಯತ್ವದ ಅಭಾವದಿಂದ ವ್ಯಾಪ್ತವಾದುದರಿಂದ ವಿರುದ್ಧಹೇತ್ವಾಭಾಸವಾಗುತ್ತದೆ. ೩) ಶಬ್ದಃ–ಅನಿತ್ಯಃ–ಪ್ರಮೇಯತ್ವಾತ್ । ಘಟಾದಿವತ್ । ಪ್ರಮೇಯತ್ವಹೇತುವಿಗೆ ವಿಪಕ್ಷವಾದ ಗಗನಾದಿಗಳಲ್ಲಿ ವ್ಯಾವೃತ್ತಿ ಇಲ್ಲ. ಅಂದರೆ ಇಲ್ಲದಿರುವಿಕೆ ಇಲ್ಲ. ಪ್ರಮೇಯತ್ವವು ಕೇವಲಾನ್ವಯಿಯಾದುದರಿಂದ ಅದು ಇಲ್ಲದ ಸ್ಥಳವಿಲ್ಲ. ಗಗನಾದಿಗಳಲ್ಲಿ ಇರುವುದರಿಂದ ಸಾಧ್ಯಾಭಾವಾವದ್ವೃತ್ತಿಯಾದುದರಿಂದ ವಿಪಕ್ಷವ್ಯಾವೃತ್ತಿ ಇಲ್ಲದಿರುವುದರಿಂದ ವ್ಯಭಿಚಾರಿಯಾಗುತ್ತದೆ. ೪) ವಹ್ನಿಃ–ಅನುಷ್ಣಃ–ಪದಾರ್ಥತ್ವಾತ್ । ಇಲ್ಲಿ ಪದಾರ್ಥತ್ವಹೇತುವಿನಲ್ಲಿ ಅಬಾಧಿತ್ವವಿಷಯವಿಲ್ಲ. ವಹ್ನಿಯಲ್ಲಿ ಉಷ್ಣತ್ವಗ್ರಾಹಕಪ್ರತ್ಯಕ್ಷಪ್ರಮಾಣವಿರುವುದರಿಂದ ಬಾಧಿತಸಾಧ್ಯಸಾಧಕವಾಗುತ್ತದೆ. ಆದುದರಿಂದ ಬಾಧಿತ ಹೇತ್ವಾಭಾಸವಾಗುತ್ತದೆ. ಸತ್ಪ್ರತಿಪಕ್ಷಕ್ಕೆ ಹಿಂದೆ ಉದಾಹರಣೆ ತೋರಿಸಿದೆ. (ಹ್ರದಃ–ವಹ್ನಿಮಾನ್–ಧೂಮಾತ್ ॥ ಹ್ರದಃ-ವಹ್ನ್ಯಬಾವವಾನ್–ಜಲಾತ್. ಇಲ್ಲಿ ಜಲದಿಂದ ಸತ್ಪ್ರತಿಪಕ್ಷಿತವಾದುದರಿಂದ ಧೂಮವು ಸತ್ಪ್ರತಿಪಕ್ಷಿತವಾಗುತ್ತದೆ.) ಹೀಗೆ ಐದರಲ್ಲಿ ಒಂದು ಇಲ್ಲವಾದರೂ ಆ ಹೇತು ಹೇತ್ವಾಭಾಸವಾಗುತ್ತದೆ. ಐದರಿಂದಲೂ ಕೂಡಿದರೆ ಸದ್ಧೇತುವಾಗುತ್ತದೆ.

ವಿಷ್ಣುಮೂರ್ತಿಕೃತಮುಕ್ತಾವಳೀ ಕನ್ನಡ ವ್ಯಾಖ್ಯಾನದಲ್ಲಿ
ಅನುಮಾನಖಂಡ ಮುಗಿದಿದೆ.

ಶಿವಾರ್ಪಣಮಸ್ತು.

————

# ಅಥೋಪಮಾನಖಂಡಮ್

**ಗ್ರಾಮೀಣಸ್ಯ ಪ್ರಥಮತಃ ಪಶ್ಯತೋ ಗವಯಾದಿಕಮ್ ।**
**ಸಾದೃಶ್ಯಧೀರ್ಗವಾದೀನಾಂ ಯಾ ಸ್ಯಾತ್ಸಾ ಕರಣಂ ಮತಮ್ ॥ ೭೯ ॥**
**ವಾಕ್ಯಾರ್ಥಸ್ಯಾತಿದೇಶಸ್ಯ ಸ್ಮೃತಿರ್ವ್ಯಾಪಾರ ಉಚ್ಯತೇ ॥**
**ಗವಯಾದಿಪದಾನಾಂ ತು ಶಕ್ತಿಧೀರುಪಮಾ ಫಲಮ್ ॥ ೮೦ ॥**

ಉಪಮಿತಿಂ ವ್ಯುತ್ಪಾದಯತಿ । ಗ್ರಾಮೀಣಸ್ಯೇತಿ ॥

ಅವಸರ ಸಂಗತಿಯಿಂದ ಉಪಮಿತಿಯನ್ನು ತೋರಿಸುತ್ತಾನೆ. ಪ್ರತ್ಯಕ್ಷಾನುಮಾನ ಗಳಿಗೆ ಕಾರ್ಯಕಾರಣಭಾವವಿರುವುದರಿಂದ ಪ್ರತ್ಯಕ್ಷವನ್ನು ನಿರೂಪಿಸಿದ ಮೇಲೆ ಅನುಮಾನ ಜಿಜ್ಞಾಸೆ ಬರುವುದರಿಂದ ಉಪಮಿತಿ ನಿರೂಪಣದಲ್ಲಿ ಅದು ಪ್ರತಿಬಂಧಕವಾಗುತ್ತದೆ. ಅನುಮಿತಿ ನಿರೂಪಣೆ ಮಾಡಿದರೆ ಆಗ ಜಿಜ್ಞಾಸೆ ಶಾಂತವಾದುದರಿಂದ ಉಪಮಿತಿಪ್ರತಿ ಬಂಧಕೀಭೂತಶಿಷ್ಯಜಿಜ್ಞಾಸೆಯು ನಿವೃತ್ತಿಯಾದುದರಿಂದ ಅನಂತರ ವಕ್ತವ್ಯತ್ವ ಇದಕ್ಕೆ ಬರುವುದರಿಂದ ಅವಸರ ಸಂಗತಿ ಸಂಗತವಾಗುತ್ತದೆ. ಗ್ರಾಮೀಣಸ್ಯ—ಹಳ್ಳಿಯವನಿಗೆ, ಪ್ರಥಮತಃ ಮೊದಲು ಗವಯಾದಿಕಂ—ಅರಣ್ಯದಲ್ಲಿರುವ ಗೋಸದೃಶ್ಯವಾದ ಒಂದು ಪಶುವಿಶೇಷವನ್ನು ಪಶ್ಯತಃ—ನೋಡುತ್ತಿರುವಾಗ ಯಾವ, ಗವಾದೀನಾಂ—ಗೋ ಮುಂತಾದ ಗ್ರಾಮ್ಯಪಶುವಿಶೇಷದ, ಸಾದೃಶ್ಯಧೀಃ — 'ಮುಂದಿರುವ ಅರಣ್ಯದ ಪಿಂಡವು ಗೋಸದೃಶವಾಗಿದೆ' (ಗೋ ಪ್ರತಿಯೋಗಿಕ ಸಾದೃಶ್ಯ ನಿರೂಪಿತ ಪ್ರಕಾರತಾವಾನ್) ಎಂಬ ಗವಯಾದಿ ವಿಶೇಷ್ಯಕ ಗೋಸಾದೃಶ್ಯಪ್ರಕಾರಕಪ್ರತ್ಯಕ್ಷಾತ್ಮಕಜ್ಞಾನವಿದೆಯೋ ಇದೇ ಜ್ಞಾನವು ಉಪಮಿತಿರೂಪಪ್ರಮೆಗೆ ಕರಣವಾಗುತ್ತದೆ. ಛೇದನಕ್ರಿಯೆಯಲ್ಲಿ ಕೊಡಲಿಕರಣವಾದಂತೆ ಉಪಮಿತಿಗೆ ಕರಣವಾಗುತ್ತದೆ. ಕರಣವೆಂದರೆ ಅದು ವ್ಯಾಪಾರ ವಿಶಿಷ್ಟವಾಗಿರುತ್ತದೆ. ಆದುದರಿಂದ ವ್ಯಾಪಾರ ತೋರಿಸುತ್ತಾನೆ. 'ವಾಕ್ಯಾರ್ಥಸ್ಯ—' ಇತಿ. 'ಗೋಸದೃಶಃ ಗವಯಪದವಾಚ್ಯಃ' ಎಂಬ ಅತಿದೇಶರೂಪವಾಕ್ಯಾರ್ಥದ (ಆ ಪ್ತೋಕ್ತಪದ ಸಂಬಂಧರೂಪವಾಕ್ಯಾರ್ಥಸ್ಮೃತಿಃ) —ಸ್ಮರಣಾತ್ಮಕಜ್ಞಾನವು ವ್ಯಾಪಾರ ವಾಗುತ್ತದೆ. ಸಾದೃಶ್ಯಜ್ಞಾನದಿಂದ ಹುಟ್ಟಿ, ಸಾದೃಶ್ಯಜ್ಞಾನದಿಂದ ಹುಟ್ಟುವ ಉಪ ಮಿತಿಗೆ ಕಾರಣವಾಗುವುದರಿಂದ ವ್ಯಾಪಾರಲಕ್ಷಣಸಂಗತವಾಗುತ್ತದೆ. ಕರಣಕ್ಕೆ ಫಲ ತೋರಿಸುತ್ತಾನೆ. 'ಗವಯಾದಿ—ಇತಿ' ಗವಯಮುಂತಾದ ಶಬ್ದಗಳ ಶಕ್ತಿಧೀಃ— 'ಗವಯಾದಿಃ ಅರ್ಥಃ ಗವಯಾದಿಪದವಾಚ್ಯಃ' ಎಂಬ ಸಂಕೇತಜ್ಞಾನರೂಪವಾದ ಉಪಮಾ—ಉಪಮಿತಿಯೇ ಫಲಮ್— ಸಾದೃಶ್ಯಜ್ಞಾನರೂಪವಾದ ಉಪಮಾನಾತ್ಮಕ ಕರಣದಿಂದ ಉಂಟಾದ ಪ್ರಮಾರೂಪಜ್ಞಾನವೇ ಪ್ರಯೋಜನವೆಂದರ್ಥ.

ಯತ್ರಾರಣ್ಯಕೇನ ಕೇನಚಿದ್ ಗ್ರಾಮೀಣಂ ಪ್ರತ್ಯುಕ್ತಂ ಗೋಸದೃಶೋಗವಯಪದವಾಚ್ಯ ಇತಿ । ಪಶ್ಚಾತ್ ಗ್ರಾಮೀಣೇನ ಕ್ವಚಿದರಣ್ಯಾದೌ ಗವಯೋ ದೃಷ್ಟಸ್ತತ್ರ ಗೋಸಾದೃಶ್ಯಜ್ಞಾನಂ ಯಜ್ಜಾತಂ ತದುಪಮಿತಿಕರಣಮ್ । ತದನಂತರಂ ಗೋಸದೃಶೋ ಗವಯಪದವಾಚ್ಯಃ ಇತ್ಯತಿದೇಶವಾಕ್ಯಾರ್ಥಸ್ಮರಣಂ ಯಜ್ಜಾಯತೇ ತದೇವ ವ್ಯಾಪಾರಃ । ತದನಂತರಂ ತತ್ರ 'ಗವಯೋಗವಯಪದವಾಚ್ಯ' ಇತಿ ಜ್ಞಾನಂ ಯಜ್ಜಾಯತೇ ತದುಪಮಿತಿಃ । ನ ತ್ವಯಂಗವಯಪದವಾಚ್ಯ ಇತ್ಯುಪಮಿತಿಃ । ಗವಯಾಂತರೇ ಶಕ್ತಿಗ್ರಹಾಸಂಭವಾತ್ !! ೭೯ || ೮೦ ||

ಇತಿ ವಿಶ್ವನಾಥನ್ಯಾಯಪಂಚಾನನ ಭಟ್ಟಾಚಾರ್ಯವಿರಚಿತಾಯಾಂ ಸಿದ್ಧಾಂತ ಮುಕ್ತಾವಳ್ಯಾಂ ಉಪಮಾನಖಂಡಮ್ ||

ಕಾರಿಕಾರ್ಥವನ್ನು ಮುಕ್ತಾವಳಿಯಲ್ಲಿ ವಿವರಿಸುತ್ತಾನೆ. 'ಯತ್ರ—' ಇತಿ. ಪಂಕ್ತ್ಯರ್ಥ ಸುಲಭವಾಗಿದೆ. ಕಾಡಿನಲ್ಲಿ ಯಾವಾಗಲೂ ವಾಸಿಸುವ ಬೇಡರು ಮುಂತಾದವರು ಆರಣ್ಯಕರು. ಗವಯವೆಂಬ ಅರಣ್ಯಪಶು ಅವನಿಗೆ ಚನ್ನಾಗಿ ತಿಳಿದಿರುತ್ತದೆ. ಅವನು ಹಳ್ಳಿಯವನಿಗೆ 'ಗೋಸದೃಶೋ ಗವಯಪದವಾಚ್ಯಃ' ಎಂದು ಹೇಳಿರುತ್ತಾನೆ. ಗವಯವೆಂಬ ಪ್ರಾಣಿ ಯಾವುದು ಎಂದು ಹಳ್ಳಿಯವನು ಕೇಳಿದಾಗ ಬೇಡನು ಹೇಳಿದ ಮಾತು. ಗವಯ ಎಂಬ ಪದದಿಂದ ವಾಚ್ಯವಾದ ಪ್ರಾಣಿ ವಿಶೇಷವು ಗೋವಿನಂತೆಯೇ ಇರುತ್ತದೆಯೆಂದು ಆ ವಾಕ್ಯಾರ್ಥ. ಒಂದಾನೊಂದು ಸಮಯ ಅವನು ಕಾಡಿಗೆ ಹೋದಾಗ ಆ ಗವಯವೆಂಬ ಪ್ರಾಣಿಯನ್ನು ನೋಡುತ್ತಾನೆ.

ಆಗ ಯಾವ ಗೋಸಾದೃಶ್ಯಜ್ಞಾನವುಂಟಾಗುವುದೋ ಅದೇ ಉಪಮಿತಿಗೆ ಕರಣವಾಗುತ್ತದೆ. ಆಮೇಲೆ ಬೇಡನು ಹಿಂದೆ ಹೇಳಿದ 'ಗೋಸದೃಶಃ ಗವಯಪದವಾಚ್ಯಃ' ಎಂಬ ಅತಿದೇಶವಾಕ್ಯಾರ್ಥದ ಸ್ಮರಣೆ ಬರುತ್ತದೆ ಒಂದು ಕಡೆ ನೋಡಿದ್ದಕ್ಕೆ ಅಥವಾ ಕೇಳಿದ್ದಕ್ಕೆ ಇನ್ನೊಂದು ಕಡೆ ಸಂಬಂಧವೇ ಅತಿದೇಶ. ಬೇಡನಿಂದ ಹಿಂದೆ ಶ್ರುತವಾದ 'ಗೋಸದೃಶೋ ಗವಯಃ' ಎಂಬ ವಾಕ್ಯಾರ್ಥಕ್ಕೆ ಈಗ ಅರಣ್ಯದಲ್ಲಿ ಅದರಂತಿರುವ ವನ್ಯ ಪಶುವಿನಲ್ಲಿ ಸಂಬಂಧ ಹೊಂದಿಸುವುದು ಅತಿದೇಶವಾಗುತ್ತದೆ. ಈಗ ಆ ಅತಿದೇಶವ ಅಂದರೆ ಒಂದುಕಡೆ ಕೇಳಿದ್ದಕ್ಕೆ ಇನ್ನೊಂದು ಕಡೆ ಸಂಬಂಧ ಹೊಂದಿಸಿದ (ಯೋಜಿತ) 'ಗೋಸದೃಶೋ ಗವಯಃ' ಎಂಬ ವಾಕ್ಯಾರ್ಥದ ಸ್ಮರಣೆಯೇ ವ್ಯಾಪಾರ. (ತಜ್ಜನ್ಯತ್ವೇ ಸತಿ ತಜ್ಜನ್ಯಜನಕತ್ವಂ ಎಂಬ ಲಕ್ಷಣ ಹಿಂದೆ ಹೇಳಿದೆ.) ಸಾದೃಶ್ಯಜ್ಞಾನದಿಂದ ತಾನು ಹುಟ್ಟುವ ಉಪಮಿತಿಗೆ ಜನಕವಾಗುವುದರಿಂದ ಈ ಸ್ಮರಣೆಯು ವ್ಯಾಪಾರವಾಗುತ್ತದೆ. ಈ ಸ್ಮೃತಿ ಬಂದ ಮೇಲೆ 'ಗವಯಃ ಗವಯಪದವಾಚ್ಯಃ' ಎಂದು ಉಪಮಿತಿರೂಪಜ್ಞಾನ ಬರುತ್ತದೆ.

ಇಲ್ಲಿ 'ಅಯಂ ಗವಯಪದವಾಚ್ಯಃ' ಎಂದು ಏಕೆ ಜ್ಞಾನ ಬರಬಾರದು ಎಂದು ಶಂಕೆ ಬಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ನತ್ವಯಂ—' ಇತಿ. ಈ

ಎದುರಿಗೆ ತೋರುವ ಪ್ರಾಣಿ ಗವಯಪದದಿಂದ ವಾಚ್ಯವಾಗಿದೆ ಎಂದು ಉಪಮಿತಿಜ್ಞಾನವು ಇದಂತಾವಗಾಹಿಯಾದರೆ ಆಗ ಎದುರಿಗಿರುವ ಒಂದೇ ಗವಯವ್ಯಕ್ತಿಯಲ್ಲಿ ಶಕ್ತಿಜ್ಞಾನ ವಾದಂತೆ ಆಗುತ್ತದೆ, ದೇಶಾಂತರದಲ್ಲಿರುವ, ಕಾಲಾಂತರದಲ್ಲಿರುವ ಗವಯಪ್ರಾಣಿಗಳಲ್ಲಿ ಶಕ್ತಿಗ್ರಹ ಬಾರದೇ ಹೋಗಬೇಕಾಗುತ್ತದೆ. ಆದರೆ ಉಪಮಿತಿಜ್ಞಾನ ಬಂದೊಡನೆ ಸಕಲ ಗವಯ ವ್ಯಕ್ತಿಗಳಲ್ಲಿ ಶಕ್ತಿಗ್ರಹ ಬಂದೇ ಬರುತ್ತದೆ. ಅದಕ್ಕೋಸ್ಕರ 'ಗವಯಃ ಗವಯ ಪದವಾಚ್ಯಃ' ಎಂದೇ ಉಪಮಿತಿಯ ಸ್ವರೂಪವನ್ನು ಹೇಳಬೇಕು. ಗೋಸಾದೃಶ್ಯ ಜ್ಞಾನವೇ ಉಪಮಾನರೂಪ ಪ್ರಮಾಣ. ಇದು ಉಪಮಿತಿಗೆ ಕರಣ. ಅತಿದೇಶ ವಾಕ್ಯಾರ್ಥದ ಸ್ಮೃತಿಯೇ ವ್ಯಾಪಾರ. 'ಗವಯಃ ಗವಯಪದವಾಚ್ಯಃ' ಎಂಬ ಪದ ಪದಾರ್ಥ ಸಂಬಂಧಜ್ಞಾನವೇ ಉಪಮಿತಿಯಾಗುತ್ತದೆ.

ಸಾದೃಶ್ಯವಿಶಿಷ್ಟಪಿಂಡಜ್ಞಾನ, ಅಸಾಧಾರಣಧರ್ಮವಿಶಿಷ್ಟಪಿಂಡಜ್ಞಾನ, ವೈಧರ್ಮ್ಯ ವಿಶಿಷ್ಟಪಿಂಡಜ್ಞಾನ, ಹೀಗೆ ಉಪಮಾನವು ಮೂರುರೀತಿಯಾಗಿರುತ್ತದೆ. ಮೊದಲನೆಯ ಉಪಮಾನವು ಮೂಲದಲ್ಲಿ ಹೇಳಿದೆ. ಎರಡನೆಯದಕ್ಕೆ ಉದಾ ;—ಖಡ್ಗಮೃಗ ಹೇಗಿದೆ ? ಎಂದು ಒಬ್ಬನು ಕೇಳುತ್ತಾನೆ. ಆಗ ಅದನ್ನು ನೋಡಿದವನು 'ಮೂಗಿನಲ್ಲಿ ಕೊಂಬುಳ್ಳದ್ದಾಗಿ ಆನೆಯದೇಹದಂತಿರುವ ಒಂದು ದೊಡ್ಡ ಪ್ರಾಣಿ' ಎಂದು ಬೋಧಿಸು ತ್ತಾನೆ. ಕಾಲಾಂತರದಲ್ಲಿ ಆ ರೀತಿಯ ಪ್ರಾಣಿಯನ್ನು ನೋಡಿ ಹಿಂದೆ ಹೇಳಿದ ಅತಿ ದೇಶವಾಕ್ಯಾರ್ಥವನ್ನು ಸ್ಮರಿಸುತ್ತಾನೆ. ಆಮೇಲೆ 'ಖಡ್ಗಿಮೃಗಃ ಖಡ್ಗಿಪದವಾಚ್ಯಃ' ಎಂದು ಉಪಮಿತಿ ಬರುತ್ತದೆ. ಇಲ್ಲಿ 'ಮೂಗಿನಲ್ಲಿ ಶೋಭಿಸುವ ಒಂದು ಕೊಂಬುಳ್ಳದ್ದು' (ನಾಸಿಕಾಲಸದೇಕಶೃಂಗತ್ವಮ್) ಎಂಬುದು ಅಸಾಧಾರಣಧರ್ಮವಾಗುತ್ತದೆ. ಮೂರ ನೆಯದಕ್ಕೆ ಉದಾ :—ಒಂಟೆ ಹೇಗಿದೆ ? ಎಂದು ತಿಳಿಯದವನು ಕೇಳುತ್ತಾನೆ. ಆಗ ತಿಳಿದವನು—'ಕುದುರೆ ಮುಂತಾದವುಗಳಂತೆ ಸಮಾನವಾದ ಅವಯವಗಳು ಇರದೆ ಹ್ರಸ್ವ ವಾದ ಕತ್ತಿಲ್ಲದೆ, ಹ್ರಸ್ವವಾದ ಶರೀರವೂ ಇಲ್ಲದ ಪ್ರಾಣಿ' ಎಂದು ತಿಳಿಸಿದ ಮೇಲೆ ಎಲ್ಲಿ ಯಾದರೂ ಒಂಟೆಯನ್ನು ನೋಡಿದಾಗ ಹಿಂದಿನ ಅತಿದೇಶ ವಾಕ್ಯವನ್ನು ಸ್ಮರಿಸುತ್ತಾನೆ. ಆಮೇಲೆ 'ಉಷ್ಟ್ರ :—ಉಷ್ಟ್ರಪದವಾಚ್ಯಃ' ಎಂಬ ಉಪಮಿತಿ ಬರುತ್ತದೆ. ಇಲ್ಲಿ ವೈಧರ್ಮ್ಯವಿಶಿಷ್ಟವಾದ ಪಿಂಡದ ಜ್ಞಾನವು ಉಪಮಾನವಾಗುತ್ತದೆ.

ಪ್ರಸಿದ್ಧ ಸಾಧರ್ಮ್ಯಾತ್ ಸಾಧ್ಯಸಾಧನಮುಪಮಾನಮ್' (ನ್ಯಾ-೧-೧-೯) ಎಂಬ ಸೂತ್ರಾನುಸಾರಿಯಾಗಿ ಈ ಉಪಮಾನ ಹೇಳಿದೆ.

ಉಪಮಾನಖಂಡದ ಕನ್ನಡ ವ್ಯಾಖ್ಯಾನ ಮುಗಿದಿದೆ.

---

# ಅಥ ಶಬ್ದಖಂಡಮ್

**ಪದಜ್ಞಾನಂ ತು ಕರಣಂ ದ್ವಾರಂ ತತ್ರ ಪದಾರ್ಥಧೀಃ ||**
**ಶಾಬ್ದಬೋಧಃ ಫಲಂ ತತ್ರ ಶಕ್ತಿಧೀಃ ಸಹಕಾರಿಣೀ || ೮೧ ||**

ಶಾಬ್ದಬೋಧಪ್ರಕಾರಂ ದರ್ಶಯತಿ—ಪದಜ್ಞಾನಂ ತ್ವಿತಿ । ನತು ಜ್ಞಾಯಮಾನಂ ಪದಂ ಕರಣಂ, ಪದಾಭಾವೇಪಿ ಮೌನಿಶ್ಲೋಕಾದೌ ಶಾಬ್ದಬೋಧಾತ್ । ಪದಾರ್ಥ ಧೀರಿತಿ । ಪದಜನ್ಯಪದಾರ್ಥಸ್ಮರಣಂ ವ್ಯಾಪಾರಃ । ಅನ್ಯಥಾ ಪದಜ್ಞಾನವತಃ ಪ್ರತ್ಯಕ್ಷಾದಿನಾ ಪದಾರ್ಥೋಪಸ್ಥಿತಾವಪಿ ಶಾಬ್ದಭೋಧಾಪತ್ತೇಃ । ತತ್ರಾಪಿ ವೃತ್ತ್ಯಾ ಪದಜನ್ಯತ್ವಂ ಬೋಧ್ಯಮ್ । ಅನ್ಯಥಾ ಘಟಾದಿಪದಾತ್ಸಮವಾಯ ಸಂಬಂಧೇನಾಕಾಶಸ್ಮರಣೇ ಜಾತೇ ಆಕಾಶಸ್ಯಾಪಿಶಾಬ್ದಬೋಧಾಪತ್ತೇಃ । ವೃತ್ತಿಶ್ಚ ಶಕ್ತಿಲಕ್ಷಣಾನ್ಯತರಃ ಸಂಬಂಧಃ । ಅತ್ರೈವ ಶಕ್ತಿಜ್ಞಾನಸ್ಯೋಪಯೋಗಃ। ಪೂರ್ವಂ ಶಕ್ತಿಗ್ರಹಾಭಾವೇ ಪದಜ್ಞಾನೇಽಪಿ ಸ್ಮರಣಾನುಪಪತ್ತೇಃ । ಪದ ಜ್ಞಾನಸ್ಯ ಚ ಏಕಸಂಬಂಧಿಜ್ಞಾನವಿಧಯಾರ್ಥಸ್ಮಾರಕತ್ವಮ್ ||

ಉಪಜೀವ್ಯೋಪಜೀವಕಭಾವ ಸಂಗತಿಯಿಂದ ಉಪಮಾನವಾದಮೇಲೆ ಶಾಬ್ದ ಬೋಧ ರೀತಿಯನ್ನು ತೋರಿಸಲು ಉಪಕ್ರಮಿಸಿರುತ್ತಾನೆ. ಶಕ್ತಿಜ್ಞಾನರೂಪವಾದದು ಉಪಮಿತಿಜ್ಞಾನ. ಇದರಿಂದ ಶಾಬ್ದಬೋಧ ಬರುತ್ತದೆ. ಆದುದರಿಂದ ಇದು ಉಪ ಜೀವಕವಾಗುತ್ತದೆ. (ಉಪಜೀವಕ—ಕಾರ್ಯ) ಉಪಮಿತಿಜ್ಞಾನವು ಉಪಜೀವ್ಯ—ಕಾರಣ. ಹೀಗೆ ಕಾರ್ಯಕಾರಣಭಾವವಿರುವುದರಿಂದ ಉಪಮಿತಿ ನಿರೂಪಣವಾದ ಮೇಲೆ ಶಾಬ್ದಬೋಧನಿರೂಪಣ ಸಂಗತವಾಗಿದೆ. 'ಗಾಮಾನಯ' ಎಂಬ ಮಾತನ್ನು ಕೇಳಿದವ ನಿಗೆ ಪದಪದಾರ್ಥಸಂಬಂಧವು ತಿಳಿಯಲ್ಪಟ್ಟು ಆಯಾಯ ಪದ ಶ್ರವಣದಿಂದ ಆಯಾಯ ಅರ್ಥವು ಉಪಸ್ಥಿತವಾಗಿ 'ಗೋಕರ್ಮಕ ಆನಯನಾನುಕೂಲಕೃತಿಮಾನ್' ಎಂದು ವಾಕ್ಯಾರ್ಥಬೋಧವುಂಟಾಗುತ್ತದೆ. ಒಟ್ಟಿನ ಪದಗಳಿಂದ ಬರುವ ವಾಕ್ಯಾರ್ಥಬೋಧವೇ ಶಾಬ್ದಬೋಧ. ಆದರ ಪ್ರಕಾರವೆಂದರೆ ಇಲ್ಲಿ ಸ್ವರೂಪ. ದರ್ಶಯತಿ—ನಿರೂಪಿಸುತ್ತಾನೆ ಎಂದರ್ಥ. ಶಬ್ದಪ್ರಮಾಣದಿಂದ ಉಂಟಾಗುವುದೇ ಶಾಬ್ದಪ್ರಮಾತ್ಮಕಜ್ಞಾನ. ಇದಕ್ಕೆ ಪದಜ್ಞಾನ ಅಂದರೆ ಪದಾನುಭವವೇ ಕರಣವಾಗುತ್ತದೆ. (ವ್ಯಾಪಾರವದ ಸಾಧಾರಣಂ ಕಾರಣಂ) ಪದಾರ್ಥಧೀಃ—ಪದಾರ್ಥಜ್ಞಾನವು ದ್ವಾರಂ—ವ್ಯಾಪಾರವಾಗುತ್ತದೆ. ತತ್ರ—ಪದಜನ್ಯಪದಾರ್ಥೋಪಸ್ಥಿತಿಯಲ್ಲಿ, ಶಕ್ತಿಧೀಃ—ಪದಪದಾರ್ಥಸಂಬಂಧಜ್ಞಾನವು (ಇದನ್ನೇ ಸಂಕೇತವೆಂದು ಮುಂದೆ ಹೇಳುತ್ತಾನೆ.) ಸಹಕಾರಿಣೀ—ಸಹಕಾರಿಕಾರಣ ವಾಗುತ್ತದೆ. ಇದು ಇಲ್ಲದೇ ಹೋದರೆ ಪದಾನುಭವವುಂಟಾದರೂ ಪದಾರ್ಥಸ್ಮರಣ ಬರು

ವುದಿಲ್ಲ. ಕರಣವೆಂದ ಮೇಲೆ ಅದಕ್ಕೆ ನಿಯತವಾದ ಫಲವಿರಬೇಕು. ಆದುದರಿಂದ ಇಲ್ಲಿ ಶಾಬ್ದಬೋಧವೇ ಅಂದರೆ ವಿಶಿಷ್ಟವಾಕ್ಯಾರ್ಥಜ್ಞಾನವೇ ಫಲವಾಗುತ್ತದೆ. (ಇದೇ ಶಾಬ್ದಪ್ರಮಾ ಆಗುತ್ತದೆ.)

'ಏಕಪದಾರ್ಥೇ ಅಪರಪದಾರ್ಥ ಸಂಸರ್ಗ ವಿಷಯಕಜ್ಞಾನಂ' ಶಾಬ್ದಬೋಧಃ, ಒಂದು ಪದಾರ್ಥದಲ್ಲಿ ಇನ್ನೊಂದು ಪದಾರ್ಥಸಂಬಂಧವಿಷಯಕ ಜ್ಞಾನಕ್ಕೆ ಶಾಬ್ದಬೋಧ ವೆಂದು ಹೆಸರು. 'ನೀಲೋ ಘಟಃ' ಎಂಬ ವಾಕ್ಯದಿಂದ ಘಟಪದಾರ್ಥದಲ್ಲಿ ನೀಲದ ಅಭೇದ ಸಂಸರ್ಗವನ್ನು ವಿಷಯೀಕರಿಸುವ 'ನೀಲಾಭಿನ್ನೋಘಟಃ' ಎಂದು ಬರುವ ಜ್ಞಾನವೇ ಶಾಬ್ದಬೋಧವಾಗುತ್ತದೆ. ಈ ಕಾರಿಕಾರ್ಥವನ್ನೇ ಮುಕ್ತಾವಳಿಯಲ್ಲಿ ವಿವರಿಸುತ್ತಾನೆ. 'ಪದಜ್ಞಾನಂ—' ಇತಿ. ಶಾಬ್ದಬೋಧದಲ್ಲಿ ಪದಜ್ಞಾನವು ಕರಣ ವಾಗುವುದಲ್ಲದೆ ಜ್ಞಾಯಮಾನಪದವು ಕರಣವಾಗುವುದಿಲ್ಲ. 'ವರ್ತಮಾನಕಾಲೀನ ಶ್ರಾವಣಜ್ಞಾನವಿಷಯೀಭೂತ ಶಬ್ದಃ' ಅಂದರೆ ಈಗ ಪದವನ್ನು ಕೇಳಿ ಉಂಟಾದ ಯಾವ ಶ್ರಾವಣಜ್ಞಾನವಿದೆಯೋ ಅದರಲ್ಲಿ ವಿಷಯವಾಗಿ ತೋರುವ ಪದವು ಕರಣವಾಗು ವುದಿಲ್ಲವೆಂದರ್ಥ. (ಕೇಳುತ್ತಿರುವ ಶಬ್ದವೆಂದು ತಾತ್ಪರ್ಯ.) ಹಾಗೆ ಒಪ್ಪದಿರಲು ಕಾರಣ ತೋರಿಸುತ್ತಾನೆ. 'ಪದ—' ಇತಿ. ಮೌನಿ, ಮೂಕ, ಹಸ್ತಚೇಷ್ಟಾದಿಗಳಲ್ಲಿ ಪದೋಚ್ಚಾರಣವಿಲ್ಲದಿರುವುದರಿಂದ ಪದಶ್ರವಣವೂ ಇರುವುದಿಲ್ಲ. ಅಂದರೆ ಶಬ್ದಜ್ಞಾನವು ಯಾವಾಗಲೂ ಶ್ರವಣೇಂದ್ರಿಯದಿಂದ ಉಂಟಾಗುತ್ತದೆ. ವರ್ಣಸಮುದಾಯ ರೂಪ ವಾದ ಪದವೂ ಶಬ್ದವಿಶೇಷವಾಗಿರುತ್ತದೆ. ಆಗ ಮೌನವ್ರತವನ್ನು ಧರಿಸಿದವನಾಗಲೀ, ಸ್ವಾಭಾವಿಕಮೂಕತ್ವದಿಂದಾಗಲೀ ಕೆಲವು ಜನರು ವರ್ಣೋಚ್ಚಾರಣೆಯನ್ನು ಮಾಡುವು ದಿಲ್ಲ. ತಮ್ಮ ಅಭಿಪ್ರಾಯವನ್ನು ಬರೆದಾಗಲೀ, ಹಸ್ತಚೇಷ್ಟೆಯಿಂದಾಗಲೀ ಇತರರಿಗೆ ಬೋಧಿಸುತ್ತಾರೆ. ಅಲ್ಲಿ ಪದೋಚ್ಚಾರಣೆ ಇಲ್ಲದಿದ್ದರೂ ಪದಜ್ಞಾನದಿಂದ ಶಾಬ್ದಬೋಧ ಬರುತ್ತದೆ. ಶ್ರೂಯಮಾಣಪದವೇ ಅಂದರೆ ಈಗ ಕೇಳಲ್ಪಡುವ (ಶ್ರವಣೇಂದ್ರಿಯಕ್ಕೆ ಗೋಚರವಾಗುವ) ಪದವೇ ಕರಣವೆಂದರೆ ಅಲ್ಲಿ ಪದ ಶ್ರವಣವಿಲ್ಲದಿರುವುದರಿಂದ ಶಾಬ್ದ ಬೋಧ ಬರದೇ ಹೋಗಬೇಕಾಗುತ್ತದೆ. ಆದರೆ ಅವರ ಚೇಷ್ಟೆಯಿಂದ ಪದಜ್ಞಾನವಾಗಿ ಅದರಿಂದ ಅವರ ಅಭಿಪ್ರಾಯ ತಿಳಿಯುತ್ತದೆ. ಆದುದರಿಂದ ಪದಜ್ಞಾನವೇ ಕರಣವಾಗು ವುದಲ್ಲದೆ ಶ್ರಾವಣವಿಷಯೀಭೂತಪದವು ಕರಣವಲ್ಲ. ಕರಣವಾದ ಮೇಲೆ ಅದರಲ್ಲಿ ವ್ಯಾಪಾರವಿರಬೇಕು. ಪ್ರಕೃತವ್ಯಾಪಾರ ತೋರಿಸುತ್ತಾನೆ. 'ಪದಾರ್ಥಧೀಃ—' ಇತಿ. ಪದಾರ್ಥೋಪಸ್ಥಿತಿ (ಪದಾರ್ಥಸ್ಮರಣ.) ಯೇ ವ್ಯಾಪಾರ. ಪದಜನ್ಯವಾದ ಪದಾರ್ಥದಸ್ಮರಣೆಯೆಂದು ಅಂಗೀಕರಿಸಬೇಕು. ಇದಕ್ಕೆ ಕಾರಣತೋರಿಸುತ್ತಾನೆ. 'ಅನ್ಯಥಾ—' ಇತಿ. ಕೇವಲ ಪದಾರ್ಥ ಜ್ಞಾನವು ವ್ಯಾಪಾರವೆಂದರೆ ಘಟ ಪದದ ಜ್ಞಾನವುಳ್ಳ ಒಬ್ಬ ಪುರುಷನಿಗೆ ಪ್ರತ್ಯಕ್ಷಪ್ರಮಾಣದಿಂದ ಘಟ ಪದಾರ್ಥೋಪಸ್ಥಿತಿ ಯುಂಟಾದಾಗ ಅದೂ ಶಾಬ್ದ ಪ್ರಮಾ ಆಗಬೇಕಾಗುತ್ತದೆ. ಅಂದರೆ ಘಟ ಪ್ರತ್ಯಕ್ಷಾ ತ್ಮಕಜ್ಞಾನವೂ ಶಾಬ್ದಜ್ಞಾನವಾಗ ಬೇಕಾಗುತ್ತದೆ. (ಶಾಬ್ದಬೋಧವಾಗಲಿ ಎಂದು

ಆಪತ್ತಿ.) ಆದರೆ ಪ್ರತ್ಯಕ್ಷಜ್ಞಾನವು ಶಾಬ್ದಬೋಧವೆಂದು ಯಾರೂ ಅಂಗೀಕರಿಸುವುದಿಲ್ಲ. ಆದುದರಿಂದ ಪದಜನ್ಯಪದಾರ್ಥಸ್ಮರಣರೂಪವಾದ ವಿಶಿಷ್ಟವಾದ ಜ್ಞಾನವೇ ಪದಜ್ಞಾನ ರೂಪಕರಣದಲ್ಲಿ ವ್ಯಾಪಾರವೆಂದು ಅಂಗೀಕರಿಸಬೇಕು. ಅದರಲ್ಲಿಯೂ ವಿಶೇಷವನ್ನು ತೋರಿಸುತ್ತಾನೆ. 'ತತ್ರಾಪಿ—' ಇತಿ. ಪದಜನ್ಯ ಪದಾರ್ಥ ಸ್ಮರಣೆಯಲ್ಲಿಯೂ ಪದಜನ್ಯ ಎಂಬ ವಿಶೇಷಣದಿಂದ ವೃತ್ತಿರೂಪ ಸಂಬಂಧದಿಂದ ಪದಜನ್ಯವೆಂದು ತಿಳಿಯ ಬೇಕು. ವೃತ್ತಿಯಿಂದ ಅಂದರೆ ಶಕ್ತಿ, ಲಕ್ಷಣಾ ಅನ್ಯತರಸಂಬಂಧದಿಂದ ಎಂದರ್ಥ. ಪದಾರ್ಥಸ್ಮರಣೆಯು ಪದದಿಂದ ಬಂದಿರಬೇಕು ಎಂದಿದೆ. ಪದವಿಷಯಕಶ್ರಾವಣಜ್ಞಾನ ದಿಂದ ಬಂದಿರಬೇಕು ಎಂದುದರಿಂದ ಪದಾರ್ಥಸ್ಮರಣೆಯು ಜನ್ಯವೂ ಪದಜ್ಞಾನವು ಜನಕವೂ ಆಗಿರುತ್ತದೆ. ಇವುಗಳಿಗೆ ಜನ್ಯಜನಕಭಾವವಿರಬೇಕಾದರೆ ಇವುಗಳಿಗೆ ಒಂದು ನಿಯತಸಂಬಂಧವಿರಬೇಕು. ಪ್ರಕೃತ ಶಕ್ತಿ ಅಥವಾ ಲಕ್ಷಣರೂಪ ಸಂಬಂಧದಿಂದ ಪದಾರ್ಥಸ್ಮರಣೆಗೆ ಜನ್ಯತೆಯೂ, ಪದಕ್ಕೆ ಪದಾರ್ಥಸ್ಮರಣೆಯನ್ನು ಕುರಿತು ಜನಕತ್ವವೂ ಇರಬೇಕೆಂದರ್ಥ. ಯಾವುದಾದರೂ ಸಂಬಂಧದಿಂದ ಜನ್ಯಜನಕಭಾವ ಹೇಳಿದರೆ ಆಗ 'ಘಟಮಾನಯ' ಎಂಬ ವಾಕ್ಯಶ್ರವಣವಾಗಿ ಘಟಾದಿ ಪದಗಳಿಂದ ಸಮವಾಯಸಂಬಂಧ ದಿಂದ ಆಕಾಶಕ್ಕೂ ಶಾಬ್ದಬೋಧದಲ್ಲಿ ಪ್ರವೇಶ (ಭಾನ) ವುಂಟಾಗಬೇಕಾಗುತ್ತದೆ. ಶಬ್ದವು ಗುಣವಾದುದರಿಂದ ಶಬ್ದ ಗುಣವಾಗಿರುವುದೇ ಆಕಾಶವಾಗಿರುವುದರಿಂದ ಗುಣ ಗುಣಿಗೆ ಸಮವಾಯಸಂಬಂಧವು ನಿಯತವಾಗಿರುತ್ತದೆ. ಶಬ್ದರೂಪವಾದ ಘಟಾದಿಪದ ಗಳ ಸಮವಾಯವು ಆಕಾಶದಲ್ಲಿರುತ್ತದೆ. ವೃತ್ತಿರೂಪಸಂಬಂಧದಿಂದ ಎಂದು ಹೇಳದಿದ್ದರೆ ಆಗ ಸಮವಾಯಸಂಬಂಧದಿಂದ ಆಕಾಶವೂ ಉಪಸ್ಥಿತವಾಗಿ ಅದಕ್ಕೂ ಶಾಬ್ದಬೋಧ ದಲ್ಲಿ ಭಾನವುಂಟಾಗಬೇಕಾಗುತ್ತದೆ. ವೃತ್ತಿರೂಪಸಂಬಂಧದಿಂದ ಪದಜನ್ಯವಾದ ಪದಾರ್ಥಸ್ಮರಣೆಯೆಂದುದರಿಂದ ಈ ದೋಷಕ್ಕೆ ಅವಕಾಶವಿಲ್ಲ.

ವೃತ್ತಿಯಿಂದ ಎಂದುದರಿಂದ ವೃತ್ತಿಯೆಂದರೇನೆಂಬ ಜಿಜ್ಞಾಸೆ ಬರುವುದರಿಂದ ವೃತ್ತಿಸ್ವರೂಪ ತೋರಿಸುತ್ತಾನೆ. 'ವೃತ್ತಿಶ್ಚ—' ಇತಿ. ಶಕ್ತಿಲಕ್ಷಣಾನ್ಯತರಸಂ ಬಂಧವೇ ವೃತ್ತಿ. ಈಶ್ವರೇಚ್ಛಾರೂಪ ಸಂಕೇತಕ್ಕೆ ಶಕ್ತಿಯೆಂದು ಕರೆಯುತ್ತಾರೆ. ಶಕ್ತಿ ಲಕ್ಷಣಾಸ್ವರೂಪವನ್ನು ಮುಂದೆ ವಿವರಿಸುತ್ತಾನೆ. ತೀರವು ಗಂಗಾಪದಾರ್ಥವ ವೆಂಬ ಜ್ಞಾನವಿದ್ದರೂ 'ಗಂಗಾಯಾಂ ಘೋಷಃ' ಎಂಬ ವಾಕ್ಯದಿಂದ ಶಾಬ್ದಬೋಧ ಬರುವುದರಿಂದ ಲಕ್ಷಣಾವೃತ್ತಿಯನ್ನೂ ಸೇರಿಸಿ ಅನ್ಯತರಸಂಬಂಧವೆಂದು ಹೇಳಿದೆ. ಅರ್ಥ ಸ್ಮರಣೆಗೆ ಅನುಕೂಲವಾದ ಪದಪದಾರ್ಥಗಳ ಪರಸ್ಪರಸಂಬಂಧಕ್ಕೇ ವೃತ್ತಿಯೆಂದು ಕರೆಯುತ್ತಾರೆ. (ಅರ್ಥಸ್ಮೃತ್ಯನುಕೂಲಪದಪದಾರ್ಥಪರಸ್ಪರಸಂಬಂಧಃ) ಈ ವೃತ್ತಿಯು ಶಕ್ತಿ, ಲಕ್ಷಣಾ ಎಂದು ಎರಡು ರೀತಿಯಾಗಿರುತ್ತದೆ. ಶಬ್ದ ಕೇಳಿದ ಮೇಲೆ ಶಾಬ್ದಬೋಧ ಬರುವುದು. ಶ್ರುತವಾದ ಎಲ್ಲಾ ಶಬ್ದಗಳಿಂದ ಶಾಬ್ದಬೋಧವೂ ನಿಯತವಲ್ಲ. ಇದಕ್ಕೆ ಕಾರಣ ವೃತ್ತಿಪ್ರಯೋಜ್ಯತ್ವವಿಲ್ಲದಿರುವುದು. ವೃತ್ತಿ ಪ್ರಯೋಜ್ಯವಾದ ಪದಾರ್ಥೋಪಸ್ಥಿತಿಯಿದ್ದರೆ ಆಗ ಮಾತ್ರ ಶಾಬ್ದಬೋಧ ಬರುತ್ತದೆ.

ಪದದಲ್ಲಿ ಈ ವೃತ್ತಿ ಇರುತ್ತದೆ. ಅರ್ಥನಿರೂಪಿತವಾಗಿ ಪದದಲ್ಲಿರುವ ಈ ವೃತ್ತಿಯು ಶಕ್ತಿ ಅಥವಾ ಲಕ್ಷಣಾರೂಪದಿಂದ ಎರಡು ರೀತಿಯಾಗಿರುತ್ತದೆ. ಘಟಾದ್ಯರ್ಥ ನಿರೂಪಿತವಾಗಿ ಘಟಾದಿಪದದಲ್ಲಿರುವ ವೃತ್ತಿಗೆ ಸಂಕೇತವೆಂದು ಹೆಸರು. ತೀರಾದ್ಯರ್ಥ ನಿರೂಪಿತವಾಗಿ ಗಂಗಾದಿಪದದಲ್ಲಿರುವ ವೃತ್ತಿಗೆ ಲಕ್ಷಣಾ ಎಂದು ಹೆಸರು. ಈಗ 'ಶಾಬ್ದ ಬೋಧಕ್ಕೆ ಅನುಕೂಲವಾಗಿ (ಜನಕ) ಯಾವ ಪದಾರ್ಥೋಪಸ್ಥಿತಿ ಇದೆಯೋ ಅದಕ್ಕೆ ಅನುಕೂಲವಾದ (ಜನಕ) ಅಥವಾ ಪ್ರಯೋಜಕ.) ಪದಪದಾರ್ಥಗಳಿಗಿರುವ ಸಂಬಂಧ ಯಾವುದಿದೆಯೋ ಅದೇ ಶಕ್ತಿ ಅಥವಾಲಕ್ಷಣಾರೂಪದಿಂದ ಇರುವ ವೃತ್ತಿ' ಎಂದು ಸ್ಪಷ್ಟ ವಾಗಿ ತಿಳಿಯಬೇಕು. ವೃತ್ತಿಯಿಂದ ಪದಪ್ರತಿಪಾದ್ಯವಾದುದೇ ಪದಾರ್ಥ. (ವೃತ್ತಿ ಪ್ರಯೋಜ್ಯಪದಜನ್ಯಪ್ರತೀತಿವಿಷಯಃ' ಪದಾರ್ಥಃ । ಪ್ರತೀತಿಯೆಂದರೆ ಶಾಬ್ದಬೋಧ.)

ತತ್ರೈವ—ಪದಜನ್ಯಪದಾರ್ಥೋಪಸ್ಥಿತಿಯಲ್ಲಿ ಎಂದರ್ಥ. ಶಕ್ತಿಜ್ಞಾನಸ್ಯ— ಸಂಕೇತಜ್ಞಾನಕ್ಕೆ. ಉಪಯೋಗಃ—ಆವಶ್ಯಕತ್ವವಿರುತ್ತದೆಂದರ್ಥ. (ಪ್ರಯೋಜ ಕತ್ವವಿದೆಯೆಂದು ತಾತ್ಪರ್ಯ.) ಪೂರ್ವಂ—ಮೊದಲು, ಶಕ್ತಿಗ್ರಹಾಭಾವೇ-ಶಕ್ತಿಜ್ಞಾನ ವಿಲ್ಲದಿದ್ದರೆ, ಪದಜ್ಞಾನೇಽಪಿ—ಪದದಶ್ರಾವಣಜ್ಞಾನವಿದ್ದರೂ (ಕಿವಿಯಿಂದ ಕೇಳಿದ್ದರೂ) ತತ್ಸಂಬಂಧೇನ — ಪದದಸಂಬಂಧದಿಂದ, ಸ್ಮರಣಾನುಪಪತ್ತೇಃ — ಪದಾರ್ಥಸ್ಮರಣೆ ಬಾರದೇ ಹೋಗಬೇಕಾಗುತ್ತದೆ. ಯಾವ ಪದದ ಶಕ್ತಿಜ್ಞಾನವಿಲ್ಲವೋ ಅಲ್ಲಿ ಆ ಪದ ಜ್ಞಾನಮಾತ್ರದಿಂದ ಪದಾರ್ಥೋಪಸ್ಥಿತಿಯಾಗುವುದಿಲ್ಲವೆಂದು ತಾತ್ಪರ್ಯ. ಪದ ಜ್ಞಾನವು ಸ್ಮಾರಕವಾಗುವುದು ಹೇಗೆಂದು ತೋರಿಸುತ್ತಾನೆ. 'ಪದಜ್ಞಾನಸ್ಯ—' ಇತಿ. 'ಏಕಸಂಬಂಧಿಜ್ಞಾನಮಪರಸಂಬಂಧಿಸ್ಮಾರಕಮ್' ಎಂದು ಒಂದು ನಿಯಮವಿದೆ. ಒಂದರ ಸಂಬಂಧಬಂದಾಗ ಇನ್ನೊಂದರ ಸಂಬಂಧ ನೆನಪಾಗುವುದು. ಮಗನನ್ನು ನೋಡಿದರೆ ಅವನ ತಂದೆಯಸ್ಮರಣೆ ಬರುತ್ತದೆ. ಆನೆಯನ್ನು ನೋಡಿ ಮಾವಟಿಗನಸ್ಮರಣೆ ಬರುವುದು. ಹೀಗೆಯೇ ಪದಜ್ಞಾನಕ್ಕೂ ಸಂಬಂಧಿಜ್ಞಾನಮೂಲಕ ಅರ್ಥಸ್ಮಾರಕತ್ವ ವಿರುತ್ತದೆ. ಪದವಿಷಯಕಾನುಭವದಿಂದ ಪದವಿಷಯಕಸ್ಮೃತಿ, ಪದಾರ್ಥವಿಷಯ ಕಾನುಭವದಿಂದ ಪದಾರ್ಥವಿಷಯಕಸ್ಮೃತಿ ಎಂದು ಅನುಭವಸ್ಮರಣೆಗಳಿಗೆ ಸಮಾನ ವಿಷಯವಾಗಿ ಕಾರ್ಯಕಾರಣಭಾವದೃಷ್ಟವಾದರೂ ಇಲ್ಲಿ ಶಕ್ತಿಜ್ಞಾನವುಳ್ಳ ಪುರುಷನಿಗೆ ಪದಶ್ರವಣವಾದಮೇಲೆ ತತ್ಸಂಬಂಧಿಯಾದ ಅರ್ಥಸ್ಮರಣೆಯೂ (ಅರ್ಥದ ಉಪಸ್ಥಿತಿಯು) ಏಕಸಂಬಂಧಿಜ್ಞಾನ—ನ್ಯಾಯದಿಂದ (ಭಿನ್ನವಿಷಯವಾಗಿದ್ದರೂ) ಬರುತ್ತದೆಯೆಂದು ತಾತ್ಪರ್ಯ.

ಶಕ್ತಿಶ್ಚ ಪದೇನ ಸಹ ಪದಾರ್ಥಸ್ಯ ಸಂಬಂಧಃ । ಸಾ ಚಾಸ್ಮಾಚ್ಛಬ್ದಾದಯಮರ್ಥೋ ಬೋದ್ಧವ್ಯ ಇತೀಶ್ವರೇಚ್ಛಾರೂಪಃ । ಆಧುನಿಕೇ ನಾಮ್ನಿಶಕ್ತಿರಸ್ತ್ಯೇವ, ಏಕಾದಶೇ ಽಹನಿ ಪಿತಾ ನಾಮ ಕುರ್ಯಾದಿತೀಶ್ವರೇಚ್ಛಾಯಾಃ ಸತ್ವಾತ್ । ಆಧುನಿಕೇ ತು

ಸಂಕೇತೇ ನ ಶಕ್ತಿರಿತಿ ಸಂಪ್ರದಾಯಃ। ನವ್ಯಾಸ್ತು ಈಶ್ವರೇಚ್ಛಾ ನ ಶಕ್ತಿಃ, ಕಿಂತ್ವಿಚ್ಛೈವ ತೇನಾಧುನಿಕ ಸಂಕೇತೇಽಪಿ ಶಕ್ತಿರಸ್ತ್ಯೇವೇತ್ಯಾಹಃ ॥

ಪದದೊಡನೆ ಪದಾರ್ಥಕ್ಕಿರುವ ಸಂಬಂಧವೇ ಶಕ್ತಿ. ಗವಾದಿಪದದೊಡನೆ ಗೋತ್ವಾದಿವಿಶಿಷ್ಟಾರ್ಥಕ್ಕಿರುವ ವಾಚ್ಯವಾಚಕಭಾವರೂಪಸಂಬಂಧವೇ ಶಕ್ತಿಯೆಂದರ್ಥ. 'ಸಾಚ–' ಎಂಬುದರಿಂದ ಶಕ್ತಿಯಲಕ್ಷಣವನ್ನು ತೋರಿಸುತ್ತಾನೆ. 'ಅಸ್ಮಾತ್ ಪದಾತ್–' ಇತಿ. ಘಟಾದಿಪದದಿಂದ ಕಂಬುಗ್ರೀವಾದಿವ್ಯಕ್ತಿರೂಪವಾದ ಅಥವಾ ಘಟತ್ವಾದಿಜಾತಿರೂಪವಾದ ಅರ್ಥವು ತಿಳಿಯಬೇಕೆಂದು ಯಾವ ಈಶ್ವರೇಚ್ಛೆ ಇದೆಯೋ ಆ ಇಚ್ಛಾರೂಪಸಂಬಂಧವೇ ಶಕ್ತಿಯೆಂದರ್ಥ. ಈ ಶಕ್ತಿಗೇ ಮುಖ್ಯವೃತ್ತಿ, ಅಭಿದಾ ಎಂದು ಕರೆಯುತ್ತಾರೆ. 'ಸಾಮಯಿಕಃ ಶಬ್ದಾದರ್ಥ ಪ್ರತ್ಯಯಃ' ಎಂದು ವೈಶೇಷಿಕ ಸೂತ್ರ. ಈ ಶಬ್ದದಿಂದ ಈ ಅರ್ಥ ತಿಳಿಯಬೇಕು ಎಂದು ಈಶ್ವರಕೃತವಾದ ಸಂಕೇತಕ್ಕೆ ಸಾಮಯಿಕವೆಂದು ಹೆಸರು. ಶಬ್ದದಿಂದ ಅರ್ಥಪ್ರತೀತಿಯು ಈ ಸಂಕೇತರೂಪಸಮಯ ದಿಂದ ಬಂದಿದೆ (ಉಂಟಾಗಿದೆಯೆಂದರ್ಥ.) ಆದುದರಿಂದ ಶಬ್ದಾರ್ಥಗಳಿಗೆ ಇರುವ ಸಂಬಂಧವು ಈಶ್ವರೇಚ್ಛಾರೂಪವಾಗಿರುತ್ತದೆ. ಸೃಷ್ಟಿಯ ಆದಿಯಲ್ಲಿಯೇ ಆಯಾಯ ಪದಗಳಿಂದ ನಿಯತವಾಗಿ ಆಯಾಯ ಅರ್ಥಗಳು ತಿಳಿಯಲ್ಪಡಬೇಕೆಂದು ಈಶ್ವರನಿಯಮ ವಿರುತ್ತದೆ. ಇದೇ ಸಮಯ, ಸಂಕೇತ, ಶಕ್ತಿ ಆಗುತ್ತದೆ. ಶಬ್ದಾರ್ಥಗಳ ಈ ಸಂಬಂಧವು ಈಶ್ವರಸಂಕೇತಾಧೀನವಾದುದರಿಂದ ಅವಿನಾಭಾವಲಕ್ಷಣಸಂಬಂಧವೆಂದು ಕೆಲವರು ಹೇಳುವುದು ಸಮಂಜಸವಲ್ಲವೆಂದು ನೈಯಾಯಿಕರಮತ.

ಈ ಸಂಕೇತವೃತ್ತಿಯನ್ನು ನಾನಾಕಾರವಾಗಿ ಹೇಳಬಹುದು. 'ಇದಂ ಪದಂ ಇಮಮರ್ಥಂ ಬೋಧಯತು' ಎಂದು ಹೇಳಿದರೆ ಪದವಿಶೇಷ್ಯಕಸಂಕೇತವಾಗುತ್ತದೆ. 'ಇದಂ ಗೋಪದಂ' ಎಂದರ್ಥ. ಆಗ 'ಗೋತ್ವಾದ್ಯವಚ್ಛಿನ್ನವಿಷಯತಾನಿರೂಪಕ ಬೋಧನಿರೂಪಿತಜನಕತಾಶ್ರಯಃ ಗವಾದಿಪದಂ' ಎಂದು ಶಾಬ್ದಬೋಧ ಬರುತ್ತದೆ. 'ಅಸ್ಮಾತ್‌ಪದಾತ್ ಅಯಮರ್ಥೋ ಬೋದ್ಧವ್ಯಃ' ಎಂದು ಹೇಳಿದರೆ ಆಗ ಅರ್ಥ ವಿಶೇಷ್ಯಕವಾಗುತ್ತದೆ. ಆಗ 'ಗವಾದಿಪದಜನ್ಯಬೋಧವಿಷಯತಾಶ್ರಯೋ ಗವಾದಿ ಕಮ್' (ಗವಾದ್ಯರ್ಥಃ) ಎಂದು ಫಲಿತವಾಗುತ್ತದೆ. ಹೀಗೆ ಬೋಧವಿಶೇಷ್ಯಕವಾದ ಸಂಕೇತವೂ ಇದೆ. 'ಗೋತ್ವಾದ್ಯವಚ್ಛಿನ್ನವಿಷಯಕೋ ಬೋಧೋ ಗವಾದಿಪದಜನ್ಯೋ ಭವತು' ಎಂದು ಅದರ ಆಕಾರವಾಗುತ್ತದೆ.

ಈಶ್ವರೇಚ್ಛಾರೂಪವೇ ಸಂಕೇತವೆಂದರೆ ಆಗ ಒಂದು ಆಶಂಕೆ ಬರುತ್ತದೆ. ಈಶ್ವರನ ಇಚ್ಛೆ ನಮ್ಮ ಇಚ್ಛೆಯಂತಿಲ್ಲ. ಅದು ನಿತ್ಯವಾಗಿ ಯಾವಾಗಲೂ ಒಂದೇ ಆಗಿದೆ. ಆಗ 'ಘಟಪದದಿಂದ ಪಟವುತಿಳಿಯಲ್ಪಡಲಿ' ಎಂಬ ಇಚ್ಛೆಯು ಪಟದಲ್ಲಿಯೂ ಬರುವುದರಿಂದ ಘಟಪದದಿಂದ ಪಟಾರ್ಥಬೋಧ ಬರಬೇಕಾಗುತ್ತದೆ ಹೀಗೆಯೇ 'ಗಂಗಾಪದದಿಂದ ತೀರಬೋಧವುಂಟಾಗಲಿ' ಎಂಬ ಇಚ್ಛೆ ತೀರದಲ್ಲಿ ಬರುವುದರಿಂದ ಶಕ್ತಿ

ಯಿಂದಲೇ ತೀರಬೋಧವುಂಟಾಗಿ ಲಕ್ಷಣಾವೃತ್ತಿವ್ಯರ್ಥವಾಗಲಿ ಎಂದು ಆಶಂಕಿಸ ಬಹುದು. ಆದರೆ ತೀರವು ಗಂಗಾಪದದಿಂದ ವಾಚ್ಯವಾಗಿದೆಯೆಂಬ ವ್ಯವಹಾರ ಲೋಕ ದಲ್ಲಿಲ್ಲ. ಆದುದರಿಂದ ಕೇವಲ ಇಚ್ಛೆಯೇ ಸಂಕೇತವಲ್ಲ. ಆಯಾಯ ವಿಶೇಷರೂಪ ದಿಂದ ಹೇಳಬೇಕು. 'ಗಂಗಾದಿಪದಜನ್ಯಬೋಧವಿಷಯತಾತ್ವಾವಚ್ಛಿನ್ನ ಪ್ರಕಾರತಾ ನಿರೂಪಿತವಿಶೇಷ್ಯತಾಸಂಬಂಧೇನ ಯಾ ಈಶ್ವರೀಯೇಚ್ಛಾ ತಯ್ಯೈವ ಗಂಗಾದಿಪದಾನಾಂ ಜಲಪ್ರವಾಹಾದಿರೂಪೇಽರ್ಥೇಶಕ್ತಿಃ'' ಗಂಗಾಪದಜನ್ಯಬೋಧವಿಷಯವು ಗಂಗೆಯಾಗಿದೆ (ಜಲಪ್ರವಾಹಾದಿಗಳು). ತಾದೃಶವಿಷಯತಾಕ್ಕೆ ಆಶ್ರಯವಾದದ್ದು ಗಂಗೆ. ಗಂಗಾಪ ದಾರ್ಥದಲ್ಲಿ ಗಂಗಾಪದಜನ್ಯಬೋಧವಿಷಯತಾ ಎಂಬುದು ಆಶ್ರಯತಾಸಂಬಂಧವಾದ ಪ್ರಕಾರವಾಗಿದೆ. (ಗಂಗಾಪದಜನ್ಯಬೋಧವಿಷಯತಾಶ್ರಯಃ ಗಂಗಾಪದಾರ್ಥಃ). ಪ್ರಕಾರತಾವಚ್ಛೇದಕ ಬೋಧವಿಷಯತಾತ್ವ ಆಗುತ್ತದೆ. ಪ್ರಕಾರತಾ ಬೋಧವಿಷಯ ತಾತ್ವಾವಚ್ಛಿನ್ನಾ. ಆಶ್ರಯತಾಸಂಬಂಧವೂ ಅವಚ್ಛೇದಕ ವಾಗುವುದರಿಂದ ಅದ ರಿಂದಲೂ ಅವಚ್ಛಿನ್ನವಾಗಿರುತ್ತದೆ. ಆಗ 'ಆಶ್ರಯತಾಸಂಬಂಧಾವಚ್ಛಿನ್ನ ಗಂಗಾಪದ ಜನ್ಯಬೋಧವಿಷಯತಾತ್ವಾವಚ್ಛಿನ್ನ ಪ್ರಕಾರತಾನಿರೂಪಿತ ಭಗವದಿಚ್ಛೀಯ ವಿಶೇಷ್ಯತಾ ಸಂಬಂಧದಿಂದ ಗಂಗಾಪದಜನ್ಯಬೋಧವಿಷಯತಾ ಗಂಗಾಪದಾರ್ಥದಲ್ಲಿ ಬರುತ್ತದೆ. ಗಂಗಾಪದ ಜನ್ಯಬೋಧವಿಷಯತ್ವವು ಆಶ್ರಯತಾಸಂಬಂಧದಿಂದ ಗಂಗಾಪದಾರ್ಥ ದಲ್ಲಿಯೂ, ಅವಚ್ಛೇದಕತಾಸಂಬಂಧದಿಂದ ಗಂಗಾತ್ವದಲ್ಲಿಯೂ, ಅವಚ್ಛೇದಕತಾವಚ್ಛೇಕ ಸಂಬಂಧದಿಂದ ಗಂಗಾತ್ವ ಸಮವಾಯದಲ್ಲಿಯೂ ಬರುತ್ತದೆ. ಪ್ರಕೃತ ಪಟದಲ್ಲಿ ಘಟ ಪದವಾಚ್ಯತ್ವ ವ್ಯವಹಾರವಿಲ್ಲ. ತತ್ಪದಶಕ್ಯತ್ವ ಬರಬೇಕಾದರೆ (ಆಪದದ ಶಕ್ತಿಯಿಂದ ಬರುವ ಅರ್ಥ.) ತತ್ಪದ ಜನ್ಯಬೋಧ ವಿಷಯತಾತ್ವಾವಚ್ಛಿನ್ನಪ್ರಕಾರತಾ ನಿರೂಪಿತ ವಿಶೇಷ್ಯತಾಸಂಬಂಧದಿಂದ ಈಶ್ವರೇಚ್ಛಾವಿಶಿಷ್ಟವಾಗಿರಬೇಕು. ಈಶ್ವರೇಚ್ಛಾನಿರೂಪಿತ ಘಟಪದ ಜನ್ಯಬೋಧ ವಿಷಯತಾತ್ವಾವಚ್ಛಿನ್ನ ಪ್ರಕಾರತಾ ನಿರೂಪಿತವಿಶೇಷ್ಯತಾ ಪಟ ದಲ್ಲಿ ಇಲ್ಲದಿರುವುದರಿಂದಘಟಪದ ಶಕ್ಯತ್ವ ಬರುವುದಿಲ್ಲ. ಹೀಗೆಯೇ ತೀರಾದಿಗಳಲ್ಲಿ ಗಂಗಾಪದವಾಚ್ಯತ್ವವ್ಯವಹಾರವಿಲ್ಲ. ಈ 'ತೀರಂ ಗಂಗಾಪದಜನ್ಯ ಬೋಧವಿಷಯಃ ಭವತು' ಎಂದು ಈಶ್ವರೇಚ್ಛಾಕಾರವಿಲ್ಲ. 'ತೀರಂ ವಿಷಯತಾವದ್ಭವತು' ಎಂದು ಇರ ಬಹುದು. ಉಕ್ತವಾದ ವಿಶೇಷಸಂಬಂಧದಿಂದ ತೀರವು ಈಶ್ವರೇಚ್ಛಾವಿಶಿಷ್ಟವಾಗದಿರು ವುದರಿಂದ ಸಂಕೇತದಿಂದ ಗಂಗಾಪದಕ್ಕೆ ತೀರಾರ್ಥವಾಗುವುದಿಲ್ಲ.

ಈಶ್ವರೇಚ್ಛೆಯೇ ಶಕ್ತಿಯಾದರೆ ಪುತ್ರಾದಿಗಳಲ್ಲಿ ಪಿತ್ರಾದಿ ಕಲ್ಪಿತವಾದ ಚೈತ್ರಾದಿ ಪದಗಳಲ್ಲಿ ಶಕ್ತಿ ಇಲ್ಲದೇ ಹೋಗಬೇಕಾಗುತ್ತದೆ. ಏಕೆಂದರೆ ಚೈತ್ರಾದಿಪದಗಳಲ್ಲಿ ಈಶ್ವ ರೇಚ್ಛೆ ಇರುವುದಿಲ್ಲ. ಅದಕ್ಕೆ ಸಮಾಧಾನ. 'ಆಧುನಿಕೇ—' ಇತಿ. ಆಧುನಿಕ ಹೆಸರಿ ನಲ್ಲಿಯೂ ಈಶ್ವರೇಚ್ಛೆ ಇದ್ದೇ ಇರುತ್ತದೆ. ಏಕಾದಶಾಹಕಾಲೀನಪಿತ್ರುಚ್ಚಾರಣವಿಷಯ ನಾಮತ್ವಸಾಮಾನ್ಯರೂಪದಿಂದ ಅಲ್ಲಿ ಈಶ್ವರೇಚ್ಛೆ ಇರುತ್ತದೆಂದು ತಾತ್ಪರ್ಯ. ಆಧುನಿಕ ನಾಮದಲ್ಲಿ ಶಕ್ತಿಯೇ ಇಲ್ಲವೆಂದು ಸಾಂಪ್ರದಾಯಿಕರ ಮತ. ಅಲ್ಲಿ ಈಶ್ವರೇಚ್ಛಾರೂಪ

ಶಕ್ತಿ ಇಲ್ಲ. ಯದೃಚ್ಛಾರೂಪವಾದ ಶಕ್ತಿಯೆಂದು ಅವರ ಸಿದ್ಧಾಂತ. ಆದರೆ ನವೀನರು ಇದನ್ನು ಒಪ್ಪುವುದಿಲ್ಲ. ಅವರ ಸಿದ್ಧಾಂತವನ್ನು ತೋರಿಸುತ್ತಾನೆ. 'ನವ್ಯಾಸ್ತು' ಇತಿ. ಈಶ್ವರೇಚ್ಛೆಯೇ ಶಕ್ತಿಯಾದರೆ ಆಧುನಿಕಪಾಣಿನ್ಯಾದಿಗಳಿಂದ ಪಾರಿಭಾಷಿಕವಾಗಿ ನದೀ ಮುಂತಾದ ಸಂಜ್ಞೆಗಳು ವ್ಯವಹರಿಸಲ್ಪಟ್ಟಿವೆ, ಅವುಗಳಿಂದ ಶಾಬ್ದಬೋಧ ಉಂಟಾಗಲಾರದು. ಆದುದರಿಂದ ಕೇವಲ ಇಚ್ಛಾತ್ವರೂಪದಿಂದ ಶಕ್ತಿ ಹೇಳಬೇಕು. ಹಾಗೆ ಹೇಳಿದರೆ ಕೆಲವು ಶಬ್ದಗಳಲ್ಲಿ ಈಶ್ವರೇಚ್ಛಾರೂಪವಾಗಿಯೂ, ಇನ್ನು ಕೆಲವು ಕಡೆಗಳಲ್ಲಿ ಆಧುನಿಕೇಚ್ಛಾರೂಪವಾಗಿಯೂ ಹೇಳಬಹುದಾದುದರಿಂದ ಎಲ್ಲದಕ್ಕೂ ಸಂಗ್ರಹ ಬರುತ್ತದೆ, (ಸಾಮಾನ್ಯೇಚ್ಛಾರೂಪದಿಂದ ಶಕ್ತಿ ಹೇಳಿದರೆ ಎಲ್ಲಿಯೂ ದೋಷ ಬರುವುದಿಲ್ಲ. ಅಪಭ್ರಂಶ ಶಬ್ದಗಳಲ್ಲಿ ಶಕ್ತಿ ಭ್ರಮೆಯಿಂದ ಶಾಬ್ದಬೋಧ ಬರುತ್ತದೆಂದು ಅವರ ಸಿದ್ಧಾಂತ ||

ಶಕ್ತಿಗ್ರಹಸ್ತು ವ್ಯಾಕರಣಾದಿತಃ । ತಥಾ ಹಿ—ಶಕ್ತಿಗ್ರಹಂ ವ್ಯಾಕರಣೋಪಮಾನ ಕೋಶಾಪ್ತವಾಕ್ಯಾತ್ ವ್ಯವಹಾರತಶ್ಚ ।ವಾಕ್ಯಸ್ಯ ಶೇಷಾದ್ವಿವೃತೇರ್ವದಂತಿ ಸಾನ್ನಿಧ್ಯತಃ ಸಿದ್ಧಪದಸ್ಯ ವೃದ್ಧಾಃ ॥ ಧಾತು ಪ್ರಕೃತಿಪ್ರತ್ಯಯಾದೀನಾಂ ಶಕ್ತಿಗ್ರಹಃ ವ್ಯಾಕರಣಾದ್ಭವತಿ ||

ಶಕ್ತಿಜ್ಞಾನ ಬರಬೇಕಾದರೆ ಅಲ್ಲಿ ಕೆಲವು ಪ್ರಯೋಜಕಗಳ ಅಪೇಕ್ಷೆ ಇರುತ್ತದೆ. ಆ ಪ್ರಯೋಜಕಗಳು ಎಂಟೆಂದು ಪ್ರಾಚೀನಾಭಿಯುಕ್ತರು ಹೇಳುವುದನ್ನು ಒಂದು ಕಾರಿಕೆಯಲ್ಲಿ ತೋರಿಸುತ್ತಾನೆ. 'ಶಕ್ತಿಗ್ರಹಂ—' ಇತಿ. ೧.) ವ್ಯಾಕರಣ. ಪಾಣಿನ್ಯಾದಿ ಪ್ರಣೀತವಾದ ಶಬ್ದಶಾಸ್ತ್ರಗಳು. ೨.) ಉಪಮಾನ—ಉಪಮಿತಿಕರಣವಾದ ಸಾದೃಶ್ಯಜ್ಞಾನ. ಇದು ಹಿಂದೆ ಹೇಳಿದೆ. ೩) ಕೋಶ—ಅಮರಸಿಂಹಾದಿ ಪ್ರಣೀತವಾದ ಲಿಂಗಾನುಶಾಸನಾದಿಗಳು. ೪.) ಆಪ್ತವಾಕ್ಯ—ಪ್ರಯೋಗಕ್ಕೆ ಸಾಧಕವಾದ ಯಥಾರ್ಥ ಜ್ಞಾನದಿಂದ ಕೂಡಿರುವವನು ಆಪ್ತನು. ಅವನು ಹೇಳಿದ ವಾಕ್ಯ. (ಆಕಾಂಕ್ಷಾದಿಗಳಿಂದ ಕೂಡಿದ ಪದಸಮುದಾಯ.) ೫.) ವ್ಯವಹಾರ -- ಲೋಕದಲ್ಲಿ ಮಾಡಿದ ಶಬ್ದಪ್ರಯೋಗ. (ಪ್ರಯೋಜ್ಯ ವೃದ್ಧನನ್ನು ಕುರಿತು ಉತ್ತಮವೃದ್ಧನಿಂದ ಪ್ರಯೋಗಿಸಿದ ಪ್ರೇರಣಾರೂಪವಾಕ್ಯ.) ೬.) ವಾಕ್ಯಶೇಷ—ತನ್ನಿಂದ ಭಿನ್ನವಾದ ವಾಕ್ಯದಲ್ಲಿ ತನ್ನರ್ಥಕ್ಕೆ ಉಪಯೋಗವಾಗುವ ಪದಸಮುದಾಯರೂಪವಾದ ಅರ್ಥವಾದಾದಿಗಳು. ವೇದದಲ್ಲಿ ವಿಧಿವಾಕ್ಯವನ್ನು ಪುಷ್ಟೀಕರಿಸಲು ಸ್ವಾರ್ಥದಲ್ಲಿ ತಾತ್ಪರ್ಯವಿಲ್ಲದೆ ಅರ್ಥವಾದ ವಾಕ್ಯಗಳು ಅಧಿಕವಾಗಿರುತ್ತವೆ. ೭.) ವಿವೃತಿಃ—ವಿವರಣೆ. ಸಿದ್ಧಪದದ ಸಾನ್ನಿಧ್ಯ.—ಪ್ರಸಿದ್ಧಪದದ ಸಾಮೀಪ್ಯ. ಹೀಗೆ ಇವು ಎಂಟು ಶಕ್ತಿಜ್ಞಾನಕ್ಕೆ ಪ್ರಯೋಜಕಗಳಾಗುತ್ತವೆ. ಇವುಗಳನ್ನು ಕ್ರಮವಾಗಿ ತೋರಿಸುತ್ತಾನೆ. 'ಧಾತು—' ಇತಿ. ಧಾತ್ವಾದಿಗಳ ಶಕ್ತಿ ಜ್ಞಾನವು ವ್ಯಾಕರಣದಿಂದ ಬರುತ್ತದೆ. ಭೂಧಾತುವಿಗೆ ಸತ್ತಾ (ಇರುವಿಕೆ) ದಲ್ಲಿ ಶಕ್ತಿ. ಲಟ್ ಲಕಾರಕ್ಕೆ ವರ್ತಮಾನಾರ್ಥದಲ್ಲಿ ಶಕ್ತಿ. ಹೀಗೆ ಇವು

'ಭೂ—ಸತ್ತಾಯಾಂ' 'ವರ್ತಮಾನೇಲಟ್' ಇತ್ಯಾದಿ ವ್ಯಾಕರಣಾನುಶಾಸನದಿಂದ ಕ್ರಮವಾಗಿ ತಿಳಿಯುತ್ತದೆ. ಆದಿಪದದಿಂದ ವಿಭಕ್ತ್ಯರ್ಥಾದಿಗಳನ್ನು ತೆಗೆದುಕೊಳ್ಳ ಬೇಕು.

ಆಶ್ರಯೋಽವಧಿರುದ್ದೇಶ್ಯಃ ಸಂಬಂಧಃ ಶಕ್ತಿರೇವ ವಾ
ಯಥಾಯಥಂ ವಿಭಕ್ತ್ಯರ್ಥಾಃ ಸುಪಾಂ ಕರ್ಮೇತಿಭಾಷ್ಯತಃ ||

ಎಂದು ವಿಭಕ್ತ್ಯರ್ಥ ಹೇಳಿದೆ. ದ್ವಿತೀಯಾ ತೃತೀಯಾ ಸಪ್ತಮೀ ವಿಭಕ್ತಿಗಳಿಗೆ ಆಶ್ರಯವೇ ಅರ್ಥ. ಕ್ರಿಯಾಜನ್ಯಫಲಾಶ್ರಯವಾದದ್ದು ಕರ್ಮ. (ದ್ವಿತೀಯಾ) ಧಾತ್ವರ್ಥವ್ಯಾಪಾರಾಶ್ರಯವಾದದ್ದು ಕರ್ತೃ. (ತೃತೀಯಾ.) ಫಲಜನಕ ವ್ಯಾಪಾ ರಾಶ್ರಯವಾದದ್ದು ಕರಣ (ತೃತೀಯಾ) ಕರ್ತೃಕರ್ಮದ್ವಾರಾ ವ್ಯಾಪಾರಾಶ್ರಯ ವಾದದ್ದು ಅಧಿಕರಣ. (ಸಪ್ತಮೀ) ವಿಭಾಗಜನಕ ಕ್ರಿಯೆಗೆ ಅವಧಿಯಾದದ್ದು ಅಪಾದಾನ. ಇದಕ್ಕೆ ಪಂಚಮೀ ವಿಭಕ್ತಿ. ಸಂಪ್ರದಾನವೇ ಉದ್ದೇಶ್ಯ (ಚತುರ್ಥೀ) ಷಷ್ಠಿಗೆ ಸಂಬಂಧಾರ್ಥ. (ಸ್ವಸ್ವಾಮಿಭಾವಾದಿ ಸಂಬಂಧ.) ಅಥವಾ ಸಂಬಂಧಾರ್ಥಕ ಷಷ್ಠೀ ಬಿಟ್ಟು ಉಳಿದ ಆರು ವಿಭಕ್ತಿಗಳಿಗೂ ಶಕ್ತಿಯೇ ಅರ್ಥ. ಹೀಗೆ ವ್ಯಾಕರಣದಿಂದ ಶಕ್ತಿ ಜ್ಞಾನ ಬರುತ್ತದೆ.

ಕ್ವಚಿತ್ ಸತಿಬಾಧಕೇ ತ್ಯಜ್ಯತೇಽಪಿ ! ಯಥಾ ವೈಯಾಕರಣೈ ರಾಖ್ಯಾತಸ್ಯ ಕರ್ತರಿ ಶಕ್ತಿರುಚ್ಯತೇ! ಚೈತ್ರಃ ಪಚತೀತ್ಯಾದೌ ಕರ್ತ್ರಾಸಹ ಚೈತ್ರಸ್ಯಾಭೇದಾನ್ವಯಃ | ತಚ್ಚ ಗೌರವಾತ್ ತ್ಯಜ್ಯತೇ, ಕಿಂತು ಕೃತೌ ಶಕ್ತಿ ರ್ಲಾಘವಾತ್ | ಕೃತಿ ಶ್ಚೈ ತ್ರಾದೌ ಪ್ರಕಾರೀಭೂಯ ಭಾಸತೇ ||

ವ್ಯಾಕರಣದಿಂದ ಬರುವ ಶಕ್ತಿಗೆ ಅಪವಾದ ಸ್ಥಲವನ್ನು ತೋರಿಸುತ್ತಾನೆ. 'ಕ್ವಚಿತ್—' ಕೆಲವು ಸ್ಥಳದಲ್ಲಿ ಬಾಧಕವಿರುವುದರಿಂದ ಅಂದರೆ ಗೌರವಾದಿ ದೋಷ ಬರುವುದರಿಂದ ವ್ಯಾಕರಣದಿಂದ ಬರುವ ಶಕ್ತಿಯನ್ನು ನೈಯಾಯಿಕರು ಸ್ವೀಕರಿಸುವುದಿಲ್ಲ. ಉದಾಹರಣೆ ತೋರಿಸುತ್ತಾನೆ. 'ಯಥಾ—' ಇತಿ. ಆಖ್ಯಾತವೆಂದರೆ ಲಕಾರ. ಅದರ ಸ್ಥಾನಕ್ಕೆ ಬಂದ ತಿಬಾದಿಗಳು. 'ಲಃ ಕರ್ಮಣಿ ಚ ಭಾವೇ ಚಾಕರ್ಮಕೇಭ್ಯಃ' ಎಂಬ ವ್ಯಾಕರಣಸೂತ್ರದಿಂದ ಲಕಾರಕ್ಕೆ ಚೈತ್ರಾದಿ ಕರ್ತೃವೇ ಅರ್ಥ. ಧಾತುವಿಗೆ ಫಲಾನುಕೂಲವ್ಯಾಪಾರ ಅರ್ಥ. ವ್ಯಾಪಾರಕ್ಕೆ ಆಶ್ರಯನಾದವನು ಕರ್ತೃ. 'ಚೈತ್ರಃ ಪಚತಿ' ಎಂಬ ತಿಙಂತಕ್ರಿಯಾಪದ ಸ್ಥಳದಲ್ಲಿ 'ಭಾವಪ್ರಧಾನಮಾಖ್ಯಾತಂ' ಎಂಬ ಯಾಸ್ಕರವಚನದಂತೆ ವ್ಯಾಪಾರ ಮುಖ್ಯ ವಿಶೇಷ್ಯಕ ಶಾಬ್ದಬೋಧವನ್ನು ಹೇಳುತ್ತಾರೆ. ಲಕಾರಾರ್ಥಕರ್ತೃವಿಗೂ ಚೈತ್ರನಿಗೂ ಅಭೇದಾನ್ವಯ. ಆಗ 'ಏಕತ್ವಸಂಖ್ಯಾಶ್ರಯ ಚೈತ್ರಾಭಿನ್ನಕರ್ತೃವೃತ್ತಿ ವರ್ತಮಾನ ಕಾಲಿಕ ವಿಕ್ಲತ್ಯನುಕೂಲವ್ಯಾಪಾರಃ' ಎಂದು ಬೋಧವಾಗುತ್ತದೆ. ತಿಪ್ ಪ್ರತ್ಯಯಕ್ಕೆ ಸಂಖ್ಯಾ, ಕಾಲ, ಕರ್ತೃ ಈ ಮೂರೂ ಅರ್ಥ

ವೆಂದು ಅವರ ಸಿದ್ಧಾಂತ. 'ಸಾಮಾನ್ಯವಿಶೇಷಗಳಿಗೆ ಅಭೇದವು ಲೋಕ ಪ್ರಸಿದ್ಧವಾಗಿದೆ. ತಿಪ್ ಪ್ರತ್ಯಯಕ್ಕೆ ಸಾಮಾನ್ಯಕರ್ತ್ರರ್ಥವಾದುದರಿಂದ ತದ್ವಿಶೇಷಚೈತ್ರನೊಡನೆ ಅದಕ್ಕೆ ಅಭೇದಾನ್ವಯ ಸಂಗತವಾಗುತ್ತದೆ. ಈ ವಿಷಯದಲ್ಲಿ ನೈಯಾಯಿಕರ ಉತ್ತರ 'ತಚ್ಚ ಗೌರವಾತ್ ತ್ಯಜ್ಯತೇ' ಇತಿ. ಗೌರವದೋಷ ಬರುವುದರಿಂದ ಈ ವಿಷಯದಲ್ಲಿ ವೈಯಾಕರಣರಮತವನ್ನು ಸ್ವೀಕರಿಸುವುದಿಲ್ಲವೆಂರ್ಥ. ಹಾಗಾದರೆ ಆಖ್ಯಾತಕ್ಕೆ ಎಲ್ಲಿ ಶಕ್ತಿಯೆಂದು ತೋರಿಸುತ್ತಾನೆ. 'ಕಿಂತು—' ಇತಿ. ಕೃತಿಯೆಂದರೆ ಯತ್ನ. 'ಕರ್ತರಿ' ಎಂದು ಪಾಣಿನಿ ಸೂತ್ರದಲ್ಲಿ ಹೇಳಿದ್ದರೂ ಭಾವಪ್ರಧಾನ ನಿರ್ದೇಶದಿಂದ (ಕೆಲವು ಪದಗಳು ಧರ್ಮಿವಾಚಕವಾಗಿದ್ದರೂ ಧರ್ಮಾರ್ಥವನ್ನೇ ತೆಗೆದುಕೊಳ್ಳುವುದಿದೆ.) 'ಕರ್ತೃತ್ವ' ಅರ್ಥವನ್ನು ಹೇಳಬೇಕು. ಕರ್ತೃತ್ವವೆಂದರೆ ಕೃತಿಯೆಂದರ್ಥ. ಲಾಘವದಿಂದ ಈ ಅರ್ಥ ಹೇಳಿದೆ. ಆಖ್ಯಾತಾರ್ಥವಾದ ಈ ಕೃತಿಯು ಕೃತ್ಯಾಶ್ರಯನಾದ ಚೈತ್ರಾದಿ ಕರ್ತೃಗಳಲ್ಲಿ ಪ್ರಕಾರೀಭೂಯ—ವಿಶೇಷಣಭಾವ ಹೊಂದಿ ತೋರುತ್ತದೆ. (ವಿಶೇಷಣತಾ ಸಂಬಂಧಾನ್ವಿತವಾಗುತ್ತದೆ.)

ಸೂತ್ರಾನುಸಾರಿಯಾಗಿ ಕರ್ತೃವಿನಲ್ಲಿ ಶಕ್ತಿ ಹೇಳಿದರೆ ಆಗ ಶಕ್ಯತಾವಚ್ಛೇದಕ ಧರ್ಮವು ಕೃತಿಯಾಗುತ್ತದೆ. ಕೃತಿಯೆಂದರೆ ಇದು ಆಯಾಯ ಪುರುಷರಲ್ಲಿ ನಾನಾ ರೂಪವಾದುದರಿಂದ ಶಕ್ಯತಾವಚ್ಛೇದಕವು ಅನಂತವಾಗಬೇಕಾಗುತ್ತದೆ. ಶಕ್ಯತಾವಚ್ಛೇದಕಧರ್ಮ ಒಂದೇ ಎಂದು ಲೋಕಪ್ರಸಿದ್ಧ. ಏಕಧರ್ಮೋಪಸ್ಥಿತಿ ಎಲ್ಲಿ ? ಅನಂತ ಧರ್ಮಗಳ ಉಪಸ್ಥಿತಿ ಎಲ್ಲಿ.? ಆದುದರಿಂದ ಉಪಸ್ಥಿತಿಕೃತವಾದ ಮಹದ್ಗೌರವ ಬರುತ್ತದೆ. ಉಪಸ್ಥಿತಿಕೃತಲಾಘವದಿಂದ ಕೃತಿಯಲ್ಲಿ ಶಕ್ತಿ ಹೇಳಿದರೆ ಆಗ ಶಕ್ಯತಾವಚ್ಛೇದಕವು ನಾನಾ ಕೃತಿಗಳಲ್ಲಿ ಅನುಸ್ಯೂತವಾದ ಕೃತಿತ್ವ ಆಗುತ್ತದೆ. ಅದು ಒಂದೇ ಆದುದರಿಂದ ಲಾಘವ ಬರುತ್ತದೆ. ಕರ್ತೃತ್ವವೆಂದರೆ ಕೃತಿ. ಕೃತಿಗಳಲ್ಲಿ ಕೃತಿತ್ವಧರ್ಮ ಒಂದೇ ಆಗಿರುತ್ತದೆ.

ನಚ—ಕರ್ತುರನಭಿಧಾನಾಚ್ಚೈತ್ರಾದಿಪದಾನಂತರಂ ತೃತೀಯಾ ಸ್ಯಾದಿತಿ ವಾಚ್ಯಮ್ । ಕರ್ತೃಸಂಖ್ಯಾನಭಿಧಾನಸ್ಯ ತತ್ರ ತಂತ್ರತ್ವಾತ್ । ಸಂಖ್ಯಾಭಿಧಾನಯೋಗ್ಯಶ್ಚ ಕರ್ಮತ್ವಾದ್ಯನವರುದ್ಧಃ ಪ್ರಥಮಾಂತಪದೋಪಸ್ಥಾಪ್ಯಃ । ಕರ್ಮತ್ವಾದೀತ್ಯಸ್ಯೇತರವಿಶೇಷಣತ್ವ ತಾತ್ಪರ್ಯಾವಿಷಯತ್ವಮರ್ಥಃ । ತೇನ ಚೈತ್ರ ಇವ ಮೈತ್ರೋ ಗಚ್ಛತೀತ್ಯಾದೌ ನ ಚೈತ್ರೇ ಸಂಖ್ಯಾನ್ವಯಃ ॥ ಯತ್ರ ಕರ್ಮಾದೌ ನ ವಿಶೇಷಣತ್ವೇ ತಾತ್ಪರ್ಯಂ ತದ್ವಾರಣಾಯ ಪ್ರಥಮಾಂತೇತಿ । ಯದ್ವಾ ಧಾತ್ವರ್ಥಾತಿರಿಕ್ತಾವಿಶೇಷಣತ್ವಂ ಪ್ರಥಮದಲಾರ್ಥಃ । ತೇನ ಚೈತ್ರ ಇವ ಮೈತ್ರೋ ಗಚ್ಛತೀತ್ಯತ್ರ ಚೈತ್ರಾದೇರ್ವಾರಣಮ್। ಸ್ತೋಕಂ ಪಚತೀತ್ಯಾದೌ ಸ್ತೋಕಾದೇರ್ವಾರಣಾಯ ಚ ದ್ವಿತೀಯದಲಮ್ । ತಸ್ಯ ದ್ವಿತೀಯಾಂತ ಪದೋಪಸ್ಥಾಪ್ಯತ್ವಾದ್ವಾರಣಮಿತಿ ॥

ಆಖ್ಯಾತಪ್ರತ್ಯಯಕ್ಕೆ ಲಕ್ಷಣಾವೃತ್ತಿಯಿಂದ ಕರ್ತೃತ್ವ ಅರ್ಥ ಹೇಳುವುದಾದರೆ ಆಗ ಕರ್ತೃವು ಪ್ರತ್ಯಯದಿಂದ ಅಭಿಹಿತ (ವಾಚ್ಯ) ವಾಗದಿರುವುದರಿಂದ 'ಅನಭಿಹಿತೇ' ಸೂತ್ರಾಧಿಕಾರದಲ್ಲಿ ಹೇಳಿದ 'ಕರ್ತೃಕರಣಯೋಸ್ತೃತೀಯಾ' ಎಂಬ ಸೂತ್ರದಿಂದ ಕರ್ತೃವಿಗೆ ತೃತೀಯಾ ಬರಲಿ. 'ಚೈತ್ರಃ ಪಚತಿ' ಎಂಬಲ್ಲಿ 'ಚೈತ್ರೇಣ ಪಚತಿ' ಎಂಬ ಪ್ರಯೋಗ ಬರಲಿ ಎಂದು ಆಶಂಕಿಸಿ ಸಮಾಧಾನ ತೋರಿಸುತ್ತಾನೆ. 'ನಚ—' ಇತಿ. ತಿಙಾದಿಪ್ರತ್ಯಯಗಳಿಂದ ಕರ್ತ್ರಾದಿಗಳು ಅಭಿಹಿತವಾಗದಿದ್ದರೆ ಆಗ ಮಾತ್ರ ಆಯಾಯ ವಿಭಕ್ತಿಗಳು ಬರುತ್ತವೆ. 'ಗ್ರಾಮಃ ಗಮ್ಯತೇ' ಇಲ್ಲಿ ಆಖ್ಯಾತದಿಂದ ಕರ್ಮ ಅಭಿಹಿತವಾದುದರಿಂದ ಕರ್ಮವಾಚಕಗ್ರಾಮಕ್ಕೆ ದ್ವಿತೀಯಾ ಬರಲಿಲ್ಲ. ಪ್ರತ್ಯಯಾದಿಗಳಿಂದ ಕರ್ತ್ರಾದಿಕಾರಕಗಳು ಅಭಿಹಿತವಾದರೆ 'ಅಭಿಹಿತೇ ಪ್ರಥಮಾ' ಎಂಬಂತೆ ಪ್ರಥಮಾ ವಿಭಕ್ತಿಯೇ ಬರುತ್ತದೆ. 'ಚೈತ್ರಃ ಪಚತಿ' ಎಂಬಲ್ಲಿ ತಿಪ್ರತ್ಯಯದಿಂದ ಕರ್ತೃ ಅಭಿಹಿತವಾಗುತ್ತದೆಯೆಂದರೆ ಆಗ ಚೈತ್ರಃ ಎಂದು ಪ್ರಥಮಾಂತವು ಸಂಗತವಾಗುತ್ತದೆ. ತಾರ್ಕಿಕರು ಹೇಳುವಂತೆ ತಿಪ್ರತ್ಯಯದಿಂದ ಕರ್ತೃತ್ವ ಅಂದರೆ ಕೃತಿಯು ಅಭಿಹಿತವಾಗುವುದರಿಂದ ಕರ್ತೃ ಅಭಿಹಿತವಾಗಲಿಲ್ಲ. ಆಗ ಕರ್ತೃವಿಗೆ ತೃತೀಯಾ ಎಂದುದರಿಂದ ತೃತೀಯಾ ಬರಬೇಕಾಗುತ್ತದೆ. ಇಲ್ಲಿ ಚೈತ್ರಪದದ ಮೇಲೆ ತೃತೀಯಾ ಬರಲಿ ಎಂದು ಆಶಂಕೆ. ಆದರೆ ಇದು ಸರಿಯಲ್ಲ. 'ಅನಭಿಹಿತೇ' ಎಂಬ ಅಧಿಕಾರ ಸೂತ್ರವು 'ಕರ್ತೃಕರಣಯೋಸ್ತೃತೀಯಾ' ಎಂಬಲ್ಲಿ ಸಂಬದ್ಧವಾಗಿ ಕರ್ತೃಕರಣಗಳಲ್ಲಿರುವ ಸಂಖ್ಯೆಯು ಅಭಿಹಿತವಾಗದಿರುವಾಗ ತೃತೀಯಾವಿಭಕ್ತಿ ಬರುತ್ತದೆಂದು ಸೂತ್ರಾರ್ಥ ತಿಳಿಸುತ್ತದೆ. ಪ್ರತ್ಯಯಾದಿಗಳಿಂದ ಅನಭಿಹಿತವಾದ (ಹೇಳಲ್ಪಡದಿರುವ) ಕರ್ತೃ ಸಂಖ್ಯೆ ಇರುವಾಗ ಕರ್ತೃವಿಗೆ ತೃತೀಯಾ ಎಂದುದರಿಂದ, ಪ್ರಕೃತ 'ಚೈತ್ರಃ ಪಚತಿ' ಎಂಬಲ್ಲಿ ತಿಯೆಂಬ ಆಖ್ಯಾತಪ್ರತ್ಯಯದಿಂದ ಕರ್ತೃಗತ ಏಕತ್ವಸಂಖ್ಯೆಯು ಅಭಿಹಿತವಾದುದರಿಂದ ಕರ್ತೃಸಂಖ್ಯಾ ಅನಭಿಹಿತವಾಗದಿರುವುದರಿಂದ ತೃತೀಯೆಗೆ ಪ್ರಸಕ್ತಿ ಇಲ್ಲ. ಕರ್ತೃವಿನಲ್ಲಿರುವ ಸಂಖ್ಯೆಯು ಆಖ್ಯಾತಪ್ರತ್ಯಯದಿಂದ ಉಕ್ತವಾದರೆ ಆಗ ಕರ್ತೃವಾಚಕದ ಮೇಲೆ ಪ್ರಥಮಾ ವಿಭಕ್ತಿ ಬರುತ್ತದೆಂದು ತಿಳಿಯಬೇಕು.

ಕರ್ತಾ, ಕರ್ಮ, ಕರಣ, ಸಂಪ್ರದಾನ, ಅಪಾದಾನ, ಅಧಿಕರಣಗಳೆಂದು ಕಾರಕಗಳು ಆರು. ಕರ್ತೃ ಪ್ರಯೋಗದಲ್ಲಿ ಕರ್ಮಕ್ಕೆ ದ್ವಿತೀಯಾ ವಿಭಕ್ತಿಯೂ, ಕರ್ತೃವಿಗೆ ಪ್ರಥಮಾ ವಿಭಕ್ತಿಯೂ ಬಂದು ಧಾತುವಿಗೆ ಯಕ್ ಪ್ರತ್ಯಯ ಬಂದಿರುವುದಿಲ್ಲ. ಕರ್ಮಣಿ ಪ್ರಯೋಗದಲ್ಲಿ ಕರ್ತೃವಿಗೆ ತೃತೀಯಾ ವಿಭಕ್ತಿಯೂ, ಕರ್ಮಕ್ಕೆ ಪ್ರಥಮಾ ವಿಭಕ್ತಿಯೂ ಬಂದು ಧಾತುವಿಗೆ ಯಕ್ ಪ್ರತ್ಯಯ, ಆತ್ಮನೇ ಪದ ಪ್ರತ್ಯಯಗಳು ಬರುತ್ತವೆ.

ಕರ್ತೃಸಂಖ್ಯಾಭಿಹಿತವಾಗಲು ಪ್ರಯೋಜಕವನ್ನು ತೋರಿಸುತ್ತಾನೆ. 'ಸಂಖ್ಯಾಭಿ—' ಇತಿ. ಕರ್ಮತ್ವಾದಿ ಧರ್ಮದಿಂದ ಕೂಡಿರದೆ ಪ್ರಥಮಾವಿಭಕ್ತ್ಯಂತ ಪದದಿಂದ ಸ್ಮೃತಿವಿಷಯವಾಗಿರುವುದು. (ಸ್ಮೃತಿವಿಷಯತಾಂ ಪ್ರಾಪಿತಃ) ಇದೇ

ಸಂಖ್ಯಾಭಿಧಾನಯೋಗ್ಯವಾದುದು. ಕರ್ಮತ್ವಾದ್ಯನನರುದ್ಧ ಪದಕ್ಕೆ ಯಥಾಶ್ರುತವಾಗಿ ಕರ್ಮತ್ವಾದ್ಯನವಚ್ಛಿನ್ನವೆಂದು ಅರ್ಥ ಕಲ್ಪಿಸಿದರೆ ಕೆಲವು ಕಡೆ ದೋಷ ಬರುತ್ತದೆ. 'ಚೈತ್ರ ಇವ ಮೈತ್ರೋ ಗಚ್ಛತಿ' ಇಲ್ಲಿ ಆಖ್ಯಾತಾರ್ಥ ಸಂಖ್ಯೆಗೆ ಹೇಗೆ ಮೈತ್ರನಲ್ಲಿ ಅನ್ವಯವೋ ಹಾಗೆಯೇ ಚೈತ್ರನಲ್ಲಿಯೂ ಅನ್ವಯ ಬರಲಿ. ಚೈತ್ರನೂ ಕರ್ಮತ್ವಾದಿ ಧರ್ಮಾನವಚ್ಛಿನ್ನವಾಗಿ ಪ್ರಥಮಾಂತಪದದಿಂದ ಉಪಸ್ಥಿತಿ ವಿಷಯನಾಗಿರುತ್ತಾನೆ. 'ಪಕ್ವಮನ್ನಂ ಭುಜ್ಯತೇ' ಎಂಬಲ್ಲಿ ಅನ್ನಕ್ಕೆ ಪಾಕಕರ್ಮತ್ವರೂಪದಿಂದ ಅನ್ವಯವಿರು ವುದರಿಂದ ಕರ್ಮತ್ವಾದ್ಯನವರುದ್ಧತ್ವ ಬಾರದಿರುವುದರಿಂದ ಆಖ್ಯಾತ ಸಂಖ್ಯೆಗೆ ಅನ್ನದಲ್ಲಿ ಅನ್ವಯವಿರದೇ ಹೋಗಬೇಕಾಗುತ್ತದೆ. ಆದುದರಿಂದ ಪರಿಷ್ಕೃತ ಲಕ್ಷಣವನ್ನು ತೋರಿಸುತ್ತಾನೆ. 'ಕರ್ಮತ್ವ—' ಇತಿ. ಕರ್ಮತ್ವಾದಿಪದಕ್ಕೆ ಇತರ ವೆಂದರ್ಥ. ಅನವರುದ್ಧ ಪದಕ್ಕೆ ವಿಶೇಷಣತಾರೂಪದಿಂದ ಅವಿವಕ್ಷಿತವೆಂದರ್ಥ. 'ಕರ್ಮತ್ವಾ—' ಎಂಬುದಕ್ಕೆ 'ಇತರ ವಿಶೇಷಣತಯಾ ತಾತ್ಪರ್ಯಾವಿಷಯತ್ವಂ' ಎಂಬುದು ಪಾರಿಭಾಷಿ ಕಾರ್ಥವಾಗುತ್ತದೆ. ಇತರ ವಿಶೇಷಣತ್ವೇನ ತಾತ್ಪರ್ಯವಿಲ್ಲದೆ (ತಾತ್ಪರ್ಯ ಅವಿಷಯ ನಾಗಿ) ಪ್ರಥಮಾಂತ ಪದೋಪಸ್ಥಾಪ್ಯನಾದ ಕರ್ತೃವೇ ಸಂಖ್ಯಾಭಿಧಾನಯೋಗ್ಯನಾಗು ತ್ತಾನೆ. ಪ್ರಕೃತ ಆಖ್ಯಾತಾರ್ಥ ಸಂಖ್ಯೆಗೆ ಮೈತ್ರನಲ್ಲಿ ಅನ್ವಯವಿರುವಂತೆ ಚೈತ್ರನಲ್ಲಿ ಅನ್ವಯ ಬರುವುದಿಲ್ಲ. ಚೈತ್ರನಿಗೆ ಇವಾರ್ಥವಾದ ಸಾದೃಶ್ಯದಲ್ಲಿ ವಿಶೇಷಣತ್ವೇನ ತಾತ್ಪರ್ಯವಿದೆ. ಇವಾರ್ಥಸಾದೃಶ್ಯದಲ್ಲಿ ಚೈತ್ರನು ವಿಶೇಷಣನಾಗಿರುತ್ತಾನೆ. 'ಚೈತ್ರ ನಿರೂಪಿತಂ ಯತ್ಸಾದೃಶ್ಯಂ, ತೇನ ಯದ್ಗಮನಂ ತಾದೃಶಗಮನಾನುಕೂಲಾ ಯಾ ವರ್ತಮಾನಕಾಲಿಕಾ ಕೃತಿಃ, ತಾದೃಶಕೃತ್ಯಾಶ್ರಯಃ ಏಕತ್ವಸಂಖ್ಯಾವಿಶಿಷ್ಟಃ ಮೈತ್ರಃ' ಎಂದು ಆ ವಾಕ್ಯದ ಶಾಬ್ದಬೋಧ. ಚೈತ್ರನು ಇತರ ವಿಶೇಷಣತ್ವೇನ ತಾತ್ಪರ್ಯ ವಿಷಯನಾದುದರಿಂದ ಸಂಖ್ಯಾಭಿಧಾನಯೋಗ್ಯ ಕರ್ತೃ ಆಗುವುದಿಲ್ಲ. ಪ್ರಥಮಾಂತ ಪದೋಪಸ್ಥಾಪ್ಯಪದ ಪ್ರಯೋಜನ ತೋರಿಸುತ್ತಾನೆ. 'ಯತ್ರ—' ಇತಿ. 'ಚೈತ್ರಃ ತಂಡುಲಂ ಪಚತಿ' ಎಂಬಲ್ಲಿ ತಂಡುಲವು ಕರ್ಮವಾಗಿದೆ. ಇದಕ್ಕೆ ಇತರ ವಿಶೇಷಣ ತ್ವೇನ ತಾತ್ಪರ್ಯವಿಷಯತ್ವವಿಲ್ಲ. ಆದುದರಿಂದ 'ಕರ್ಮತ್ವಾದ್ಯನವರುದ್ಧತ್ವಂ' ಎಂದು ಒಂದೇ ಪದ ಹೇಳಿ ಅದಕ್ಕೆ ಪಾರಿಭಾಷಿಕಾರ್ಥಸ್ವೀಕಾರ ಮಾಡಿದರೆ ಆಗ ಆಖ್ಯಾತಾರ್ಥ ಸಂಖ್ಯೆಗೆ ತಂಡುಲದಲ್ಲಿ ಅನ್ವಯ ಬರಬೇಕಾಗುತ್ತದೆ. ಅದು ಯಾವುದಕ್ಕೂ ವಿಶೇಷಣ ವಾಗಿಲ್ಲ. ಯಾವುದಕ್ಕಾದರೂ ವಿಶೇಷಣವಾಗಲಿ ಎಂಬ ತಾತ್ಪರ್ಯವೂ ಇಲ್ಲ. ಹೀಗೆಯೇ 'ಚೈತ್ರೇಣ ಸುಪ್ಯತೇ' ಎಂಬಲ್ಲಿ ಧಾತ್ವರ್ಥವಾದ ಸ್ವಾಪದಲ್ಲಿ ಸಂಖ್ಯೆಗೆ ಅನ್ವಯ ವಿಲ್ಲದೆ ಚೈತ್ರನಲ್ಲಿ ಅನ್ವಯ ಬರಬೇಕಾಗುತ್ತದೆ. ಇತರ ವಿಶೇಷಣತ್ವೇನ ತಾತ್ಪರ್ಯಾ ವಿಷಯತ್ವ ಚೈತ್ರನಲ್ಲಿರುವುದರಿಂದ ಅವನಿಗೂ ಸಂಖ್ಯಾಭಿಧಾನಯೋಗ್ಯತಾ ಬರಬೇಕಾಗು ತ್ತದೆ. ಹಾಗೆ ಒಪ್ಪಿದರೆ ಭಾವೇ ಪ್ರಯೋಗದಲ್ಲಿಯೂ 'ಚೈತ್ರಾಭ್ಯಾಂ ಸುಪ್ಯೇತೇ' ಇತ್ಯಾದಿ ಪ್ರಯೋಗ ಬರಬೇಕಾಗುತ್ತದೆ. ಆದುದರಿಂದ 'ಪ್ರಥಮಾಂತಪದೋಪಸ್ಥಾ

ಪ್ಯತ್ವೇ ಸತಿ' ಎಂದು ಹೇಳಿದೆ. ಪ್ರಕೃತ 'ತಂಡುಲಂ' 'ಚೈತ್ರೇಣ' ಎಂಬಲ್ಲಿ ಪ್ರಥಮಾಂತಪದೋಪಸ್ಥಾಪ್ಯತ್ವವಿಲ್ಲದಿರುವುದರಿಂದ ಆಖ್ಯಾತಾರ್ಥಸಂಖ್ಯಾನ್ವಯವಿಲ್ಲ.

ವೈಯಾಕರಣಮತದಲ್ಲಿ 'ಭಾವಪ್ರಧಾನಮಾಖ್ಯಾತಂ' ಎಂಬ ವಚನದಿಂದ ವ್ಯಾಪಾರ ಮುಖ್ಯ ವಿಶೇಷ್ಯಕಬೋಧ ಹೇಳುವುದರಿಂದ ಕರ್ತೃ ಯಾವಾಗಲೂ ವಿಶೇಷಣವಾಗಿಯೇ ಇರುತ್ತದೆ. ಆಗ 'ಇತರ ವಿಶೇಷಣವಾಗಿ ತಾತ್ಪರ್ಯ ಅವಿಷಯವಾಗಬೇಕು' ಎಂದು ಹೇಳಿರುವುದು ಅಸಂಗತವಾಗುತ್ತದೆ. ಆದಕ್ಕೋಸ್ಕರ 'ಕರ್ಮ....ದ್ಧ' ಪದಕ್ಕೆ ಬೇರೆ ರೀತಿಯಿಂದ ಪರಿಷ್ಕಾರ ತೋರಿಸುತ್ತಾನೆ. 'ಯದ್ವಾ' ಇತಿ. 'ಇತರ ವಿಶೇಷಣತ್ವ ತಾತ್ಪರ್ಯಾವಿಷಯತ್ವಂ' ಎಂಬುದಕ್ಕೆ 'ಧಾತ್ವರ್ಥಾತಿರಿಕ್ತಾ ವಿಶೇಷಣತ್ವಂ' ಎಂದು ಅರ್ಥ. ಪ್ರಥಮದಳವಾದ 'ಕರ್ಮತ್ವಾದ್ಯನವರುದ್ಧ' ಪದಕ್ಕೆ ಹೀಗೆ ಅರ್ಥ ಹೇಳಬೇಕೆಂದರ್ಥ. ಹೀಗೆ ಅರ್ಥಕಲ್ಪಿಸಿರುವುದರಿಂದ 'ಚೈತ್ರ ಇವ ಮೈತ್ರೋ ಗಚ್ಛತಿ' ಎಂಬಲ್ಲಿ ಚೈತ್ರನಿಗೆ ಸಂಖ್ಯಾಭಿಧಾನಯೋಗ್ಯತ್ವ ಬರುವುದಿಲ್ಲ. ಏಕೆಂದರೆ ಧಾತ್ವರ್ಥಾತಿರಿಕ್ತವಾದ ಇವಾರ್ಥ ಸಾದೃಶ್ಯದಲ್ಲಿಯೂ ವಿಶೇಷಣತ್ವೇನ ತಾತ್ಪರ್ಯ ವಿಷಯತ್ವವಿದೆ. ಸಾದೃಶ್ಯದಲ್ಲಿ ವಿಶೇಷಣವಾಗಲಿ ಎಂಬ ತಾತ್ಪರ್ಯ ಅಲ್ಲಿ ತೋರುತ್ತದೆ. 'ಸ್ತೋಕಂ ಪಚತಿ' (ಸ್ವಲ್ಪ ಬೇಯಿಸುತ್ತಾನೆ.) ಎಂಬಲ್ಲಿ ಆಖ್ಯಾತಾರ್ಥ ಸಂಖ್ಯೆಗೆ ಸ್ತೋಕಪದಾರ್ಥದಲ್ಲಿ ಅನ್ವಯವಾರಣೆಗೋಸ್ಕರ 'ಪ್ರಥಮಾಂತಪದೋಪಸ್ಥಾಪ್ಯತ್ವಂ' ಎಂದು ದ್ವಿತೀಯ ದಳ ಹೇಳಿದೆ.

ಸ್ತೋಕಾದಿಪದಾರ್ಥಗಳು ಕ್ರಿಯಾವಿಶೇಷಣಗಳಾದುದರಿಂದ ಧಾತ್ವರ್ಥಾತಿರಿಕ್ತದಲ್ಲಿ ವಿಶೇಷಣಗಳಾಗಿರುವುದಿಲ್ಲ. ಆದುದರಿಂದ ಆಖ್ಯಾತಾರ್ಥಸಂಖ್ಯೆಗೆ ಅಲ್ಲಿ ಅನ್ವಯ ಬರಬೇಕಾಗುತ್ತದೆ. ಆದರೆ 'ಪ್ರಥಮಾಂತಪದೋಪಸ್ಥಾಪ್ಯರೂಪದ್ವಿತೀಯದಳ ಕೊಟ್ಟದ್ದರಿಂದ ಅದು ದ್ವಿತೀಯಾಂತವಾದುದರಿಂದ ಸಂಖ್ಯಾನ್ವಯ ಬರುವುದಿಲ್ಲ. 'ಕ್ರಿಯಾ ವಿಶೇಷಣಾನಾಂ ಕರ್ಮತ್ವಂ ನಪುಂಸಕಲಿಂಗತಾಚ' ಎಂದು ಅನುಶಾಸನದಿಂದ ಕರ್ಮತ್ವದಿಂದ ದ್ವಿತೀಯಾ ವಿಭಕ್ತಿಯೂ, ನಪುಂಸಕಲಿಂಗವೂ ಬರುತ್ತದೆ. ಹೀಗೆ ನೈಯಾಯಿಕ ಮತದಲ್ಲಿ 'ಲಃಕರ್ಮಣಿ—' ಇತ್ಯಾದಿ ಸೂತ್ರದಲ್ಲಿ ಕರ್ತೃ ಪದಕ್ಕೆ 'ಕರ್ತೃತ್ವಂ' ಎಂದರ್ಥ. ಕಾರಕಸ್ಥಳದಲ್ಲಿ 'ಕರ್ಮಣಿ ದ್ವಿತೀಯಾ' ಇತ್ಯಾದಿ ಸ್ಥಳದಲ್ಲಿಯೂ ಕರ್ಮಾದಿ ಪದಗಳಿಗೆ 'ಕರ್ಮತ್ವಂ' ಇತ್ಯಾದ್ಯರ್ಥ ಹೇಳುತ್ತಾರೆ. ಹೀಗೆ ಲಕ್ಷಣಾ ವೃತ್ತಿಯಿಂದ ಧರ್ಮಾರ್ಥವನ್ನು ಹೇಳುವುದರಿಂದ ವೈಯಾಕರಣರಿಂದ ಬೇರೆಯಾಗಿ ಅರ್ಥ ಕಲ್ಪಿಸಿದಂತಾಗುತ್ತದೆ. ಸಾಮಾನ್ಯವಾಗಿ ಸಕರ್ಮಕ ಧಾತುಗಳ ಮೇಲೆ ಯಕ್ ಬಾರದೆ ಲಕಾರ ಬಂದಿದ್ದರೆ ಆಗ ಅಲ್ಲಿ ಕರ್ತೃತ್ವವಾಚಕತ್ವ ವಿದೆಯೆಂದೂ, ಅಲ್ಲಿಯೇ ಯಕ್ ಬಂದು ಲಕಾರ ಬಂದಿದ್ದರೆ ಅಲ್ಲಿ ಕರ್ಮತ್ವವಾಚಕವನ್ನೂ, ಅಕರ್ಮಕ ಧಾತುಗಳ ಮೇಲೆ ಯಕ್ ಬಾರದೆ ಲಕಾರ ಬಂದಿದ್ದರೆ ಕರ್ತೃತ್ವ ವಾಚಕವನ್ನೂ, ಯಕ್ ಬಂದು ಲಕಾರ ಬಂದಿದ್ದರೆ ಯಾವ ಅರ್ಥವೂ ಇಲ್ಲವೆಂದೂ ತಿಳಿಯಬೇಕು.

ಏವಂ ವ್ಯಾಪಾರೇಽಪಿ ನ ಶಕ್ತಿರ್ಗೌರವಾತ್ । ರಥೋ ಗಚ್ಛತೀತ್ಯಾದೌ ತು ಸ್ವವ್ಯಾಪಾರೇ ಆಶ್ರಯತ್ವೇ ವಾ ಲಕ್ಷಣಾ। ಜಾನಾತೀತ್ಯಾದೌತು ಆಶ್ರಯತ್ವೇ, ನಶ್ಯತೀತ್ಯಾದೌ ಪ್ರತಿಯೋಗಿತ್ವೇ ನಿರೂಢಲಕ್ಷಣಾ ॥

ಲಕಾರ ಸಾಮಾನ್ಯಕ್ಕೆ ಅನುಕೂಲ ವ್ಯಾಪಾರದಲ್ಲಿ ಶಕ್ತಿಯೆಂದು ಮೀಮಾಂಸಕರ ಮತ. ಇದೂ ತಪ್ಪೆಂದು ತೋರಿಸುತ್ತಾನೆ. 'ಏವಂ—' ಇತಿ. ಹೇಗೆ ಲಕಾರಕ್ಕೆ ಕರ್ತೃವಿನಲ್ಲಿ ಶಕ್ತಿ ಇಲ್ಲವೋ ಹಾಗೆ ವ್ಯಾಪಾರದಲ್ಲಿ ಶಕ್ತಿ ಇಲ್ಲ. ವ್ಯಾಪಾರವು ಲಕಾರ ವಾಚ್ಯವಾಗುವುದಿಲ್ಲವೆಂದರ್ಥ. ಕರ್ತೃವಿನಲ್ಲಿ ಶಕ್ತಿ ಹೇಳಿದರೆ ಕರ್ತೃತ್ವ ಶಕ್ಯತಾವಚ್ಛೇದಕವಾಗುವುದರಿಂದ ಹೇಗೆ ಗೌರವವೋ ಹಾಗೆ ವ್ಯಾಪಾರದಲ್ಲಿ ಶಕ್ತಿ ಹೇಳಿದರೆ ಜನ್ಯತ್ವಾದಿ ಘಟಿತವಾದ ವ್ಯಾಪ್ಯಾರತ್ವವೂ ಗುರುವಾಗುವುದರಿಂದ ಗೌರವದೋಷ ಗ್ರಸ್ತವಾಗುತ್ತದೆ. 'ತಜ್ಜನ್ಯತ್ವೇ ಸತಿ ತಜ್ಜನ್ಯಜನಕತ್ವಂ' ಎಂದು ವ್ಯಾಪಾರ ಲಕ್ಷಣ ಹೇಳಿದೆ. ಈ ಜನ್ಯತ್ವಾದಿಧರ್ಮ ಘಟಿತವಾದ ವ್ಯಾಪಾರ ಲಕ್ಷಣದಿಂದ ಕೂಡಿದ ವ್ಯಾಪಾರಕ್ಕೆ ಯತ್ನತ್ವ ಜಾತಿಗಿಂತ ಶಕ್ಯತಾವಚ್ಛೇದಕಾಂಶದಲ್ಲಿ ಅಧಿಕವಾದುದರಿಂದ ಗೌರವ ಬರುತ್ತದೆ. ಆದುದರಿಂದ ಲಕಾರಕ್ಕೆ ವ್ಯಾಪಾರವಲ್ಲಿ ಶಕ್ತಿ ಹೇಳಿರುವುದು ಸಮಂಜಸವಲ್ಲ. ನೈಯಾಯಿಕಮತದಲ್ಲಿಯೂ ಕೆಲವು ಕಡೆ ವ್ಯಾಪಾರದಲ್ಲಿಯೇ ಶಕ್ತಿ ಹೇಳಬೇಕು 'ರಥೋ ಗಚ್ಛತಿ' ಎಂಬಲ್ಲಿ ರಥದಲ್ಲಿ ಅಚೇತನವಾದುದರಿಂದ ಯತ್ನರೂಪಕೃತಿ ಇಲ್ಲದಿರುವುದರಿಂದ ಕೇವಲ ವ್ಯಾಪಾರವಲ್ಲಿ ಶಕ್ತಿ ಹೇಳಬೇಕು ಎಂದು ಆಕ್ಷೇಪಿಸಿದರೆ ಆಗ ಸಿದ್ಧಾಂತವನ್ನು ತೋರಿಸುತ್ತಾನೆ. 'ರಥಃ—'ಇತಿ. ಗಚ್ಛತಿ ಎಂಬಲ್ಲಿ ಗಮನಾನುಕೂಲಕೃತಿರೂಪವಾದ ಆಖ್ಯಾತಾರ್ಥವು (ಮುಖ್ಯತಾರ್ಥವಾಗಿ) ಜಡವಾದ ರಥದಲ್ಲಿ ಕೂಡದಿರುವುದರಿಂದ ಅನ್ವಯಬಾಧ ಬಂದು ಗಮನಾನುಕೂಲವ್ಯಾಪಾರದಲ್ಲಿ ನಿರೂಢಿಲಕ್ಷಣಾವೃತ್ತಿಯನ್ನು ಅಂಗೀಕರಿಸುತ್ತೇವೆ. ಅಲ್ಲಿ ಶಕ್ತಿಯನ್ನು ಅಂಗೀಕರಿಸುವುದಿಲ್ಲ. ಆಗ 'ಗಮನಾನುಕೂಲ ವ್ಯಾಪಾರವಾನ್ ರಥಃ' ಎಂದು ಶಾಬ್ದಬೋಧ ಬರುತ್ತದೆ. ನವೀನ ಮತದಂತೆ ಸಿದ್ಧಾಂತ ತೋರಿಸುತ್ತಾನೆ. 'ಆಶ್ರಯತ್ವೇ—' ಇತಿ. ಗಮನಾನುಕೂಲವ್ಯಾಪಾರವುಳ್ಳದ್ದು ರಥವೆಂಬ ಬೋಧ ಪ್ರಸಿದ್ಧವಾಗಿಲ್ಲವಾದುದರಿಂದ ನವೀನರು ಇಂತಹ ಸ್ಥಳದಲ್ಲಿ ಲಕ್ಷಣಾವೃತ್ತಿಯಿಂದ ಕೇವಲ ಗಮನಾಶ್ರಯತ್ವ ರೂಪಾರ್ಥವನ್ನು ಹೇಳುತ್ತಾರೆ. 'ಗಮನಾನುಕೂಲವ್ಯಾಪಾರಾಶ್ರಯತ್ವಧರ್ಮಾವಚ್ಛಿನ್ನಃ' ರಥಃ ಎಂದು ಬೋಧ ಬರುತ್ತದೆ. 'ಜಾನಾತಿ, ಇಚ್ಛತಿ, ಯತತೇ' ಎಂಬಲ್ಲಿಯೂ ಆಖ್ಯಾತಕ್ಕೆ ಆಶ್ರಯತ್ವರೂಪಾರ್ಥದಲ್ಲಿ ಲಕ್ಷಣಾ. ಧಾತುಗಳಿಗೆ ಜ್ಞಾನಾದ್ಯರ್ಥ. ಜ್ಞಾನಾಶ್ರಯಃ, ಇಚ್ಛಾಶ್ರಯಃ, ಯತ್ನಾಶ್ರಯಃ ಎಂದು ಬೋಧ ತಿಳಿಯಬೇಕು. 'ನಶ್ಯತಿ' ಇತ್ಯಾದಿ ಸ್ಥಳದಲ್ಲಿ ಆಖ್ಯಾತಕ್ಕೆ ಕೇವಲ ಪ್ರತಿಯೋಗಿತ್ವರೂಪಾರ್ಥವನ್ನು ಲಕ್ಷಣೆಯಿಂದ ಹೇಳಬೇಕು. 'ಘಟೋ ನಶ್ಯತಿ' ಎಂಬಲ್ಲಿ 'ನಾಶಪ್ರತಿಯೋಗೀ ಘಟಃ' ಎಂದು ಬೋಧ ವುಂಟಾಗುತ್ತದೆ. ಅನುಕೂಲವ್ಯಾಪಾರಾರ್ಥ ಹೇಳಿದರೆ 'ಧ್ವಂಸಾನುಕೂಲವ್ಯಾಪಾರಾಶ್ರಯಃ

ಘಟಃ' ಎಂದು ಶಾಬ್ದಬೋಧ. ಆಖ್ಯಾತಕ್ಕೆ ಅನುಕೂಲವ್ಯಾಪಾರರೂಪಾರ್ಥ ಮೀಮಾಂಸಕಮತದಲ್ಲಿ. ಆಗ 'ರಥೋ ಗಚ್ಛತಿ' ಎಂಬಲ್ಲಿ 'ಗಮನಾನುಕೂಲವ್ಯಾಪಾರವಾನ್ ರಥಃ' ಎಂದು ಶಕ್ತಿಯಿಂದಲೇ ಶಾಬ್ದಬೋಧ. ಇದನ್ನು ನೈಯಾಯಿಕರು ಖಂಡಿಸುತ್ತಾರೆ. ಶಕ್ಯತಾವಚ್ಛೇದಕ (ಯತ್ನತ್ವ, ಕೃತಿತ್ವ.) ಲಾಘವ ವಿರುವುದರಿಂದ ಆಖ್ಯಾತಕ್ಕೆ ಕೃತಿಯಲ್ಲಿಯೇ ಶಕ್ತಿ. ಸಂಸರ್ಗಮರ್ಯಾದೆಯಿಂದ ಕೃತಿಯಲ್ಲಿ ಅನುಕೂಲತಾ ಪ್ರತೀತಿ ಬರುತ್ತದೆ. ಧಾತುವಿಗೆ ಫಲ, ವ್ಯಾಪಾರ ಅರ್ಥ. ಕೆಲವು ಕಡೆ ಕೇವಲ ಫಲ, ಕೆಲವು ಕಡೆ ಕೇವಲ ವ್ಯಾಪಾರ ಅರ್ಥ. ಜಾನಾತಿ ಇತ್ಯಾದಿ ಧಾತು ಸ್ಥಳದಲ್ಲಿ ಜ್ಞಾನಾದಿ ಫಲ ಮಾತ್ರ ಧಾತ್ವರ್ಥ. ಜ್ಞಾನಾನುಕೂಲಕೃತಿ ಸಂಭವಿಸದಿರುವುದರಿಂದ ಅಲ್ಲಿ ಲಕ್ಷಣೆಯಿಂದ ಆಖ್ಯಾತಕ್ಕೆ ಆಶ್ರಯತ್ವ ಅರ್ಥ. 'ಜ್ಞಾನಾಶ್ರಯಃ' ಎಂದು ಶಾಬ್ದಬೋಧ. 'ರಥೋ ಗಚ್ಛತಿ' ಇತ್ಯಾದಿ ಸ್ಥಳದಲ್ಲಿ ಲಕ್ಷಣೆಯಿಂದ ವ್ಯಾಪಾರಾರ್ಥ ಸ್ವೀಕಾರ ಮಾಡುವುದರಿಂದ 'ವ್ಯಾಪಾರಾಶ್ರಯಃ ರಥಃ' ಎಂದು ಬೋಧ ಬರುತ್ತದೆ. 'ಚೈತ್ರಃ ತಂಡುಲಂ ಪಚತಿ' ಎಂಬಲ್ಲಿ 'ಕರ್ಮತ್ವ' ದ್ವಿತೀಯಾ ವಿಭಕ್ತಿಯ ಅರ್ಥ. 'ಆಧೇಯತಾ ಸಂಬಂಧದಿಂದ ತಂಡುಲಕ್ಕೆ ಕರ್ಮತ್ವದಲ್ಲಿ ಅನ್ವಯ.' 'ತಂಡುಲನಿಷ್ಠಕರ್ಮತ್ವಂ ' ಕರ್ಮತ್ವಕ್ಕೆ ಧಾತ್ವರ್ಥಪಾಕದಲ್ಲಿಯೂ ಪಾಕಕ್ಕೆ ಆಖ್ಯಾತಾರ್ಥ ಕೃತಿಯಲ್ಲಿ ಅನುಕೂಲತಾ (ಜನಕತ್ವ) ಸಂಬಂಧದಿಂದಲೂ ಅನ್ವಯ. ಕೃತಿಗೆ ಆಶ್ರಯತಾ ಸಂಬಂಧದಿಂದ ಪ್ರಥಮಾಂತ ಚೈತ್ರನಲ್ಲಿ ಅನ್ವಯ. ಆಗ 'ತಂಡುಲನಿಷ್ಠಕರ್ಮತ್ವನಿರೂಪಕ ಪಾಕಾನುಕೂಲ ವರ್ತಮಾನಕಾಲಿಕ ಕೃತ್ಯಾಶ್ರಯಃ ಚೈತ್ರಃ' ಎಂದು ಬೋಧವಾಗುತ್ತದೆ. 'ಚೈತ್ರೇಣ ತಂಡುಲಃ ಪಚ್ಯತೇ' ಎಂಬಲ್ಲಿ ತೃತೀಯಾ ವಿಭಕ್ತಿಗೆ ಕೃತಿ ಅರ್ಥ. ಕೃತಿಯಲ್ಲಿ ಆಧೇಯತಾ ಸಂಬಂಧದಿಂದ ಚೈತ್ರನಿಗೆ ಅನ್ವಯ. ಕೃತಿಗೆ ಧಾತ್ವರ್ಥಪಾಕದಲ್ಲಿಯೂ, ಅದಕ್ಕೆ ಆತ್ಮನೇಪದಾರ್ಥಫಲದಲ್ಲಿಯೂ (ಕರ್ಮಣಿಯಲ್ಲಿ ಆಖ್ಯಾತಾರ್ಥಕ್ಕೆ ಫಲ ಅರ್ಥ.) ಫಲಕ್ಕೆ ಆಶ್ರಯತಾ ಸಂಬಂಧದಿಂದ ತಂಡುಲದಲ್ಲಿಯೂ ಅನ್ವಯ. ಆಗ 'ಚೈತ್ರನಿಷ್ಠಕೃತಿಜನ್ಯಪಾಕಜನ್ಯಫಲಾಶ್ರಯಸ್ತಂಡುಲಃ' ಎಂದು ಶಾಬ್ದಬೋಧ ಬರುತ್ತದೆ. ಕೃತ್ ಪ್ರತ್ಯಯಗಳಿಗೆ ಕರ್ತೃ, ಕರ್ಮಾದಿ ಧರ್ಮಿಯೇ ಅರ್ಥ. 'ಚೈತ್ರಃ ಪಕ್ತಾ' ಎಂಬಲ್ಲಿ 'ಪಾಕಕರ್ತ್ರಭಿನ್ನಶ್ಚೈತ್ರಃ' ಎಂದು ಶಾಬ್ದಬೋಧ. 'ತಂಡುಲಃ ಪಕ್ವಃ' ಎಂಬಲ್ಲಿ 'ಪಾಕಕರ್ಮಾಭಿನ್ನಸ್ತಂಡುಲಃ' ಎಂದು ಶಾಬ್ದಬೋಧ ತಿಳಿಯಬೇಕು.

ಉಪಮಾನಾದ್ಯಥಾ ಶಕ್ತಿಗ್ರಹಸ್ತಥೋಕ್ತಮ್ । ಏವಂ ಕೋಶಾದಪಿ ಶಕ್ತಿಗ್ರಹಃ ಸತಿ ಬಾಧಕೇ ಕ್ವಚಿತ್ತ್ಯಜ್ಯತೇ । ಯಥಾ ನೀಲಾದಿಪದಾನಾಂ ನೀಲರೂಪಾದೌ ನೀಲವಿಶಿಷ್ಟೇ ಚ ಶಕ್ತಿಃ, ಕೋಶೇನ ವ್ಯುತ್ಪಾದಿತಾ ತಥಾಪಿ ಲಾಘವಾನ್ನೀಲಾದಾವೇವ ಶಕ್ತಿಃ । ನೀಲಾದಿವಿಶಿಷ್ಟೇ ತು ಲಕ್ಷಣೇತಿ ॥

ಉಪಮಾನದಿಂದ ಶಕ್ತಿ ಗ್ರಹ ಬರುವುದನ್ನು ಹಿಂದೆ ಹೇಳಿರುವುದರಿಂದ ಪುನಃ ಹೇಳ

ಬೇಕಾಗಿಲ್ಲ. ಗೋನಿರೂಪಿತ ಗವಯನಿಷ್ಠ ಸಾದೃಶ್ಯಸಾಕ್ಷಾತ್ಕಾರರೂಪ ಉಪಮಾನದಿಂದ 'ಗವಯಃ ಗವಯಪದವಾಚ್ಯಃ' ಎಂದು ಶಕ್ತಿಗ್ರಹ ಬರುತ್ತದೆಂದು ಅಲ್ಲಿ ಹೇಳಿದೆ. ಕೋಶಾದಿಗಳಿಂದಲೂ ಶಕ್ತಿ ಜ್ಞಾನ ಬರುತ್ತದೆ. ಸ್ವಸಮಾನಾರ್ಥಕಶಬ್ದ ಸಮೂಹಕ್ಕೆ ಕೋಶವೆಂದು ಹೆಸರು. 'ಅಮರಾ ನಿರ್ಜರಾ ದೇವಾಃ—' ಇತ್ಯಾದಿಗಳಿಂದ ದೇವತಾರ್ಥ ದಲ್ಲಿ ಅಮರಾದಿಪದಗಳ ಶಕ್ತಿ ಜ್ಞಾನ ಬರುತ್ತದೆ. ಇಲ್ಲಿಯೂ ಬಾಧಕ ಬರುವುದಾದರೆ ಅದನ್ನು ಸ್ವೀಕರಿಸುವುದಿಲ್ಲವೆಂದು ತೋರಿಸುತ್ತಾನೆ. 'ಸತಿ—' ಇತಿ. 'ಗುಣೇ ಶುಕ್ಲಾದಯಃ ಪುಂಸಿ ಗುಣಿಲಿಂಗಾಸ್ತು ತದ್ವತಿ' ಎಂದು ಅಮರ. ಇದರಿಂದ ಶುಕ್ಲಾದಿ ಶಬ್ದಗಳಿಗೆ ಶುಕ್ಲಾದಿಗುಣ ರೂಪಾರ್ಥದಲ್ಲಿ ಶಕ್ತಿಯೆಂದೂ, ಶುಕ್ಲಾದಿಗುಣ ವಿಶಿಷ್ಟವಾದ ಪಟಾದಿಗಳಲ್ಲಿಯೂ ಶಕ್ತಿಯೆಂದು ತಿಳಿಯುತ್ತದೆ. ಧರ್ಮ, ಧರ್ಮಿ ಹೀಗೆ ಉಭಯಶಕ್ತಿ ಗ್ರಾಹಕತ್ವ ಕೋಶದಿಂದ ಲಬ್ಧವಾದರೂ ಉಪಸ್ಥಿತಿ ಲಾಘವದಿಂದ ಕೇವಲ ಶುಕ್ಲಾದಿ ಗುಣದಲ್ಲಿಯೇ ಶಕ್ತಿ ಹೇಳಬೇಕೆಂದು ನೈಯಾಯಿಕ ಸಿದ್ಧಾಂತ. ಶುಕ್ಲಾದಿಗುಣವಿಶಿಷ್ಟ ದಲ್ಲಿಯೂ ಶಕ್ತಿ ಹೇಳಿದರೆ ಆಗ 'ಶುಕ್ಲಾದಿಮತ್ತ್ವವು' ಶಕ್ಯತಾವಚ್ಛೇದಕವಾಗುವುದ ರಿಂದ ಗೌರವ ಬರುತ್ತದೆ. ಶುಕ್ಲಾದಿಗುಣದಲ್ಲಿಯೇ ಶಕ್ತಿ ಹೇಳಿದರೆ ಶುಕ್ಲತ್ವಾದಿಗಳು ಶಕ್ಯತಾವಚ್ಛೇದಕಗಳಾಗುವುದರಿಂದ ಲಾಘವ ಬರುತ್ತದೆ. 'ಶುಕ್ಲಃ ಪಟಃ' ಇತ್ಯಾದಿ ಸ್ಥಳದಲ್ಲಿ ಶುಕ್ಲಪದಕ್ಕೆ ಶುಕ್ಲವಿಶಿಷ್ಟಪಟಾದಿಗಳಲ್ಲಿ ಲಕ್ಷಣಾ ಹೇಳಬೇಕು. ಕೆಲವರು 'ಗುಣವಚನಾತ್ ಮತುಪೋಲುಗಿಷ್ಟಃ' ಎಂಬ ವಾರ್ತಿಕವಿರುವುದರಿಂದ 'ನೀಲೋ ಘಟಃ' ಇತ್ಯಾದಿ ಸ್ಥಳದಲ್ಲಿ ನೀಲಾದಿಗುಣವಾಚಕಪದಗಳ ಮೇಲೆ ವಿಶಿಷ್ಟಾರ್ಥದಲ್ಲಿ ಬಂದ ಮತುಪಿಗೆ ಲುಕ್ ಬಂದುದರಿಂದ ಲುಪ್ತಮತುಪ್ ಪ್ರತ್ಯಯದಿಂದಲೇ ವಿಶಿಷ್ಟಾರ್ಥಬೋಧ ಸಂಭವಿಸುವಾಗ ಲಕ್ಷಣಾವೃತ್ತಿಕಲ್ಪನೆ ಮಾಡಬೇಕಾಗಿಲ್ಲವೆಂದು ಹೇಳುತ್ತಾರೆ. ಶಾಬ್ದ ಬೋಧಬರಬೇಕಾದರೆ ಮೊದಲು ಲುಪ್ತಮತುಬರ್ಥಕಲ್ಪನೆಗಿಂತ ನೀಲಾದಿ ಪದಗಳಿಗೆ ನೀಲಾದಿವಿಶಿಷ್ಟಾರ್ಥದಲ್ಲಿ ಲಕ್ಷಣಾಕಲ್ಪನೆಯೇ ಉಚಿತವೆಂದು ಕೆಲವು ನೈಯಾಯಿಕರ ಸಿದ್ಧಾಂತ.

ಏವಮಾಪ್ತವಾಕ್ಯಾದಪಿ । ಯಥಾ ಕೋಕಿಲಃ ಪಿಕಪದವಾಚ್ಯ ಇತ್ಯಾದಿ ಶಬ್ದಾತ್ ಪಿಕಾದಿಪದಶಕ್ತಿಗ್ರಹಃ । ಏವಂ ವ್ಯವಹಾರಾದಪಿ । ಯಥಾ ಪ್ರಯೋಜಕವೃದ್ಧೇನ ಘಟಮಾನಯೇತ್ಯುಕ್ತಂ,—ತಚ್ಛ್ರುತ್ವಾ ಪ್ರಯೋಜ್ಯವೃದ್ಧೇನ ಘಟ ಆನೀತಃ, ತದವಧಾರ್ಯ ಪಾರ್ಶ್ವಸ್ಥೋ ಬಾಲೋ ಘಟಾನಯನರೂಪಂ ಕಾರ್ಯಂ ಘಟಮಾನ ಯೇತಿ ಶಬ್ದಪ್ರಯೋಜ್ಯಮಿತ್ಯವಧಾರಯತಿ । ತತಶ್ಚ ಘಟಂ ನಯ, ಗಾಮಾನ ಯೇತ್ಯಾದಿವಾಕ್ಯಾತ್, ಆವಾಪೋದ್ವಾಪಾಭ್ಯಾಂ ಘಟಾದಿಪದಾನಾಂ ಕಾರ್ಯಾನ್ವಿತ ಘಟಾದೌ ಶಕ್ತಿಂ ಗೃಹ್ಣಾತಿ । ಇತ್ಥಂ ಚ ಭೂತಲೇ ನೀಲೋಘಟ ಇತ್ಯಾದಿ ಶಬ್ದಾನ್ನ ಶಾಬ್ದಬೋಧಃ ॥

ಪ್ರಯೋಗಕ್ಕೆ ಕಾರಣವಾದ ಯಥಾರ್ಥಜ್ಞಾನವುಳ್ಳವನೇ ಆಪ್ತ. ವಾಸ್ತವ ವಸ್ತು

ಸಾಕ್ಷಾತ್ಕಾರಕ್ಕೆ ಆಪ್ತಿಯೆಂದೂ ಅದರಿಂದ ಪ್ರವರ್ತಿಸುವವನು ಆಪ್ತನೆಂದೂ ಹೇಳುತ್ತಾರೆ. ಇವನು ಹೇಳಿದ ಮಾತಿನಿಂದಲೂ ಶಕ್ತಿ ಗ್ರಹ ಬರುತ್ತದೆ. ಪಿಕವೆಂದರೆ ಏನೆಂದು ಒಬ್ಬನಿಗೆ ತಿಳಿದಿರುವುದಿಲ್ಲ. ಅವನು ಒಬ್ಬ ಆಪ್ತನನ್ನು ಕುರಿತು ಪಿಕಪದವಾಚ್ಯವಾದದ್ದು ಯಾವುದೆಂದು ಕೇಳುತ್ತಾನೆ. ಆಗ ಆ ಆಪ್ತನು ಕೋಗಿಲೆ ಪಿಕಪದದಿಂದ ತೋರುವ ಅರ್ಥವೆಂದು ಹೇಳುತ್ತಾನೆ. ಆಗ ತಿಳಿಯದವನಿಗೆ ಪಿಕಪದಕ್ಕೆ ಕೋಗಿಲೆಯಲ್ಲಿ ಶಕ್ತಿ ಜ್ಞಾನವುಂಟಾಗುತ್ತದೆ.

ಹೀಗೆ ಲೋಕವ್ಯವಹಾರದಿಂದಲೂ ಶಕ್ತಿ ಜ್ಞಾನ ಬರುತ್ತದೆ. ಅದನ್ನು ಅಭಿನಯಿಸಿ ವಿವರಿಸುತ್ತಾನೆ. 'ಯಥಾ—' ಇತಿ. ಇಲ್ಲಿ ಪ್ರಯೋಜಕವೃದ್ಧನೆಂದರೆ ಆಜ್ಞೆ ಮಾಡುವ ಗುರು ಮುಂತಾದವರೆಂದೂ, ಪ್ರಯೋಜ್ಯವೃದ್ಧನೆಂದರೆ ಅವನು ಹೇಳಿದ ಕಾರ್ಯ ಮಾಡುವ ಶಿಷ್ಯಾದಿಗಳೆಂದೂ, ಬಾಲನೆಂದರೆ ಘಟಾದಿಪದಾರ್ಥತಿಳಿಯದ (ಪದಗಳ ಶಕ್ತಿ ಜ್ಞಾನವಿಲ್ಲದವನು.) ಉದಾಸೀನನೆಂದೂ ತಿಳಿಯಬೇಕು. ಬಾಲನೆಂದರೆ ಹಾಲು ಕುಡಿಯುವ ಮಗುವಲ್ಲ. ಆವಾಪ, ಉದ್ವಾಪ ಪದಗಳಿಗೆ ಅನ್ವಯವ್ಯತಿರೇಕವೆಂದರ್ಥ. ಕ್ರಿಯಾಪದವನ್ನು ಪ್ರಯೋಗಿಸಿ ಪುನಃ ತೆಗೆದು ಇನ್ನೊಂದು ಕ್ರಿಯಾ ಪದವನ್ನು ಪ್ರಯೋಗಿಸುವುದು. ಗುರುವು ಶಿಷ್ಯನಿಗೆ 'ಘಟಮಾನಯ' ಎಂದು ಹೇಳುತ್ತಾನೆ. ಶಿಷ್ಯನು ಅದನ್ನು ಕೇಳಿ ಕೊಡವನ್ನು ತರುತ್ತಾನೆ. ಶಬ್ದಜ್ಞಾನವಿಲ್ಲದವನೊಬ್ಬನು ಇದನ್ನು ನೋಡುತ್ತಿರುತ್ತಾನೆ. ಮೊದಲು ಅವನು 'ಘಟಮಾನಯ' ಎಂಬ ವಿಶಿಷ್ಟ ವಾಕ್ಯಕ್ಕೆ ಘಟಾನಯನರೂಪಕಾರ್ಯವೆಂದು ನಿಶ್ಚಯಿಸುತ್ತಾನೆ. ಅನಂತರ ಹೀಗೆಯೇ 'ಘಟಂ ನಯ' 'ಗಾಮಾನಯ' ಎಂದು ಹೇಳಿದಾಗ ಶಿಷ್ಯನ ಕಾರ್ಯವನ್ನು ತಿಳಿದು, ಕ್ರಿಯೆ ವ್ಯತ್ಯಾಸವಾದರೂ ವಸ್ತುವೊಂದೇ ಎಂದು ನೋಡಿ ಮೊದಲು ವಿಶಿಷ್ಟವಾಕ್ಯಕ್ಕೆ ಅರ್ಥ ಗ್ರಹಣ ಮಾಡಿದವನು ಪದಗಳ ಆವಾಪ ಉದ್ವಾಪಗಳಿಂದ ಅನಂತರ ಬೇರೆ ಬೇರೆ ಪದಗಳಿಗೆ ಆಯಾಯ ಅರ್ಥವನ್ನು ನಿಶ್ಚಯಿಸುತ್ತಾನೆ. ಘಟಪದವಿದ್ದರೆ ಕಂಬುಗ್ರೀವಾದಿಮದರ್ಥ. ಅದು ಇಲ್ಲವಾದರೆ ಆ ವಸ್ತುವೂ ಇಲ್ಲ, ಆನಯಪದವಿದ್ದರೆ ಈ ರೀತಿಯಾದ ಕ್ರಿಯೆ, ಆಪದವಿಲ್ಲದಿದ್ದರೆ ಈ ಕ್ರಿಯಾರೂಪಾರ್ಥವೂ ಇಲ್ಲ. ಎಂದು ಅನ್ವಯವ್ಯತಿರೇಕಗಳಿಂದ ಪದಾರ್ಥವನ್ನು ನಿಶ್ಚಯಿಸುತ್ತಾನೆ.

ಈ ವಿಷಯದಲ್ಲಿ ಪ್ರಾಭಾಕರಮೀಮಾಂಸಕರ ಮತವನ್ನು ತೋರಿಸಿ ಖಂಡಿಸುತ್ತಾನೆ. 'ಕಾರ್ಯಾನ್ವಿತ—' ಇತಿ. ಅವರು ಘಟಪದಕ್ಕೆ ಕಂಬುಗ್ರೀವಾದಿಮದ್ವ್ಯಕ್ತಿಯಲ್ಲಿ ಶಕ್ತಿಯೆಂದು ಹೇಳುವುದಿಲ್ಲ. ಕಾರ್ಯಾನ್ವಿತಘಟಾದಿಗಳಲ್ಲಿ ಅಂದರೆ 'ಘಟಪದಂ ಕಾರ್ಯಾನ್ವಿತಘಟರೂಪೇಽರ್ಥೇ ಶಕ್ತಮ್' ಎಂದು ಶಕ್ತಿ ಜ್ಞಾನ ಬರುತ್ತದೆ. ಗುರುವಿನ ಮಾತಿನಂತೆ ಶಿಷ್ಯನು ಘಟಾನಯನದಲ್ಲಿ ಪ್ರವರ್ತಿಸಿದರೆ ಆಗ ಸಮೀಪದಲ್ಲಿರುವವನು ಈ ಶಿಷ್ಯನು ಗುರುವಾಕ್ಯವನ್ನು ಕೇಳಿದೊಡನೆಯೇ ಘಟಾನಯನರೂಪ ವ್ಯಾಪಾರವುಳ್ಳವನಾದುದರಿಂದ ಗುರುವಾಕ್ಯದಿಂದ ಉಂಟಾದ ಅರ್ಥವಿಷಯಕ ಜ್ಞಾನವುಳ್ಳವನು' ಎಂದು ಅನುಮಾನ ಮಾಡುತ್ತಾನೆ. ಹೀಗೆಯೇ 'ಘಟಂನಯ, ಗಾಮಾನಯ' ಎಂದು

ಪ್ರಯೋಜಕ ವೃದ್ಧನ ಮಾತನ್ನು ಕೇಳಿ ಪ್ರಯೋಜ್ಯವೃದ್ಧನು ಹಾಗೆಯೇ ಮಾಡಿದರೆ ಬಾಲನು ಅದನ್ನು ನೋಡಿ ಘಟಪದಕ್ಕೆ ಆನಯನಕಾರ್ಯಾನ್ವಿತಕಂಬುಗ್ರೀವಾದಿಮದ್ವ್ಯಕ್ತಿಯಲ್ಲಿ ಶಕ್ತಿಯನ್ನು ನಿಶ್ಚಯಿಸುತ್ತಾನೆ. ಆದುದರಿಂದ ವ್ಯವಹಾರದಿಂದ ಘಟಾದಿ ಪದಗಳಿಗೆ ಕಾರ್ಯಾನ್ವಿತ ಘಟಾದ್ಯರ್ಥದಲ್ಲಿ ಶಕ್ತಿ ಜ್ಞಾನ ಬರುತ್ತದೆಂದು ಹೇಳಬೇಕು. ಸಾಕ್ಷಾತ್ತಾಗಿ ಅಥವಾ ಪರಂಪರೆ ಯಿಂದಾಗಲೀ ಕಾರ್ಯಾನ್ವಿತವಿಷಯಕ ಶಾಬ್ದಬೋಧ ಬರಬೇಕಾದರೆ ಕಾರ್ಯಾನ್ವಿತಪದವು ಕಾರಣವೆಂದು ಕಾರ್ಯಕಾರಣಭಾವ ಹೇಳುತ್ತಾರೆ. ಲಿಙಾದಿಪದಗಳಿದ್ದರೇ ಕಾರ್ಯಾನ್ವಿತ ವಿಷಯಕಶಾಬ್ದಬೋಧ ಬರುವುದರಿಂದ ಕೋಶಾದಿಗಳಲ್ಲಿ ಲಙಾದಿಗಳು ಇಲ್ಲದಿರುವುದರಿಂದ ಅದರಿಂದ ಶಕ್ತಿ ಜ್ಞಾನ ಬರುವುದಿಲ್ಲ. ಲಙಾದಿಗಳಿದ್ದರೇ ಕಾರ್ಯತಾಬೋಧ ಬರುವುದರಿಂದ 'ಭೂತಲೇ ನೀಲೋ ಘಟಃ' ಇತ್ಯಾದಿ ವಾಕ್ಯಗಳಿಂದ ಶಾಬ್ದಬೋಧ ಬರುವುದಿಲ್ಲ. ಇಂತಹ ವಾಕ್ಯಗಳಲ್ಲಿ ಕಾರ್ಯತಾವಾಚಕಲಿಙಾದಿಗಳಿಲ್ಲವಷ್ಟೆ. ಇವರ ಮತದಲ್ಲಿ ಸಿದ್ಧಾರ್ಥದಲ್ಲಿ ಶಕ್ತಿಯೇ ಇಲ್ಲವೆಂದು ತಾತ್ಪರ್ಯ. ಆದುದರಿಂದ ವೇದದಲ್ಲಿ ಅರ್ಥವಾದ ವಾಕ್ಯಗಳಿಗೆ ಸಿದ್ಧಾರ್ಥಪ್ರತಿಪಾದಕತ್ವವಿರುವುದರಿಂದ ಅಪ್ರಾಮಾಣ್ಯವನ್ನು ಆಶಂಕಿಸಿ ವಿಧಿವಾಕ್ಯಗಳೊಡನೆ ಏಕವಾಕ್ಯವನ್ನು ಕಲ್ಪಿಸಿ ಪ್ರಾಮಾಣ್ಯವನ್ನು ಹೇಳುತ್ತಾರೆ. ವಿಧ್ಯರ್ಥವಾದ ವಾಕ್ಯಗಳಿಗೆ ವಾಕ್ಯೈಕವಾಕ್ಯತ್ವವನ್ನು ಹೇಳಿ ಶಾಬ್ದಬೋಧ ಹೇಳುತ್ತಾರೆ.

ಘಟಾದಿಪದಾನಾಂ ಕಾರ್ಯಾನ್ವಿತಘಟಾದಿಬೋಧೇ ಸಾಮರ್ಥ್ಯಾವಧಾರಣಾತ್, ಕಾರ್ಯತಾಬೋಧಂ ಪ್ರತಿ ಚ ಲಿಙಾದೀನಾಂ ಸಾಮರ್ಥ್ಯಾತ್ತದಭಾವಾನ್ನ ಶಾಬ್ದಬೋಧ ಇತ್ಯಪಿ ಕೇಚಿತ್ । ತನ್ನ । ಪ್ರಥಮತಃ ಕಾರ್ಯಾನ್ವಿತ ಘಟಾದೌ ಶಕ್ತ್ಯವಧಾರಣೇಽಪಿ ಲಾಘವೇನ ಪಶ್ಚಾತ್ತಸ್ಯ ಪರಿತ್ಯಾಗೌಚಿತ್ಯಾತ್ ॥

ವಿಧಿವಾಕ್ಯದೊಡನೆ ಏಕವಾಕ್ಯತ್ವಹೊಂದಿ ಶಾಬ್ದಬೋಧ ಉಂಟಾಗಲು ಉಪಪತ್ತಿ ತೋರಿಸುತ್ತಾನೆ. 'ಘಟಾದಿ—' ಇತಿ. ಘಟಾದಿ ಪದಗಳಿಗೆ ಕಾರ್ಯಾನ್ವಿತಘಟಾದ್ಯರ್ಥದಲ್ಲಿಯೇ ಶಕ್ತಿಗ್ರಹವೆಂದು ಹಿಂದೆ ವಿವರಿಸಿದೆ. ಕಾರ್ಯಾನ್ವಿತತ್ವ ಬರಬೇಕಾದರೆ ಲಿಙಾದಿಗಳು (ತವ್ಯ ಪ್ರತ್ಯಯಾದಿ) ಇರಬೇಕು. 'ಭೂತಲೇ—' ಇತ್ಯಾದಿ ವಾಕ್ಯದಲ್ಲಿ ಅವು ಇಲ್ಲವಾದುದರಿಂದ ಆ ವಾಕ್ಯದಿಂದ ಶಾಬ್ದಬೋಧ ಬರುವುದಿಲ್ಲವೆಂದು ಅವರ ಮತ.

ಇದು ಸರಿಯಲ್ಲವೆಂದು ನೈಯಾಯಿಕನು ಖಂಡಿಸುತ್ತಾನೆ. 'ತನ್ನ—' ಇತಿ. ವ್ಯುತ್ಪತ್ತಿಯನ್ನು ಬಯಸುವವನಿಗೆ ಮೊದಲು ಅಂದರೆ ಪ್ರಾಥಮಿಕ ಶಕ್ತಿ ಜ್ಞಾನಬರುವ ಕಾಲದಲ್ಲಿ ಕಾರ್ಯಾನ್ವಿತಘಟಾದಿಗಳಲ್ಲಿ ಅಂದರೆ ಆನಯನಾದಿಕಾರ್ಯಸಂಸರ್ಗವಿಶಿಷ್ಟವಾದ ಘಟಾದ್ಯರ್ಥದಲ್ಲಿ ಶಕ್ತಿ ನಿಶ್ಚಯಬಂದರೂ, ಲಾಘವದಿಂದ ಆಮೇಲೆ ಅದನ್ನು ಬಿಡಬೇಕಾದುದೇ ಉಚಿತವಾಗಿದೆ. ಕಾರ್ಯಾನ್ವಿತಘಟಶಾಬ್ದತ್ವಕ್ಕೆ ಕಾರ್ಯತಾವಚ್ಛೇದಕ ಹೇಳುವುದಕ್ಕಿಂತ ಕೇವಲ ಘಟ ಶಾಬ್ದತ್ವವೇ ಕಾರ್ಯತಾವಚ್ಛೇದಕವೆಂದು ಹೇಳುವುದರಿಂದ ಶರೀರಕೃತ ಲಾಘವ ಬರುತ್ತದೆ. ಆದುದರಿಂದ ಕಾರ್ಯಾನ್ವಿತಘಟಾದಿಗಳಲ್ಲಿ ಶಕ್ತಿ ನಿಶ್ಚಯವಾದ

ಮೇಲೆ ಕಾರ್ಯಾನ್ವಯವಿಲ್ಲದೇ ಘಟಾದಿಗಳಿಂದ ಶಾಬ್ದಬೋಧ ಬರುವುದರಿಂದ ಆಮೇಲೆ ಕಾರ್ಯಾನ್ವಿತತ್ವ ವಿಶೇಷಣವನ್ನು ಬಿಡಬೇಕು.

ಅತ ಏವ 'ಚೈತ್ರ ಪುತ್ರಸ್ತೇ ಜಾತಃ ಕನ್ಯಾತೇ ಗರ್ಭಿಣೀ ಜಾತಾ' ಇತ್ಯಾದೌ ಮುಖಪ್ರಸಾದ ಮುಖಮಾಲಿನ್ಯಾಭ್ಯಾಂ ಸುಖದುಃಖೇ ಅನುಮಾಯ ತತ್ಕಾರಣತ್ವೇನ ಪರಿಶೇಷಾಚ್ಛಾಬ್ದಬೋಧಂ ನಿರ್ಣೀಯ ತದ್ಧೇತುತಯಾ ತಂ ಶಬ್ದಮವಧಾರಯತಿ । ತಥಾ ಚ ವ್ಯಭಿಚಾರಾತ್ಕಾರ್ಯಾನ್ವಿತೇ ನಶಕ್ತಿಃ । ನಚ ತತ್ರ ತಂ ಪಶ್ಯೇದಿತ್ಯಾದಿ ಶಬ್ದಾಂತರಮಧ್ಯಾಹಾರ್ಯಂ, ಮಾನಾಭಾವಾತ್ । ಚೈತ್ರ ! 'ಪುತ್ರಸ್ತೇ ಜಾತೋ ಮೃತಶ್ಚ' ಇತ್ಯಾದೌ ತದಭಾವಾಚ್ಚ । ಇತ್ಥಂ ಚ ಲಾಘವಾದನ್ವಿತಘಟೇಽಪಿ ಶಕ್ತಿಂ ತ್ಯಕ್ತ್ವಾ ಘಟಪದಸ್ಯ ಘಟಮಾತ್ರೇ ಶಕ್ತಿಮವಧಾರಯತಿ ॥

ಕಾರ್ಯಾನ್ವಿತತ್ವ ತ್ಯಾಗದಲ್ಲಿ ಗಮಕ ತೋರಿಸುತ್ತಾನೆ. 'ಅತಏವ—' ಇತಿ. ಕಾರ್ಯತ್ವಾವಿಷಯಕ ಬೋಧವನ್ನು ಕುರಿತು ಪದಗಳು ಕಾರಣವಾದುದರಿಂದಲೇ ಎಂದರ್ಥ. 'ಚೈತ್ರ—' ಇತಿ. 'ಚೈತ್ರನೇ ನಿನಗೆ ಗಂಡುಮಗನು ಹುಟ್ಟಿದನು, ಮದುವೆಯಾಗದ ನಿನ್ನ ಮಗಳು ಗರ್ಭಿಣಿಯಾಗಿದ್ದಾಳೆ.' ಹೀಗೆ ಈ ಎರಡು ಮಾತುಗಳನ್ನು ಕೇಳಿದೊಡನೆ ಚೈತ್ರನಿಗೆ ಮುಖವಿಕಾಸ, ಮುಖಮಾಲಿನ್ಯವುಂಟಾಗುತ್ತವೆ. ಗಂಡುಮಗುವೆಂದೊಡನೆ ನರಕಾದಿತಾರಕನಾದುದರಿಂದ ಸುಖ, ಕನ್ನಿಕೆಯು ಗರ್ಭಿಣಿಯೆಂದರೆ ಗರ್ಭಪಾತಾದಿಗಳಿಂದ ಶಿಕ್ಷಾಭೀತಿ, ನಿಂದಾದಿಗಳಿಂದ ದುಃಖವಾಗುತ್ತದೆ. ಸಮೀಪದಲ್ಲಿರುವವನು ಚೈತ್ರನ ಮುಖದ ಮೇಲಿನ ವಿಕಾಸಮಾಲಿನ್ಯಗಳಿಂದ ಇವನಿಗೆ ಸುಖದುಃಖಗಳು ಉಂಟಾಗಿವೆಯೆಂದು ಅನುಮಾನಮಾಡಿ, ಆ ಸುಖದುಃಖಗಳಿಗೆ ಕಾರಣರೂಪವಾಗಿ ಪರಿಶೇಷದಿಂದ (ಲಿಂಗಜ್ಞಾನದಿಂದ) ಶಾಬ್ದಬೋಧವನ್ನು ನಿಶ್ಚಯಿಸಿ ಅದೇ ಸುಖದುಃಖಗಳಿಗೆ ಕಾರಣವೆಂದು ತಿಳಿಯುತ್ತಾನೆ. 'ಚೈತ್ರಸಮವೇತ ಸುಖದುಃಖೇ—ಅಸಾಧಾರಣಕಾರಣಕೇ—ಜನ್ಯಗುಣತ್ವಾತ್' (ಚೈತ್ರನಲ್ಲಿರುವ ಸುಖ ದುಃಖಗಳು ಜನ್ಯಗುಣಗಳಾದುದರಿಂದ ಅವು ಒಂದು ಅಸಾಧಾರಣಕಾರಣದಿಂದ ಹುಟ್ಟಿವೆ.) ಎಂಬ ಅನುಮಾನದಿಂದ ಸುಖ ದುಃಖಗಳು ಅಸಾಧಾರಣಕಾರಣದಿಂದ ಹುಟ್ಟಿವೆಯೆಂದು ಸಿದ್ಧವಾಗುತ್ತದೆ. ಆಮೇಲೆ 'ತದೀಯಸುಖದುಃಖೇ ಪೂರ್ವೋಕ್ತವಾಕ್ಯಜ್ಞಾನಾಧೀನಶಾಬ್ದಬೋಧರೂಪಾಽಸಾಧಾರಣಕೇ—ತದಿತರಾಸಾಧಾರಣ ಕಾರಣಕತ್ವಾಭಾವೇ ಸತಿ ಸಾಸಾಧಾರಣಕಾರಣಕತ್ವಾತ್' (ಆ ಸುಖದುಃಖಗಳು ಬೇರೆ ಯಾದ ಅಸಾಧಾರಣಕಾರಣದಿಂದ ಹುಟ್ಟದೆ ಆ ವಾಕ್ಯಕೇಳಿದೊಡನೆ ಉಂಟಾದುದರಿಂದ ಆ ವಾಕ್ಯದಿಂದ ಉಂಟಾದ ಶಾಬ್ದಬೋಧದಿಂದಲೇ ಉಂಟಾಗಿವೆ.) ಎಂಬ ಅನುಮಾನದಿಂದ ಪೂರ್ವೋಕ್ತವಾಕ್ಯಗಳೆರಡೂ ಸುಖದುಃಖಗಳನ್ನು ಹುಟ್ಟಿಸುವ ಶಾಬ್ದಬೋಧಕ್ಕೆ ಪ್ರಯೋಜಕಗಳಾಗಿವೆಯೆಂದು ನಿಶ್ಚಯಿಸುತ್ತಾನೆ. 'ಚೈತ್ರ—' ಎಂಬ ವಾಕ್ಯಗಳಲ್ಲಿ ಕಾರ್ಯತಾಬೋಧಕವಾದ ಲಿಙಾದಿಗಳಿಲ್ಲ. ಆದರೂ ಅದನ್ನು ಕೇಳಿದ ಚೈತ್ರನಿಗೆ ಶಾಬ್ದಬೋಧವಾಗಿದೆ. ಶಾಬ್ದ

ಬೋಧವಾಗದಿದ್ದರೆ ಅವನಿಗೆ ಸುಖದುಃಖಗಳಾಗುತ್ತಿರಲಿಲ್ಲ. ಸುಖದುಃಖಗಳಾಗದಿದ್ದರೆ ವಾಕ್ಯಕೇಳಿದೊಡನೆ ಮುಖವಿಕಾಸ ಮಾಲಿನ್ಯಗಳೂ ಉಂಟಾಗುತ್ತಿರಲಿಲ್ಲ. ಬೇರೆಯಾವ ಕಾರಣಗಳೂ ದೃಷ್ಟವಾಗಿಲ್ಲ. ಕಾರ್ಯಾನ್ವಿತ ಶಬ್ದವೇ ಕಾರ್ಯಾನ್ವಿತವಿಷಯಕ ಶಾಬ್ದ ಬೋಧ ಜನಕವೆಂದು ಮೀಮಾಂಸಕನಮತ. ಆದರೆ ಇಲ್ಲಿ ಕಾರ್ಯತಾಬೋಧಕ ಲಿಙಾದಿ ಗಳು ಇಲ್ಲ. ಆದುದರಿಂದ ಕಾರ್ಯಾನನ್ವಿತಶಬ್ದವೂ ಶಾಬ್ದಬೋಧ ಜನಕವಾಗುತ್ತದೆಂದು ಒಪ್ಪಬೇಕು. ಆಗ ಮೀಮಾಂಸಕರು ತೋರಿಸಿದ ಕಾರ್ಯಕಾರಣಭಾವಕ್ಕೆ ವ್ಯಭಿಚಾರ ಬರುವುದರಿಂದ ಅದು ಗ್ರಾಹ್ಯವಾಗುವುದಿಲ್ಲ.

ಕಾರ್ಯಾನ್ವಿತಪದಾರ್ಥದಲ್ಲಿಯೇ ಶಕ್ತಿ ಹೇಳುವುದಾದರೆ 'ಬ್ರಾಹ್ಮಣೋ ನಹಂತವ್ಯಃ' ಎಂಬ ವಾಕ್ಯದಿಂದ ನಿವೃತ್ತ್ಯುಪದೇಶವು ಸಂಗತವಾಗಲಾರದು. ಈ ವಾಕ್ಯದಿಂದ ಯಾವ ಕಾರ್ಯವೂ ಉಪದೇಶಿಸಲ್ಪಡುವುದಿಲ್ಲ. ಹನನಕ್ರಿಯಾ ನಿವೃತ್ತಿರೂಪ ಔದಾಸೀನ್ಯವು ಇದರಿಂದ ತೋರುತ್ತದೆ. ನಞ್ ಯಾವಾಗಲೂ ಸ್ವಸಂಬದ್ಧಪದಾರ್ಥಾ ಭಾವವನ್ನು ಬೋಧಿಸುತ್ತದೆ. ಇಲ್ಲಿ 'ನಹಂತವ್ಯಃ' ಎಂಬುದರಿಂದ ಹನನಾಭಾವ ಅರ್ಥವಾಗುತ್ತದೆ. ಇಷ್ಟಸಾಧನತ್ವ ತವ್ಯಪ್ರತ್ಯಯಾರ್ಥ. ನರಕದುಃಖಾಭಾವವೇ ಇಲ್ಲಿ ಇಷ್ಟವಾದದ್ದು. 'ಹನನಾಭಾವಃ ದುಃಖಾಭಾವ ಹೇತುಃ' ಎಂದು ತಾತ್ಪರ್ಯ ವಾಗುತ್ತದೆ. ಹನನವು ದುಃಖಸಾಧನವೆಂದು ಪುರುಷನು ಅದರಿಂದ ನಿವೃತ್ತನಾಗುವುದರಿಂದ ಇಲ್ಲಿ ಯಾವ ನಿಯೋಗವೂ ಬೋಧಿತವಾಗುವುದಿಲ್ಲ. ಆದುದರಿಂದ ನಿಷೇಧಶಾಸ್ತ್ರಗಳಿಗೆ ಸಿದ್ಧಾರ್ಥ ದಲ್ಲಿಯೇ ಪ್ರಾಮಾಣ್ಯವನ್ನು ಅಂಗೀಕರಿಸಬೇಕಾದುದರಿಂದ ಕಾರ್ಯತಾ ಬೋಧಕತ್ವವಿಲ್ಲ ದಿರುವುದರಿಂದ ಇಲ್ಲಿ ನಿಯೋಗವಾಗಲೀ, (ಅನನುಷ್ಠೇಯವಾದುದರಿಂದ) ನಿಯೋಗ ವಿಷಯವಾಗಲೀ ಇಲ್ಲದಿರುವುದರಿಂದ, ಘಟಾದಿಪದಗಳು ಯಾವಾಗಲೂ ಕಾರ್ಯಾನ್ವಿತ ಘಟಾದಿಬೋಧಕಗಳೆಂಬ ನಿಯಮವು ಇಂತಹ ಸ್ಥಳದಲ್ಲಿ ವ್ಯಭಿಚರಿತವಾಗುತ್ತದೆ.

ಆಶಂಕಿಸಿ ಸಮಾಧಾನ ತೋರಿಸುತ್ತಾನೆ. 'ಚೈತ್ರ—' ಇತ್ಯಾದಿ ವಾಕ್ಯಗಳಲ್ಲಿ ಕಾರ್ಯಾನ್ವಿತತ್ವಬೋಧಕಪದ ವಿಲ್ಲದಿರುವುದರಿಂದ ವ್ಯಭಿಚಾರ ಬರುವುದಾದರೆ ಇಂತಹ ಸ್ಥಳದಲ್ಲಿ 'ಪಶ್ಯ' ಎಂಬ ಕ್ರಿಯಾಪದವನ್ನು ಅಧ್ಯಾಹಾರ ಮಾಡುತ್ತೇವೆ. ಆಗ ಲೋಡಾದಿಗಳಿಂದ ಕಾರ್ಯತ್ವವು ಉಪಸ್ಥಿತವಾಗುವುದರಿಂದ ಕಾರ್ಯತಾವಿಷಯಕ ಬೋಧ ವುಂಟಾಗುವುದರಿಂದ ನಿಯಮಕ್ಕೆ ವ್ಯಭಿಚಾರಬರುವುದಿಲ್ಲವೆಂದರೆ ಈ ರೀತಿಯಾಗಿ ಅಧ್ಯಾ ಹಾರದಲ್ಲಿ ಯಾವ ಪ್ರಮಾಣವೂ ಇಲ್ಲ. ಪ್ರಮಾಣಶೂನ್ಯವಾಗಿದ್ದರೆ ಅದು ಉಪಾ ದೇಯವಾಗುವುದಿಲ್ಲ. 'ಮಾನಾಭಾವಾತ್—' ಇತಿ. ಅಶ್ರುತವಾಕ್ಯದ ಅನುಸಂಧಾನ ವಿದ್ದರೇ ಶಾಬ್ದಬೋಧ. ಅನುಸಂಧಾನವಿಲ್ಲವಾದರೆ ಶಾಬ್ದಬೋಧವಿಲ್ಲವೆಂಬ ನಿಯಮ ದಲ್ಲಿ ಪ್ರಮಾಣವಿಲ್ಲವೆಂದರ್ಥ.

ಹಾಗೆ ನಿಯಮವನ್ನಂಗೀಕರಿಸಿದರೂ ದೋಷವನ್ನು ತೋರಿಸುತ್ತಾನೆ. 'ಚೈತ್ರ—' ಇತಿ. ಈ ವಾಕ್ಯದಲ್ಲಿ 'ಪಶ್ಯ' ಎಂದು ಅಧ್ಯಾಹಾರ ಮಾಡುವುದೂ ಅಸಂಭವ. ಮೃತ ಪುತ್ರನನ್ನು ನೋಡುವುದು ಹೇಗೆ? ಅದೂ ದೇಶಾಂತರದಲ್ಲಿ ಚೈತ್ರ

ನಿದ್ದು ಅವನ ಊರಿನ ವೃತ್ತಾಂತವನ್ನು ಹೇಳುವುದಾದರೆ ಅಲ್ಲಿ 'ಪಶ್ಯ' ಎಂಬುದಕ್ಕೆ ಯಾವ ರೀತಿಯಿಂದಲೂ ಸಂಬಂಧ ಹೊಂದಿಸುವುದು ಅಸಾಧ್ಯ. 'ಇತ್ಥಂ—' ಇತಿ. ಹೀಗೆ ಕಾರ್ಯಾನ್ವಿತಘಟವಲ್ಲಿ ಶಕ್ತಿಕಲ್ಪನೆಗಿಂತ ಲಾಘವದಿಂದ ಕೇವಲ ಘಟದಲ್ಲಿ ಶಕ್ತಿ ಹೇಳುವುದೇ ಸಮಂಜಸವಾಗಿದೆಯೆಂವರ್ಥ.

ಪ್ರಾಭಾಕರರು ಕಾರ್ಯಾನ್ವಿತದಲ್ಲಿ ಶಕ್ತಿ ಹೇಳಿದರೆ ಭಟ್ಟಮತಾನುಯಾಯಿಗಳು ಇತರಾನ್ವಿತದಲ್ಲಿ ಶಕ್ತಿ ಹೇಳುತ್ತಾರೆ. ಸಮಭಿವಾಹೃತಪದಾರ್ಥಾನ್ವಿತ ಘಟಾದಿಗಳಲ್ಲಿ ಶಕ್ತಿಕಲ್ಪನೆ ಮಾಡುತ್ತಾರೆ. ಇಲ್ಲಿಯೂ 'ಸಮಭಿವ್ಯಾಹೃತ ಪದಾರ್ಥಾನ್ವಯ ವಿಶಿಷ್ಟ ಘಟತ್ವವು' ಶಕ್ಯತಾವಚ್ಛೇದಕವಾಗುವುದರಿಂದ ಹಿಂದಿನಂತೆ ಗೌರವದೋಷ ಗ್ರಸ್ತವಾಗುವುದರಿಂದ ಉಪಾದೇಯವಲ್ಲ. ಹೀಗೆ ವೇದಾಂತಿಗಳೂ ಮೊದಲು ಕಾರ್ಯಾನ್ವಿತದಲ್ಲಿ ಶಕ್ತಿಜ್ಞಾನ ಉಂಟಾದರೂ ಆಮೇಲೆ ಲಾಘವದಿಂದ ಇತರಾನ್ವಿತದಲ್ಲಿ ಶಕ್ತಿಕಲ್ಪನೆ ಮಾಡುತ್ತಾರೆ. ವ್ಯವಹಾರದಲ್ಲಿ ಸಾಮಾನ್ಯವಾಗಿ ವೇದಾಂತಿಗಳು ಭಾಟ್ಟನಯವನ್ನು ಸ್ವೀಕರಿಸುತ್ತಾರೆ. ವಾಕ್ಯಗಳಿಗೆ ಅನಧಿಗತಾರ್ಥಬೋಧಕತ್ವೇನ ಪ್ರಾಮಾಣ್ಯವಿರುವುದರಿಂದ ಕಾರ್ಯಪರವೇ ಆಗಿರಬೇಕೆಂಬ ನಿಯಮವಿಲ್ಲ.

ಏವಂ ವಾಕ್ಯಶೇಷಾದಪಿ ಶಕ್ತಿಗ್ರಹಃ । ಯಥಾ ಯವಮಯಶ್ಚರುರ್ಭವತೀತ್ಯತ್ರ ಯವಪದಸ್ಯ ದೀರ್ಘಶೂಕವಿಶೇಷೇ ಆರ್ಯಾಣಾಂ ಪ್ರಯೋಗಃ, ಕಂಗೌ ತು ಮ್ಲೇಚ್ಛಾನಾಮ್ । ತತ್ರ ಹಿ 'ಅಥಾನ್ಯಾ ಔಷಧಯೋ ಮ್ಲಾಯಂತೇಽಥೈತೇ ಮೋದಮಾನಾ ತಿಷ್ಠಂತಿ" ಇತಿ ವಾಕ್ಯಶೇಷಾದ್ದೀರ್ಘಶೂಕೇ ಶಕ್ತಿರ್ನಿರ್ಣೀಯತೇ, ಕಂಗೌ ತು ಶಕ್ತಿ ಭ್ರಮಾತ್ ಪ್ರಯೋಗಃ, ನಾನಾ ಶಕ್ತಿ ಕಲ್ಪನೇ ಗೌರವಾತ್ । ಹರ್ಯಾದಿಪದೇ ತು ವಿನಿಗಮಕಾಭಾವಾನ್ನಾನಾಶಕ್ತಿಕಲ್ಪನಾತ್ ॥

ವಾಕ್ಯಶೇಷದಿಂದ ಶಕ್ತಿ ಗ್ರಹವನ್ನು ತೋರಿಸುತ್ತಾನೆ. 'ಏವಂ—' ಇತಿ. 'ಯವಮಯಶ್ಚರುರ್ಭವತಿ.' ಎಂಬ ಶ್ರುತಿ ವಾಕ್ಯಕ್ಕೆ 'ಯವವಿಕಾರೀಭೂತಚರುಭವನಂ ಇಷ್ಟಸಾಧನಂ' ಎಂದು ವಾಕ್ಯಾರ್ಥಬೋಧ ತಿಳಿಯಬೇಕು. 'ಮಯಡ್ ವೈತಯೋ—' ಸೂತ್ರದಿಂದ ಯವಶಬ್ದದ ಮೇಲೆ ವಿಕಾರಾರ್ಥದಲ್ಲಿ ಮಯಟ್ ಪ್ರತ್ಯಯ ಬಂದಿದೆ. ದೇವತೋದ್ದೇಶದಿಂದ ಕೊಡುವ ಹವಿಸ್ಸಿಗೆ ಚರು ಎಂದು ಹೆಸರು. ಈ ಶ್ರುತಿ ಘಟಕವಾದ ಯವಪದವನ್ನು ಆರ್ಯರು ಅಂದರೆ ಯಾಜಕರಾದ ದ್ವಿಜರು ದೀರ್ಘಶೂಕದಲ್ಲಿ ವ್ಯವಹರಿಸುತ್ತಾರೆ. ಆದುದರಿಂದ ದೀರ್ಘಶೂಕದಲ್ಲಿ ಶಕ್ತಿಜ್ಞಾನ ಬರುತ್ತದೆ. ಮ್ಲೇಚ್ಛರು ಕಂಗು ಅಂದರೆ ಪ್ರಿಯಂಗುತಂಡುಲದಲ್ಲಿ ಯವಪದವನ್ನು ಪ್ರಯೋಗಿಸುತ್ತಾರೆ. ಹೀಗೆ ದೀರ್ಘಶೂಕವಿಶಿಷ್ಟದಲ್ಲಿಯೂ (ತುದಿಯಲ್ಲಿ ಗುಂಡುಸೂಜಿಯಂತೆ ಉದ್ದವಾದ ಸಲಾಕೆಯಿಂದ ಕೂಡಿರುವ ಧಾನ್ಯವಿಶೇಷ) ಪ್ರಿಯಂಗುತಂಡುಲ (ಇದೂ ಒಂದು ಧಾನ್ಯವಿಶೇಷ) ದಲ್ಲಿಯೂ ಒಂದೇ ಯವಪದ ಪ್ರಯೋಗವಿರುವುದರಿಂದ ಯಾವುದರಲ್ಲಿ ಶಕ್ತಿಹೇಳಬೇಕು ಎಂದು ಸಂದೇಹ ಬಂದಾಗ ವಾಕ್ಯಶೇಷದಿಂದ ಶಕ್ತಿಜ್ಞಾನನಿರ್ಣಯವಾಗುತ್ತದೆ.

'ಅಥಾನ್ಯಾ—' ಇತ್ಯಾದಿವಾಕ್ಯಶೇಷದಿಂದ ಇದು ನಿರ್ಣೀತವಾಗುತ್ತದೆ. ಅನ್ಯಾಃ—ದೀರ್ಘಶೂಕಗಳಿಗಿಂತ ಇತರ ಸಸ್ಯವಿಶೇಷಗಳೆಂದರ್ಥ. ಇತರ ಸಸ್ಯಗಳು ಒಣಗಿ ಬಾಡುವಾಗ ಇವುಗಳು ಹುಲುಸಾಗಿ ಬೆಳೆದು ಕಂಗೊಳಿಸುತ್ತಿರುತ್ತವೆ. 'ವಸಂತೇ ಸರ್ವಸಸ್ಯಾನಾಂ ಜಾಯತೇ ಪತ್ರ ಶಾತನಮ್ । ಮೋದಮಾನಾಶ್ಚ ತಿಷ್ಠಂತಿ ಯವಾಃ ಕಣಿಶಶಾಲಿನಃ' ಎಂದು ಇದರ ಮುಂದೆ ಹೇಳಿದೆ. ಕಣಿಶಶಾಲಿನಃ—ಬೀಜವುಳ್ಳವುಗಳು. ಗೊಂಚಲುಗಳಿಂದ ಹಸುರಾಗಿರುತ್ತನೆಯೆಂದರ್ಥ. ಹೀಗೆ ಈ ವಾಕ್ಯಶೇಷದಿಂದ ಯವಪದಕ್ಕೆ ದೀರ್ಘಶೂಕದಲ್ಲಿ ಶಕ್ತಿ ಗೃಹೀತವಾಗುತ್ತದೆ. 'ದೀರ್ಘಶೂಕವಿಶಿಷ್ಟೋ ಯವಪದವಾಚ್ಯಃ' ಎಂದು ಶಕ್ತಿಯ ಆಕಾರ. ಶಕ್ತಿಭ್ರಮೆಯಿಂದ ಕಂಗು (ಪ್ರಿಯಂಗುತಂಡುಲ) ವಿನಲ್ಲಿ ಪ್ರಯೋಗ. 'ಕಂಗುರ್ಯವಪದವಾಚ್ಯಃ' ಎಂಬುದು ಶಕ್ತಿಭ್ರಮವೆಂದು ತಾತ್ಪರ್ಯ. ಅವಿಚ್ಛಿನ್ನಪಾರಂಪರ್ಯದಿಂದ ಬಂದುದರಿಂದ ಶಾಸ್ತ್ರೀಯ ಪ್ರಸಿದ್ಧಿಗೇ ಇಲ್ಲಿ ಪ್ರಾಮಾಣ್ಯ ಹೇಳಬೇಕು. ಮ್ಲೇಚ್ಛರು (ಈಗಿನ ಅಪಭ್ರಂಶ ಭಾಷೆಯಾಡುವ ಯವನ ಮುಂತಾದವರು) ದೃಷ್ಟಾರ್ಥ ವ್ಯವಹಾರಿಗಳಾದುದರಿಂದ ಅವರ ಮಾತಿಗೆ ಪ್ರಾಮಾಣ್ಯವಿಲ್ಲ. ಹೀಗೆ ಒಂದು ಶಬ್ದದಲ್ಲಿ ಅರ್ಥಸಂದೇಹಬಂದಾಗ ವಾಕ್ಯಶೇಷದಿಂದ ಶಕ್ತಿಯನಿರ್ಣಯವುಂಟಾಗುತ್ತದೆ. ಯವ ಪದಕ್ಕೆ ಹರಿಮುಂತಾದ ಪದಗಳಂತೆ ನಾನಾರ್ಥಗಳಲ್ಲಿ ಏಕೆ ಶಕ್ತಿ ಹೇಳಬಾರದು ? ಎಂಬ ಶಂಕೆಗೆ ಸಮಾಧಾನ ಹೇಳುತ್ತಾನೆ. 'ನಾನಾಶಕ್ತಿ—' ಇತಿ. ಒಂದೇ ಶಬ್ದಕ್ಕೆ ಆಯಾಯ ಪ್ರಸಿದ್ಧಿಯಿಂದ ಎರಡರ್ಥದಲ್ಲಿಯೂ ಶಕ್ತಿಯನ್ನು ಅಂಗೀಕರಿಸಿದರೆ ಆಗ ದೀರ್ಘಶೂಕತ್ವಾದಿಶಕ್ಯತಾವಚ್ಛೇದಕಭೇದದಿಂದ ಶಕ್ತಿಭೇದ ಬರುವುದರಿಂದ ಅಪ್ರಾಮಾಣಿಕ ಅನಂತಶಕ್ತಿಕಲ್ಪನಾಪ್ರಯುಕ್ತ ಗೌರವ ಬರುತ್ತದೆ. ಹಾಗಾದರೆ ಹರಿಮುಂತಾದವುಗಳಿಗೆ ನಾನಾಶಕ್ತಿ ಕಲ್ಪಿಸಿರುವುದು ಹೇಗೆ ? ಅಂದರೆ ಅದಕ್ಕೆ ಉತ್ತರ ತೋರಿಸುತ್ತಾನೆ. 'ಹರ್ಯಾದಿ—' ಇತಿ. ಅಲ್ಲಿ ಯಾವುದೂ ವಿನಿಗಮಕ ಇಲ್ಲದಿರುವುದರಿಂದಲೇ ನಾನಾರ್ಥಗಳಲ್ಲಿ ಶಕ್ತಿ ಇರುತ್ತದೆ. ಇಲ್ಲಿ ವಾಕ್ಯಶೇಷವೇ ವಿನಿಗಮಕವಿರುವುದರಿಂದ ನಾನಾರ್ಥಗಳಲ್ಲಿ ಶಕ್ತಿ ಇಲ್ಲವೆಂದು ತಾತ್ಪರ್ಯ. 'ಯಮಾನಿಲೇಂದ್ರಚಂದ್ರಾರ್ಕವಿಷ್ಣುಸಿಂಹಾಶುವಾಜಿಷು ॥ ಶುಕಾ ಹಿಕಪಿಭೇಕೇಷು ಹರಿರ್ನಾಕಪಿಲೇ ತ್ರಿಷು' ಎಂಬ ಅಮರಕೋಶದಿಂದ ಹರಿಪದಕ್ಕೆ ಯಮಾದಿನಾನಾರ್ಥಗಳಲ್ಲಿ ಶಕ್ತಿ ಹೇಳುತ್ತಾರೆ.

ಏವಂ ವಿವರಣಾದಪಿ ಶಕ್ತಿಗ್ರಹಃ । ವಿವರಣಂ ತು ತತ್ಸಮಾನಾರ್ಥಕ ಪದಾಂತರೇಣ ತದರ್ಥಕಥನಮ್ । ಯಥಾ ಘಟೋಽಸ್ತೀತ್ಯಸ್ಯ ಕಲಶೋಽಸ್ತೀತ್ಯನೇನ ವಿವರಣಾತ್ ಘಟಪದಸ್ಯ ಕಲಶೇ ಶಕ್ತಿಗ್ರಹಃ । ಏವಂ ಪಚತೀತ್ಯಸ್ಯ ಪಾಕಂ ಕರೋತೀತ್ಯನೇನ ವಿವರಣಾದಾಖ್ಯಾತಸ್ಯ ಯತ್ನಾರ್ಥಕತ್ವಂ ಕಲ್ಪ್ಯತೇ ॥ ಏವಂ ಪ್ರಸಿದ್ಧಪದಸಾನ್ನಿಧ್ಯಾದಪಿ ಶಕ್ತಿಗ್ರಹಃ । ಯಥಾ ಇಹ ಸಹಕಾರತರೌ ಮಧುರಂ ಪಿಕೋ ರೌತೀತ್ಯಾದೌ ಪಿಕಪದಸ್ಯ ಕೋಕಿಲೇ ಶಕ್ತಿಗ್ರಹ ಇತಿ ॥

ವಿವರಣೆಯಿಂದ ಶಕ್ತಿಗ್ರಹವನ್ನು ತೋರಿಸುತ್ತಾನೆ. 'ಏವಂ—' ಇತಿ.

ಒಂದು ಶಕ್ತವಾದ ಪದದ ಅರ್ಥವನ್ನು ಆ ಪದದ ಸಮಾನಾರ್ಥವುಳ್ಳ ಬೇರೊಂದು ಶಕ್ತ ಪದದಿಂದ ಪ್ರತಿಪಾದಿಸುವುದಕ್ಕೆ ವಿವರಣವೆಂದು ಹೆಸರು. ನಾಮಪದದ ವಿವರಣವನ್ನು ತೋರಿಸುತ್ತಾರೆ. 'ಯಥಾಘಟ—' ಇತಿ. ಘಟಕ್ಕೆ ಕಲಶದಲ್ಲಿ ಶಕ್ತಿಜ್ಞಾನ ಬಂದಂತೆ ಪಚತಿ ಮುಂತಾದ ಆಖ್ಯಾತಕ್ಕೆ (ತಿಙಂತ) ವಿವರಣ ತೋರಿಸುತ್ತಾನೆ. ಯತ್ನತ್ವ ವಿಶಿಷ್ಟಾರ್ಥದಲ್ಲಿ ಶಕ್ತವಾದ ಕರೋತಿಪದದಿಂದ ಪ್ರತಿಪಾದಿತವಾದ ಅರ್ಥವನ್ನು ಆಖ್ಯಾತವು ಪ್ರತಿಪಾದಿಸುವುದರಿಂದ ಆಖ್ಯಾತಕ್ಕೆ ಯತ್ನಾ (ಕೃತಿ) ರ್ಥವನ್ನು ಹೇಳಬೇಕು. ಕಲ್ಪ್ಯತೇ—ಅನುಮಾನ ಮಾಡಲ್ಪಡುತ್ತದೆ. ಅನುಮಾನದಿಂದ ಶಕ್ತಿಗ್ರಾಹಕತ್ವಸಿದ್ಧವಾಗುತ್ತದೆಂದರ್ಥ. 'ಆಖ್ಯಾತಂ —ಯತ್ನತ್ವವಿಶಿಷ್ಟೇ ಶಕ್ತಂ—ಯತ್ನತ್ವ ವಿಶಿಷ್ಟಶಕ್ತ ಕರೋತಿಪದ ಪ್ರತಿಪಾದಿತಾರ್ಥ-ಪ್ರತಿಪಾದಕತ್ವಾತ್ । (ಯತ್ನಾರ್ಥವನ್ನು ಶಕ್ತಿಯಿಂದ ಬೋಧಿಸುವ ಕೃಞ್‌ಧಾತುವಿನಿಂದ ಅದನ್ನು ವಿವರಿಸಿರುವುದರಿಂದ ಯತ್ನಾರ್ಥ ಸಿದ್ಧವಾಗುತ್ತದೆಂದರ್ಥ.) 'ಯತ್ ಯದ್ಧರ್ಮಾವಚ್ಛಿನ್ನ ಪ್ರತಿಪಾದಿತಾರ್ಥಪ್ರತಿಪಾದಕಂ ತತ್ ತದ್ಧರ್ಮಾವಚ್ಛಿನ್ನಶಕ್ತಂ' ಎಂದು ಸಾಮಾನ್ಯವ್ಯಾಪ್ತಿ ಇರುವುದರಿಂದ ವಿವರಣದಿಂದಲೂ ಶಕ್ತಿಗ್ರಾಹಕತ್ವ ಪ್ರಸಿದ್ಧವಾಗಿದೆ. ಪ್ರಸಿದ್ಧಪದದ ಸನ್ನಿಧಾನದಿಂದ ಶಕ್ತಿಜ್ಞಾನವನ್ನು ತೋರಿಸುತ್ತಾನೆ. 'ಇಹ ಸಹಕಾರ—' ಇತಿ. ಪ್ರಸಿದ್ಧಾರ್ಥಪ್ರತಿಪಾದಕವಾದ ಪದವೇ ಪ್ರಸಿದ್ಧಪದ. ಸಹಕಾರತರುವೆಂದರೆ ಇದು ಪ್ರಸಿದ್ಧಾರ್ಥಕ ಪದವಾಗಿದೆ. ಇದರ ಸನ್ನಿಧಿ ಪಿಕಪದಕ್ಕೆ ಇರುವುದರಿಂದ 'ಕೋಕಿಲಃ ಪಿಕಪದವಾಚ್ಯಃ' ಎಂದು ಶಕ್ತಿಜ್ಞಾನ ಬರುತ್ತದೆ. ಇಲ್ಲಿಯೂ ಅನುಮಾನಮೂಲಕವೇ ಶಕ್ತಿಗ್ರಾಹಕತ್ವ ಸಿದ್ಧವಾಗುತ್ತದೆ. 'ಕೋಕಿಲಃ—ಪಿಕಪದವಾಚ್ಯಃ—ಸಹಕಾರತರೌ ಮಧುರರಾವ ಕರ್ತೃತ್ವಾತ್' ಎಂದು ಅನುಮಾನಾಕಾರ. ಸಪ್ತಮಿಗೆ 'ಅವಚ್ಛೇದ್ಯತ್ವಂ' ಅರ್ಥ. ಇದಕ್ಕೆ ರುಧಾತ್ವರ್ಥ ಧ್ವನಿಯಲ್ಲಿ ಅನ್ವಯ. ಆಗ—'ಸಹಕಾರತರ್ವವಚ್ಛೇದ್ಯ ಮಧುರಾಽಭಿನ್ನ ಶಬ್ದಾನುಕೂಲಕೃತಿಮಾನ್ ಪಿಕಃ' ಎಂದು ಶಾಬ್ದಬೋಧ ಉಂಟಾಗುತ್ತದೆ.

ತತ್ರ ಜಾತಾವೇವ ಶಕ್ತಿರ್ನ ತು ವ್ಯಕ್ತೌ ವ್ಯಭಿಚಾರಾದಾನಂತ್ಯಾಚ್ಚ । ವ್ಯಕ್ತಿಂ ವಿನಾ ಚ ಜಾತಿಭಾನಸ್ಯಾಸಂಭವಾದ್ವ್ಯಕ್ತೇರಪಿ ಭಾನಮಿತಿ ಕೇಚಿತ್ । ತನ್ನ ॥ ಶಕ್ತಿಂ ವಿನಾ ವ್ಯಕ್ತಿಭಾನಾನುಪಪತ್ತೇಃ ॥

ಪ್ರಸಂಗಸಂಗತಿಯಿಂದ ಜಾತ್ಯಾದಿ ವಿಶಿಷ್ಟದಲ್ಲಿ ಶಕ್ತಿ ಸ್ಥಾಪನೆ ಮಾಡಲು ಮೊದಲು ಪರಮತವನ್ನು ಖಂಡಿಸುವುದಕ್ಕೋಸ್ಕರ ಮೀಮಾಂಸಕಮತವನ್ನು ತೋರಿಸುತ್ತಾನೆ. 'ತತ್ರ—' ಇತಿ. ಘಟಪಟಾದಿಪದಗಳಿಗೆ ಘಟತ್ವಪಟತ್ವಾದಿ ಜಾತಿಯಲ್ಲಿಯೇ ಶಕ್ತಿ (ಅರ್ಥಬೋಧನಸಾಮರ್ಥ್ಯ) ಅಥವಾ ಈಶ್ವರೇಚ್ಛಾರೂಪಸಂಕೇತ ಹೇಳಬೇಕು. ಕಂಬುಗ್ರೀವಾದಿ ಮದ್ವ್ಯಕ್ತಿಯಲ್ಲಿ ಶಕ್ತಿ ಹೇಳಬಾರದು. ಹಾಗೆ ವ್ಯಕ್ತಿಯಲ್ಲಿ ಶಕ್ತಿ ಸ್ವೀಕಾರ ಮಾಡಿದರೆ ದೋಷ ತೋರಿಸುತ್ತಾನೆ. 'ವ್ಯಭಿಚಾರಾತ್—' ಇತಿ. ವ್ಯಕ್ತಿಗಳು ಅನೇಕವಾದುದರಿಂದ ಒಂದು ವ್ಯಕ್ತಿಯಲ್ಲಿ ಶಕ್ತಿಯೇ ? ಅಥವಾ ಅನೇಕವ್ಯಕ್ತಿ

ಗಳಲ್ಲಿಯೇ ? ಎಂದು ಕೇಳಿದರೆ ವ್ಯಕ್ತಿ ಶಕ್ತಿವಾದಿ ಏನು ಹೇಳಬೇಕು. ಒಂದು ವ್ಯಕ್ತಿಯಲ್ಲಿ ಮಾತ್ರ ಶಕ್ತಿಯೆಂದರೆ ವ್ಯಭಿಚಾರದೋಷ ಬರುತ್ತದೆ. ಎದುರಿಗಿರುವ ಒಂದು ಘಟದಲ್ಲಿ ಶಕ್ತಿ ಗೃಹೀತವಾಗುತ್ತದೆಂದರೆ ಆಗ ದೇಶಾಂತರಗಳಲ್ಲಿರುವ ಘಟವ್ಯಕ್ತಿಗಳಲ್ಲಿ ಶಕ್ತಿ ಗೃಹೀತವಾಗುವುದಿಲ್ಲ. ಆದರೆ ಅದೇ ಘಟಪದದಿಂದ ಅಲ್ಲಿ ಶಾಬ್ದಬೋಧ ಬರುವುದರಿಂದ ಶಕ್ತಿ ಜ್ಞಾನವಿಲ್ಲದೇ ಬೋಧಬಂದಂತಾಗುವುದರಿಂದ ವ್ಯಭಿಚಾರ ಬರುತ್ತದೆ. ಶಕ್ತಿ ಜ್ಞಾನಾಭಾವಸಾಮ್ಯದಿಂದ ಘಟಪದದಿಂದ ಪಟರೂಪಾರ್ಥ ಭಾನವೂ ಬರಲಿ ಎಂದು ಆಕ್ಷೇಪಿಸಬಹುದು. ಇನ್ನು ಸಕಲವ್ಯಕ್ತಿಗಳಲ್ಲಿಯೂ ಶಕ್ತಿ ಜ್ಞಾನ ವುಂಟಾಗುತ್ತದೆಂದರೆ ಆಗ ಆನಂತ್ಯದೋಷ ಬರುತ್ತದೆ. ಪ್ರತಿ ವ್ಯಕ್ತಿಯಲ್ಲಿಯೂ ಶಕ್ತಿಭೇದದಿಂದ ಶಕ್ತ್ಯಾನಂತ್ಯ ದೋಷವೆಂದು ತಾತ್ಪರ್ಯ.

ಜಾತಿವಿಶಿಷ್ಟ ವ್ಯಕ್ತಿಯಲ್ಲಿ ಶಕ್ತಿ ಸ್ವೀಕಾರಮಾಡಿದರೆ ಆಗ ಜಾತಿಯಲ್ಲಿಯೂ ಆವಶ್ಯಕವಾಗಿ ಶಕ್ತಿಯನ್ನು ಅಂಗೀಕರಿಸಬೇಕಾತ್ತದೆ. 'ನಾಗೃಹೀತವಿಶೇಷಣಾ ಬುದ್ಧಿಃ ವಿಶಿಷ್ಟೇ ಉಪಜಾಯತೇ' ಎಂದು ನ್ಯಾಯ. ವಿಶೇಷಣಜ್ಞಾನ ಗೃಹೀತವಾಗದೆ ಯಾವಾಗಲೂ ವಿಶೇಷಣ ವಿಶಿಷ್ಟವಸ್ತು ಪರಿಜ್ಞಾನ ಬರುವುದಿಲ್ಲ. ಆದುದರಿಂದ ವಿಶೇಷಣವಾದ ಜಾತಿಯಲ್ಲಿ ಶಕ್ತಿ ಹೇಳುವುದೇ ಉತ್ತಮಮಾರ್ಗ. ಆಮೇಲೆ 'ವಿಶೇಷ್ಯಂ ನಾಭಿಧಾಗಚ್ಛೇತ್ ಕ್ಷೀಣಶಕ್ತಿರ್ವಿಶೇಷಣೇ" ಎಂಬ ನ್ಯಾಯದಿಂದ ವಿಶೇಷಣವನ್ನು ತಿಳಿಸಿ ಕೊಡುವುದರಿಂದ ಕುಂಠಿತವಾದ ಸ್ವಸಾಮರ್ಥ್ಯವುಳ್ಳ ಶಕ್ತಿಯು ವಿಶೇಷ್ಯವನ್ನು (ವ್ಯಕ್ತಿ) ಎಂದು ಬೋಧಿಸುವುದಿಲ್ಲ. ಹಾಗಾದರೆ ವ್ಯಕ್ತಿಭಾನ ಬರುವುದು ಹೇಗೆ? ಅಂದರೆ 'ಗಾಮಾನಯ' ಇತ್ಯಾದಿ ವಾಕ್ಯಗಳಲ್ಲಿ ಆನಯನ ಕರ್ಮತ್ವವು ಜಾತಿಯಲ್ಲಿ ಸಂಭವಿಸದಿರುವುದರಿಂದ ಅನ್ವಯೋ ಪಪತ್ತಿಗೋಸ್ಕರ ಅರ್ಥಾಪತ್ತಿ ಪ್ರಮಾಣದಿಂದ ವ್ಯಕ್ತಿಜ್ಞಾನ ಬರುತ್ತದೆ. ಉಪಪಾದಕ ಜ್ಞಾನಕ್ಕೆ ಕಾರಣವಾದ ಉಪಪಾದ್ಯ ಜ್ಞಾನಕ್ಕೆ ಅರ್ಥಾಪತ್ತಿ ಪ್ರಮಾಣವೆಂದು ಕರೆಯುತ್ತಾರೆ. ಉಪಪಾದ್ಯ ಜ್ಞಾನದಿಂದ ಉಪಪಾದಕಲ್ಪನೆಗೆ ಅರ್ಥಾಪತ್ತಿ ಪ್ರಮೆಯೆಂದು ಹೇಳುತ್ತಾರೆ. ಸ್ಥೂಲನಾದ ದೇವದತ್ತನು ಹಗಲಿನಲ್ಲಿ ಊಟ ಮಾಡುವುದಿಲ್ಲವೆಂದರೆ ರಾತ್ರಿ ಭೋಜನವಿಲ್ಲದೇ ಸ್ಥೂಲತ್ವ ಕೂಡದಿರುವುದರಿಂದ ಸ್ಥೂಲತ್ವ ಜ್ಞಾನವೇ ಉಪಪಾದ್ಯ ಜ್ಞಾನವಾಗಿ ಕರಣವಾಗುತ್ತದೆ. ರಾತ್ರಿ ಭೋಜನ ಜ್ಞಾನವು ಉಪಪಾದಕಜ್ಞಾನವಾಗಿ ಫಲವಾಗುತ್ತದೆ. ಹೀಗೆ ಹಗಲು ಊಟ ಮಾಡದಿರುವ ದೇವದತ್ತನಿಗೆ ಸ್ಥೂಲತ್ವ ಬರುವುದು ಹೇಗೆ? ಅದು ಅನುಪಪನ್ನವಾಗಿ ತನ್ನ ಉಪಪತ್ತಿಗೋಸ್ಕರ ಉಪಪಾದಕವಾಗಿ ರಾತ್ರಿ ಭೋಜನವನ್ನು ಕಲ್ಪಿಸುತ್ತದೆ. ಪ್ರಕೃತ ವ್ಯಕ್ತಿ ಇಲ್ಲದೇ ಕೇವಲ ಗೋತ್ವಕ್ಕೆ ಆನಯನ ಕೂಡದಿರುವುದರಿಂದ ಜಾತಿ ಶಕ್ತಿ ಜ್ಞಾನವು ಉಪಪಾದ್ಯವಾಗಿ (ಕರಣ) ಉಪಪತ್ತಿಗೋಸ್ಕರ ವ್ಯಕ್ತಿ ಜ್ಞಾನವನ್ನು ಕಲ್ಪಿಸುತ್ತದೆ. (ಇದೇ ಉಪಪಾದಕಜ್ಞಾನ ಫಲ.)

ಇದೇ ಅನುಪಪತ್ತಿಯನ್ನು ಕೆಲವರು ಬೇರೆ ರೀತಿಯಿಂದ ಪರಿಹರಿಸುವುದನ್ನು ತೋರಿಸುತ್ತಾನೆ. 'ವ್ಯಕ್ತಿ—' ಇತಿ. ವ್ಯಕ್ತಿ ಇಲ್ಲದೇ ಜಾತಿಭಾನ ಕೂಡದಿರುವುದ

ರಿಂದ ಭಾಸಕಸಾಮಗ್ರಿಯಿಂದಲೇ ವ್ಯಕ್ತಿಭಾನವೂ ಆಗುವುದರಿಂದ ಆರ್ಥಿಕವಾಗಿ ವ್ಯಕ್ತಿ ಭಾನವು ಸ್ವತಃ ಸಿದ್ಧವಾಗುತ್ತದೆ. ಆದರೆ ವ್ಯಕ್ತಿಭಾನಕ್ಕೋಸ್ಕರ ಯಾವ ಶಕ್ತಿಯೂ ಬೇಕಾಗಿಲ್ಲವೆಂದು ಮೀಮಾಂಸಕರ ಸಿದ್ಧಾಂತ. ಇದು ಸರಿಯಲ್ಲವೆಂದು ಖಂಡಿಸುತ್ತಾನೆ. 'ತನ್ನ—' ಇತಿ. ವ್ಯಕ್ತಿಯಲ್ಲಿ ಶಕ್ತಿ ಸ್ವೀಕರಿಸದಿದ್ದರೆ ಆಗ ವ್ಯಕ್ತಿಗೆ ಶಾಬ್ದ ಬೋಧದಲ್ಲಿ ಭಾನವೇ ಇಲ್ಲದಂತಾಗುತ್ತದೆ. ವ್ಯಕ್ತಿ ಜ್ಞಾನ ಸಹಕೃತ ಪದಜ್ಞಾನಜನ್ಯ ಪದಾರ್ಥೋಪ ಸ್ಥಿತಿಯು ಶಾಬ್ದಬೋದಕ್ಕೆ ಕಾರಣವಾಗುವುದರಿಂದ ವ್ಯಕಿಯಲ್ಲಿ ಪದಕ್ಕೆ ಶಕ್ತಿ ಇಲ್ಲದಿದ್ದರೆ ವ್ಯಕ್ತಿಪ್ರತೀತಿಯೇ ಬರಲಾರದು.

ಗೋಪದದಿಂದ ಗೋತ್ವವೇ ಶಕ್ಯವಾದರೆ (ಶಕ್ತಿಯಿಂದ ತೋರಿದರೆ, ವಾಚ್ಯವಾದರೆ) ಗೋಪದದಿಂದ ಗೋವ್ಯಕ್ತಿಗೆ ಭಾನ ಬರುವುದಿಲ್ಲ. ಜಾತಿಯಿಂದ ವ್ಯಕ್ತಿಗೆ ಆಕ್ಷೇಪದಿಂದ ಭಾನವೆಂದರೆ ಎರಡಕ್ಕೂ (ಜಾತಿ, ವ್ಯಕ್ತಿ) ಸಾಮಾನಾಧಿಕರಣ್ಯವಿಲ್ಲದಿರುವುದರಿಂದ ಅವು ಗಳಿಗೆ ವ್ಯಾಪ್ತಿಯೇ ಇಲ್ಲದಿರುವಾಗ ಆಕ್ಷೇಪ ಬರುವುದು ಹೇಗೆ? ಯತ್ರಸಮವಾಯೇನ ಜಾತಿಃ ತತ್ರ ತಾದಾತ್ಮ್ಯೇನ ವ್ಯಕ್ತಿಃ' ಎಂದು ವ್ಯಾಪ್ತಿಯನ್ನು ಅಂಗೀಕರಿಸಿದರೂ, ವ್ಯಕ್ತಿಯು ಪದಾರ್ಥವಾಗದಿರುವುದರಿಂದ ಅದರಲ್ಲಿ ವಿಭಕ್ತ್ಯರ್ಥ ಸಂಖ್ಯಾಕರ್ಮತ್ವಾದಿ ಗಳಿಗೆ ಅನ್ವಯ ಬರಲಾರದು. 'ಪದಾರ್ಥಃ ಪದಾರ್ಥೇನ ಅನ್ವೇತಿ ನತು ಪದಾರ್ಥೈಕ ದೇಶೇನ' ಎಂಬ ವ್ಯುತ್ಪತ್ತಿಗೆ ಮೀಮಾಂಸಕ ಮತದಲ್ಲಿ ವಿರೋಧ ಬರುತ್ತದೆ. ಅವರ ಮತದಲ್ಲಿ ಜಾತಿಯೇ ಪದಾರ್ಥವಾದುದರಿಂದ, ವ್ಯಕ್ತಿಯು ಪದಾರ್ಥದ ಏಕದೇಶ ವಾದುದರಿಂದ ಅಲ್ಲಿ ಯಾವುದಕ್ಕೂ ಅನ್ವಯ ಬರಲಾರದು. ಆದುದರಿಂದ ಶಕ್ತಿಗ್ರಾಹಕ ವಾದ ಆನಯನಾದಿ ವ್ಯವಹಾರವು ವ್ಯಕ್ತಿಯಲ್ಲಿಯೇ ಪ್ರಸಿದ್ಧವಾದುದರಿಂದ ವ್ಯಕ್ತಿ ಯಲ್ಲಿಯೇ ಶಕ್ತಿ ಹೇಳಬೇಕು. ಜಾತಿಯಲ್ಲಿಯೂ, ವ್ಯಕ್ತಿಯಲ್ಲಿಯೂ ಎರಡರಲ್ಲಿಯೂ ಶಕ್ತಿ ಹೇಳಿದರೆ ಗೌರವ ಬರುವುದರಿಂದ ವ್ಯಕ್ತಿ ಶಕ್ತಿವಾದವೇ ಸಮಂಜಸವಾಗಿದೆ.

ನಚ ವ್ಯಕ್ತೌ ಲಕ್ಷಣಾ, ಅನುಪಪತ್ತಿ ಪ್ರತಿಸಂಧಾನಂ ವಿನಾಪಿ ವ್ಯಕ್ತಿಬೋಧಾತ್ । ನ ಚ ವ್ಯಕ್ತಿಶಕ್ತಾವಾನಂತ್ಯಂ, ಸಕಲವ್ಯಕ್ತೌ ಏಕಸ್ಯಾ ಏವ ಶಕ್ತೇಃ ಸ್ವೀಕಾರಾತ್ । ನ ಚಾನನುಗಮಃ, ಗೋತ್ವಾದೇರೇವಾನು ಗಮಕತ್ವಾತ್ । ಕಿಂಚ ಗೌಃ ಶಕ್ಯಾ ಇತಿ ಶಕ್ತಿಗ್ರಹೋ ಯದಿ ತದಾ ವ್ಯಕ್ತೌ ಶಕ್ತಿಃ, ಯದಿ ತು ಗೋತ್ವಂ ಶಕ್ಯಮಿತಿ ಶಕ್ತಿ ಗ್ರಹಸ್ತದಾ ಗೋತ್ವ ಪ್ರಕಾರಕ ಪದಾರ್ಥಸ್ಮರಣಂ ಶಾಬ್ದಬೋಧಶ್ಚ ನ ಸ್ಯಾತ್ । ಸಮಾನ ಪ್ರಕಾರಕತ್ವೇನ ಶಕ್ತಿ ಜ್ಞಾನಸ್ಯ ಪದಾರ್ಥಸ್ಮರಣಂ ಶಾಬ್ದ ಬೋಧಂ ಪ್ರತಿ ಚ ಹೇತುತ್ವಾತ್ ॥

ವ್ಯಕ್ತಿ ಬೋಧವು ಲಕ್ಷಣಾವೃತ್ತಿಯಿಂದ ಬರುತ್ತದೆ. ಜಾತಿಯಲ್ಲಿಯೇ ಶಕ್ತಿ ಹೇಳಿದರೆ ಯಾವ ದೋಷವೂ ಇಲ್ಲ. ವೃತ್ತಿ ಜ್ಞಾನ (ಶಕ್ತಿ ಅಥವಾ ಲಕ್ಷಣ) ಸಹಕೃತ ಪದ ಜನ್ಯಪದಾರ್ಥೋಪಸ್ಥಿತಿಯು ಶಾಬ್ದಬೋಧಕ್ಕೆ ಕಾರಣವೆಂದು ಕಲ್ಪಿಸುತ್ತೇವೆಯೆಂದು ಮೀಮಾಂಸಕನು ಹೇಳುವುದಾದರೆ ಅದಕ್ಕೆ ದೋಷತೋರಿಸುತ್ತಾನೆ. 'ಅನುಪಪತ್ತಿ—'

ಇತಿ. ಎಲ್ಲಿ ಅನ್ವಯವು ಅನುಪಪನ್ನವಾಗುವುದೋ ಅಥವಾ ತಾತ್ಪರ್ಯಾನುಪಪತ್ತಿಯಿದೆಯೋ ಅಲ್ಲಿ ಲಕ್ಷಣಾವೃತ್ತಿಯನ್ನು ಕಲ್ಪಿಸುತ್ತಾರೆ. ಇದನ್ನು ಮುಂದೆ ವಿವರಿಸುತ್ತಾನೆ. ಪ್ರಕೃತ ವ್ಯಕ್ತಿಯಲ್ಲಿ ಲಕ್ಷಣಾ ಕಲ್ಪಿಸಲು ಕಾರಣವೇನು ? 'ಗಾಮಾನಯ' ಎಂಬಲ್ಲಿ ಗೋಪದಕ್ಕೆ ಗೋತ್ವದಲ್ಲಿ ಶಕ್ತಿ ಹೇಳಿರುವುದರಿಂದ ಆನಯನ ಕರ್ಮತ್ವ ಅನ್ವಯವು ಬಾಧಿತವಾದುದರಿಂದ ವ್ಯಕ್ತಿಯಲ್ಲಿ ಲಕ್ಷಣಾ ಹೇಳಿದರೂ 'ಗೌರಸ್ತಿ' ಎಂಬಲ್ಲಿ ಯಾವ ಬಾಧವೂ ಇಲ್ಲ. ಗೋತ್ವದಲ್ಲಿ ಶಕ್ತಿ ಹೇಳಿದರೂ ಅದಕ್ಕೆ ಅಸ್ತಿತ್ವಾನ್ವಯವು ಬಾಧಿತವಾಗುವುದಿಲ್ಲ. ಆದುದರಿಂದ ಲಕ್ಷಣಾ ಕಲ್ಪಿಸುವುದರಿಂದ ಯಾವ ಉಪಯೋಗವೂ ಇಲ್ಲ. ಕಲ್ಪಿಸಲು ನಿಮಿತ್ತವೂ ಇಲ್ಲ. ವ್ಯಕ್ತಿಯಲ್ಲಿ ಶಕ್ತಿ ಕಲ್ಪಿಸಿದರೆ ವ್ಯಕ್ತಿಗಳು ಅನಂತವಾದುದರಿಂದ ಶಕ್ತ್ಯಾನಂತ್ಯಕಲ್ಪನಾದೋಷ ಬರುವುದಿಲ್ಲವೇ ? ಎಂದು ಶಂಕಿಸಿದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಸಕಲ—' ಇತಿ. ಸಕಲವ್ಯಕ್ತಿಗಳಲ್ಲಿಯೂ ಒಂದೇ ಈಶ್ವರೇಚ್ಛಾರೂಪ ಶಕ್ತಿಯನ್ನು ಅಂಗೀಕರಿಸುವುದರಿಂದ ದೋಷವಿಲ್ಲ. ಭಗವದಿಚ್ಛಾರೂಪ ಶಕ್ತಿಯು ಒಂದಾದುದರಿಂದ ವಿಷಯರೂಪದಿಂದ ವ್ಯಕ್ತಿಭೇದದಿಂದ ಭಿನ್ನ ಭಿನ್ನವಾಗಿದ್ದರೂ ದೋಷವಿಲ್ಲ.

ಗೋಘಟಾದಿ ವ್ಯಕ್ತಿಗಳು ವಿಭಿನ್ನಾಕಾರಗಳಾದುದರಿಂದ ಅನುಗತವಾಗಿಲ್ಲ. (ಏಕರೂಪವಾಗಿಲ್ಲ.) ಕಾರಣತಾ ಯಾವಾಗಲೂ ಒಂದು ಧರ್ಮಾವಚ್ಛಿನ್ನವಾಗಿರುತ್ತದೆ. ನಿರವಚ್ಛಿನ್ನಕಾರಣತಾ ಇಲ್ಲವೇ ಇಲ್ಲ. ಇಲ್ಲಿ ವಿಷಯತಾಸಂಬಂಧದಿಂದ ಶಕ್ತಿ ಜ್ಞಾನ ಕಾರಣತಾ ಹೇಳಬೇಕು. ಗೋಘಟಾದಿಗಳು ಅನನುಗತವಾಗಿರುವುದರಿಂದ ಶಕ್ತಿಜ್ಞಾನ ಕಾರಣತಾದಲ್ಲಿ ಶಕ್ಯತಾವಚ್ಛೇದಕಧರ್ಮಾಭಾವರೂಪ ಅನನುಗಮರೂಪದೋಷ ಬರುವುದಿಲ್ಲವೇ ? ಎಂಬ ಶಂಕೆಗೆ ಸಮಾಧಾನ ತೋರಿಸುತ್ತಾನೆ. 'ಗೋತ್ವಾದೇಃ—' ಇತಿ. ಗೋಸಾಮಾನ್ಯನಿರೂಪಿತ ಸಾಧಾರಣಧರ್ಮವು ಗೋತ್ವವಾಗುವುದರಿಂದ ದೋಷ ಬರುವುದಿಲ್ಲ. ಏವಕಾರಕ್ಕೆ ಭಿನ್ನಕ್ರಮ ಹೇಳಬೇಕು. 'ಅನುಗಮಕತ್ವಾದೇವ' ಎಂದು ಅನ್ವಯ. ಗೋವ್ಯಕ್ತಿವಿಷಯಕ ಶಾಬ್ದಬೋಧವನ್ನು ಕುರಿತು ಗೋತ್ವವಿಶಿಷ್ಟವಿಷಯಕ ಶಕ್ತಿ ಜ್ಞಾನ ಕಾರಣ. ಘಟವ್ಯಕ್ತಿವಿಷಯಕ ಶಾಬ್ದಬೋಧವನ್ನು ಕುರಿತು ಘಟತ್ವವಿಶಿಷ್ಟವಿಷಯಕ ಶಕ್ತಿಜ್ಞಾನ ಕಾರಣವೆಂದು ಕಲ್ಪಿಸುವುದರಿಂದ ಅನನುಗಮದೋಷಕ್ಕೆ ಅವಕಾಶವಿಲ್ಲ.

ಪ್ರಕಾರಾಂತರದಿಂದ ಮೀಮಾಂಸಕಮತದಲ್ಲಿ ದೋಷೋದ್ಘಾಟನೆ ಮಾಡಿ ತನ್ನ ಸಿದ್ಧಾಂತದಲ್ಲಿ ಸಾಧುತ್ವವನ್ನು ತೋರಿಸುತ್ತಾನೆ. 'ಕಿಂಚ—' ಇತಿ. ಗೌಃಶಕ್ಯಾ—ಗೌಃ ಗೋಪದಶಕ್ಯಾ' ಎಂದು ಶಕ್ತಿಜ್ಞಾನ ಉಂಟಾಗಿದ್ದರೆ ಆಗ ಗೋವ್ಯಕ್ತಿಯಲ್ಲಿಯೇ ಮುಖ್ಯಶಕ್ತಿ ಹೇಳಿದಂತಾಗುತ್ತದೆ. 'ಗೋತ್ವಂ ಗೋಪದಶಕ್ಯಂ' ಎಂದು ಶಕ್ತಿಜ್ಞಾನ ಬರುತ್ತದೆ ಎಂದರೆ ಆಗ ಗೋವ್ಯಕ್ತಿರೂಪಪದಾರ್ಥಕ್ಕೆ ಗೋತ್ವಪ್ರಕಾರಕವಾದ ಸ್ಮರಣವಾಗಲೀ, ಗೋತ್ವಪ್ರಕಾರಕಗೋವಿಶೇಷ್ಯಕ ಶಾಬ್ದಬೋಧವಾಗಲೀ ಬರಲಾರದು. ಏಕೆಂದರೆ ಸಮಾನಪ್ರಕಾರಕತ್ವರೂಪದಿಂದ ಶಕ್ತಿಜ್ಞಾನವು ಪದಾರ್ಥಸ್ಮರಣವನ್ನು ಕುರಿತು

ಕಾರಣ. ಸಮಾನಪ್ರಕಾರಕವಾದ ಪದಾರ್ಥಸ್ಮರಣವು ಸಮಾನಪ್ರಕಾರಕಶಾಬ್ದಬೋಧವನ್ನು ಕುರಿತು ಕಾರಣ ನಿಯತವಾಗಿದೆ. ಯತ್ಪ್ರಕಾರಕ ಯದ್ವಿಶೇಷಕಶಕ್ತಿಜ್ಞಾನವುಂಟಾಗಿದೆಯೋ ಅದು ತತ್ಪ್ರಕಾರಕ ಪದಾರ್ಥಸ್ಮರಣೆಯನ್ನೂ, ತತ್ಪ್ರಕಾರಕತದ್ವಿಶೇಷ್ಯಕ ಶಾಬ್ದಬೋಧವನ್ನು ಹುಟ್ಟಿಸುವುದರಿಂದ, ಗೋತ್ವದಲ್ಲಿ ಶಕ್ತಿಜ್ಞಾನವುಂಟಾದರೆ ಗೋವ್ಯಕ್ತಿರೂಪಪದಾರ್ಥಸ್ಮರಣೆ ಬರುವುದು ಹೇಗೆ ? ಶಾಬ್ದಬೋಧದಲ್ಲಿ ಗೋವ್ಯಕ್ತಿವಿಶೇಷ್ಯಕ ಗೋತ್ವಪ್ರಕಾರಕತ್ವವು ತೋರುವುದಾದರೂ ಹೇಗೆ ? ಹಿಂದೆ ಹೇಳಿದ ಕಾರ್ಯಕಾರಣಭಂಗ ಬರುವುದರಿಂದ ಮೀಮಾಂಸಕನಮತವು ಅನುಪಾದೇಯವಾಗಿದೆ.

ಕಿಂಚ—ಗೋತ್ವೇಯದಿ ಶಕ್ತಿಸ್ತದಾ ಗೋತ್ವತ್ವಂ ಶಕ್ಯತಾವಚ್ಛೇದಕಂ ವಾಚ್ಯಮ್ ।
ಗೋತ್ವತ್ವಂ ತು ಗವಿತರಾಸಮವೇತತ್ವೇ ಸತಿ ಸಕಲಗೋಸಮವೇತತ್ವಮ್ ।
ತಥಾ ಚ ಗೋವ್ಯಕ್ತೀನಾಂ ಶಕ್ಯತಾವಚ್ಛೇದಕಾನುಪ್ರವೇಶಾತ್ತತ್ವೈವ ಗೌರವಮ್।
ತಸ್ಮಾತ್ ತತ್ತಜ್ಜಾತ್ಯಾಕೃತಿ ವಿಶಿಷ್ಟತತ್ತದ್ವ್ಯಕ್ತಿಬೋಧಾನುಪಪತ್ತ್ಯಾ ಕಲ್ಪ್ಯಮಾನಾ ಶಕ್ತಿರ್ಜಾತ್ಯಾಕೃತಿವಿಶಿಷ್ಟವ್ಯಕ್ತೌ ವಿಶ್ರಾಮ್ಯತೀತಿ ॥

ಜಾತಿ ಶಕ್ತಿವಾದದಲ್ಲಿ ಗೌರವದೋಷವನ್ನು ತೋರಿಸುತ್ತಾನೆ. 'ಕಿಂಚ—' ಇತಿ. 'ಗೋಪದಾತ್ ಗೋತ್ವಂ ಬೋದ್ಧವ್ಯಮ್' ಎಂದು ಈಶ್ವರೇಚ್ಛಾರೂಪಶಕ್ತಿಯು ಇಷ್ಟವಾದರೆ ಆಗ ಗೋತ್ವತ್ವವು ಶಕ್ಯತಾವಚ್ಛೇದಕವೆಂದು ಅವಶ್ಯವಾಗಿ ಒಪ್ಪಿಕೊಳ್ಳಬೇಕು. ಆಗ ಗೋತ್ವತ್ವವೆಂದರೇನು ಎಂದು ಕೇಳಿದರೆ ತದ್‌ವ್ಯಕ್ತಿತ್ವವೆಂದು ಹೇಳಲು ಸಾಧ್ಯವಿಲ್ಲ. ಗೋಭಿನ್ನದಲ್ಲಿಯೂ ತದ್ವ್ಯಕ್ತಿತ್ವಧರ್ಮವಿರುವುದರಿಂದ ಅದು ವ್ಯಾವರ್ತಕವಾಗಲಾರದು. ಆದುದರಿಂದ 'ಗವಿತರಾಸಮವೇತತ್ವೇ ಸತಿ, ಸಕಲಗೋಸಮವೇತತ್ವಂ' ಎಂದು ಹೇಳಬೇಕು. ಗೋಭಿನ್ನಧರ್ಮಗಳಲ್ಲಿ ಸಮವಾಯಸಂಬಂಧದಿಂದ ಇರದೆ ಸಕಲಗೋವ್ಯಕ್ತಿಗಳಲ್ಲಿ ಸಮವಾಯದಿಂದ ಇರುವ ಧರ್ಮವೆಂದರ್ಥ. ಆಗ ಶಕ್ಯತಾವಚ್ಛೇದಕಕೋಟಿಯಲ್ಲಿ ಸಕಲ (ಅನಂತ) ಗೋವ್ಯಕ್ತಿಗಳಿಗೆ ಪ್ರವೇಶ ಬರುವುದರಿಂದ ಗೌರವ ಬರುತ್ತದೆ. ಶಕ್ಯತಾವಚ್ಛೇದಕಕೋಟಿಯಲ್ಲಿ ಸೇರಿರುವವುಗಳಿಗೆಲ್ಲಾ ಅವಚ್ಛೇದಕತ್ವವಿರುವುದರಿಂದ ಅನಂತಗೋವ್ಯಕ್ತಿಗಳಿಗೆ ಶಕ್ಯತಾವಚ್ಛೇದಕತ್ವ ಬಂದು ಮಹಾಗೌರವದೋಷ ಬರುತ್ತದೆ.

ಹೀಗೆ ಮೀಮಾಂಸಕಮತದಲ್ಲಿ ದೋಷ ತೋರಿಸಿ ಸ್ವಮತದ ಉಪಸಂಹಾರ ತೋರಿಸುತ್ತಾನೆ. 'ತಸ್ಮಾತ್—' ಇತಿ. ಕೇವಲ ಜಾತಿಯಲ್ಲಿಯಾಗಲೀ, ವ್ಯಕ್ತಿಯಲ್ಲಿಯಾಗಲೀ, ಆಕೃತಿಯಲ್ಲಿಯಾಗಲೀ, ಶಕ್ತಿ ಹೇಳಿದರೆ ಎಲ್ಲಿ ಶಕ್ತಿ ಹೇಳಿದೆಯೋ ತನ್ಮಾತ್ರಬೋಧವಾಗಿ ತದಿತರಬೋಧ ಬಾರದಿರುವುದರಿಂದ ಜಾತ್ಯಾದಿಮೂರರಲ್ಲಿಯೂ ಒಂದೇ ಶಕ್ತಿಕಲ್ಪಿಸಬೇಕು. ಆದುದರಿಂದಲೇ 'ಜಾತ್ಯಾಕೃತಿವ್ಯಕ್ತಯಃ ಪದಾರ್ಥಃ' ಎಂದು ಸೂತ್ರಕಾರರು ಹೇಳಿರುತ್ತಾರೆ. ಇದರಿಂದ ತತ್ತಜ್ಜಾತ್ಯಾಕೃತಿವಿಶಿಷ್ಟವ್ಯಕ್ತಿಯಲ್ಲಿಯೇ ಶಕ್ತಿಪರ್ಯವಸಾನವಾಗುತ್ತದೆ. 'ಗೋಪದಾತ್ ಸಾಸ್ನಾದಿಮತ್ತ್ವವಿಶಿಷ್ಟಗೌರ್ಬೋದ್ಧ್ಯಾ' 'ಘಟಪದಾತ್ ಕಂಬುಗ್ರೀವಾದಿಮತ್ತ್ವವಿಶಿಷ್ಟಘಟಾದಿರ್ಬೋಧ್ಯಾ' ಎಂದು ಶಕ್ತ್ಯಾಕಾರ

ವಾಗುತ್ತದೆ. ಘಟಪದವು ಘಟತ್ವವಿಶಿಷ್ಟವ್ಯಕ್ತಿಯಲ್ಲಿ ಶಕ್ತವಾಗಿರುವುದರಿಂದ ಜಾತ್ಯಾ ಕೃತಿಗಳು ಘಟಪದವಾಚ್ಯವಾಗುತ್ತವೆ. ಘಟಘಟತ್ವಗಳ ಶಾಬ್ದಬೋಧಬರಬೇಕಾದರೆ ಘಟತ್ವೀಯಶಕ್ತಿಜ್ಞಾನ ಕಾರಣವೆಂದು ತಿಳಿಯಬೇಕು.

ತದ್ ಶಬ್ದಕ್ಕೆ ವಕ್ತೃಬುದ್ಧಿವಿಷಯತಾವಚ್ಛೇದಕೀಭೂತಘಟತ್ವಾದ್ಯವಚ್ಛಿನ್ನದಲ್ಲಿ ಶಕ್ತಿ. ಇದಂ, ಏತದ್ ಶಬ್ದಗಳಿಗೆ ಪ್ರತ್ಯಕ್ಷಬುದ್ಧಿವಿಷಯದಲ್ಲಿಯೂ, ಅದಸ್, ಶಬ್ದಕ್ಕೆ ಪರೋಕ್ಷಬುದ್ಧಿವಿಷಯದಲ್ಲಿಯೂ ಶಕ್ತಿ. ಕಿಂಪದಕ್ಕೆ ಅನಿರ್ಧಾರಿತವಿಶೇಷದಲ್ಲಿ ಅಥವಾ ಜಿಜ್ಞಾಸಾವಿಷಯತ್ವವಿಶಿಷ್ಟದಲ್ಲಿ ಶಕ್ತಿ. ಸರ್ವಪದಕ್ಕೆ ವ್ಯಾಪಕತ್ವದಲ್ಲಿ ಶಕ್ತಿ. 'ಸರ್ವೇ ಘಟಾಃ ರೂಪವಂತಃ' ಎಂಬಲ್ಲಿ ಘಟತ್ವವ್ಯಾಪಕತ್ವ ರೂಪವತ್ವದಲ್ಲಿ ತೋರುತ್ತದೆ. (ಘಟತ್ವವ್ಯಾಪಕಂರೂಪವತ್ತ್ವಂ') ತ್ವಂಪದಕ್ಕೆ ತತ್ಕಾಲೀನಸಂಬೋಧ್ಯಚೈತ್ರತ್ವಾದಿಗಳು ಶಕ್ಯತಾವಚ್ಛೇದಕಗಳಾಗುತ್ತವೆ. ಅಹಂಪದಕ್ಕೆ ತತ್ಕಾಲೀನಸ್ವತಂತ್ರೋಚ್ಚಾರಯಿತೃ ಚೈತ್ರತ್ವಾದಿಗಳು ಶಕ್ಯತಾವಚ್ಛೇದಕವಾಗುತ್ತವೆ. ಸ್ವನಿಜಾದಿಪದಗಳಿಗೆ ಸಮಭಿವ್ಯಾಹೃತ ಪದೋಪಸ್ಥಾಪ್ಯಾರ್ಥದಲ್ಲಿ ಶಕ್ತಿ. ಅಸ್ಮತ್ ಪದಕ್ಕೆ ಉಚ್ಚಾರಣಕರ್ತೃವಿನಲ್ಲಿ ಶಕ್ತಿ. ಯುಷ್ಮದ್‌ಪದಕ್ಕೆ ಸಂಬೋಧ್ಯನಲ್ಲಿ ಶಕ್ತಿ. ಏವಪದಕ್ಕೆ ಕೈವಲ್ಯವಿಶಿಷ್ಟದಲ್ಲಿ ಶಕ್ತಿ. (ಸಜಾತೀಯ ದ್ವಿತೀಯರಾಹಿತ್ಯಂ ಕೈವಲ್ಯಂ.) ಹೀಗೆ ಸಾಮಾನ್ಯಶಕ್ತಿಜ್ಞಾನ ಹೇಳಿದೆ. ಶಕ್ತಿವಾದಾದಿಗಳಿಂದ ವಿವರವನ್ನು ತಿಳಿಯಬೇಕು.

ಶಕ್ತಂ ಪದಂ, ತಚ್ಚತುರ್ವಿಧಂ, ಕ್ವಚಿದ್ಯೌಗಿಕಂ, ಕ್ವಚಿದ್ರೂಢಂ ಕ್ವಚಿದ್ಯೋಗರೂಢಂ, ಕ್ವಚಿದ್ಯೌಗಿಕರೂಢಮ್ ॥ ತಥಾಹಿ—ಯತ್ರಾವಯಾರ್ಥ ಏವ ಬುಧ್ಯತೇ ತದ್ಯೌಗಿಕಮ್ । ಯಥಾ ಪಾಚಕಾದಿಪದಮ್ । ಯತ್ರಾವಯವಶಕ್ತಿನೈರ ಪೇಕ್ಷ್ಯೇಣ ಸಮುದಾಯಶಕ್ತಿಮಾತ್ರೇಣ ಬುಧ್ಯತೇ ತದ್ರೂಢಮ್ । ಯಥಾ ಗೋಮಂಡಲಾದಿಪದಮ್ । ಯತ್ರ ತು ಅವಯವಶಕ್ತಿವಿಷಯೇ ಸಮುದಾಯ ಶಕ್ತಿರಪ್ಯಸ್ತಿ ತದ್ಯೋಗರೂಢಮ್ । ಯಥಾ ಪಂಕಜಾದಿಪದಮ್ । ತಥಾಹಿ— ಪಂಕಜಪದಮವಯವಶಕ್ತ್ಯಾ ಪಂಕಜನಿಕರ್ತೃತ್ವರೂಪಮರ್ಥಂಬೋಧಯತಿ । ಸಮುದಾಯಶಕ್ತ್ಯಾಚ ಪದ್ಮತ್ವೇನ ರೂಪೇಣ ಪದ್ಮಂಬೋಧಯತಿ । ನ ಚ ಕೇವಲ ಯಾಽವಯವಶಕ್ತ್ಯಾ ಕುಮುದೇ ಪ್ರಯೋಗಃ ಸ್ಯಾದಿತಿವಾಚ್ಯಂ, ರೂಢಿಜ್ಞಾನಸ್ಯ ಕೇವಲ ಯೌಗಿಕಾರ್ಥಜ್ಞಾನೇ ಪ್ರತಿಬಂಧಕತ್ವಾದಿತಿಪ್ರಾಂಚಃ ॥

ಶಾಬ್ದಬೋಧವಲ್ಲಿ ಪದಜ್ಞಾನಕ್ಕೆ ಕರಣತ್ವ ಹೇಳಿರುವುದರಿಂದ ಪದಲಕ್ಷಣವನ್ನೂ ವಿಭಾಗವನ್ನೂ ತೋರಿಸುತ್ತಾನೆ. 'ಶಕ್ತಂ—' ಇತಿ. । ನಿರೂಪಕತಾಸಂಬಂಧದಿಂದ ಶಕ್ತಿ ವಿಶಿಷ್ಟವಾದದ್ದು ಪದವಾಗುತ್ತದೆ. ಇದು ನಾಲ್ಕು ವಿಧ. ಯೌಗಿಕ, ರೂಢ, ಯೋಗ ರೂಢ, ಯೌಗಿಕರೂಢವೆಂದು ಅವುಗಳ ಹೆಸರು ಕೇವಲ ಅವಯವಗಳಿಂದ ಪ್ರತಿಪಾದ್ಯ ವಾದ ಅರ್ಥವುಳ್ಳಪದವು ಯೌಗಿಕವಾಗುತ್ತದೆ. ಪಚತೀತಿ ಪಾಚಕಃ, ಪಚ್, ಧಾತು, ಣ್ವುಲ್ (ಅಕಾದೇಶ) ಪ್ರತ್ಯಯ ಹೀಗೆ,ಎರಡು ಅವಯವಗಳಿಂದ ಪಾಕಕರ್ತೃ ಎಂದರ್ಥ

ವಾಗುತ್ತದೆ. ಇದು ಸಮಾಸ, ತದ್ಧಿತಾಂತ, ಕೃದಂತವೆಂದು ಮೂರುವಿಧವಾಗಿರುತ್ತದೆ. ಅವಯವ ಶಕ್ತಿ ಇಲ್ಲದೆ (ಅವಯಾರ್ಥ) ಕೇವಲ ಸಮುದಾಯ ಶಕ್ತಿಯಿಂದ ಒಂದು ಅರ್ಥ ತಿಳಿಸುವ ಪದ ರೂಢವಾಗುತ್ತದೆ. ಗೌಃ ಇದು ರೂಢಪದ. ಇಲ್ಲಿ ಗಮ್ ಧಾತುವಿಗೆ ಡೋಸ್ ಪ್ರತ್ಯಯ ಬಂದು ಗೋಪದವಾದರೂ ಅವಯವ ಶಕ್ತಿಗೆ ಗ್ರಹಣ ವಿಲ್ಲ. ಹಾಗೆ ಗಮನಕರ್ತೃತ್ವರೂಪಾರ್ಥ ವಿವಕ್ಷಿತವಾದರೆ ನಾಯಿ ಮುಂತಾದವುಗಳಿಗೂ ಗೌಃ ಎಂದು ಹೇಳಬಹುದು. ಸದಾಗಮನವಿರುವ ಹಸುವಿಗೆ ಮಾತ್ರ 'ಗೌಃ' ಎಂದು ಪ್ರಯೋಗಿಸಬೇಕಾಗುತ್ತದೆ. ಮಲಗಿದ ಹಸುವಿನಲ್ಲಿ ಗೋಪದ ವ್ಯವಹಾರವಿಲ್ಲವೆಂದಾಗ ಬಹುದು. ಹಾಗೆ 'ಮಂಡಲಂ' ಎಂಬಲ್ಲಿಯೂ ಸಮುದಾಯ ಶಕ್ತಿಯಿಂದ ವರ್ತುಲ ವಾದ ಪರಿಧಿಯೆಂದರ್ಥ. 'ಮಂಡಂ ಲಾತಿ' ಎಂಬ ಅವಯವಾರ್ಥದಲ್ಲಿ ಶಕ್ತಿ ಇಲ್ಲ. ಅವಯವಶಕ್ತಿವಿಷಯದಲ್ಲಿ ಸಮುದಾಯ ಶಕ್ತಿಯೂ ಎಲ್ಲಿ ಇದೆಯೋ ಅದಕ್ಕೆ ಯೋಗ ರೂಢವೆನ್ನುತ್ತಾರೆ. 'ಪಂಕಜಂ' ಯೋಗರೂಢಪದ. ಪಂಕಾತ್ ಜಾಯತೇ ಇತಿ ಪಂಕಜಮ್' ಕೆಸರಿನಿಂದ ಹುಟ್ಟಿರುವುದೆಂಬ ಅವಯವಾರ್ಥವೂ ಇದೆ. ಪಂಕಜನಿ ಕರ್ತೃತ್ವರೂಪಾವಯವಾರ್ಥದೊಡನೆ ಸಮುದಾಯ ಶಕ್ತಿಯಿಂದ ಕಮಲವನ್ನೇ ಬೋಧಿಸುತ್ತದೆ. ಯೋಗರೂಢದಲ್ಲಿ ಆಶಂಕಿಸಿ ಸಮಾಧಾನ ತೋರಿಸುತ್ತಾನೆ. 'ನಚ—' ಇತಿ. ರೂಢಿಜ್ಞಾನಸಹಕಾರವಿಲ್ಲದೆ ಕೇವಲ ಪಂಕಜನಿ ಕರ್ತೃತ್ವರೂಪಾರ್ಥ ವನ್ನು ಸ್ವೀಕರಿಸಿ ನೈದಿಲೆಯನ್ನು ಏಕೆ ಬೋಧಿಸಬಾರದು ? (ಕೆಸರಿನಲ್ಲಿ ಹುಟ್ಟುವುದು ನೈದಿಲೆ, ಹುಳ ಮುಂತಾದವುಗಳು ಆಗಬಹುದು.) ಎಂದು ಶಂಕೆ. ಪ್ರಾಚೀನ ಮತ ದಿಂದ ಸಮಾಧಾನ ತೋರಿಸುತ್ತಾನೆ. 'ರೂಢಿ—' ಇತಿ. ಸಮುದಾಯಾರ್ಥ, ಅವ ಯವಾರ್ಥ ಎರಡೂ ಒಂದು ಕಡೆ ಸಂಭವಿಸುವಾಗ ಕೇವಲಾವಯಾರ್ಥ ಬೋಧವನ್ನು ಕುರಿತು ರೂಢಿಪ್ರಕಾರಕಜ್ಞಾನವು ಪ್ರತಿಬಂಧಕವಾಗುತ್ತದೆ. ಆದುದರಿಂದ ನೈದಿಲೆ ಮುಂತಾದ ಅರ್ಥವನ್ನು ಬೋಧಿಸದೆ ಕಮಲವನ್ನು ಮಾತ್ರ ತಿಳಿಸುತ್ತದೆ.

ವಸ್ತುತಸ್ತು ಸಮುದಾಯಶಕ್ತ್ಯುಪಸ್ಥಿತಪದ್ಮೇऽವಯಾರ್ಥ ಪಂಕಜನಿಕರ್ತುರನ್ವಯೋ ಭವತಿ ಸಾಂನಿಧ್ಯಾತ್ । ಯತ್ರ ತು ರೂಢ್ಯರ್ಥಸ್ಯ ಬಾಧಃ ಪ್ರತಿಸಂಧೀಯತೇ ತತ್ರ ಲಕ್ಷಣಯಾ ಕುಮುದಾದೇರ್ಬೋಧಃ । ಯತ್ರ ತು ಕುಮುದತ್ವೇನ ರೂಪೇಣ ಬೋಧೇ ನ ತಾತ್ಪರ್ಯಜ್ಞಾನಂ ಪದ್ಮತ್ವಸ್ಯಚ ಬಾಧಃ, ತತ್ರಾವಯವ ಶಕ್ತಿ ಮಾತ್ರೇಣ ನಿರ್ವಾಹ ಇತ್ಯಾಹುಃ । ಯತ್ರತು ಸ್ಥಲಪದ್ಮಾದಾವಯವಾರ್ಥ ಬಾಧಸ್ತತ್ರ ಸಮುದಾಯಶಕ್ತ್ಯಾ ಪದ್ಮತ್ವೇನರೂಪೇಣ ಬೋಧಃ । ಯದಿ ತು ಸ್ಥಲಪಂಕಜಂ ವಿಜಾತೀಯಮೇವ ತದಾ ಲಕ್ಷಣಯೈವೇತಿ । ಯತ್ರಾವಯಾರ್ಥ ರೂಢ್ಯರ್ಥಯೋಃ ಸ್ವಾತಂತ್ರ್ಯೇಣ ಬೋಧಸ್ತದ್ಯೌಗಿಕರೂಢಮ್ । ಯಥೋ ದ್ಭಿದಾದಿಪದಮ್ । ತತ್ರ ಹಿ—ಉದ್ಭೇದನಕರ್ತಾ ತರುಗುಲ್ಮಾದಿ ಬುಧ್ಯತೇ ಯಾಗವಿಶೇಷೋऽಪೀತಿ ॥ ೮೧ ॥

ಸ್ವಾಭಿಪ್ರೇತವಾದ ಮಣಿಕಾರರ ಮತವನ್ನು ತೋರಿಸುತ್ತಾನೆ. 'ವಸ್ತುತಸ್ತು—' ಇತಿ. ಅವಯವ ಶಕ್ತಿ ಇದ್ದಲ್ಲಿಯೂ ಮೊದಲು ಸಮುದಾಯ ಶಕ್ತ್ಯುಪಸ್ಥಿತವಾದ ಅರ್ಥದ ಬೋಧವೇ ಬರುತ್ತದೆ. ಸಮುದಾಯ ಶಕ್ತಿಗೆ ಅಧಿಕ ಬಲವೆಂದು ಹಿಂದೆಯೇ ಹೇಳಿವೆ. ಆದುದರಿಂದ (ಸಮು....ದ್ಮೇ) ರೂಢಿಜ್ಞಾನದಿಂದ ಉಂಟಾದ ಸ್ಮೃತಿಯಲ್ಲಿ ವಿಷಯವಾದಪದ್ಮದಲ್ಲಿ ಯೋಗಶಕ್ತಿ ಜ್ಞಾನ ಜನ್ಯಸ್ಮೃತಿವಿಷಯವಾದ ಪಂಕಜನಿಕರ್ತೃವಿಗೆ ಅನ್ವಯ ಬರುತ್ತದೆ. ಸಾನ್ನಿಧ್ಯಾತ್—ರೂಢ್ಯರ್ಥಕ್ಕೆ ಪ್ರಾಥಮಿಕೋಪಸ್ಥಿತಿ ವಿಷಯತ್ವವಿರುವುದರಿಂದ ಎಂದರ್ಥ. 'ಯತ್ರ—' ಇತಿ. ಎಲ್ಲಿ ರೂಢ್ಯರ್ಥಕ್ಕೆ ತಾತ್ಪರ್ಯಾನುಪಪತ್ತಿರೂಪವಾದ ಬಾಧ ಬರುತ್ತದೆಯೋ ಹಾಗೆ ಕುಮುದವಿಷಯಕ ಬೋಧದಲ್ಲಿ ತಾತ್ಪರ್ಯವಿದೆಯೋ ಅಲ್ಲಿ ಪಂಕಜಪದಕ್ಕೆ ಶಕ್ಯಸಂಬಂಧರೂಪಲಕ್ಷಣೆಯಿಂದ ಕುಮುದತ್ವಪ್ರಕಾರಕ ಶಾಬ್ದಬೋಧ ಬರುತ್ತದೆ. 'ಯತ್ರ—' ಇತಿ. ಯಾವ ವಾಕ್ಯದಲ್ಲಿರುವ ಪಂಕಜ ಪದದಲ್ಲಿ ಕುಮುದತ್ವಪ್ರಕಾರಕ ಬೋಧದಲ್ಲಿಯೂ ತಾತ್ಪರ್ಯವಿಲ್ಲವೋ. (ಕುಮುದತ್ವಾವಚ್ಛಿನ್ನ ವಿಷಯತಾಶಾಲಿಪ್ರತೀತೀಚ್ಛಯಾ ಉಚ್ಚರಿತತ್ವಜ್ಞಾನಾಭಾವಃ) ಪದ್ಮತ್ವಾವಚ್ಛಿನ್ನಾರ್ಥಕ್ಕೆ ಸಮಭಿವ್ಯಾಹೃತ ಪದಾರ್ಥದೊಡನೆ ಅನ್ವಯಾನುಪಪತ್ತಿರೂಪ ಬಾಧವಿದೆಯೋ, ಅಲ್ಲಿ ಕೇವಲಾವಯಶಕ್ತಿಯಿಂದ ಅಂದರೆ ಪಂಕಜನಿಕರ್ತೃತ್ವಪ್ರಕಾರಕ ಸ್ಮೃತಿಯಿಂದ ಕೇವಲಯೌಗಿಕಾರ್ಥ ವಿಷಯಕ ಶಾಬ್ದಬೋಧ ಬರುತ್ತದೆ. (ಹುಳ ಮುಂತಾದವುಗಳ ಬೋಧ.) ಸ್ಥಲಪದ್ಮದಲ್ಲಿ ಪಂಕಜಪದ ಪ್ರಯೋಗಿಸಿದರೆ ಅಲ್ಲಿ ಪಕಂಜನಿಕರ್ತೃತ್ವರೂಪ ಅವಯವಾರ್ಥಕ್ಕೆ ಅನ್ವಯಾನುಪಪತ್ತಿರೂಪ ಬಾಧ ಬರುವುದರಿಂದ ಅಲ್ಲಿ ಕೇವಲ ರೂಢಿ ಶಕ್ತಿಯಿಂದ ಪದ್ಮತ್ವ ಪ್ರಕಾರಕರೂಪದಿಂದಲೇ ಶಾಬ್ದ ಬೋಧ ಬರುತ್ತದೆ. ಪಂಕಜನಿಕರ್ತೃತ್ವಪ್ರಕಾರಕವಾಗಿ ಬೋಧ ಬರುವುದಿಲ್ಲ. 'ಯದಿ—' ಇತಿ. (ಬೆಟ್ಟದಾವರೆ) ಸ್ಥಲಪಂಕಜವು ವಿಜಾತೀಯವೆಂದು ಅಂಗೀಕರಿಸಿದರೆ ಆಗ ಪಂಕಜನಿಕರ್ತೃರೂಪ ಅವಯವಾರ್ಥಕ್ಕೆ ಬಾಧ ಬರುವುದರಿಂದ ಲಕ್ಷಣೆಯಿಂದಲೇ ಶಾಬ್ದಬೋಧ ಬರುತ್ತದೆ. ಯೌಗಿಕರೂಢದ ಲಕ್ಷಣವನ್ನು ತೋರಿಸುತ್ತಾನೆ. ಎಲ್ಲಿ ಅವಯವ ಶಕ್ತ್ಯಾಶ್ರಯವಾದ, ಸಮುದಾಯ ಶಕ್ತ್ಯಾಶ್ರಯವಾದ ಅರ್ಥಗಳಿಗೆ ಸ್ವಾತಂತ್ರ್ಯದಿಂದ (ಅರ್ಥಾಂತರವನ್ನು ವಿಷಯೀಕರಿಸದೆ) ಬೋಧ ಬರುತ್ತದೆಯೋ ಅಲ್ಲಿ ಯೌಗಿಕರೂಢವೆಂದು ವ್ಯವಹಾರ. ಉದ್ಭಿತ್ ಪದವು ಯೌಗಿಕರೂಢ. 'ಊರ್ಧ್ವಂಭಿನ್ನತ್ತಿ' ಎಂದು ಅವಯವ ಶಕ್ತಿಯಿಂದ ಗಿಡಮರ ಮುಂತಾದ ಅರ್ಥವಾಗುತ್ತದೆ. ಸಮುದಾಯಶಕ್ತಿಯಿಂದ ಯಾಗ ವಿಶೇಷಾರ್ಥವಾಗುತ್ತದೆ.

ಶಕ್ತಿಗ್ರಂಥ ಮುಗಿದಿದೆ.

## ಲಕ್ಷಣಾ ಶಕ್ಯಸಂಬಂಧಸ್ತಾತ್ಪರ್ಯಾನುಪಪತ್ತಿತಃ ॥

ಗಂಗಾಯಾಂ ಘೋಷ ಇತ್ಯಾದೌ ಗಂಗಾಪದಸ್ಯ ಶಕ್ಯಾರ್ಥೇ ಪ್ರವಾಹರೂಪೇ ಘೋಷ

ಸ್ಯಾನ್ವಯಾನುಪಪತ್ತಿ ಸ್ತಾತ್ಪರ್ಯಾನುಪಪತ್ತಿರ್ವಾ ಯತ್ರ ಪ್ರತಿಸಂಧೀಯತೇ ತತ್ರ ಲಕ್ಷಣಯಾ ತೀರಸ್ಯ ಬೋಧ ಇತಿ । ಸಾ ಚ ಶಕ್ಯ ಸಂಬಂಧರೂಪಾ ॥

ಶಬ್ದದಿಂದ ಅರ್ಥಬೋಧವಾಗಲು ಎರಡು ವ್ಯಾಪಾರಗಳು ಅಂಗೀಕೃತವಾಗಿವೆ. ಮುಖ್ಯ ವ್ಯಾಪಾರ ಶಕ್ತಿ ಅಥವಾ ಅಭಿಧಾ ಎಂದು ಹಿಂದೆ ಹೇಳಿವೆ. ಅಮುಖ್ಯವಾದ ವ್ಯಾಪಾರವೇ ಲಕ್ಷಣಾ. ಮುಖ್ಯಾರ್ಥದಲ್ಲಿ ಅನ್ವಯಾನುಪಪತ್ತಿ ಅಥವಾ ತಾತ್ಪರ್ಯಾನುಪಪತ್ತಿ ಬಂದಲ್ಲಿ ಲಕ್ಷಣಾ ಸ್ವೀಕೃತವಾಗುತ್ತದೆ. ಕಾರಿಕೆಯಲ್ಲಿ ಅದರ ಲಕ್ಷಣ ಹೇಳಿರುತ್ತಾನೆ. ಶಕ್ಯವೆಂದರೆ ಶಕ್ತಿಯಿಂದ ಉಪಸ್ಥಾಪಿತವಾದ ಅರ್ಥ. ಶಕ್ಯಾರ್ಥಸಂಬಂಧವುಳ್ಳದ್ದರಲ್ಲಿ ಸಂಬಂಧ. ಮುಖ್ಯಾರ್ಥವಾಚಕಪದಕ್ಕೆ ಅಮುಖ್ಯಾರ್ಥದಲ್ಲಿ ಯಾವವೃತ್ತಿ ಇದೆಯೋ ಅದೇ ಲಕ್ಷಣಾ. ಮುಕ್ತಾವಳಿಯಲ್ಲಿ ಉದಾಹರಣೆಯಿಂದ ವಿವರಿಸುತ್ತಾನೆ. 'ಗಂಗಾಯಾಂ—' ಇತಿ. ಗಂಗಾಪದಕ್ಕೆ ಮುಖ್ಯಾರ್ಥ ಜಲಪ್ರವಾಹ. ಗೊಲ್ಲರ ಹಳ್ಳಿಗೆ ಘೋಷವೆಂದು ಹೆಸರು. ಜಲಪ್ರವಾಹದಲ್ಲಿ ಹಳ್ಳಿಗೆ ಅನ್ವಯ ಬರುವುದಿಲ್ಲ. (ಅಧಿಕರಣತ್ವ ಸಿದ್ಧಿಸಲಾರದು.) ಆದುದರಿಂದ ತೀರದಲ್ಲಿ ಮುಖ್ಯಾರ್ಥಸಂಬಂಧವು ಗೃಹೀತವಾಗುತ್ತದೆ. ಇದೇ ಗಂಗಾಪದದಿಂದ ತೀರರೂಪಾರ್ಥ ತೋರಲು ಅಂಗೀಕೃತವಾದ ಲಕ್ಷಣಾ ವ್ಯಾಪಾರ. ಅನ್ವಯಾನುಪಪತ್ತಿ, ತಾತ್ಪರ್ಯಾನುಪಪತ್ತಿ ಎರಡೂ ಲಕ್ಷಣಾಬೀಜವೆಂದು ಪ್ರಾಚೀನರ ಮತ. 'ಯಷ್ಟೀಃ ಪ್ರವೇಶಯ' ಇತ್ಯಾದಿ ಸ್ಥಳದಲ್ಲಿ ಅನ್ವಯಾನುಪಪತ್ತಿ ಇಲ್ಲದಿರುವುದರಿಂದ ತಾತ್ಪರ್ಯಾನುಪಪತ್ತಿಯೊಂದೇ ಕಾರಣವೆಂದು ನವ್ಯಮತ. ಪದಪದಾರ್ಥ ಸಂಸರ್ಗವೇ ಅನ್ವಯ. 'ಗಂಗಾಪದದಿಂದ ಗಂಗಾತೀರ ಬೋಧ ಬರಲಿ' ಎಂಬ ಇಚ್ಛೆಯೇ ಇಲ್ಲಿ ತಾತ್ಪರ್ಯ. ಇದಕ್ಕೆ ಅನುಪಪತ್ತಿ ಎಂದರೆ ಅಯೋಗ್ಯತಾ ಬಂದುದರಿಂದ ಲಕ್ಷಣಾ ಮಾಡಿದೆ. ತೀರದಲ್ಲಿ ಸಂಬಂಧಗೃಹೀತವಾದರೆ ಆಗ ಘೋಷಾಧಿಕರಣತ್ವ ಕೂಡುತ್ತದೆ. ಹೀಗೆ ಶಕ್ಯಪರಂಪರಾಸಂಬಂಧಕ್ಕೇ ಲಕ್ಷಣಾ ಎಂದು ಹೆಸರು.

ತಥಾಹಿ—ಪ್ರವಾಹರೂಪ ಶಕ್ಯಾರ್ಥಸಂಬಂಧಸ್ಯ ತೀರೇ ಗೃಹೀತತ್ವಾತ್ತೀರಸ್ಯ ಸ್ಮರಣಮ್, ತತಃ ಶಾಬ್ದಬೋಧಃ । ಪರಂ ತು ಯದ್ಯನ್ವಯಾನುಪಪತ್ತಿರ್ಲಕ್ಷಣಾಬೀಜಂ ಸ್ಯಾತ್ತದಾ ಯಷ್ಟೀಃ ಪ್ರವೇಶಯೇತ್ಯತ್ರ ಲಕ್ಷಣಾ ನಸ್ಯಾತ್, ಯಷ್ಟಿಷು ಪ್ರವೇಶಾನ್ವಯಸ್ಯಾನುಪಪತ್ತೇರಭಾವಾತ್ । ತತ್ರ ಚ ಯಷ್ಟಿಪ್ರವೇಶೇ ಭೋಜನತಾತ್ಪರ್ಯಾನುಪಪತ್ತ್ಯಾ ಯಷ್ಟಿಧರೇಷು ಲಕ್ಷಣಾ । ಏವಂ ಕಾಕೇಭ್ಯೋ ದಧಿ ರಕ್ಷ್ಯತಾ ಮಿತ್ಯಾದೌ ಕಾಕಪದಸ್ಯ ದಧ್ಯುಪಘಾತಕೇ ಲಕ್ಷಣಾ ಸರ್ವತೋ ದಧಿರಕ್ಷಾಯಾ ಸ್ತಾತ್ಪರ್ಯಾ ವಿಷಯತ್ವಾತ್ । ಏವಂ ಛತ್ರಿಣೋ ಯಾಂತೀತ್ಯಾದೌ ಛತ್ರಿಪದಸ್ಯೈಕಸಾರ್ಥ ವಾಹಿತ್ವೇ ಲಕ್ಷಣಾ । ಇಯಮೇವಾ ಜಹತ್ ಸ್ವಾರ್ಥಾ ಲಕ್ಷಣೇತ್ಯುಚ್ಯತೇ, ಏಕಸಾರ್ಥವಾಹಿತ್ವೇನ ರೂಪೇಣ ಛತ್ರಿ ತದನ್ಯಯೋರ್ಬೋಧಾತ್ ॥

ಹಿಂದೆ ಹೇಳಿದುದನ್ನು ವಿವರಿಸುತ್ತಾನೆ. 'ತಥಾಹಿ—' ಇತಿ. ಗಂಗಾಯಾಂ ಘೋಷಃ' ಎಂಬಲ್ಲಿ ಗಂಗಾಪದದ ಶಕ್ಯಾರ್ಥಕ್ಕೆ ಘೋಷಾಧಿಕರಣತ್ವ ಸಂಭವಿಸದಿರುವುದ ರಿಂದ ಅನ್ವಯಾನುಪಪತ್ತಿ ಬಂದ ಮೇಲೆ ಲಕ್ಷಣಾ ವೃತ್ತಿಯಿಂದ ಗಂಗಾಪದಕ್ಕೆ ತೀರದಲ್ಲಿ ಸಂಬಂಧ ಗೃಹೀತವಾಗಿ ತೀರ ಸ್ಮರಣೆಯುಂಟಾಗಿ ತೀರತ್ವವಿಶಿಷ್ಟಶಾಬ್ದಬೋಧ ಬರುತ್ತದೆ. ಗಂಗಾಪದದಿಂದ ಲಕ್ಷಣಾ ವೃತ್ತಿಜ್ಞಾತವಾಗಿ ತೀರೋಪಸ್ಥಿತಿ ಬರುತ್ತದೆ. ಆಮೇಲೆ 'ಗಂಗಾತೀರೇ ಘೋಷಃ' ಎಂದು ಶಾಬ್ದಬೋಧ ಬರುತ್ತದೆಂದು ತಾತ್ಪರ್ಯ. ಕೇವಲ ತೀರೋಪಸ್ಥಿತಿ ಬಂದು 'ತೀರೇ ಘೋಷಃ' ಎಂದು ಶಾಬ್ದಬೋಧ ಬರುತ್ತದೆಂದು ಅಂಗೀಕರಿಸಿದರೆ ಆಗ ಶಕ್ಯಾರ್ಥಕ್ಕೆ ಸಂಪೂರ್ಣತ್ಯಾಗವಿರುವುದರಿಂದ 'ಜಹತ್ ಸ್ವಾರ್ಥಾ' ಆಗುತ್ತದೆ. 'ಗಂಗಾತೀರೇ ಘೋಷಃ' ಎಂದು ಬೋಧ ಅಂಗೀಕರಿಸಿದರೆ ಅಜಹತ್ ಸ್ವಾರ್ಥಾ ಆಗುತ್ತದೆ. ತಾತ್ಪರ್ಯಾನುಪಪತ್ತಿಯೇ ಎಲ್ಲಾ ಕಡೆಯಲ್ಲಿ ಲಕ್ಷಣಾ ಬೀಜ ವೆಂದು ಸ್ಥಾಪಿಸಲು ಯುಕ್ತಿ ತೋರಿಸುತ್ತಾನೆ. 'ಪರಂತು—' ಇತಿ. ಅನ್ವಯಾನುಪ ತ್ತಿಯೇ ಲಕ್ಷಣಾಬೀಜವೆಂದು ಅಂಗೀಕರಿಸುವುದಾದರೆ ಆಗ 'ಯಷ್ಟೀಃ ಪ್ರವೇಶಯ' ಎಂಬ ವಾಕ್ಯದಲ್ಲಿ ಯಷ್ಟಿಧರಿಸಿದವರು (ದಂಡಧಾರಿಗಳು) ಎಂಬ ತಾತ್ಪರ್ಯದಿಂದ ಪ್ರಯೋ ಗಿಸಿದ ಯಷ್ಟಿಪದದಲ್ಲಿ ಲಕ್ಷಣಾ ಇಲ್ಲವೇ ಹೋಗಬೇಕಾಗುತ್ತದೆ. (ಯಷ್ಟಿಪದಕ್ಕೆ ಯಷ್ಟಿ ಧರ ಎಂಬರ್ಥದಲ್ಲಿ ಲಕ್ಷಣೆ ಇಲ್ಲದೇ ಹೋಗ ಬೇಕಾಗುತ್ತದೆ.) ಏಕೆಂದರೆ ಯಷ್ಟಿಗಳಿಗೆ (ದಂಡ) ಗೃಹಪ್ರವೇಶ ಸಂಬಂಧವು ಅನುಪಪನ್ನವಾಗುವುದಿಲ್ಲ. ದಂಡಕ್ಕೆ ಗೃಹಪ್ರವೇಶ ಸಂಬಂಧ ಕೂಡುವುದಿಲ್ಲವೆಂದು ಯಾರೂ ಹೇಳಲಾರರು. ಆದರೆ ವಕ್ತೃತಾತ್ಪರ್ಯವು ಅನುಪಪನ್ನವಾಗಿದೆ. ಭೋಜನತಾತ್ಪರ್ಯದಿಂದ ಈ ವಾಕ್ಯ ಪ್ರಯುಕ್ತವಾಗಿದೆ. ಯಾರು ಯಾರು ದಂಡಧಾರಿಗಳೋ ಅವರು ಊಟ ಮಾಡಲು ಒಳಗೆ ಹೋಗಲಿ, ಎಂಬ ತಾತ್ಪರ್ಯದಿಂದ ಹೇಳಿದೆ. ಆಗ ಯಷ್ಟಿಪದಕ್ಕೆ ಮುಖ್ಯಾರ್ಥವಾದ ದಂಡವನ್ನು ತೆಗೆದು ಕೊಂಡರೆ ಆಗ ವಕ್ತೃತಾತ್ಪರ್ಯವು ಅನುಪಪನ್ನ ವಾದುದರಿಂದ ದಂಡಧಾರಿಗಳೆಂದು ಲಕ್ಷಣಾ ವೃತ್ತಿಯಿಂದ ಹೇಳಬೇಕು. ಆದುದರಿಂದ ತಾತ್ಪರ್ಯಾನುಪಪತ್ತಿಯೇ ಲಕ್ಷಣಾ ಮಾಡುವುದರಲ್ಲಿ ಕಾರಣವಾಗುತ್ತದೆ. ದಂಡಧಾರಿಗಳು ಪ್ರವೇಶಿಸುವಾಗ ದಂಡಕ್ಕೂ ಪ್ರವೇಶ ಸಿದ್ಧವಾಗುವುದರಿಂದ ಇದು ಅಜಹತ್ಸ್ವಾರ್ಥ ಲಕ್ಷಣಾ ಆಗುತ್ತದೆ. ತಾತ್ಪ ರ್ಯಾನುಪಪತ್ತಿಯೇ ಲಕ್ಷಣಾಬೀಜವೆಂಬುದಕ್ಕೆ ಪ್ರಸಿದ್ಧ ಉದಾಹರಣೆಯನ್ನು ತೋರಿಸು ತ್ತಾನೆ. 'ಏವಂ —' ಇತಿ. 'ಕಾಕೇಭ್ಯೋ ದಧಿ ರಕ್ಷ್ಯತಾಂ' ಎಂಬ ವಾಕ್ಯದಲ್ಲಿರುವ ಕಾಕಪದಕ್ಕೆ ದಧಿನಾಶಕತ್ವಾವಚ್ಛಿನ್ನದಲ್ಲಿ ಅಂದರೆ ಯಾವುದು ಯಾವುದು ಮೊಸರನ್ನು ಹಾಳು ಮಾಡುವುದೋ ಅದೆಲ್ಲಾ ಪ್ರಾಣಿಗಳಲ್ಲಿ ಲಕ್ಷಣಾ ಮಾಡಿದೆ. ಇಲ್ಲಿ ಎಲ್ಲಾ ದಧಿ ನಾಶಕಗಳ ದೆಸೆಯಿಂದ ದಧಿರಕ್ಷಣೆ (ದಧಿನಿಷ್ಠನಾಶಾ ಪ್ರತಿಯೋಗಿತ್ವ.) ಯು ವಕ್ತೃ ತಾತ್ಪರ್ಯವಿಷಯವಾಗಿದೆ. ಅನ್ವಯಾನುಪಪತ್ತಿ ಲಕ್ಷಣಾ ಬೀಜವೆನ್ನುವುದಾದರೆ ಇಲ್ಲಿ ಲಕ್ಷಣೆಗೆ ಅವಕಾಶವೇ ಇಲ್ಲ. ಕಾಗೆಗಳಿಂದ ದಧಿರಕ್ಷಣೆ ಉಪಪನ್ನವೇ ಆಗಿದೆ. ಕೇವಲ ಕಾಗೆಯಿಂದ ದಧಿರಕ್ಷಣೆಯಲ್ಲಿ ತಾತ್ಪರ್ಯವಿದ್ದರೆ ಲಕ್ಷಣಾ ಮಾಡಬೇಕಾಗಿಲ್ಲ. ದಧ್ಯುಪ

ಘಾತಕತ್ವವು ಕಾಗೆಗಳಲ್ಲಿರುವುದರಿಂದ ಮುಖ್ಯಾರ್ಥ ಬಾಧವಿರುವುದಿಲ್ಲ. ಬಿಡಾಲಾದಿಗಳಲ್ಲಿಯೂ(ಬೆಕ್ಕು ಮುಂತಾದವು) ವಿವಕ್ಷಿತವಾದರೆ ತಾತ್ಪರ್ಯಾನುಪಪತ್ತಿಯೇ ಆಗುತ್ತದೆ. ಇಲ್ಲಿ ಕಾಗೆಗೂ ಇತರ ದಧ್ಯುಪಘಾತಕಗಳಿಗೂ ಗ್ರಹಣವಿರುವುದರಿಂದ ಅಜಹತ್ ಸ್ವಾರ್ಥಲಕ್ಷಣೆಯಾಗುತ್ತದೆ. 'ಏವಂ—' ಇತಿ. ಇದೂ ಅಜಹತ್ಸ್ವಾರ್ಥ ಲಕ್ಷಣೆಗೆ ಉದಾಹರಣೆ. 'ಛತ್ರಿಣೋ ಯಾಂತಿ' ಎಂಬ ವಾಕ್ಯಕ್ಕೆ 'ಏಕಸಾರ್ಥವಾಹಿತ್ವ ವಿಶಿಷ್ಟ'ದಲ್ಲಿ ಲಕ್ಷಣಾ. 'ಏಕಸಾರ್ಥವಾಹಿನೋಽಯಾಂತಿ' ಎಂದು ಶಾಬ್ದಬೋಧ. ಕೊಡೆ ಹಿಡಿದವರು ಹೋಗುತ್ತಾರೆ. ಎಂದರೆ 'ಕೊಡೆಹಿಡಿದ ಪದಾತಿಗಳೂ ಗಜತುರಗಾಧಿರೂಢರೂ ಎಲ್ಲರೂ ಸೇರಿ ಒಂದು ಸಮುದಾಯದಿಂದ ಹೋಗುತ್ತಾರೆ' ಎಂದು ಲಕ್ಷಣೆಯಿಂದ ಅರ್ಥವಾಗುತ್ತದೆ. ಅಥವಾ ಛತ್ರಿ ಹಿಡಿದ ಅನೇಕರೂ ಛತ್ರಿ ಇಲ್ಲದ ಕೆಲವರೂ ಸೇರಿ ಹೋಗುತ್ತಾರೆ. ಎಂದರ್ಥ. ಶಕ್ಯಾರ್ಥಕ್ಕೂ ಕ್ರಿಯಾಸಂಬಂಧ ವಿರುವುದರಿಂದ ಇಂತಹ ಸ್ಥಳದಲ್ಲಿ ಅಂಗೀಕೃತವಾದ ಲಕ್ಷಣೆಗೆ 'ಅಜಹತ್ ಸ್ವಾರ್ಥಲಕ್ಷಣಾ' ಎಂದು ಹೆಸರು.

ಯದಿ ಚಾನ್ವಯಾನುಪಪತ್ತಿರ್ಲಕ್ಷಣಾಬೀಜಂ ಸ್ಯಾತ್ತದಾ ಕ್ವಚಿತ್ ಗಂಗಾಪದಸ್ಯ ತೀರೇ ಕ್ವಚಿತ್ ಘೋಷಪದಸ್ಯ ಮತ್ಸ್ಯಾದೌ ಲಕ್ಷಣೇತಿ ನಿಯಮೋ ನಸ್ಯಾತ್ । ಇದಂ ತು ಬೋಧ್ಯಮ್—ಶಕ್ಯಾರ್ಥಸಂಬಂಧೋ ಯದಿ ತೀರತ್ವೇನ ರೂಪೇಣ ಗೃಹೀತಸ್ತದಾ ತೀರತ್ವೇನ ತೀರಬೋಧಃ । ಯದಿ ತು ಗಂಗಾತೀರತ್ವೇನ ರೂಪೇಣ ಗೃಹೀತಸ್ತದಾ ತೇನೈವ ರೂಪೇಣ ಸ್ಮರಣಮ್ । ಅತಏವ ಲಕ್ಷ್ಯತಾವಚ್ಛೇದಕೇ ನ ಲಕ್ಷಣಾ, ತತ್ಪ್ರಕಾರಕಬೋಧಸ್ಯ ತತ್ರ ಲಕ್ಷಣಾಂ ವಿನಾಪ್ಯುಪಪತ್ತೇಃ । ಪರಂತು ಏವಂ ಕ್ರಮೇಣ ಶಕ್ಯತಾವಚ್ಛೇದಕೇಽಪಿ ಶಕ್ತಿರ್ನಸ್ಯಾತ್ ತತ್ಪ್ರಕಾರಕ ಶಕ್ಯಾರ್ಥಸ್ಮರಣಂ ಪ್ರತಿ ತತ್ಪದಸ್ಯ ಸಾಮರ್ಥ್ಯಮಿತ್ಯಸ್ಯ ಸುವಚತ್ವಾದಿತಿ ವಿಭಾವನೀಯಮ್ ॥

ಅನ್ವಯಾನುಪಪತ್ತಿಕಾರಣವಲ್ಲವೆಂದು ಪುನಃ ಅಸಂಗತಿಯನ್ನು ತೋರಿಸುತ್ತಾನೆ. 'ಯದಿ—' ಇತಿ. ಒಂದು ವಾಕ್ಯದಲ್ಲಿ ಒಂದು ಪದವನ್ನು ಹೇಳುವವನು ಯಾವ ಅರ್ಥವನ್ನು ಬೋಧಿಸುವ ತಾತ್ಪರ್ಯದಿಂದ ಉಚ್ಚರಿಸಿರುವನೋ ಆ ಅರ್ಥದಲ್ಲಿ ಮಾತ್ರ ಲಕ್ಷಣಾ ಎಂದು ನಿಯಮ. ಅನ್ವಯಾನುಪಪತ್ತಿಯೊಂದೇ ಲಕ್ಷಣಾಬೀಜವೆನ್ನುವುದಾದರೆ ಆಗ ಕೆಲವು ಕಡೆ ಗಂಗಾಪದಕ್ಕೆ ತೀರದಲ್ಲಿ, ಘೋಷಪದಕ್ಕೆ ಮತ್ಸ್ಯಾದಿಗಳಲ್ಲಿ ಲಕ್ಷಣಾ ಬಾರದೇ ಹೋಗಬೇಕಾಗುತ್ತದೆ. ಏಕೆಂದರೆ ತೀರ ತಾತ್ಪರ್ಯದಿಂದ ಗಂಗಾಪದವನ್ನೂ, ಮತ್ಸ್ಯಾದಿ ತಾತ್ಪರ್ಯದಿಂದ ಘೋಷಪದವನ್ನೂ ಪ್ರಯೋಗಿಸಿರುವುದರಿಂದ ಘೋಷಕ್ಕೆ ತೀರದಲ್ಲಿಯೂ ಮತ್ಸ್ಯಾದಿ ಜಲಪ್ರವಾಹದಲ್ಲಿಯೂ ಸ್ವಾರಸಿಕವಾಗಿ ಅನ್ವಯ ಬರುವುದರಿಂದ ಅನ್ವಯಾನುಪಪತ್ತಿ ಬರವುದಿಲ್ಲ. ಆದರಲ್ಲಿಯೂ ಘೋಷಪದವನ್ನು ಮತ್ಸ್ಯಾದಿ ತಾತ್ಪರ್ಯದಿಂದ ಉಚ್ಚರಿಸಿದಾಗ ಘೋಷಪದಕ್ಕೆ ಲಕ್ಷಣಾ ಬರಲಾರದು. ಅಲ್ಲಿ ಯಾವ

ಅನ್ವಯಾನುಪಪತ್ತಿಯೂ ಬಂದಿರುವುದಿಲ್ಲ. ಆದುದರಿಂದ ತಾತ್ಪರ್ಯಾನುಪತ್ತಿಯೇ ಕಾರಣವೆಂದು ಹೇಳುವುದು ಉತ್ತಮವಾದ ಮಾರ್ಗ.

ಲಕ್ಷಣಾ ಸ್ಥಳದಲ್ಲಿ ತಿಳಿಯಬೇಕಾದ ವಿಷಯವನ್ನು ತೋರಿಸುತ್ತಾನೆ. 'ಇದಂ—' ಇತಿ. ಯಾವಧರ್ಮ ವಿಶಿಷ್ಟವಾದ ಅರ್ಥದಲ್ಲಿ ಲಕ್ಷಣಾ ಗೃಹೀತವಾಗಿದೆಯೋ ಅಲ್ಲಿ ತದ್ಧರ್ಮವಿಶಿಷ್ಟಾರ್ಥೋಪಸ್ಥಿತಿ, ತದ್ಧರ್ಮವಿಶಿಷ್ಟಾರ್ಥ ವಿಷಯಕ ಶಾಬ್ದಬೋಧ ಬರುವುದರಿಂದ ಶಕ್ಯಾರ್ಥಸಂಬಂಧ ಅಂದರೆ ಲಕ್ಷಣಾ ತೀರತ್ವರೂಪದಿಂದ ಗೃಹೀತವಾಗಿದ್ದರೆ ತೀರತ್ವರೂಪದಿಂದ ತೀರೋಪಸ್ಥಿತಿ ಬಂದು ತೀರವಿಷಯಕ ಶಾಬ್ದಬೋಧ ಬರುತ್ತದೆ. ಗಂಗಾತೀರತ್ವೇನ ಬಂದಿದ್ದರೆ ಗಂಗಾತೀರವಿಷಯಕ ಶಾಬ್ದಬೋಧ ಬರುತ್ತದೆ. ವೃತ್ತಿಜ್ಞಾನ, ಉಪಸ್ಥಿತಿ (ಸ್ಮರಣ) ಶಾಬ್ದಬೋಧ ಈ ಮೂರು ಸಮಾನ ಪ್ರಕಾರವಾಗಿರಬೇಕೆಂದು ತಾತ್ಪರ್ಯ. ಆದುದರಿಂದ ಲಕ್ಷ್ಯತಾವಚ್ಛೇದಕದಲ್ಲಿ ಅಂದರೆ ಪ್ರಕೃತ ತೀರತ್ವದಲ್ಲಿ ಲಕ್ಷಣಾ ಇಲ್ಲ. ಗಂಗಾಪದಶಕ್ಯವಾದ ಪ್ರವಾಹ ಸಂಯುಕ್ತ ಸಮವಾಯರೂಪಲಕ್ಷಣಾ ಅಲ್ಲಿ ಸ್ವೀಕರಿಸುವುದಿಲ್ಲ. ಹಾಗಾದರೆ ತೀರತ್ವಾದಿಲಕ್ಷ್ಯತಾವಚ್ಛೇದಕ ಭಾನವು ಬರುವುದು ಹೇಗೆ ಎಂಬ ಶಂಕೆಗೆ ಸಮಾಧಾನ ತೋರಿಸುತ್ತಾನೆ. 'ತತ್ ಪ್ರಕಾರಕ—' ತದ್ಧರ್ಮವಿಶಿಷ್ಟದಲ್ಲಿ ಲಕ್ಷಣಾ ಅಂಗೀಕೃತವಾದುದರಿಂದ ತೀರತ್ವಾದಿ ಧರ್ಮಪ್ರಕಾರಕತೀರವಿಶೇಷ್ಯಕಶಾಬ್ದಬೋಧ ' ಲಕ್ಷಣಾ ಇಲ್ಲದೇ ಇದ್ದರೂ ಬರುತ್ತದೆ. ಪದದಿಂದ ಲಕ್ಷ್ಯತಾವಚ್ಛೇದಕವಾದ ತೀರತ್ವವು ಉಪಸ್ಥಿತವಾಗದಿದ್ದರೂ ಶಾಬ್ದಬೋಧದಲ್ಲಿ ಅದಕ್ಕೆ ಭಾನ ಬಂದೇ ಬರುತ್ತದೆ. ತೀರತ್ವ ವಿಶಿಷ್ಟ ತೀರದಲ್ಲಿ ಗಂಗಾಪದಕ್ಕೆ ಲಕ್ಷಣಾ ಮಾಡಿರುವುದರಿಂದಲೇ ಈ ರೀತಿ ಶಾಬ್ದಬೋಧ ಬರಲು ತೊಂದರೆ ಇಲ್ಲ. ತೀರತ್ವದಲ್ಲಿ ಬೇರೆ ಲಕ್ಷಣಾ ಹೇಳದಿದ್ದರೂ ಅವಚ್ಛೇದಕತಾ ಸಂಬಂಧದಿಂದ ಲಕ್ಷ್ಯದಲ್ಲಿ ಲಕ್ಷಣಾ ಇರುವುದರಿಂದ ತೀರತ್ವಕ್ಕೆ ಉಪಸ್ಥಿತಿ, ಶಾಬ್ದಬೋಧದಲ್ಲಿ ಹೇಗೆ ವಿಷಯತ್ವವು ಸಂಭವಿಸುತ್ತದೆಯೋ ಅದರಂತೆ ಶಕ್ಯತಾವಚ್ಛೇದಕವಾದ ಗಂಗಾತ್ವ (ಗೋತ್ವಾದಿಗಳು) ದಲ್ಲಿಯೂ ಶಕ್ತಿಯನ್ನು ಅಂಗೀಕರಿಸಬೇಕಾಗಿಲ್ಲ. ಏಕೆಂದರೆ ಗಂಗಾಪದವೇ ಶಕ್ತಿಜ್ಞಾನದ ಮೂಲಕ ಗಂಗಾತ್ವಪ್ರಕಾರಕಗಂಗಾವಿಶೇಷ್ಯಕ ಉಪಸ್ಥಿತಿಯನ್ನು ಕುರಿತು ಪ್ರಯೋಜಕವಾಗುತ್ತದೆ. ಹೇಗೆ ಗಂಗಾದಿಪದಗಳಿಗೆ ತೀರಾದಿ ವ್ಯಕ್ತಿಯಲ್ಲಿ ಮಾತ್ರ ಲಕ್ಷಣೆಯೋ ಹಾಗೆ ಘಟಾದಿ ಪದಗಳಿಗೆ ಘಟಾದಿ ವ್ಯಕ್ತಿಯಲ್ಲಿ ಮಾತ್ರ ಶಕ್ತಿಯೆಂದು ತಾತ್ಪರ್ಯ.

ಲಕ್ಷ್ಯತಾವಚ್ಛೇದಕದಲ್ಲಿ ಲಕ್ಷಣೆ ಇಲ್ಲದಿದ್ದರೂ ಶಕ್ಯತಾವಚ್ಛೇದಕದಲ್ಲಿ ಶಕ್ತಿಯನು ಅಂಗೀಕರಿಸಬೇಕೆಂದು ಬಹುಮತವಿದೆ. ಕಾರಣವಿಷ್ಟೆ. ಲಕ್ಷಣಾ ವೃತ್ತಿಯಿಂದ ಭಿನ್ನ ಪದಾರ್ಥಭಾನವುಂಟಾಗುತ್ತದೆ. ಗಂಗಾಪದದಿಂದ ತೀರರೂಪ ಭಿನ್ನ ಪದಾರ್ಥ ತೋರ್‍ನುತ್ತದೆ. ಅದರಿಂದಲೇ ತೀರತ್ವ ಧರ್ಮವೂ ತೋರುತ್ತದೆ. ಆದುದರಿಂದ ತೀರತ್ವದಲ್ಲಿ ಲಕ್ಷಣಾ ಅಂಗೀಕರಿಸುವುದರಿಂದ ಯಾವ ಪ್ರಯೋಜನವೂ ಇಲ್ಲ. ಅದೂ ಅಲ್ಲದೆ ಲಕ್ಷಣೆಯಿಂದ ತೀರ, ಅಥವಾ ಗಂಗಾತೀರಪ್ರವಾಹಸಂಯೋಗವುಳ್ಳದ್ದ ಎಂದು ತೋರು

ವುದರಿಂದ ತೀರತ್ವ, ಅಥವಾ ಗಂಗಾತೀರತ್ವ ರೂಪದಿಂದ ಯತ್ಕಿಂಚಿದ್ಧರ್ಮ ವಿಷಯಕ ಶಾಬ್ದಬೋಧ ಬರಬಹುದು. ಹೀಗೆ ಬೋಧ ಬರಬೇಕೆಂಬ ನಿಯಮವಿಲ್ಲ. ಹಿಗೆಯೇ ಶಕ್ಯತಾವಚ್ಛೇದಕದಲ್ಲಿ (ಘಟತ್ವಾದಿಗಳಲ್ಲಿ) ಶಕ್ತಿ ಹೇಳದಿದ್ದರೆ ಪೃಥಿವೀತ್ವ ರೂಪದಿಂದಲೇ ಪೃಥಿವೀಬೋಧಬರಬೇಕೆಂಬ ನಿಯಮವೂ ಇಲ್ಲದಂತಾಗುತ್ತದೆ. ಆಗ ಕೆಲವು ಸಮಯ ಪೃಥಿವೀತ್ವ ರೂಪದಿಂದಲೂ, ಕೆಲವು ಕಡೆ ಅಷ್ಟದ್ರವ್ಯಾತಿರಿಕ್ತ ದ್ರವ್ಯತ್ವ ರೂಪದಿಂದಲೂ, ಇನೂ ಕೆಲವು ಕಡೆ 'ಗಂಧವತ್ತ್ವ' ರೂಪದಿಂದಲೂ ಪೃಥಿವೀಭಾನ ಬರಬಹುದು. ಆದುದರಿಂದ ಶಕ್ಯ, ಶಕ್ಯತಾವಚ್ಛೇದಕಗಳೆರಡರಲ್ಲಿಯೂ ಶಕ್ತಿ ಹೇಳಬೇಕು. ಅಗ ಪೃಥಿವೀ ಪದದಿಂದ ಪೃಥಿವೀತ್ವ, ಪೃಥಿವೀ ಎರಡೂ ಉಪಸ್ಥಿತವಾಗುವುದರಿಂದ ಪೃಥಿವೀತ್ವ ಪ್ರಕಾರಕ ಪೃಥಿವೀವಿಶೇಷ್ಯಕಶಾಬ್ದಬೋಧವೇ ಬರುತ್ತದೆ. ಲಕ್ಷಣಾ ಸ್ಥಳದಲ್ಲಿ ಪದದಿಂದ ಅನುಪಸ್ಥಿತವಾದ ಅರ್ಥಗಳಿಗೆ ಭಾನವಿರುವುದರಿಂದ ಲಕ್ಷ್ಯತಾವಚ್ಛೇದಕದಲ್ಲಿ ಲಕ್ಷಣಾಂಗೀಕಾರದ ಆವಶ್ಯಕತೆಯಿಲ್ಲ. ಶಕ್ತಿ ಸ್ಥಳದಲ್ಲಿ ಪದದಿಂದ ಯಾವುದು ಉಪಸ್ಥಿತವಾಗುವುದೋ ತನ್ಮಾತ್ರವಿಷಯಕ ಶಾಬ್ದಬೋಧವು ಅನುಭವಸಿದ್ಧ ವಾದುದರಿಂದ ಶಕ್ಯತಾವಚ್ಛೇದಕದಲ್ಲಿಯೂ ಅವಶ್ಯವಾಗಿ ಶಕ್ತಿಯನ್ನು ಹೇಳಬೇಕು. ಎಂದು ಸಿದ್ಧಾಂತ. ॥

ಯತ್ರ ತು ಶಕ್ಯಾರ್ಥಸ್ಯ ಪರಂಪರಾ ಸಂಬಂಧರೂಪಾ ಲಕ್ಷಣಾ ಸಾಲ ಕ್ಷಿತಲಕ್ಷಣಾ ಇತ್ಯುಚ್ಯತೇ । ಯಥಾದ್ವಿರೇಫಾದಿಪದೇ ರೇಫದ್ವಯ ಸಂಬಂಧೋಭ್ರಮರಪದೇ ಜ್ಞಾಯತೇ । ಭ್ರಮರಪದಸ್ಯ ಚ ಸಂಬಂಧೋ ಭ್ರಮರೇ ಜಾಯತೇ । ತತ್ರ ಲಕ್ಷಿತಲಕ್ಷಣಾ ॥

ಲಕ್ಷಿತ ಲಕ್ಷಣಾ ಎಂಬುದು ಬೇರೆ ಎಂದು ಕೆಲವರ ಮತ. ಅದೂ ಜಹತ್ಸ್ವಾರ್ಥ ಲಕ್ಷಣೆಯಲ್ಲಿಯೇ ಸೇರುತ್ತದೆಂದು ಗ್ರಂಥಾಕಾರನ ಮತ. ಅದನ್ನೇ ವಿಶದಪಡಿಸುತ್ತಾನೆ. 'ಯತ್ರ—' ಇತಿ. ಲಕ್ಷಿತೇನ ಲಕ್ಷ್ಯತೇ—ಜ್ಞಾಯತೇ ಅನೇನ ಇತಿ ಲಕ್ಷಿತ ಲಕ್ಷಣಾ. ಇದು ಶಕ್ತಿಯೂ ಅಲ್ಲ. ಲಕ್ಷಣಾ ಕೂಡಾ ಆಗುವುದಿಲ್ಲ. ಮೂರನೆಯ ವೃತ್ತಿಯಾಗುತ್ತದೆಂದು ಪ್ರಾಚೀನರ ಮತ. ಆದರೆ ಇದೂ ಶಕ್ಯಾರ್ಥ ಪರಂಪರಾಸಂಬಂಧ ರೂಪ ಲಕ್ಷಣೆಯೇ ಆಗುತ್ತದೆ ಎಂದು ಗ್ರಂಥಕಾರನ ಸಿದ್ಧಾಂತ. ದ್ವಿರೇಫಾದಿ ಪದಗಳಲ್ಲಿ ಲಕ್ಷಿತ ಲಕ್ಷಣಾ. ಇಲ್ಲಿ ಶಕ್ಯಾರ್ಥದ ಪರಂಪರಾಸಂಬಂಧವಿದೆ. ಪರಂಪರಾ ಸಂಬಂಧವೆಂದರೆ ಸ್ವವಾಚ್ಯ ರೇಫದ್ವಯಘಟಿತಪದವಾಚ್ಯತ್ವ ರೂಪವಾದ ಸಂಬಂಧ. ಸ್ವಪದದಿಂದ ದ್ವಿರೇಫಪದದ ಶಕ್ಯಾರ್ಥವಾದ ರೇಫದ್ವಯವನ್ನು ತೆಗೆದುಕೊಳ್ಳಬೇಕು. ತದ್ಘಟಿತಪದ (ಸ್ವವಾಚ್ಯರೇಫದ್ವಯೇನ ಘಟಿತಂ ಪದಂ) ಎಂದರೆ ಭ್ರಮರಪದ. (ಎರಡು ರೇಫಗಳಿರುವ ಪದ) ತದ್ವಾಚ್ಯತ್ವ (ಭ್ರಮರ ಪದದಿಂದ ವಾಚ್ಯವಾದ ಅರ್ಥ) ಮಧುಪಾನ ಮಾಡುವ ದುಂಬಿರೂಪ ವ್ಯಕ್ತಿಯಲ್ಲಿ ಬರುತ್ತದೆ. ಹೀಗೆ ಈ ಶಕ್ಯಾರ್ಥ ಪರಂಪರಾ ಸಂಬಂಧರೂಪವಾದ ಲಕ್ಷಣಾ ಎಂಬುದೇ ಲಕ್ಷಿತಲಕ್ಷಣಾ ಆಗುತ್ತದೆ. 'ದ್ವಿರೇಫಃ ರೌತಿ' ಎಂದು ಒಂದು ವಾಕ್ಯವನ್ನು ಪ್ರಯೋಗಿಸಿದರೆ ಆಗ ಕೇಳಿದವನು ದ್ವಿರೇಫ ಪದದಿಂದ

ತೋರಿದ ರೇಫದ್ವಯರೂಪಶಕ್ಯಾರ್ಥದಲ್ಲಿ ಶಬ್ದಕರ್ತೃತ್ವದ ಅನುಪಪತ್ತಿಯನ್ನು ತಿಳಿದು (ಎರಡು ರೇಫ ಶಬ್ದಮಾಡಲಾರದು.) ಲಕ್ಷಣಾ ವೃತ್ತಿಯಿಂದ ದುಂಬಿ ಎಂಬ ಅರ್ಥವನ್ನು ತಿಳಿಯುತ್ತಾನೆ. ದ್ವಿರೇಫಪದಕ್ಕೆ ಶಕ್ಯಾರ್ಥ ಎರಡು ರೇಫಗಳು. ಇದಕ್ಕೆ ಮಧುಪ ವ್ಯಕ್ತಿಯಲ್ಲಿ ಸಾಕ್ಷಾತ್‌ಸಂಬಂಧವಿಲ್ಲ. ರೇಫದ್ವಯಕ್ಕೆ ಭ್ರಮರ ಪದದಲ್ಲಿ ಸಾಕ್ಷಾತ್ ಸಂಬಂಧ ತೋರುತ್ತದೆ. ರೇಫದ್ವಯದಿಂದ ಭ್ರಮರಪದಲಕ್ಷಿತವಾದ ಮೇಲೆ ಭ್ರಮರ ಪದಕ್ಕೆ ಮಧುಪದೊಡನೆ ಸಂಬಂಧಗೃಹೀತವಾಗುವುದರಿಂದ ಲಕ್ಷಿತಲಕ್ಷಣಾ ಆಗುತ್ತದೆ. 'ಪದೀಯಶಕ್ಯಸಂಬಂಧೋ ಲಕ್ಷಣಾ' ಎಂದರೆ ಆಗ ಪದದ ಪರಂಪರಾ ಸಂಬಂಧವೇ ಆಗುತ್ತದೆ. ಏಕೆಂದರೆ ಪದಕ್ಕೆ ಶಕ್ಯಾರ್ಥದೊಡನೆ ಸಾಕ್ಷಾತ್ಸಂಬಂಧವಿರುವುದು ಶಕ್ಯಾರ್ಥಕ್ಕೆ ಲಕ್ಷ್ಯಾರ್ಥದೊಡನೆ ಸಂಬಂಧವಿರುವುದರಿಂದ ಪರಂಪರಾ ಸಂಬಂಧವೇ ಲಕ್ಷಣಾ ಆಗುತ್ತದೆ. ಶಕ್ಯಾರ್ಥದಲ್ಲಿ ತಾತ್ಪರ್ಯ ವಿಲ್ಲದಿರುವಾಗ ಶಕ್ಯಾರ್ಥ ಸಂಬಂಧ ವುಳ್ಳದ್ದರಲ್ಲಿ ತಾತ್ಪರ್ಯವಿರುವಾಗ ಲಕ್ಷಣಾ ಅಂಗೀಕೃತವಾಗಿದೆ. ಆದುದರಿಂದ ವಾಚ್ಯವಾಚಕ ಭಾವರೂಪವಾದ ಸಾಕ್ಷಾತ್ಸಂಬಂಧಕ್ಕೆ ಮುಖ್ಯವಾದ ಅಭಿದಾವೃತ್ತಿಯೆಂದೂ, ಪರಂಪರಾ ಸಂಬಂಧಕ್ಕೆ ಲಕ್ಷಣಾ ಅಥವಾ ಜಘನ್ಯವೃತ್ತಿಯೆಂದೂ ಕರೆಯುತ್ತಾರೆ.

ಪದದಿಂದ ಬಂದ ಶಕ್ಯಾರ್ಥದ ಸಾಕ್ಷಾತ್ಸಂಬಂಧಕ್ಕೆ ಕೇವಲ ಲಕ್ಷಣಾ ಎಂದೂ ಶಕ್ಯಾರ್ಥದ ಪರಂಪರಾ ಸಂಬಂಧಕ್ಕೆ ಲಕ್ಷಿತ ಲಕ್ಷಣಾ ಎಂದೂ ಹೆಸರೂ 'ಗಂಗಾಯಾಂ ಘೋಷಃ' ಎಂಬಲ್ಲಿ ಕೇವಲ ಲಕ್ಷಣಾ. ಗಂಗಾಪದಕ್ಕೆ ಶಕ್ಯಾರ್ಥ ಜಲಪ್ರವಾಹ. ಇದರ ಸಾಕ್ಷಾತ್ ಸಂಯೋಗರೂಪ ಸಂಬಂಧವು ತೀರದಲ್ಲಿರುವುದರಿಂದ ತೀರೋಪಸ್ಥಿತಿ ಬಂದು ತೀರೇ ಘೋಷಃ ಅಥವಾ ಗಂಗಾತೀರೇ ಘೋಷಃ ಎಂದು ಶಾಬ್ದಬೋಧ ಬರುತ್ತದೆ. ಅರ್ಥನಿಷ್ಠವಾದ ಸಂಬಂಧವು ಗಂಗಾಶಬ್ದದಲ್ಲಿ ಆರೋಪಿತವಾಗಿದೆ. ಆರೋಪಿತ ಶಬ್ದ ವ್ಯಾಪಾರದಿಂದ ಗಂಗಾಪದವು ತೀರೋಪಸ್ಥಿತಿಯನ್ನು ತಂದುಕೊಡುತ್ತದೆ. 'ದ್ವಿರೇಫಃ ರೌತಿ' ಎಂಬಲ್ಲಿ ಲಕ್ಷಿತಲಕ್ಷಣಾ. ದ್ವಿರೇಫಪದದ ಶಕ್ಯಾರ್ಥ ಎರಡು ರೇಫ. ಇದು ಧ್ವನಿ ಮಾಡುತ್ತದೆ. ಎಂಬುದರಲ್ಲಿ ತಾತ್ಪರ್ಯವಿಲ್ಲ. ಅದೂ ಅಸಂಭವ. (ರವಣ ಕ್ರಿಯೆಯಲ್ಲಿ ರೇಫದ್ವಯದ ಅನ್ವಯ ಕೊಡುವುದಿಲ್ಲ.) ಆದುದರಿಂದ ಶಕ್ಯಾರ್ಥವಾದ ರೇಫದ್ವಯದ ಅವಯವಿತಾಸಂಬಂಧವು ಭ್ರಮರಪದದಲ್ಲಿ ಗೃಹೀತವಾಗುತ್ತದೆ. ಭ್ರಮರಪದದ ವಾಚ್ಯ ವಾಚಕರೂಪವಾದ ಶಕ್ತ್ಯಾಖ್ಯಸಂಬಂಧವು ದುಂಬಿಯಲ್ಲಿ ಗೃಹೀತವಾಗಿ ದ್ವಿರೇಫ ವೆಂದರೆ ದುಂಬಿ ಎಂದರ್ಥವಾಗುತ್ತದೆ. ಹೀಗೆ ಇದು ಸ್ವಸಂಬಂಧಿ ಸಂಬಂಧರೂಪ ವಾದುದರಿಂದ ಶಕ್ಯಾರ್ಥ ಪರಂಪರಾ ಸಂಬಂಧ ರೂಪವಾಗಿದೆ. ಇದು ಲಕ್ಷಿತ ಲಕ್ಷಣಾ ಆಗುವುದಲ್ಲದೆ ಬೇರೊಂದು ವೃತ್ತಿಯಲ್ಲ.

ವೈಯಾಕರಣರು ಇಲ್ಲಿ ಲಕ್ಷಿತ ಲಕ್ಷಣಾ ಹೇಳುವುದಿಲ್ಲ. (ಅವರ ಮತದಲ್ಲಿ ಲಕ್ಷಣಾವೃತ್ತಿಯೇ ಇಲ್ಲ. ಅಪ್ರಸಿದ್ಧವಾದ ಶಕ್ತಿಗೆ ಲಕ್ಷಣಾ ಎಂದು ಅವರ ವ್ಯವಹಾರ. ಸಮಾಸದಲ್ಲಿ ಪಂಕಜಾದಿಪದಗಳಂತೆ ಭಿನ್ನವಾದ ಶಕ್ತಿಯನ್ನೇ ಅವರು ಅಂಗೀಕರಿಸುವುದರಿಂದ, 'ದ್ವೌರೇಫೌ ಯತ್ರ' ಎಂದು ಸಮಾಸ ಮಾಡುವುದರಿಂದ ರೇಫದ್ವಯವಿಶಿಷ್ಟವಾದ

ಭ್ರಮರವೇ ದ್ವಿರೇಫ ಪದಕ್ಕೆ ವಾಚ್ಯಾರ್ಥವಾಗುತ್ತದೆ. ಭ್ರಮರವೆಂದರೆ ದುಂಬಿಯೆಂದು ಶಕ್ತಿಯಿಂದಲೇ ಬೋಧಿತವಾಗುವುದರಿಂದ ಲಕ್ಷಣೆಗೆ ಅವಕಾಶವಿಲ್ಲ. ನೈಯಾಯಿಕರು ಸಮಾಸದಲ್ಲಿ ಅವಯವದ್ವಯವನ್ನು ಸ್ವೀಕರಿಸುವುದರಿಂದ ಅವಯವಿಯಾದ ಸಮಾಸದಲ್ಲಿ ಶಕ್ತಿಯನ್ನು ಅಂಗೀಕರಿಸುವುದಿಲ್ಲ. ದ್ವಿಪದಕ್ಕೆ ದ್ವಿತ್ವಸಂಖ್ಯಾವಿಶಿಷ್ಟ ಎಂದರ್ಥ. ರೇಫಪದಕ್ಕೆ ರೇಫತ್ವ ಜಾತಿವಿಶಿಷ್ಟವರ್ಣ ವಿಶೇಷ ಅರ್ಥ. ಅಭೇದ ಸಂಸರ್ಗವೇ ವಾಕ್ಯಾರ್ಥವಾಗುವುದರಿಂದ 'ದ್ವಿತ್ವಸಂಖ್ಯಾವಿಶಿಷ್ಟವಾದ ರೇಫ' ಎಂದರ್ಥವಾಗುತ್ತದೆ. ಇದಕ್ಕೆ ಅನ್ವಯಾನುಪಪತ್ತಿ ಬರುವುದರಿಂದ ಹಿಂದೆ ಹೇಳಿದಂತೆ ಲಕ್ಷಿತ ಲಕ್ಷಣಾವೃತ್ತಿಯನ್ನು ಅಂಗೀಕರಿಸಿರುತ್ತಾರೆ. ಶಕ್ಯಸಂಬಂಧವೇ ಲಕ್ಷಣಾ ಎಂದುದರಿಂದ ಪದಸಮುದಾಯರೂಪ ವಾಕ್ಯಕ್ಕೆ ಯಾವ ಅರ್ಥದಲ್ಲಿಯೂ ಶಕ್ತಿ ಇಲ್ಲ. ನೈಯಾಯಿಕರು ವಾಕ್ಯದಲ್ಲಿ ಲಕ್ಷಣೆಯನ್ನು ಒಪ್ಪುವುದಿಲ್ಲ. ಬಹುವ್ರೀಹಿಯಲ್ಲಿ ಉತ್ತರಪದ ಲಾಕ್ಷಣಿಕವೆಂದುದರಿಂದ ರೇಫಪದಕ್ಕೆ ರೇಫವಿಶಿಷ್ಟಭ್ರಮರ ಪದದಲ್ಲಿ ಲಕ್ಷಣಾ. ದ್ವಿಪದವು ತಾತ್ಪರ್ಯಗ್ರಾಹಕವಾಗುತ್ತದೆ.

ಕಿಂತು ಲಾಕ್ಷಣಿಕಂ ಪದಂ ನಾನುಭಾವುಕಂ, ಲಾಕ್ಷಣಿಕಾರ್ಥಸ್ಯ ಶಾಬ್ದ ಬೋಧೇತು ಪದಾಂತರಂ ಕಾರಣಮ್ । ಶಕ್ತಿ ಲಕ್ಷಣಾನ್ಯತರ ಸಂಬಂಧೇನೇತರ ಪದಾರ್ಥಾನ್ವಿತ ಸ್ವಶಕ್ಯಾರ್ಥಶಾಬ್ದಬೋಧಂ ಪ್ರತಿ ಪದಾನಾಂ ಸಾಮರ್ಥ್ಯಾವಧಾರಣಾತ್ ॥

'ತಚ್ಛಾಬ್ದಬೋಧೇ ತಚ್ಛಕ್ತಪದಜ್ಞಾನಂ ಕಾರಣಂ' ತದರ್ಥವಿಷಯಕ ಶಾಬ್ದಬೋಧ ಬರಬೇಕಾದರೆ ತದರ್ಥದಲ್ಲಿ ಶಕ್ತವಾದ ಪದ ಜ್ಞಾನವು ಕಾರಣವೆಂಬ ನಿಯಮವಿರುವುದರಿಂದ ಲಾಕ್ಷಣಿಕಪದದಿಂದ ಶಾಬ್ದಬೋಧ ಬರುವುದು ಹೇಗೆ ಎಂದು ಆಶಂಕೆ ಬಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಕಿಂತು—' ಇತಿ. ತದರ್ಥಲಾಕ್ಷಣಿಕಪದವು ನಾನುಭಾವಕಂ — ಶಾಬ್ದಬೋಧ ಜನಕವಾಗುವುದಿಲ್ಲ ಎಂದರ್ಥ. ಅಲ್ಲಿ ಶಾಬ್ದಬೋಧ ಬರಲು ಕಾರಣ ತೋರಿಸುತ್ತಾನೆ. 'ಲಾಕ್ಷಣಿಕ—' ಇತಿ. ಲಕ್ಷಣಾಜ್ಞಾನಾಧೀನೋಪಸ್ಥಿತಿವಿಷಯಕಶಾಬ್ದಬೋಧದಲ್ಲಿ ತತ್ಸಮಭಿವ್ಯಾಹೃತವಾದ ಶಕ್ತವಾದ ಪದವು ಕಾರಣವಾಗುತ್ತದೆ. ಪ್ರಕೃತ ಘೋಷವೇ ಪದಾಂತರ. ಶಕ್ತಪದದಿಂದ ಶಾಬ್ದಬೋಧಬರಬೇಕೆಂಬುದರಲ್ಲಿ ನಿಯಮ ತೋರಿಸುತ್ತಾನೆ. 'ಶಕ್ತಿಲಕ್ಷಣಾ—' ಇತಿ. ಶಕ್ತಿಯಿಂದ ಅಥವಾ ಲಕ್ಷಣಾದಿಂದ ಉಪಸ್ಥಿತವಾದ ಯಾವ ತೀರಾದಿ ಪದಾರ್ಥವಿದೆಯೋ, ಅದರಲ್ಲಿ ಅನ್ವಿತವಾದ ಯಾವ ಶಕ್ಯಾರ್ಥವಿದೆಯೋ, ಇಲ್ಲಿ ಸ್ವಶಕ್ಯಾರ್ಥವೆಂದರೆ ಸ್ವಪದದಿಂದ ಗೃಹೀತವಾದ ಘೋಷಾದಿಅರ್ಥ. ಅಂದರೆ ಆಭೀರಪಲ್ಲೀ (ಗೊಲ್ಲರ ಹಳ್ಳಿ) ರೂಪವಾದ ಅರ್ಥ. ತೀರಾದಿಗಳಲ್ಲಿ ಅನ್ವಿತವಾದ ಅಭೀರಪಲ್ಲೀ ರೂಪಾರ್ಥ ವಿಷಯಕ ಶಾಬ್ದ ಬೋಧವನ್ನು ಕುರಿತು, ಪದಾನಾಂ ಸಾಮರ್ಥ್ಯಾವಧಾರಣಾತ್ — ಶಕ್ತ ಘೋಷಾದಿಪದಗಳಿಗೆ ಸಾಮರ್ಥ್ಯವು ನಿಶ್ಚಿತವಾಗಿದೆ. ಘೋಷಾದಿ ಶಕ್ತಪದಗಳೇ ಲಕ್ಷ್ಯಾರ್ಥವಿಷಯಕ ಶಾಬ್ದಬೋಧಕ್ಕೆ ಕಾರಣಗಳೆಂದರ್ಥ. 'ತಲ್ಲಾಕ್ಷಣಿಕಪದಸಮಭಿ

ವ್ಯಾಹೃತಂ ಶಕ್ತಂ ಪದಂ ತತ್ಸ್ಮಾರಿತ ವಾಕ್ಯಾರ್ಥ ವಿಷಯಕ ಶಾಬ್ದಬೋಧಜನಕಂ' ಎಂದು ಕಾರ್ಯಕಾರಣ ಭಾವವು ಸಿದ್ಧವಾಗುತ್ತದೆ. ಲಕ್ಷಣಾ ಸ್ಥಳದಲ್ಲಿ ಲಾಕ್ಷಣಿಕ ಪದದಿಂದ ಶಾಬ್ದಬೋಧ ಬರುವುದಿಲ್ಲ. ಅದರೊಡನೆ ಹೇಳಿರುವ ಇತರ ಶಕ್ತವಾದ ಪದಾಂತರದಿಂದಲೇ ಶಾಬ್ದಬೋಧ ಬರುತ್ತದೆಂದು ತಾತ್ಪರ್ಯ.

'ಕುಮತಿಃ ಪಶುಃ' ಇತ್ಯಾದಿ ಸ್ಥಳಗಳಲ್ಲಿ ಎರಡು ಪದಗಳಲ್ಲಿಯೂ ಲಕ್ಷಣಾ ಇಪುವುದರಿಂದ ಅಲ್ಲಿ ಶಕ್ತವಾದ ಇತರ ಯಾವ ಪದವೂ ಇಲ್ಲವಾದುದರಿಂದ ಶಾಬ್ದ ಬೋಧೋಪಪತ್ತಿಗೋಸ್ಕರ ಲಾಕ್ಷಣಿಕ ಪದವೂ ಶಾಬ್ದ ಬೋಧ ಜನಕ ವಾಗುತ್ತದೆಂದು ಒಪ್ಪಬೇಕೆಂದು ನವೀನರ ಸಿದ್ಧಾಂತ.

ವಾಕ್ಯೇ ತು ಶಕ್ತೇರಭಾವಾಚ್ಛಕ್ಯಸಂಬಂಧರೂಪಾ ಲಕ್ಷಣಾಪಿ ನಾಸ್ತಿ । ಯತ್ರ 'ಗಭೀ(ಗಂಭೀ)ರಾಯಾಂ ನದ್ಯಾಂ ಘೋಷಃ' ಇತ್ಯುಕ್ತಂ ತತ್ರ ನದೀಪದಸ್ಯ ನದೀತೀರೇ ಲಕ್ಷಣಾ । ಗಭೀರಪದಸ್ಯ ನದ್ಯಾ ಸಹಾಭೇದೇನಾನ್ವಯಃ, ಕ್ವಚಿದೇಕದೇಶನ್ವಯ ಸ್ಯಾಪಿ ಸ್ವೀಕೃತತ್ವಾತ್ । ಯದಿ ತತ್ರೈಕದೇಶಾನ್ವಯೋಽಪಿ ನ ಸ್ವೀಕ್ರಿಯತೇ ತದಾ ನದೀಪದಸ್ಯ ಗಂಭೀರನದೀತೀರೇ ಲಕ್ಷಣಾ ಗಭೀರಪದಂ ತಾತ್ಪರ್ಯ ಗ್ರಾಹಕಮ್ ॥

ಶಕ್ಯಸಂಬಂಧೋ ಲಕ್ಷಣಾ ಎಂದು ಹೇಳುವುದಾದರೆ ವಾಕ್ಯದಲ್ಲಿ ಶಕ್ತಿಯೇ ಇಲ್ಲದಿರುವುದರಿಂದ ಅದರಿಂದ ಬರುವ ಶಕ್ಯಾರ್ಥವೂ ಇಲ್ಲ, ಆಗ ಅಲ್ಲಿ ಶಕ್ಯಾರ್ಥಸಂಬಂಧರೂಪ ಲಕ್ಷಣಾಕ್ಕೂ ಅವಕಾಶವಿಲ್ಲದಂತಾಗುತ್ತದೆಂದು ನೈಯಾಯಿಕರ ಮೇಲೆ ಮೀಮಾಂಸಕ ಮುಂತಾದವರು ಆಕ್ಷೇಪಿಸಿದರೆ ಇಷ್ಟಾಪತ್ತಿಯಿಂದ ಸಮಾಧಾನ ತೋರಿಸುತ್ತಾನೆ. 'ವಾಕ್ಯೇತು—' ಇತಿ. ತು ಶಬ್ದಕ್ಕೆ ಅವಧಾರಣಾರ್ಥ. ಶಕ್ತೇರಭಾವಾತ್ ಎಂಬಲ್ಲಿ ಅನ್ವಯ. ವಾಕ್ಯದಲ್ಲಿ ಶಕ್ತಿ ಇಲ್ಲದಿರುವುದರಿಂದಲೇ (ವಾಕ್ಯ ಶಕ್ತಿಯು ಅಪ್ರಸಿದ್ಧವಾದುದರಿಂದಲೇ) ಶಕ್ಯಾರ್ಥ ಸಂಬಂಧರೂಪಲಕ್ಷಣೇ ವೃತ್ತಿಯೂ ಇಲ್ಲವೆಂದರ್ಥ. ಹಾಗಾದರೆ 'ಗಭೀರಾಯಾಂ ನದ್ಯಾಂ ಘೋಷಃ' ಎಂಬ ವಾಕ್ಯದಲ್ಲಿ ಶಾಬ್ದಬೋಧ ಹೇಗೆ? ನದೀ ಪದಕ್ಕೆ ಲಕ್ಷಣಾ ವೃತ್ತಿಯಿಂದ ನದೀ ತೀರಾರ್ಥ ಹೇಳಿದರೆ ಆಗ ಗಭೀರಾ ಪದಕ್ಕೆ ಏಕದೇಶಾನ್ವಯ ಬರಬೇಕಾಗುತ್ತದೆ. ಆಳವಾದದ್ದು ನದೀ. ನದೀ ತೀರವಲ್ಲ. ಆದುದರಿಂದ ವಾಕ್ಯದಲ್ಲಿಯೇ ಲಕ್ಷಣಾ ಒಪ್ಪಬೇಕು ಎಂದು ಆಕ್ಷೇಪಿಸಿದರೆ ಆಗ ಅಲ್ಲಿ ಬೋಧ ರೀತಿ ತೋರಿಸುತ್ತಾನೆ. 'ಯತ್ರ—' ಇತಿ. ಆ ವಾಕ್ಯ ಘಟಕವಾದ ನದೀ ಪದಕ್ಕೆ ನದೀ ಸಂಬಂಧ ತೀರದಲ್ಲಿ ಲಕ್ಷಣಾವನ್ನು ಅಂಗೀಕರಿಸುತ್ತೇವೆ. (ನದೀ ಸೇರಿರುವುದರಿಂದ ಅಜಹಲ್ಲಕ್ಷಣಾ ಆಗುತ್ತದೆ.) ಗಭೀರಪದಾರ್ಥಕ್ಕೆ ಅಂದರೆ ಗಾಂಭೀರ್ಯವಿಶಿಷ್ಟಕ್ಕೆ ನದ್ಯಾಸಹ—ನದೀತೀರಪದಾರ್ಥದ ಏಕದೇಶವಾದ ನದಿಯೊಡನೆ ಅಭೇದೇ ನಾನ್ವಯಃ–ಸಾಮಾನಾಧಿಕರಣ್ಯ ಸಂಬಂಧದಿಂದ ಅನ್ವಯ. 'ಗಾಂಭೀರ್ಯ ವಿಶಿಷ್ಟವಾದನದೀ ಸಂಬಂಧಿಯಾದ ತೀರದಲ್ಲಿ ಗೊಲ್ಲರ ಹಳ್ಳಿ' ಎಂದು ವಾಕ್ಯಾರ್ಥ ಬೋಧ ಬರುತ್ತದೆ.

ಹಾಗಾದರೆ 'ಪದಾರ್ಥಃ ಪದಾರ್ಥೇನಾನ್ವೇತಿ ನತು ಪದಾರ್ಥೈಕದೇಶೇನ' ಎಂಬ (ಪದಾರ್ಥಕ್ಕೆ ಪದಾರ್ಥದೊಡನೆಯೇ ಅನ್ವಯ ಬರುವುದಲ್ಲದೆ ಪದಾರ್ಥದ ಏಕದೇಶ ದೊಡನೆ ಅನ್ವಯವಿಲ್ಲ.) ವ್ಯುತ್ಪತ್ತಿಭಂಗ ಬರುವುದಿಲ್ಲವೇ ಎಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಕ್ವಚಿದೇಕ—' ಇತಿ. ಕೆಲವು ಕಡೆ ಏಕದೇಶದಲ್ಲಿಯೂ ಅನ್ವಯ ಅಂಗೀಕರಿಸಲ್ಪಡುವುದರಿಂದ ಪ್ರಕೃತ ನದೀತೀರದ ಏಕದೇಶವಾದ ನದಿಯಲ್ಲಿ ಅನ್ವಯ ಹೇಳಬಹುದೆಂದರ್ಥ.

ಮೀಮಾಂಸಕರು ಮಾತ್ರ ಪೂರ್ವೋಕ್ತವ್ಯುತ್ಪತ್ತಿಭಂಗ ಭಯದಿಂದ ವಾಕ್ಯ ದಲ್ಲಿಯೇ ಲಕ್ಷಣಾ ಹೇಳುತ್ತಾರೆ. ನದೀ ಪದಕ್ಕೆ ಲಕ್ಷಣಾ ಹೇಳಿದರೆ ಆಗ ಏಕದೇಶದಲ್ಲಿ ಅನ್ವಯ ಹೇಳಬೇಕಾಗುತ್ತದೆ. ಏಕದೇಶಾನ್ವಯ ಎಲ್ಲಿಯೂ ಇಲ್ಲ. 'ನೀಲೋ ಘಟಃ' ಎಂಬಲ್ಲಿ ನೀಲಪದಾರ್ಥಕ್ಕೆ ಘಟತ್ವದಲ್ಲಿ (ಘಟಪದಾರ್ಥದ ಏಕದೇಶ ಘಟತ್ವ. ಘಟ ಪದಕ್ಕೆ ಘಟತ್ವವಿಶಿಷ್ಟವ್ಯಕ್ತಿ ಅರ್ಥ) ಎಂದೂ ಅನ್ವಯವಿಲ್ಲ. ನೈಯಾಯಿಕರು ಮಾತ್ರ ಹಿಂದೆ ಹೇಳಿದ ವ್ಯುತ್ಪತ್ತಿ ಸಾರ್ವತ್ರಿಕ ವಲ್ಲವೆಂದು ಸಮಾಧಾನ ಹೇಳುತ್ತಾರೆ. ನಿತ್ಯಸಾ ಕಾಂಕ್ಷ ಸ್ಥಳದಲ್ಲಿ ವ್ಯುತ್ಪತ್ತಿ ಭಂಗವನ್ನು ಒಪ್ಪಲೇ ಬೇಕಾಗುತ್ತದೆ. 'ದೇವದತ್ತಸ್ಯ ಗುರು ಕುಲಂ' ಎಂಬಲ್ಲಿ ದೇವದತ್ತನಿಗೆ ಗುರುಕುಲಪದದ ಏಕದೇಶವಾದ ಗುರುವಿನಲ್ಲಿ ಅನ್ವಯ ಪ್ರಸಿದ್ಧವಾಗಿದೆ. ದೇವದತ್ತನ ಗುರು ಯಾರೋ ಅವನ ಕುಲವೆಂದೇ ಅಲ್ಲಿ ಬೋಧ 'ದೇವದತ್ತನಿರೂಪಿತಂ ಯದ್ ಗುರುತ್ವಂ, ತದ್ವತ್ಸಂಬಂಧಿ ಕುಲಂ' ಎಂದೂ ಕೆಲವರು ಬೋಧ ಹೇಳುತ್ತಾರೆ. ಇದರಂತೆ ಪ್ರಕೃತ ಸ್ಥಳದಲ್ಲಿಯೂ ಗಂಭೀರಪದಕ್ಕೆ ಏಕದೇಶಾ ನ್ವಯ ಹೇಳಿದರೆ ತಪ್ಪಾಗುವುದಿಲ್ಲ. ಎಂದು ತಾತ್ಪರ್ಯ. ಏಕದೇಶಾನ್ವಯ ಅಂಗೀ ಕರಿಸದಿದ್ದರೂ ಬೇರೆ ರೀತಿಯಿಂದ ಸಮಾಧಾನ ತೋರಿಸುತ್ತಾನೆ. 'ಯದಿ—' ಇತಿ. ನದೀಪದಕ್ಕೆ ಗಾಂಭೀರ್ಯವಿಶಿಷ್ಟ ನದೀತೀರರೂಪಾರ್ಥದಲ್ಲಿ ಲಕ್ಷಣಾ. ಗಭೀರ ಪದವು 'ನದೀ ಪದಂ ಗಭೀರ ನದೀತೀರ ವಿಷಯಕ ಬೋಧ ಜನಕಂ ಭವತು' ಎಂದು ವಕ್ತೃವಿನ ಇಚ್ಛಾರೂಪ ತಾತ್ಪರ್ಯವನ್ನು ತಿಳಿಸಿ ಕೊಡುವುದರ ಮೂಲಕ ಸಾರ್ಥಕ ವಾಗುತ್ತದೆ ಎಂದರ್ಥ.

ಬಹುವ್ರೀಹಾವಪ್ಯೇವಮ್ । ತತ್ರ ಹಿ ಚಿತ್ರಗುಪದಾದೌ ಯದ್ಯೇಕ ದೇಶಾನ್ವಯಃ ಸ್ವೀ ಕ್ರಿಯತೇ ತದಾ ಗೋಪದಸ್ಯ ಗೋಸ್ವಾಮಿನಿ ಲಕ್ಷಣಾ, ಗವಿ ಚಿತ್ರಾಽಭೇದಾ ನ್ವಯಃ । ಯದಿ ತ್ವೇಕದೇಶಾನ್ವಯೋ ನ ಸ್ವೀ ಕ್ರಿಯತೇ ತದಾ ಗೋಪದಸ್ಯ ಚಿತ್ರ ಗೋಸ್ವಾಮಿನಿ ಲಕ್ಷಣಾ, ಚಿತ್ರಪದಂ ತಾತ್ಪರ್ಯಗ್ರಾಹಕಮ್ । ಏವ ಮಾರೂಢವಾನರೋ ವೃಕ್ಷ ಇತ್ಯತ್ರ ವಾನರಪದಸ್ಯ ವಾನರಾಽರೋಹಕರ್ಮಣಿ ಲಕ್ಷಣಾ, ಆರೂಢ ಪದಂ ತಾತ್ಪರ್ಯ ಗ್ರಾಹಕಮ್ । ಏವಮನ್ಯತ್ರಾಪಿ ಬೋಧ್ಯಮ್ ॥

'ಚಿತ್ರಾಃ ಗಾವಃ ಯಸ್ಯ ಸಃ' ಚಿತ್ರ ಗುಃ' ಎಂಬ ಬಹುವ್ರೀಹಿಯಲ್ಲಿಯೂ ಏಕ

ದೇಶವಾದ ಗೋಪದದಲ್ಲಿ ಅನ್ವಯ ಒಪ್ಪುವುದಾದರೆ ಆಗ ಗೋಪದಕ್ಕೆ ಗೋಸ್ವಾಮಿಯಲ್ಲಿ ಲಕ್ಷಣಾ. ಗೋಸ್ವಾಮಿರೂಪಾರ್ಥದ ಏಕದೇಶವಾದ ಗೋವಿನಲ್ಲಿ ಚಿತ್ರಾಪದಕ್ಕೆ ಅಭೇದ ಸಂಬಂಧದಿಂದ ಅನ್ವಯ. ಚಿತ್ರಾ ಭಿನ್ನವಾದ ಗೋವುಗಳು. ತತ್ಸಂಬಂಧಿಯಾದ ಸ್ವಾಮಿಯೆಂದರ್ಥ. ಏಕದೇಶಾನ್ವಯ ಅಂಗೀಕರಿಸದಿದ್ದರೆ ಆಗ ಗೋಪದಕ್ಕೇ ಚಿತ್ರ ಗೋಸ್ವಾಮಿಯೆಂದು ಲಕ್ಷಣಾದಿಂದ ಅರ್ಥ. ಚಿತ್ರಾಪದವು ತಾತ್ಪರ್ಯ ಗ್ರಾಹಕ. 'ಗೋಪದಂ ಚಿತ್ರಾಭಿನ್ನ ಗೋಸ್ವಾಮಿ ವಿಷಯಕ ಬೋಧ ಜನಕಂ ಭವತು' ಎಂಬ ತಾತ್ಪರ್ಯವನ್ನು ತಿಳಿಸುತ್ತದೆ. 'ಚಿತ್ರಾಭಿನ್ನಗೋವೃತ್ತಿ ಸ್ವತ್ವ ಪ್ರತಿಯೋಗೀ ಚೈತ್ರಃ' ಎಂದು ಶಾಬ್ದ ಬೋಧ. 'ಏವಂ—' ಇತಿ. 'ಆರೂಢೋ ವಾನರಃ ಯಂ' ಆರೂಢ ವಾನರಃ. ಆಙ್ ಉಪಸರ್ಗಪೂರ್ವಕರುಹ ಧಾತುವಿಗೆ ಊರ್ಧ್ವದೇಶಾವಚ್ಛಿನ್ನ ಸಂಯೋಗಾನುಕೂಲವ್ಯಾಪಾರ ಅರ್ಥ. ಕ್ತ ಪ್ರತ್ಯಯಕ್ಕೆ ಆಶ್ರಯ ಅರ್ಥ. ದ್ವಿತೀಯೆಗೆ ಆಧೇಯತ್ವಂ ಅರ್ಥ. ವೃಕ್ಷವೃತ್ತಿ ಊರ್ಧ್ವದೇಶಾವಚ್ಛಿನ್ನ ಸಂಯೋಗಾನುಕೂಲ ವ್ಯಾಪಾರಾಶ್ರಯಃ ವಾನರಃ' ಎಂದು ವಿಗ್ರಹದಿಂದ ಶಾಬ್ದಬೋಧ. 'ಬಹುವ್ರೀಹೌ ವಿಗ್ರಹವಾಕ್ಯಾತ್ ಯಾದೃಶವಿಶೇಷಣವಿಶೇಷ್ಯ ಭಾವಾಪನ್ನಾರ್ಥ ವಿಷಯಕ ಬೋಧೋ ಜಾಯತೇ ಸಮಾಸ ವಾಕ್ಯಾತ್ ತದ್ವಿಪರೀತ ವಿಶೇಷಣ ವಿಶೇಷ್ಯ ಭಾವಾ ಪನ್ನಾರ್ಥ ವಿಷಯಕ ಬೋಧಃ ಭವತಿ' ಎಂಬ ನ್ಯಾಯದಿಂದ ಸಮಾಸದಲ್ಲಿ 'ಆರೋಹಣ ಕರ್ತೃ ಭಿನ್ನವಾನರ ಸಂಬಂಧೀ ವೃಕ್ಷಃ' ಎಂದು ಶಾಬ್ದಬೋಧ. ಇಲ್ಲಿಯೂ ಹಿಂದಿನಂತೆ ಉತ್ತರ ಪದದಲ್ಲಿ ಲಕ್ಷಣಾ. ಪೂರ್ವ ಪದವು ತಾತ್ಪರ್ಯಗ್ರಾಹಕ ವಾಗುತ್ತದೆ. ಹೀಗೆ ಎಲ್ಲಾ ಬಹುವ್ರೀಹಿ ಸಮಾಸಗಳಲ್ಲಿಯೂ ತಿಳಿಯಬೇಕು.

ತತ್ಪುರುಷೇ ತು ಪೂರ್ವಪದೇ ಲಕ್ಷಣಾ । ತಥಾಹಿ—ರಾಜಪುರುಷಾದಿಪದೇ ರಾಜಪದಾರ್ಥೇನ ಪುರುಷಾದಿಪದಾರ್ಥಸ್ಯ ಸಾಕ್ಷಾನ್ನಾನ್ವಯಃ, ನಿಪಾತಾತಿರಿಕ್ತನಾಮಾರ್ಥಯೋರ್ಭೇದೇನಾನ್ವಯ ಬೋಧಸ್ಯಾವ್ಯುತ್ಪನ್ನತ್ವಾತ್ । ಅನ್ಯಥಾ ರಾಜಾ ಪುರುಷ ಇತ್ಯತ್ರಾಪಿ ತಥಾನ್ವಯ ಬೋಧಃ ಸ್ಯಾತ್ । 'ಪಟೋ ನ ಘಟಃ' ಇತ್ಯಾದೌ ಘಟಪಟಾಭ್ಯಾಂ ನಞಃ ಸಾಕ್ಷಾದೇವಾನ್ವಯಾನ್ನಿ ಪಾತಾತಿರಿಕ್ತೇತಿ । 'ನೀಲೋ ಘಟಃ' ಇತ್ಯಾದೌ ನಾಮಾರ್ಥಯೋರಭೇದ ಸಂಬಂಧೇ ನಾನ್ವಯಾದ್ಭೇದೇನೇತಿ । ನಚ ರಾಜ ಪುರುಷ ಇತ್ಯಾದೌ ಲುಪ್ತ ವಿಭಕ್ತೇಃ ಸ್ಮರಣಂ ಕಲ್ಪ್ಯಮಿತಿ ವಾಚ್ಯಮ್ । ಅಸ್ಮೃತ ವಿಭಕ್ತೇರಪಿ ತತೋ ಬೋಧೋದಯಾತ್ । ತಸ್ಮಾತ್ ರಾಜಪದಾದೌ ರಾಜಸಂಬಂಧಿನಿ ಲಕ್ಷಣಾ । ತಸ್ಯ ಚ ಪುರುಷೇಣ ಸಹಾ ಭೇದಾನ್ವಯಃ ॥

ತತ್ಪುರುಷ ಸಮಾಸದಲ್ಲಿ ಲಕ್ಷಣಾ ರೀತಿ ತೋರಿಸುತ್ತಾನೆ. 'ತತ್ಪುರುಷೇ—' ಇತಿ. ತು ಶಬ್ದಕ್ಕೆ ಏವಕಾರಾರ್ಥ. ಪೂರ್ವ ಪದೇ ಪದದ ಮೇಲಿರಬೇಕು. ಪೂರ್ವ ಪದದಲ್ಲಿಯೇ ನಿರೂಢಲಕ್ಷಣಾ ಎಂದರ್ಥ. ಅಲ್ಲಿಯೇ ಲಕ್ಷಣಾ ಹೇಳಲು ಕಾರಣ

ತೋರಿಸುತ್ತಾನೆ. 'ತಥಾಹಿ—' ಇತಿ. 'ರಾಜ ಪುರುಷಃ' ಇದು ಷಷ್ಠೀ ತತ್ಪುರುಷ ಸಮಾಸ. ಇಲ್ಲಿ ಪ್ರಕೃತ್ಯರ್ಥ ಮೂಲಕವಲ್ಲದೆ ರಾಜಪದಾರ್ಥದೊಡನೆ ಪುರುಷ ಪದಾರ್ಥಕ್ಕೆ ಸಾಕ್ಷಾತ್ತಾಗಿ ಅನ್ವಯ ಇಲ್ಲ. ಏಕೆಂದರೆ 'ನಿಪಾತಾತಿ—' ಇತ್ಯಾದಿ ವ್ಯುತ್ಪತ್ತಿ ಭಂಗ ಬರುತ್ತದೆ. ನಾಮಾರ್ಥಶ್ಚ ನಾಮಾರ್ಥಶ್ಚ, ನಾಮಾರ್ಥೌ. ತಯೋಃ ನಾಮಾರ್ಥಯೋಃ. ನಿಪಾತ ಪದವು ಅವ್ಯಯಕ್ಕೂ ಉಪಲಕ್ಷಣ. 'ಅವ್ಯಯ ನಿಪಾತಾತಿರಿಕ್ತ ನಾಮಾರ್ಥಯೋರ್ಭೇದ ಸಂಬಂಧೇನ ನಾನ್ವಯಃ' ಅವ್ಯಯ, ನಿಪಾತಗಳಿಗಿಂತ ಬೇರಾದ ನಾಮಾರ್ಥ ನಾಮಾರ್ಥಗಳಿಗೆ ಯಾವಾಗಲೂ ಭೇದಸಂಬಂಧದಿಂದ ಅನ್ವಯ ವಿಲ್ಲವೆಂದರ್ಥ. ಅಭೇದದಿಂದ ಅನ್ವಯ ಹೇಳಬೇಕು ಎಂದು ತಾತ್ಪರ್ಯ. ಪ್ರಕೃತ ಭೇದದಲ್ಲಿ ಷಷ್ಠೀ ಬಂದಿದೆ. ಆದುದರಿಂದ ಲಕ್ಷಣಾ ಇಲ್ಲದೆ ಇವೆರಡಕ್ಕೆ ಅನ್ವಯ ಬರಲಾರದು. 'ಅನ್ಯಥಾ—' ಇತಿ. ಈ ವ್ಯುತ್ಪತ್ತಿಯನ್ನು ಅಂಗೀಕರಿಸದಿದ್ದರೆ 'ರಾಜಾ ಪುರುಷಃ' ಎಂಬಲ್ಲಿಯೂ ರಾಜಭಿನ್ನಃ ಪುರುಷಃ' (ರಾಜ ನಿರೂಪಿತ ಸ್ವತ್ವವಾನ್ ಪುರುಷಃ) ಎಂದು ಭೇದಸಂಬಂಧದಿಂದಲೇ ಅನ್ವಯ ಬರಬೇಕಾಗುತ್ತದೆ. ಆದರೆ ಹಾಗೆ ಎಲ್ಲಿಯೂ ಭೇದಸಂಬಂಧದಿಂದ ಅನ್ವಯವಿಲ್ಲ. ಆದುದರಿಂದ ರಾಜಪದಕ್ಕೆ ರಾಜ ಸಂಬಂಧ್ಯರ್ಥದಲ್ಲಿ ಲಕ್ಷಣಾ ಮಾಡಿ 'ರಾಜಸಂಬಂಧ್ಯಭಿನ್ನಃ ಪುರುಷಃ' ಎಂದು ಅಭೇದಾನ್ವಯ ಹೇಳಬೇಕು. ನಿಪಾತಿರಿಕ್ತರೂಪ ವಿಶೇಷಣಕ್ಕೆ ಸಾರ್ಥಕ್ಯ ತೋರಿಸುತ್ತಾನೆ. 'ಪಟಃ—' ಇತಿ. ಇಲ್ಲಿ ಘಟ ಪಟಗಳೊಡನೆ ನ ಞ್‌ಗೆ ಸಾಕ್ಷಾತ್ತಾಗಿ ಭೇದದಿಂದ ಅನ್ವಯ. ಘಟಪ್ರತಿಯೋಗಿಕ ಭೇದಾನುಯೋಗಿ ಪಟಃ' ಎಂದು ಬೋಧ. ಮಧ್ಯದಲ್ಲಿ ಯಾವ ಪ್ರತ್ಯಯಾರ್ಥವನ್ನಿಟ್ಟುಕೊಂಡೂ ಅನ್ವಯವಿಲ್ಲ. ಆದುದರಿಂದ ಅವ್ಯಯ, ನಿಪಾತಾತಿರಿಕ್ತವೆಂದು ಹೇಳಿದೆ. ನಞ್ ನಿಪಾತದಲ್ಲಿ ಸೇರಿರುತ್ತದೆ. 'ನೀಲಃ ಘಟಃ' ಇಲ್ಲಿ ನಿಪಾತಾತಿರಿಕ್ತ ನಾಮಾರ್ಥಗಳಾದುದರಿಂದ ಅಭೇದಸಂಬಂಧದಿಂದ ಅನ್ವಯ ಸಿದ್ಧವಾಗಿದೆ. ಇಲ್ಲಿ ಭೇದದಿಂದ ಅನ್ವಯವಿಲ್ಲ. ಆದುದರಿಂದ ರಾಜಪುರುಷ ಎಂಬಲ್ಲಿ ನಿಪಾತಾತಿರಿಕ್ತನಾಮಾರ್ಥಗಳಾದುದರಿಂದ ಭೇದದಿಂದ ಅನ್ವಯವಿಲ್ಲ. ಅಭೇದದಿಂದ ಹೇಳಬೇಕಾದರೆ ಲಕ್ಷಣಾ ಮಾಡಲೇ ಬೇಕು. ಪೂರ್ವಪದವಾದ ರಾಜಪದಕ್ಕೆ ರಾಜ ಸಂಬಂಧಿರೂಪಾರ್ಥದಲ್ಲಿ ಲಕ್ಷಣಾ ಹೇಳಿರುವುದರಿಂದ, ರಾಜಸಂಬಂಧ್ಯಭಿನ್ನಃ ಪುರುಷಃ ಎಂದು ಅಭೇದಾನ್ವಯ ಸಂಗತವಾಗುತ್ತದೆ. ಆಶಂಕಿಸಿ ಸಮಾಧಾನ ತೋರಿಸುತ್ತಾನೆ. 'ನಚ—' ಇತಿ. 'ರಾಜಃ ಪುರುಷಃ' ರಾಜಪುರುಷಃ. ಇಲ್ಲಿ 'ಸುಪೋ ಧಾತುಪ್ರಾತಿಪದಿಕಯೋಃ' ಸೂತ್ರದಿಂದ ಷಷ್ಠೀ ವಿಭಕ್ತಿಗೆ ಲುಕ್ ಬಂದು ಲೋಪವಾಗಿದೆ. ಲುಪ್ತ ವಿಭಕ್ತಿ ಸ್ಮರಣೆಯಿಂದ ವಿಭಕ್ತಿ ಇದ್ದಂತಾಗುತ್ತದೆ. ಅದಕ್ಕೆ ಸಂಬಂಧಾರ್ಥವಿರುವುದರಿಂದ ತನ್ಮೂಲಕ ರಾಜಪುರುಷ ಶಬ್ದಾರ್ಥಗಳಿಗೆ ಅನ್ವಯ ಬರುವುದರಿಂದ ಪೂರ್ವೋಕ್ತವ್ಯುತ್ಪತ್ತಿ ಭಂಗಕ್ಕೆ ಅವಕಾಶವಿಲ್ಲವಷ್ಟೆ. ಲುಪ್ತಷಷ್ಠ್ಯರ್ಥ ಸ್ವತ್ವ. ಅಲ್ಲಿ ರಾಜಪದಾರ್ಥಕ್ಕೆ ನಿರೂಪಿತತ್ವ ಸಂಬಂಧದಿಂದ ಅನ್ವಯ. ಸ್ವತ್ವಕ್ಕೆ ಆಶ್ರಯತ್ವ ಸಂಬಂಧದಿಂದ ಪುರುಷ ಪದಾರ್ಥದಲ್ಲಿ ಅನ್ವಯ. 'ರಾಜನಿರೂಪಿತ ಸ್ವತ್ವವಾನ್ ಪುರುಷಃ' ಎಂದು ಬೋಧ

ವಾಗುತ್ತದೆ. ಎಂದು ಪೂರ್ವ ಪಕ್ಷೀಯ ಆಶಯ. ಇದಕ್ಕೆ ಸಮಾಧಾನ 'ಅಸ್ಮೃತ—' ಇತಿ. ಪ್ರಕೃತಿ ಪ್ರತ್ಯಯ ಜ್ಞಾನವೇ ಒಬ್ಬನಿಗಿರುವುದಿಲ್ಲ. ಅಂಥವನಿಗೆ ಲುಪ್ತವಿಭಕ್ತಿಸ್ಮರಣೆ ಬರುವುದು ಹೇಗೆ? ಆವನಿಗೂ ಅಲ್ಲಿ ಅಭೇದ-ಶಾಬ್ದಬೋಧ ಬರುವುದರಿಂದ ತತ್ಸಿದ್ಧಿಗೋಸ್ಕರ ಲಕ್ಷಣಾ ಅಂಗೀಕರಿಸಲೇ ಬೇಕು ಎಂದು ಸಿದ್ಧಾಂತಿಯ ತಾತ್ಪರ್ಯ.

ದ್ವಂದ್ವೇ ತು ಧವಖದಿರೌ ಛಿಂದೀತ್ಯಾದೌ ಧವಃ ಖದಿರಶ್ಚ ವಿಭಕ್ತ್ಯರ್ಥದ್ವಿತ್ವಪ್ರಕಾರೇಣ ಬುಧ್ಯತೇ । ತತ್ರ ನ ಲಕ್ಷಣಾ । ನ ಚ ಸಾಹಿತ್ಯೇ ಲಕ್ಷಣೇತಿ ವಾಚ್ಯಮ್ । ಸಾಹಿತ್ಯಶೂನ್ಯಯೋರಪಿ ದ್ವಂದ್ವ ದರ್ಶನಾತ್। ನ ಚೈಕಕ್ರಿಯಾನ್ವಯಿತ್ವರೂಪಂ ಸಾಹಿತ್ಯ ಮಸ್ತೀತಿ ವಾಚ್ಯಂ, ಕ್ರಿಯಾ ಭೇದೇಪಿ ಧವಖದಿರೌಪಶ್ಯ ಛಿಂಧಿತ್ಯಾದೌ ತದ್ದರ್ಶನಾ ತ್ಸಾಹಿತ್ಯಸ್ಯಾನನು ಭವಾಚ್ಚ । ಅತ ಏವ ರಾಜ ಪುರೋಹಿತೌ ಸಾಯುಜ್ಯಕಾಮೌ ಯಜೇಯತಾ ಮಿತ್ಯತ್ರ ಲಕ್ಷಣಾಭಾವಾತ್ ದ್ವಂದ್ವ ಆಶ್ರೀಯತೇ ತಸ್ಮಾತ್ಸಾಹಿತ್ಯಂ ನಾರ್ಥಃ, ಕಿಂತು ವಾಸ್ತವಭೇದೋ ಯತ್ರ ತತ್ರ ದ್ವಂದ್ವಃ ॥

ದ್ವಂದ್ವ ಸಮಾಸದಲ್ಲಿ ಇತರೇತರ ದ್ವಂದ್ವ, ಸಮಾಹಾರದ್ವಂದ್ವವೆಂದು ಎರಡುವಿಧ. ಮೀಮಾಂಸಕರು ಇತರೇತರ ಯೋಗದ್ವಂದ್ವದಲ್ಲಿ ಲಕ್ಷಣಾವೃತ್ತಿಯನ್ನಂಗೀಕರಿಸುತ್ತಾರೆ. ಇದನ್ನು ಖಂಡಿಸಲು ಪ್ರಾರಂಭಿಸುತ್ತಾನೆ. 'ದ್ವಂದ್ವೇ—' ಇತಿ. ಧವಶ್ಚ ಖದಿರಶ್ಚ. ಧವಖದಿರೌ. ಇಲ್ಲಿ ವಿಭಕ್ತ್ಯರ್ಥವಾದ ದ್ವಿತ್ವವೇ ಪ್ರಕಾರವಾಗಿ ಧವಖದಿರಗಳೆರಡರ ಬೋಧ ಬರುವುದರಿಂದ ಲಕ್ಷಣಾವೃತ್ತಿಯ ಅವಶ್ಯಕತೆ ಇರುವುದಿಲ್ಲ. ಮೀಮಾಂಸಕನು ಆಶಂಕಿಸುತ್ತಾನೆ. 'ನಚ—' ಇತಿ. ಧವಖದಿರ ಈ ಎರಡರಲ್ಲಿಯೂ ಇರುವ ಸಹ ವೃತ್ತಿತ್ವರೂಪಧರ್ಮ ಸಾಹಿತ್ಯದಲ್ಲಿ ಲಕ್ಷಣಾ ಏಕೆ ಮಾಡಬಾರದು ? (ಒಟ್ಟಿಗೆ ಇರುವಿಕೆ. ಈ ಅರ್ಥವು ಲಕ್ಷಣೆಯಿಂದ ತೋರಲಿ ಎಂದು ಆಶಂಕೆ.) ಎಂದರೆ ಇತರೇತರ ದ್ವಂದ್ವ ವಿದ್ದಲ್ಲಿ ಎಲ್ಲಾ ಕಡೆ ಸಾಹಿತ್ಯ ಹೇಳಲು ಸಾಧ್ಯವಿಲ್ಲವೆಂದು ಸಮಾಧಾನ ತೋರಿಸುತ್ತಾನೆ. 'ಸಾಹಿತ್ಯ—' ಇತಿ. ವಿಂಧ್ಯಶ್ಚ, ಹಿಮಾಲಯಶ್ಚ, ವಿಂಧ್ಯಹಿಮಾಲಯೌ. ಇಲ್ಲಿ ಸಹವೃತ್ತಿತ್ವರೂಪ ಸಾಹಿತ್ಯ ಕೊಡುವುದೇ ಇಲ್ಲ. ಛೇದನರೂಪ ಏಕಕ್ರಿಯಾನ್ವಯಿತ್ವರೂಪಸಾಹಿತ್ಯವು 'ಧವಖದಿರೌ ಛಿಂಧಿ' ಎಂಬಲ್ಲಿ ತೋರುವುದರಿಂದ ಖದಿರ ಪದಕ್ಕೆ ಏಕಕ್ರಿಯಾನ್ವಯಿತ್ವರೂಪ ಸಾಹಿತ್ಯದಲ್ಲಿ ಯದ್ಯಪಿ ಲಕ್ಷಣಾ ಹೇಳಬಹುದು. ಆದರೂ ಈ ರೀತಿ ಸಾಹಿತ್ಯವೂ ಎಲ್ಲಾ ಕಡೆಯಲ್ಲಿ ಇರುವುದಿಲ್ಲ. ಕೆಲವು ಕಡೆ 'ಪಶ್ಯ' ಎಂದಿದ್ದರೆ ದರ್ಶನರೂಪ ಏಕಕ್ರಿಯಾನ್ವಯಿತ್ವರೂಪ ಸಾಹಿತ್ಯ ತೋರುತ್ತದೆ. ಹೀಗೆ ಕ್ರಿಯಾಭೇದ ವಿರುವುದರಿಂದ ಎಲ್ಲಾ ಕಡೆ ಒಂದೇ ಸಾಹಿತ್ಯ ಹೇಳುವುದಕ್ಕಾಗುವುದಿಲ್ಲ. (ಏಕಕ್ರಿಯಾನ್ವಯಿತ್ವ ಸಾಹಿತ್ಯವು ನಿಯತವಲ್ಲ.) ಈ ವಿಷಯದಲ್ಲಿ ಗಮಕ ತೋರಿಸುತ್ತಾನೆ. 'ಅತ ಏವ—' ಇತಿ. ಇತರೇತರ ದ್ವಂದ್ವದಲ್ಲಿ ಸಾಹಿತ್ಯವು ತೋರದಿರುವುದ

ರಿಂದ ಮೀಮಾಂಸಕರು ಲಕ್ಷಣಾ ಹೇಳುವುದು ಅಸಂಗತವೇ ಎಂದರ್ಥ. 'ರಾಜ ಪುರೋಹಿತೌ ಸಾಯುಜ್ಯಕಾಮೌ ಯಜೇಯಾತಾಂ' ಎಂಬ ಶ್ರುತಿ ಘಟಕವಾದ ರಾಜ ಪುರೋಹಿತೌ ಎಂಬಲ್ಲಿ ಹೇಗೆ ಸಮಾಸ ಮಾಡಬೇಕು. ? ಪುರೋಹಿತಶ್ಚ ಪುರೋಹಿತಶ್ಚ, ಪುರೋಹಿತೌ, ರಾಜ್ಞಃ ಪುರೋಹಿತೌ, ರಾಜ ಪುರೋಹಿತೌ, ಎಂದು ಷಷ್ಠೀತತ್ಪುರುಷ ಸಮಾಸವೇ ? ಅಥವಾ ರಾಜಾ ಚ ಪುರೋಹಿತಶ್ಚ' ರಾಜಪುರೋಹಿತೌ' ಎಂದು ದ್ವಂದ್ವ ಸಮಾಸವೇ ? ಎಂದು ವಿಕಲ್ಪ ತೋರಿಸಿ, ತತ್ಪುರುಷವನ್ನು ಆಶ್ರಯಿಸಿದರೆ ಲಕ್ಷಣಾ ಮಾಡಬೇಕು. ದ್ವಂದ್ವದಲ್ಲಿ ಅದು ಇಲ್ಲದಿರುವುದರಿಂದ ಲಾಘವವಿದೆಯೆಂದು ಸಿದ್ಧಾಂತ ಮಾಡಿದೆ. ದ್ವಂದ್ವದಲ್ಲಿ ಸಾಹಿತ್ಯದಲ್ಲಿ ಲಕ್ಷಣಾ ಹೇಳಿದರೆ ಈ ವಿಚಾರ ವ್ಯರ್ಥವಾಗುತ್ತದೆ. ಆದುದರಿಂದ ಸಾಹಿತ್ಯ ವಿಶಿಷ್ಟದಲ್ಲಿ ಲಕ್ಷಣಾ ಹೇಳಬಾರದು. ಅಲ್ಲಿ ಸಾಹಿತ್ಯಾನುಭವವೂ ಇಲ್ಲ. ಯಾವ ಪದಕ್ಕೂ ಸಾಹಿತ್ಯಾರ್ಥವಿಲ್ಲ. ದ್ವಿತ್ವವು ವಿಭಕ್ತಿಯಿಂದ ತೋರುವುದರಿಂದ ಅಲ್ಲಿಯೂ ಲಕ್ಷಣಾ ಹೇಳಬೇಕಾಗಿಲ್ಲ. ವಾಸ್ತವಭೇದವಿದ್ದಲ್ಲಿ ಮಾತ್ರ ಇತರೇತರ ಯೋಗದ್ವಂದ್ವ ಬರುತ್ತದೆ.

ನ ಚ ನೀಲಘಟ ಯೋರಭೇದ ಇತ್ಯಾದೌ ಕಥಮಿತಿ ವಾಚ್ಯಂ, ತತ್ರ ನೀಲಪದಸ್ಯ ನೀಲತ್ವೇ ಘಟಪದಸ್ಯ ಘಟತ್ವೇ ಲಕ್ಷಣಾ, ಅಭೇದ ಇತ್ಯಸ್ಯ ಚಾಶ್ರಯಾ ಭೇದ ಇತ್ಯರ್ಥಾತ್ । ಸಮಾಹಾರ ದ್ವಂದ್ವೇತು ಯದಿ ಸಮಾಹಾರೋಽಸ್ಯನು ಭೂಯತ ಇತ್ಯುಚ್ಯತೇ ತದಾಽಹಿನಕುಲ ಮಿತ್ಯಾದೌ ಪರಪದೇಽಹಿನಕುಲ ಸಮಾಹಾರೇ ಲಕ್ಷಣಾ ಪೂರ್ವಪದಂತು ತಾತ್ಪರ್ಯಗ್ರಾಹಕಮ್ । ನ ಚ ಭೇರೀ ಮೃದಂಗಂ ವಾದಯೇತ್ಯತ್ರ ಕಥಂ ಸಮಾಹಾರ ಸ್ಯಾನ್ವಯಃ, ಅಪೇಕ್ಷಾ ಬುದ್ಧಿವಿಶೇಷ ರೂಪಸ್ಯ ತಸ್ಯ ವಾದನಾ ಸಂಭವಾದಿತಿ ವಾಚ್ಯಂ, ಪರಂಪರಾ ಸಂಬಂಧೇನ ತದನ್ವಯಾತ್ । ಏವಂ ಪಂಚಮೂಲೀ ತ್ಯಾದಾವಪಿ ॥

ಎರಡು ಪದಗಳಿಗೂ ಪರಸ್ಪರ ಭೇದವಿದ್ದಾಗಲೇ ದ್ವಂದ್ವ ಬರುವುದಾದರೆ 'ನೀಲ ಘಟಯೋಃ ಅಭೇದಃ' ಎಂಬ ವಾಕ್ಯದಲ್ಲಿರುವ 'ನೀಲಘಟಯೋಃ' ಎಂಬಲ್ಲಿ ನೀಲ ಮತ್ತು ಘಟಪದಗಳಿಗೆ ದ್ವಂದ್ವ ಬಂದದ್ದು ಹೇಗೆ ? ಎಂದು ಆಶಂಕಿಸುತ್ತಾನೆ. 'ನಚ—' ಇತಿ. ಅಲ್ಲಿ ಬೇದವಿಲ್ಲದಿರುವುದರಿಂದ ದ್ವಂದ್ವ ಮಾಡಿರುವುದು ತಪ್ಪಾಗುವುದಿಲ್ಲವೇ ? ಎಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ತತ್ರ—' ಇತಿ. ಇಲ್ಲಿ ನೀಲ ಘಟಗಳಿಗೆ ವಾಸ್ತವ ಭೇದವಿವಕ್ಷೆಯಿಂದ ದ್ವಂದ್ವ ಮಾಡಿಲ್ಲ. ನೀಲಪದಕ್ಕೆ ನೀಲತ್ವದಲ್ಲಿಯೂ, ಘಟಪದಕ್ಕೆ ಘಟತ್ವದಲ್ಲಿಯೂ ಲಕ್ಷಣಾ ಮಾಡಿ ನೀಲತ್ವ, ಘಟಗಳಿಗೆ ಅಭೇದವೆಂದರೆ ಆಶ್ರಯಾ ಭೇದ ಎಂದು ಅರ್ಥ ಮಾಡಬೇಕು. ಆಶ್ರಯಾಭೇದ ವೆಂಬುದಕ್ಕೆ 'ಏಕವ್ಯಕ್ತಿಸಮವೇತತ್ವಂ' ಎಂದರ್ಥ. ಅಭೇದಪದಕ್ಕೆ 'ಏಕಾಶ್ರಯಸಮವೇತತ್ವಾರ್ಥದಲ್ಲಿ ಲಕ್ಷಣಾ. ಒಂದು ಆಶ್ರಯದಲ್ಲಿ ಸಮವಾಯದಿಂದ ನೀಲತ್ವ ಘಟತ್ವ ಧರ್ಮಗಳು ಇರುತ್ತವೆಯೆಂದು ತಾತ್ಪರ್ಯ.

ಸಮಾಹಾರದ್ವಂದ್ವದಲ್ಲಿ ವ್ಯವಸ್ಥೆಯನ್ನು ತೋರಿಸುತ್ತಾನೆ. 'ಸಮಾ—' ಇತಿ. 'ಪರಸ್ಪರಾನನ್ವಿ ತಾರ್ಥಕಾನೇಕಪದ ಘಟಿತೈಕವಚನಾಂತ ರೂಪತ್ವಂ, ಸಮಾಹಾರದ್ವಂದ್ವದ ಲಕ್ಷಣ. 'ಅಹಿಶ್ಚ ನಕುಲಶ್ಚ ತಯೋಃ ಸಮಾಹಾರಃ' ಅಹಿನಕುಲಮ್. 'ಯೇಷಾಂ ಚ ವಿರೋಧಃ ಶಾಶ್ವತಿಕಃ' ಸೂತ್ರದಿಂದ ಸಮಾಸ ಬಂದಿದೆ. ಇಲ್ಲಿ ಸಮಾಹಾರವೂ ಅನುಭವವಿಷಯ ವಾಗುತ್ತದೆಂದು ಹೇಳುವುದಾದರೆ ಆಗ ಬಹುವ್ರೀಹಿ ಯಂತೆ ಉತ್ತರ ಪದದಲ್ಲಿ ಲಕ್ಷಣಾ. ನಕುಲ ಪದಕ್ಕೆ 'ಅಹಿನಕುಲ ಸಮಾಹಾರ' ಎಂದು ಲಕ್ಷಣಾ ವೃತ್ತಿಯಿಂದ ಅರ್ಥವಾಗುತ್ತದೆ. ಆಗ ಅಹಿರೂಪಪೂರ್ವ ಪದವು ತಾತ್ಪರ್ಯ ಗ್ರಾಹಕವಾಗುತ್ತದೆ. (ನಕುಲಪದಂ 'ಅಹಿನಕುಲಸಮಾಹಾರ ವಿಷಯಕ ಬೋಧ ಜನಕಂ ಭವತು' ಎಂದು ಹೇಳುವವನ ತಾತ್ಪರ್ಯವನ್ನು ಅದು ವ್ಯಕ್ತಪಡಿಸುತ್ತದೆ.) ಪ್ರತ್ಯಯಗಳು ಯಾವಾಗಲೂ ಸ್ವಪ್ರಕೃತ್ಯರ್ಥಾನ್ವಿತವಾದ ಸ್ವಾರ್ಥವನ್ನು ಬೋಧಿಸು ವುದರಿಂದ ಉತ್ತರಪದದಲ್ಲಿಯೇ ಲಕ್ಷಣಾ ಮಾಡಬೇಕು. 'ನಚ—' ಎಂಬುದರಿಂದ ಪುನಃ ಆಶಂಕಿಸುತ್ತಾನೆ. 'ಭೇರೀ ಚ ಮೃದಂಗಶ್ಚ, ಭೇರೀ ಮೃದಂಗಮ್. 'ದ್ವಂದ್ವಶ್ಚ ಪ್ರಾಣಿತೂರ್ಯ ಸೇನಾಂಗಾನಾಮ್' ಸೂತ್ರದಿಂದ ಸಮಾಸ. ಇಲ್ಲಿಯೂ ಮೃದಂಗ ಪದಕ್ಕೆ ಭೇರೀ ಮೃದಂಗ ಸಮಾಹಾರ ರೂಪಾರ್ಥದಲ್ಲಿ ಲಕ್ಷಣಾ. ಭೇರೀ ಪದವು ತಾತ್ಪರ್ಯ ಗ್ರಾಹಕವಾಗುತ್ತದೆ. ಅನೇಕೈಕತ್ವವಿಷಯಕಾ ಪೇಕ್ಷಾಬುದ್ಧಿ ವಿಶೇಷವೇ ಸಮಾಹಾರ. ವಾದನಕ್ಕೆ ಅಭಿಘಾತರೂಪವಾದ ಸಂಯೋಗಾವಚ್ಛಿನ್ನ ಕ್ರಿಯಾ ಅರ್ಥ. ಈಗ ಉತ್ತರ ಪದಕ್ಕೆ ಸಮಾಹಾರದಲ್ಲಿ ಲಕ್ಷಣಾ ಮಾಡಿದರೆ ಅಪೇಕ್ಷಾ ಬುದ್ಧಿವಿಶೇಷಕ್ಕೆ ಕ್ರಿಯೆಯಲ್ಲಿ ಅನ್ವಯ ಹೇಳುವುದು ಹೇಗೆ ? ಎಂದು ಶಂಕಾ ಬಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಪರಂಪರಾ—' ಇತಿ. ಸ್ವಾಶ್ರಯವೃತ್ತಿತ್ವ ರೂಪ ಪರಂಪರಾಸಂಬಂಧದಿಂದ ವಾದನ ಕ್ರಿಯೆಗೆ ಸಮಾಹಾರದಲ್ಲಿ ಅನ್ವಯ ಬರುತ್ತದೆ. ಸ್ವ—ಪದದಿಂದ ಅಪೇಕ್ಷಾಬುದ್ಧಿವಿಶೇಷರೂಪವಾದ ಸಮಾಹಾರ ತೆಗೆದು ಕೊಂಡರೆ ಅದಕ್ಕೆ ಆಶ್ರಯವಾದದ್ದು ಭೇರೀ ಮೃದಂಗಾದಿ. ವಿಷಯತಾಸಂಬಂಧದಿಂದ ಭೇರ್ಯಾದಿಗಳು ಸಮಾಹಾರಕ್ಕೆ ಆಶ್ರಯವಾಗುತ್ತವೆ. ತದ್ವೃತ್ತಿತ್ವ (ಅಲ್ಲಿರುವುದು) ವಾದನ ಕ್ರಿಯೆಗೆ ಬರುತ್ತದೆ. 'ಏವಂ—' ಇತಿ. ದ್ವಿಗ್ವರ್ಥ ಸಮಾಹಾರ ಸ್ಥಲದಲ್ಲಿಯೂ ಹೀಗೆಯೇ ಉತ್ತರ ಪದದಲ್ಲಿ ಲಕ್ಷಣಾ ಹೇಳ ಬೇಕೆಂದರ್ಥ. ಪಂಚಾನಾಂ ಮೂಲಾನಾಂ ಸಮಾಹಾರಃ, ಪಂಚಮೂಲೀ. 'ತದ್ಧಿತಾರ್ಥೋತ್ತರಪದ ಸಮಾಹಾರೇ ಚ' ಸೂತ್ರದಿಂದ ಸಮಾಸ. ಸಂಖ್ಯಾ ಪೂರ್ವವಾದುದರಿಂದ ದ್ವಿಗು ಸಮಾಸವಾಗುತ್ತದೆ. ಅಕಾರಾಂತೋತ್ತರ ಪದವಾಗಿದ್ದರೆ ಅದು ಸ್ತ್ರೀಲಿಂಗವಾಗುತ್ತದೆ. ಇಲ್ಲಿ ಮೂಲಪದಕ್ಕೆ ಪಂಚ ಮೂಲ ಸಮಾಹಾರರೂಪಾರ್ಥದಲ್ಲಿ ಲಕ್ಷಣಾ. ಪಂಚಪದ ತಾತ್ಪರ್ಯ ಗ್ರಾಹಕವಾಗುತ್ತದೆ. 'ಪಂಚಪೂಲೀ' ಎಂದೂ ಪಾಠಾಂತರವಿದೆ.

ಪರೇ ತು ಅಹಿನಕುಲಮಿತ್ಯಾದೌ ಅಹಿರ್ನಕುಲಶ್ಚ ಬುಧ್ಯತೇ ಪ್ರತ್ಯೇಕಮೇಕತ್ವಾನ್ವಯಃ, ಸಮಾಹಾರ ಸಂಜ್ಞಾ ಚ ಯತ್ರೈಕತ್ವಂ ನಪುಂಸಕತ್ವಂ ಚ ಪ್ರಾಣಿತೂರ್ಯೇತ್ಯಾದಿ

ಸೂತ್ರೇಣೋಕ್ತಂ ತತ್ರೈವ, ಅನ್ಯತ್ರೈಕವಚನಮಸಾಧ್ವಿತ್ಯಾಹುಃ । ಪಿತರೌ ಶ್ವಶುರಾವಿತ್ಯಾದೌ ಪಿತೃ ಪದೇ ಜನಕದಂಪತ್ಯೋಃ ಶ್ವಶುರಪದೇ ಸ್ತ್ರೀಜನಕದಂಪತ್ಯೋರ್ಲಕ್ಷಣಾ । ಏವಮನ್ಯತ್ರಾಪಿ । ಘಟಾ ಇತ್ಯಾದೌ ತು ನ ಲಕ್ಷಣಾ, ಘಟತ್ವೇನ ರೂಪೇಣ ನಾನಾಘಟೋಪಸ್ಥಿತಿ ಸಂಭವಾತ್ ।

'ಪರೇತು—' ಎಂಬುದರಿಂದ ಈ ವಿಷಯದಲ್ಲಿ ನವೀನ ಮತ ತೋರಿಸುತ್ತಾನೆ. 'ಅಹಿನಕುಲಂ' ಎಂಬುದು ಸಮಾಹಾರಕ್ಕೆ ಉದಾಹರಣೆಯಲ್ಲ. ಇಲ್ಲಿ ಸಮಾಹಾರ ಬೋಧವೂ ಬರುವುದಿಲ್ಲ. ಸಮುದಾಯದಲ್ಲಿರುವ ಏಕವಚನದಿಂದ ಬೋಧಿತವಾದ ಏಕತ್ವಸಂಖ್ಯೆಗೆ ಅಹಿಯಲ್ಲಿಯೂ, ನಕುಲದಲ್ಲಿಯೂ ಬೇರೆ ಬೇರೆಯಾಗಿ ಅನ್ವಯ. ಸಾಧು ಪ್ರಯೋಗಕ್ಕೋಸ್ಕರ ಏಕವಚನ ಬಂದಿದೆ. ಯಾವ ಪ್ರಯೋಜನ ವಿಲ್ಲದಿರುವುದರಿಂದಲೂ, ಸಮಾಹಾರಕ್ಕೆ ಅನುಭವವಿಲ್ಲದಿದುರಿಂದಲೂ ಸಮಾಹಾರದಲ್ಲಿ ಲಕ್ಷಣಾ ಮಾಡಬೇಕಾಗಿಲ್ಲ. ಹಾಗಾದರೆ ಸಮಾಹಾರ ತೋರುವುದೆಲ್ಲಿ ? ಎಂಬ ಜಿಜ್ಞಾಸೆ ಬಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಯತ್ರ—' ಇತಿ. ಯಾವ ದ್ವಂದ್ವದಲ್ಲಿ ಏಕತ್ವವೂ, ನಪುಂಸಕತ್ವವೂ 'ಪ್ರಾಣಿ ತೂರ್ಯ—' ಇತ್ಯಾದಿ ಸೂತ್ರಗಳಿಂದ ಹೇಳಿದೆಯೋ ಅಲ್ಲಿ ಮಾತ್ರ ಸಮಾಹಾರ ಸಂಜ್ಞೆ ಬರುತ್ತದೆ. ಶಾಸ್ತ್ರ ಸಂಕೇತ ಸಿದ್ಧವಾದುದರಿಂದ ಸಮಾಹಾರ ಸಂಜ್ಞೆ ಪಾರಿಭಾಷಿಕ ವಾಗಿದೆಯೆಂದು ತಾತ್ಪರ್ಯ. 'ಅನ್ಯತ್ರ—' ಇತಿ. ಸಮಾಹಾರದ್ವಂದ್ವ ಅತಿರಿಕ್ತ ಸ್ಥಳದಲ್ಲಿ ಏಕವಚನವು ಅಸಾಧುವೆಂದು ತಿಳಿಸುವುದೇ ಈ ಸಂಜ್ಞೆಗೆ ಫಲ. ಸಮಾಹಾರವಿದ್ದಲ್ಲಿ ನಿತ್ಯೈಕವಚನ ನಪುಂಸಕತ್ವವನ್ನು ತಿಳಿಸುತ್ತದೆ. ವಿರೂಪೈಕಶೇಷ ಸ್ಥಲದಲ್ಲಿ ಬೋಧ ತೋರಿಸುತ್ತಾನೆ. 'ಪಿತರೌ' ಇತಿ. 'ಚೈತ್ರಸ್ಯ ಪಿತರೌ' ಎಂದರೆ ಒಬ್ಬ ಚೈತ್ರನಿಗೇ ಇಬ್ಬರು ತಂದೆಯರು ಸಂಭವಿಸದಿರುವುದರಿಂದ ತಂದೆ ತಾಯಿಗಳೆಂದೇ ಅರ್ಥವಾಗುವುದರಿಂದ (ವಿರೂಪೈಕ ಶೇಷ ಸ್ಥಳ) ಅಲ್ಲಿ ಜನಕದಂಪತಿಗಳಲ್ಲಿ ಲಕ್ಷಣಾಮಾಡಬೇಕು. ಸ್ತ್ರೀ ಜನಕದಂಪತೀ ಬೋಧ ತಾತ್ಪರ್ಯದಿಂದ ಉಚ್ಚರಿಸಿದ 'ಶ್ವಶುರೌ' ಎಂಬಲ್ಲಿಯೂ ಸ್ತ್ರೀಜನಕದಂಪತಿಗಳಲ್ಲಿ ಲಕ್ಷಣಾ ಮಾಡಬೇಕು. ಯಥಾ ಶ್ರುತವಾಗಿ ಅಂಗೀಕರಿಸಿದರೆ ಇಲ್ಲಿ ವಿರೂಪೈಕ ಶೇಷವಾಗಲಾರದು. ಒಬ್ಬನಿಗೇ ಇಬ್ಬರು ಹೆಂಡಂದಿರಿರಬಹುದು. ಕೆಲವರು ಲುಪ್ತಮಾತ್ರಾದಿ ಪದಸ್ಮರಣೆಯಿಂದ ಶಾಬ್ದ ಬೋಧ ಬರುವುದರಿಂದ ಇಲ್ಲಿಯೂ ಲಕ್ಷಣಾ ಮಾಡಬೇಕಾಗಿಲ್ಲವೆಂದು ಹೇಳುತ್ತಾರೆ. 'ಏವಮನ್ಯತ್ರಾಪಿ—' ಇತಿ. 'ಪುಮಾನ್ ಸ್ತ್ರಿಯಾ' ಸೂತ್ರದಿಂದ ಎಲ್ಲಿ ಏಕಶೇಷ ಬಂದಿದೆಯೋ ಅಲ್ಲಿ ಹೀಗೆ ಲಕ್ಷಣಾದಿಂಗಲೇ ಅರ್ಥ ನಿರ್ವಾಹ ಮಾಡಬೇಕು. ದಂಪತೀ ಪೂಜಾ ಪ್ರಕರಣದಲ್ಲಿ 'ಬ್ರಾಹ್ಮಣೌ ಅನ್ವಯ' ಎಂದು ಪ್ರಯೋಗಿಸಿದರೆ ಅಲ್ಲಿ ವಿರೂಪೈಕಶೇಷ ವಾಗುವುದರಿಂದ (ಬ್ರಾಹ್ಮಣಶ್ಚ ಬ್ರಾಹ್ಮಣೀಚ) ಬ್ರಾಹ್ಮಣ ದಂಪತಿಗಳಲ್ಲಿ ಲಕ್ಷಣಾ ಹೇಳಬೇಕು. 'ಶಿವೌ ನಮಸ್ಕುರ್ಯಾತ್. ಎಂಬಲ್ಲಿಯೂ (ಶಿವಾಚಶಿವಶ್ಚ) ಪಾರ್ವತೀ ಪರಮೇಶ್ವರರೂಪಾರ್ಥದಲ್ಲಿ ಲಕ್ಷಣಾ'

'ಭ್ರಾತರೌ ಪುತ್ರೌ' ಎಂಬಲ್ಲಿ ಪ್ರಮಾಣಾಂತರದಿಂದ ಸ್ತ್ರೀ ಪರತ್ವಜ್ಞಾನವಿದ್ದಾಗ 'ಭ್ರಾತರೌ' ಎಂಬಲ್ಲಿ (ಭ್ರಾತೃ ಪುತ್ರೌ ಸ್ವಸೃದುಹಿತೃಭ್ಯಾಂ' ಸೂತ್ರದಿಂದ ಏಕಶೇಷ) ಭ್ರಾತೃಸ್ವಸ್ರರ್ಥದಲ್ಲಿಯೂ (ಅಣ್ಣ ತಂಗಿಯರು) 'ಪುತ್ರೌ' ಎಂಬಲ್ಲಿ ಪುತ್ರ ಪುತ್ರಿಯರಲ್ಲಿಯೂ ಲಕ್ಷಣಾ. ಸಮಾನರೂಪೈಕಶೇಷ ಸ್ಥಳದಲ್ಲಿ ಲಕ್ಷಣಾ ಇಲ್ಲನೆಂದು ತಿಳಿಸುತ್ತಾನೆ. 'ಘಟಾ—' ಇತಿ. ಬಹುವಚನಾಂತ ಘಟಾದಿ ಪದಗಳಲ್ಲಿ ಲಕ್ಷಣಾ ಇಲ್ಲ. ಅಲ್ಲಿ ಘಟತ್ವರೂಪ ಸಾಮಾನ್ಯ ಪ್ರತ್ಯಾಸತ್ತಿಯಿಂನಲೇ (ಶಕ್ತಿಯಿಂದಲೇ) ಸಕಲ ಘಟ ಬೋಧ ಬರುವುದರಿಂದ ಲಕ್ಷಣಾ ಕಲ್ಪಿಸಿ ನಾನಾಘಟವಿಷಯಕ ಶಾಬ್ದ ಬೋಧ ಹೇಳಬೇಕಾಗಿಲ್ಲವೆಂದು ತಾತ್ಪರ್ಯ.

ಕರ್ಮಧಾರಯಸ್ಥಲೇತು ನೀಲೋತ್ಪಲಮಿತ್ಯಾದಾವಭೇದ ಸಂಬಂಧೇನ ನೀಲಪದಾರ್ಥ ಉತ್ಪಲಪದಾರ್ಥೇ ಪ್ರಕಾರಃ । ತತ್ರ ಚ ನ ಲಕ್ಷಣಾ । ಅತ ಏವ ನಿಷಾದ ಸ್ಥಪತಿಂ ಯಾಜಯೇದಿತ್ಯತ್ರ ನ ತತ್ಪುರುಷಃ, ಲಕ್ಷಣಾಪತ್ತೇಃ । ಕಿಂತು ಕರ್ಮಧಾರಯಃ, ಲಕ್ಷಣಾ ಭಾವಾತ್ । ನ ಚ ನಿಷಾದಸ್ಯ ಸಂಕರಜಾತಿ ವಿಶೇಷಸ್ಯ ವೇದಾನಧಿಕಾರಾದ್ಯಾಜನಾಽಸಂಭವ ಇತಿ ವಾಚ್ಯಂ, ನಿಷಾದಸ್ಯ ವಿದ್ಯಾಪ್ರಯುಕ್ತೇಸ್ತತ ಏವ ಕಲ್ಪನಾತ್ । ಲಾಘವೇನ ಮುಖ್ಯಾರ್ಥ ಸ್ಯಾನ್ವಯೇ ತದನುಪಪತ್ತ್ಯಾ ಕಲ್ಪನಾಯಾಃ ಫಲಮುಖ ಗೌರವತಯಾಽದೋಷತ್ವಾತ್ ॥

ಕರ್ಮಧಾರಯ ಸಮಾಸದಲ್ಲಿಯೂ ಲಕ್ಷಣಾ ಇಲ್ಲವೆಂದು ತೋರಿಸುತ್ತಾನೆ. 'ಕರ್ಮಧಾ—' ಇತಿ. (ತತ್ಪುರುಷತ್ವೇ ಸತಿ ಸಮಸ್ಯಮಾನ ಪದಾರ್ಥಾಽಭೇದ ಬೋಧಕ ವಿಗ್ರಹ ಕತ್ವಂ' ಎಂದು ಕರ್ಮಧಾರಯದ ಲಕ್ಷಣ. ದ್ವಿಗು, ಕರ್ಮಧಾರಯ ಸಮಾಸಗಳು ತತ್ಪುರುಷದ ಭೇದಗಳೇ.) ತತ್ಪುರುಷದ ಭೇದವಾದರೂ ಇಲ್ಲಿ ಲಕ್ಷಣಾ ಇಲ್ಲವೆ ಅಭಿಮತವಾದ ಶಾಬ್ದಬೋಧ ಬರುತ್ತದೆ. ನೀಲಂ ಚ ತತ್ ಉತ್ಪಲಂ ಚ, ನೀಲೋತ್ಪಲಮ್. ಉತ್ಪಲಪದಾರ್ಥದಲ್ಲಿ ನೀಲ ಪದಾರ್ಥಕ್ಕೆ ತಾದಾತ್ಮ್ಯ ಸಂಬಂಧದಿಂದ ಅನ್ವಯ ಬರುವುದರಿಂದ ನೀಲಪದಾರ್ಥ ಪ್ರಕಾರವಾಗುತ್ತದೆ. ಅತ ಏವ— ಕರ್ಮಧಾರಯ ಸ್ಥಳದಲ್ಲಿ ಲಕ್ಷಣಾ ಒಪ್ಪದಿರುವುದರಿಂದಲೇ ಎಂದರ್ಥ. 'ನಿಷಾದಸ್ಥಪತಿ' ಪದದಲ್ಲಿ ತತ್ಪುರುಷವಾಗಲೀ ಬಹುವ್ರೀಹಿಯಾಗಲೀ ಸಮಾಸವಲ್ಲವೆಂದು ನಿರ್ಣಯಿಸಿದೆ. ಹಾಗೆ ಅಂಗೀಕರಿಸಿದರೆ ಪೂರ್ವೋತ್ತರಪದಗಳಲ್ಲಿ ನಿರೂಢ ಲಕ್ಷಣಾ ಅಂಗೀಕರಿಸ ಬೇಕಾದುದರಿಂದ ಜಘನ್ಯವೃತ್ತಿಕಲ್ಪನಾಪ್ರಯುಕ್ತ ಗೌರವ ಬರುತ್ತದೆ. 'ಏತಯಾ ನಿಷಾದ ಸ್ಥಪತಿಂ ಯಾಜಯೇತ್' ಎಂದು ಶ್ರುತಿವಾಕ್ಯ. ಇಲ್ಲಿ 'ನಿಷಾದಾನಾಂ ಸ್ಥಪತಿಃ' ನಿಷಾದ ಸ್ಥಪತಿಃ ಎಂದು ತತ್ಪುರುಷವೇ ? 'ನಿಷಾದಶ್ಚಾಸೌ ಸ್ಥಪತಿಶ್ಚ' ನಿಷಾದಸ್ಥಪತಿಃ ಎಂದು ಕರ್ಮಧಾರಯವೇ ? ಎಂದು ಸಂಶಯ ಬರುತ್ತದೆ. ಅರ್ಥ ಸಾಮಂಜಸ್ಯದಿಂದ ತತ್ಪುರುಷವೆಂದೇ ಹೇಳಬೇಕೆಂದು ಪೂರ್ವಪಕ್ಷ. 'ವಾಸ್ತುಮಯಂ ರೌದ್ರಂ ಚರುಂ ನಿರ್ವಪೇತ್' ಎಂಬ ಇಷ್ಟಿಪ್ರಕರಣದಲ್ಲಿ ಇದು ಹೇಳಿದೆ. ಈ ಇಷ್ಟಿಯಲ್ಲಿ ಸ್ಥಪತಿ

ಅಂದರೆ ಅಧಿಪತಿ ತ್ರೈವರ್ಣಿಕನೇ ಆಗಬೇಕು. ತ್ರೈವರ್ಣಿಕನಿಗೆ ವೇದಾಧ್ಯಯನ ವಿರುವುದರಿಂದ ವಿದ್ಯಾಸಂಭವವಿದೆ. ಬೇಡ ಯಜಮಾನ ಎಂದರೆ ಅವನಿಗೆ ವಿದ್ಯಾಧಿಕಾರ ವಿಲ್ಲದಿರುವುದರಿಂದ ಯಾಜನವೂ ಕೂಡುವುದಿಲ್ಲವೆಂದು ಹೇಳಿದರೆ ಕರ್ಮಧಾರಯವನ್ನೇ ಲಾಘವದಿಂದ ಆಶ್ರಯಿಸಬೇಕೆಂದು ನಿರ್ಣಯಿಸಿದೆ. ಮುಖ್ಯವೃತ್ತಿಯಿಂದಲೇ ಬೇಡ ಯಜಮಾನ ಎಂಬ ಅರ್ಥ ಸಂಭವಿಸುವಾಗ ಜಘನ್ಯಲಕ್ಷಣಾ ವೃತ್ತಿಯನ್ನು ಆಶ್ರಯಿಸಿ ತ್ರೈವರ್ಣಿಕನಾದ ಬೇಡರ ಯಜಮಾನ ಎಂಬರ್ಥವನ್ನು ಕಲ್ಪಿಸ ಬೇಕಾಗಿಲ್ಲ ವೆಂದರ್ಥ. ಸಂಕರ ಜಾತಿಗೆ ವೇದಾಧಿಕಾರ ವಿಲ್ಲದಿರುವುದರಿಂದ ಅವನಿಗೆ ಯಾಜನ ಹೇಗೆ ಸಂಗತ ವಾಗುತ್ತದೆಂದು ಶಂಕಿಸಬಾರದು. ತತ್ಕಾಲದಲ್ಲಿ ಆಚಾರ್ಯೋಪದೇಶದಿಂದ ವಿದ್ಯೆಯನ್ನು ಸಂಪಾದಿಸಿ ಅವನ ಮೂಲಕ ಯಾಗ ಮಾಡಿಸಬಹುದೆಂದು ಶಾಬರ ಭಾಷ್ಯಾದಿಗಳಲ್ಲಿ ವಿವರಿಸಿದೆ. 'ನಿಷಾದಃ ಸ್ಯಾ ಚ್ಛಬ್ದಸಾಮರ್ಥ್ಯಾತ್' ಎಂಬ ಜೈಮಿನಿ ಸೂತ್ರದಲ್ಲಿ ಇದು ನಿರ್ಣೀತವಾಗಿದೆ. ಅನುಪಪತ್ತಿ ಬರುವುದೆಂದು ರೌದ್ರೇಷ್ಟಿಕಲ್ಪೋಪಯೋಗಿ ಮಾತ್ರ ವಿದ್ಯಾಧ್ಯಯನ ಕಲ್ಪನೆ ಮಾಡುವುದು ಗೌರವವಲ್ಲವೇ ? ಅಂದರೆ ಮೊದಲು ಲಾಘವದಿಂದ ಕರ್ಮಧಾರಯವನ್ನು ಕಲ್ಪಿಸಿ ಮುಖ್ಯಾರ್ಥದೊಡನೆ ಅನ್ವಯ ಹೇಳಬೇಕು. ಆಮೇಲೆ ಅದು ಅನುಪಪನ್ನ ವಾದುದರಿಂದ ವಿದ್ಯಾ ಕಲ್ಪನೆ ಫಲಮುಖ ಕಲ್ಪನವಾಗುತ್ತದೆ. ಆಗ ಫಲಮುಖಗೌರವವು ದೋಷವಲ್ಲ. ಇದರಿಂದ ನಿಷಾದನಿಗೆ ಯಾಗೋಪ ಯೋಗಿಯಾದ ಅಧ್ಯಯನಕ್ಕಿಂತ ಇತರ ವೇದಾಧ್ಯಯನ, ನಿಷೇಧವೂ, ಇತರ ಅನರ್ಹರಿಗೆ ಸಕಲವೇದಾಧ್ಯಯನನಿಷೇಧವೂ ಸಿದ್ಧವಾಗುತ್ತದೆ.

ಉಪಕುಂಭಮರ್ಧಪಿಪ್ಪಲೀತ್ಯಾದೌ ಪರಪದೇ ತತ್ಸಂಬಂಧಿನಿ ಲಕ್ಷಣಾ ಪೂರ್ವಪದಾರ್ಥ ಪ್ರಧಾನತಯಾ ಚಾನ್ವಯ ಬೋಧ ಇತಿ । ಇತ್ಥಂ ಚ ಸಮಾಸೇ ನ ಕ್ವಾಪಿ ಶಕ್ತಿಃ, ಪದಶಕ್ತ್ಯೈವ ನಿರ್ವಾಹಾದಿತಿ ॥

ಅವ್ಯಯೀಭಾವ ಸಮಾಸ ಸ್ಥಳದಲ್ಲಿ ಲಕ್ಷಣಾ ತೋರಿಸುತ್ತಾನೆ. 'ಉಪ ಕುಂಭಂ—' ಇತಿ. 'ಕುಂಭಸ್ಯ ಸಮೀಪಂ' ಉಪಕುಂಭಮ್. ಅವ್ಯಯೀ ಭಾವ ಸಮಾಸವು ನಿತ್ಯಸಮಾಸ ವಾದುದರಿಂದ ಅಸ್ವಪದವಿಗ್ರಹ ಹೇಳಬೇಕು. 'ಅವ್ಯಯಂ ವಿಭಕ್ತಿ—' ಸೂತ್ರದಿಂದ ಸಮಾಸ. ಅರ್ಧಂ ಪಿಪ್ಪಲ್ಯಾಃ, ಅರ್ಧ ಪಿಪ್ಪಲೀ. 'ಅರ್ಧಂ ನಪುಂಸಕಮ್' ಸೂತ್ರದಿಂದ ಸಮಾಸ. ಸಮಾಂಶವನ್ನು ಹೇಳುವ ಅರ್ಧ ಶಬ್ದವು ನಪುಂಸಕವಾಗುತ್ತದೆ. ಇದು ಅವಯವವಾಚಕ ಶಬ್ದದೊಡನೆ ಸಮಾಸ ಹೊಂದುತ್ತದೆ. 'ಪರವಲ್ಲಿಂಗಂ ದ್ವಂದ್ವ ತತ್ಪುರುಷಯೋಃ' ಸೂತ್ರದಿಂದ ಪರಪದದಕ್ಕೆ ಸ್ತ್ರೀಲಿಂಗ ಬಂದಿದೆ. ಇಲ್ಲಿ ಪರಪದದಲ್ಲಿ ಅಂದರೆ ಕುಂಭಾದಿಪದಗಳಲ್ಲಿ ಕುಂಭ ಸಂಬಂಧಿ ಎಂಬರ್ಥದಲ್ಲಿ ಲಕ್ಷಣಾ. ಪೂರ್ವ ಪದಾರ್ಥಪ್ರಧಾನಕವಾಗಿ ಬೋಧ ಹೇಳಬೇಕು. 'ಕುಂಭ ಸಂಬಂಧ್ಯ ಭಿನ್ನಂ ಸಮೀಪಂ' 'ಪಿಪ್ಪಲೀ ಸಂಬಂಧ್ಯ ಭಿನ್ನಮರ್ಧಂ' ಎಂದು ಶಾಬ್ದ ಬೋಧ. ವೈಯಾಕರಣರು ಸಮಾಸದಲ್ಲಿ ಶಕ್ತಿ ಹೇಳುತ್ತಾರೆ. ಇದು ಸರಿಯಲ್ಲವೆಂದು ದೂಷಿಸಿ ಸಮಾಸ

ದಲ್ಲಿ ಪದದ ಶಕ್ತಿ ಮತ್ತು ಲಕ್ಷಣಾ ವೃತ್ತಿಗಳಿಂದಲೇ ಶಾಬ್ದ ಬೋಧ ಹೇಳಬೇಕೆಂದು ಉಪಸಂಹಾರ ಮಾಡುತ್ತಾನೆ. 'ಇತ್ಥಂಚ—' ಇತಿ. ಸಮಾಸ ಘಟಕಗಳಾದ ಆಯಾಯ ಪದಗಳಲ್ಲಿರುವ ಶಕ್ತಿ ಮತ್ತು ಲಕ್ಷಣಾಗಳಿಂದಲೇ ಶಾಬ್ದ ಬೋಧ ಸಂಭವಿಸು ವಾಗ ಸಮಾಸದಲ್ಲಿ ಶಕ್ತಿ ಹೇಳ ಬೇಕಾಗಿಲ್ಲವೆಂದು ನ್ಯಾಯಾಯಿಕರ ಸಿದ್ಧಾಂತ.

**ಆಸತ್ತಿರ್ಯೋಗ್ಯತಾಕಾಂಕ್ಷಾತಾತ್ಪರ್ಯಜ್ಞಾನಮಿಷ್ಯತೇ ‖ ೮೨ ‖**
**ಕಾರಣಂ ಸನ್ನಿಧಾನಂ ತು ಪದಸ್ಯಾಸತ್ತಿರುಚ್ಯತೇ ‖**

ಆಸತ್ತಿರಿತ್ಯಾದಿ ‖ ಆಸತ್ತಿಜ್ಞಾನಂ. ಯೋಗ್ಯತಾಜ್ಞಾನ ಮಾಕಾಂಕ್ಷಾಜ್ಞಾನಂ ತಾತ್ಪರ್ಯ ಜ್ಞಾನಂ ಚ ಶಾಬ್ದಬೋಧೇ ಕಾರಣಮ್ । ತತ್ರಾಸತ್ತಿ ಪದಾರ್ಥ ಮಾಹ ಸಂನ್ನಿಧಾನಂತ್ವಿತಿ । ಅನ್ವಯ ಪ್ರತಿಯೋಗ್ಯನುಯೋಗಿ ಪದಯೋರ ವ್ಯವಧಾನ ಮಾಸತ್ತಿಃ । ತಜ್ಞಾನಂ ಶಾಬ್ದ ಬೋಧೇ ಕಾರಣಂ, ಕ್ವಚಿತ್ ವ್ಯವ ಹಿತೇಽಪ್ಯವ್ಯವಧಾನ ಭ್ರಮಾತ್ ಶಾಬ್ದ ಬೋಧಃ । ಇತಿ ಕೇಚಿತ್ ‖ ವಸ್ತು ತಸ್ತು ಅವ್ಯವಧಾನ ಜ್ಞಾನಸ್ಯಾನಪೇಕ್ಷಿತತ್ವಾತ್ ‖ ಯತ್ಪದಾರ್ಥೇನ ಯತ್ಪ ದಾರ್ಥಸ್ಯಾನ್ವಯೋಽಪೇಕ್ಷಿತಸ್ತಯೋರವ್ಯವಧಾನೇನೋಪಸ್ಥಿತಿಃ ಶಾಬ್ದ ಬೋಧೇ ಕಾರಣಮ್ । ತೇನ ಗಿರಿರ್ಭುಕ್ತಮಗ್ನಿಮಾನ್‌ದೇವದತ್ತೇನ ಇತ್ಯಾದೌ ನ ಶಾಬ್ದ ಬೋಧಃ । 'ನೀಲೋ ಘಟೋ ದ್ರವ್ಯಂ ಪಟಃ' ಇತ್ಯಾದಾವಾಸತ್ತಿಭ್ರ ಮಾತ್ ಶಾಬ್ದಬೋಧಃ । ಆಸತ್ತಿಭ್ರಮಾಚ್ಛಾಬ್ದ ಭ್ರಮಾಭಾವೇಽಪಿನ ಕ್ಷತಿಃ ‖

ಶಾಬ್ದ ಬೋಧದಲ್ಲಿ ಸಹಕಾರಿ ಕಾರಣವನ್ನು ತೋರಿಸುತ್ತಾನೆ. 'ಆಸತ್ತಿಃ—' ಇತಿ. ಯೋಗ್ಯತಾ ಜ್ಞಾನಾದಿಗಳು ಕಾರಣವಾದಂತೆ ಆಸತ್ತಿ ಜ್ಞಾನವು ಕಾರಣವಾಗಿ ಮೂಲದಲ್ಲಿ ತೋರುವುದಿಲ್ಲ. ಆಸತ್ತಿಃ ಎಂದು ಬೇರೆಯಾಗಿ ಹೇಳಿರುವುದರಿಂದ ಅದು ಸ್ವರೂಪದಿಂದಲೇ ಕಾರಣವೆಂದು ತೋರುತ್ತದೆ. ಆದರೆ ಕೆಲವು ಕಡೆ ಅವ್ಯವಧಾನವಿದೆ ಯೆಂಬ ಭ್ರಮದಿಂದ ಶಾಬ್ದ ಬೋಧ ವುಂಟಾಗುತ್ತದೆ. ಅದುದರಿಂದ ಆಸತ್ತಿಜ್ಞಾನವೂ ಕಾರಣವೆಂದು ಮುಕ್ತಾವಳಿಯಲ್ಲಿ ವಿವರಿಸಿದೆ. 'ಆಸತ್ತಿಯೋ—' ಎಂದು ವಿಸರ್ಗರಹಿತ ಪಾಠ ಮಾಡಿದರೆ ದೋಷ ಬರುವುದಿಲ್ಲ. ಶಾಬ್ದ ಬೋಧದಲ್ಲಿ ಆಸತ್ತಿ ಜ್ಞಾನ, ಯೋಗ್ಯತಾ ಜ್ಞಾನ, ಆಕಾಂಕ್ಷಾ ಜ್ಞಾನ, ತಾತ್ಪರ್ಯ ಜ್ಞಾನ ಹೀಗೆ ಈ ನಾಲ್ಕು ಕಾರಣ ವಾಗುತ್ತವೆ. ಭ್ರಮೆಯಿಂದಲೂ ಶಾಬ್ದ ಬೋಧ ಬರುವುದರಿಂದ ಭ್ರಮಪ್ರಮಾ ಸಾಧಾರಣವಾಗಿ ಇವುಗಳ ಜ್ಞಾನವು ಕಾರಣವೆಂದು ಹೇಳಿದೆ. ಸಾಮಗ್ರಿ ಭ್ರಮ ವಾದರೂ ಅದರಿಂದ ಬರತಕ್ಕ ಶಾಬ್ದ ಬೋಧವು ಭ್ರಮವಾಗುವುದಿಲ್ಲ. ವಿಷಯಾಭಾವ ವಿದ್ದರೆ ಆಗ ಮಾತ್ರ ಶಾಬ್ದ ಬೋಧವೂ ಭ್ರಮವಾಗುತ್ತದೆ.

'ಸನ್ನಿಧಾನಂ—' ಎಂಬುದರಿಂದ ಆಸತ್ತಿ ಲಕ್ಷಣವನ್ನು ಹೇಳುತ್ತಾನೆ. ಯಾವ

ಪದಾರ್ಥದೊಡನೆ ಯಾವ ಪದಾರ್ಥಕ್ಕೆ ಅನ್ವಯವು ತಾತ್ಪರ್ಯ ವಿಷಯವಾಗಿದೆಯೋ (ವಿವಕ್ಷಿತವೋ) ಆ ಎರಡು ಪದಗಳ ಅವ್ಯವಧಾನದಿಂದ ಉಪಸ್ಥಿತಿಗೆ ಆಸತ್ತಿಯೆಂದು ಹೆಸರು. ಅವ್ಯವಧಾನದಿಂದ ಉಪಸ್ಥಿತಿಯೆಂದರೆ ಅವ್ಯವಹಿತ ಪೂರ್ವತ್ವ, ಅವ್ಯವಹಿತೋತ್ತರತ್ವ ರೂಪದಿಂದ ಇರುವುದು. ಆ ಎರಡು ಪದಗಳ ಅವ್ಯವಧಾನವೇ ಆಸತ್ತಿ, ಅನ್ವಯ ಹೊಂದುವ ಪದಗಳ ಮಧ್ಯದಲ್ಲಿ ಅನ್ವಯವಿಲ್ಲದ ಪದವಿರಬಾರದು. 'ಗಿರಿಃ ಭುಕ್ತಂ ಅಗ್ನಿಮಾನ್ ದೇವದತ್ತಃ' ಎಂಬಲ್ಲಿ ಗಿರಿಪದಾರ್ಥ ಅಗ್ನಿಮತ್ಪದಾರ್ಥಗಳಿಗೆ ಅನ್ವಯವಿವಕ್ಷಿತವಾಗಿದೆ. ಗಿರಿಭುಕ್ತಪದಾರ್ಥಗಳಿಗೆ ಅನ್ವಯವುವಿವಕ್ಷಿತವಲ್ಲ. ಅನ್ವಯವಿವಕ್ಷಿತವಾದ ಪದಗಳಿಗೆ ಇಲ್ಲಿ ಅವ್ಯವಧಾನವಿಲ್ಲ. ಆಗ ಆಸತ್ತಿರೂಪ ಕಾರಣವಿಲ್ಲದಿರುವುದರಿಂದ ಶಾಬ್ದಬೋಧವೂ ಬರುವುದಿಲ್ಲ. ಅವ್ಯವಧಾನದಿಂದ ಪದಜನ್ಯವಾದ ಪದಾರ್ಥೋಪಸ್ಥಿತಿಗೆ ಆಸತ್ತಿಯೆಂದು ಹೆಸರು. ಅಶ್ರುತವಾದ ಪದಾರ್ಥಸ್ಥಳದಲ್ಲಿ ಆಯಾಯ ಪದವನ್ನು ಅಧ್ಯಾಹಾರಮಾಡಿ ಕೊಳ್ಳುವುದರಿಂದ ಬೋಧ ಬರುತ್ತದೆ. 'ದ್ವಾರಂ' ಎಂದರೆ 'ಪಿಧೇಹಿ' ಕ್ರಿಯಾಪದಾಧ್ಯಾಹಾರದಿಂದ ಶಾಬ್ದ ಬೋಧ ಉಂಟಾಗುತ್ತದೆ.

'ನೀಲೋ ಘಟಃ ದ್ರವ್ಯಂ ಪಟಃ' ಎಂಬಲ್ಲಿ ನೀಲಪದಾರ್ಥಪಟ ಪದಾರ್ಥಗಳಿಗೆ ಅನ್ವಯವು ತಾತ್ಪರ್ಯ ವಿಷಯವಾಗಿರುತ್ತದೆ. ನೀಲಪದಾರ್ಥ ಘಟಪದಾರ್ಥಗಳಿಗೆ ಅನ್ವಯ ಅಪೇಕ್ಷಿತವಾಗಿಲ್ಲ. ಆಗ ಅವ್ಯವಧಾನದಿಂದ ಪದಜನ್ಯಪದಾರ್ಥೋಪಸ್ಥಿತಿರೂಪ ಆಸತ್ತಿಯಿಲ್ಲದಿರುವುದರಿಂದ ಶಾಬ್ದ ಬೋಧ ಬರುವುದು ಹೇಗೆ? ಎಂದು ಆಶಂಕಿಸಿದರೆ ಇಷ್ಟಾಪತ್ತಿಯಿಂದ ಸಮಾಧಾನ ಹೇಳುತ್ತಾನೆ. 'ಆಸತ್ತಿಭ್ರಮಾತ್—' ಇತಿ. ಅಲ್ಲಿ ಆಸತ್ತಿ ಇಲ್ಲವೇ ಇಲ್ಲ. ಆಸತ್ತಿ ಇದೆಯೆಂಬ ಭ್ರಮೆಯಿಂದ ಶಾಬ್ದ ಬೋಧ ವುಂಟಾಗುತ್ತದೆ. ಆಸತ್ತಿ ಭ್ರಮೆಯು ಶಾಬ್ದ ಬೋಧ ಭ್ರಮೆಗೆ ಪ್ರಯೋಜಕ ವಾಗುವುದಿಲ್ಲವೆಂದು ನ್ಯಾಯ ಸಿದ್ಧಾಂತ. ಯೋಗ್ಯತಾ ಭ್ರಮೆಯಿಂದ ಭ್ರಮಾತ್ಮಕ ಶಾಬ್ದಬೋಧ ಬರುತ್ತದೆಂದು ಅವರ ಮತ. ನ್ಯಾಯನಯದಲ್ಲಿ ಆಸತ್ತಿ ಭ್ರಮೆಯಿಂದ ಶಾಬ್ದ ಪ್ರಮಾ ಉಂಟಾಗುವಂತೆ ಅವಿದ್ಯಕ ಶಬ್ದಾದಿಗಳಿಂದ ಬ್ರಹ್ಮಾತ್ಮೈಕ್ಯ ಸಾಕ್ಷಾತ್ಕಾರರೂಪ ಪ್ರಮಾ ಉಂಟಾಗುವುದೆಂದು ವೇದಾಂತಿಗಳೂ ಅಂಗೀಕರಿಸಿರುತ್ತಾರೆ.

ನನು ಯತ್ರ ಛತ್ರೀ ಕುಂಡಲೀ ವಾಸಸ್ವೀ ದೇವದತ್ತ ಇತ್ಯಾದ್ಯುಕ್ತಂ ತತ್ರೋತ್ತರ ಪದ ಸ್ಮರಣೇನ ಪೂರ್ವಪದ ಸ್ಮರಣಸ್ಯ ನಾಶಾದವ್ಯವಧಾನೇನ ತದುತ್ತರ ಪದ ಸ್ಮರಣಾಸಂಭವ ಇತಿ ಚೇನ್ನ, ಪ್ರತ್ಯೇಕ ಪದಾನುಭವಜನ್ಯ ಸಂಸ್ಕಾರೈಶ್ಚರಮಸ್ಯ ತಾವತ್ಪದವಿಷಯಕಸ್ಮರಣಸ್ಯಾವ್ಯವಧಾನೇ ನೋತ್ಪತ್ತೇಃ। ನಾನಾ ಸನ್ನಿಕರ್ಷೈರೇಕ ಪ್ರತ್ಯಕ್ಷಸ್ಯೇವ ನಾನಾ ಸಂಸ್ಕಾರೈರೇಕ ಸ್ಮರಣೋತ್ಪತ್ತೇರಪಿ ಸಂಭವಾತ್। ತಾವತ್ಪದ ಸಂಸ್ಕಾರಸಹಿತಚರಮವರ್ಣಜ್ಞಾನಸ್ಯೈವೋದ್ಬೋಧಕತ್ವಾತ್। ಕಥಮನ್ಯಥಾ ನಾನಾ ವರ್ಣೈರೇಕಪದಸ್ಮರಣಮ್। ಪರಂ ತು ತಾವತ್ಪದಾರ್ಥಾನಾಂ

ಸ್ಮರಣಾದೇಕಸ್ಯೈವ ಖಲೇ ಕಪೋತನ್ಯಾಯೇನ ತಾವತ್ಪದಾರ್ಥಾನಾಂ ಕ್ರಿಯಾ
ಕರ್ಮಭಾವೇನಾನ್ವಯ ಬೋಧರೂಪಃ ಶಾಬ್ದ ಬೋಧೋ ಭವತೀತಿ ಕೇಚಿತ್ ||
ವೃದ್ಧಾ ಯುವಾನಃ ಶಿಶವಃ ಕಪೋತಾಃ ಖಲೇ ಯಥಾಮೀ ಯುಗಪತ್ಪತಂತಿ ||
ತಥೈವ ಸರ್ವೇ ಯುಗಪತ್ಪದಾರ್ಥಾಃ ಪರಸ್ಪರೇಣಾನ್ವಯಿನೋ ಭವಂತಿ ||

ಪುನಃ ಆಸತ್ತಿ ವಿಷಯದಲ್ಲಿ ಆಶಂಕಿಸಿ ಸಮಾಧಾನ ತೋರಿಸುತ್ತಾನೆ. 'ನನು—' ಇತಿ. ಪೂರ್ವಪದಸೊಡನೆ ಉತ್ತರಪದಕ್ಕೆ ಯಾವ ವ್ಯವಧಾನವೂ ಇಲ್ಲದೆ ಉಪಸ್ಥಿತಿಯೇ ಆಸತ್ತಿಯೆಂದರೆ ಅದು ಶಾಬ್ದ ಬೋಧಕ್ಕೆ ಕಾರಣವೆಂದರೆ, ಆಗ ಎಲ್ಲಿ ಯಾವುದೊಂದು ಶಾಬ್ದ ಬೋಧ ಬರಬೇಕೆಂದು ತಾತ್ಪರ್ಯ ವಿಷಯವಾಗಿ ಅನೇಕ ವಿಶೇಷಣ ವಾಚಕಪದ ಘಟಿತವಾಕ್ಯವು ಪ್ರಯೋಗಿಸಲ್ಪಟ್ಟಿದೆಯೋ ಅಲ್ಲಿ ಆಶಾಬ್ದಬೋಧ ಬರಬೇಕಾದರೆ ಅದರ ಅವ್ಯವಹಿತ ಪೂರ್ವಕ್ಷಣದಲ್ಲಿ 'ಛತ್ರಿ—' ಇತ್ಯಾದಿ ವಾಕ್ಯಗಳಲ್ಲಿ ಅವ್ಯವಧಾನದಿಂದ ಪದಜನ್ಯ ಪದಾರ್ಥೋಪಸ್ಥಿತಿ ಬರುವುದಿಲ್ಲ. ಏಕೆಂದರೆ ಉತ್ತರೋತ್ತರ ಪದ ಸ್ಮರಣೆಯಿಂದ ಪೂರ್ವ ಪೂರ್ವ ಪದಾರ್ಥ ಸ್ಮರಣೆಯು ನಷ್ಟವಾಗಿರುತ್ತದೆ. ಯೋಗ್ಯವಿಭುವೃತ್ತಿ ವಿಶೇಷಣಗಳಿಗೆ ಸ್ವೋತ್ತರದಲ್ಲಿರುವ ಗುಣ ನಾಶ್ಯತ್ವವು ಹಿಂದೆ ಹೇಳಿದೆ. ಆದುದರಿಂದ ಉತ್ತರಪದೀಯ ಸ್ಮರಣೆಯಿಂದ ಪೂರ್ವಪದೀಯ ಸ್ಮರಣೆಯು ನಾಶ ಹೊಂದುತ್ತದೆ. ಆಗ ಅವ್ಯವಧಾನದಿಂದ ಉತ್ತರಪದೀಯ ಸ್ಮರಣೆ ಬರುವುದು ಹೇಗೆ. ಅವ್ಯವಧಾನದಿಂದ ಪದಜನ್ಯ ಪದಾರ್ಥೋಪಸ್ಥಿತಿ ಇಲ್ಲದಿದ್ದರೆ ಶಾಬ್ದಬೋಧವೂ ಬರಲಾರದೆಂದು ಆಶಂಕೆ ಬರುತ್ತದೆ. ಇದಕ್ಕೆ ಸಮಾಧಾನ ತೋರಿಸುತ್ತಾನೆ. 'ಪ್ರತ್ಯೇಕ—' ಇತಿ. ತತ್ತತ್ಪದ ವಿಷಯಕವಾದ ಪ್ರತ್ಯೇಕ ಪದಾನುಭವದಿಂದ ಉಂಟಾದ ತತ್ತತ್ಪದ ವಿಷಯಕ ಪ್ರತ್ಯೇಕ ಸಂಸ್ಕಾರಗಳಿಂದ, ಚರಮಸ್ಯ—ಕೊನೆಯ, ತಾವತ್ಪದವಿಷಯಕ ಸ್ಮರಣಸ್ಯ—ಸಮೂಹಾಲಂಬನರೂಪ ಸಕಲಪದಾರ್ಥಸ್ಮರಣೆಯ ಅವ್ಯವಧಾನೇನ—ವ್ಯವಧಾನವಿಲ್ಲದೆ, ಉತ್ಪತ್ತೇಃ—ಹುಟ್ಟುವುದರಿಂದ ಈ ದೋಷವಿಲ್ಲವೆಂದರ್ಥ. ಯದ್ಯಪಿ ಆಯಾಯ ಪದಸ್ಮರಣೆಗಳು ಭಿನ್ನ ಭಿನ್ನವಾಗಿದ್ದು, ಉತ್ತರಪದ ಸ್ಮರಣದಿಂದ ಪೂರ್ವಪದಸ್ಮರಣೆಯು ನಾಶಹೊಂದಿದರೂ, ಅಲ್ಲಿ ತತ್ತತ್ಪದ ವಿಷಯಕ ಸಮೂಹಾಲಂಬನ ರೂಪವಾದ ಒಂದೇ ಸ್ಮರಣೆ ಬರುವುದರಿಂದ, ಸಮೂಹಾಲಂಬನ ಪದಾರ್ಥ ಸ್ಮೃತಿಯು ಶಾಬ್ದ ಬೋಧಕ್ಕೆ ಕಾರಣವಾಗುವುದರಿಂದ ಆಸತ್ತಿರೂಪ ಕಾರಣ ಬಾಧ ಉಂಟಾಗುವುದಿಲ್ಲ. ಈ ವಿಷಯದಲ್ಲಿ ದೃಷ್ಟಾಂತ ತೋರಿಸುತ್ತಾನೆ. 'ನಾನಾ ಸನ್ನಿಕರ್ಷೈಃ—' ಇತಿ. ಒಂದೇ ಕಾಲದಲ್ಲಿ ಘಟಚಕ್ಷುಃ ಸಂಯೋಗ, ಪಟಚಕ್ಷುಃ ಸಂಯೋಗರೂಪಗಳಾದ ನಾನಾಸನ್ನಿಕರ್ಷಗಳಿಂದ 'ಇಮೌ ಘಟಪಟೌ ಸ್ತಃ' ಎಂಬ ಒಂದೇ ವಿಧವಾದ ಪ್ರತ್ಯಕ್ಷ ಬಂದಂತೆ, ಪ್ರಕೃತ ಛತ್ರ್ಯಾದಿಪದವಿಷಯಕ ನಾನಾಸಂಸ್ಕಾರಗಳಿಂದ ಸಮೂಹಾಲಂಬನಾತ್ಮಕರೂಪವಾದ ಒಂದೇ ಸ್ಮರಣೆ ಯುಂಟಾಗಲು ತೊಂದರೆ ಇಲ್ಲ. ತಾವತ್ಪದೇತಿ—ಆಯಾಯ ಪದವಿಷಯಕ ಸಂಸ್ಕಾರಸಹಿತ ಚರಮವರ್ಣ

ಜ್ಞಾನವೇ ಅಲ್ಲಿ ಉದ್ಬೋಧಕ ವಾಗುತ್ತದೆ. ಸಮವಾಯ ಘಟಿತ ಸಾಮಾನಾಧಿಕರಣ್ಯ ಸಂಬಂಧದಿಂದ ಸಂಸ್ಕಾರವಿಶಿಷ್ಟವಾದ ಕೊನೆಯ ವರ್ಣದ ಜ್ಞಾನವು ತದ್ವ್ಯಕ್ತಿತ್ವರೂಪ ದಿಂದ ಉದ್ಬೋಧಕವಾಗುತ್ತದೆಂದರ್ಥ. ಎಲ್ಲಿ ಸಂಸ್ಕಾರವು ಸಮವಾಯದಿಂದ ಇರುತ್ತ ದೆಯೋ ಅಲ್ಲಿಯೇ ಚರಮವರ್ಣಜ್ಞಾನವೂ ಇರುವುದರಿಂದ ಸಮವಾಯ ಘಟಿತ ಸಾಮಾ ನಾಧಿಕರಣ್ಯ ಸಂಬಂಧ ಸಂಗತವಾಗುತ್ತದೆ. ಹೀಗೆ ಅಂಗೀಕರಿಸದಿದ್ದರೆ ದೋಷ ತೋರಿಸುತ್ತಾನೆ. 'ಕಥಮು—' ಇತಿ. ನಾನಾಸಂಸ್ಕಾರಗಳಿಂದ ಏಕಸ್ಮರಣವನ್ನು ಅಂಗೀಕರಿಸದಿದ್ದರೆ, ಏಕಸ್ಮರಣೆಯನ್ನು ಕುರಿತು ನಾನಾಸಂಸ್ಕಾರಗಳಿಗೆ ಕಾರಣತ್ವವನ್ನು ಹೇಳದಿದ್ದರೆ, ನಾನಾವರ್ಣೈಃ—ನಾನಾವರ್ಣಗಳ ಪ್ರತ್ಯೇಕ ಸಂಸ್ಕಾರಗಳಿಂದ, ಏಕಪದ ಸ್ಮರಣಂ—ನಾನಾವರ್ಣಗಳಿಂದ ಕೂಡಿದ ಏಕಪದದ ಸ್ಮರಣೆಯು ಕಥಂ ಸ್ಯಾತ್— ಯಾವ ರೀತಿಯಿಂದಲೂ ಆಗಲಾರದು (ಕಥಮಪಿ ನೈವ ಸ್ಯಾತ್' ಎಂದು ತಾತ್ಪರ್ಯ.) ಆಗ ಪದಸ್ಮರಣೆ ಇಲ್ಲದಿರುವುದರಿಂದ ಶಾಬ್ದಬೋಧವೂ ಉಂಟಾಗಲಾರದು. ಆದುದ ರಿಂದ ಸಮೂಹಾಲಂಬ ನಾತ್ಮಕವಾಗಿಯೇ ಪದಜನ್ಯ ಪದಾರ್ಥೋಪ ಸ್ಥಿತಿಯು ಶಾಬ್ದ ಬೋಧವನ್ನು ಕುರಿತು ಕಾರಣವಾಗುತ್ತದೆಂದು ಅಂಗೀಕರಿಸಲೇ ಬೇಕು.

'ಪರಂತು—' ಎಂಬುದರಿಂದ ಪ್ರಾಚೀನರಮತವನ್ನು ತೋರಿಸುತ್ತಾನೆ. ತಾವತ್ ಪದಾರ್ಥಾನಾಂ ಸ್ಮರಣಾತ್—ತತ್ತತ್ಪದ ಜನ್ಯಪದಾರ್ಥ ಸಂಬಂಧವಾದ ಸ್ಮರಣೆಯಿಂದ, ಏಕದೈವ—ಏಕಕಾಲಾವಚ್ಛೇದದಿಂದ, ಖಲೇಕಪೋತ ನ್ಯಾಯದಂತೆ, ಆಯಾಯ ಪದಾರ್ಥಗಳಿಗೆ ಕ್ರಿಯಾಕರ್ಮಭಾವದಿಂದ ಅನ್ವಯ ಬೋಧರೂಪವಾದ ಶಾಬ್ದ ಬೋಧ ಬರುತ್ತದೆ. 'ವೃದ್ಧಾ ಯುವಾನಃ—' ಎಂಬುದರಿಂದ ಖಲೇಕಪೋತ ನ್ಯಾಯಸ್ವರೂಪ ವನ್ನು ತೋರಿಸುತ್ತಾನೆ. ಅಂಗಳದಲ್ಲಿ ಅಕ್ಕಿ ಚಲ್ಲಿದಾಗ ಹೇಗೆ ವೃದ್ಧ ಯುವಕ ಶಿಶು ಪಾರಿವಾಳಗಳು ಏಕಕಾಲದಲ್ಲಿ ಬಂದು ಎರಗುತ್ತವೆಯೋ ಅದರಂತೆ ವ್ಯವಹಿತಾ ವ್ಯವಹಿತ ಸಾಧಾರಣವಾಗಿ ಉಪ ಸ್ಥಾಪಿತ ಪದಾರ್ಥಗಳು ಏಕಕಾಲದಲ್ಲಿ ವಿಶೇಷಣ ವಿಶೇಷ್ಯಭಾವ ದಿಂದ ಅನ್ವಯ ಹೊಂದುತ್ತವೆ ಎಂದರ್ಥ. ವೃದ್ಧಯುವ ಶಿಶು ಕಪೋತಗಳಿಗೂ, ಚಿರತರ, ಚಿರಸಂನಿಹಿತ ಕಾಲೋಚ್ಚರಿತ ಪದಾರ್ಥಗಳಿಗೂ ಸಾಮ್ಯ ತಿಳಿಯಬೇಕು. ಕೇಚಿತ್ ಎಂದುದರಿಂದ ಗ್ರಂಥಕಾರನಿಗೆ ಇದು ಸಂಮತವಲ್ಲವೆಂದು ತಿಳಿಯುತ್ತದೆ.

ಅಪರೇ ತು—

ಯದ್ಯದಾಕಾಂಕ್ಷಿತಂ ಯೋಗ್ಯಂ ಸಂನ್ನಿಧಾನಂ ಪ್ರಪದ್ಯತೇ ।
ತೇನ ತೇನಾನ್ವಿತಃ ಸ್ವಾರ್ಥಃ ಪದೈರೇವಾಗಮ್ಯತೇ ।

ತಥಾ ಚ ಖಂಡವಾಕ್ಯಾರ್ಥಬೋಧಾನಂತರಂ ತಥೈವ ಪದಾರ್ಥಸ್ಮೃತ್ಯಾ ಮಹಾ ವಾಕ್ಯಾರ್ಥಬೋಧ ಇತ್ಯಪ್ಯಾಹುಃ ॥

ಭಾಷ್ಯಕಾರರಾದ ಪ್ರಶಸ್ತಪಾದಾಚಾರ್ಯರ ಮತವನ್ನು ತೋರಿಸುತ್ತಾನೆ.

'ಅಪರೇ—' ಇತಿ. ಆಕಾಂಕ್ಷಿತಂ—ಸ್ವಾರ್ಥದಿಂದ ಆಕಾಂಕ್ಷಿತವಾದ, ಯೋಗ್ಯಂ—ಸ್ವಾರ್ಥಯೋಗ್ಯವಾದ, ಯದ್ವ್ಯತ್ ಸನ್ನಿಧಾನಂ—ಯಾವ ಯಾವ ಆಸತ್ತಿರೂಪವಾದ ಸನ್ನಿಧಾನವನ್ನು ಪ್ರಪದ್ಯತೇ—ಸ್ವಾರ್ಥೋಪಸ್ಥಿತಿ ವಿಷಯವಾಗುವುವೋ, ತೇನತೇನೈವ — ಆಯಾಯ ಕರ್ಮತ್ವ ಕರಣತ್ವಗಳಿಂದಲೇ, ಅನ್ವಿತಃ — ಸಂಸರ್ಗ ಹೊಂದಿದಂತೆ ಸ್ವಾರ್ಥಃ—ಘಟತ್ವಾದಿ ರೂಪಾರ್ಥವು, ಪದೈರೇವ—ಘಟಾದಿಪದಗಳಿಂದಲೇ ಅವ ಗಮ್ಯತೇ—ತಿಳಿಯುತ್ತದೆ. ಮೊದಲು ಆಯಾ ಪದಗಳಿಂದ ಸ್ವಾರ್ಥವೂ, ಆಮೇಲೆ ಮಹಾವಾಕ್ಯಾರ್ಥ ಬೋಧವೂ ಉಂಟಾಗುತ್ತದೆಂದು ತಾತ್ಪರ್ಯ. ಸಮೂಹಾಲಂಬ ನಾತ್ಮಕ ಪದಾರ್ಥಸ್ಮರಣೆ ಇಲ್ಲದಿದ್ದರೂ ಮೊದಲು ಖಂಡವಾಕ್ಯಾರ್ಥ ಬೋಧ ಬಂದು ಆಮೇಲೆ ಮಹಾವಾಕ್ಯಾರ್ಥ ಬೋಧ ಬರುತ್ತದೆಂದು ತಿಳಿಯಬೇಕು. 'ಘಟಮಾನಯ' ಎಂಬಲ್ಲಿ ಚರಮಪದಾರ್ಥಸ್ಮರಣ ಕಾಲದಲ್ಲಿ ಘಟಪದಾರ್ಥ ಸ್ಮೃತಿ ನಾಶವಾದರೂ 'ಘಟೀಯಾ ಕರ್ಮತಾ' ಎಂಬ ಅವಾಂತರ ಶಾಬ್ದ ಬೋಧವೇ ಪದಜನ್ಯ ಪದಾರ್ಥೋಪ ಸ್ಥಿತಿತ್ವೇನ 'ಘಟಕರ್ಮಕಾನಯನಂ' ಎಂಬ ಮಹಾ ವಾಕ್ಯಾರ್ಥ ಬೋಧವನ್ನು ಹುಟ್ಟಿಸಿ ಕೊಡುತ್ತದೆ. ಶಾಬ್ದ ಬೋಧದಲ್ಲಿ ಪದಜನ್ಯಪದಾರ್ಥೋಪ ಸ್ಥಿತಿಯೇ (ಸ್ಮೃತಿ) ಕಾರಣವಾಗಬೇಕಂತಿಲ್ಲ. ಲಾಘವದಿಂದ ಉಪಸ್ಥಿತಿತ್ವೇನ ಕಾರಣವೆಂದು ಹೇಳಿದರೆ ಆಗ ಕೆಲವು ಕಡೆ ಸ್ಮರಣೆಯಿಂದ ಶಾಬ್ದಬೋಧವೂ, ಕೆಲವು ಕಡೆ ಪದಜನ್ಯ ಜ್ಞಾನತ್ವ ರೂಪ ದಿಂದ ಶಾಬ್ದಬೋಧವೂ ಬರುತ್ತದೆ. ಇವರ ಮತದಲ್ಲಿ ಖಂಡವಾಕ್ಯಾರ್ಥಬೋಧ ರೂಪವಾದ ವಿಶೇಷಣತಾವಚ್ಛೇದಕ ಪ್ರಕಾರಕ ನಿರ್ಣಯವು ಮೊದಲು ಇರುವುದರಿಂದ 'ವಿಶಿಷ್ಟಸ್ಯ ವೈಶಿಷ್ಟಂ—' ಎಂಬ ರೀತಿಯಿಂದಲೇ ಮಹಾವಾಕ್ಯಾರ್ಥಬೋಧ ಬರುತ್ತದೆ. ಪ್ರಾಚೀನ ಮತದಲ್ಲಿ ವಿಶೇಷಣತಾವಚ್ಛೇದಕ ಪ್ರಕಾರಕನಿರ್ಣಯ ಹಿಂದೆ ಉಂಟಾಗದಿರು ವುದರಿಂದ 'ವಿಶೇಷ್ಯೇ ವಿಶೇಷಣಂ—' ಎಂಬ ನ್ಯಾಯದಿಂದ ಶಾಬ್ದ ಬೋಧ ಬರುತ್ತ ದೆಂದು ತಿಳಿಯಬೇಕು.

ಏತೇನ ತಾವದ್ವರ್ಣಾಭಿವ್ಯಂಗ್ಯಃ ಪದಸ್ಫೋಟೋಽಪಿ ನಿರಸ್ತಃ । ತತ್ತದ್ವರ್ಣ ಸಂಸ್ಕಾರ ಸಹಿತಚರಮವರ್ಣೋಪಲಂಭೇನ ತದ್ವ್ಯಂಜಕೈಸ್ತೈರ್ವೋಪಪತ್ತೇರಿತಿ ॥

ವೈಯಾಕರಣಮತವನ್ನು ಖಂಡಿಸುತ್ತಾನೆ. 'ಏತೇನ—' ಇತಿ. ಪೂರ್ವೋಕ್ತಿ ಯಿಂದಲೂ ಮುಂದೆ ಹೇಳುವ ಯುಕ್ತಿಯಿಂದಲೂ ಎಂದರ್ಥ. ತಾವದ್ವರ್ಣಾಭಿ ವ್ಯಂಗ್ಯಃ—ಒಂದು ಪದದಲ್ಲಿ ಎಷ್ಟು ವರ್ಣಗಳಿವೆಯೋ ಅವುಗಳಿಂದ ಪ್ರಕಾಶ್ಯವಾದ, ಪದ ಸ್ಫೋಟಃ—ಪದಸ್ಫೋಟವೆಂಬುದೂ ಖಂಡಿತವಾದಂತೆಯೇ ತಿಳಿಯಬೇಕು. ಯುಕ್ತಿ ತೋರಿಸುತ್ತಾನೆ. 'ತತ್ತದ್ವ—' ಇತಿ. ಪೂರ್ವ ಪೂರ್ವದಲ್ಲಿ ಯಾವ ವರ್ಣಗಳಿ ವೆಯೋ, ಅವುಗಳ ಅನುಭವದಿಂದ ಉಂಟಾದ ಯಾವ ಸಂಸ್ಕಾರಗಳಿವೆಯೋ, ಅವು ಗಳಿಂದ ಕೂಡಿದ ಕೊನೆಯ ವರ್ಣದ ಜ್ಞಾನದಿಂದಲೇ ಅಂದರೆ ಚರಮವರ್ಣದ ಶ್ರಾವಣ

ಪ್ರತ್ಯಕ್ಷಾತ್ಮಕ ಜ್ಞಾನದಿಂದಲೇ ಪದಾಭಿವ್ಯಕ್ತಿಯುಂಟಾಗಿ ಅದರಿಂದಲೇ ಶಾಬ್ದ ಬೋಧ ಕೊಡುವುದರಿಂದ ಬೇರೆ ಪದ ಸ್ಫೋಟವನ್ನು ಅಂಗೀಕರಿಸಬೇಕಾಗಿಲ್ಲವೆಂದು ತಾತ್ಪರ್ಯ.

ವೈಯಾಕರಣರು ವರ್ಣಕ್ಕಿಂತ ಅತಿರಕ್ತವಾಗಿ ಪದವಾಗಲೀ, ವಾಕ್ಯವಾಗಲೀ, ವಾಚಕವಾಗುವುದೆಂದು ಹೇಳುತ್ತಾರೆ. ವರ್ಣಗಳೇ ವಾಚಕವೆಂದರೆ ಅವು ಪ್ರತ್ಯೇಕವಾಗಿ ವಾಚಕಗಳೇ ? ಅಥವಾ ಒಟ್ಟಿಗೆ ವಾಚಕ ವಾಗುತ್ತವೆಯೋ ? ಎಂದು ವಿಕಲ್ಪದ್ವಯ ವುಂಟಾಗುತ್ತದೆ. ಪ್ರತ್ಯೇಕವಾಚಕವೆಂದರೆ ಪದದ ಮೊದಲನೆಯ ವರ್ಣವೊಂದೇ ಸಾಕು. ಎರಡನೆಯ ವರ್ಣಗಳಿಂದ ಎಷ್ಟು ವರ್ಣಗಳಿವೆಯೋ ಅವು ನಿರರ್ಥಕಗಳಾಗ ಬೇಕಾಗುತ್ತವೆ. 'ಘಟಃ' ಎಂಬಲ್ಲಿ ಘಕಾರ ಒಂದರಿಂದಲೇ ಘಟತ್ವ ವಿಶಿಷ್ಟವಾದ ಅರ್ಥ ತೋರಿದ ಮೇಲೆ ಅಕಾರಟ ಕಾರಾದಿಗಳು ನಿರರ್ಥಕ ಗಳಾಗುತ್ತವೆ. ಆಗ ಅವು ಗಳನ್ನು ಉಚ್ಚರಿಸುವುದು ವ್ಯರ್ಥವೆಂದಾಗುತ್ತದೆ. ಸಮುದಾಯ ವಾಚಕವೆಂದರೆ ಸಮು ದಾಯವೇ ಕೂಡಿಸುವುದು ಅಸಾಧ್ಯವಾಗುತ್ತದೆ. ಏಕಕಾಲದಲ್ಲಿ ವರ್ಣಗಳು ಹುಟ್ಟು ವುದಾಗಲೀ ಅಭಿವ್ಯಕ್ತವಾಗುವುದಾಗಲೀ ಸಂಭವಿಸುವುದಿಲ್ಲ. ಉತ್ತರೋತ್ತರ ವರ್ಣ ಗಳು ಹುಟ್ಟುವಾಗ ಪೂರ್ವ ಪೂರ್ವ ವರ್ಣಗಳು ಹುಟ್ಟಿ ನಾಶವಾಗುವುದರಿಂದ ಸಮು ದಾಯ ಕೂಡುವುದಿಲ್ಲ. ಅಭಿವ್ಯಕ್ತಿಯಲ್ಲಿಯೂ ಹೀಗೆ ಅಸಂಭವ ಬರುತ್ತದೆ. ಹೀಗೆ ದೋಷ ಬರುವುದರಿಂದ ವರ್ಣಕ್ಕಿಂತ ಅತಿರಿಕ್ತವಾಗಿ ವರ್ಣಗಳಿಂದ ಪ್ರಕಾಶಿಸಲ್ಪಡುವ ಸ್ಫೋಟವೆಂಬುದೇ ಜಾತ್ಯಾದಿಗಳಿಗೆ ವಾಚಕವಾಗುತ್ತದೆ. ಅದು ವರ್ಣಪದ ವಾಕ್ಯಾದಿ ಭೇದದಿಂದ ಎಂಟು ವಿಧವಾಗಿರುತ್ತದೆಂದು ಅವರ ಸಿದ್ಧಾಂತ. ಪೂರ್ವೋಕ್ತ ಯುಕ್ತಿ ಯಿಂದ ಪೂರ್ವ ವರ್ಣ ಸಂಸ್ಕಾರ ಸಹಿತ ಚರಮವರ್ಣ ಜ್ಞಾನದಿಂದಲೇ ಪದೋಪ ಸ್ಥಿತಿ ಬಂದು ಅದರಿಂದ ಬೋಧ ಬರುವುದರಿಂದ ಅತಿರಿಕ್ತ ಸ್ಫೋಟವನ್ನಂಗೀಕರಿಸ ಬೇಕಾಗಿಲ್ಲ ವೆಂದು ತಾರ್ಕಿಕರ ಸಿದ್ಧಾಂತ.

ಇದಂ ತು ಬೋಧ್ಯಂ—ಯತ್ರ ದ್ವಾರಮಿತ್ಯುಕ್ತಂ ತತ್ರ ಪಿಧೇಹೀತ್ಯಾದಿ ಪದಸ್ಯ ಜ್ಞಾನಾದೇವ ಬೋಧೋ ನತು ಪಿಧಾನಾದಿರೂಪಾರ್ಥಜ್ಞಾನಾತ್ । ಪದಜನ್ಯ ಪದಾರ್ಥೋಪಸ್ಥಿತೇಸ್ಶಾಬ್ದಬೋಧೇ ಹೇತುತ್ವಾತ್ । ಕಿಂಚ ಕ್ರಿಯಾ ಕರ್ಮ ಪದಾನಾಂ ತೇನ ತೇನೈವ ರೂಪೇಣ ಸಹ ಸಾಕಾಂಕ್ಷತ್ವಾತ್ । ತೇನ ಕ್ರಿಯಾಪದಂವಿನಾ ಕಥಂ ಶಾಬ್ದಬೋಧಃ ಸ್ಯಾತ್ । ತಥಾ ಪುಷ್ಪೇಭ್ಯಃ ಇತ್ಯಾದೌ ಸ್ಪೃಹಯತೀ ತ್ಯಾದಿ ಪದಾಧ್ಯಾಹಾರಂ ವಿನಾ ಚತುರ್ಥ್ಯನುಪಪತ್ತೇಃ ಪದಾಧ್ಯಾಹಾರ ಆವಶ್ಯಕಃ ॥

ಪ್ರಾಭಾಕರನ ಮತವನ್ನು ಖಂಡಿಸುತ್ತಾನೆ. 'ಇದಂ—' ಇತಿ. ಪ್ರಾಭಾಕರನು ಲಾಘವದಿಂದ ಪದಾರ್ಥೋಪ ಸ್ಥಿತಿಯೇ ಶಾಬ್ದ ಬೋಧ ಕಾರಣವೆಂದು ಅರ್ಥಾಧ್ಯಾ ಹಾರವನ್ನು ಅಂಗೀಕರಿಸುತ್ತಾನೆ. ಪದಜನ್ಯ ಪದಾರ್ಥೋಪಸ್ಥಿತಿ ಕಾರಣವೆಂದು ಅಂಗೀಕರಿಸದಿದ್ದರೆ, ಎಲ್ಲಿ 'ದ್ವಾರಂ' ಎಂದು ಯಾರಾದರೂ ಹೇಳಿದರೆ, ಅದರಿಂದ ಆಕಾಂ

ಕ್ಷಿತವಾದ 'ಪಿಧೇಹಿ' ಎಂಬ ಕ್ರಿಯಾಪದವನ್ನು ಹೇಳದಿದ್ದರೆ 'ಪಿಧೇಹಿ' ಎಂಬುದರ ಅರ್ಥ ಜ್ಞಾನವಿದ್ದರೂ ಶಾಬ್ದಬೋಧ ಬರಬೇಕಾಗುತ್ತದೆ. ಆದರೆ ಹಾಗೆ ಬೋಧಬರುವುದಿಲ್ಲ. 'ಪಿಧೇಹಿ' ಎಂಬ ಪದ ಜ್ಞಾನದಿಂದಲೇ (ಶ್ರಾವಣಾನುಭವ ದಿಂದಲೇ) ಅಂದರೆ ಪಿಧೇಹಿ ಎಂಬ ಪದಾಧ್ಯಾಹಾರ ದಿಂದಲೇ ಶಾಬ್ದ ಬೋಧ ಬರುತ್ತದೆ. ಪದಜನ್ಯ ಪದಾರ್ಥೋಪ ಸ್ಥಿತಿಯೇ ಶಾಬ್ದಬೋಧಕ್ಕೆ ಕಾರಣವೆಂದು ನಿಶ್ಚಿತವಾದುದರಿಂದ ಕೇವಲ ಪದಾರ್ಥೋಪ ಸ್ಥಿತಿಯಿಂದ ಶಾಬ್ದ ಬೋಧ ಬರುವುದಿಲ್ಲ. ಹೀಗೆ ಅಂಗೀಕರಿಸದಿದ್ದರೆ ಪ್ರತ್ಯಕ್ಷದಿಂದ ಪದಾರ್ಥೋಪಸ್ಥಿತಿ ಉಂಟಾದಾಗಲೂ ಶಾಬ್ದಬೋಧ ಬರಲಿ ಎಂದು ಆಶಂಕಿಸಬಹುದು. ಆದುದರಿಂದ ಅರ್ಥಾಧ್ಯಾಹಾರಪಕ್ಷವು ಸಮಂಜಸವಲ್ಲ. ಈ ವಿಷಯದಲ್ಲಿಯೇ ಗಮಕ ವನ್ನು ತೋರಿಸುತ್ತಾನೆ. 'ಕಿಂಚ—' ಇತಿ. ಕ್ರಿಯಾಕರ್ಮ ಪದಾನಾಂ –'ದ್ವಾರಂ ಪಿಧೇಹಿ' ಇತ್ಯಾದಿ ಕರ್ಮವಾಚಕ, ಕ್ರಿಯಾವಾಚಕಪದಗಳಿಗೆ ಆಯಾಯ ಅನುಪೂರ್ವೀ ವಿಶಿಷ್ಟರೂಪದಿಂದಲೇ ಪರಸ್ಪರ ಸಾಕಾಂಕ್ಷೆ ಇರುವುದರಿಂದ ಅದೇ ಶಾಬ್ದ ಬೋಧಕ್ಕೆ ಕಾರಣವಾಗುವುದರಿಂದ ಕ್ರಿಯಾಪದವಿಲ್ಲದೆ ಶಾಬ್ದಬೋಧ ಬರಲಾರದು.

ಕೇವಲ ಅರ್ಥಜ್ಞಾನವು ಶಾಬ್ದಬೋಧಕ್ಕೆ ಕಾರಣವಾಗುವುದಾದರೆ, ಆಯಾಯ ಆನುಪೂರ್ವಿಯಿಂದ ಕೂಡಿದ ಪದಜನ್ಯ ಪದಾರ್ಥೋಪ ಸ್ಥಿತಿಯು ಕಾರಣವಾಗುವುದಿಲ್ಲ ವೆನ್ನುವುದಾದರೆ 'ದ್ವಾರಂ ಕರ್ಮತ್ವಂ ಪಿಧಾನಂ ಕೃತಿಃ' ಎಂಬ ವಾಕ್ಯದಿಂದಲೂ, 'ದ್ವಾರ ಕರ್ಮಕಪಿಧಾನಾನುಕೂಲ ಕೃತಿಮಾನ್' ಎಂಬ ಅನ್ವಯ ಬೋಧ ಬರಬೇಕಾಗುತ್ತದೆ. ಆದರೆ ಎಂದೂ ಇದರಿಂದ ಶಾಬ್ದಬೋಧ ದೃಷ್ಟವಾಗಿಲ್ಲ. ಆದುದರಿಂದ 'ದ್ವಾರಂ ಪಿಧೇಹಿ' ಎಂಬ ಆನುಪೂರ್ವೀರೂಪಾಕಾಂಕ್ಷಾ ಜ್ಞಾನವೇ ಕಾರಣವೆಂದು ಒಪ್ಪಬೇಕು. ಈ ಆಕಾಂಕ್ಷಾಜ್ಞಾನ ಬರಬೇಕಾದರೆ 'ಪಿಧೇಹಿ' ಎಂಬ ಪದಾಧ್ಯಾಹಾರವನ್ನೇ ಮಾಡಿ ಕೊಳ್ಳಬೇಕು.

ಈ ವಿಷಯದಲ್ಲಿ ಉಪಪತ್ತಿ ತೋರಿಸುತ್ತಾನೆ. 'ತಥಾ—' ಇತಿ. 'ಸ್ಪೃಹ ಯತಿ' ಎಂಬ ಕ್ರಿಯಾಪದದ ಅಧ್ಯಾಹಾರವನ್ನು ಮಾಡಿಕೊಳ್ಳದಿದ್ದರೆ 'ಪುಷ್ಪೇಭ್ಯ' ಎಂಬ ಕರ್ಮವಾಚಕಪುಷ್ಪ ಪದದ ಮೇಲೆ ಚತುರ್ಥೀ ಬರುವುದು ಹೇಗೆ ? 'ಸ್ಪೃಹೇರೀಪ್ಸಿತಃ' ಎಂಬ ಸೂತ್ರದಿಂದ ಸ್ಪೃಹಯತಿ ಎಂಬ ಪದಯೋಗವಿದ್ದರೇ ಕರ್ಮವಾಚಕ ಪದದ ಮೇಲೆ ಚತುರ್ಥೀ ವಿಭಕ್ತಿ ಬರುತ್ತದೆಂದು ಹೇಳಿದೆ. ಅರ್ಥ ಜ್ಞಾನವಿದ್ದರೆ ಸಾಕು ಚತುರ್ಥೀ ಬರುತ್ತದೆಂದು ಅಲ್ಲ ಹೇಳಲಿಲ್ಲ. ಆದುದರಿಂದ ಆಕಾಂಕ್ಷಾ ಇದ್ದಲ್ಲಿ ಪದಾಧ್ಯಾಹಾರವೇ ಆವಶ್ಯಕವಾಗಿರುತ್ತದೆ.

**ಪದಾರ್ಥೇ ತತ್ರ ತದ್ವತ್ತಾ ಯೋಗ್ಯತಾ ಪರಿಕೀರ್ತಿತಾ ॥ ೮೩ ॥**

ಏಕಪದಾರ್ಥೇ ಅಪರಪದಾರ್ಥಸಂಬಂಧೋ ಯೋಗ್ಯತೇತ್ಯರ್ಥಃ । ತಜ್ಞಾನಾಭಾವಾಚ್ಚ ವಹ್ನಿನಾ ಸಿಂಚತೀತ್ಯಾದೌ ನ ಶಾಬ್ದಬೋಧಃ । ನನ್ವೇತಸ್ಯಾಯೋಗ್ಯ ತಾಯಾ ಜ್ಞಾನಂ ಶಾಬ್ದಬೋಧಾತ್ ಪ್ರಾಕ್ ಸರ್ವತ್ರ ನ ಸಂಭವತಿ ವಾಕ್ಯಾ

ರ್ಥಸ್ಯಾ ಪೂರ್ವತ್ವಾದಿತಿ ಚೇನ್ನ, ತತ್ರತತ್ಪದಾರ್ಥಸ್ಮರಣೇ ಸತಿ ಕ್ವಚಿತ್ಸಂಶಯ ರೂಪಸ್ಯ ಕ್ವಚಿನ್ನಿಶ್ಚಯರೂಪಸ್ಯಾಪಿ ಯೋಗ್ಯತಾಯಾ ಜ್ಞಾನಸ್ಯ ಸಂಭವಾತ್ ॥

ಯೋಗ್ಯತಾಸ್ವರೂಪವನ್ನು ತೋರಿಸುತ್ತಾನೆ. 'ಪದಾರ್ಥೇ—' ಇತಿ. ತತ್ರ—ಪ್ರಕ್ರಾಂತವಾದ ಪದಾರ್ಥದಲ್ಲಿ ತದ್ವತ್ತ್ವಾ—ಪದಾಂತರಾರ್ಥ ಪ್ರತಿಯೋಗಿಕ ವಾದ ವಿವಕ್ಷಿತ ಸಂಬಂಧವೇ ಯೋಗ್ಯತಾ. ಏಕಪದಾರ್ಥದಲ್ಲಿ ಅಪರಪದಾರ್ಥದ ಸಂಬಂಧಕ್ಕೆ ಯೋಗ್ಯತಾ ಎಂದು ಹೆಸರು. 'ಪಯಸಾ ಸಿಂಚತಿ' ಎಂಬಲ್ಲಿ ಸೇಚನ ಪದಾರ್ಥದಲ್ಲಿ ನೀರಿಗೆ ಕರಣತಾ ರೂಪದಿಂದ ಸಂಬಂಧವಿರುವುದರಿಂದ ಅದು ಯೋಗ್ಯತಾ ಆಗುತ್ತದೆ. ಸೇಚನವೆಂದರೆ ದ್ರವ ದ್ರವ್ಯಕ್ಷರಣ (ಎರಚುವುದು) 'ವಹ್ನಿನಾ ಸಿಂಚತಿ' ಎಂಬಲ್ಲಿ ಯೋಗ್ಯತಾ ಇಲ್ಲದಿರುವುದರಿಂದ ಶಾಬ್ದ ಬೋಧ ಬರುವುದಿಲ್ಲ. ವಹ್ನಿಗೆ ಸೇಚನ ಕರಣತ್ವ ಕೂಡುವುದಿಲ್ಲ. ಯೋಗ್ಯತಾಜ್ಞಾನವಿಲ್ಲದಿರುವುದರಿಂದ ಶಾಬ್ದ ಬೋಧ ಕಾರ್ಯವೂ ಇಲ್ಲ. 'ನನು' ಎಂಬುದರಿಂದ ಆಶಂಕಿಸುತ್ತಾನೆ. ವಾಕ್ಯಾರ್ಥ ಬೋಧ ಯಾವಾಗಲೂ ಅಪೂರ್ವ ವಾದುದರಿಂದ ಯೋಗ್ಯತೆಗೆ ಕಾರಣತ್ವ ಹೇಳಿದರೆ ಅಪೂರ್ವ ತ್ವಕ್ಕೆ ಭಂಗ ಬರುತ್ತದೆ. ಆದುದರಿಂದ ಸರ್ವತ್ರ ಯೋಗ್ಯತಾ ಎಂಬುದು ಶಾಬ್ದ ಬೋಧಕ್ಕೆ ಕಾರಣವಾಗಲಾರದು ಎಂದು ಶಂಕೆ ಬಂದರೆ ಅದಕ್ಕೆ ಸಮಾಧಾನ ತೋರಿಸು ತ್ತಾನೆ. 'ನ—' ಇತಿ. ಆಯಾಯ ಪದಗಳಿಂದ ಉಂಟಾದ ಪದಾರ್ಥ ಸ್ಮೃತಿ ಇರು ವುದರಿಂದ ಸಂಶಯ ನಿಶ್ಚಯ ಸಾಧಾರಣವಾದ ಯೋಗ್ಯತಾ ಜ್ಞಾನವು ಸರ್ವತ್ರ ಕಾರಣ ವಾಗುತ್ತದೆ. ಎಂದರೆ ದೋಷ ಬರುವುದಿಲ್ಲ. 'ಶಾಬ್ದ ಬುದ್ಧಿತ್ವಾವಚ್ಛಿನ್ನಂ ಪ್ರತಿ ಸಂಶಯ ನಿಶ್ಚಯ ಸಾಧಾರಣ ಯೋಗ್ಯತಾ ಜ್ಞಾನ ತ್ವಾವಚ್ಛಿನ್ನಂ ಹೇತುಃ' ಎಂದು ಕಾರ್ಯಕಾರಣ ಭಾವವನ್ನು ತಿಳಿಯಬೇಕು. ವೇದಾಂತಿಗಳು 'ತಾತ್ಪರ್ಯವಿಷಯ ಸಂಸರ್ಗಾಬಾಧಃ' ಯೋಗ್ಯತಾ ಎಂದು ಹೇಳುತ್ತಾರೆ. ತಾತ್ಪರ್ಯ ವಿಷಯೀ ಭೂತ ವಾದ ಸಂಬಂಧಕ್ಕೆ ಬಾಧ ವಿರಬಾರದು. ಇದೇ ಯೋಗ್ಯತಾ. 'ವಹ್ನಿನಾ ಸಿಂಚತಿ' ಎಂಬಲ್ಲಿ ಸಂಸರ್ಗಕ್ಕೆ ಬಾಧವಿರುವುದರಿಂದ ಯೋಗ್ಯತಾ ಇಲ್ಲ.

ನವ್ಯಾಸ್ತು, ಯೋಗ್ಯತಾಯಾ ಜ್ಞಾನಂ ನ ಶಾಬ್ದಬೋಧೇ ಕಾರಣಮ್ । ವಹ್ನಿನಾ ಸಿಂಚತೀತ್ಯಾದೌ ಸೇಕೇ ವಹ್ನಿಕರಣತ್ವಾಭಾವರೂಪಾಽಯೋಗ್ಯತಾ ನಿಶ್ಚಯೇನ ಪ್ರತಿಬಂಧಾನ್ನ ಶಾಬ್ದ ಬೋಧಃ । ತದಭಾವ ನಿಶ್ಚಯಸ್ಯ ಲೌಕಿಕ ಸನ್ನಿಕರ್ಷಾ ಜನ್ಯ ದೋಷ ವಿಶೇಷಾಜನ್ಯ ಜ್ಞಾನಮಾತ್ರೇ ಪ್ರತಿಬಂಧಕತ್ವಾತ್ ಶಾಬ್ದ ಬೋಧಂ ಪ್ರತ್ಯಪಿ ಪ್ರತಿಬಂಧಕತ್ವಂ ಸಿದ್ಧಮ್ । ಯೋಗ್ಯತಾ ಜ್ಞಾನ ವಿಲಂ ಬಾಚ್ಚ ಶಾಬ್ದ ಬೋಧ ವಿಲಂಬೋಽಸಿದ್ಧ ಇತಿ ವದಂತಿ ॥ ೮೩ ॥

ಈ ವಿಷಯದಲ್ಲಿ ನವೀನ ಮತವನ್ನು ತೋರಿಸುತ್ತಾನೆ. 'ಯೋಗ್ಯತಾಯಾ—' ಇತಿ. ಶಾಬ್ದಬೋಧವನ್ನು ಕುರಿತು ಯೋಗ್ಯತಾ ಜ್ಞಾನಕ್ಕೆ ಕಾರಣತ್ವ ಹೇಳ ಬೇಕಾ

ಗಿಲ್ಲ. ಹಾಗಾದರೆ 'ವಹ್ನಿನಾ ಸಿಂಚತಿ' ಎಂಬಲ್ಲಿ ಶಾಬ್ದ ಬೋಧ ಬರಲಿ ಅಂದರೆ ಅಲ್ಲಿ ಅಯೋಗ್ಯತಾ ನಿಶ್ಚಯರೂಪ ಪ್ರತಿಬಂಧಕ ವಿರುವುದರಿಂದ ಬರುವುದಿಲ್ಲ ಎನ್ನುತ್ತಾರೆ. ಅಯೋಗ್ಯತಾ ನಿಶ್ಚಯ ಪ್ರತಿಬಂಧಕವಾಗುವುದಾದರೆ ಪ್ರತಿಬಂಧಕಾ ಭಾವಕ್ಕೆ ಕಾರಣತ್ವ ಹೇಳಬೇಕಾಗುತ್ತದೆ. ಪ್ರತಿಬಂಧಕಾ ಭಾವಕ್ಕೆ ಕಾರಣತ್ವ ಕಲ್ಪಿಸುವುದಕ್ಕಿಂತ ಯೋಗ್ಯತೆಗೆ ಕಾರಣತ್ವ ಕಲ್ಪಿಸುವುದು ಲಾಘವನಲ್ಲವೇ ಅಂದರೆ ತದಭಾವ ನಿಶ್ಚಯುವು ಜ್ಞಾನ ಸಾಮಾನ್ಯದಲ್ಲಿ ಪ್ರತಿಬಂಧಕವಾಗುವುದರಿಂದ ಶಾಬ್ದ ಜ್ಞಾನಕ್ಕೂ ಪ್ರತಿಬಂಧಕವಾತ್ತದೆ. ಶಾಬ್ದ ಜ್ಞಾನ ಬರಬೇಕಾದರೆ ತದಭಾವ ಇರಲೇಬೇಕು. ಇದನ್ನು ವಿಶೇಷವಾಗಿ ಕಲ್ಪಿಸ ಬೇಕಾಗಿಲ್ಲವೆಂದು ತಾತ್ಪರ್ಯ. 'ವಹ್ನಿನಾ ಸಿಂಚತಿ' ಎಂಬಲ್ಲಿ ವಹ್ನಿಕರಣ ಕತ್ವಾಭಾವ ರೂಪ ಪ್ರತಿಬಂಧಕತ್ವವಿರುವುದರಿಂದ ಶಾಬ್ದಬೋಧ ಬರುವುದಿಲ್ಲ. ಯೋಗ್ಯತಾ ಜ್ಞಾನರೂಪಕಾರಣ ವಿಲ್ಲದಿರುವುದರಿಂದ ಬರುವುದಿಲ್ಲವೆಂತಲ್ಲ. ತದಭಾವನಿಶ್ಚಯವನ್ನು ಪರಿಷ್ಕರಿಸಿ ತೋರಿಸುತ್ತಾನೆ. 'ತದಭಾವನಿ—' ಇತಿ. 'ಅನಾಹಾರ್ಯಾಪ್ರಾಮಾಣ್ಯ ಜ್ಞಾನಾನಾಸ್ಕಂದಿತ ತದ್ಧರ್ಮಿಕತದಭಾವನಿಶ್ಚಯಃ, ಲೌಕಿಕಸಂನ್ನಿಕರ್ಷಾಜನ್ಯ ದೋಷ ವಿಶೇಷಾಜನ್ಯತದ್ಧರ್ಮಿಕತಜ್ಞಾನಮಾತ್ರಂ ಪ್ರತಿ ಪ್ರತಿಬಂಧಕಃ' ಎಂದು ನಿಷ್ಕೃಷ್ಟವಾಗಿ ಪ್ರತಿಬಧ್ಯಪ್ರತಿಬಂಧಕ ಭಾವನನ್ನು ತಿಳಿಯಬೇಕು. ಮೊದಲನೆಯ ತತ್ಪದದಿಂದ ಪ್ರಕೃತಧರ್ಮಿಯನ್ನೂ, ಎರಡನೆಯ ತತ್ಪದದಿಂದ ಧರ್ಮವನ್ನೂ ತೆಗೆದು ಕೊಳ್ಳಬೇಕು. ಬಾಧಕಾಲೀನೇಚ್ಛಾಜನ್ಯಜ್ಞಾನಕ್ಕೆ ಆಹಾರ್ಯವೆಂದು ಹೆಸರು. ಸಾಲಿಗ್ರಾಮ ಶಿಲೆಯಲ್ಲಿ ವಿಷ್ಣು ಬುದ್ಧಿ ಆಹಾರ್ಯ ವಾಗುತ್ತದೆ. ತದ್ಭಿನ್ನ ವಾದದ್ದು ಅನಾಹಾರ್ಯವಾಗುತ್ತದೆ. ಅಪ್ರಾಮಾಣ್ಯ ಜ್ಞಾನದಿಂದ ಆಸ್ಕಂದಿತವಾದದ್ದು ಅಂದರೆ ಅಪ್ರಾಮಾಣ್ಯ ಪ್ರಕಾರಕಜ್ಞಾನ ವಿಶೇಷ್ಯವಾಗಿರುವುದು. (ಇದಂ ಅಪ್ರಮಾ ಎಂದು ತಿಳಿಯಲ್ಪಡುವ ಜ್ಞಾನ.) ಇದರಿಂದ ಬೇರೆಯಾದದ್ದು ಅಪ್ರಾಮಾಣ್ಯ ಜ್ಞಾನಾನಾಸ್ಕಂದಿತ ವಾಗುತ್ತದೆ. ಸಂಶಯ ಭಿನ್ನವಾದ ಜ್ಞಾನವು ನಿಶ್ಚಯವಾಗುತ್ತದೆ. ಪ್ರತ್ಯಕ್ಷಭಿನ್ನವಾದ ಜ್ಞಾನಗಳೆಲ್ಲವೂ ಲೌಕಿಕ ಸನ್ನಿಕರ್ಷದಿಂದ ಅಜನ್ಯವಾಗಿರುತ್ತವೆ. 'ಪೀತಃ ಶಂಖಃ' ಇತ್ಯಾದಿ ಜ್ಞಾನಗಳು ದೋಷ ವಿಶೇಷದಿಂದ ಉಂಟಾಗಿವೆ. ತದಭಾವ ನಿಶ್ಚಯವು ಈ ದೋಷವಿಶೇಷದಿಂದ ಉಂಟಾದ ಜ್ಞಾನಕ್ಕಾಗಲೀ, ಲೌಕಿಕ ಸನ್ನಿಕರ್ಷದಿಂದ ಉಂಟಾದ ಜ್ಞಾನಕ್ಕಾಗಲೀ, ಪ್ರತಿಬಂಧಕವಾಗುವುದಿಲ್ಲ. ಆದುದರಿಂದ ತದ್ಧರ್ಮಿಕತತ್ ಜ್ಞಾನದಲ್ಲಿ ತದಜನ್ಯತ್ವ ವಿಶೇಷಣ ಹೇಳಿದೆ. ಯೋಗ್ಯತಾ ಜ್ಞಾನಕ್ಕೆ ಕಾರಣತ್ವ ಹೇಳದಿದ್ದರೆ ಯೋಗ್ಯತಾಜ್ಞಾನ ವಿಲಂಬದಿಂದ ಶಾಬ್ದಬೋಧ ವಿಲಂಬವಾಗಲು ಕಾರಣವೇನು ? ಎಂದು ಶಂಕಿಸಿದರೆ ಹಾಗೆ ವಿಲಂಬವಾಗುವುದೇ ಅಸಿದ್ಧವೆಂದು ಸಮಾಧಾನ ತೋರಿಸುತ್ತಾನೆ. 'ಯೋಗ್ಯತಾ—'ಇತಿ.

ಆಕಾಂಕ್ಷಾಂ ನಿರ್ವಕ್ತಿ—

**ಯತ್ಪದೇನ ವಿನಾ ಯಸ್ಯಾನನುಭಾವಕತಾ ಭವೇತ್ ॥**

ಆಕಾಂಕ್ಷಾ ವಕ್ತುರಿಚ್ಛಾತು ತಾತ್ಪರ್ಯಂ ಪರಿಕೀರ್ತಿತಮ್ ॥ ೮೩ ॥

ಯೇನ ಪದೇನ ವಿನಾ ಯತ್ಪದಸ್ಯಾನ್ವಯಾನನುಭಾವಕತ್ವಂ ತೇನ ಪದೇನ ಸಹ ತಸ್ಯಾಕಾಂಕ್ಷೇತ್ಯರ್ಥಃ। ಕ್ರಿಯಾಪದಂ ವಿನಾ ಕಾರಕಪದಂ ನಾನ್ವಯಬೋಧಂ ಜನಯತೀತಿ ತೇನ ತಸ್ಯಾಕಾಂಕ್ಷಾ ॥ ವಸ್ತುತಸ್ತು, ಕ್ರಿಯಾಕಾರಕಪದಾನಾಂ ಸನ್ನಿಧಾನಮಾಸತ್ಯಾ ಚರಿತಾರ್ಥಮ್। ಪರಂತು ಘಟಕರ್ಮತಾಬೋಧಂ ಪ್ರತಿ ಘಟ ಪದೋತ್ತರ ದ್ವಿತೀಯಾರೂಪಾಕಾಂಕ್ಷಾ ಜ್ಞಾನಂ ಕಾರಣಮ್। ತೇನ ಘಟಃ ಕರ್ಮತ್ವಮಾನಯನಂ ಕೃತಿರಿತ್ಯಾದೌ ನ ಶಾಬ್ದಬೋಧಃ ॥ ಅಯಮೇತಿ ಪುತ್ರೋ ರಾಜ್ಞಃ ಪುರುಷೋಽಪಸಾರ್ಯತಾ ಮಿತ್ಯಾದೌ ತು ಪುತ್ರೇಣ ಸಹ ರಾಜ ಪದಸ್ಯ ತಾತ್ಪರ್ಯ ಗ್ರಹಸತ್ವಾತ್ತೇನೈವ ಸಹಾನ್ವಯ ಬೋಧಃ। ಪುರುಷೇಣ ಸಹ ತಾತ್ಪರ್ಯ ಗ್ರಹೇತು ತೇನ ಸಹಾನ್ವಯ ಬೋಧಃ ಸ್ಯಾದೇವ ॥ ತಾತ್ಪರ್ಯಂ ನಿರ್ವಕ್ತಿ। ವಕ್ತುರಿಚ್ಛೇತಿ। ಯದಿ ತಾತ್ಪರ್ಯ ಜ್ಞಾನಂ ಕಾರಣಂ ನ ಸ್ಯಾತ್ತದಾ 'ಸೈಂಧವಮಾನಯ' ಇತ್ಯಾದೌ ಕ್ವಚಿದಶ್ವಸ್ಯ ಕ್ವಚಿಲ್ಲವಣಸ್ಯ ಬೋಧೋ ನ ಸ್ಯಾತ್ ॥

ಆಕಾಂಕ್ಷೆಯನ್ನು ತೋರಿಸುತ್ತಾನೆ. 'ಯತ್ಪದೇನ—' ಇತಿ. ಯಾವ ಪದವಿಲ್ಲದಿದ್ದರೆ ಯಾವ ಪದದ ಅನ್ವಯಾನುಭವ ವಾಗುವುದಿಲ್ಲವೋ (ಅರ್ಥಸ್ಮಾರಕತ್ವವಿಲ್ಲವೋ) ಆಪದದೊಡನೆ ಆಪದಕ್ಕೆ ಆಕಾಂಕ್ಷೆಇದೆಯೆಂದು ತಿಳಿಯಬೇಕು. 'ತತ್ಪದಸ್ಯ ತತ್ಪದ ವಿಶಿಷ್ಟತ್ವಂ' ಆಕಾಂಕ್ಷಾ. 'ಘಟಂ' ಎಂಬ ಕರ್ಮಕಾರಕಪದವು 'ಆನಯ' ಎಂಬ ಕ್ರಿಯಾಪದವಿಲ್ಲದೇ ಅನ್ವಯ ಬೋಧವನ್ನು ಹುಟ್ಟಿಸಿ ಕೊಡುವುದಿಲ್ಲ. ಆದುದರಿಂದ ಅವೆರಡಕ್ಕೆ ಆಕಾಂಕ್ಷೆ ಇರುತ್ತದೆ. 'ಗೌರಶ್ವಃ ಪುರುಷೋ ಹಸ್ತೀ' ಇತ್ಯಾದಿ ವಾಕ್ಯದಲ್ಲಿ ಆಕಾಂಕ್ಷೆ ಇಲ್ಲದಿರುವುದರಿಂದ ಶಾಬ್ದಬೋಧವೂ ಬರುವುದಿಲ್ಲ. ಕ್ರಿಯಾಪದ ವಿಲ್ಲದೆ ಕಾರಕವು ಅನ್ವಯ ಬೋಧವನ್ನುಂಟು ಮಾಡದಿರುವುದರಿಂದ ಕ್ರಿಯಾಕಾರಕಗಳಿಗೆ ಆಕಾಂಕ್ಷೆ ಇರುತ್ತದೆ. ಇಲ್ಲಿ ತಿಳಿಯಬೇಕಾದ ವಿಶೇಷವನ್ನು ತೋರಿಸುತ್ತಾನೆ. 'ವಸ್ತುತಸ್ತು—' ಇತಿ. 'ಏಕಪದೇ ಅಪರಪದವತ್ತ್ವಂ' ಆಕಾಂಕ್ಷಾ ಎಂದು ಹೇಳಿದೆ. 'ಅಪರಪದವತ್ತ್ವಂ' (ಇನ್ನೊಂದು ಪದದೊಡನೆ ಕೂಡಿರುವುದು) 'ಅಪರಪದಾವ್ಯವಹಿತೋತ್ತರತ್ವಂ' ಎಂದು ಫಲಿತವಾಗುತ್ತದೆ. ಅಕಾಂಕ್ಷಿತವಾದ ಪದವು ಅವ್ಯವಹಿತ ಉತ್ತರದಲ್ಲಿರಬೇಕೆಂದು ತಾತ್ಪರ್ಯ. ಆಗ ಕ್ರಿಯಾಕಾರಕಾದಿಪದಗಳಿಗೆ ಅವ್ಯವಧಾನ ರೂಪ ಸಾಂನಿಧ್ಯಾಂಶವು ಆಸತ್ತಿಯಿಂದಲೇ ಲಬ್ಧವಾಗುವುದರಿಂದ, ಆಸತ್ತಿಗೆ ಕಾರಣತ್ವ ಹೇಳಿರುವುದರಿಂದಲೇ ಗತಾರ್ಥವಾಗುವುದರಿಂದ ಪುನಃ ಆಕಾಂಕ್ಷಾಕ್ಕೆ ಶಾಬ್ದ ಬೋಧವನ್ನು ಕುರಿತು ಕಾರಣತ್ವ ಹೇಳಬೇಕಾಗಿಲ್ಲವೆಂದು ಆಶಂಕೆ ಬರಬಹುದು. ಅಕಾಂಕ್ಷಾ ಲಕ್ಷಣದ ಉತ್ತರತ್ವಾಂಶವು ಕ್ರಿಯಾಕಾರಕಪದಗಳಿಗೆ ಆಪೇಕ್ಷಿತವಲ್ಲ. 'ಪಚತಿ ಚೈತ್ರಃ'

'ಚೈತ್ರಃ ಪಚತಿ' ಎಂದು ಹೇಗೆ ಹೇಳಿದರೂ ಶಾಬ್ದ ಬೋಧ ಬಂದೇ ಬರುತ್ತದೆ. ಕ್ರಿಯಾಪದವೇ ಉತ್ತರದಲ್ಲಿ ಇರಬೇಕೆಂಬ ನಿಯಮವಿಲ್ಲ.

ವಾಕ್ಯದಲ್ಲಿ ಆಸತ್ತಿಯಿಂದ ಗತಾರ್ಥವಾದರೂ ಪ್ರಕೃತಿಪ್ರತ್ಯಯ ಸ್ಥಳದಲ್ಲಿ ಪ್ರಕೃತ್ಯವಹಿತೋತ್ತರರೂಪವಾದ ಆಕಾಂಕ್ಷಾ ಜ್ಞಾನವು ಆಸತ್ತಿಯಿಂದ ಗತಾರ್ಥವಾಗುವುದಿಲ್ಲ. ಅಲ್ಲಿ ಆಕಾಂಕ್ಷಾ ಜ್ಞಾನವು ಬೇರೆಯಾಗಿಯೇ ಕಾರಣವಾಗುತ್ತದೆ. ಘಟದಲ್ಲಿ ಕರ್ಮತಾ ಬೋಧ ಬರಬೇಕಾದರೆ ಘಟಪದದ ಅವ್ಯವಹಿತೋತ್ತರದಲ್ಲಿ ದ್ವಿತೀಯಾ ವಿಭಕ್ತಿರೂಪವಾದ ಆಕಾಂಕ್ಷಾ ಜ್ಞಾನವಿರಬೇಕು. (ಅದು ಬೋಧಕ್ಕೆ ಕಾರಣವಾಗುತ್ತದೆ.) ಹೀಗೆ ಇಲ್ಲಿ ಬೇರೆಯಾಗಿ ಕಾರಣತ್ವ ಹೇಳುವುದರಿಂದ 'ಘಟಃಕರ್ಮತ್ವಂ, ಆನಯನಂ, ಕೃತಿಃ' ಇತ್ಯಾದಿವಾಕ್ಯ ಸ್ಥಳದಲ್ಲಿ 'ಘಟಮಾನಯ' ಎಂಬ ಆಕಾಂಕ್ಷಾದಿಂದ ಕೂಡಿದ ವಾಕ್ಯದಂತೆ ಶಾಬ್ದ ಬೋಧ ಬರುವುದಿಲ್ಲ.

'ಅಯಮೇತಿ—' ಇತ್ಯಾದಿ ವಾಕ್ಯದಲ್ಲಿ ಉಭಯವಿಧಾಕಾಂಕ್ಷೆಯೂ ಇರುವುದರಿಂದ ವಕ್ತೃ ತಾತ್ಪರ್ಯವನ್ನನುಸರಿಸಿಯೇ ಶಾಬ್ದಬೋಧ ಬರುತ್ತದೆ. 'ರಾಜ್ಞಃ' ಎಂಬಲ್ಲಿ ಸಂಬಂಧವಿಶೇಷ ಬೋಧಕವಾದ ಷಷ್ಠೀ ಬಂದಿದೆ. ಇದಕ್ಕೆ ಪುತ್ರ, ಪುರುಷ ಇಬ್ಬರಲ್ಲಿಯೂ ಅನ್ವಯ ಹೊಂದುವ ಯೋಗ್ಯತಾ ಇದೆ. ಪುತ್ರನಲ್ಲಿ ಅನ್ವಯ ಹೇಳುವುದಾದರೆ 'ಅಯಂ ರಾಜ್ಞಃ ಪುತ್ರಃ ಆಯಾತಿ' (ಅತ) ಅಗ್ರೇ ಪುರುಷಃ (—ಜನ ಸಮುದಾಯ) ಅಪಸಾರ್ಯತಾಮ್' ಎಂದು ಅರ್ಥ. ಪುರುಷನಲ್ಲಿ ಅನ್ವಯ ಹೇಳಿದರೆ 'ರಾಜ್ಞಃ ಪುರುಷಃ ಆಯಾತಿ' ಅಗ್ರೇ ಪುತ್ರಃ ಅಪಸಾರ್ಯತಾಮ್' ಎಂದು ಬೋಧವಾಗುತ್ತದೆ. ಹೀಗೆ ವಕ್ತೃ ತಾತ್ಪರ್ಯದಿಂದ ನಿಶ್ಚಯಿಸಬೇಕು. ತಾತ್ಪರ್ಯವೂ ಶಾಬ್ದಬೋಧಕ್ಕೆ ಕಾರಣವೆಂದು ಹೇಳುತ್ತಾನೆ. 'ತಾತ್ಪರ್ಯಂ—' ಇತಿ. ಹೇಳುವವನ ಇಚ್ಛೆಗೇ ತಾತ್ಪರ್ಯವೆಂದು ಹೆಸರು. 'ಘಟಮಾನಯ' ಎಂಬಲ್ಲಿ 'ಕರ್ಮತ್ವವಿಶೇಷಕ, ಆಧೇಯತಾಸಂಸರ್ಗಕ, ಘಟಪ್ರಕಾರಕಪ್ರತೀತೀಚ್ಛಾ' ಎಂಬುದು ವಕ್ತೃ ತಾತ್ಪರ್ಯವಾಗುತ್ತದೆ. ಈ ಇಚ್ಛೆಯಿಂದ ಈ ವಾಕ್ಯವು ಪ್ರಯೋಗಿಸಲ್ಪಟ್ಟಿದೆ' ಎಂದು ಕೇಳುವವನ ತಾತ್ಪರ್ಯ ಜ್ಞಾನವು ಆ ವಾಕ್ಯದ ಶಾಬ್ದ ಬೋಧಕ್ಕೆ ಕಾರಣವಾಗುತ್ತದೆ. ತಾತ್ಪರ್ಯ ಜ್ಞಾನಕ್ಕೆ ಕಾರಣತ್ವ ಹೇಳುವುದರಲ್ಲಿ ಯುಕ್ತಿ ತೋರಿಸುತ್ತಾನೆ. 'ಕ್ವಚಿತ್—' ಇತಿ. ಸೈಂಧವ ಪದಕ್ಕೆ ಉಪ್ಪು, ಕುದುರೆ, ಎಂದು ಎರಡರ್ಥಗಳಿವೆ. ಆಗ ಈ ಅರ್ಥವನ್ನೇ ತೆಗೆದುಕೊಳ್ಳಬೇಕೆಂಬ ನಿರ್ಣಯವು ವಕ್ತೃ ತಾತ್ಪರ್ಯವನ್ನನುಸರಿಸಿಯೇ ಉಂಟಾಗುತ್ತದೆ. ತಾತ್ಪರ್ಯಜ್ಞಾನ ವಿಲ್ಲದಿದ್ದರೂ ಸಂಶಯವಿದ್ದರೂ ಶಾಬ್ದ ಬೋಧ ಬರುವುದೇ ಇಲ್ಲ. ಆದುದರಿಂದ ಅದಕ್ಕೆ ಕಾರಣತ್ವ ಹೇಳಲೇ ಬೇಕು. 'ಶ್ವೇತೋ ಧಾವತಿ' ಎಂಬಲ್ಲಿಯೂ ಒಂದು ಸಮಯ ಬಿಳಿ ಮನುಷ್ಯನೆಂದೂ, ಇನ್ನೊಂದು ಸಮಯ ನಾಯಿಯು ಬೋಧವೂನಿಯತವಾಗಿ ತಾತ್ಪರ್ಯಜ್ಞಾನ ವಿಲ್ಲದಿದ್ದರೆ ಬರಲಾರದು.

ನಚ ತಾತ್ಪರ್ಯ ಗ್ರಾಹಕ ಪ್ರಕರಣಾದೀನಾಂ ಶಾಬ್ದ ಬೋಧೇ ಕಾರಣತ್ವ ಮಸ್ತ್ವಿತಿ

ವಾಚ್ಯಂ, ತೇಷಾಮನನುಗಮಾತ್ । ತಾತ್ಪರ್ಯ ಜ್ಞಾನ ಜನಕತ್ವೇನ ತೇಷಾಮನುಗಮೇ ತು ತಾತ್ಪರ್ಯಜ್ಞಾನಮೇವ ಲಾಘವಾತ್ ಕಾರಣಮಸ್ತು । ಇತ್ಥಂಚ ವೇದಸ್ಥಲೇಽಪಿ ತಾತ್ಪರ್ಯ ಜ್ಞಾನಾರ್ಥ ಮೀಶ್ವರಃ ಕಲ್ಪ್ಯತೇ । ನ ಚ ತತ್ರಾಧ್ಯಾಪಕ ತಾತ್ಪರ್ಯ ಜ್ಞಾನಂ ಕಾರಣಮಿತಿ ವಾಚ್ಯಂ, ಸರ್ಗಾದಾವಧ್ಯಾಪಕಾಭಾವಾತ್ । ನ ಚ ಪ್ರಲಯ ಏವ ನಾಸ್ತೀತಿ ಕುತಃ ಸರ್ಗಾದಿರಿತಿ ವಾಚ್ಯಂ, ಪ್ರಲಯಸ್ಯಾ ಗಮೇಷು ಪ್ರತಿಪಾದ್ಯತ್ವಾತ್, ಇತ್ಥಂ ಚ ಶುಕ ವಾಕ್ಯೇ ಶಿಕ್ಷಯಿತು ರೀಯ ತಾತ್ಪರ್ಯ ಜ್ಞಾನಂ ಕಾರಣಮ್ । ವಿಸಂವಾದಿ ಶುಕವಾಕ್ಯೇ ತು ಶಿಕ್ಷಯಿತು ರೇವ ತಾತ್ಪರ್ಯ ಜ್ಞಾನಂ ಕಾರಣಮ್ । ಅನ್ಯೇ ತು ನಾನಾರ್ಥಾದೌ ಕ್ವಚಿದೇವ ತಾತ್ಪರ್ಯ ಜ್ಞಾನಂ ಕಾರಣಮ್, ತಥಾ ಚ ಶುಕವಾಕ್ಯೇ ವಿನೈವ ತಾತ್ಪರ್ಯ ಜ್ಞಾನಂ ಶಾಬ್ದ ಬೋಧಃ । ವೇದೇ ತ್ವನಾದಿ ಮೀಮಾಂಸಾ ಪರಿಶೋಧಿತತರ್ಕೈರೇವಾರ್ಥಾವಧಾ ರಣಮಿತ್ಯಾಹುಃ ॥ ೮೪ ॥

ಇತಿ ಶ್ರೀ ವಿಶ್ವನಾಥನ್ಯಾಯ ಪಂಚಾನನ ಭಟ್ಟಾಚಾರ್ಯ ವಿರಚಿತಾಯಾಂ
ಸಿದ್ಧಾಂತ ಮುಕ್ತಾವಲ್ಯಾಂ ಶಬ್ದ ಖಂಡಂ ಸಮಾಪ್ತಮ್ ॥

ತಾತ್ಪರ್ಯ ಜ್ಞಾನಕ್ಕೆ ಕಾರಣತ್ವವಿಲ್ಲವೆಂದು ಶಂಕಿಸುತ್ತಾನೆ. 'ನಚ—' ಇತಿ. ತಾತ್ಪರ್ಯ ಜ್ಞಾನಕ್ಕೆ ಕಾರಣತ್ವ ಹೇಳಿದರೂ ಅಲ್ಲಿ ತಾತ್ಪರ್ಯ ಗ್ರಾಹಕ ಪ್ರಕಾರಣಾದಿಗಳನ್ನು ನಿರ್ಣಾಯಕಗಳಾಗಿ ಸ್ವೀಕರಿಸಲೇ ಬೇಕು. ಆದುದರಿಂದ ಪ್ರಕರಣಾದಿಗಳೇ ಕ್ಲೃಪ್ತ ನಿಯತ ಪೂರ್ವವೃತ್ತಿಗಳಾಗುವುದರಿಂದ ಅವುಗಳಿಗೇ ಕಾರಣತ್ವ ಕಲ್ಪಿಸಿ ತಾತ್ಪರ್ಯ ಜ್ಞಾನಕ್ಕೆ ಕಾರಣತ್ವ ಹೇಳುವುದು ಬೇಡವೆಂದರೆ ಅವುಗಳು ಅನುಗತವಾಗದಿರುವುದರಿಂದ, ಏಕರೂಪವಾಗದಿರುವುದರಿಂದ ಕಾರಣತ್ವ ಕಲ್ಪಿಸಲು ಸಾಧ್ಯವಿಲ್ಲವೆಂದು ತೋರಿಸುತ್ತಾನೆ. 'ಶೇಷಾಮನನುಗಮಾತ್—' ಇತಿ. ಏಕರೂಪದಿಂದ ಅನುಗಮವಿಲ್ಲದಿದ್ದರೆ ಆಗ ಪರಸ್ಪರ ಜನ್ಯ ಶಾಬ್ದ ಬೋಧದಲ್ಲಿ ಪರಸ್ಪರ ವ್ಯಭಿಚಾರಬ ರುವುದರಿಂದ' ಕಾರಣತ್ವ ಸಂಭವಿಸುವುದಿಲ್ಲ. ತಾತ್ಪರ್ಯ ಜ್ಞಾನಕ್ಕೆ ಕಾರಣತ್ವ ಹೇಳಿದರೆ ಎಲ್ಲಿಯೂ ವ್ಯಭಿಚಾರ ಬರುವುದಿಲ್ಲ. ಪ್ರಕರಣಾದಿಗಳು ತಮ್ಮ ತಮ್ಮ ಸ್ಥಳದಲ್ಲಿ ತಾತ್ಪರ್ಯ ಜ್ಞಾನವನ್ನು ಹುಟ್ಟಿಸಿ ಕೊಡುವುದರಿಂದ ತಾತ್ಪರ್ಯಜನಕತ್ವ ರೂಪದಿಂದ ಅನುಗಮ ಹೇಳಬಹುದು ಎಂದರೆ ಅದೂ ಸಮಂಜಸವಲ್ಲವೆಂದು ತೋರಿಸುತ್ತಾನೆ. 'ತಾತ್ಪರ್ಯ—' ಇತಿ. ತಾತ್ಪರ್ಯ ಜ್ಞಾನ ಜನಕತ್ವೇನ ಅನುಗಮ ಹೇಳಿ ಪ್ರಕರಣಾದಿಗಳಿಗೆ ಕಾರಣತ್ವ ಕಲ್ಪಿಸುವುದಕ್ಕಿಂತ ತಾತ್ಪರ್ಯ ಜ್ಞಾನಕ್ಕೆ ಕಾರಣತ್ವ ಕಲ್ಪಿಸುವುದೇ ಲಾಘವವಾದ ಮಾರ್ಗ ವಾಗುತ್ತದೆ. 'ಇತ್ಥಂಚ—' ಇತಿ. 'ಶಾಬ್ದಬೋಧತ್ವಾವಚ್ಛಿನ್ನಂ ಪ್ರತಿ ತಾತ್ಪರ್ಯ ಜ್ಞಾನಸ್ಯ ಹೇತುಭಾವೇ ಸಿದ್ಧೇ' ಎಂದರ್ಥ. ವೇದ ವಾಕ್ಯದ ಶಾಬ್ದ ಬೋಧಕ್ಕೆ ಕಾರಣವಾದ ತಾತ್ಪರ್ಯ ಜ್ಞಾನಕ್ಕೋಸ್ಕರ ಈಶ್ವರನು ಅನುಮಿತನಾಗುತ್ತಾನೆ. 'ಸ್ವರ್ಗಕಾಮೋ ಯಜೇತ—' ಇತ್ಯಾದಿ ವೇದ ವಾಕ್ಯಾನಿ—ವಕ್ತೃ

ವಾಕ್ಯಾರ್ಥ ಯಥಾರ್ಥಜ್ಞಾನಪೂರ್ವಕಾಣಿ—ವಾಕ್ಯರಚನಾತ್ವಾತ್ । 'ನದೀತೀರೆ ಪಂಚಫಲಾನಿ ಸಂತಿ' ಇತ್ಯಾದಿ ಆಪ್ತವಾಕ್ಯ ರಚನಾತ್' ಎಂದು ಅನುಮಾನಾಕಾರ. ಆ ವಕ್ತೃ ಈಶ್ವರನೇ ಆಗುತ್ತಾನೆ. ಮೀಮಾಂಸಕನು ಆಶಂಕಿಸುತ್ತಾನೆ. 'ನಚ—' ಇತಿ. ವೇದದಲ್ಲಿ ಅಧ್ಯಾಪಕನ ತಾತ್ಪರ್ಯ ಜ್ಞಾನವೇ ಕಾರಣವಾದುದರಿಂದ ಅದರಿಂದ ಈಶ್ವರ ಕಲ್ಪನೆ ಹೇಗೆ ? ಎಂದು ಅವನ ಆಶಂಕೆ. ಅದಕ್ಕೆ ನೈಯಾಯಿಕನ ಸಮಾಧಾನ. 'ಸರ್ಗಾ—' ಇತಿ. ಸೃಷ್ಟಿಯ ಆದಿಯಲ್ಲಿ ಯಾವ ಅಧ್ಯಾಪಕನಿರುತ್ತಾನೆ. ? ಆಗ ಈಶ್ವರನೊಬ್ಬನೇ ಇರುವುದರಿಂದ ಈಶ್ವರನ ತಾತ್ಪರ್ಯ ಜ್ಞಾನವೇ ಕಾರಣವೆಂದು ಅಂಗೀಕರಿಸಲೇ ಬೇಕು. ಮೀಮಾಂಸಕನು ಪುನಃ ಆಕ್ಷೇಪಿಸುತ್ತಾನೆ; 'ನಚ—' ಇತಿ, ಪ್ರಲಯವೇ ಇಲ್ಲದಿರುವಾಗ ಸರ್ಗವೆಲ್ಲಿಂದ ಬರಬೇಕು ? ಆದುದರಿಂದ ಈಶ್ವರನನ್ನು ಕಲ್ಪಿಸ ಬೇಕಾಗಿಲ್ಲವೆಂದು ತಾತ್ಪರ್ಯ. ಇದಕ್ಕೆ ಸಮಾಧಾನ ತೋರಿಸುತ್ತಾನೆ. 'ಪ್ರಲಯಸ್ಯ—' ಇತಿ. ಕಾರ್ಯದ್ರವ್ಯಾನಧಿಕರಣಕಾಲವಿಶೇಷಕ್ಕೇ ಖಂಡಪ್ರಲಯವೆಂದು ಹೆಸರು. ನಾಹೋ ನ ರಾತ್ರಿರ್ನನಭೋನ ಭೂಮಿರ್ನಾಸೀತ್ತಮೋ ಜ್ಯೋತಿರಭೂತ್—' ಇತ್ಯಾದಿ ಆಗಮಗಳಿಂದ ಪ್ರಳಯವಿದೆಯೆಂದು ಸಿದ್ಧವಾಗುತ್ತದೆ. 'ಇತ್ಥಂ—' ಇತಿ. ಹೀಗೆ ತಾತ್ಪರ್ಯ ಜ್ಞಾನಕ್ಕೆ ಕಾರಣತ್ವಸಿದ್ಧವಾದಮೇಲೆ. ಶುಕ ಶಾರಿಕಾದಿ ಪಕ್ಷಿಗಳಿಂದ ಉಚ್ಚರಿಸಲ್ಪಟ್ಟ ವಾಕ್ಯಗಳಲ್ಲಿ ಶುಕಾದಿಗಳ ತಾತ್ಪರ್ಯ ಜ್ಞಾನವು ಕಾರಣವಾಗುವುದಿಲ್ಲ. ತಾತ್ಪರ್ಯಜ್ಞಾನವಿಲ್ಲದೇ ಶಾಬ್ದಬೋಧ ಬರುವುದಿಲ್ಲ. ಆದಕ್ಕೋಸ್ಕರ ಅಲ್ಲಿ ಈಶ್ವರೀಯತಾತ್ಪರ್ಯ ಜ್ಞಾನವೇ ಕಾರಣವೆಂದು ಕಲ್ಪಿಸಬೇಕು. ಅವುಗಳು ಎಲ್ಲಿಯಾದರೂ ವಿಸಂವಾದಿವಾಕ್ಯವನ್ನು ಹೇಳಿದರೆ ಅಂದರೆ ನಿಷ್ಫಲಪ್ರವೃತ್ತಿ ಜನಕವಾದ ಮಿಥ್ಯೋಚ್ಚಾರಣಮಾಡಿದರೆ ಆಗ ಅದನ್ನು ಹೇಳಿಕೊಟ್ಟ ಜನರ ತಾತ್ಪರ್ಯ ಜ್ಞಾನವು ಕಾರಣವೆನ್ನಬೇಕು. ವಿಸಂವಾದಿತ್ವವು ಈಶ್ವರೇಚ್ಛೆಗೆ ಇಲ್ಲದಿರುವುದರಿಂದ ಅಲ್ಲಿ ಈಶ್ವರೀಯತಾತ್ಪರ್ಯಜ್ಞಾನವು ಕಾರಣವಾಗುವುದಿಲ್ಲ.

ಈ ವಿಷಯದಲ್ಲಿ ನೈಯಾಯಿಕೈಕದೇಶಿಗಳ ಮತವನ್ನು ತೋರಿಸುತ್ತಾನೆ. 'ಅನ್ಯೇತು—' ಇತಿ. ಸೈಂಧವಮಾನಯ' ಇತ್ಯಾದಿಸ್ಥಳದಲ್ಲಿ ಸೈಂಧವಾದಿ ನಾನಾರ್ಥಕ ಪದಗಳಲ್ಲಿ ಒಂದರ್ಥದಲ್ಲಿ ಮಾತ್ರ ತಾತ್ಪರ್ಯಜ್ಞಾನವು ಕಾರಣವಾಗುತ್ತದೆ. ಶುಕವಾಕ್ಯದಲ್ಲಿ ತಾತ್ಪರ್ಯಜ್ಞಾನವಿಲ್ಲದೇ ಶಾಬ್ದಬೋಧ ಬರುತ್ತದೆ. ವೇದದಲ್ಲಿ ಅನುಮಾನದಿಂದಲೇ ಅರ್ಥನಿಶ್ಚಯವಾಗುತ್ತದೆ. 'ಅನಾದಿ—' ಇತಿ. ಲಾಘವಜ್ಞಾನಾತ್ಮಕತರ್ಕ ಸಹಕೃತವಾದ ಅನುಮಾನದಿಂದ ಎಂದರ್ಥ. 'ಆಹುಃ' ಎಂದುದರಿಂದ ಇವರಮತದಲ್ಲಿ ಅಸ್ವಾರಸ್ಯ ಸೂಚಿತವಾಗುತ್ತದೆ. 'ಗೃಹೀತನಾನಾರ್ಥ ವೃತ್ತಿಕಪದಜನ್ಯಾನುಭವತ್ವವು' ಇವರ ಮತದಲ್ಲಿ ತಾತ್ಪರ್ಯಜ್ಞಾನಜನ್ಯತಾವಚ್ಛೇದಕವಾಗುವುದರಿಂದ ಗೌರವ ಬರುತ್ತದೆ. ಪೂರ್ವಮತದಲ್ಲಿ ಕೇವಲಪದಜನ್ಯಾನುಭವತ್ವವು ಜನ್ಯತಾವಚ್ಛೇಧಕವಾಗುವುದರಿಂದ ಲಾಘವವಿರುತ್ತದೆ.

ವಿಷ್ಣುಮೂರ್ತಿಕೃತ ಮುಕ್ತಾವಳೀ ಕನ್ನಡವ್ಯಾಖ್ಯಾನದಲ್ಲಿ ಶಬ್ದಖಂಡ ಮುಗಿದಿದೆ.

# ಅಥ ಸ್ಮರಣ ನಿರೂಪಣಮ್

ಪೂರ್ವಮನುಭವಸ್ಮರಣಭೇಧಾದ್ಬುದ್ಧೇರ್ದ್ವೈವಿಧ್ಯಮುಕ್ತಮ್ । ತತ್ರಾನುಭವಪ್ರಕಾರಾ ದರ್ಶಿತಾಃ, ಸುಗಮತಯಾ ಸ್ಮರಣಂ ನ ದರ್ಶಿತಮ್ । ತತ್ರ ಹಿ ಪೂರ್ವಾನುಭವಃ ಕಾರಣಮ್ । ಅತ್ರ ಕೇಚಿತ್ । ಅನುಭವತ್ವೇನ ನ ಕಾರಣತ್ವಂ ಕಿಂತು ಜ್ಞಾನತ್ವೇನೈವ, ಅನ್ಯಥಾ ಸಕೃದನುಭವಸ್ಥಲೇ ಸ್ಮರಣಾನಂತರಸ್ಮರಣಂ ನ ಸ್ಯಾತ್ ಸಮಾನಪ್ರಕಾರಕಸ್ಮರಣೇನ ಪೂರ್ವಸಂಸ್ಕಾರಸ್ಯ ವಿನಷ್ಟತ್ವಾತ್ । ಮನ್ಮತೇ ತು ತೇನೈವ ಸ್ಮರಣೇನ ಸಂಸ್ಕಾರಾಂತರದ್ವಾರಾ ಸ್ಮರಣಾಂತರಂ ಜನ್ಯತ ಇತ್ಯಾಹುಃ । ತನ್ನ । ಯತ್ರ ಸಮೂಹಾಲಂಬನೋತ್ತರಂ ಘಟಪಟಾದೀನಾಂ ಕ್ರಮೇಣ ಸ್ಮರಣಮುಜನಿಷ್ಟ ಸಕಲವಿಷಯಕಸ್ಮರಣಂ ತು ನಾಭೂತ್ತತ್ರಫಲಸ್ಯ ಸಂಸ್ಕಾರನಾಶಕತ್ವಾಭಾವಾತ್ ಕಾಲಸ್ಯ ರೋಗಸ್ಯ ವಾ ಚರಮಫಲಸ್ಯ ವಾ ಸಂಸ್ಕಾರನಾಶಕತ್ವಂ ವಾಚ್ಯಮ್ । ತಥಾ ಚ ನ ಕ್ರಮಿಕಸ್ಮರಣಾನುಪಪತ್ತಿಃ । ನ ಚ ಪುನಃ ಪುನಃ ಸ್ಮರಣಾತ್ ದೃಢತರಸಂಸ್ಕಾರಾನುಪಪತ್ತಿರಿತಿ ವಾಚ್ಯಂ, ಯಟಿತ್ಯುದ್ಬೋಧಕ ಸಮಪಧಾನಸ್ಯ ದಾರ್ಢ್ಯಪದಾರ್ಥತ್ವಾತ್ ॥

ಅನುಭವ, ಸ್ಮರಣವೆಂದು ಬುದ್ಧಿಯು ಎರಡುವಿಧವಾಗಿದೆಯೆಂದು ಹಿಂದೆ ಹೇಳಿದೆ. ಪ್ರತ್ಯಕ್ಷ, ಅನುಮಿತಿ, ಉಪಮಿತಿ, ಶಾಬ್ದವೆಂದು ಅನುಭವದ ನಾಲ್ಕುವಿಧವನ್ನೂ ವಿಶದವಾಗಿ ತೋರಿಸಿದ್ದಾಯಿತು ಈಗ ಅವಸರಸಂಗತಿಯಿಂದ ಸ್ಮೃತಿಯನ್ನು ನಿರೂಪಿಸಲು ಆರಂಭಿಸುತ್ತಾನೆ. 'ಪೂರ್ವಂ—' ಇತಿ. ಸ್ಮೃತಿಯು ಎಲ್ಲರಿಗೂ ತಿಳಿದುದಾದುದರಿಂದ, ದುರ್ಬೋಧ ಪದಾರ್ಥವನ್ನು ಮಾತ್ರ ತಿಳಿಯಬೇಕೆಂಬ ಜಿಜ್ಞಾಸೆಯುಂಟಾಗುವುದರಿಂದ ಮೊದಲು ವಿವರಿಸಿರಲಿಲ್ಲ. ಈ ಸ್ಮೃತಿಗೆ ಅದರ ಪೂರ್ವದಲ್ಲಿ ಉಂಟಾದ ಅನುಭವವೇ ಕಾರಣವಾಗುತ್ತದೆ. ಸಾಮಾನ್ಯವಾಗಿ ಜ್ಞಾನವು ಸ್ಮೃತಿ, ಅನುಭವವೆಂದು ಮೊದಲು ಎರಡುವಿಧವೆಂದು ತಿಳಿಯಬೇಕು. ಸಂಸ್ಕಾರಮಾತ್ರದಿಂದ ಉಂಟಾದ ಜ್ಞಾನಕ್ಕೆ ಸ್ಮೃತಿಯೆಂದು ಹೆಸರು. ಸ್ಮೃತಿಭಿನ್ನವಾದ ಜ್ಞಾನಕ್ಕೆ ಅನುಭವವೆಂದು ಹೆಸರು. ಸ್ಮೃತಿಗೆ ಪೂರ್ವಾನುಭವ ಕಾರಣವೆಂದು ಅಂಗೀಕರಿಸದಿದ್ದರೆ ಅನುಭೂತವಾಗದಿರುವ ಪದಾರ್ಥದ ಸ್ಮರಣೆಯೂ ಬರಬೇಕಾಗುತ್ತದೆ.

ಸ್ಮೃತಿಗೆ ಅನುಭವಕಾರಣವೆಂಬುದರಲ್ಲಿ ಮತದ್ವಯವಿದೆ. ಕೆಲವರು ಸ್ಮೃತಿಯನ್ನು ಕುರಿತು ಅನುಭವತ್ವಾವಚ್ಛಿನ್ನವಾದದ್ದು ಕಾರಣವೆನ್ನುತ್ತಾರೆ. ಇನ್ನು ಕೆಲವರು ಜ್ಞಾನತ್ವಾವಚ್ಛಿನ್ನವಾದದ್ದು ಕಾರಣವೆಂದು ಸಾಮಾನ್ಯರೂಪದಿಂದ ಕಾರ್ಯಕಾರಣಭಾವ ಹೇಳುತ್ತಾರೆ. ಸಾಮಾನ್ಯಧರ್ಮಾವಚ್ಛಿನ್ನಕಾರಣವಾದಿಗಳಾದ ಇವರ ಅಭಿಪ್ರಾಯವನ್ನು ತೋರಿಸುತ್ತಾನೆ. 'ಅತ್ರ ಕೇಚಿತ್—' ಇತಿ. ಸ್ಮೃತಿಯನ್ನು ಕುರಿತು

ಅನುಭವತ್ವರೂಪದಿಂದ ಕಾರಣತ್ವ ಹೇಳಬಾರದು. ಜ್ಞಾನತ್ವರೂಪದಿಂದಲೇ ಕಾರಣತ್ವ ಹೇಳಬೇಕು. ಅನುಭವತ್ವರೂಪದಿಂದ ಕಾರಣವಾಗುತ್ತದೆಂದು ಹೇಳುವುದಾದರೆ ಒಂದು ಬಾರಿ ಅನುಭೂತವಾದುದಕ್ಕೆ ಒಂದುಬಾರಿ ಸ್ಮರಣೆ ಬಂದಮೇಲೆ ಪುನಃ ಎಂದೂ ಅದರ ಸ್ಮರಣಬಾರದೇ ಹೋಗಬೇಕಾಗುತ್ತದೆ. ಏಕೆಂದರೆ ಅನುಭವದಿಂದ ಉಂಟಾದ ಸಂಸ್ಕಾರವು ಯಾವಾಗಲೂ ಸಮಾನಪ್ರಕಾರಕಸ್ಮರಣೆಯನ್ನು (ಇದೇ ಅದಕ್ಕೆ ಫಲ) ಹುಟ್ಟಿಸಿಕೊಟ್ಟು ನಾಶವಾಗುತ್ತದೆ. ಸಮಾನಪ್ರಕಾರಕಸ್ಮರಣಕ್ಕೆ ಅನುಭವಜನ್ಯ ಸಂಸ್ಕಾರನಾಶಕತ್ವವು ನಿಯತವಾಗಿದೆ. ಆದರೆ ಒಂದುಬಾರಿ ಅನುಭೂತವಾದ ವಿಷಯಕ್ಕೆ ಅನೇಕಬಾರಿ ಸ್ಮರಣೆಯುಂಟಾಗುತ್ತದೆ. ವಿಶೇಷರೂಪದಿಂದ ಕಾರಣಹೇಳು ವವರಮತದಲ್ಲಿ ಕಾರಣವಿಲ್ಲದೆ ಕಾರ್ಯಹುಟ್ಟಿದಂತಾಗುತ್ತದೆ. ಜ್ಞಾನತ್ವಾವಚ್ಛಿನ್ನವು ಕಾರಣವೆಂದರೆ ಜ್ಞಾನತ್ವವು ಅನುಭವದಲ್ಲಿದ್ದಂತೆ ಸ್ಮರಣೆಯಲ್ಲಿಯೂ ಇರುತ್ತದೆ. ಆಗ ಅನುಭವದಿಂದ ಉಂಟಾದ ಪ್ರಥಮಸಂಸ್ಕಾರದಿಂದ ಒಂದುಸ್ಮರಣೆ ಬಂದಮೇಲೆ ಪೂರ್ವ ಸಂಸ್ಕಾರನಾಶವಾಗಿ ಉತ್ತರೋತ್ತರ ಸಂಸ್ಕಾರಹುಟ್ಟುತ್ತದೆ. ಹೀಗೆ ಉತ್ತರೋತ್ತರ ಸಂಸ್ಕಾರ ಹುಟ್ಟುತ್ತಾ ಅದರಿಂದ ಸಮಾನಪ್ರಕಾರವುಳ್ಳ ಅನೇಕಸ್ಮರಣೆ ಬರಬಹುದು. ಆದುದರಿಂದ ಸ್ಮತಿಗೆ ಜ್ಞಾನಸಾಮಾನ್ಯವೇ ಕಾರಣವಾಗುವುದಲ್ಲದೆ ಅನುಭವರೂಪಜ್ಞಾನ ವಿಶೇಷವುಕಾರಣವೆಂದು ಹೇಳಬಾರದು.

ವಿಶೇಷಧರ್ಮಾವಚ್ಛಿನ್ನಕಾರಣವಾದಿಯು ಇದನ್ನು ಖಂಡಿಸುತ್ತಾನೆ. 'ತನ್ನ—' ಇತಿ. ನಾನಾಧರ್ಮಿಗಳನ್ನು ವಿಷಯೀಕರಿಸುವ ಒಂದು ಜ್ಞಾನಕ್ಕೆ ಸಮೂಹಾಲಂಬನ ಜ್ಞಾನವೆಂದು ಹೆಸರು ಇವರ ಸಿದ್ಧಾಂತ. 'ಇಮೇ ರಾಮಕೃಷ್ಣಗೋವಿಂದಾಃ' ಎಂಬ ಸಮೂಹಾಲಂಬನಾತ್ಮಕವಾದ ಒಂದು ಅನುಭವ ಬಂದಿರುತ್ತದೆ. ಇದರಿಂದ ಒಂದು ಸಂಸ್ಕಾರ ಹುಟ್ಟಿರುತ್ತದೆ. ಆಮೇಲೆ ಈ ಸಂಸ್ಕಾರಕ್ಕೆ ಉದ್ಬೋಧಕವಾದ ಒಂದು ಅದೃಷ್ಟವಿಶೇಷ ಬಂದು ಅದರಿಂದ ರಾಮಾದಿಗಳಿಗೆ ಕ್ರಮವಾಗಿ ಸ್ಮರಣೆ ಬರುತ್ತದೆ; ಸಮೂಹಾಲಂಬನರೂಪವಾಗಿ ಸ್ಮರಣೆಬಂದಿರುವುದಿಲ್ಲ. ಅಲ್ಲಿ ಸಮಾನಪ್ರಕಾರಕಸ್ಮರಣ ರೂಪಫಲವು ಯಾವಸಂಸ್ಕಾರಕ್ಕೂ ನಾಶಕವಾಗಲಿಲ್ಲ. ಹಿಂದಿನವರ ಮತದಂತೆ ನಿಯಮದಿಂದ ಅಲ್ಲಿ ಸಮಾನಪ್ರಕಾರಕ ಸಂಸ್ಕಾರನಾಶಕತ್ವವಿರಲೇ ಬೇಕು. ಆದರೆ ಕ್ರಮವಾಗಿ ಸ್ಮರಣೆ ಬಂದುದರಿಂದ ಅದರಿಂದ ಸಮೂಹಾಲಂಬನಾತ್ಮಕಸಂಸ್ಕಾರನಾಶ ವಾಗಲಿಲ್ಲ. ಆದುದರಿಂದ ಹಿಂದೆ ಹೇಳಿದ ನಿಯಮಕ್ಕೆ ವ್ಯಭಿಚಾರವಾಗುತ್ತದೆ. ಹಾಗಾದರೆ ಆಸಂಸ್ಕಾರನಾಶಕವಾದದ್ದು ಯಾವುದು ? ಅಂದರೆ ಕೆಲವು ಸ್ಥಳದಲ್ಲಿ ದೀರ್ಘ ರೋಗವೂ, ಕೆಲವು ಕಡೆ ಬಹುಕಾಲವೂ, ಕೆಲವು ಕಡೆ ಅಂತ್ಯವಾದಸ್ಮರಣರೂಪಫಲವೂ ಆಗುತ್ತದೆ. ಆದುದರಿಂದ ಪುನಃ ಪುನಃ ಎಲ್ಲಿ ಸ್ಮರಣೆಯುಂಟಾಗುತ್ತದೆಯೋ ಅಲ್ಲಿ ಸಂಸ್ಕಾರಮೂಲಕ ಅನುಭವವೇ ಕಾರಣವೆಂದು ವಿಶೇಷರೂಪದಿಂದ ಹೇಳಬೇಕು. ಯಾವಾಗ ಸ್ಮರಣೆ ಉಂಟಾಗುವುದಿಲ್ಲವೋ ಆಗ ಕೊನೆಯ ಸ್ಮರಣಾತ್ಮಕಫಲವೇ ನಾಶಕ ವಾಗುವುದೆಂದು ಕಲ್ಪಿಸಬೇಕು.

ಈ ವಿಷಯದಲ್ಲಿ ಆಶಂಕಿಸುತ್ತಾನೆ. 'ನಚ—' ಇತಿ. ಪುನಃ ಪುನಃ ಸ್ಮರಣೆಯುಂಟಾಗುತ್ತಿದ್ದರೆ ಸ್ಮರಣೆಯು ಸಂಸ್ಕಾರನಾಶಕವಾದುದರಿಂದ ದೃಢತರವಾದ ಸಂಸ್ಕಾರವಿಲ್ಲದೇ ಹೋಗಬೇಕಾಗುತ್ತದೆ ಎಂದು ಶಂಕೆ. ಅದಕ್ಕೆ ಸಮಾಧಾನ. 'ಘಟತಿ—' ಇತಿ. ಪುನಃ ಪುನಃ ಸ್ಮರಣೆಯಿಂದ ದೃಢತರವಾದ ಸಂಸ್ಕಾರ ಹುಟ್ಟುವುದಿಲ್ಲ. ಆದರೆ ಇರತಕ್ಕ ಸಂಸ್ಕಾರದಿಂದಲೇ ಪುನಃ ಪುನಃ ಸ್ಮರಣೆ ಹುಟ್ಟುವುದರಿಂದ ಜಾಗ್ರತೆಯಾಗಿ ಉದ್ಬೋಧಕಸಾಮಗ್ರಿಯುಂಟಾಗುತ್ತದೆಂದು ತಿಳಿಯಬೇಕು. ಆಗ ಉದ್ಬುದ್ಧಸಂಸ್ಕಾರದಿಂದ ಸ್ಮರಣೆ ಬರುತ್ತದೆ. ದೃಢಸಂಸ್ಕಾರವೆಂದರೆ ಜಾಗ್ರತೆಯಾಗಿ ಉದ್ಬೋಧಕಸಾಮಗ್ರಿಯಿಂದ ಕೂಡಿದಸಂಸ್ಕಾರವೆಂದರ್ಥ.

ನ ಚ ವಿನಿಗಮನಾವಿರಹಾದೇವ ಜ್ಞಾನತ್ವೇನಾಪಿ ಜನಕತ್ವಂ ಸ್ಯಾದಿತಿ ವಾಚ್ಯಮ್ । ವಿಶೇಷಧರ್ಮೇಣ ವ್ಯಭಿಚಾರಜ್ಞಾನೇ ಸಾಮಾನ್ಯಧರ್ಮೇಣ ಅನ್ಯಥಾಸಿದ್ಧತ್ವಾತ್ । ಕಥಮನ್ಯಥಾ ದಂಡಸ್ಯ ಭ್ರಮಿದ್ವಾರಾ ದ್ರವ್ಯತ್ವೇನ ರೂಪೇಣ ನ ಕಾರಣತ್ವಮ್ । ನ ಚಾಂತರಾಲಿಕಸ್ಮರಣಾನಾಂ ಸಂಸ್ಕಾರನಾಶಕತ್ವಸಂಶಯಾತ್ ವ್ಯಭಿಚಾರಸಂಶಯ ಇತಿ ವಾಚ್ಯಮ್ । ಅನಂತಸಂಸ್ಕಾರತನ್ನಾಶಕಲ್ಪನಾಪೇಕ್ಷಯಾ ಲಾಘವೇನ ಚರಮಸ್ಮರಣಸ್ಯೈವ ಸಂಸ್ಕಾರನಾಶಕತ್ವಕಲ್ಪನೇನ ವ್ಯಭಿಚಾರಸಂಶಯಾಭಾವಾತ್ ॥ ಇತಿ ಸ್ಮೃತಿಪ್ರಕ್ರಿಯಾ ॥

ಪುನಃ ಆಶಂಕಿಸುತ್ತಾನೆ. 'ನಚ—' ಇತಿ. ವಿನಿಗಮನಾವಿರಹವೆಂದರೆ ಏಕಪಕ್ಷಪಾತಿ ಯುಕ್ತ್ಯಭಾವ. ಸ್ಮೃತಿಯನ್ನು ಕುರಿತು ಜ್ಞಾನತ್ವಾವಚ್ಛಿನ್ನ ಕಾರಣವೇ, ಅನುಭವತ್ವಾವಚ್ಛಿನ್ನಕಾರಣವೇ ? ಎಂದು ಕೇಳಿದರೆ ಇದೇ ಕಾರಣವೆಂಬುದರಲ್ಲಿ ಯಾವ ವಿಶೇಷಯುಕ್ತಿಯೂ ಇಲ್ಲದಿರುವುದರಿಂದ ಜ್ಞಾನತ್ವಾವಚ್ಛಿನ್ನವೂ ಕಾರಣವಾಗಲಿ ಎಂದು ಶಂಕೆ ಬಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ವಿಶೇಷಧರ್ಮೇಣ—' ಇತಿ- ಅನುಭವತ್ವರೂಪದಿಂದ ಕಾರಣ ಹೇಳಿದರೆ ವಿಶೇಷಧರ್ಮದಿಂದ ಕಾರಣ ಹೇಳಿದಂತಾಗುತ್ತದೆ. ಹೀಗೆ ಹೇಳುವುದರಿಂದ ವ್ಯಭಿಚಾರಜ್ಞಾನ ಬಾರದಿದ್ದರೆ ಆಗ ಜ್ಞಾನತ್ವರೂಪಸಾಮಾನ್ಯಧರ್ಮದಿಂದ ಕಾರಣತ್ವ ಹೇಳಿದರೆ ಆ ಕಾರಣವು ಅನ್ಯಥಾಸಿದ್ಧವಾಗುತ್ತದೆ. ವಿಶೇಷಧರ್ಮದಿಂದ ಕಾರ್ಯಕಾರಣಭಾವಕ್ಕೆ ವ್ಯಭಿಚಾರ ಬಾರದಿದ್ದರೆ ಅಲ್ಲಿ ಸಾಮಾನ್ಯಧರ್ಮದಿಂದ ಕಾರ್ಯಕಾರಣಭಾವವನ್ನು ಹೇಳಬಾರದು. ಅನುಭವತ್ವರೂಪವಿಶೇಷಧರ್ಮವು ಪ್ರತ್ಯಕ್ಷಾದಿನಾಲ್ಕರಲ್ಲಿಮಾತ್ರ ಇರುತ್ತದೆ. ಜ್ಞಾನತ್ವರೂಪಸಾಮಾನ್ಯಧರ್ಮವು ಸ್ಮೃತಿ ಅನುಭವ ಈ ಎರಡರಲ್ಲಿಯೂ ಇರುತ್ತದೆ. 'ಕಥಂ—' ಇತಿ- ಘಟವನ್ನು ಕುರಿತು ದಂಡ ಕಾರಣ. ಪೂರ್ವೋಕ್ತನಿಯಮವನ್ನಂಗೀಕರಿಸದಿದ್ದರೆ ಆಗ ದಂಡವು ದಂಡತ್ವರೂಪದಿಂದ ಕಾರಣವಲ್ಲ. ದಂಡತ್ವವ್ಯಾಪಕದ್ರವ್ಯತ್ವರೂಪದಿಂದ ಕಾರಣವಾಗಲಿ ಎಂದು ಏಕೆ ಅಂಗೀಕರಿಸಬಾರದು ಎಂದು ಕೇಳಬಹುದು. ಆದರೆ ಅಲ್ಲಿ ಯಾರೂ ಹಾಗೆ ಹೇಳುವುದಿಲ್ಲ. ದಂಡತ್ವರೂಪವಿಶೇಷಧರ್ಮಪುರಸ್ಕಾರವಾಗಿಯೇ ದಂಡಕ್ಕೆ ಕಾರಣತ್ವ

ಹೇಳುತ್ತಾರೆ. ಅದರಂತೆ ಇಲ್ಲಿ ಅನುಭವತ್ವರೂಪವಿಶೇಷಧರ್ಮಪುರಸ್ಕಾರದಿಂದಲೇ ಸ್ಮೃತಿ ಕಾರಣತ್ವ ಹೇಳಬೇಕು. ಸಾಮಾನ್ಯವಾದಿಯು ಪುನಃ ಶಂಕಿಸುತ್ತಾನೆ. 'ನಚ—' ಇತಿ. ಅಂತರಾಲಿಕ ಅಂದರೆ ಮಧ್ಯವರ್ತಿಯಾದ ಸ್ಮೃತಿಗಳಿಂದ ಸಂಸ್ಕಾರಗಳು ನಾಶವಾಗುತ್ತವೆ. ಎಂಬುದರಲ್ಲಿ ಸಂಶಯವಿರುವುದರಿಂದ ವ್ಯಭಿಚಾರಸಂಶಯವೂ ಬರುತ್ತದೆ. ಅನುಭವತ್ವೇನಕಾರಣವೆಂಬುದರಲ್ಲಿ ವ್ಯಭಿಚಾರ ಸಂಶಯಬರುತ್ತದೆಂದರ್ಥ. ಅದಕ್ಕೆ ವಿಶೇಷವಾದಿಯ ಸಮಾಧಾನ. ಅನಂತಸಂಸ್ಕಾರ ಮತ್ತು ಅವುಗಳ ನಾಶವನ್ನು ಕಲ್ಪಿಸುವುದಕ್ಕಿಂತ ಕೊನೆಯ ಸ್ಮರಣರೂಪಫಲವೇ ಸಂಸ್ಕಾರನಾಶಕವಾಗುತ್ತದೆಂದು ಕಲ್ಪಿಸುವುದರಿಂದ ಯಾವ ವ್ಯಭಿಚಾರಸಂಶಯಕ್ಕೂ ಅವಕಾಶವಿಲ್ಲವೆಂದು ತಾತ್ಪರ್ಯ 'ಆತ್ಮಮನಸಃ ಸಂಯೋಗವಿಶೇಷಾತ್ ಸಂಸ್ಕಾರಾಚ್ಚ ಸ್ಮೃತಿಃ ತಥಾ ಸ್ವಪ್ನಃ' ಎಂಬ ವೈಶೇಷಿಕಸೂತ್ರವೇ ಈ ವಿಷಯವಿವರಣೆಗೆ ಮೂಲ.

ಇದಾನೀಂ ಕ್ರಮಪ್ರಾಪ್ತಂ ಮನೋ ನಿರೂಪಯಿತುಮಾಹ

**ಸಾಕ್ಷಾತ್ಕಾರೇ ಸುಖಾದೀನಾಂ ಕರಣಂ ಮನ ಉಚ್ಯತೇ ||**
**ಅಯೌಗಪದ್ಯಾತ್ ಜ್ಞಾನಾನಾಂ ತಸ್ಯಾಣುತ್ವಮಿಹೇಷ್ಯತೇ || ೮೫ ||**

ಒಂಬತ್ತನೆಯ ದ್ರವ್ಯವಾದ ಮನಸ್ಸನ್ನು ವಿವರಿಸುತ್ತಾನೆ. 'ಸಾಕ್ಷಾತ್ಕಾರೇ—' ಇತಿ. ಸುಖಾದೀನಾಂ—ಸುಖದುಃಖೇಚ್ಛಾದ್ವೇಷಾದಿಗಳ, ಸಾಕ್ಷಾತ್ಕಾರೇ—ಪ್ರತ್ಯಕ್ಷದಲ್ಲಿ, ಕರಣಂ—ಸಾಧನವು. ಮನಃ ಉಚ್ಯತೇ—ಮನಸ್ಸೆಂದು ಹೇಳಿದೆ. 'ಸುಖದುಃಖಾದ್ಯುಪಲಬ್ಧಿಸಾಧನಂ ಇಂದ್ರಿಯಂ' ಎಂಬುದು ಲಕ್ಷಣವಾಗುತ್ತದೆ. ಜ್ಞಾನಾನಾಂ ಅಯೌಗಪದ್ಯಾತ್—ಜ್ಞಾನಗಳು ಏಕಕಾಲದಲ್ಲಿ ಹುಟ್ಟದಿರುವುದರಿಂದ, ತಸ್ಯ—ಆ ಮನಸ್ಸಿಗೆ ಅಣುತ್ವಂ—ಇಷ್ಯತೇ ಅಣುಪರಿಮಾಣವು ಸಿದ್ಧವಾಗುತ್ತದೆ. ಮನಸ್ಸು ಅಣುಎಂಬುದಕ್ಕೆ ಆಯಾಯಜ್ಞಾನಗಳು ಏಕಕಾಲದಲ್ಲಿ ಹುಟ್ಟದಿರುವುದೇ ಪ್ರಮಾಣವಾಗುತ್ತದೆ.

ಏತೇನ ಮನಸಿ ಪ್ರಮಾಣಂ ದರ್ಶಿತಮ್ | ತಥಾಹಿ—ಸುಖಸಾಕ್ಷಾತ್ಕಾರಃ ಸಕರಣಕಃ ಜನ್ಯಸಾಕ್ಷಾತ್ಕಾರತ್ವಾತ್, ಚಾಕ್ಷುಷಸಾಕ್ಷಾತ್ಕಾರವತ್ ಇತ್ಯನುಮಾನೇನಮನಸಃ ಕರಣತ್ವಸಿದ್ಧಿಃ | ನಚ್ಚೈವಂ ದುಃಖಾದಿಸಾಕ್ಷಾತ್ಕಾರಾಣಾಮಪಿ ಕರಣಾಂತರಾಣಿ ಸ್ಯುರಿತಿ ವಾಚ್ಯಮ್ | ಲಾಘವಾದೇ ಕಸ್ಯೈವ ತಾದೃಶಸಕಲಸಾಕ್ಷಾತ್ಕಾರಕರಣತಯಾ ಸಿದ್ಧೇಃ | ಏವಂ ಸುಖಾದೀನಾಮಸಮವಾಯಿಕಾರಣಸಂಯೋಗಾಶ್ರಯತಯಾ ಮನಸಃ ಸಿದ್ಧಿರ್ಬೋದ್ಧವ್ಯಾ ||

ಮನಸ್ಸು ಇದೆಯೆಂಬುದರಲ್ಲಿ ಪ್ರಮಾಣವೇನು ? ಎಂದು ಕೇಳಿದರೆ ಅದಕ್ಕೆ ಉತ್ತರ ಹೇಳುತ್ತಾನೆ. 'ಏತೇನ—' ಇತಿ. ಮನಸ್ಸಿಗೆ ಹೀಗೆ ಲಕ್ಷಣಹೇಳಿರುವುದರಿಂದ

ಮನಸ್ಸು ಇದೆಯೆಂಬುವರಲ್ಲಿ ಅನುಮಾನರೂಪಪ್ರಮಾಣ ತೋರಿಸಿದಂತಾಗುತ್ತದೆ. 'ತಥಾಹಿ—' ಎಂಬುದರಿಂದ ಪ್ರಮಾಣರೂಪ ಅನುಮಾನವನ್ನು ತೋರಿಸುತ್ತಾನೆ. ಸುಖಪ್ರತ್ಯಕ್ಷವೆಂಬುದು ಜನ್ಯಪ್ರತ್ಯಕ್ಷವಾದುದರಿಂದ ಒಂದುಕರಣದಿಂದ ಹುಟ್ಟುತ್ತದೆಂದು ತಿಳಿಯಬೇಕು. 'ಜನ್ಯಸಾಕ್ಷಾತ್ಕಾರತ್ವಂ ಸಕರಣಕತ್ವವ್ಯಾಪ್ಯಂ' ಜನ್ಯಸಾಕ್ಷಾತ್ಕಾರ ವಿದ್ದಲ್ಲಿ ಸಕರಣಕತ್ವವಿದ್ದೇ ಇರುತ್ತದೆಎಂದರ್ಥ. ಈಶ್ವರನ ಪ್ರತ್ಯಕ್ಷವನ್ನು ವ್ಯಾವೃತ್ತಿ ಪಡಿಸಲು ಜನ್ಯಸಾಕ್ಷಾತ್ಕಾರವೆಂದಿದೆ. ಸುಖಸಾಕ್ಷಾತ್ಕಾರಕ್ಕೆ ಒಂದು ಕರಣಸಿದ್ಧ ವಾದಂತೆ ದುಃಖಾದಿಸಾಕ್ಷಾತ್ಕಾರಕ್ಕೂ ಒಂದೊಂದುಕರಣಸಿದ್ಧವಾಗಲಿ ಎಂದು ಶಂಕೆ ಬಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಲಾಘವಾತ್—' ಇತಿ. ಒಂದೊಂದು ಸಾಕ್ಷಾತ್ಕಾರಕ್ಕೆ ಒಂದೊಂದು ಕರಣವನ್ನು ಕಲ್ಪಿಸುವುದಕ್ಕಿಂತಲೂ ಲಾಘವ ದಿಂದ ಒಂದುಮನಸ್ಸಿಗೆ ಸಕಲಸಾಕ್ಷಾತ್ಕಾರಕರಣತ್ವವನ್ನು ಹೇಳಿದರೆ ಸಕಲೇಷ್ಟಸಿದ್ಧಿ ಯಾಗುತ್ತದೆ. ಲಾಘವದಿಂದ ಪ್ರಾಣಾದಿಗಳಿಗೆ ಕರಣತ್ವ ಏಕೆ ಹೇಳಬಾರದು ಎಂದು ಕೇಳಿದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಏವಂ—' ಇತಿ. ಭಾವಕಾರ್ಯ ವೆಲ್ಲವೂ ಒಂದು ಅಸಮವಾಯಿಕಾರಣದಿಂದ ಕೂಡಿರುತ್ತವೆ. ಸುಖಾದಿಗಳೂ ಭಾವ ಕಾರ್ಯವಾದುದರಿಂದ ಅವುಗಳಿಗೂ ಸಂಯೋಗರೂಪ ಅಸಮವಾಯಿಕಾರಣವಿರುತ್ತದೆ. ಈ ಸಂಯೋಗಕ್ಕೆ ಆಶ್ರಯರೂಪವಾಗಿ ಮನಸ್ಸು ಸಿದ್ಧಿಸುತ್ತದೆ. ಇದರಿಂದ ಅನುಮಾನ ಹೀಗೆ ತಿಳಿಯಬೇಕು. 'ಸುಖದುಃಖಾದ್ಯಸಮವಾಯಿಕಾರಣಂ ಸಂಯೋಗಃ—ಕ್ವಚಿ ದಾಶ್ರಿತಃ—ಮುಖ್ಯಸಂಬಂಧತ್ವಾತ್ । ಸಮವಾಯವತ್ ॥ ಆ ಸಂಯೋಗಕ್ಕೆ ಆಶ್ರಯ ವಾದದ್ದೇ ಮನಸ್ಸು ಎಂದು ತಿಳಿಯಬೇಕು.

ತತ್ರ ಮನಸೋಽಣುತ್ವೇ ಪ್ರಮಾಣಮಾಹ । ಅಯೌಗಪದ್ಯಾದಿತಿ । ಜ್ಞಾನಾನಾಂ ಚಾಕ್ಷುಷರಾಸನಾದೀನಾಮಯೌಗಪದ್ಯಮೇಕಕಾಲಿಕೋತ್ಪತ್ತಿರ್ನಾಸ್ತೀತ್ಯನುಭವ ಸಿದ್ಧಮ್ । ತತ್ರ ಜ್ಞಾನೇಂದ್ರಿಯಾಣಾಂ ಸತ್ಯಪಿ ವಿಷಯಸಂನಿಧಾನೇ ಯತ್ಸಂ ಬಂಧಾದೇಕೇನೇಂದ್ರಿಯೇಣ ಜ್ಞಾನಮುತ್ಪದ್ಯತೇ, ಯದಸಂಬಂಧಾಚ್ಚ ಪರೈ ರ್ಜ್ಞಾನಂ ನೋತ್ಪದ್ಯತೇ ತನ್ಮನಸೋ ವಿಭುತ್ವೇ ಚಾಸನ್ನಿಧಾನಂ ನ ಸಂಭವತೀತಿ ನ ವಿಭು ಮನಃ ॥

ಕೆಲವರು ಮನಸ್ಸು ವಿಭುವೆಂದೂ, ಇನ್ನು ಕೆಲವರು ಮಧ್ಯಮಪರಿಮಾಣವುಳ್ಳ ದ್ದೆಂದೂ ಹೇಳುತ್ತಾರೆ. ಅದನ್ನು ಖಂಡಿಸಲು ಅಣುತ್ವವನ್ನು ಹೇಳಲು ಭೂಮಿಯನ್ನು ರಚಿಸುತ್ತಾನೆ. 'ತತ್ರ—' ಇತಿ. ಚಾಕ್ಷುಷ, ರಾಸನ ಮುಂತಾದ ಜ್ಞಾನಗಳು ಏಕ ಕಾಲದಲ್ಲಿ ಹುಟ್ಟುವುದಿಲ್ಲವೆಂಬುದು ಸಕಲಾನುಭವಸಿದ್ಧವಾಗಿದೆ. ಏಕೆ ಏಕಕಾಲದಲ್ಲಿ ಆಗಬಾರದು ? ನಯನಾದಿ ಇಂದ್ರಿಯಗಳಿವೆ. ಅವುಗಳಿಗೆ ವಿಷಯಸಂಯೋಗವಾಗು ತ್ತಿದೆ. ಆದರೂ ಅನೇಕ ಜ್ಞಾನವುಂಟಾಗುವುದಿಲ್ಲ. ಅದಕ್ಕೋಸ್ಕರ ಇನ್ನ್ಯಾವುದೋ ಒಂದು ಸಾಧನಕಡಿಮೆಯಾಗಿದೆಯೆಂದು ಸ್ಪಷ್ಟವಾಗುತ್ತದೆ. ಅದೇ ಮನಸ್ಸು. ಯಾವ

ಇಂದ್ರಿಯಕ್ಕೆ ಮನಃಸಂಬಂಧವಾಗಿದೆಯೋ ಅದರಿಂದ ಜ್ಞಾನವುಂಟಾಗುತ್ತದೆ. ಮನಃಸಂಬಂಧವಿಲ್ಲದ ಇಂದ್ರಿಯಗಳಿಗೆ ವಿಷಯಸಂಬಂಧವಿದ್ದರೂ ಜ್ಞಾನವುಂಟಾಗುವುದಿಲ್ಲ. ಮನಸ್ಸು ವಿಭುವಾದರೆ ಅದಕ್ಕೆ ಸರ್ವೇಂದ್ರಿಯಸಂಬಂಧವಿರಬೇಕಾದುದರಿಂದ ಯಾವಾಗಲೂ ಸಕಲಜ್ಞಾನ ಏಕಕಾಲದಲ್ಲಿ ಹುಟ್ಟಬೇಕಾಗುತ್ತದೆ. ಆದುದರಿಂದ ವಿಭುವಾಗುವುದಿಲ್ಲ. ಇದರಿಂದ ಅಣುತ್ವಸಿದ್ಧವಾಗುತ್ತದೆ. ಸೂತ್ರದಲ್ಲಿಯೂ ಹೀಗೆಯೇ ಹೇಳಿವೆ. 'ಯುಗಪತ್ ಜ್ಞಾನಾನುತ್ಪತ್ತಿರ್ಮನಸೋ ಲಿಂಗಮ್' (ನ್ಯಾ.ಸೂ. ೧-೧-೧೬) 'ತದಭಾವಾದಣು ಮನಃ' (ವೈ.ಸೂ. ೭-೧-೨೩) ||

ನ ಚ ತದಾನೀಮದೃಷ್ಟವಿಶೇಷೋದ್ಬೋಧಕವಿಲಂಬಾದೇವ ತಜ್ಜ್ಞಾನವಿಲಂಬ ಇತಿ ವಾಚ್ಯಮ್ । ತಥಾ ಸತಿ ಚಕ್ಷುರಾದೀನಾಮುಸ್ಯಕಲ್ಪನಾಪತ್ತೇಃ । ನ ಚ ದೀರ್ಘಶಷ್ಕುಲೀಭಕ್ಷಣಾದೌ ನಾನಾವಧಾನಭಾಜಾಂ ಚ ಕಥಮೇಕದಾನಾನೇಂದ್ರಿಯಜನ್ಯಜ್ಞಾನಮಿತಿ ವಾಚ್ಯಮ್ । ಮನಸೋಽತಿಲಾಘವಾತ್ ತ್ವರಯಾನಾನೇಂದ್ರಿಯಸಂಬಂಧಾತ್ ನಾನಾಜ್ಞಾನೋತ್ಪತ್ತೇಃ । ಉತ್ಪಲಶತಪತ್ರಭೇದಾದಿವತ್ ಯೌಗಪದ್ಯಪ್ರತ್ಯಯಸ್ಯ ಭ್ರಾಂತತ್ವಾತ್ । ನ ಚ ಮನಸಃ ಸಂಕೋಚವಿಕಾಸಶಾಲಿತ್ವಾತ್ ಉಭಯೋಃಪಪತ್ತಿರಸ್ತ್ವಿತಿ ವಾಚ್ಯಮ್ । ನಾನಾವಯವತನ್ನಾಶಾದಿಕಲ್ಪನೇ ಗೌರವಾಲ್ಲಾಘವಾನ್ನಿರವಯವಸ್ಯಾಣುರೂಪಸ್ಯೈವ ಮನಸಃ ಕಲ್ಪನಾದಿತಿ ಸಂಕ್ಷೇಪಃ || ೮೫ ||

ಪುನಃ ಆಶಂಕಿಸುತ್ತಾನೆ. 'ನಚ—' ಇತಿ. ಅದೃಷ್ಟವೂ ಕಾರ್ಯಸಾಮಾನ್ಯವನ್ನು ಕುರಿತು ಕಾರಣವಾದುದರಿಂದ ಅದೃಷ್ಟವಿಶೇಷೋದ್ಬೋಧಕಸಾಮಗ್ರೀವಿಲಂಬದಿಂದ ಏಕಕಾಲದಲ್ಲಿ ನಾನಾಜ್ಞಾನವುಂಟಾಗುವುದಿಲ್ಲವೆಂದು ಕಲ್ಪಿಸಿದರೆ ದೋಷವೇನು ? ಎಂದು ಆಶಂಕಿಸಬಹುದು. ಅದೃಷ್ಟವಿಲಂಬದಿಂದ ಯುಗಪತ್‌ಜ್ಞಾನಾನುತ್ಪತ್ತಿಕಲ್ಪನೆ ಸರಿಯಲ್ಲವೆಂದು ತೋರಿಸುತ್ತಾನೆ. 'ತಥಾಸತಿ—' ಇತಿ. ಅದೃಷ್ಟವಿಶೇಷದಿಂದಲೇ ಕಾರ್ಯ, ಅದಿಲ್ಲವಾದರೆ ಕಾರ್ಯೋತ್ಪತ್ತಿಯೂ ಇಲ್ಲವೆಂದರೆ ಆಗ ಇದರಿಂದಲೇ ನಿರ್ವಾಹವಾಗುವಾಗ ಚಕ್ಷುರಾದಿಇಂದ್ರಿಯಗಳೂ ಜ್ಞಾನೋತ್ಪತ್ತಿಗೆ ಕಾರಣವೆಂದು ಏಕೆಕಲ್ಪಿಸಬೇಕು. ಅದೂಬೇಡವೆನ್ನಬೇಕಾಗುತ್ತದೆ. ಆದರೆ ಚಾಕ್ಷುಷಾದಿಜ್ಞಾನವು ಚಕ್ಷುರಾದಿ ಇಂದ್ರಿಯಗಳಿಲ್ಲದಿದ್ದರೆ ಹುಟ್ಟುವುದೇ ಇಲ್ಲ. ಅದರಂತೆ ಸುಖದುಃಖಾದ್ಯುಪಲಬ್ಧಿಯೂ ಮನಸ್ಸಿಲ್ಲದಿದ್ದರೆ ಆಗುವುದೇ ಇಲ್ಲ. ಆದುದರಿಂದ ಅದೃಷ್ಟಸಾಮಾನ್ಯಕಾರಣವಾಗುತ್ತದೆ. ಅದರಿಂದ ಸಕಲನಿರ್ವಾಹವಾಗುವುದಿಲ್ಲವೆಂದು ತಿಳಿಯಬೇಕು. ಪುನಃ ಪೂರ್ವಪಕ್ಷಿಯೂ ಶಂಕಿಸುತ್ತಾನೆ. 'ನಚ—' ಇತಿ. ದೀರ್ಘವಾದ ಚಕ್ಕುಲಿ ತಿನ್ನುವಾಗ ನಾನಾವಧಾನಉಳ್ಳವರಿಗೆ ಅಂದರೆ ಏಕಕಾಲದಲ್ಲಿ ನಾನಾಜ್ಞಾನೋತ್ಪಾದನಶಕ್ತಿಯುಳ್ಳ ಕೆಲವು ಜನರಿಗೆ ಹೇಗೆ ಏಕಕಾಲದಲ್ಲಿ (ಯುಗಪತ್‌ಕಾಲಾನವಚ್ಛೇದದಿಂದ) ಚಾಕ್ಷುಷರಾಸನಾದಿನಾನಾಪ್ರತ್ಯಕ್ಷವುಂಟಾಗುತ್ತದೆ ? ಎಂದು ಶಂಕೆಯ ತಾತ್ಪರ್ಯ. ಅದಕ್ಕೆ

ಸಮಾಧಾನ, 'ಮನಸಃ—' ಇತಿ. ಮನಸ್ಸು ಅತಿವೇಗಶಾಲಿಯಾದುದರಿಂದ ನಾನಾವಧಾನವುಳ್ಳವರಿಗೆ ನಾನಾಜ್ಞಾನವುಂಟಾಗಲು ಯಾವತೊಂದರೆಯೂ ಇಲ್ಲ. ಅತಿವೇಗವಿರುವುದರಿಂದ ಬೇಗನೇ ನಾನಾ ಇಂದ್ರಿಯಸಂಬಂಧವನ್ನು ಹೊಂದುತ್ತದೆ. ಅಲ್ಲಿ ಏಕಕಾಲದಲ್ಲಿ ನಾನಾಜ್ಞಾನಹುಟ್ಟುವುದೆಂಬುದು ಭ್ರಾಂತಿ. ನೈದಿಲೆಯನಾನಾದಳಗಳನ್ನು ಸೇರಿಸಿ ಒಂದು ಸೂಜಿಯನ್ನು ಚುಚ್ಚಿದರೆ ಆಗ ಏಕಕಾಲದಲ್ಲಿ ತೂತಾದಂತೆ ತೋರುತ್ತದೆ. ಇದು ಅತಿವೇಗದಿಂದ ಆದುದರಿಂದ ಭ್ರಮೆ. ಒಂದೊಂದನ್ನು ಭೇದಿಸದೆ ಏಕಕಾಲದಲ್ಲಿ ಕೆಳಗೆ ಹೋಗುವುದಿಲ್ಲ. ಮೃದುವಾದುದರಿಂದ ವಿಲಂಬಗೋಚರವಾಗುವುದಿಲ್ಲ. ಅದರಂತೆ ಜ್ಞಾನವು ಒಂದೊಂದೇ ಹುಟ್ಟುತ್ತದೆ. ಬೇಗ ಉಂಟಾಗುವುದರಿಂದ ಅಲ್ಲಿ ಕ್ಷಣವಿಳಂಬ ಗೋಚರವಾಗುವುದಿಲ್ಲ. ಅವರಿಂದ ಏಕಕಾಲವಲ್ಲಿ ನಾನಾಜ್ಞಾನಗಳು ಹುಟ್ಟಿದಂತಾಗುತ್ತವೆ. ಪುನಃ ಪೂರ್ವಪಕ್ಷಿಯು ಶಂಕಿಸುತ್ತಾನೆ. 'ನಚ—' ಇತಿ. ಮನಸ್ಸು ಸಂಕುಚಿತವಾದಾಗ ಒಂದೇ ಇಂದ್ರಿಯದ ಸಂಬಂಧವಾಗುತ್ತದೆ. ವಿಕಾಸಹೊಂದಿದಾಗ ನಾನೇಂದ್ರಿಯಗಳಸಂಬಂಧವುಂಟಾಗುತ್ತವೆ. ಆದುದರಿಂದ ಅಣುವಲ್ಲವೆಂದು ಶಂಕೆಯತಾತ್ಪರ್ಯ. ಇದೂ ಸರಿಯಲ್ಲವೆಂದು ಖಂಡಿಸುತ್ತಾನೆ. 'ನಾನಾವಯ—' ಇತಿ. ಲಾಘವದಿಂದ ಮನಸ್ಸು ಅಣುವೆಂದು ಅಂಗೀಕರಿಸಿ ಅತಿವೇಗಶಾಲಿಯೆಂದು ಕಲ್ಪಿಸುವುದರಿಂದ ಸಕಲೇಷ್ಟಸಿದ್ಧಿಯಾಗುವಾಗ ವ್ಯರ್ಥವಾಗಿ ಅವಯವನಾಶಾದಿಕಲ್ಪನೆಯಿಂದ ಗೌರವವನ್ನು ಏಕೆ ಅಂಗೀಕರಿಸಬೇಕು ? ಆದುದರಿಂದ ಸಂಕೋಚವಿಕಾಸಕಲ್ಪನೆ ಅನ್ಯಾಯವೆಂದು ತಾತ್ಪರ್ಯ.

೯. ದ್ರವ್ಯಪದಾರ್ಥನಿರೂಪಣೆ ಮುಗಿದಿದೆ.

**ಅಥ ದ್ರವ್ಯಾಶ್ರಿತಾ ಜ್ಞೇಯಾ ನಿರ್ಗುಣಾ ನಿಷ್ಕ್ರಿಯಾ ಗುಣಾಃ ॥**

ದ್ರವ್ಯಂ ನಿರೂಪ್ಯ ಗುಣಾನ್ನಿರೂಪಯತಿ—ಗುಣತ್ವಜಾತೌ ಕಿಂ ಮಾನಮಿತಿಚೇತ್, ದ್ರವ್ಯಕರ್ಮಭಿನ್ನೇ ಸಾಮಾನ್ಯವತಿ ಯಾ ಕಾರಣತಾ ಸಾ—ಕಿಂಚಿದ್ಧರ್ಮಾವಚ್ಛಿನ್ನಾ—ನಿರವಚ್ಛಿನ್ನಕಾರಣತಾಯಾ ಅಸಂಭವಾತ್ । ನ ಹಿ ರೂಪತ್ವಾದಿಕಂ ಸತ್ತಾ ವಾ ತತ್ರಾವಚ್ಛೇದಿಕಾ, ನ್ಯೂನಾತಿರಿಕ್ತದೇಶವೃತ್ತಿತ್ವಾತ್ । ಅತಶ್ಚತುರ್ವಿಂಶತ್ಯನುಗತಂ ಕಿಂಚಿತ್‌ವಾಚ್ಯಂ, ತದೇವ ಗುಣತ್ವಮಿತಿ ಸಿದ್ಧಮ್ ॥

ಮೊದಲನೆಯ ಪದಾರ್ಥವಾದ ದ್ರವ್ಯದ ಒಂಬತ್ತು ಭೇದಗಳನ್ನೂ ವಿವರಿಸಿ ಈಗ ಅವಸರಸಂಗತಿಯಿಂದ ಗುಣನಿರೂಪಣೆಗೆ ಆರಂಭಿಸುತ್ತಾನೆ. 'ಅಥ—' ಇತಿ. ('ದ್ರವ್ಯಂ ನಿರೂಪ್ಯ ಗುಣಾನ್ನಿರೂಪಯತಿ' ಎಂಬುದಕ್ಕೆ ಶಾಬ್ದಬೋಧ. 'ದ್ರವ್ಯನಿರೂಪೋತ್ತರಕಾಲಿಕ, ದ್ರವ್ಯನಿರೂಪಣಸಮಾನಕರ್ತೃಕಗುಣಕರ್ಮಕನಿರೂಪಣಾನುಕೂಲ ಕೃತಿಮಾನ್ ಗ್ರಂಥಕಾರಃ') ದ್ರವ್ಯಾಶ್ರಿತಾಃ—ಕೇವಲ ದ್ರವ್ಯವನ್ನಾಶ್ರಯಿಸಿರುವವುಗಳು ನಿರ್ಗುಣಾಃ—ಗುಣರಹಿತವಾದವುಗಳು (ಗುಣದಲ್ಲಿ ಗುಣವಿಲ್ಲ) ನಿಷ್ಕ್ರಿಯಾಃ—ಕರ್ಮ

ರಹಿತವಾದವುಗಳು. (ದ್ರವ್ಯತ್ವವ್ಯಾಪಕತಾವಚ್ಛೇದಕ ಸತ್ತಾನ್ಯಜಾತಿಮತ್ತ್ವಂ, ದ್ರವ್ಯಾಶ್ರಿತತ್ವಂ, । ಸಾಮಾನ್ಯವತ್ತ್ವೇ ಸತಿ, ಕರ್ಮಾನ್ಯತ್ವೇ ಚ ಸತಿ ಗುಣಶೂನ್ಯತ್ವಂ, ನಿರ್ಗುಣತ್ವಂ, । ಸಾಮಾನ್ಯವತ್ತ್ವೇಸತಿ, ಕರ್ಮಾನ್ಯತ್ವೇಸತಿ, ಕರ್ಮವದವೃತ್ತಿ ಪದಾರ್ಥವಿಭಾಜಕೋಪಾಧಿಮತ್ತ್ವಂ ನಿಷ್ಕ್ರಿಯತ್ವಂ ಎಂಬ ಪರಿಷ್ಕೃತಲಕ್ಷಣ ತಿಳಿಯಬೇಕು.) 'ಸಾಮಾನ್ಯವತ್ತ್ವೇಸತಿ, ಕರ್ಮಾನ್ಯತ್ವೇಸತಿ, ನಿರ್ಗುಣತ್ವಂ' ಇದು ಗುಣ ಸಾಮಾನ್ಯಲಕ್ಷಣವಾಗುತ್ತದೆ. ಸಾಮಾನ್ಯ (ಜಾತಿ) ಕರ್ಮ, ದ್ರವ್ಯಗಳಲ್ಲಿ ಅತಿವ್ಯಾಪ್ತಿ ವಾರಣೆಗೋಸ್ಕರ ಕ್ರಮವಾಗಿ ಆಯಾಯದಳ ಹೇಳಿದೆ.

ಗುಣತ್ವ ಜಾತಿಯಲ್ಲಿ ಪ್ರಮಾಣತೋರಿಸುತ್ತಾನೆ. 'ದ್ರವ್ಯಕರ್ಮಭಿನ್ನೇ—' ಇತಿ. ಅನುಮಾನವೇ ಪ್ರಮಾಣವೆಂದು ತಿಳಿಯಬೇಕು. ಕಾರಣತ್ವ ಯಾವಾಗಲೂ ಯಾವುದಾದರೊಂದು ಅವಚ್ಛೇದಕಧರ್ಮದಿಂದಕೂಡಿರುತ್ತದೆ. ನಿರವಚ್ಛಿನ್ನಕಾರಣತ್ವ ಎಲ್ಲಿಯೂ ಇಲ್ಲ. ಪ್ರಕೃತದ್ರವ್ಯ, ಕರ್ಮಭಿನ್ನವಾದ ಜಾತಿಯಿಂದಕೂಡಿದಗುಣದಲ್ಲಿರುವ ಕಾರಣತೆಯೂ ಒಂದು ಅವಚ್ಛೇದಕಧರ್ಮದಿಂದ ಕೂಡಿರಲೇಬೇಕು. ಆ ಅವಚ್ಛೇದಕ ಧರ್ಮವೇ ಗುಣತ್ವಜಾತಿಯಾಗುತ್ತದೆ. ಆಧರ್ಮ ರೂಪತ್ವಾದಿಗಳು ಏಕೆ ಆಗಬಾರದು ಎಂದು ಶಂಕೆ ಬಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ನಹಿ—' ಇತಿ. ಅವಚ್ಛೇದಕಧರ್ಮವಾಗಬೇಕಾದರೆ ಅದು ಅನ್ಯೂನಾನತಿರಿಕ್ತವೃತ್ತಿಯಾಗಿರಬೇಕು. ನ್ಯೂನದೇಶವೃತ್ತಿಯೂ, ಅಧಿಕದೇಶವೃತ್ತಿಯೂ ಆಗದೆ ಕಾರಣತಾಸಮನಿಯತಧರ್ಮವಾಗಿರಬೇಕು. ಅಂದರೆ ಕಾರಣತ್ವ ಇದ್ದಲ್ಲಿ ಎಲ್ಲಾ ಕಡೆಯಲ್ಲಿಯೂ ಇರಬೇಕೆಂದರ್ಥ. ಅದೇ ಕಾರಣತಾವಚ್ಛೇದಕಧರ್ಮವಾಗುತ್ತದೆ. ಪ್ರಕೃತ ರೂಪತ್ವವು ಗುಣನಿಷ್ಠ ಕಾರಣತಾಸಮನಿಯತವಾಗುವುದಿಲ್ಲ. ರೂಪತ್ವವು ರೂಪದಲ್ಲಿಮಾತ್ರವಿರುತ್ತದೆ. ರಸಾದಿಗುಣದಲ್ಲಿರುವುದಿಲ್ಲ. ಆದುದರಿಂದ ನ್ಯೂನವೃತ್ತಿಯಾಗುತ್ತದೆ. ಸತ್ತಾ ಜಾತಿಯು ಸಕಲಗುಣದಲ್ಲಿದ್ದರೂ ಗುಣನಿಷ್ಠಕಾರಣತಾಸಮನಿಯತವಾಗುವುದಿಲ್ಲ. ದ್ರವ್ಯಕರ್ಮಗಳಲ್ಲಿಯೂ ಇರುವುದರಿಂದ ಅಧಿಕದೇಶವೃತ್ತಿಯಾಗುತ್ತದೆ. ಆದುದರಿಂದ ೨೪ ಗುಣಗಳಲ್ಲಿಯೂ ಅನುಗತವಾಗಿರುವ ಗುಣತ್ವವೇ ಗುಣನಿಷ್ಠಕಾರಣತಾವಚ್ಛೇದಕ ಧರ್ಮವಾಗುತ್ತದೆ. ರೂಪಾದಿಗಳಲ್ಲಿ ಸಂಯುಕ್ತಸಮವೇತಸಮವಾಯದಿಂದ ಗುಣತ್ವ ಪ್ರತ್ಯಕ್ಷ ಸಂಭವಿಸಿದರೂ, ಅತೀಂದ್ರಿಯರೂಪಾದಿಗಳಲ್ಲಿ ಗುಣತ್ವಪ್ರತ್ಯಕ್ಷ ಸಂಭವಿಸದಿರುವುದರಿಂದ ಅನುಮಾನಪ್ರಮಾಣತೋರಿಸಿದೆ.

ದ್ರವ್ಯಾಶ್ರಿತಾ ಇತಿ । ಯದ್ಯಪಿ ದ್ರವ್ಯಾಶ್ರಿತತ್ವಂ ನ ಲಕ್ಷಣಂ, ಕರ್ಮಾದಾವತಿವ್ಯಾಪ್ತೇಃ, ತಥಾಪಿ ದ್ರವ್ಯತ್ವವ್ಯಾಪಕತಾವಚ್ಛೇದಕಸತ್ತಾಭಿನ್ನಜಾತಿಮತ್ತ್ವಂ ತದರ್ಥಃ । ಭವತಿ ಹಿ ಗುಣತ್ವಂ ದ್ರವ್ಯತ್ವವ್ಯಾಪಕತಾವಚ್ಛೇದಕಂ ತದ್ವತ್ತಾ ಚ ಗುಣಾನಾಮಿತಿ । ದ್ರವ್ಯತ್ವಂ ಕರ್ಮತ್ವಂ ವಾ ನ ದ್ರವ್ಯತ್ವವ್ಯಾಪಕತಾವಚ್ಛೇದಕಂ,

ಗಗನಾದೌ ದ್ರವ್ಯಕರ್ಮಣೋರಭಾವಾತ್ । ದ್ರವ್ಯತ್ವತ್ವಂ ಸಾಮಾನ್ಯತ್ವಾದಿಕಂ ವಾ ನ ಜಾತಿರಿತಿ ತದ್ವ್ಯುದಾಸಃ ॥

ಕಾರಿಕೆಯಲ್ಲಿ 'ದ್ರವ್ಯಾಶ್ರಿತಃ' ಎಂದು ಹೇಳಿದೆ. ಅದಕ್ಕೆ ಯಥಾಶ್ರುತವಾದ ಅರ್ಥವನ್ನಂಗೀಕರಿಸಿದರೆ ಅತಿವ್ಯಾಪ್ತಿಬರುವುದರಿಂದ ಪರಿಷ್ಕರಿಸಬೇಕೆಂಬ ಅಭಿಪ್ರಾಯ ದಿಂದ ಪ್ರತೀಕವನ್ನು ತೋರಿಸುತ್ತಾನೆ. 'ದ್ರವ್ಯಾಶ್ರಿತಾ—' ಇತಿ, ದ್ರವ್ಯವನ್ನಾಶ್ರಯಿ ಸಿರುವುದು ಎಂದು ಹೇಳಿದರೆ ಕರ್ಮ, ಸಾಮಾನ್ಯವೂ ದ್ರವ್ಯವನ್ನಾಶ್ರಯಿಸಿರುವುದರಿಂದ ಅತಿವ್ಯಾಪ್ತಿಬರುತ್ತದೆ. ಆದುದರಿಂದ ಪರಿಷ್ಕರಿಸುತ್ತಾನೆ. 'ತಥಾಪಿ—' ಇತಿ. ದ್ರವ್ಯತ್ವದಿಂದ ನಿರೂಪಿತವಾದ ವ್ಯಾಪಕತಾದಲ್ಲಿ ಅವಚ್ಛೇದಕವಾದ ಸತ್ತಾಭಿನ್ನ ಜಾತಿ ಯಾವುದಿದೆಯೋ ಅದರಿಂದ ಕೂಡಿರುವುದು ಗುಣವಾಗುತ್ತದೆ. (ದ್ರವ್ಯತ್ವನಿರೂಪಿತಾ ಯಾ ಗುಣನಿಷ್ಠಾ ವ್ಯಾಪಕತಾ, ತಾದೃಶವ್ಯಾಪಕತಾಯಾಃ ಅವಚ್ಛೇದಕಾ ಯಾ ಸತ್ತಾ ಭಿನ್ನಾ ಜಾತಿಃ (ಅರ್ಥಾತ್ ಗುಣತ್ವಂ) ತಾದೃಶಗುಣತ್ವಜಾತಿಮತ್ತ್ವಂ ಸರ್ವೇಷು ರೂಪಾದಿಷು ವರ್ತತೇ) ಲಕ್ಷಣವನ್ನು ಹೇಳಿ ಲಕ್ಷ್ಯದಲ್ಲಿ ಅನ್ವಯಿಸಿ ತೋರಿಸುತ್ತಾನೆ. 'ಭವತಿ—' ಇತಿ. ಗುಣತ್ವರೂಪಜಾತಿಯೇ ದ್ರವ್ಯತ್ವವ್ಯಾಪಕತಾವಚ್ಛೇದಕವಾಗು ತ್ತದೆ. ಇದು ಉಳ್ಳದ್ದು ರೂಪಾದಿ ಇಪ್ಪತ್ತನಾಲ್ಕು ಗುಣಗಳೂ ಆಗುತ್ತವೆ. ದ್ರವ್ಯತ್ವ ವಾಗಲೀ ಕರ್ಮತ್ವವಾಗಲೀ ದ್ರವ್ಯತ್ವವ್ಯಾಪಕತಾವಚ್ಛೇದಕವಾಗುವುದಿಲ್ಲ. ಎಲ್ಲಾದ್ರವ್ಯ ಗಳಲ್ಲಿ ದ್ರವ್ಯವಾಗಲೀ, ಕರ್ಮವಾಗಲೀ ಇರುವುದಾದರೆ ಆಗ ದ್ರವ್ಯತ್ವನಿರೂಪಿತ ವ್ಯಾಪಕತಾ ದ್ರವ್ಯದಲ್ಲಿ ಅಥವಾ ಕರ್ಮದಲ್ಲಿಬರಬಹುದು. ಆಗ ದ್ರವ್ಯತ್ವ, ಅಥವಾ ಕರ್ಮತ್ವಜಾತಿಯು ವ್ಯಾಪಕತಾವಚ್ಛೇದಕವಾಗಬಹುದು. ಆದರೆ ಆಕಾಶಾದಿ ಐದು ದ್ರವ್ಯಗಳಲ್ಲಿ ಯಾವ ದ್ರವ್ಯವೂ ಸಮವಾಯಸಂಬಂಧದಿಂದ (ಆಧೇಯವಾಗಿ) ಇಲ್ಲ. ಆಕಾಶಾದಿನಾಲ್ಕುವಿಭುದ್ರವ್ಯಗಳಲ್ಲಿ ಯಾವಕರ್ಮವೂ ಇಲ್ಲ. ವಿಭುಪದಾರ್ಥಗಳಲ್ಲಿ ಕ್ರಿಯಾ ಇಲ್ಲವೆಂದು ನಿಯಮ. ಆದುದರಿಂದ ದ್ರವ್ಯತ್ವವಾಗಲೀ, ಕರ್ಮತ್ವವಾಗಲೀ ದ್ರವ್ಯತ್ವನಿರೂಪಿತ ವ್ಯಾಪಕತಾವಚ್ಛೇದಕವಾಗುವುದಿಲ್ಲ. ದ್ರವ್ಯತ್ವದಲ್ಲಿರುವ ದ್ರವ್ಯತ್ವತ್ವ ವಾಗಲೀ, ಕರ್ಮತ್ವದಲ್ಲಿರುವ ಕರ್ಮತ್ವತ್ವವಾಗಲೀ ಜಾತಿಯಲ್ಲ. ಅದು ಉಪಾಧಿ ರೂಪವಾಗುತ್ತದೆ. ಜಾತಿಭಿನ್ನವಾದ ಧರ್ಮವೇಉಪಾಧಿ. ಹೀಗೆ ಜಾತಿಪದನಿವೇಶ ದಿಂದ ಅದಕ್ಕೂ ವ್ಯಾವೃತ್ತಿಬರುತ್ತದೆ.

ನಿರ್ಗುಣಾ ಇತಿ । ಯದ್ಯಪಿ ನಿರ್ಗುಣತ್ವಂ ಕರ್ಮಾದಾವಪಿ, ತಥಾಪಿ ಸಾಮಾನ್ಯವತ್ತ್ವೇ ಸತಿ ಕರ್ಮಾನ್ಯತ್ವೇ ಚ ಸತಿ ನಿರ್ಗುಣತ್ವಂ ಬೋಧ್ಯಮ್ । ಜಾತ್ಯಾದೀನಾಂ ನ ಸಾಮಾನ್ಯವತ್ತ್ವಂ, ಕರ್ಮಣೋ ನಕರ್ಮಾನ್ಯತ್ವಂ, ದ್ರವ್ಯಸ್ಯ ನ ನಿರ್ಗುಣತ್ವ ಮಿತಿ ತತ್ರ ನಾತಿವ್ಯಾಪ್ತಿಃ । ನಿಷ್ಕ್ರಿಯಾ ಇತಿ ಸ್ವರೂಪಕಥನಂ ನತು ಲಕ್ಷಣಂ ಗಗನಾದಾವತಿವ್ಯಾಪ್ತೇಃ ॥

'ನಿರ್ಗುಣಾ' ಎಂಬುದಕ್ಕೂ ಅರ್ಥವಿಶೇಷವಿವಕ್ಷಾಮಾಡಬೇಕೆಂದು ತೋರಿಸುತ್ತಾನೆ. 'ಯದ್ಯಪಿ—' ಇತಿ. ಸಾಮಾನ್ಯವಾಗಿ ಗುಣಶೂನ್ಯವುಳ್ಳದ್ದು ಎಂದು ಅರ್ಥ ಹೇಳಿದರೆ ಆಗ ಕರ್ಮಾದಿಗಳಲ್ಲಿಯೂ ಗುಣಶೂನ್ಯವಿರುವುದರಿಂದ ಅತಿವ್ಯಾಪ್ತಿ ಬರುತ್ತದೆ. ಆದುದರಿಂದ 'ಸಾಮಾನ್ಯವತ್ತ್ವೇ—' ಇತ್ಯಾದಿ ಪರಿಷ್ಕೃತಲಕ್ಷಣವನ್ನು ಹೇಳಬೇಕು. ಸಾಮಾನ್ಯದಲ್ಲಿ, ಕರ್ಮದಲ್ಲಿ ದ್ರವ್ಯದಲ್ಲಿ ಕ್ರಮವಾಗಿ ಅತಿವ್ಯಾಪ್ತಿವಾರಣೆಗೋಸ್ಕರಮೂರು ದಳಗಳು ಹೇಳಿವೆ. 'ನಿಷ್ಕ್ರಿಯಾಃ—' ಇತಿ. ಕ್ರಿಯಾತ್ಯಂತಾಭಾವವುಳ್ಳದ್ದು ಎಂದರ್ಥ. ಇದು ಲಕ್ಷಣವಲ್ಲ. ಕೇವಲಸ್ವರೂಪಕಥನ. ಗುಣದಲ್ಲಿ ಕ್ರಿಯಾ ಇಲ್ಲವೆಂದು ವಾಸ್ತವಸ್ಥಿತಿಯನ್ನು ತಿಳಿಸುವುದೆಂದರ್ಥ. ಲಕ್ಷಣವೆಂದರೆ ಗಗನಾದಿಗಳಲ್ಲಿಯೂ ಕ್ರಿಯಾತ್ಯಂತಾಭಾವವಿರುವುದರಿಂದ ಅತಿವ್ಯಾಪ್ತಿ ಬರುತ್ತದೆ.

**ರೂಪಂ ರಸಃ ಸ್ಪರ್ಶಗಂಧೌ ಪರತ್ವಮಪರತ್ವಕಮ್ ॥ ೮೬ ॥**
**ದ್ರವತ್ವಂ ಸ್ನೇಹವೇಗಾಶ್ಚ ಮತಾ ಮೂರ್ತಗುಣಾ ಅಮೀ ॥**

ಮೂರ್ತಗುಣಾ ಇತಿ । ಅತ್ರ ವೇಗೇನ ಸ್ಥಿತಿಸ್ಥಾಪಕೋऽಪ್ಯುಪಲಕ್ಷಣೀಯಃ । ಅಮೂರ್ತೇಷು ನ ವರ್ತಂತೇ ಇತ್ಯರ್ಥಃ । ಲಕ್ಷಣಂತು ತಾವದನ್ಯಾನ್ಯತ್ವಮ್ । ಏವಮಗ್ರೇऽಪಿ ॥

ಈಗ ಗುಣಗಳ ಸಾಧರ್ಮ್ಯವನ್ನೂ, ಅವುಗಳಲ್ಲಿ ವಿಶೇಷವಿಷಯವನ್ನೂ ಹೇಳಲು ಆರಂಭಿಸುತ್ತಾನೆ. 'ರೂಪಂ—' ಇತಿ. ರೂಪಾದಿ ಹದಿನಾಲ್ಕುಗುಣಗಳಿಗೆ ಮೂರ್ತಗುಣಗಳೆಂದು ಹೆಸರು. ಮೂರ್ತಗುಣವೆಂದರೆ ಮೂರ್ತಪದಾರ್ಥಗಳಲ್ಲಿರುವ ಗುಣಗಳೆಂದು ಅರ್ಥವಲ್ಲ. ಹಾಗೆ ಹೇಳಿದರೆ ಸಂಖ್ಯಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಅದಕ್ಕೋಸ್ಕರ ಅಮೂರ್ತಗಳಲ್ಲಿ ಇಲ್ಲದಿರುವ ಗುಣಗಳೆಂದು ಅರ್ಥಮಾಡಬೇಕು. 'ರೂಪರಸಾದ್ಯನ್ಯತಮತ್ವಂ' ಎಂಬ ಸಾಮಾನ್ಯಲಕ್ಷಣ. ಹೀಗೆಯೇ ಮುಂದೆಯೂ ಸಾಮಾನ್ಯಲಕ್ಷಣವನ್ನು ತಿಳಿಯಬೇಕು. 'ವಿಭ್ವವೃತ್ತಿಸಂಖ್ಯಾದಿಪಂಚಕಭಿನ್ನಗುಣತ್ವಂ' ಮೂರ್ತಗುಣತ್ವವೆಂದು ನಿಷ್ಕೃಷ್ಟಲಕ್ಷಣ ತಿಳಿಯಬೇಕು. 'ಅಮೂರ್ತಾವೃತ್ತಿಗುಣತ್ವಂ' ಇದು ರೂಪಾದಿವೇಗಾಂತಗುಣಗಳ ಸಾಧರ್ಮ್ಯ. ವೇಗಪದದಿಂದ ಭಾವನಾಖ್ಯಸಂಸ್ಕಾರ ತೋರುವುದರಿಂದ ಉಪಲಕ್ಷಣೆಯಿಂದ ಸ್ಥಿತಿಸ್ಥಾಪಕರೂಪವೇಗವನ್ನೂ ತೆಗೆದುಕೊಳ್ಳಬೇಕು.

**ಧರ್ಮಾಧರ್ಮೌ ಭಾವನಾ ಚ ಶಬ್ದೋ ಬುದ್ಧ್ಯಾದಯೋऽಪಿಚ ॥ ೮೭ ॥**
**ಏತೇऽಮೂರ್ತಗುಣಾಃ ಸರ್ವೇ ವಿದ್ವದ್ಭಿಃ ಪರಿಕೀರ್ತಿತಾಃ ॥**

ಅಮೂರ್ತಗುಣಾ ಇತಿ ಮೂರ್ತೇಷು ನ ವರ್ತಂತೇ ಇತ್ಯರ್ಥಃ ॥

ಈಗ ಅಮೂರ್ತಗುಣಗಳನ್ನು ತೋರಿಸುತ್ತಾನೆ. 'ಧರ್ಮಾಧರ್ಮೌ—' ಇತಿ.

ಧರ್ಮಾದಿಗಳು ಮೂರ್ತಪದಾರ್ಥಗಳಲ್ಲಿರುವುದಿಲ್ಲ. 'ಮೂರ್ತಾವೃತ್ತಿಗುಣತ್ವಂ' ಎಂಬುದು ಧರ್ಮಾದಿಗಳ ಸಾಧರ್ಮ್ಯ. 'ಮೂರ್ತಾವೃತ್ತಿಸಂಖ್ಯಾದಿಪಂಚಕಭಿನ್ನ ಗುಣತ್ವಂ' ಎಂಬುದು ನಿಷ್ಕೃಷ್ಟಲಕ್ಷಣವಾಗುತ್ತದೆ. ||

**ಸಂಖ್ಯಾದಯೋ ವಿಭಾಗಾಂತಾ ಉಭಯೇಷಾಂ ಗುಣಾ ಮತಾಃ || ೮೮ ||**

ಉಭಯೇಷಾಮಿತಿ | ಮೂರ್ತಾಮೂರ್ತಗುಣಾ ಇತ್ಯರ್ಥಃ || ೮೯ ||

ಸಂಖ್ಯಾ, ಪರಿಮಾಣ, ಪೃಥಕ್ತ್ವ, ಸಂಯೋಗ, ವಿಭಾಗ—ಗುಣಗಳು ಮೂರ್ತಾ ಮೂರ್ತಗುಣಗಳಾಗುತ್ತವೆ. 'ಮೂರ್ತಾಮೂರ್ತಗುಣತ್ವಂ' ಎಂಬುದು ಇವುಗಳ ಸಾಧರ್ಮ್ಯ.

**ಸಂಯೋಗಶ್ಚ ವಿಭಾಗಶ್ಚ ಸಂಖ್ಯಾ ದ್ವಿತ್ವಾದಿಕಾಸ್ತಥಾ |**
**ದ್ವಿಪೃಥಕ್ತ್ವಾದಯಸ್ತದ್ವದೇತೇಽನೇಕಾಶ್ರಿತಾ ಗುಣಾಃ || ೮೯ ||**

ಅನೇಕಾಶ್ರಿತಾ ಇತಿ | ಸಂಯೋಗವಿಭಾಗದ್ವಿತ್ವಾದೀನಿ ದ್ವಿವೃತ್ತೀನಿ | ತ್ರಿತ್ವಚತುಷ್ಟ್ವಾದಿಕಂ ತ್ರಿಚತುರಾದಿವೃತ್ತೀತಿ ಬೋಧ್ಯಮ್ || ೮೯ ||

ಅನೇಕಪದಾರ್ಥವೃತ್ತಿಗುಣಗಳನ್ನು ತೋರಿಸುತ್ತಾನೆ. 'ಸಂಯೋಗಶ್ಚ—' ಇತಿ 'ಅನೇಕಾಶ್ರಿತಗುಣತ್ವಂ' ಸಂಯೋಗಾದಿಗಳ ಸಾಧರ್ಮ್ಯವಾಗುತ್ತದೆ. ದ್ವಿವೃತ್ತಿ—ಪದಾರ್ಥದ್ವಯವೃತ್ತಿ ಎಂದರ್ಥ. ಅನೇಕಾಶ್ರಿತ ಎಂಬಲ್ಲಿ 'ನ ಏಕಾಶ್ರಿತಾಃ' ಎಂದು ಸಮಾಸಮಾಡಬಾರದು. ಹಾಗೆ ಹೇಳಿದರೆ ಸಂಯೋಗಾದಿಗಳು ದ್ವಿವೃತ್ತಿಯಾದರೂ ಏಕಾಶ್ರಿತವಾಗಿಯೂ ಇರುತ್ತದೆ. ಆದಕ್ಕೋಸ್ಕರ 'ನ ಏಕಂ, ಅನೇಕಂ' 'ಅನೇಕಂ ಆಶ್ರಿತಾಃ' ಅನೇಕಾಶ್ರಿತಾಃ' ಎಂದು ವಿಗ್ರಹಮಾಡಬೇಕು ದ್ವಿಪೃಥಕ್ತ್ವ ಅಂದರೆ ದ್ವಿತ್ವಾದಿಸಮಾನಾಧಿಕರಣಪೃಥಕ್ತ್ವವೆಂದರ್ಥ. (ದ್ವಿತ್ವವಿರುವಲ್ಲಿರುವ ಪೃಥಕ್ತ್ವ)

**ಅತಃ ಶೇಷಗುಣಾಃ ಸರ್ವೇ ಮತಾ ಏಕೈಕವೃತ್ತಯಃ ||**

ರೂಪರಸಗಂಧಸ್ಪರ್ಶೈಕತ್ವಪರಿಮಾಣೈಕಪೃಥಕ್ತ್ವಪರತ್ವಾಪರತ್ವಬುದ್ಧಿಸುಖದುಃಖೇಚ್ಛಾದ್ವೇಷಪ್ರಯತ್ನಗುರುತ್ವದ್ರವತ್ವ ಸ್ನೇಹಸಂಸ್ಕಾರಾದೃಷ್ಟಶಬ್ದಾಃ ಇತ್ಯರ್ಥಃ ||

ಒಂದು ಪದಾರ್ಥದಲ್ಲಿರುವ ಗುಣವನ್ನು ಹೇಳುತ್ತಾನೆ. 'ಶೇಷಾಗುಣಾಃ—' ಇತಿ. ರೂಪಾದಿಗಳು ಏಕೈಕವೃತ್ತಿಯಾಗಿರುತ್ತವೆ. 'ಏಕೈಕವೃತ್ತಿಗುಣತ್ವಂ' ಇವುಗಳ ಸಾಧರ್ಮ್ಯ.

**ಬುದ್ಧ್ಯಾದಿಷಟ್ಕಂ ಸ್ಪರ್ಶಾಂತಾಃ ಸ್ನೇಹಃ ಸಾಂಸಿದ್ಧಿಕೋ ದ್ರವಃ || ೯೦ ||**

**ಅದೃಷ್ಟಭಾವನಾಶಬ್ದಾ ಅಮೀ ವೈಶೇಷಿಕಾ ಗುಣಾಃ ।**

ಬುದ್ಧಿಸುಖದುಃಖೇಚ್ಛಾದ್ವೇಷಪ್ರಯತ್ನಾ ಇತ್ಯರ್ಥಃ । ಸ್ಪರ್ಶಾಂತಾಃ ರೂಪರಸಗಂಧಸ್ಪರ್ಶಾ ಇತ್ಯರ್ಥಃ । ದ್ರವಃ ದ್ರವತ್ವಮ್ । ವೈಶೇಷಿಕಾ ಇತಿ । ವಿಶೇಷಾಏವ ವೈಶೇಷಿಕಾಃ । ಸ್ವಾರ್ಥೇ ಠಕ್ । ವಿಶೇಷಗುಣಾ ಇತ್ಯರ್ಥಃ ॥

ವಿಶೇಷಗುಣಗಳನ್ನು ತೋರಿಸುತ್ತಾನೆ. ಬುದ್ಧ್ಯಾದಿ—' ಇತಿ. ಮುಕ್ತಾವಳಿಯಲ್ಲಿ ಬುದ್ಧ್ಯಾದಿಗಳನ್ನು ವಿವರಿಸಿರುತ್ತಾನೆ. ಅದೃಷ್ಟಪದದಿಂದ ಧರ್ಮ, ಅಧರ್ಮಗಳನ್ನೂ ಭಾವನಾಪದದಿಂದ ಭಾವನಾಖ್ಯಸಂಸ್ಕಾರವನ್ನೂ ತೆಗೆದುಕೊಳ್ಳಬೇಕು. ಹೀಗೆ ಹದಿನಾರು ವಿಶೇಷಗುಣಗಳಾಗುತ್ತವೆ. 'ವಿನಯಾದಿಭ್ಯಷ್ಠಕ್' ಸೂತ್ರದಿಂದ ವಿಶೇಷಪದದಮೇಲೆ ಠಕ್ ಪ್ರತ್ಯಯ ಬಂದು ಅದಕ್ಕೆ ಇಕಾದೇಶ ಬಂದಿದೆ. ಕಿತ್ತ್ವಾದುದರಿಂದ ಆದಿವೃದ್ಧಿ. ಸ್ವಾಶ್ರಯವನ್ನು ಇತರಪದಾರ್ಥಗಳಿಂದ ವ್ಯವಚ್ಛೇದಪಡಿಸುವುದರಿಂದ ವೈಶೇಷಕಗುಣವೆಂದು ಹೆಸರು. 'ಭಾವನಾನ್ಯೋ ಯೋ ವಾಯ್ವವೃತ್ತಿಸ್ಪರ್ಶಾವೃತ್ತಿಧರ್ಮಸಮವಾಯೀ ತದನ್ಯತ್ವೇ ಸತಿ ಗುರುತ್ವನೈಮಿತ್ತಿಕದ್ರವತ್ವಾನ್ಯಗುಣತ್ವಂ' ವಿಶೇಷಗುಣತ್ವಂ ಎಂದು ದಿನಕರಿಯಲ್ಲಿ ಪರಿಷ್ಕೃತಲಕ್ಷಣ ಹೇಳಿದೆ.

**ಸಂಖ್ಯಾದಿರಪರತ್ವಾಂತೋ ದ್ರವೋಽಸಾಂಸಿದ್ಧಿಕಸ್ತಥಾ ॥ ೯೧ ॥**
**ಗುರುತ್ವವೇಗೌ ಸಾಮಾನ್ಯಗುಣಾ ಏತೇ ಪ್ರಕೀರ್ತಿತಾಃ ॥**

ಸಂಖ್ಯಾದಿರಿತಿ । ಸಂಖ್ಯಾಪರಿಮಾಣಪೃಥಕ್ತ್ವಸಂಯೋಗವಿಭಾಗಪರತ್ವಾನೀತ್ಯರ್ಥಃ ॥

ಸಾಮಾನ್ಯ ಗುಣಗಳನ್ನು ತೋರಿಸುತ್ತಾನೆ. 'ಸಂಖ್ಯಾದಿಃ —' ಇತಿ. ಸ್ವಾಶ್ರಯವಿಶೇಷಕ್ಕೆ ಕಾರಣವಾಗದಿರುವ ಗುಣಗಳು, ಸ್ವಾಶ್ರಯಸಾಧರ್ಮ್ಯಕ್ಕೋಸ್ಕರ ಇರುವ ಗುಣಗಳು ಸಾಮಾನ್ಯಗುಣಗಳಾಗುತ್ತವೆ. 'ರೂಪಸ್ಪರ್ಶಾನ್ಯತ್ವೇ ಸತಿ ದ್ರವ್ಯವಿಭಾಜಕೋಪಾಧಿವ್ಯಾಪ್ಯತಾವಚ್ಛೇದಕ ಸಂಯೋಗವಿಭಾಗವೇಗದ್ರವತ್ವಾವೃತ್ತಿಜಾತಿಶೂನ್ಯಗುಣತ್ವಂ' ಸಾಮಾನ್ಯಗುಣತ್ವಂ' ಎಂದು ಪರಿಷ್ಕೃತಲಕ್ಷಣವಾಗುತ್ತದೆ. ಸಾಂಸಿದ್ಧಿಕದ್ರವ ಅಂದರೆ ನೈಮಿತ್ತಿಕದ್ರವತ್ವವೆಂದರ್ಥ.

**ಸಂಖ್ಯಾದಿರಪರತ್ವಾಂತೋ ದ್ರವತ್ವಂ ಸ್ನೇಹ ಏವಚ ॥ ೯೨ ॥**
**ಏತೇ ತು ದ್ವೀಂದ್ರಿಯಗ್ರಾಹ್ಯಾಃ—**

ದ್ವೀಂದ್ರಿಯೇತಿ । ಚಕ್ಷುಷಾ ತ್ವಚಾಽಪಿ ಗ್ರಹಣಯೋಗ್ಯತ್ವಾತ್ ॥

ಎರಡು ಇಂದ್ರಿಯಗಳಿಂದ ಗ್ರಹಿಸಲ್ಪಡುವ ಗುಣಗಳನ್ನು ತೋರಿಸುತ್ತಾನೆ.

ಸಂಖ್ಯಾದಿಗಳು ಚಕ್ಷುರೀಂದ್ರಿಯ, ಮತ್ತು ತ್ವಗಿಂದ್ರಿಯಗಳಿಂದ ಗ್ರಹಿಸಲ್ಪಡುತ್ತವೆ. 'ಬಾಹ್ಯದ್ವೀಂದ್ರಿಯ ಗ್ರಾಹ್ಯಜಾತಿಮದ್‌ಗುಣತ್ವಂ' ಎಂದು ಲಕ್ಷಣವಾಗುತ್ತದೆ.

**ಅಥ ಸ್ಪರ್ಶಾಂತಶಬ್ದಕಾಃ ॥ ಬಾಹ್ಯೈಕೈಕೇಂದ್ರಿಯಗ್ರಾಹ್ಯಾಃ—**

ಬಾಹ್ಯೇತಿ । ರೂಪಾದೀನಾಂ ಚಕ್ಷುರಾದಿಗ್ರಾಹ್ಯತ್ವಾತ್ ॥

ಒಂದೇ ಬಹಿರಿಂದ್ರಿಯದಿಂದ ಗ್ರಾಹ್ಯವಾದ ಗುಣಗಳನ್ನು ತೋರಿಸುತ್ತಾನೆ 'ಅಥ—' ಇತಿ. ರೂಪರಸಗಂಧಸ್ಪರ್ಶಶಬ್ದಗುಣಗಳು ಚಕ್ಷುರಾದಿ ಒಂದೊಂದೇ ಇಂದ್ರಿಯಗಳಿಂದ ಗ್ರಹಿಸಲ್ಪಡುತ್ತವೆ. (ಪ್ರತ್ಯಕ್ಷವಿಷಯವಾಗುತ್ತವೆ.) 'ಚಕ್ಷುಸ್ತ್ವಗುಭಯಾಗ್ರಾಹ್ಯಬಹಿರಿಂದ್ರಿಯಗ್ರಾಹ್ಯ ಗುಣಸಮವೇತಜಾತಿಮತ್ತ್ವಂ' ಎಂದು ರೂಪಾದಿಗಳ ಸಾಧರ್ಮ್ಯವಾಗುತ್ತದೆ.

**ಗುರುತ್ವಾದೃಷ್ಟಭಾವನಾಃ ॥ ೯೩ ॥**
**ಅತೀಂದ್ರಿಯಾ, ವಿಭೂನಾಂ ತು ಯೇ ಸ್ಯುರ್ವೈಶೇಷಿಕಾ ಗುಣಾಃ ॥**
**ಅಕಾರಣಗುಣೋತ್ಪನ್ನಾ ಏತೇ ತು ಪರಿಕೀರ್ತಿತಾಃ ॥ ೯೪ ॥**

ವಿಭೂನಾಮಿತಿ । ಬುದ್ಧಿಸುಖದುಃಖೇಚ್ಛಾದ್ವೇಷಪ್ರಯತ್ನಧರ್ಮಾಧರ್ಮಭಾವನಾಶಬ್ದಾ ಇತ್ಯರ್ಥಃ । ಅಕಾರಣೇತಿ । ಕಾರಣಗುಣೇನ ಕಾರ್ಯೇ ಯೇ ಗುಣಾ ಉತ್ಪದ್ಯಂತೇ ತೇ ಕಾರಣಗುಣಪೂರ್ವಕಾ ರೂಪಾದಯೋ ವಕ್ಷ್ಯಂತೇ । ಬುದ್ಧ್ಯಾದಯಸ್ತು ನ ತಾದೃಶಾ । ಆತ್ಮಾದೇಃ ಕಾರಣಾಭಾವಾತ್ ॥ ೯೪ ॥

ಅತೀಂದ್ರಿಯಗುಣಗಳನ್ನು (ಇಂದ್ರಿಯಗಳಿಗೆ ಗೋಚರವಾಗದ) ತೋರಿಸುತ್ತಾನೆ. 'ಗುರುತ್ವ—' ಇತಿ. ಆದ್ಯಪತನಕ್ಕೆ ಸಮವಾಯಿಕಾರಣವಾದ ಗುಣಕ್ಕೆ ಗುರುತ್ವವೆಂದು ಹೆಸರು. ಧರ್ಮಾಧರ್ಮಗಳೇ ಅದೃಷ್ಟ. ಭಾವನಾ ಅಂದರೆ ವೇಗಭಿನ್ನಸಂಸ್ಕಾರ. ಇವುಗಳು ಅತೀಂದ್ರಿಯ ಗುಣಗಳಾಗುತ್ತವೆ. ಅಕಾರಣಗುಣೋತ್ಪನ್ನಗುಣಗಳನ್ನು ಹೇಳುತ್ತಾನೆ. 'ವಿಭೂನಾಂ—' ಇತಿ. ವಿಭುಗಳ ವೈಶೇಷಿಕಗುಣಗಳನ್ನು ತೋರಿಸುತ್ತಾನೆ. ಬುದ್ಧಿ—' ಇತಿ. ಬುದ್ಧ್ಯಾದಿ ಎಂಟು ಗುಣಗಳಾಗುತ್ತವೆ. ಕಾರಣಗುಣಗಳೆಂದರೆ ಸಮವಾಯಿಕಾರಣದಲ್ಲಿ ಸಮವೇತವಾದ ಗುಣಗಳಿಂದ ಹುಟ್ಟಿದ ಗುಣಗಳು 'ಸ್ವಾಶ್ರಯಸಮವಾಯಿಸಮವೇತ ಗುಣಜನ್ಯತ್ವಂ' ಕಾರಣಗುಣೋತ್ಪನ್ನತ್ವಂ ಎಂದು ಲಕ್ಷಣ. ಸ್ವಂ—ಘಟರೂಪ. ಸ್ವಾಶ್ರಯಃ—ಘಟ. ತತ್ಸಮವಾಯಿನೌ—ಎರಡು ಕಪಾಲಗಳು. ತತ್ಸಮವೇತಂ — ಕಪಾಲದಲ್ಲಿ ಸಮವಾಯಸಂಬಂಧದಿಂದ ಇರುವ ಕಪಾಲರೂಪ. ತಜ್ಜನ್ಯತ್ವಂ—ಅದರಿಂದ ಹುಟ್ಟಿರುವುದು ಘಟರೂಪವಾದುದರಿಂದ ಅದು ಕಾರಣಗುಣೋತ್ಪನ್ನವಾಗುತ್ತದೆ. ತದ್ಭಿನ್ನವಾದದ್ದು ಅಕಾರಣಗುಣೋತ್ಪನ್ನ

ವಾಗುತ್ತದೆ. ರೂಪಾದಿಗಳಂತೆ ಬುದ್ಧ್ಯಾದಿಗಳು ಏಕಾಗಬಾರದು? ಎಂಬ ಶಂಕೆಗೆ ಸಮಾಧಾನ ತೋರಿಸುತ್ತಾನೆ. 'ಬುದ್ಧ್ಯಾದಯಃ —' ಇತಿ. ಇವು ಕಾರಣ ಗುಣೋತ್ಪನ್ನವಾಗಬೇಕಾದರೆ ಬುದ್ಧ್ಯಾದಿಗಳಿಗೆ ಆಶ್ರಯವಾದ ಆತ್ಮನು ಇನ್ನೊಂದರಿಂದ ಹುಟ್ಟಬೇಕು. ಆದರೆ ಆತ್ಮನು ನಿತ್ಯನಾದುದರಿಂದ ಹುಟ್ಟುವುದಿಲ್ಲ. ಆದುದರಿಂದ ಅಕಾರಣಗುಣೋತ್ಪನ್ನಗಳಾಗುತ್ತವೆ.

**ಅಪಾಕಜಾಸ್ತು ಸ್ಪರ್ಶಾಂತಾ ದ್ರವತ್ವಂ ಚ ತಥಾವಿಧಮ್ ||**
**ಸ್ನೇಹವೇಗಗುರುತ್ವೈಕಪೃಥಕ್ತ್ವಪರಿಮಾಣಕಮ್ || ೯೫ ||**
**ಸ್ಥಿತಿಸ್ಥಾಪಕ ಇತ್ಯೇತೇ ಸ್ಯುಃ ಕಾರಣಗುಣೋದ್ಭವಾಃ ||**

ಅಪಾಕಜಾಸ್ತ್ವಿತಿ । ಪಾಕಜರೂಪಾದೀನಾಂ ಕಾರಣಗುಣಪೂರ್ವಕತ್ವಾಭಾವಾತ್ ಅಪಾಕಜಾ ಇತ್ಯುಕ್ತಮ್ । ತಥಾವಿಧಮಪಾಕಜಮ್ । ತಥೈಕತ್ವಮಪಿ ಬೋಧ್ಯಮ್ । ಸ್ಪಷ್ಟಮನ್ಯತ್ ||

ಕಾರಣಗುಣೋತ್ಪನ್ನಗುಣಗಳನ್ನು ತೋರಿಸುತ್ತಾನೆ. 'ಅಪಾಕಜಾಃ—' ಇತಿ. ವಿಲಕ್ಷಣತೇಜಃ ಸಂಯೋಗಕ್ಕೆ ಪಾಕವೆಂದು ಹೆಸರು. ಪಾಕಾತ್ ಜಾತಾಃ, ಪಾಕಜಾಃ । ನ ಪಾಕಾಜಾಃ ಅಪಾಕಜಾಃ, ಸ್ಪರ್ಶಾಂತಾಃ—ರೂಪರಸಗಂಧಸ್ಪರ್ಶಗಳೆಂದರ್ಥ. ತಥಾವಿಧಂ—ಅಪಾಕಜವಾದ ಎಂದರ್ಥ. ಅಪಾಕಜವಾದ ರೂಪಾದಿಗಳೂ, ದ್ರವತ್ವವೂ, (ಆದ್ಯಸ್ಪಂದನಕ್ಕೆ ಅಸಮವಾಯಿಕಾರಣವಾದ ಗುಣ.) ಸ್ನೇಹಾದಿಗಳೂ ಕಾರಣಗುಣೋತ್ಪನ್ನಗುಣಗಳಾಗುತ್ತವೆ. ಪಾಕಜರೂಪಾದಿಗಳಿಗೆ ಕಾರಣಗುಣೋತ್ಪನ್ನತ್ವವಿರುವುದಿಲ್ಲ. ||

**ಸಂಯೋಗಶ್ಚ ವಿಭಾಗಶ್ಚ ವೇಗಶ್ಚೈತೇ ತು ಕರ್ಮಜಾಃ || ೬೬ ||**

ಕರ್ಮಜಾ ಇತಿ । ಯದ್ಯಪಿ ಕರ್ಮಜತ್ವಂ ನ ಸಾಧರ್ಮ್ಯಂ ಘಟಾದಾವತಿವ್ಯಾಪ್ತೇಃ, ಸಂಯೋಗಜಸಂಯೋಗೇಽವ್ಯಾಪ್ತೇಶ್ಚ। ತಥಾಪಿ—ಕರ್ಮಜವೃತ್ತಿಗುಣತ್ವವ್ಯಾಪ್ಯ ಜಾತಿಮತ್ತ್ವಂ ಬೋಧ್ಯಮ್ । ಏವಮನ್ಯತ್ರಾಪ್ಯೂಹ್ಯಮ್ || ೬೬ ||

ಕರ್ಮದಿಂದ ಹುಟ್ಟುವ ಗುಣಗಳನ್ನು ಹೇಳುತ್ತಾನೆ. 'ಸಂಯೋಗಶ್ಚ—' ಇತಿ. ಸಂಯೋಗಾದಿಗಳು ಕರ್ಮಜಗುಣಗಳು. ಕರ್ಮವೇ ಅಸಮವಾಯಿಕಾರಣವಾಗಿರುವವು ಗಳೆಂದರ್ಥ. ಕರ್ಮಜಪದಕ್ಕೆ ಯಥಾಶ್ರುತವಾದ ಅರ್ಥವನ್ನು ಹೇಳಿ ಸಾಧರ್ಮ್ಯ ಹೇಳಿ ದರೆ ಅವ್ಯಾಪ್ತಿ ಅತಿವ್ಯಾಪ್ತಿದೋಷ ಬರುತ್ತದೆಂದು ತೋರಿಸಿ ಜಾತಿಘಟಿತಲಕ್ಷಣದಿಂದ ಪರಿಷ್ಕರಿಸುತ್ತಾನೆ. 'ಕರ್ಮಜ—' ಇತಿ. ಕರ್ಮಜಗಳು ಸಂಯೋಗಾದಿ. ಅಲ್ಲಿರುವ

ಗುಣತ್ವವ್ಯಾಪ್ಯಜಾತಿಯೆಂದರೆ ಸಂಯೋಗತ್ವಾದಿ. ಅದು ಉಳ್ಳದ್ದು ಸಂಯೋಗಾದಿಗಳಾಗುತ್ತವೆ. ॥ ೬೬ ॥

**ಸ್ಪರ್ಶಾಂತಪರಿಮಾಣೈಕಪೃಥಕ್ತ್ವ ಸ್ನೇಹಶಬ್ದಕಂ ॥**
**ಭವೇದಸಮವಾಯಿತ್ವಂ**

ಸ್ಪರ್ಶಾಂತೇತಿ । ('ಸ್ಪರ್ಶೋಽತ್ರಾನುಷ್ಣೋ ಗ್ರಾಹ್ಯಃ) ಏಕಪೃಥಕ್ತ್ವಮಿತ್ಯತ್ರ ತ್ವಪ್ರತ್ಯಯಸ್ಯ ಪ್ರತ್ಯೇಕಮನ್ವಯಾದೇಕತ್ವಂ ಪೃಥಕ್ತ್ವಂ ಚ ಗ್ರಾಹ್ಯಮ್ । ಪೃಥಕ್ತ್ವಪದೇನ ಚೈಕಪೃಥಕ್ತ್ವಂ ವಿವಕ್ಷಿತಮ್ । ಭವೇದಸಮವಾಯಿತ್ವಮಿತಿ । ಘಟಾದಿರೂಪರಸಗಂಧಸ್ಪರ್ಶಾಃ ಕಪಾಲಾದಿರೂಪರಸಗಂಧಸ್ಪರ್ಶೇಭ್ಯೋ ಭವಂತಿ । ಏವಂ ಕಪಾಲಾದಿಪರಿಮಾಣಾದೀನಾಂ ಘಟಾದಿಪರಿಮಾಣಾದ್ಯಸಮವಾಯಿಕಾರಣತ್ವಮ್ । ಶಬ್ದಸ್ಯಾಪಿದ್ವಿತೀಯಶಬ್ದಂಪ್ರತ್ಯಸಮವಾಯಿಕಾರಣತ್ವಮ್ । ಏವಂ ಸ್ಥಿತಿಸ್ಥಾಪಕೈಕಪೃಥಕ್ತ್ವಯೋರಪಿಜ್ಞೇಯಮ್ ॥

ಅಸಮವಾಯಿಕಾರಣಗಳಾದಗುಣಗಳನ್ನು ತೋರಿಸುತ್ತಾನೆ. 'ಸ್ಪರ್ಶಾಂತ—' ಇತಿ. ಸ್ಪರ್ಶಾಂತಾಶ್ಚ, ಪರಿಮಾಣಂ ಚ, ಏಕಪೃಥಕ್ತ್ವಂಚ, ಸ್ನೇಹಶ್ಚ, ಶಬ್ದಕಶ್ಚ, ಏತೇಷಾಂಸಮಾಹಾರಃ, 'ಸ್ಪರ್ಶಾಂತ....ಕಮ್'. ಏಕಶ್ಚಪೃಥಕ್‌ಚ, ತಯೋರ್ಭಾವಃ, ಏಕಪೃಥಕ್ತ್ವಮ್. ತ್ವಪ್ರತ್ಯಯಕ್ಕೆ ದ್ವಂದ್ವಾಂತನ್ಯಾಯದಿಂದ ಪ್ರತ್ಯೇಕಾನ್ವಯಮಾಡಿದರೆ ಏಕತ್ವ, ಪೃಥಕ್ತ್ವ ಎಂದಾಗುತ್ತದೆ. ಪೃಥಕ್ತ್ವದಿಂದ ಏಕಪೃಥಕ್ತ್ವ ವಿವಕ್ಷಿತವಾಗಿದೆ. ಇವು ಅಸಮವಾಯಿಕಾರಣಗುಣಗಳಾಗುತ್ತವೆ. ಅದನ್ನೇ ವಿವರಿಸುತ್ತಾನೆ. 'ಘಟಾದಿ—' ಇತಿ. ಕಾರ್ಯದಲ್ಲಿರುವ ರೂಪಾದಿಗುಣಗಳಿಗೆ ಕಾರಣದಲ್ಲಿರುವ ರೂಪಾದಿಗುಣಗಳು ಅಸಮವಾಯಿಕಾರಣಗಳಾಗುತ್ತವೆ. ಘಟರೂಪವನ್ನು ಕುರಿತು ಕಪಾಲಗತರೂಪವು ಅಸಮವಾಯಿಕಾರಣವಾಗುತ್ತದೆ. ಹೀಗೆ ಶಬ್ದದಲ್ಲಿಯೂ ಮೊದಲನೆಯ ಶಬ್ದವು ಎರಡನೆಯ ಶಬ್ದವನ್ನು ಕುರಿತು ಅಸಮವಾಯಿಕಾರಣವಾಗುತ್ತದೆ.

**ಅಥ ವೈಶೇಷಿಕೇ ಗುಣೇ ॥ ೯೭ ॥**
**ಆತ್ಮನಃ ಸ್ಯಾನ್ನಿಮಿತ್ತತ್ವಮ್—**

ನಿಮಿತ್ತತ್ವಮಿತಿ । ಬುದ್ಧ್ಯಾದೀನಾಮಿಚ್ಛಾದಿನಿಮಿತ್ತತ್ವಾದಿತಿ ಭಾವಃ ॥

ನಿಮಿತ್ತಕಾರಣಗಳಾದ ಗುಣಗಳನ್ನು ತೋರಿಸುತ್ತಾನೆ. 'ಅಥ—' ಇತಿ. ಆತ್ಮನ ವಿಶೇಷಗುಣಗಳಾದ ಬುದ್ಧ್ಯಾದಿಗಳು ಇಚ್ಛಾದಿಗಳನ್ನು ಕುರಿತು ನಿಮಿತ್ತಕಾರಣಗಳಾಗುತ್ತವೆ.

ಉಷ್ಣಸ್ಪರ್ಶಗುರುತ್ವಯೋಃ ||
ವೇಗೇಽಪಿ ಚ ದ್ರವತ್ವೇ ಚ ಸಂಯೋಗಾದಿದ್ವಯೇ ತಥಾ || ೯೮ ||
ದ್ವಿಧೈವ ಕಾರಣತ್ವಂ ಸ್ಯಾತ್—

ದ್ವಿಧೈವೇತಿ | ಅಸಮವಾಯಿಕಾರಣತ್ವಂ ನಿಮಿತ್ತಕಾರಣತ್ವಂ ಚ | ತಥಾಹಿ ಉಷ್ಣಸ್ಪರ್ಶಃ ಉಷ್ಣಸ್ಪರ್ಶಸ್ಯಾಸಮವಾಯಿಕಾರಣಂ ಪಾಕಜೇ ನಿಮಿತ್ತಮ್ | ಗುರುತ್ವಂ ಗುರುತ್ವಪತನಯೋರಸಮವಾಯಿಕಾರಣಂ ಪ್ರತಿಘಾತೇ ನಿಮಿತ್ತಮ್ | ವೇಗೋ ವೇಗಸ್ಯಂದನಯೋರಸಮವಾಯೀ ಅಭಿಘಾತೇ ನಿಮಿತ್ತಮ್ | ದ್ರವತ್ವಂ ದ್ರವತ್ವ ಸ್ಯಂದನಯೋರಸಮವಾಯಿ ಸಂಗ್ರಹೇ ನಿಮಿತ್ತಮ್ | ಭೇರೀದಂಡ ಸಂಯೋಗಃ ಶಬ್ದೇ ನಿಮಿತ್ತಮ್ | ಭೇರ್ಯಾಕಾಶಸಂಯೋಗೋಽಸಮವಾಯೀ | ವಂಶದಲ ದ್ವಯವಿಭಾಗಃ ಶಬ್ದೇ ನಿಮಿತ್ತಮ್ | ವಂಶದಲಾಕಾಶವಿಭಾಗೋಽಸಮ ವಾಯೀತಿ ||

ಉಷ್ಣಸ್ಪರ್ಶಾದಿಗಳಿಗೆ ಅಸಮವಾಯಿಕಾರಣತ್ವ, ನಿಮಿತ್ತಕಾರಣತ್ವ ಎರಡೂ ಸಂಭವಿಸುತ್ತದೆ. 'ತಥಾಹಿ—' ಎಂಬುದರಿಂದ ಅದನ್ನೇ ವಿವರಿಸುತ್ತಾನೆ. ಸಂಗ್ರಹ—ಸಕ್ತು ಅಂದರೆ ಹುರಿಹಿಟ್ಟು ಮುಂತಾದವುಗಳ ಸಂಯೋಗ. ಮೂಲವೇ ಸ್ಪಷ್ಟಾರ್ಥಕವಾಗಿದೆ.

ಅಥ ಪ್ರಾದೇಶಿಕೋ ಭವೇತ್||
ವೈಶೇಷಿಕಾ ವಿಭುಗುಣಾಃ ಸಂಯೋಗಾದಿದ್ವಯಂ ತಥಾ || ೯೯ ||

ಪ್ರಾದೇಶಿಕೋಽವ್ಯಾಪ್ಯವೃತ್ತಿಃ || ೯೯ ||

ಅವ್ಯಾಪ್ಯವೃತ್ತಿ ಗುಣಗಳನ್ನು ತೋರಿಸುತ್ತಾನೆ. 'ಅಥ—' ಇತಿ. ಬುದ್ಧ್ಯಾದಿ ಗುಣಗಳೂ ಶಬ್ದಸಂಯೋಗ ವಿಭಾಗಗಳೂ ಅವ್ಯಾಪ್ಯವೃತ್ತಿಗುಣಗಳಾಗುತ್ತವೆ. ತಮ್ಮ ಆಶ್ರಯದ ಏಕದೇಶದಲ್ಲಿ ಇರುವ ಗುಣಗಳೆಂದರ್ಥ.

ಚಕ್ಷುರ್ಗ್ರಾಹ್ಯಂ ಭವೇದ್ರೂಪಂ ದ್ರವ್ಯಾದೇರುಪಲಂಭಕಮ್ ||
ಚಕ್ಷುಷಃ ಸಹಕಾರಿಸ್ಯಾಚ್ಛುಕ್ಲಾದಿಕಮನೇಕಧಾ || ೧೦೦ ||

ಈಗ ಕ್ರಮವಾಗಿ ರೂಪಾದಿಗಳ ಲಕ್ಷಣವನ್ನು ಹೇಳಲು ಪ್ರಾರಂಭಿಸಿ ರೂಪಲಕ್ಷಣ ವನ್ನು ತೋರಿಸುತ್ತಾನೆ. 'ಚಕ್ಷುರ್ಗ್ರಾಹ್ಯಂ—' ಇತಿ. ಶಾಬ್ದಬೋಧದಳಕೃತ್ಯಾದಿ ಗಳು ನನ್ನ ತರ್ಕಸಂಗ್ರಹವ್ಯಾಖ್ಯಾನದಲ್ಲಿ ವಿವರಿಸಿದೆ. ಚಕ್ಷುರಿಂದ್ರಿಯಕ್ಕಿಂತ ಭಿನ್ನವಾದ ಇಂದ್ರಿಯದಿಂದ ಅಗ್ರಾಹ್ಯವಾಗಿ, ಚಕ್ಷುರಿಂದ್ರಿಯದಿಂದ ಗ್ರಾಹ್ಯವಾಗಿ ಇರುವ (ಪ್ರತ್ಯಕ್ಷ

ವಿಷಯವಾಗಿ) ವಿಶೇಷಗುಣ ಯಾವುದೋ ಅದೇ ರೂಪ. 'ಚಕ್ಷುರ್ಮಾತ್ರಗ್ರಾಹ್ಯ ವಿಶೇಷಗುಣತ್ವಂ' ರೂಪದಲಕ್ಷಣ. ಬುದ್ಧ್ಯಾದಿಗುಣಗಳಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ ಚಕ್ಷುರ್ಗ್ರಾಹ್ಯ ಎಂದು ಹೇಳಿದೆ. ಸಂಖ್ಯಾವಾರಣೆಗೋಸ್ಕರ ವಿಶೇಷಗುಣವೆಂದೂ, ಸ್ನೇಹ ಸಾಂಸಿದ್ಧಿಕದ್ರವತ್ವವಾರಣೆಗೋಸ್ಕರ ಮಾತ್ರ ಪದವೂ ಹೇಳಿದೆ. 'ದ್ರವ್ಯಾದೇಃ—' ಇತಿ. ಈರೂಪವು ದ್ರವ್ಯಗುಣಕರ್ಮಸಾಮಾನ್ಯಗಳ, ಉಪಲಂಭಕಂ—ಉಪಲಬ್ಧಿಗೆ (ಪ್ರತ್ಯಕ್ಷಕ್ಕೆ) ಕಾರಣವಾಗುತ್ತದೆ. 'ಬಹಿರ್ದ್ರವ್ಯಚಾಕ್ಷುಷಪ್ರತ್ಯಕ್ಷಂ ಪ್ರತಿ ರೂಪಸ್ಯ ಕಾರಣತ್ವಂ.' ರೂಪವಿಲ್ಲದೆ ಅವುಗಳ ಪ್ರತ್ಯಕ್ಷವಾಗುವುದಿಲ್ಲ. 'ಚಕ್ಷುಷಃ—' ಇತಿ. ಚಕ್ಷುರಿಂದ್ರಿಯವು ಸಹಕಾರಿಕಾರಣವಾಗುತ್ತದೆಂದು ತಾತ್ಪರ್ಯ. ಈ ರೂಪವು ಶುಕ್ಲಾದಿಭೇದಗಳಿಂದ ನಾನಾವಿಧವಾಗಿರುತ್ತದೆಂದು ತಿಳಿಸುತ್ತಾನೆ. 'ಅನೇಕಧಾ—' ಇತಿ.

ಚಕ್ಷುರಿತಿ । ರೂಪತ್ವಜಾತಿಸ್ತು ಪ್ರತ್ಯಕ್ಷಸಿದ್ಧಾ । ರೂಪಶಬ್ದೋಲ್ಲೇಖಿನೀ ಪ್ರತೀತಿರ್ನಾಸ್ತೀತಿ ಚೇನ್ಮಾಸ್ತು ರೂಪಶಬ್ದಪ್ರಯೋಗಃ, ತಥಾಪಿ ನೀಲಪೀತಾದಿಷ್ವನುಗತ ಜಾತಿವಿಶೇಷೋಽನುಭವಸಿದ್ಧ ಏವ । ರೂಪಶಬ್ದಾಽಪ್ರಯೋಗೇಽಪಿ ನೀಲೋ ವರ್ಣಃ ಪೀತೋ ವರ್ಣ ಇತಿ ವರ್ಣವಿಶೇಷೋ (ಶಬ್ದೋ) ಲ್ಲೇಖಿನೀ ಪ್ರತೀತಿ ರಸ್ತ್ಯೇವ । ಏವಂ ನೀಲತ್ವಾದಿಕಮಪಿ ಪ್ರತ್ಯಕ್ಷಸಿದ್ಧಮ್ । ನ ಚೈಕೈಕಾ ಏವ ನೀಲರೂಪಾದಿ ವ್ಯಕ್ತಯ ಇತ್ಯೇಕವ್ಯಕ್ತಿವೃತ್ತಿತ್ವಾನ್ನೀಲತ್ವಾದಿಕಂ ನ ಜಾತಿರಿತಿ ವಾಚ್ಯಮ್ । ನೀಲೋ ನಷ್ಟೋ ರಕ್ತ ಉತ್ಪನ್ನ ಇತ್ಯಾದಿಪ್ರತೀತೇ ರ್ನೀಲಾದೇರು ತ್ಪಾದವಿನಾಶಶಾಲಿತಯಾ ನಾನಾತ್ವಾತ್ । ಅನ್ಯಥಾ ಏಕನೀಲನಾಶೇ ಜಗದ ನೀಲಮಾಪದ್ಯೇತ । ನಚ ನೀಲಸಮವಾಯರಕ್ತಸಮವಾಯಯೋರೇವೋತ್ಪಾದ ವಿನಾಶವಿಷಯಕೋಽಸೌಪ್ರತ್ಯಯ ಇತಿ ವಾಚ್ಯಮ್ । ಪ್ರತೀತ್ಯಾ ಸಮವಾಯಾ ನುಲ್ಲೇಖಾತ್ । ನ ಚ ಸ ಏವಾಯಂ ನೀಲ ಇತಿ ಪ್ರತ್ಯಯಾಲ್ಲಾಘವಾಚ್ಚೈಕ್ಯ ಮಿತಿ ವಾಚ್ಯಮ್ । ಪತ್ಯಕ್ಷಸ್ಯ ತಜ್ಜಾತೀಯವಿಷಯತ್ವಾತ್, ಸೈವೇಯಂ ಗುರ್ಜರೀತಿವತ್ । ಲಾಘವಂತು ಪ್ರತ್ಯಕ್ಷಬಾಧಿತಮ್ । ಅನ್ಯಥಾ ಘಟಾದೀ ನಾಮಪ್ಯೈಕ್ಯಪ್ರಸಂಗಾತ್ । ಉತ್ಪಾದವಿನಾಶಬುದ್ಧೇಃ ಸಮವಾಯಾಲಂಬನ ತ್ವಾಪತ್ತೇರಿತಿ । ಏತೇನ ರಸಾದಿಕಮಪಿ ವ್ಯಾಖ್ಯಾತಮ್ ॥

ತಾರ್ಕಿಕ ಸಿದ್ಧಾಂತವನ್ನು ವ್ಯಕ್ತಪಡಿಸುತ್ತಾ ಕಾರಿಕಾವ್ಯಾಖ್ಯಾನಮಾಡುತ್ತಾನೆ. 'ಚಕ್ಷುರಿತಿ—' ಇತಿ. 'ರೂಪಂ, ರೂಪಂ' ಎಂದು ಅನುಗತಪ್ರತೀತಿ ಇರುವುದರಿಂದ ರೂಪತ್ವಜಾತಿಯಲ್ಲಿ ಪ್ರತ್ಯಕ್ಷವೇ ಪ್ರಮಾಣವಾಗುತ್ತದೆ. ಚಕ್ಷುಃಸಂಯುಕ್ತಸಮವೇತ ಸಮವಾಯಸಂಬಂಧದಿಂದ ರೂಪತ್ವಜಾತಿಯು ಪ್ರತ್ಯಕ್ಷಸಿದ್ಧವಾಗುತ್ತದೆ. ಚಕ್ಷುಃ ಸಂಯುಕ್ತವಾದದ್ದು ಘಟಪಟಾದಿ. ಅಲ್ಲಿ ಸಮವೇತ ಅಂದರೆ ಸಮವಾಯದಿಂದ ಇರುವುದು ರೂಪ. ಅಲ್ಲಿ ಸಮವಾಯದಿಂದ ರೂಪತ್ವ ಇದೆ. ರೂಪತ್ವಜಾತಿ ಇಲ್ಲವೆಂದು

ಆಶಂಕಿಸುತ್ತಾನೆ. 'ರೂಪಶಬ್ದೋ—' ಇತಿ. ಉಲ್ಲೇಖಃ—ಆಕಾರ. ಲೋಕದಲ್ಲಿ ನೀಲಃ, ಪೀತಃ ಇತ್ಯಾದಿ ಪ್ರಯೋಗಗಳಿದ್ದಂತೆ ಕೇವಲ 'ರೂಪಂ' ಎಂದು ಶಬ್ದಪ್ರಯೋಗವನ್ನು ಯಾರೂ ಮಾಡದಿರುವುದರಿಂದ ಅದು ಇಲ್ಲವೆಂದು ಶಂಕೆಯ ತಾತ್ಪರ್ಯ. 'ತಥಾಪಿ—'ಎಂಬುದರಿಂದ ಸಮಾಧಾನತೋರಿಸುತ್ತಾನೆ. 'ರೂಪಂ' ಎಂದು ಶಬ್ದ ಪ್ರಯೋಗ ಇಲ್ಲದಿರಲಿ. ಆದರೂ ನೀಲಪೀತಾದಿಗಳು ನಾನಾ ಇರುವುದರಿಂದ ಅವುಗಳಲ್ಲಿ ಒಂದು ಅನುಗತವಾದ ಜಾತಿ ಇದ್ದೇ ಇರುತ್ತದೆ. ಅದೇ ರೂಪತ್ವವಾಗುತ್ತದೆ. ರೂಪ ಶಬ್ದವ್ಯವಹಾರವಿಲ್ಲದಿದ್ದರೂ 'ನೀಲೋವರ್ಣಃ' ಇತ್ಯಾದಿ ವರ್ಣಶಬ್ದಘಟಿತವಾದ ಪ್ರಯೋಗವಿರುವುದರಿಂದ ಅಪ್ರಸಿದ್ಧವಾಗುವುದಿಲ್ಲ. ಯದ್ಯಪಿ 'ನೀಲೋವರ್ಣಃ' ಎಂದು ವ್ಯವಹಾರವಿರುವಂತೆ 'ನೀಲರೂಪಂ' ಇತ್ಯಾದಿವ್ಯವಹಾರವೂ ಇದೆ. ಆದರೂ ಪೂರ್ವ ಪಕ್ಷಿಯ ವಾದವನ್ನು ಒಪ್ಪಿದರೂ ರೂಪತ್ವಜಾತಿಯನ್ನು ಅಪಲಾಪಮಾಡಲು ಸಾಧ್ಯವಿಲ್ಲವೆಂದು ಬೇರೆರೀತಿಯಿಂದ ಸಮಾಧಾನ ಹೇಳಿದೆ. ನೀಲತ್ವಾದಿ ಜಾತಿಯಲ್ಲಿಯೂ ಪ್ರತ್ಯಕ್ಷ ಪ್ರಮಾಣವಿದೆಯೆಂದು ತೋರಿಸುತ್ತಾನೆ. 'ಏವಂ—' ಇತಿ. ನೀಲತ್ವಾದಿಗಳೂ ಜಾತಿಯಲ್ಲವೆಂದು ಪುನಃ ಆಕ್ಷೇಪಿಸುತ್ತಾನೆ. 'ನಚ—' ಇತಿ. ನೀಲರೂಪಾದಿಗಳು ಒಂದೇ ಆದುದರಿಂದ ಏಕವ್ಯಕ್ತಿಗತವಾದರೆ ಅದು ಜಾತಿಯಾಗುವುದಿಲ್ಲವೆಂದು ಹೇಳಿರುವುದರಿಂದ ನೀಲತ್ವಾದಿಗಳು ಜಾತಿಯಲ್ಲವೆಂದು ಆಕ್ಷೇಪಿಸುವವನ ತಾತ್ಪರ್ಯ. ಇದಕ್ಕೆ ಸಮಾಧಾನ 'ನೀಲೋ—' ಇತಿ. ಆಮಘಟದಲ್ಲಿ (ಹಸಿಯಾದ ಘಟ.) ಉಂಟಾಗುವ ಪ್ರತೀತಿಯಿಂದ ಜಾತಿಸಾಧನೆಮಾಡುತ್ತಾನೆ. ಅದು ಪೂರ್ವದಲ್ಲಿ ನೀಲವಾಗಿ ಆಮೇಲೆ ಪಾಕ (ವಿಲಕ್ಷಣತೇಜಃಸಂಯೋಗ) ದಿಂದ ರಕ್ತವಾಗುತ್ತದೆ. ಇದರಿಂದ ನೀಲಾದಿಗಳು ಹುಟ್ಟಿನಾಶವಾಗುವುದರಿಂದ ಅನೇಕವಾಗಿವೆಯೆಂದು ಸಿದ್ಧವಾಗುತ್ತದೆ. ಆಗ ಅವುಗಳಲ್ಲಿ ಅನುಗತವಾದ ನೀಲತ್ವಾದಿಜಾತಿಗಳೂ ಸಿದ್ಧಿಸುತ್ತವೆ. ಹೀಗೆ ಒಪ್ಪದಿದ್ದರೆ ದಂಡ ತೋರಿಸುತ್ತಾನೆ. 'ಅನ್ಯಥಾ—' ಇತಿ. ನೀಲಾದಿಗಳು ಒಂದೇ ವ್ಯಕ್ತಿಯೆಂದು ಅಂಗೀಕರಿಸುವುದಾದರೆ ಆ ಒಂದು ನೀಲ ಪಾಕಾದಿಗಳಿಂದ ನಾಶವಾದಮೇಲೆ ಲೋಕದಲ್ಲಿ ನೀಲ ರೂಪವೇ ಇಲ್ಲದೇ ಹೋಗಬೇಕಾಗುತ್ತದೆ. ಆದುದರಿಂದ ಅವಶ್ಯವಾಗಿ ನಾನಾನೀಲಗಳೆಂದು ಒಪ್ಪಬೇಕು. ಪುನಃ ಆಶಂಕಿಸುತ್ತಾನೆ. 'ನ ಚ—' ಇತಿ. 'ನೀಲೋ ನಷ್ಟಃ, ರಕ್ತಃ ಉತ್ಪನ್ನಃ' ಇತ್ಯಾದಿಪ್ರತೀತಿಗಳು ನೀಲನಾಶ, ರಕ್ತೋತ್ಪತ್ತಿಯನ್ನು ವಿಷಯೀಕರಿಸುವುದಿಲ್ಲ. ನೀಲರೂಪದ, ರಕ್ತರೂಪದ ಸಮವಾಯಸಂಬಂಧದ ನಾಶೋತ್ಪತ್ತಿಗಳನ್ನು ವಿಷಯೀಕರಿಸುತ್ತವೆ. ಈ ಪ್ರತೀತಿಯಿಂದ ನೀಲಾದಿಗಳ ನಾನಾತ್ವವು ಸಿದ್ಧಿಸಲಾರದೆಂದು ಶಂಕೆಯತಾತ್ಪರ್ಯ. ಅದಕ್ಕೆ ಸಮಾಧಾನ. 'ಪ್ರತೀತ್ಯಾ—' ಇತಿ. ಪೂರ್ವೋಕ್ತಪ್ರತೀತಿಯಲ್ಲಿ ಸಮವಾಯದ ಪ್ರಯೋಗವೇ ಇಲ್ಲದಿರುವಾಗ ಸಮವಾಯವನ್ನು ವಿಷಯೀಕರಿಸುವುದು ಹೇಗೆ? 'ನೀಲಸಮವಾಯಃನಷ್ಟಃ' ಎಂದು ಎಲ್ಲಿಯೂ ವ್ಯವಹಾರವಿಲ್ಲ. ಸಮವಾಯನಿತ್ಯವಾದುದರಿಂದ ಹಾಗೆ ಹೇಳಲು ಸಾಧ್ಯವೂ ಇಲ್ಲ. ಸಮವಾಯಕ್ಕೆ ಉತ್ಪತ್ತಿವಿನಾಶಕಗಳಿಲ್ಲ. ನೀಲಾದಿಗಳನ್ನೇ ವಿಷಯೀಕರಿಸುವುದರಿಂದ

ನೀಲಾದಿಗಳು ನಾನಾ ಎಂಬುದು ಸಿದ್ಧವಾಗುತ್ತದೆ. ಪುನಃ ಐಕ್ಯವಾದಿಯು ಆಕ್ಷೇಪಿಸುತ್ತಾನೆ. 'ನಚ—' ಇತಿ. 'ಸ ಏವಾಯಂ' ಎಂಬ ಪ್ರತೀತಿಗೆ ಪ್ರತ್ಯಭಿಜ್ಞಾ ಎಂದು ಹೆಸರು. ಒಂದು ನೀಲವಸ್ತುವನ್ನು ನೋಡಿ ಕಾಲಾಂತರದಲ್ಲಿ ಇನ್ನೊಂದು ನೀಲವಸ್ತುವನ್ನು ನೋಡಿದಾಗ 'ಸ ಏವಾಯಂನೀಲಃ' ಎಂದು ಪ್ರತ್ಯಭಿಜ್ಞಾ ಬರುವುದರಿಂದ ಈ ಪ್ರತ್ಯಭಿಜ್ಞಾ ಎಂಬುದೇ ನೀಲವು ಒಂದು ಎಂಬುದರಲ್ಲಿ ಪ್ರಮಾಣವಾಗುತ್ತದೆ. ಮತ್ತು ನೀಲಒಂದು ಎಂದು ಒಪ್ಪುವುದರಿಂದ ಲಾಘವವೂ ಇರುತ್ತದೆಂದು ಶಂಕಿಸುವವನ ತಾತ್ಪರ್ಯ. ಇದಕ್ಕೆ ಸಿದ್ಧಾಂತಿಯ ಸಮಾಧಾನ. ಪ್ರತ್ಯಭಿಜ್ಞಾ ಎಂಬುದು ನೀಲೈಕ್ಯ ಸಾಧಕವಾಗಲಾರದು. ಅದು ನೀಲಸಜಾತೀಯವನ್ನು ವಿಷಯೀಕರಿಸುವುದರಿಂದ ನಾನಾತ್ವಸಾಧಕವೇ ಆಗುತ್ತದೆ. ಇದಕ್ಕೆ ದೃಷ್ಟಾಂತವೂ ಲೋಕಪ್ರಸಿದ್ಧವಾಗಿದೆ. 'ಸೈವೇಯಂ ಗುರ್ಜರೀ' ಎಂದು ಪ್ರತ್ಯಭಿಜ್ಞಾ ಬಂದರೆ ಗುರ್ಜರಸ್ತ್ರೀಯಳ ಐಕ್ಯವು ತೋರುವುದಿಲ್ಲ. ತತ್ಸಜಾತೀಯಳು ಇನ್ನೊಬ್ಬಳು ಎಂದು ತೋರಿದಂತೆ ಇಲ್ಲಿಯೂ ಬೇರೆಯಾಗಿ ಸಜಾತೀಯ ತೋರುತ್ತದೆಂದು ತಿಳಿಯಬೇಕು. ಇನ್ನು ಲಾಘವದಿಂದ ನೀಲೈಕ್ಯ ಹೇಳಿರುವುದು ಅಸಂಗತವೇ. ಏಕೆಂದರೆ ಅದು ಪ್ರತ್ಯಕ್ಷದಿಂದ ಬಾಧಿತವಾಗುತ್ತದೆ. 'ನೀಲೋನಷ್ಟಃ ರಕ್ತಃ ಉತ್ಪನ್ನಃ' ಇತ್ಯಾದಿಪ್ರತ್ಯಕ್ಷಪ್ರತೀತಿಯಿಂದ ಭಾಧಿತವಾಗುತ್ತದೆ. 'ಅನ್ಯಥಾ—' ಇತಿ. ಭಾಧವಿದ್ದರೂ ಲಾಘವದಿಂದ ಐಕ್ಯಹೇಳುವುದಾದರೆ 'ಉತ್ಪನ್ನೋ ಘಟಃ, ನಷ್ಟೋ ಘಟಃ' ಇತ್ಯಾದಿಪ್ರತೀತಿಗಳಿಂದ ಘಟವೂ ಒಂದೇ ಎಂದು ಅಂಗೀಕೃತವಾಗಲಿ. ಹೇಗೆ ನೀಲೈಕ್ಯವನ್ನು ಒಪ್ಪಿ ಅದರ ಸಮವಾಯವು ಉತ್ಪತ್ತಿವಿನಾಶ ಹೊಂದುತ್ತದೆಂದು ಹೇಳುತ್ತಾನೋ ಹಾಗೆಯೇ ಘಟವ್ಯಕ್ತಿ ಒಂದೇ ಎಂದು ಅಂಗೀಕರಿಸಿ ಅದರ ಸಮವಾಯಕ್ಕೆ ಉತ್ಪತ್ತಿವಿನಾಶಗಳನ್ನು ಹೇಳಲಿ. ಆದರೆ ಅಲ್ಲಿ ಯಾರೂ ಹಾಗೆ ಹೇಳದಿರುವುದರಿಂದ ಅದರಂತೆ ನೀಲಾದಿಗಳಲ್ಲಿಯೂ ಐಕ್ಯಹೇಳಬಾರದೆಂದು ಸಿದ್ಧಾಂತ. 'ಏತೇನ—' ಇತಿ. ರೂಪತ್ವ, ನೀಲತ್ವಜಾತಿಗಳನ್ನು ಸಾಧನೆಮಾಡಿದಂತೆ ಮುಂದೆಯೂ ರಸತ್ವ, ಗಂಧತ್ವಾದಿಜಾತಿಗಳನ್ನು ಹೀಗೆಯೇ ಪ್ರತ್ಯಕ್ಷಪ್ರಮಾಣದಿಂದ ಸಾಧಿಸಬೇಕು ಎಂದು ತಾತ್ಪರ್ಯ.

ಚಕ್ಷುರ್ಗ್ರಾಹ್ಯಮಿತಿ । ಚಕ್ಷುರ್ಗ್ರಾಹ್ಯವಿಶೇಷಗುಣತ್ವಮಿತ್ಯರ್ಥಃ । ಏವಮಗ್ರೇಪಿ । ದ್ರವ್ಯಾದೇರಿತಿ । ಉಪಲಂಭಕಮುಪಲಬ್ಧಿಕಾರಣಮ್ । ಇದಮೇವ ವಿವೃಣೋತಿ । ಚಕ್ಷುಷಃ ಇತಿ । ದ್ರವ್ಯಗುಣಕರ್ಮಸಾಮಾನ್ಯಾನಾಂ ಚಾಕ್ಷುಷಪ್ರತ್ಯಕ್ಷಂ ಪ್ರತಿ ಉದ್ಭೂತರೂಪಂ ಕಾರಣಮ್ । ಶುಕ್ಲಾದಿಕಮನೇಕಧೇತಿ । ತಚ್ಚರೂಪಂ ಶುಕ್ಲನೀಲಪೀತರಕ್ತಹರಿತಕಪಿಶಕರ್ಬುರಾದಿಭೇದಾದನೇಕಪ್ರಕಾರಕಂ ಭವತಿ ॥ ನನು ಕಥಂ ಕರ್ಬುರಮತಿರಿಕ್ತರೂಪಂ ಭವತಿ । ಇತ್ಥಂ, ನೀಲಪೀತಾದ್ಯವಯವಾರಬ್ಧೋಽವಯವೀ ನ ತಾವನ್ನೀರೂಪಃ, ಅಪ್ರತ್ಯಕ್ಷಸಂಗಾತ್ । ನಾಪಿ ವ್ಯಾಪ್ಯವೃತಿ ನೀಲಾದಿರೂಪಮುತ್ಪದ್ಯತೇ, ಪೀತಾವಚ್ಛೇದೇನಾಪಿ ನೀಲೋಪಲಬ್ಧಿಪ್ರಸಂ

ಗಾತ್ । ನಾಪ್ಯವ್ಯಾಪ್ಯವೃತ್ತಿನೀಲಾದಿಕಮುತ್ಪದ್ಯತೇ ವ್ಯಾಪ್ಯವೃತ್ತಿಜಾತೀಯ ಗುಣಾನಾಮವ್ಯಾಪ್ಯವೃತ್ತಿತ್ವೇ ವಿರೋಧಾತ್ । ತಸ್ಮಾನ್ನಾನಾ ಜಾತೀಯರೂಪೈ ರವಯವಿನಿ ವಿಜಾತೀಯಂ ಚಿತ್ರಂ ರೂಪಮಾರಭ್ಯತೇ । ಅತಏವೈಕಂ ಚಿತ್ರ ಮಿತ್ಯನುಭವೋಽಪಿ । ನಾನಾರೂಪಕಲ್ಪನೇ ಗೌರವಾತ್ ॥

ಕಾರಿಕಾವ್ಯಾಖ್ಯಾನ ಮಾಡುತ್ತಾನೆ. 'ಚಕ್ಷುರ್ಗ್ರಾಹ್ಯಂ—' ಇತಿ. ಇದು ಹಿಂದೆ ವ್ಯಾಖ್ಯಾತವಾಗಿದೆ. 'ಚಕ್ಷುರ್ಮಾತ್ರಗ್ರಾಹ್ಯಜಾತಿಮದ್ಗುಣತ್ವಂ' ಎಂದು ರೂಪದಲಕ್ಷಣ. 'ಆಗ್ರೇ— ' ಇತಿ. ರಸಸ್ಪರ್ಶ ಲಕ್ಷಣದಲ್ಲಿಯೂ ಹೀಗೆ ಮಾತ್ರ, ಜಾತಿಮತ್‌ಪದಸೇರಿಸಿ ಲಕ್ಷಣವನ್ನು ತಿಳಿಯಬೇಕು. ಶುಕ್ಲಾದಿಗಳು ಏಳುರೂಪಗಳು ಲೋಕಪ್ರಸಿದ್ಧವಾಗಿವೆ. ಕರ್ಬುರವೆಂದರೆ ಚಿತ್ರರೂಪ. ಈ ಚಿತ್ರರೂಪವಿಷಯದಲ್ಲಿ ಆಶಂಕಿಸುತ್ತಾನೆ. 'ನನು—' ಇತಿ. ಇದನ್ನು ಅತಿರಿಕ್ತವಾದ ಒಂದು ರೂಪವೆಂದು ಏಕೆ ಅಂಗೀಕರಿಸಬೇಕು. ನೀಲಪೀತಾದಿಗಳ ಸಮುದಾಯವೇ ಚಿತ್ರ ಎಂಬ ಸಂಜ್ಞೆ ಹೊಂದುತ್ತದೆ. ಎಂದು ಆಕ್ಷೇಪಿಸಿದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಇತ್ಥಂ—' ಇತಿ. ಉಕ್ತಅನುಮಾನಗಳಿಂದ ಕರ್ಬುರ ಎಂಬುದು ಅತಿರಿಕ್ತವಾಗಿ ಸಿದ್ಧ ವಾಗುತ್ತದೆ. ನೀಲಪೀತಾದ್ಯವಯಗಳಿಂದ ಉತ್ಪನ್ನ (ಆರಬ್ಧ) ವಾದ ಅವಯವಿಯು ಎಂದೂ ರೂಪರಹಿತವಾಗಿರುವುದಿಲ್ಲ. ರೂಪರಹಿತವಾದರೆ ಅದು ಪ್ರತ್ಯಕ್ಷವಾಗುವುದು ಹೇಗೆ ? ದ್ರವ್ಯಚಾಕ್ಷುಷವನ್ನು ಕುರಿತು ಉದ್ಭೂತರೂಪ ಕಾರಣವೆಂದು ಹಿಂದೆ ಹೇಳಿದೆ. ವ್ಯಾಪ್ಯವೃತ್ತಿ—ಸರ್ವದೇಶದಲ್ಲಿರುವುದು. ಅವ್ಯಾಪ್ಯವೃತ್ತಿ—ತನ್ನ ಆಶ್ರಯದ ಏಕದೇಶ ದಲ್ಲಿರುವುದು. ಹೀಗೆ ಅನುಮಾನಗಳಿಂದ ನೀಲಪೀತಾದಿರೂಪಗಳಿಂದ ವಿಜಾತೀಯವಾದ ಅಂದರೆ ನೀಲಾದ್ಯತಿರಿಕ್ತವಾದ ಒಂದು ರೂಪವು ಸಿದ್ಧವಾಗುತ್ತದೆ. ಈ ವಿಷಯದಲ್ಲಿ ಅನುಭವರೂಪಪ್ರಮಾಣವನ್ನೂ ತೋರಿಸುತ್ತಾನೆ. 'ಅತಏವ—' ಇತಿ. ನಾನಾ ರೂಪಸಮುದಾಯ ಚಿತ್ರವಾಗುವುದಾದರೆ ಒಂದು ಚಿತ್ರರೂಪವೆಂಬ ವ್ಯವಹಾರ ಬರ ಲಾರದು. ನಾನಾರೂಪವೇ ಚಿತ್ರವೆಂದು ಕಲ್ಪಿಸಿದರೆ ಉಪಸ್ಥಿತಿಕೃತವಾದ ಗೌರವ ದೋಷವೂ ಬರುತ್ತದೆ. ಚಿತ್ರರೂಪವಿಷಯದಲ್ಲಿ ನಾನಾರೂಪಕಲ್ಪನೆಯೇ ಗೌರವ.

ಇತ್ಥಂಚ—ನೀಲಾದೀನಾಂ ಪೀತಾದ್ಯಾರಂಭೇ ಪ್ರತಿಬಂಧಕತ್ವಕಲ್ಪನಾದವಯವಿನಿ ನ ಪೀತಾದ್ಯುತ್ಪತ್ತಿಃ । ಏತೇನ ಸ್ಪರ್ಶೋಽಪಿ ವ್ಯಾಖ್ಯಾತಃ । ರಸಾದಿಕಮಪಿ ನಾವ್ಯಾ ಪ್ಯವೃತ್ತಿ ಕಿಂತು ನಾನಾಜಾತೀಯರಸವದವಯವೈರಾರಬ್ಧೇಽವಯವಿನಿರಸಾ ಭಾವೇಽಪಿ ನ ಕ್ಷತಿಃ। ತತ್ರರಸನಯಾಽವಯವರಸ ಏವ ಗೃಹ್ಯತೇ, ರಸನೇಂದ್ರಿಯಾ ದೀನಾಂ ದ್ರವ್ಯಗ್ರಹೇ ಸಾಮರ್ಥ್ಯಾಭಾವಾತ್, ಅವಯವಿನೋ ನೀರಸತ್ವೇಽಪಿ ಕ್ಷತೇರಭಾವಾತ್ । ನವ್ಯಾಸ್ತು ತತ್ರಾವ್ಯಾಪ್ಯವೃತ್ತ್ಯೇವ ನಾನಾರೂಪಂ, ನೀಲಾದೇಃ ಪೀತಾದಿಪ್ರತಿಬಂಧಕತ್ವಕಲ್ಪನೇ ಗೌರವಾತ್ । ಅತಏವ ಲೋಹಿತೋ ಯಸ್ತು ವರ್ಣೇನ ಮುಖೇ ಪುಚ್ಛೇ ಚ ಪಾಂಡುರಃ ॥

ಶ್ವೇತಃ ಖುರವಿಷಾಣಾಭ್ಯಾಂ ಸ ನೀಲೋ ವೃಷ ಉಚ್ಯತೇ ॥
ಇತ್ಯಾದಿಶಾಸ್ತ್ರಮುಪ್ಯುಪಪದ್ಯತೇ। ನ ಚ ವ್ಯಾಪ್ಯಾವ್ಯಾಪ್ಯವೃತ್ತಿಜಾತೀಯಯೋರ್ದ್ವಯೋರ್ವಿರೋಧಃ, ಮಾನಾಭಾವಾತ್ ! ನ ಚ ಲಾಘವಾದೇಕಂ ರೂಪಮ್ । ಅನುಭವ ವಿರೋಧಾತ್ । ಅನ್ಯಥಾ ಘಟಾದೇರಪಿ ಲಾಘವಾದೈಕ್ಯಂ ಸ್ಯಾತ್ । ಏತೇನ ಸ್ಪರ್ಶಾದಿಕಮಪಿ ವ್ಯಾಖ್ಯಾತಮಿತಿ ವದಂತಿ ॥ ೧೦೦ ॥

'ಇತ್ಥಂಚ—' ಇತಿ. ಲಾಘವದಿಂದ ಒಂದು ಚಿತ್ರರೂಪ ಬೇರೆಯೆಂದು ಸಿದ್ಧವಾದ ಮೇಲೆ ಎಂದರ್ಥ. 'ನೀಲಾದೀನಾಂ—' ಇತಿ. ಸಮವಾಯಸಂಬಂಧದಿಂದ ನೀಲರೂಪವನ್ನು ಕುರಿತು ಸ್ವಸಮವಾಯಿಸಮವೇತತ್ವಸಂಬಂಧದಿಂದ ನೀಲಾತಿರಿಕ್ತರೂಪತ್ವರೂಪದಿಂದ ಪೀತಾದಿಗಳೂ, ಹೀಗೆಯೇ ಪೀತಕ್ಕೆ ಪೀತಾತಿರಿಕ್ತರೂಪತ್ವರೂಪದಿಂದ ನೀಲಾದಿಗಳೂ ಪ್ರತಿಬಂಧಕವಾಗುತ್ತವೆ. ಆದುದರಿಂದ ಅವಯವಿಯಾದಘಟಾದಿಗಳಲ್ಲಿ ಪೀತಾದ್ಯುತ್ಪತ್ತಿ ಇಲ್ಲ. ಆದುದರಿಂದ ಅಲ್ಲಿ ಪೀತಾದಿಗಳ ಪ್ರತ್ಯಕ್ಷವೂ ಇಲ್ಲ. 'ಏತೇನ—' ಇತಿ. ಈ ನ್ಯಾಯವನ್ನು ಸ್ಪರ್ಶದಲ್ಲಿಯೂ ಅನ್ವಯಿಸಿಕೊಳ್ಳಬೇಕು. ಕೋಮಲಸ್ಪರ್ಶಕಠಿನಸ್ಪರ್ಶವುಳ್ಳ ಅವಯವಗಳಿಂದ ಆರಬ್ಧವಾದ ಘಟಾದಿಗಳಲ್ಲಿ ಸ್ಪರ್ಶವಿಲ್ಲದಿದ್ದರೆ ಘಟದಸ್ಪಾರ್ಶನಪ್ರತ್ಯಕ್ಷವಾಗಲಾರದು. ಅದಕ್ಕೋಸ್ಕರ ಚಿತ್ರಸ್ಪರ್ಶವನ್ನು ಕೋಮಲಾದಿಗಳಿಗಿಂತ ಅತಿರಿಕ್ತವಾಗಿ ಅಂಗೀಕರಿಸಬೇಕು.

ರೂಪದಂತೆ ರಸಾದಿಗಳಲ್ಲಿಯೂ ಚಿತ್ರರಸಾದಿಗಳನ್ನು ಅಂಗೀಕರಿಸುವುದಿಲ್ಲವೇ ? ಅಂದರೆ ರಸದಲ್ಲಿ ಚಿತ್ರರಸವಿಲ್ಲವೆಂದು ತೋರಿಸುತ್ತಾನೆ. 'ರಸಾದಿಕಂ—' ಇತಿ. ರಸಾದಿಗಳು ಅವ್ಯಾಪ್ಯವೃತ್ತಿಗಳಲ್ಲ. (ಕೆಲವು ಅವಯವಗಳಲ್ಲಿಮಾತ್ರ ಹುಟ್ಟುವವುಗಳಲ್ಲ.) ರೂಪಕ್ಕಿಂತ ರಸದಲ್ಲಿ ವೈಲಕ್ಷಣ್ಯವಿದೆಯೆಂದು ತೋರಿಸುತ್ತಾನೆ. 'ಕಿಂತು—' ಇತಿ. ನಾನಾಜಾತಿಯರಸವುಳ್ಳ ಅವಯವಗಳಿಂದ ಆರಬ್ಧವಾದ ಅವಯವಿಯಲ್ಲಿ ಯಾವರಸವೂ ಇಲ್ಲ. ಆಯಾಯ ಅವಯವಗಳಲ್ಲಿ ಆಯಾಯರಸಗಳಿರುತ್ತವೆ. ಅವಯವಿಯಲ್ಲಿ ಒಂದು ರಸವಿಲ್ಲವಾದರೂ ಯಾವ ದೋಷವೂ ಇಲ್ಲ. ಹಾಗಾದರೆ ರಸವದ್ದ್ರವ್ಯಪ್ರತ್ಯಕ್ಷಬರುವುದು ಹೇಗೆ ? ಎಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ತತ್ರ—' ಇತಿ. ರಸನೇಂದ್ರಿಯದಿಂದ ಅವಯವಗತರಸವೇ ಗೃಹೀತವಾಗುತ್ತದೆ. ರಸನೇಂದ್ರಿಯವು ದ್ರವ್ಯದಲ್ಲಿರುವ ರಸಾನುಭವವನ್ನುಂಟುಮಾಡುವುದಲ್ಲದೆ ದ್ರವ್ಯಪ್ರತ್ಯಕ್ಷವನ್ನುಂಟುಮಾಡುವುದಿಲ್ಲ. ಚಿತ್ರರಸಪ್ರತೀತಿಯೆಂದರೆ ಅವಯವಗಳನಾನಾರಸಾನುಭವವೇ ಅಲ್ಲದೆ ಬೇರೆಯಲ್ಲ. ರಸನೇಂದ್ರಿಯಾದಿಪದದಿಂದ ಘ್ರಾಣಶ್ರೋತ್ರ ಇಂದ್ರಿಯಗಳನ್ನು ತೆಗೆದುಕೊಳ್ಳಬೇಕು. ಇವುಗಳೂ ದ್ರವ್ಯಪ್ರತ್ಯಕ್ಷಜನಕಗಳಲ್ಲ.

ಈ ವಿಷಯದಲ್ಲಿ ಚಿಂತಾಮಣಿಕಾರಾದಿ ನವ್ಯನೈಯಾಯಿಕರಮತವನ್ನು ತೋರಿಸುತ್ತಾನೆ. 'ನವ್ಯಾಸ್ತು—' ಇತಿ. ಇವರು ಚಿತ್ರರೂಪವನ್ನು ಕಲ್ಪಿಸುವುದಿಲ್ಲ. ಚಿತ್ರರೂಪವನ್ನಂಗೀಕರಿಸಿದರೆ ಸಮವಾಯಸಂಬಂಧದಿಂದ ನೀಲಾದಿರೂಪವನ್ನು ಕುರಿತು ಸ್ವಾ

ಶ್ರಯಸಮವೇತತ್ವಸಂಬಂಧದಿಂದ ನೀಲತ್ವಾದಿರೂಪದಿಂದ ಕಾರ್ಯಕಾರಣಭಾವವನ್ನೂ, ಸಮವಾಯದಿಂದ ನೀಲವನ್ನು ಕುರಿತು, ಸ್ವಸಮವಾಯಿಸಮವೇತತ್ವಸಂಬಂಧದಿಂದ ನೀಲಾದ್ಯತಿರಿಕ್ತರೂಪಕ್ಕೆ ಪ್ರತಿಬಧ್ಯಪ್ರತಿಬಂಧಕಭಾವವನ್ನೂ ಕಲ್ಪಿಸಬೇಕಾದುದರಿಂದ ಗೌರವ ಬರುತ್ತದೆ. ಹಾಗಾದರೆ ಪೀತಕಪಾಲಾವಚ್ಛೇದದಿಂದ ನೀಲಾಪತ್ತಿವಾರಣೆ ಹೇಗೆ? ಅಂದರೆ ಅವಚ್ಛೇದಕತಾಸಂಬಂಧದಿಂದ ನೀಲಾದಿಗಳನ್ನು ಕುರಿತು ಸಮವಾಯ ದಿಂದ ನೀಲಾದಿಗಳಿಗೆ ಕಾರಣತ್ವಕಲ್ಪನೆಮಾಡುವುದರಿಂದ ದೋಷಕ್ಕೆ ಅವಕಾಶವಿಲ್ಲ. ಆದುದರಿಂದ ಚಿತ್ರರೂಪಬೇರೆ ಇಲ್ಲ. ಈ ವಿಷಯದಲ್ಲಿ ಸ್ಕಾಂದಪುರಾಣದವಾಕ್ಯವನ್ನು ಪ್ರಮಾಣವಾಗಿ ತೋರಿಸುತ್ತಾನೆ, 'ಅತ ಏವ—' ಇತಿ. ಚಿತ್ರರೂಪವಿದ್ದರೆ ಚಿತ್ರ ವೃಷವೆಂದೇ ಹೇಳಬಹುದಿತ್ತು. ಪುನಃ ಆಶಂಕಿಸುತ್ತಾನೆ. 'ನಚ —' ಇತಿ. ವ್ಯಾಪ್ಯವೃತ್ತಿ, ಅವ್ಯಾಪ್ಯವೃತ್ತಿಗಳಿಗೆ ಪರಸ್ಪರವಿರೋಧ ಹಿಂದೆ ಹೇಳಿಲ್ಲವೇ? ಅಂದರೆ ವಿರೋಧದಲ್ಲಿ ಯಾವ ಪ್ರಮಾಣವೂ ಇಲ್ಲವೆಂದು ಸಮಾಧಾನ ಹೇಳುತ್ತಾನೆ. 'ಮಾನಾಭಾವಾತ್—' ಇತಿ. ವ್ಯಾಪ್ಯವೃತ್ತಿಸ್ವಭಾವಗಳಾಗಿದ್ದರೂ ರೂಪಾದಿಗಳು ಅವ್ಯಾಪ್ಯವೃತ್ತಿತ್ವಾವಚ್ಛೇದಕದಿಂದ ಹುಟ್ಟಲು ಯಾವತೊಂದರೆಯೂಇಲ್ಲ. ಪ್ರಮಾಣ ವಿದ್ದಿದ್ದರೆ ಹಾಗೆ ಹುಟ್ಟುವುದಿಲ್ಲವೆಂದು ಹೇಳಬಹುದಿತ್ತು. ಹಿಂದಿನಂತೆ ಲಾಘವದಿಂದ ಒಂದೇರೂಪವೆನ್ನುವುದರಲ್ಲಿಯೂ ಪ್ರಮಾಣವಿಲ್ಲ. ಹಿಂದೆ ಹೇಳಿದಂತೆಯೇ ಲಾಘವವೊಂದೇ ಪ್ರಯೋಜಕವಾದರೆ ಘಟಾದಿಗಳೂ ಒಂದೇ ಆಗಲಿ ಎಂದು ಆಶಂಕಿಸಬಹುದು. ಹೀಗೆಯೇ ಚಿತ್ರಸ್ಪರ್ಶಾದಿಗಳೂ ಇಲ್ಲವೆಂದು ಇದರಂತೆಯೇ ತಿಳಿಯಬೇಕು. ॥ ೧೦೦ ॥

**ಜಲಾದಿಪರಮಾಣೌ ತನ್ನಿತ್ಯಮನ್ಯತ್ಸಹೇತುಕಮ್ ॥**

ಜಲಾದೀತಿ । ಜಲಪರಮಾಣೌ ತೇಜಃ ಪರಮಾಣೌ ಚ ರೂಪಂ ನಿತ್ಯಮ್ । ಪೃಥಿವೀಪರಮಾಣುರೂಪಂ ತು ನ ನಿತ್ಯಂ, ತತ್ರ ಪಾಕೇನ ರೂಪಾಂತರೋತ್ಪತ್ತೇಃ । ನಹಿ ಘಟಸ್ಯ ಪಾಕಾನಂತರಂ ತದವಯವೋಽಪಕ್ವ ಉಪಲಭ್ಯತೇ । ನಹಿ ರಕ್ತ ಕಪಾಲಸ್ಯ ಕಪಾಲಿಕಾ ನೀಲಾವಯವಾ ಭವತಿ । ಏವಂ ಕ್ರಮೇಣ ಪರಮಾಣಾ ವಪಿ ಪಾಕಸಿದ್ಧೇಃ । ಅನ್ಯಜ್ಜಲತೇಜಃ ಪರಮಾಣುರೂಪಭಿನ್ನಂ ರೂಪಂ, ಸಹೇ ತುಕಂ ಜನ್ಯಮ್ ॥

ಜಲತೇಜಸ್ಸುಗಳ ಪರಮಾಣುಗಳಲ್ಲಿರುವರೂಪವು ನಿತ್ಯವಾಗಿರುತ್ತದೆ. ನಿತ್ಯಾಶ್ರಿತ ರೂಪ ನಿತ್ಯ. ಅನಿತ್ಯದ್ರವ್ಯಾಶ್ರಿತರೂಪ ಅನಿತ್ಯವಾಗುತ್ತದೆ. ಪೃಥಿವೀಪರಮಾಣುಗಳಲ್ಲಿ ರುವ ರೂಪಮಾತ್ರ ಅನಿತ್ಯವಾಗುತ್ತದೆ. ಅಲ್ಲಿ ಪಾಕದಿಂದ ರೂಪಾಂತರೋತ್ಪತ್ತಿ ಯಾಗುವುದರಿಂದ ಅನಿತ್ಯವಾಗುತ್ತದೆ. ಘಟವು ಪಕ್ವವಾದಾಗ ಅದರ ಅವಯವಗಳೂ ಪಕ್ವವಾಗುವುದರಿಂದ ಪರಮಾಣುಗಳಲ್ಲೇ ರೂಪಾಂತರೋತ್ಪತ್ತಿಯೆಂದು ತಿಳಿಯಬೇಕು. 'ಅನ್ಯತ್ ಸಹೇತುಕಂ' ಎಂಬುದರ ವ್ಯಾಖ್ಯಾನ—'ಜಲತೇಜಃ—' ಇತಿ.

**ರಸಸ್ತು ರಸನಾಗ್ರಾಹ್ಯೋ ಮಧುರಾದಿರನೇಕಧಾ || ೧೦೦ ||**
**ಸಹಕಾರೀ ರಸಾಜ್ಞಾಯಾ ನಿತ್ಯತಾದಿ ಚ ಪೂರ್ವವತ್ ||**

ರಸಂ ನಿರೂಪಯತಿ—ರಸಸ್ತ್ವಿತಿ । ಸಹಕಾರೀತಿ । ರಾಸನಜ್ಞಾನೇ ರಸಃ ಕಾರಣಮಿತ್ಯರ್ಥಃ । ಪೂರ್ವವದಿತಿ । ಜಲಪರಮಾಣೌ ರಸೋ ನಿತ್ಯೋಽನ್ಯಃ ಸರ್ವೋಽಪಿ ರಸೋಽನಿತ್ಯ ಇತ್ಯರ್ಥಃ ||—

'ರಸನಗ್ರಾಹ್ಯತ್ವೇ ಸತಿ ಗುಣತ್ವಂ' ರಸದ ಲಕ್ಷಣ. ರಸತ್ವ,ರಸಾಭಾವದಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ 'ಗುಣತ್ವಂ' ಎಂದಿದೆ. ಅದು ಮಧುರಾದಿಭೇದದಿಂದ ಆರು ವಿಧವಾಗಿರುತ್ತದೆ. ರಾಸನಪ್ರತ್ಯಕ್ಷದಲ್ಲಿ ಇದು ಸಹಕಾರಿಕಾರಣವಾಗುತ್ತದೆ. ಜಲಪರಮಾಣುವಿನಲ್ಲಿರುವ ರಸವು ನಿತ್ಯವೂ, ಜನ್ಯಜಲಪೃಥಿವೀಯಲ್ಲಿರುವ ರಸವು ಅನಿತ್ಯವೂ ಆಗಿರುತ್ತದೆ.

**ಘ್ರಾಣಗ್ರಾಹ್ಯೋ ಭವೇದ್ಗಂಧೋ ಘ್ರಾಣಸ್ಯೈವೋಪಕಾರಕಃ || ೧೦೨ ||**
**ಸೌರಭಶ್ಚಾಸೌರಭಶ್ಚ ಸ ದ್ವೇಧಾ ಪರಿಕೀರ್ತಿತಃ ||**

ಘ್ರಾಣಗಾಹ್ಯ ಇತಿ । ಉಪಕಾರಕ ಇತಿ । ಘ್ರಾಣಜನ್ಯಜ್ಞಾನೇ ಕಾರಣಮಿತ್ಯರ್ಥಃ । ಸರ್ವೋಽಗಂಧೋಽನಿತ್ಯ ಏವ || ೧೦೨ ||

'ಘ್ರಾಣಗ್ರಾಹ್ಯತ್ವೇ ಸತಿ ಗುಣತ್ವಂ' ಗಂಧದಲಕ್ಷಣ. ಹಿಂದಿನಂತೆಯೇ ವಿವರ ತಿಳಿಯಬೇಕು. ಘ್ರಾಣಜಪ್ರತ್ಯಕ್ಷದಲ್ಲಿ ಇದು ಸಹಕಾರಿಕಾರಣವಾಗುತ್ತದೆ. ಸುರಭಿ, ಅಸುರಭಿ ಎಂದು ಇದು ಎರಡುವಿಧವಾಗಿರುತ್ತದೆ. ಸೌರಭ ಎಂಬಲ್ಲಿ ಸ್ವಾರ್ಥದಲ್ಲಿ ಅಣ್ ಪ್ರತ್ಯಯ ಬಂದಿದೆ.

**ಸ್ಪರ್ಶಸ್ತ್ವಗಿಂದ್ರಿಯಗ್ರಾಹ್ಯಸ್ತ್ವಚಃ ಸ್ಯಾದುಪಕಾರಕಃ || ೧೦೩ ||**
**ಅನುಷ್ಣಾಶೀತ ಶೀತೋಷ್ಣಭೇದಾತ್ಸ ತ್ರಿವಿಧೋ ಮತಃ ।**
**ಕಾಠಿನ್ಯಾದಿ ಕ್ಷಿತಾವೇವ ನಿತ್ಯತಾದಿ ಚ ಪೂರ್ವವತ್ || ೧೦೪ ||**

ಸ್ಪರ್ಶಂ ನಿರೂಪಯತಿ—ಸ್ಪರ್ಶಇತಿ । ಉಪಕಾರಕ ಇತಿ । ಸ್ಪಾರ್ಶನಪ್ರತ್ಯಕ್ಷೇ ಸ್ಪರ್ಶಃ ಕಾರಣಮಿತ್ಯರ್ಥ || ಅನುಷ್ಣಾಶೀತೇತಿ । ಪೃಥಿವ್ಯಾಂ ವಾಯೌ ಚ ಸ್ಪರ್ಶೋಽನುಷ್ಣಾಶೀತಃ । ಜಲೇ ಶೀತಃ । ತೇಜಸ್ಯುಷ್ಣಃ । ಕಾಠಿನ್ಯೇತಿ । ಕಠಿಣಸುಕುಮಾರಸ್ಪರ್ಶೌಪೃಥಿವ್ಯಾಮೇವೇತ್ಯರ್ಥಃ । ಕಠಿಣತ್ವಾದಿಕಂ ತು ನ ಸಂಯೋಗಗತೋ ಜಾತಿವಿಶೇಷಃ ಚಕ್ಷುರ್ಗ್ರಾಹ್ಯತ್ವಾಪತ್ತೇಃ । ಪೂರ್ವವದಿತಿ । ಜಲತೇಜೋವಾಯುಪರಮಾಣುಸ್ಪರ್ಶಾ ನಿತ್ಯಾಸ್ತದ್ಭಿನ್ನಾಸ್ತ್ವನಿತ್ಯಾ ಇತ್ಯರ್ಥಃ || ೧೦೪ ||

'ತ್ವಗಿಂದ್ರಿಯೇತರಾಗ್ರಾಹ್ಯತ್ವೇ ಸತಿ ತ್ವಗಿಂದ್ರಿಯಗ್ರಾಹ್ಯತ್ವೇ ಸತಿ ಗುಣತ್ವಂ' ಸ್ಪರ್ಶಗುಣದಲಕ್ಷಣ ಸಂಯೋಗಾದಿಗಳಲ್ಲಿ ಅತಿವ್ಯಾಪ್ತಿವಾರಣೆಗೆಮಾತ್ರ ಪದಾರ್ಥ ಸೇರಿಸಿ ಲಕ್ಷಣಹೇಳಿದೆ. ಸ್ಪಾರ್ಶನ ಪ್ರತ್ಯಕ್ಷದಲ್ಲಿ ಸ್ಪರ್ಶವು ಸಹಕಾರಿಕಾರಣ. ಅನುಷ್ಣಾಶೀತ, ಶೀತ, ಉಷ್ಣಗಳೆಂದು ಇದು ಮೂರುವಿಧ. ಪೃಥಿವೀ ಮತ್ತು ವಾಯು ಗಳಲ್ಲಿ ಅನುಷ್ಣಾಶೀತಸ್ಪರ್ಶವೂ, ಜಲದಲ್ಲಿ ಶೀತಸ್ಪರ್ಶವೂ, ತೇಜಸ್ಸಿನಲ್ಲಿ ಉಷ್ಣಸ್ಪರ್ಶವೂ ಇರುತ್ತದೆ. ಜಲ, ತೇಜಸ್ಸು, ವಾಯುಗಳ ಪರಮಾಣುಗಳಲ್ಲಿರುವ ಸ್ಪರ್ಶವುನಿತ್ಯ ವಾಗಿಯೂ, ಇತರಸ್ಪರ್ಶವು ಅನಿತ್ಯವಾಗಿಯೂ ಇರುತ್ತದೆ. ಕಠಿಣಕೋಮಲಸ್ಪರ್ಶಗಳು ಕೇವಲಪೃಥಿವಿಯಲ್ಲಿ ಇರುತ್ತದೆ. ಕಠಿಣತ್ವಕೋಮಲತ್ವಗಳು ಸಂಯೋಗದಲ್ಲಿರುವ ಜಾತಿವಿಶೇಷವೆಂದು ಕೆಲವರು ಹೇಳುತ್ತಾರೆ. ಇದು ಸರಿಯಲ್ಲವೆಂದು ತಿಳಿಸುತ್ತಾನೆ. 'ಕಠಿಣತ್ವಾದಿ—' ಇತಿ. ಸಂಯೋಗವಲ್ಲಿರುವ ಜಾತಿವಿಶೇಷವಾದರೆ ಅದು ಚಾಕ್ಷುಷ ಪ್ರತ್ಯಕ್ಷವಿಷಯವಾಗಬೇಕಾಗುತ್ತದೆ. ಆದರೆ ಕಣ್ಣಿನಿಂದ ಗ್ರಹಿಸಲು ಸಾಧ್ಯವಿಲ್ಲ. ಆದುದರಿಂದ ಸ್ಪರ್ಶತ್ವವ್ಯಾಪ್ಯಗಳಾದ ಅವು ಬೇರೆಯೆಂದೇ ತಿಳಿಯಬೇಕು.

**ಏತೇಷಾಂ ಪಾಕಜತ್ವಂ ತು ಕ್ಷಿತೌ ನಾನ್ಯತ್ರ ಕುತ್ರಚಿತ್ ||**
**ತತ್ರಾಪಿ ಪರಮಾಣೌ ಸ್ಯಾತ್ಪಾಕೋ ವೈಶೇಷಿಕೇ ನಯೇ || ೧೦೫ ||**

ಏತೇಷಾಮಿತಿ | ಏತೇಷಾಂ ರೂಪರಸಗಂಧಸ್ಪರ್ಶಾನಾಮ್ | ನಾನ್ಯತ್ರೇತಿ | ಪೃಥಿವ್ಯಾಂ ಹಿ ರೂಪರಸಗಂಧಸ್ಪರ್ಶ ಪರಾವೃತ್ತಿರಗ್ನಿಸಂಯೋಗಾದುಪಲಭ್ಯತೇ|ನಹಿಶತಧಾಪಿ ಧ್ಮಾಯಮಾನೇ ಜಲೇ ರೂಪಾದಿಕಂ ಪರಾವರ್ತತೇ | ನೀರೇ ಸೌರಭಮೌಷ್ಣ್ಯಂ ಚಾನ್ವಯವ್ಯತಿರೇಕಾಭ್ಯಾಮೌಪಾಧಿಕಮೇವೇತಿ ನಿರ್ಣೀಯತೇ | ಪವನ ಪೃಥಿವ್ಯೋಃ ಶೀತಸ್ಪರ್ಶಾದಿವತ್ | ತತ್ರಾಪಿ ಪೃಥಿವೀಷ್ವಪಿ ಮಧ್ಯೇ ಪರಮಾಣಾವೇವ ರೂಪಾದೀನಾಂ ಪಾಕ ಇತಿ ವೈಶೇಷಿಕಾ ವದಂತಿ ||

ರೂಪರಸಾದಿಗಳಲ್ಲಿ ವಿಶೇಷವನ್ನು ತೋರಿಸುತ್ತಾನೆ. 'ಏತೇಷಾಂ—' ಇತಿ. ರೂಪ, ರಸಗಂಧಸ್ಪರ್ಶಗುಣಗಳು ಪೃಥಿವಿಯಲ್ಲಿ ಮಾತ್ರ ಪಾಕದಿಂದ (ವಿಲಕ್ಷಣತೇಜಃ ಸಂಯೋಗದಿಂದ) ಹುಟ್ಟುತ್ತವೆ. 'ನಾನ್ಯತ್ರ—' ಇತಿ. ಜಲಾದಿಗಳಲ್ಲಿರುವ ರೂಪಾದಿಗಳಿಗೆ ಎಂದೂ ಪಾಕಜತ್ವವಿಲ್ಲ. ಪೃಥಿವಿಯಲ್ಲಿ ಪಾಕದಿಂದ ಅವುಗಳ ಪರಾವೃತ್ತಿ ಅಂದರೆ ಬೇರೆಯಾಗುವುದು. (ಒಂದುರೂಪಹೋಗಿ ಇನ್ನೊಂದು ಹುಟ್ಟು ವುದು) ಸ್ಪಷ್ಟವಾಗಿ ನೋಡಬಹುದು. ಜಲಾದಿಗಳಲ್ಲಿ ಎಂದೂ ಇಲ್ಲ. 'ನೀರೇ—' ಇತಿ. ಯದ್ಯಪಿ ನೀರಿನಲ್ಲಿ ಗಂಧವೂ, ಉಷ್ಣಸ್ಪರ್ಶವೂ ಕೆಲವುಸಮಯ ತೋರಬಹುದು. ಆದರೆ ಅದು ಅನ್ವಯವ್ಯತಿರೇಕದಿಂದ ಉಪಾಧಿಯಿಂದ ಬಂದುದೆಂದು ಸ್ಪಷ್ಟವಾಗುತ್ತದೆ. ಪೃಥಿವೀಸಂಬಂಧವಿದ್ದರೆ ಸೌರಭಭಾನ, ಪೃಥಿವೀಸಂಬಂಧವಿಲ್ಲವಾದರೆ ಸೌರಭಭಾನವೂ ಇಲ್ಲವೆಂದು ಚೆನ್ನಾಗಿ ತಿಳಿಯಬಹುದು. ಹೀಗೆಯೇ ಪೃಥಿವೀವಾಯುಗಳಲ್ಲಿಯೂ ಜಲ

ಸಂಬಂಧವಾದ ಉಪಾಧಿನಿಮಿತ್ತದಿಂದ ಶೀತಸ್ಪರ್ಶತೋರುವುದಲ್ಲದೆ ಅದು ಅವುಗಳ ವಾಸ್ತವಿಕಗುಣವಲ್ಲ. ಪಾಕದಿಂದ ರೂಪಪರಾವೃತ್ತಿವಿಷಯದಲ್ಲಿ ಮತಭೇದವನು ತೋರಿಸುತ್ತಾನೆ. 'ತತ್ರಾಪಿ—' ಇತಿ. ವೈಶೇಷಿಕರು ಪರಮಾಣುವಿನಲ್ಲಿಯೇ ವಿಲಕ್ಷಣತೇಜಃ ಸಂಯೋಗವಾಗಿ ರೂಪಾಂತರೋತ್ಪತ್ತಿಯನ್ನು ಅಂಗೀಕರಿಸುತ್ತಾರೆ. ಇವರಿಗೆ ಪೀಲು (—ಪರಮಾಣು) ಪಾಕವಾದಿಗಳೆಂದು ಹೆಸರು.

ಇದು ವೈಶೇಷಿಕರ ಸಿದ್ಧಾಂತ. ಪಾಕಕ್ಕೋಸ್ಕರ ಹಸಿಯಾದ ಘಟವು ಬೆಂಕಿಯಲ್ಲಿ ಇಡಲ್ಪಡುತ್ತದೆ. ಆಗ ವೇಗವುಳ್ಳ ಅಗ್ನಿಯಜ್ವಾಲೆಗಳು ಅದರೊಳಗೆ ಪ್ರವೇಶಿಸಿ ಅವಯವಿಯವಿಭಾಗಮಾಡುತ್ತವೆ. ಅದರಿಂದ ಪೂರ್ವಾವಯವ ಸಂಯೋಗವು ನಷ್ಟವಾಗುತ್ತದೆ. ಅಸಮವಾಯಿಕಾರಣನಾಶದಿಂದ ಭಾವಕಾರ್ಯನಾಶವೆಂದು ನಿಯಮವಿರುವುದರಿಂದ ಅವಯವನಾಶದಿಂದ ಸಂಪೂರ್ಣಶ್ಯಾಮಘಟವೇ ನಷ್ಟವಾಗುತ್ತದೆ. ಆಮೇಲೆ ಪುನಃ ಪರಮಾಣುಗಳಲ್ಲಿ ರಕ್ತರೂಪ ಉತ್ಪನ್ನವಾಗಿ ದ್ವ್ಯಣುಕಾದಿಕ್ರಮದಿಂದ ರಕ್ತಘಟ ಹುಟ್ಟುತ್ತದೆ. ಇದನ್ನೇ ಮೂಲದಲ್ಲಿ ವಿವರಿಸುತ್ತಾನೆ.

> ತೇಷಾಮಯಮಾಶಯಃ । ಅವಯವಿನಾಽವಷ್ಟಬ್ಧೇಷ್ವವಯವೇಷು ಪಾಕೋ ನ ಸಂಭವತಿ, ಪರಂ ತು ವಹ್ನಿಸಂಯೋಗೇನಾವಯವಿಷು ವಿನಷ್ಟೇಷು ಸ್ವತಂತ್ರೇಷು ಪರಮಾಣುಷು ಪಾಕಃ । ಪುನಶ್ಚ ಪಕ್ವಪರಮಾಣುಸಂಯೋಗಾದ್ ದ್ವ್ಯಣುಕಾದಿಕ್ರಮೇಣ ಪುನರ್ಮಹಾವಯವಿಪರ್ಯಂತಮುತ್ಪತ್ತಿಃ । ತೇಜಸಾಮತಿಶಯಿತವೇಗವಶಾತ್ಪೂರ್ವವ್ಯೂಹನಾಶೋ ಝಟಿತಿ ವ್ಯೂಹಾಂತರೋತ್ಪತ್ತಿಶ್ಚೇತಿ ॥

ಅವಯವಿನಾ—ಘಟಪಟಾದಿಗಳಿಂದ ಅವಷ್ಟಬ್ಧೇಷು—ಆವೃತವಾದ, ಅವಯವೇಷು—ಕಪಾಲಾದಿಗಳಲ್ಲಿ ಪಾಕಃ—ರೂಪಪರಾವೃತ್ತಿಗೆ ಕಾರಣವಾದ ತೇಜಃ ಸಂಯೋಗವು ನ ಸಂಭವತಿ—ಆಗಲು ಸಾಧ್ಯವೇ ಇಲ್ಲ. ರೂಪಾದಿನಾಶವಾಗಬೇಕಾದರೆ ಸಾಕ್ಷಾತ್ತಾಗಿ ಅಥವಾ ಪರಂಪರೆಯಿಂದ ಸಾಧಾರಣವಾಗಿ ಸರ್ವಾವಯವಚ್ಛೇದದಿಂದ ಕಾರಣಹೇಳಬೇಕು. ಅವಯವಿಯಿಂದ ಅವಯವಗಳು ಪ್ರತಿರುದ್ಧವಾಗಿರುವಾಗ ಅವಯವಿಯಲ್ಲಿ ಪೂರ್ವರೂಪನಾಶವಾಗುವುದು ಹೇಗೆ ? ಪೂರ್ವರೂಪನಾಶವಾಗದೆ ರೂಪಾಂತರ ಹುಟ್ಟಲಾರದು. ಸರ್ವಾವಯವಾಚ್ಛೇದದಿಂದ ತೇಜಃ ಸಂಯೋಗವಾಗದಿರುವುದರಿಂದ ರೂಪನಾಶ ಇತರ ರೂಪೋತ್ಪತ್ತಿಯಾಗಲಾರದೆಂದು ತಾತ್ಪರ್ಯ. ಅವಯವಿಷು ವಿನಷ್ಟೇಷು—ಅಗ್ನಿಸಂಯೋಗದಿಂದ ಘಟಾದ್ಯಾರಂಭಕ ಕಪಾಲಾದಿ ದ್ವ್ಯಣುಕಪರ್ಯಂತವಾಗಿ ನಾಶವಾದಮೇಲೆ ಸ್ವತಂತ್ರೇಷು—ಕಾರ್ಯದ್ರವ್ಯಧ್ವಂಸದಿಂದಕೂಡಿದ, ಪರಮಾಣುಗಳಲ್ಲಿ ಪಾಕವುಂಟಾಗಿ ರಕ್ತರೂಪಹುಟ್ಟಿ ಪರಮಾಣುಸಂಯೋಗದಿಂದ ದ್ವ್ಯಣುಕಾದಿಕ್ರಮದಿಂದ ಪುನಃ ಮಹಾವಯವಿಯವರೆಗೆ ಹುಟ್ಟುತ್ತದೆ. ಹೀಗೆ ಸಂಸ್ಥಾನನಾಶಾದಿಗಳು ತೋರದಿರಲು ಕಾರಣವನ್ನು ತೋರಿಸುತ್ತಾನೆ. 'ತೇಜಸಾಂ—' ಇತಿ. ವ್ಯೂಹ—

ಸಂಸ್ಥಾನ (ಅವಯವ) ತೇಜಸ್ಸುಗಳ ಅತಿಶಯವೇಗದಿಂದ ಪೂರ್ವಸಂಸ್ಥಾನನಾಶವಾಗಿ ಬೇಗ ನೂತನಸಂಸ್ಥಾನೋತ್ಪತ್ತಿಯಾಗುತ್ತದೆ.

ಅತ್ರ ದ್ವ್ಯಣುಕಾದಿಸ್ವವಿನಾಶಮಾರಭ್ಯ ಕತಿಭಿಃ ಕ್ಷಣೈಃ ಪುನರುತ್ಪತ್ತ್ಯಾರೂಪಾದಿಮದ್ಭವತೀತಿ ಶಿಷ್ಯಬುದ್ಧಿವೈಶದ್ಯಾರ್ಥಂ ಕ್ಷಣಪಕ್ರಿಯಾ ॥ ತತ್ರ ವಿಭಾಗಜವಿಭಾಗಾನಂಗೀಕಾರೇ ನವಕ್ಷಣಾ । ತದಂಗೀಕಾರೇ ತು ವಿಭಾಗಃ ಕಿಂಚಿತ್ಸಾಪೇಕ್ಷೋ ವಿಭಾಗಂ ಜನಯೇತ್ । ನಿರಪೇಕ್ಷಸ್ಯ ತತ್ತ್ವೇ ಕರ್ಮತ್ವಂ ಸ್ಯಾತ್ । ಸಂಯೋಗವಿಭಾಗಯೋರನಪೇಕ್ಷಂ ಕಾರಣಂ ಕರ್ಮೇತಿ ವೈಶೇಷಿಕಸೂತ್ರನ್ । ಸ್ವೋತ್ತರೋತ್ಪನ್ನಭಾವಾಂತರಾನಪೇಕ್ಷತ್ವಂ ತಸ್ಯಾರ್ಥಃ । ಅನ್ಯಥಾ ಕರ್ಮಣೋಽಪ್ಯುತ್ತರಸಂಯೋಗೋತ್ಪತ್ತೌ ಪೂರ್ವಸಂಯೋಗನಾಶಾಪೇಕ್ಷಣಾದವ್ಯಾಪ್ತಿಃ ಸ್ಯಾತ್ ॥

ಶಿಷ್ಯರಿಗೆ ವಿಶದವಾಗಿ ತಿಳಿಯಲು ದ್ವ್ಯಣುಕದವರೆಗೆ ನಾಶವಾಗಿ ಎಷ್ಟುಕ್ಷಣಗಳಿಂದ ಪುನಃ ರೂಪಾದಿಗಳು ಹುಟ್ಟುತ್ತವೆಂದು ತಿಳಿಸುತ್ತಾನೆ. 'ಅತ್ರ—' ಇತಿ.

ತತ್ರ—ಕ್ಷಣಪ್ರಕ್ರಿಯೆಯನ್ನು ವಿಚಾರಿಸಿದಾಗ ಎಂದರ್ಥ. ವಿಭಾಗಜವಿಭಾಗ ಅಂಗೀಕರಿಸಿದರೆ ಒಂಬತ್ತು ಕ್ಷಣಗಳಾಗುತ್ತವೆ. ಕಾರಣಾಕಾರಣಗಳ ವಿಭಾಗವಾದರೆ ಕಾರ್ಯಾಕಾರ್ಯವಿಭಾಗವಾಗುವಂತೆ, ಕೇವಲಕಾರಣವಿಭಾಗದಿಂದ ಕಾರಣಾಕಾರಣವಿಭಾಗವನ್ನು ಒಪ್ಪದಿದ್ದರೆ ಎಂದರ್ಥ. ದ್ರವ್ಯಾರಂಭಕವಾದ ಯಾವ ಸಂಯೋಗವಿದೆಯೋ, ಅದಕ್ಕೆ ವಿರುದ್ಧವಾದ ಯಾವ ವಿಭಾಗಜನಕಕ್ರಿಯೆ ಇದೆಯೋ, ಅದಕ್ಕೆ ದ್ರವ್ಯಾನರಂಭಕಸಂಯೋಗಪ್ರತಿದ್ವಂದ್ವಿಯಾದವಿಭಾಗಜನಕತ್ವವಿಲ್ಲ ಎಂಬ ನಿಯಮದಲ್ಲಿ ಪ್ರಮಾಣವಿಲ್ಲವೆಂದು ತಾತ್ಪರ್ಯ. 'ತದಂಗೀಕಾರೇ—' ಇತಿ. ಕೇವಲಕಾರಣವಿಭಾಗದಿಂದ ಕಾರಣಾಕಾರಣವಿಭಾಗವನ್ನು ಅಂಗೀಕರಿಸಿದರೆ ಎಂದರ್ಥ. ಆಗ ವಿಭಾಗವು ಕಿಂಚಿತ್ಸಾಪೇಕ್ಷವಾಗುತ್ತದೆ. ಅಂದರೆ ತನ್ನ ಸಮವಾಯಿಯಲ್ಲಿರುವಕ್ರಿಯಾ ಸಾಪೇಕ್ಷವಾಗುತ್ತದೆ. 'ನಿರಪೇಕ್ಷಸ್ಯ—' ಇತಿ. ಕಾರಣವಿಭಾಗವುನಿರಪೇಕ್ಷವಾಗಿ (ಯಾವಇತರಕಾರಣಸಾಪೇಕ್ಷೆ ಇಲ್ಲದೆ) ವಿಭಾಗಜನಕವಾಗುತ್ತದೆಂದು ಅಂಗೀಕರಿಸಿದರೆ ಆಗ ಕರ್ಮಲಕ್ಷಣವು ಅತಿವ್ಯಾಪ್ತವಾಗುತ್ತದೆ. ಇದಕ್ಕೆ ಸೂತ್ರಪ್ರಮಾಣವನ್ನು ತೋರಿಸುತ್ತಾನೆ. 'ಏಕದ್ರವ್ಯಮಗುಣಂ. ಸಂಯೋಗವಿಭಾಗಯೋರನಪೇಕ್ಷಂ ಕಾರಣಂ ಕರ್ಮ' ಎಂಬ ವೈಶೇಷಿಕಸೂತ್ರದಲ್ಲಿ ಸಂಯೋಗವಿಭಾಗಗಳಿಗೆ ಪದಾರ್ಥಾಂತರಾಪೇಕ್ಷೆಇಲ್ಲದೆಜನಕವಾದದ್ದು ಕರ್ಮವೆಂದು ಕರ್ಮಲಕ್ಷಣ ಹೇಳಿದೆ. ಇಲ್ಲಿ ಅನಪೇಕ್ಷ ಎಂಬುದಕ್ಕೆ ಸ್ವೋತ್ತರೋತ್ಪನ್ನಭಾವಾಂತರಾನಪೇಕ್ಷವೆಂದು ಅರ್ಥ ಹೇಳಬೇಕು. ಸ್ವಪದದಿಂದ ಕರ್ಮವನ್ನು ತೆಗೆದುಕೊಂಡರೆ, ಸ್ವೋತ್ತರೋತ್ಪನ್ನಭಾವಾಂತರವನ್ನು ಅಂದರೆ ತಾನು ಸಂಯೋಗವನ್ನು ಅಥವಾ ವಿಭಾಗವನ್ನು ಹುಟ್ಟಿಸುತ್ತಿರುವಾಗ ತನ್ನಿಂದ ಉತ್ತರದಲ್ಲಿ ಉಂಟಾದ ಇತರ ಭಾವಪದಾರ್ಥವನ್ನು ಅಪೇಕ್ಷಿಸುವುದಿಲ್ಲವೆಂದರ್ಥ. ಇದರಿಂದ ಪೂರ್ವಸಂಯೋಗವನ್ನು ತಾನು ಅಪೇಕ್ಷಿಸಿದರೂ

(ಅವ್ಯಾಪ್ತಿ) ದೋಷಬರುವುದಿಲ್ಲ. ಪೂರ್ವಸಂಯೋಗನಾಶವೆಂಬುದು ಭಾವಪದಾರ್ಥವಲ್ಲ. ಹೀಗೆ ಭಾವಪದಾರ್ಥಾಂತರವನ್ನು ಅಪೇಕ್ಷಿಸದೆ ವಿಭಾಗಜನಕವಾದದ್ದು ಕರ್ಮವೆಂದು ಕರ್ಮಲಕ್ಷಣ. ಈಗ ವಿಭಾಗವೂ ಕ್ರಿಯಾಸಾಪೇಕ್ಷಿಯಾಗಿ ವಿಭಾಗಜನಕವಾಗುತ್ತದೆಂದರೆ ಆಗ ಭಾವಪದಾರ್ಥಾಪೇಕ್ಷಿಯಾದುದರಿಂದ ಕರ್ಮಲಕ್ಷಣ ಅಲ್ಲಿ ಬರುವುದಿಲ್ಲ. ನಿರಪೇಕ್ಷಿಯಾಗಿ ವಿಭಾಗಜನಕವೆಂದರೆ ಕರ್ಮಲಕ್ಷಣವು ಅಲ್ಲಿ ಅತಿವ್ಯಾಪ್ತವಾಗುತ್ತದೆ. ಆದುದರಿಂದ ಸ್ವಸಮವಾಯಿಯಲ್ಲಿರುವ ಕ್ರಿಯಾಸಾಪೇಕ್ಷಿಯಾಗಿ ವಿಭಾಗಜನಕವೆಂದು ಅಂಗೀಕರಿಸಬೇಕು.

ತತ್ರ ಯದಿ ದ್ರವ್ಯಾರಂಭಕಸಂಯೋಗವಿನಾಶವಿಶಿಷ್ಟಂ ಕಾಲಮಪೇಕ್ಷ್ಯ ವಿಭಾಗಜವಿಭಾಗಃ ಸ್ಯಾತ್ತದಾ ದಶಕ್ಷಣಾ ॥ ಅಥ ದ್ರವ್ಯವಿನಾಶವಿಶಿಷ್ಟಂ ಕಾಲಮಪೇಕ್ಷ್ಯ ವಿಭಾಗಜವಿಭಾಗಃ ಸ್ಯಾತ್ತದೈಕಾದಶಕ್ಷಣಾ ॥

'ದ್ರವ್ಯಾರಂಭಕ—' ಇತಿ. ದ್ವ್ಯಣುಕಾದಿರೂಪವಾದ ಯಾವ ದ್ರವ್ಯವಿದೆಯೋ, ಅದಕ್ಕೆ ಆರಂಭಕವಾದ ಯಾವ ಸಂಯೋಗವಿದೆಯೋ, ಅದರ ಯಾವ ಧ್ವಂಸವಿದೆಯೋ, ಆಧ್ವಂಸವಿಶಿಷ್ಟವಾದ (ಉಪಲಕ್ಷಿತವಾದ) ಕಾಲವನ್ನಪೇಕ್ಷಿಸಿ ವಿಭಾಗಜವಿಭಾಗವನ್ನಂಗೀಕರಿಸುವುದಾದರೆ ಆಗ ದಶಕ್ಷಣಪ್ರಕ್ರಿಯೆಯಾಗುತ್ತದೆ. ಆಗ ಅಲ್ಲಿ ಅವಯವಿದ್ರವ್ಯವು ಹತ್ತುಕ್ಷಣಗಳಲ್ಲಿ ರೂಪಾದಿಗಳಿಂದ ಕೂಡುತ್ತದೆಂದು ತಾತ್ಪರ್ಯ. 'ಅಥ—' ಇತಿ. ಆರಂಭಕವಾದ ಸಂಯೋಗದ ಧ್ವಂಸವನ್ನಪೇಕ್ಷಿಸದೆ ಅದರಸ್ಥಾನದಲ್ಲಿ ದ್ರವ್ಯಧ್ವಂಸವಿಶಿಷ್ಟ ಕಾಲವನ್ನು ತೆಗೆದುಕೊಂಡು ವಿಚಾರಮಾಡುವುದಾದರೆ ಆಗ ಹನ್ನೊಂದುಕ್ಷಣಗಳ ಪ್ರಕ್ರಿಯೆ ಆಗುತ್ತದೆ. ಈಗ ಕ್ರಮವಾಗಿ ಆ ಪ್ರಕ್ರಿಯೆಯನ್ನು ತೋರಿಸುತ್ತಾನೆ.

ತಥಾಹಿ—ಅಥ ನವಕ್ಷಣಾ । ವಹ್ನಿಸಂಯೋಗಾತ್ ಪರಮಾಣೌ ಕರ್ಮ. । ತತಃ ಪರಮಾಣ್ವಂತರೇಣ ವಿಭಾಗಃ । ತತ ಆರಂಭಕಸಂಯೋಗನಾಶಃ । ತತೋ ದ್ವ್ಯಣುಕನಾಶಃ ॥ ೧ ॥ ತತಃ ಪರಮಾಣೌ ಶ್ಯಾಮಾದಿನಾಶಃ ॥ ೨ ॥ ತತೋ ರಕ್ತಾದ್ಯುತ್ಪತ್ತಿಃ ॥ ೩ ॥ ತತೋ ದ್ರವ್ಯಾರಂಭಾನುಗುಣಾ ಕ್ರಿಯಾ ॥ ೪ ॥ ತತೋವಿಭಾಗಃ । ತತಃ ಪೂರ್ವಸಂಯೋಗನಾಶಃ ॥ ೬ ॥ ತತ ಆರಂಭಕಸಂಯೋಗಃ ॥ ೭ ॥ ತತಃ ದ್ವ್ಯಣುಕೋತ್ಪತ್ತಿಃ ॥ ೮ ॥ ತತೋ ರಕ್ತಾದ್ಯುತ್ಪತ್ತಿಃ ॥ ೯ ॥

ನನು ಶ್ಯಾಮಾದಿನಾಶಕ್ಷಣೇ ರಕ್ತೋತ್ಪತ್ತಿಕ್ಷಣೇ ವಾ ಪರಮಾಣೌ ದ್ರವ್ಯಾರಂಭಾನುಗುಣಾ ಕ್ರಿಯಾಸ್ತ್ವಿತಿ ಚೇನ್ನ, ಅಗ್ನಿಸಂಯುಕ್ತೇ ಪರಮಾಣೌ ಯತ್ಕರ್ಮತದ್ವಿನಾಶಮಂತರೇಣ ಗುಣೋತ್ಪತ್ತಿಮಂತರೇಣ ಚ ಪರಮಾಣೌ ಕ್ರಿಯಾಂತರಾಭಾವಾತ್ ಕರ್ಮವತಿ ಕರ್ಮಾಂತರಾನುತ್ಪತ್ತೇಃ ನಿರ್ಗುಣೇದ್ರವ್ಯೇ ದ್ರವ್ಯಾರಂಭಾನುಗುಣಕ್ರಿಯಾನುಪಪತ್ತೇಶ್ಚ । ತಥಾಪಿ ಪರಮಾಣೌ ಶ್ಯಾಮಾದಿನಿವೃತ್ತಿಸಮಕಾಲಂ ರಕ್ತಾದ್ಯುತ್ಪತ್ತಿಃ

ಸ್ಯಾದಿತಿ ಚೇನ್ನ, ಪೂರ್ವರೂಪಾದಿಧ್ವಂಸಸ್ಯಾಪಿ ರೂಪಾಂತರೇ ಹೇತುತ್ವಾತ್ ॥ ಇತಿ ನವಕ್ಷಣಾ ॥

ನವಕ್ಷಣಪ್ರಕ್ರಿಯೆಯನ್ನು ತೋರಿಸುತ್ತಾನೆ. ಎಲ್ಲಾಕಡೆಯಲ್ಲಿಯೂ ದ್ವ್ಯಣುಕ ನಾಶವನ್ನಾರಂಭಿಸಿಯೇ ಗಣನೆಮಾಡಿದೆ. ವಹ್ನಿಸಂಯೋಗವೆಂದರೆ ಪಾಕ. ಪಾಕ ದಿಂದ ದ್ವ್ಯಣುಕಾರಂಭಕವಾದಪರಮಾಣುವಿನಲ್ಲಿ ಕ್ರಿಯೆಯುಂಟಾಗುತ್ತದೆ. ಈ ಕ್ರಿಯೆಯಿಂದ ದ್ವ್ಯಣುಕಾರಂಭಕವಾದ ಇನ್ನೊಂದುಪರಮಾಣುವಿನಲ್ಲಿ ವಿಭಾಗವಾಗು ತ್ತದೆ. ಇದರಿಂದ ದ್ವ್ಯಣುಕಾರಂಭಕಸಂಯೋಗನಾಶ. ಇದರಿಂದ ದ್ವ್ಯಣುಕನಾಶ ವಾಗುತ್ತದೆ. ಇದೇ ಮೊದಲನೆಯಕ್ಷಣವೆಂದು ಗಣಿಸಬೇಕು. ಆಮೇಲೆ ಪರಮಾಣು ವಿನಲ್ಲಿ ಪೂರ್ವದಶ್ಯಾಮರೂಪನಾಶ. ಪರಮಾಣುರೂಪನಾಶವನ್ನು ಕುರಿತು ದ್ವ್ಯಣು ಕಾತ್ಮಕದ್ರವ್ಯಪ್ರತಿಬಂಧಕವಾದುದರಿಂದ ದ್ವ್ಯಣುಕನಾಶವಾದಮೇಲೆ ಶ್ಯಾಮರೂಪನಾಶ ವೆಂದುಹೇಳಿದೆ. ಆಮೇಲೆ ರಕ್ತರೂಪದ ಉತ್ಪತ್ತಿ. ಆಮೇಲೆ ಅದೇಪರಮಾಣುವಿನಲ್ಲಿ ದ್ವ್ಯಣು ಕಾರಂಭಕ್ಕೆ ಅನುಕೂಲವಾದ ಕ್ರಿಯೋತ್ಪತ್ತಿ. ಅದರಿಂದ ವಿಭಾಗ. ಆ ವಿಭಾಗದಿಂದ ಪೂರ್ವಸಂಯೋಗನಾಶ. ಅದರಿಂದ ದ್ರವ್ಯಾರಂಭಕಸಂಯೋಗ. ಇದರಿಂದ ದ್ವ್ಯಣು ಕದ ಉತ್ಪತ್ತಿ. ಆಮೇಲೆ ಅದರಲ್ಲಿ ರಕ್ತಾದ್ಯುತ್ಪತ್ತಿ. ಹೀಗೆ ಒಂಬತ್ತುಕ್ಷಣವಾದಮೇಲೆ ರಕ್ತಾದ್ಯುತ್ಪತ್ತಿಯಾಗುತ್ತದೆ.

'ನನು—' ಎಂಬುದರಿಂದ ಆಶಂಕಿಸುತ್ತಾನೆ. ಒಂಬತ್ತುಕ್ಷಣದವರೆಗೆ ಹೋಗುವುದೇಕೆ ? ಶ್ಯಾಮಾದಿಪೂರ್ವರೂಪನಾಶಕ್ಷಣದಲ್ಲಿ ಅಂದರೆ ಎರಡನೆಯಕ್ಷಣ ದಲ್ಲಿಯೇ ಅಥವಾ ರಕ್ತರೂಪೋತ್ಪತ್ತಿಯಕ್ಷಣದಲ್ಲಿ ಅಂದರೆ ತೃತೀಯಕ್ಷಣದಲ್ಲಿಯೇ ದ್ರವ್ಯಾ ರಂಭಾನುಗುಣವಾದ ಕ್ರಿಯೆ ಏಕಾಗಬಾರದು ? ಎಂದು ಶಂಕೆ. ಅದನ್ನು ಖಂಡಿಸು ತ್ತಾನೆ. 'ನ—' ಇತಿ. ತೇಜಃಸಂಯುಕ್ತ ಪರಮಾಣುವಿನಲ್ಲಿರುವ ಕರ್ಮನಾಶ ವಾಗದೇ, ಇನ್ನೊಂದು ಗುಣ ಅಲ್ಲಿ ಹುಟ್ಟದೇ ಬೇರೊಂದು ಕ್ರಿಯಾ ಅಲ್ಲಿ ಹುಟ್ಟವುದಿಲ್ಲ. ಅದಕ್ಕೆ ಕಾರಣತೋರಿಸುತ್ತಾನೆ. ಕರ್ಮವತಿ—' ಇತಿ. ಒಂದು ಕ್ರಿಯಾ ಇರುವಾಗ ಇನ್ನೊಂದುಕ್ರಿಯೆ ಅಲ್ಲಿ ಹುಟ್ಟುವುದಿಲ್ಲ. ಗುಣೋತ್ಪತ್ತಿ ಆಗದೇ ಕರ್ಮ ಉತ್ಪನ್ನವಾಗು ವುದಿಲ್ಲವೆಂಬುದರಲ್ಲಿಯೂ ಕಾರಣತೋರಿಸುತ್ತಾನೆ. 'ನಿರ್ಗುಣೇ—' ಇತಿ. ನಿರ್ಗುಣ ವಾದ ದ್ರವ್ಯದಲ್ಲಿ ದ್ರವ್ಯಾರಂಭಕಕ್ರಿಯೆಯೂ ಹುಟ್ಟುವುದಿಲ್ಲವೆಂದು ತಾತ್ಪರ್ಯ. ಪುನಃ ಶಂಕಿಸುತ್ತಾನೆ. 'ತಥಾಪಿ—' ಇತಿ. ಪರಮಾಣುವಿನಲ್ಲಿ ಶ್ಯಾಮನಾಶವಾಗುವ ಕಾಲ ದಲ್ಲಿಯೇ ರಕ್ತೋತ್ಪತ್ತಿ ಏಕಾಗಬಾರದೆಂದು ಶಂಕೆ ಅದಕ್ಕೆ ಸಮಾಧಾನ. ರೂಪಾಂತ ರೋತ್ಪತ್ತಿಯಲ್ಲಿ ಪೂರ್ವರೂಪಸತ್ತ್ವವು (ಇರುವಿಕೆ) ಪ್ರತಿಬಂಧಕವಾಗುತ್ತದೆ. ಆದುದ ರಿಂದ ರೂಪಾಂತರಕ್ಕೆ ಪೂರ್ವರೂಪಧ್ವಂಸವೂ ಕಾರಣವೆಂದು ಸಿದ್ಧವಾಗುತ್ತದೆ.

ಅಥ ದಶಕ್ಷಣಾ । ಸಾ ಚ ಆರಂಭಕಸಂಯೋಗವಿನಾಶವಿಶಿಷ್ಟಂ ಕಾಲಮಪೇಕ್ಷ್ಯವಿಭಾ ಗೇನ ವಿಭಾಗಜನನೇ ಸತಿ ಸ್ಯಾತ್ । ತಥಾಹಿ । ವಹ್ನಿಸಂಯೋಗಾತ್

ದ್ವ್ಯಣುಕಾರಂಭಕೇ ಪರಮಾಣೌ ಕರ್ಮ । ತತೋ ವಿಭಾಗಃ । ತತ ಆರಂಭಕ ಸಂಯೋಗನಾಶಃ । ತತೋ ದ್ವ್ಯಣುಕನಾಶವಿಭಾಗಜ ವಿಭಾಗೌ ॥ ೧ ॥ ತತಃ ಶ್ಯಾಮನಾಶಪೂರ್ವಸಂಯೋಗನಾಶೌ ॥ ೨ ॥ ತತೋ ರಕ್ತೋತ್ಪತ್ತ್ಯುತ್ತರ ಸಂಯೋಗೌ ॥ ೩ ॥ ತತೋ ವಹ್ನಿನೋದನಜನ್ಯ ಪರಮಾಣುಕರ್ಮಣೋ ನಾಶಃ ॥ ೪ ॥ ತತೋಽದೃಷ್ಟವದಾತ್ಮಸಂಯೋಗಾದ್ ದ್ರವ್ಯಾರಂಭಾನುಗುಣಾ ಕ್ರಿಯಾ ॥ ೫ ॥ ತತೋ ವಿಭಾಗಃ ॥ ೬ ॥ ತತಃ ಪೂರ್ವಸಂಯೋಗನಾಶಃ ॥ ೭ ॥ ತತ ಆರಂಭಕಸಂಯೋಗಃ ॥ ೮ ॥ ತತೋ ದ್ವ್ಯಣುಕೋತ್ಪತ್ತಿಃ ॥ ೯ ॥ ತತೋ ರಕ್ತೋತ್ಪತ್ತಿಃ ॥ ೧೦ ॥

'ವಿಭಾಗೇನ ವಿಭಾಗಜನನೇ—' ಇತಿ. ಕಾರಣಮಾತ್ರವಿಭಾಗದಿಂದ ಕಾರಣಾ ಕಾರಣವಿಭಾಗವುಂಟಾದಾಗ ಎಂದರ್ಥ. 'ವಿಭಾಗಜವಿಭಾಗೌ—' ಇತಿ. ಆರಂಭಕ ಸಂಯೋಗನಾಶವು ಮೂರನೇಕ್ಷಣದಲ್ಲಿ ಹುಟ್ಟುವುದರಿಂದ ನಾಲ್ಕನೆಯಕ್ಷಣದಲ್ಲಿ ಪರ ಮಾಣುಆಕಾಶಗಳ ವಿಭಾಗವುಂಟಾಗುವುದೆಂದರ್ಥ. 'ಶ್ಯಾಮನಾ—' ಇತಿ. ಪರ ಮಾಣುವಿನಲ್ಲಿರುವ ಶ್ಯಾಮನಾಶ. ಮತ್ತು ಪರಮಾಣ್ವಾಕಾಶಸಂಯೋಗನಾಶ ವೆಂದರ್ಥ. ಪರಮಾಣುಶ್ಯಾಮನಾಶಕ್ಕೆ ದ್ವ್ಯಣುಕನಾಶವು ಕಾರಣವಾದುದರಿಂದ ಮೊದಲೇ ಪರಮಾಣುವಿನಲ್ಲಿ ಶ್ಯಾಮನಾಶನಾಗುವುದಿಲ್ಲ. 'ರಕ್ತೋತ್ಪತ್ತಿ—' ಇತಿ. ಉತ್ತರಸಂಯೋಗವಿಲ್ಲದೇ ಪೂರ್ವಕರ್ಮನಾಶವಾಗದಿರುವುದರಿಂದ. ದ್ರವ್ಯಾರಂಭಕ್ಕೆ ಅನುಕೂಲವಾದ ಕ್ರಿಯೆಯೂ ಹುಟ್ಟುವುದಿಲ್ಲವೆಂದರ್ಥ.

ಅಥೈಕಾದಶಕ್ಷಣಾ ॥ ವಹ್ನಿಸಂಯೋಗಾತ್ಪರಮಾಣೌ ಕರ್ಮ । ತತೋ ವಿಭಾಗಃ ॥ ತತೋ ದ್ರವ್ಯಾರಂಭಸಂಯೋಗನಾಶಃ ॥ ತತೋ ದ್ವ್ಯಣುಕನಾಶಃ ॥ ೧ ॥ ತತೋ ದ್ವ್ಯಣುಕನಾಶವಿಶಿಷ್ಟಂ ಕಾಲಮಪೇಕ್ಷ್ಯ ವಿಭಾಗಜವಿಭಾಗಶ್ಯಾಮನಾಶೌ ॥ ೨ ॥ ತತಃ ಪೂರ್ವಸಂಯೋಗನಾಶರಕ್ತೋತ್ಪತ್ತೀ ॥ ೩ ॥ ತತ ಉತ್ತರ ಸಂಯೋಗಃ ॥ ೪ ॥ ತತೋ ವಹ್ನಿನೋದನಜನ್ಯ ಪರಮಾಣುಕರ್ಮನಾಶಃ ॥ ೫ ॥ ತತೋಽದೃಷ್ಟವದಾತ್ಮಸಂಯೋಗಾದ್ ದ್ರವ್ಯಾರಂಭಾನುಗುಣಾ ಕ್ರಿಯಾ ॥ ೬ ॥ ತತೋ ವಿಭಾಗಃ ॥ ೭ ॥ ತತಃ ಪೂರ್ವಸಂಯೋಗನಾಶಃ ॥ ೮ ॥ ತತೋ ದ್ರವ್ಯಾರಂಭಕೋತ್ತರಸಂಯೋಗಃ ॥ ೯ ॥ ತತೋ ದ್ವ್ಯಣುಕೋತ್ಪತ್ತಿಃ ॥ ೧೦ ॥ ತತೋ ರಕ್ತಾದ್ಯುತ್ಪತ್ತಿಃ ॥ ೧೧ ॥

ಇಲ್ಲಿ ಹನ್ನೊಂದುಕ್ಷಣಗಳ ಪ್ರಕ್ರಿಯೆ ಹೇಳಿದೆ. ಹಿಂದಿನಂತೆಯೇ ಅರ್ಥಸುಲಭ ವಾಗಿದೆ.

ಮಧ್ಯಮಶಬ್ದವದೇಕಸ್ಮಾದಗ್ನಿಸಂಯೋಗಾನ್ನ ರೂಪನಾಶೋತ್ಪಾದೌ, ತಾವತ್ಕಾಲ

ಮೇಕಸಾಗ್ನೇರಸ್ಥಿರತ್ವಾತ್ । ಕಿಂಚ ನಾಶಕ ಏವ ಯದ್ಯುತ್ಪಾದಕಸ್ತದಾನಷ್ಟೇ ರೂಪಾದಾವಗ್ನಿನಾಶೇ ನೀರೂಪಶ್ಚಿರಂ ಪರಮಾಣುಃ ಸ್ಯಾತ್ । ಉತ್ಪಾದಕಶ್ಚೇನ್ನಾಶಕಸ್ತದಾ ರಕ್ತೋತ್ಪತ್ತೌ ತದಗ್ನಿನಾಶೇ ರಕ್ತತರತಾ ನ ಸ್ಯಾತ್ ॥

ಲಾಘವದಿಂದ ಕೆಲವರು ಒಂದೇ ಅಗ್ನಿಸಂಯೋಗದಿಂದ ಪೂರ್ವರೂಪನಾಶವೂ ರೂಪಾಂತರೋತ್ಪತ್ತಿಯೂ ಆಗುತ್ತದೆಂದು ಹೇಳುತ್ತಾರೆ. ಇದು ಭಾಷ್ಯಸಿದ್ಧಾಂತಕ್ಕೆ ವಿರೋಧವೆಂದು ಖಂಡಿಸುತ್ತಾನೆ. 'ಮಧ್ಯಮ—' ಇತಿ. ಇದು ವ್ಯತಿರೇಕದೃಷ್ಟಾಂತ. ಹೇಗೆ ಆದಿ ಮತ್ತು ಅಂತ್ಯದ ಶಬ್ದಗಳನ್ನು ಬಿಟ್ಟು ಮಧ್ಯದಲ್ಲಿ ಎಷ್ಟುಶಬ್ದಗಳಿವೆಯೋ ಅವುಗಳೆಲ್ಲವೂ ಸ್ವಪೂರ್ವಶಬ್ದನಾಶಕ್ಕೂ, ಸ್ವೋತ್ತರವರ್ತಿಶಬ್ದೋತ್ಪತ್ತಿಗೂ ಕಾರಣಗಳಾದಂತೆ, ಪ್ರಕೃತಒಂದೇ ಅಗ್ನಿಸಂಯೋಗಕ್ಕೆ ಪೂರ್ವರೂಪನಾಶವನ್ನು ಕುರಿತು, ರೂಪಾಂತರೋತ್ಪತ್ತಿಯನ್ನು ಕುರಿತು ಕಾರಣತ್ವವಿಲ್ಲ. ಈ ವಿಷಯದಲ್ಲಿ ಕಾರಣತೋರಿಸುತ್ತಾನೆ. 'ತಾವತ್ಕಾಲ—' ಇತಿ. ಅದು ಸಿದ್ಧವಾದುವರಿಂದ ಅಲ್ಲಿಯವರೆಗೂ ಒಂದೇ ಅಗ್ನಿಸಂಯೋಗವಿರುವುದಿಲ್ಲವೆಂದು ತಾತ್ಪರ್ಯ. 'ಕಿಂಚ—' ಎಂಬುದರಿಂದ ಯುಕ್ತ್ಯಂತರವನ್ನು ತೋರಿಸುತ್ತಾನೆ. ರೂಪನಾಶಕವಾದ ಅಗ್ನಿಸಂಯೋಗವೇ ರೂಪಾಂತರೋತ್ಪಾದಕವಾಗುವುದಾದರೆ ಆಗ ರೂಪನಾಶವಾದೊಡನೆಯೇ ಆ ಅಗ್ನಿಯೂ ನಷ್ಟವಾದರೆ ರೂಪಾಂತರೋತ್ಪತ್ತಿಗೆ ಕಾರಣವಿಲ್ಲದಿರುವುದರಿಂದ ಪರಮಾಣುವು ರೂಪರಹಿತವಾಗಬೇಕಾಗುತ್ತದೆ. ಮತ್ತು ರೂಪಾಂತರೋತ್ಪತ್ತಿಯಾದೊಡನೆ ಆ ಅಗ್ನಿಯು ನಷ್ಟವಾದರೆ ಕೆಲವುಕಡೆ ರಕ್ತತರತಾ, ಕೆಲವುಕಡೆ ರಕ್ತತಮತಾ ಆಗದೇ ಹೋಗಬೇಕಾಗುತ್ತದೆ. ಕಾರ್ಯವೈಚಿತ್ರ್ಯವಾಗಬೇಕಾದರೆ ಆಗ ಕಾರಣತಾವಚ್ಛೇದಕಭೇದವಿರಬೇಕು. ಈಗ ರೂಪನಾಶಕತಾವಚ್ಛೇದಕವಾದ ವಿಲಕ್ಷಣಾಗ್ನಿಸಂಯೋಗತ್ವವೇ ಉತ್ಪಾದಕತಾವಚ್ಛೇದಕವೆಂದು ಅಂಗೀಕರಿಸುವುದಾದರೆ ಸಾಮಾನ್ಯವಾಗಿ ಪೃಥಿವೀಪರಮಾಣುರೂಪತ್ವವನ್ನು ಕಾರ್ಯತಾವಚ್ಛೇದಕವಾಗಿ ಸ್ವೀಕರಿಸಬೇಕು. ಆಗ ಕಾರ್ಯದಲ್ಲಿ ತರತಮಭಾವವಿಲ್ಲದೆ ಒಂದೇರೂಪವಾಗಬೇಕಾಗುತ್ತದೆ. ಹೀಗೆ ಅನೇಕಾನುಪಪತ್ತಿಗಳು ಬರುವುದರಿಂದ ಬೇರೆ ಬೇರೆ ಅಗ್ನಿಸಂಯೋಗಗಳೇ ಕಾರಣವೆಂದು ಒಪ್ಪಬೇಕು.

ಅಥ ಪರಮಾಣ್ವಂತರೇ ಕರ್ಮಚಿಂತನಾತ್ಪಂಚಮಾದಿಕ್ಷಣೇऽಪಿ ಗುಣೋತ್ಪತ್ತಿಃ । ತಥಾಹಿ—ಏಕತ್ರ ಪರಮಾಣೌ ಕರ್ಮ । ತತೋ ವಿಭಾಗಃ । ತತ ಆರಂಭಕಸಂಯೋಗನಾಶಪರಮಾಣ್ವಂತರಕರ್ಮಣೀ । ತತಸ್ತು ದ್ವ್ಯಣುಕನಾಶಃ । ಪರಮಾಣ್ವಂತರ ಕರ್ಮಜನ್ಯವಿಭಾಗ ಇತ್ಯೇಕಃ ಕಾಲಃ ॥ ೧ ॥ ತತಃ ಶ್ಯಾಮಾದಿನಾಶಃ । ವಿಭಾಗಾಚ್ಚ ಪೂರ್ವಸಂಯೋಗನಾಶಶ್ಚೇತ್ಯೇಕಃ ಕಾಲಃ ॥ ೨ ॥ ತತೋ ರಕ್ತೋತ್ಪತ್ತಿರ್ದ್ರವ್ಯಾರಂಭಕಸಂಯೋಗಶ್ಚೇತ್ಯೇಕಃ ಕಾಲಃ ॥ ೩ ॥ ಅಥ ದ್ವ್ಯಣುಕೋತ್ಪತ್ತಿಃ ॥ ೪ ॥ ತತೋ ರಕ್ತೋತ್ಪತ್ತಿರಿತಿ ॥ ೫ ॥ ಪಂಚಕ್ಷಣಾ ॥

ಪರಮಾಣ್ವಂತರೇ—ದ್ವ್ಯಣುಕನಾಶಕಕ್ರಿಯಾವಿಶಿಷ್ಟವಾದ ಪರಮಾಣುಗಿಂತ ಬೇರೆಯಾದ ದ್ವ್ಯಣುಕಾರಂಭಕಪರಮಾಣುವಿನಲ್ಲಿ ಎಂದರ್ಥ. ಪಂಚಮಾದಿಪದದಿಂದ ಷಷ್ಠ, ಸಪ್ತಮ, ಅಷ್ಟಮಕ್ಷಣಗಳನ್ನು ತೆಗೆದುಕೊಳ್ಳಬೇಕು. ಭಿನ್ನ ಭಿನ್ನಪರಮಾಣುಗಳ ನ್ನಂಗೀಕರಿಸಿ ಈಕ್ಷಣಪ್ರಕ್ರಿಯಾ ಹೇಳಿವೆ. ಅರ್ಥಸುಲಭವಾಗಿದೆ.

ದ್ರವ್ಯನಾಶಸಮಕಾಲಂ ಪರಮಾಣ್ವಂತರೇ ಕರ್ಮಚಿಂತನಾತ್ ಷಷ್ಠೇ ಗುಣೋತ್ಪತ್ತಿಃ। ತಥಾಹಿ—ಪರಮಾಣುಕರ್ಮಣಾ ಪರಮಾಣ್ವಂತರವಿಭಾಗಃ। ತತ ಆರಂಭಕ ಸಂಯೋಗನಾಶಃ। ಅಥ ದ್ವ್ಯಣುಕನಾಶಪರಮಾಣ್ವಂತರಕರ್ಮಣೀ ॥ ೧ ॥ ಅಥ ಶ್ಯಾಮಾದಿನಾಶಃ। ಪರಮಾಣ್ವಂತರಕರ್ಮಜಶ್ಚ ವಿಭಾಗಃ ॥ ೨ ॥ ತತೋ ರಕ್ತೋತ್ಪತ್ತಿಃ ಪರಮಾಣ್ವಂತರೇ ಪೂರ್ವಸಂಯೋಗನಾಶಶ್ಚ ॥ ೩ ॥ ತತಃ ಪರಮಾಣ್ವಂತರಸಂಯೋಗಃ ॥ ೪ ॥ ತತೋ ದ್ವ್ಯಣುಕೋತ್ಪತ್ತಿಃ ॥ ೫ ॥ ಅಥ ರಕ್ತೋತ್ಪತ್ತಿರಿತಿ ॥ ೬ ॥ ಷಟ್ಕ್ಷಣಾ ॥

ಏವಂ ಶ್ಯಾಮನಾಶಕ್ಷಣೇ ಪರಮಾಣ್ವಂತರೇ ಕರ್ಮಚಿಂತನಾತ್ ಸಪ್ತಕ್ಷಣಾ। ತಥಾಹಿ—ಪರಮಾಣೌ ಕರ್ಮ, ತತಃ ಪರಮಾಣ್ವಂತರೇಣ ವಿಭಾಗಃ। ತತಃ ಆರಂಭಕಸಂಯೋಗನಾಶಃ। ತತೋ ದ್ವ್ಯಣುಕನಾಶಃ ॥ ೧। ತತಃ ಶ್ಯಾಮಾದಿ ನಾಶಪರಮಾಣ್ವಂತರಕರ್ಮಣೀ ॥ ೨ ॥ ತತೋ ರಕ್ತೋತ್ಪತ್ತಿಃ ಪರಮಾಣ್ವಂ ತರೇ ಕರ್ಮಜವಿಭಾಗಶ್ಚ ॥ ೩ ॥ ತತಃ ಪರಮಾಣ್ವಂತರೇಣ ಪೂರ್ವಸಂಯೋಗ ನಾಶಃ ॥ ೪ ॥ ತತಃ ಪರಮಾಣ್ವಂತರೇಣ ಸಂಯೋಗಃ ॥ ೫ ॥ ತತೋ ದ್ವ್ಯಣುಕೋತ್ಪತ್ತಿಃ ॥ ೬ ॥ ತತೋ ರಕ್ತೋತ್ಪತ್ತಿಃ ॥ ೭ ॥ ಇತಿ ಸಪ್ತಕ್ಷಣಾ ॥ ಏವಂ ರಕ್ತೋತ್ಪತ್ತಿಸಮಕಾಲಂ ಪರಮಾಣ್ವಂತರೇ ಕರ್ಮಚಿಂತನಾದಷ್ಟಕ್ಷಣಾ। ತಥಾಹಿ—ಪರಮಾಣೌ ಕರ್ಮ। ತತಃ ಪರಮಾಣ್ವಂತರವಿಭಾಗಃ। ತತ ಆರಂಭಕಸಂಯೋಗನಾಶಃ। ತತೋ ದ್ವ್ಯಣುಕನಾಶಃ ॥ ೧ ॥ ತತಃ ಶ್ಯಾಮ ನಾಶಃ ॥ ೨ ॥ ತತೋರಕ್ತೋತ್ಪತ್ತಿಪರಮಾಣ್ವಂತರಕರ್ಮಣೀ ॥ ೩ ॥ ತತಃ ಪರಮಾಣ್ವಂತರಕರ್ಮಜವಿಭಾಗಃ ॥ ೪ ॥ ತತಃ ಪರಮಾಣ್ವಂತರೇ ಪೂರ್ವ ಸಂಯೋಗನಾಶಃ ॥ ೫ ॥ ತತಃ ಪರಮಾಣ್ವಂತರಸಂಯೋಗಃ ॥ ೬ ॥ ತತೋ ದ್ವ್ಯಣುಕೋತ್ಪತ್ತಿಃ ॥ ೭ ॥ ಅಥ ರಕ್ತೋತ್ಪತ್ತಿರಿತ್ಯಷ್ಟಕ್ಷಣಾ ॥ ೮ ॥ ೧೦೫ ॥

ಪಂಚಕ್ಷಣಾದಿ ಪ್ರಕ್ರಿಯಾ ಸುಲಭವಾದುದರಿಂದ ವಿವರಿಸಬೇಕಾಗಿಲ್ಲ. ದಿನಕರಿ ಯಲ್ಲಿ ದ್ವಿಕ್ಷಣಪ್ರಕ್ರಿಯಾ, ತ್ರಿಚತುಃಕ್ಷಣಾ ಪ್ರಕ್ರಿಯಾ ಇತ್ಯಾದಿಗಳೂ ವಿವೃತವಾಗಿವೆ. ಪ್ರಕೃತಾನುಪಯೋಗದಿಂದ ಇಲ್ಲಿ ಹೇಳಿಲ್ಲ.

**ನೈಯಾಯಿಕಾನಾಂ ತು ನಯೇ ದ್ವ್ಯಣುಕಾದಾವಪೀಷ್ಯತೇ ॥**

ನೈಯಾಯಿಕಾನಾಮಿತಿ । ನೈಯಾಯಿಕಾನಾಂ ಮತೇ ದ್ವ್ಯಣುಕಾದಾವವಯವಿಷ್ವಪಿ ಪಾಕೋ ಭವತಿ । ತೇಷಾಮಯಮಾಶಯಃ । ಅವಯವಿನಾಂ ಸಚ್ಛಿದ್ರತ್ವಾತ್ ವಹ್ನೇಃ ಸೂಕ್ಷ್ಮಾವಯವೈರಂತಃಪ್ರವಿಷ್ಟೈರವಯವೇಷ್ವವಷ್ಟಬ್ಧೇಷ್ವಪಿ ಪಾಕೋ ನ ವಿರುಧ್ಯತೇ । ಅನಂತಾವಯವತನ್ನಾಶಕಲ್ಪನೇ ಗೌರವಾತ್ । ಇತ್ಥಂ ಚ ಸೋಽಯಂಘಟ ಇತ್ಯಾದಿಪ್ರತ್ಯಭಿಜ್ಞಾಪಿ ಸಂಗಚ್ಛತೇ । ಯತ್ರ ತು ನ ಪ್ರತ್ಯಭಿಜ್ಞಾ ತತ್ರಾವಯವವಿನಾಶೋಽಪಿ ಸ್ವೀಕ್ರಿಯತ ಇತಿ ॥

ವೈಶೇಷಿಕಮತವನ್ನು ವಿವರಿಸಿ ಈಗ ನೈಯಾಯಿಕರಮತವನ್ನು ತೋರಿಸುತ್ತಾನೆ. 'ನೈಯಾಯಿಕಾನಾಂ' ಇತಿ. ಇವರು ಪಿಠರಪಾಕವಾದಿಗಳೆಂದು ಪ್ರಸಿದ್ಧಿ. ಗೋತಮಮಹರ್ಷಿಗಳು ಪ್ರವರ್ತಕರು ಇವರ ಮತದಲ್ಲಿ ಅವಯವಿಯಲ್ಲಿಯೂ ಪಾಕ ಇಷ್ಟವಾಗಿದೆ. ಅಪಿಶಬ್ದದಿಂದ ಚರಮಾವಯವವಾದ ಪರಮಾಣುವಿನಲ್ಲಿಯೂ ಅಂಗೀಕೃತವಾಗಿದೆ. ಇವರಮತದ ಸಾರ. ಅವಯವಿಗಳು ಯಾವಾಗಲೂ ಛಿದ್ರಸಹಿತವಾಗಿರುತ್ತವೆ. ಅದರೊಳಗೆ ಸುಖವಾಗಿ ಅಗ್ನಿಪ್ರವೇಶವಾಗುತ್ತದೆ. ಆಗ ಅವಯವಿಯನ್ನಾರಂಭಿಸಿ ಪರಮಾಣುವಿನವರೆಗೆ ಪಾಕ ಉಂಟಾಗುತ್ತದೆ. ಹೀಗೆ ನಿರ್ವಾಹವಾಗುವಾಗ ಪೀಲುಪಾಕವಾದಿಗಳಮತದಲ್ಲಿ ಅಸಂಖ್ಯವಾದ ಅವಯವವ್ಯುತ್ಪತ್ತಿಕಲ್ಪನೆಮಾಡುವುದು ಗೌರವವೆಂದು ಇವರ ತಾತ್ಪರ್ಯ. ಘಟವು ಸಚ್ಛಿದ್ರವೆಂಬುದರಲ್ಲಿ ಹಸಿಯಾದ ಘಟದಲ್ಲಿರುವ ನೀರು ಹೊರಗೆ ಅಸರುವುದೇ ಪ್ರಮಾಣವಾಗುತ್ತದೆ. ಅವಯವಿಯಲ್ಲಿ ಪಾಕವನ್ನು ಅಂಗೀಕರಿಸುವುದರಿಂದ ಅವಯವಿನಾಶವನ್ನು ಒಪ್ಪದಿರುವುದರಿಂದ ಅದೇ ಈ ಘಟವೆಂಬ ಪ್ರತ್ಯಭಿಜ್ಞೆಯೂ ಸಂಗತವಾಗುತ್ತದೆ. 'ಯತ್ರತು —' ಇತಿ. ಅವಯವಿನಾಶವನ್ನು ಕುರಿತು ಅವಯವನಾಶವು ಕಾರಣವಾದುದರಿಂದ ಪ್ರತ್ಯಭಿಜ್ಞಾ ಇಲ್ಲದಿರುವಲ್ಲಿ ಅವಯವಿನಾಶವೂ ಸ್ವೀಕರಿಸಲ್ಪಡುತ್ತದೆ.

ಸಂಖ್ಯಾಂ ನಿರೂಪಯಿತುಮಾಹ.

**ಗಣನಾವ್ಯವಹಾರೇ ತು ಹೇತುಃ ಸಂಖ್ಯಾಭಿಧೀಯತೇ ॥ ೧೦೬ ॥**
**ನಿತ್ಯೇಷು ನಿತ್ಯಮೇಕತ್ವಮನಿತ್ಯೇಽನಿತ್ಯಮಿಷ್ಯತೇ ॥**
**ದ್ವಿತ್ವಾದಯಃ ಪರಾರ್ಧಾಂತಾ ಅಪೇಕ್ಷಾಬುದ್ಧಿಜಾ ಮತಾಃ ॥೧೦೭॥**

ಗಣನೇತಿ । ಗಣನಾವ್ಯವಹಾರಾಸಾಧಾರಣಕಾರಣಂ ಸಂಖ್ಯೇತ್ಯರ್ಥಃ ॥ ॥ ೧೦೬ ॥ ನಿತ್ಯೇಷ್ವಿತಿ । ನಿತ್ಯೇಷು ಪರಮಾಣ್ವಾದಿಷು ಏಕತ್ವಂ ನಿತ್ಯಮ್ ! ಅನಿತ್ಯೇ ಘಟಾದಾವೇಕತ್ವಮನಿತ್ಯಮಿತ್ಯರ್ಥಃ । ದ್ವಿತ್ವಾದಯೋ ವ್ಯಾಸಜ್ಯವೃತ್ತಿಸಂಖ್ಯಾಃ ಅಪೇಕ್ಷಾಬುದ್ಧಿಜನ್ಯಾಃ ॥ ೧೦೭ ॥

ಸಂಖ್ಯಾಗುಣವನ್ನು ತೋರಿಸುತ್ತಾನೆ. 'ಗಣನಾ—' ಇತಿ. ವ್ಯವಹ್ರಿಯತೇ ಅನೇನ ಇತಿ ವ್ಯವಹಾರಃ, ಜ್ಞಾನವೆಂದರ್ಥ. ಏಕಃ, ದ್ವೌ, ತ್ರಯಃ ಇತ್ಯಾದಿಲೌಕಿಕ ಪ್ರತ್ಯಕ್ಷವನ್ನು ಕುರಿತು ಅಸಾಧಾರಣಕಾರಣವಾದದ್ದು ಸಂಖ್ಯಾಗುಣವಾಗುತ್ತದೆ. ಈ ಸಂಖ್ಯೆಯು ಏಕತ್ವದಿಂದ ಆರಂಭವಾಗಿ ಪರಾರ್ಧಪರ್ಯಂತ (೧೮ನೆಯ ಸ್ಥಾನ.) ವಾಗಿವೆ. ಏಕತ್ವಸಂಖ್ಯಾ ನಿತ್ಯ, ಅನಿತ್ಯವೆಂದು ಎರಡುವಿಧ. ನಿತ್ಯವಾದ ಪರಮಾಣುಮುಂತಾದವುಗಳಲ್ಲಿರುವ ಏಕತ್ವವು ನಿತ್ಯವೂ ಅನಿತ್ಯವಾದ ಘಟಾದಿಗಳಲ್ಲಿರುವ ಏಕತ್ವವು ಅನಿತ್ಯವೂ ಆಗಿರುತ್ತದೆ. ದ್ವಿತ್ವಾದಿ ಪರಾರ್ಧದವರೆಗಿರುವ ಸಂಖ್ಯೆಗಳು ಅಪೇಕ್ಷಾಬುದ್ಧಿಜನ್ಯವಾದುದರಿಂದ ಅನಿತ್ಯವಾಗಿರುತ್ತವೆ. ಅಪೇಕ್ಷಾಬುದ್ಧಿಯು ಮೂರುಕ್ಷಣದವರೆಗೆ ಇರುತ್ತದೆ. ನಾಲ್ಕನೇಕ್ಷಣದಲ್ಲಿ ಅದು ನಾಶವಾಗುವುದರಿಂದ ತತ್ಪ್ರತೀತ್ಯಧೀನವಾಗಿ ಬಂದ ಸಂಖ್ಯೆಯೂ ನಾಶವಾಗುವುದರಿಂದ ಅನಿತ್ಯವೆಂದರ್ಥ. ಇವುಗಳಲ್ಲಿ ಏಕತ್ವವು ಅವ್ಯಾಸಜ್ಯವೃತ್ತಿಯಾಗಿಯೂ ದ್ವಿತ್ವಾದಿಗಳು ವ್ಯಾಸಜ್ಯವೃತ್ತಿಯಾಗಿಯೂ ಇರುತ್ತವೆ. ವ್ಯಾಸಜ್ಯವೃತ್ತಿಧರ್ಮಗಳು ಯಾವಾಗಲೂ ಪರ್ಯಾಪ್ತಿಸಂಬಂಧದಿಂದ ಇರುತ್ತವೆ.

**ಅನೇಕಾಶ್ರಯಪರ್ಯಾಪ್ತಾ ಏತೇ ತು ಪರಿಕೀರ್ತಿತಾಃ ||**
**ಅಪೇಕ್ಷಾಬುದ್ಧಿನಾಶಾಚ್ಚ ನಾಶಸ್ತೇಷಾಂ ನಿರೂಪಿತಃ || ೧೦೮ ||**

ಅನೇಕೇತಿ | ಯದ್ಯಪಿ ದ್ವಿತ್ವಾದಿಸಮವಾಯಃ ಪ್ರತ್ಯೇಕಂ ಘಟಾದಾವಪಿ ವರ್ತತೇ ತಥಾಪ್ಯೇಕೋ ದ್ವಾವಿತಿ ಪ್ರತ್ಯಯಾಭಾವಾತ್ ಏಕೋ ನ ದ್ವಾವಿತಿ ಪ್ರತ್ಯಯಸಂಭವಾಚ್ಚ ದ್ವಿತ್ವಾದೀನಾಂ ಪರ್ಯಾಪ್ತಿಲಕ್ಷಣಃ. ಕಶ್ಚಿನ ಸಂಬಂಧೋಽನೇಕಾಶ್ರಯೋಽಭ್ಯುಪಗಮ್ಯತೇ | ಪ್ರಥಮಮಪೇಕ್ಷಾಬುದ್ಧಿಃ, ತತೋ ದ್ವಿತ್ವೋತ್ಪತ್ತಿಃ, ತತೋ ವಿಶೇಷಣಜ್ಞಾನಂ, ದ್ವಿತ್ವತ್ವವಿಶಿಷ್ಟಪ್ರತ್ಯಕ್ಷಮ್, ಅಪೇಕಾಬುದ್ಧಿನಾಶಶ್ಚೇತಿ | ತತೋ ದ್ವಿತ್ವನಾಶ ಇತಿ |

ಏತೇ—ದ್ವಿತ್ವಾದಿ ಪರಾರ್ಧದವರೆಗಿರುವ ಸಂಖ್ಯೆಗಳು, ಅನೇಕಾಶ್ರಯಪರ್ಯಾಪ್ತಾಃ—ನಾನಾಅಧಿಕರಣಗಳೇ ಆಲಂಬನವಾಗಿರುವವುಗಳೆಂದು ಪ್ರಸಿದ್ಧವಾಗಿವೆ. ಅಪೇಕ್ಷಾಬುದ್ಧಿನಾಶವಾದೊಡನೆ ಇವುಗಳೂ ನಾಶಹೊಂದುತ್ತವೆಂದು ಕಾರಿಕಾರ್ಥ. ಯದ್ಯಪಿ ದ್ವಿತ್ವಾದಿಸಂಖ್ಯಾಸಮವಾಯವು ಪ್ರತ್ಯೇಕವಾಗಿ ಘಟಾದಿಗಳಲ್ಲಿ ತೋರುತ್ತದೆ. ಆದರೆ 'ಏಕಃ ದ್ವೌ' ಎಂಬ ವ್ಯವಹಾರ ಲೋಕದಲ್ಲಿ ಇಲ್ಲದಿರುವುದರಿಂದಲೂ, 'ಏಕಃ ನದ್ವೌ' ಎಂಬ ಪ್ರಸಿದ್ಧವ್ಯವಹಾರವಿರುವುದರಿಂದಲೂ ದ್ವಿತ್ವಾದಿಗಳಿಗೆ 'ಪರ್ಯಾಪ್ತಿ' ಎಂಬ ಒಂದುಸಂಬಂಧವು ಅನೇಕಾಶ್ರಯವಾಗಿ ಸಂಭವಿಸುತ್ತದೆ. ಇವುಗಳ ನಾಶಕ್ಷಣತೋರಿಸುತ್ತಾನೆ. 'ಪ್ರಥಮಂ—' ಇತಿ. ಮೊದಲು 'ಅಯಮೇಕಃ ಅಯಮೇಕಃ' ಎಂಬ ಅಪೇಕ್ಷಾಬುದ್ಧಿ ಹುಟ್ಟುತ್ತದೆ. ಆಮೇಲೆ ದ್ವಿತ್ವ ಹುಟ್ಟುತ್ತದೆ. ಆಮೇಲೆ 'ಇಮೇ ದ್ವಿತ್ವ, ದ್ವಿತ್ವತ್ವೇ' ಎಂಬ ನಿರ್ವಿಕಲ್ಪರೂಪವಾದ ವಿಶೇಷಣಜ್ಞಾನ.

ಆಮೇಲೆ 'ದ್ವಿತ್ವತ್ವ' ವಿಶೇಷಣದಿಂದ ಕೂಡಿದ ವಿಶಿಷ್ಟವಾದ ಲೌಕಿಕಪ್ರತ್ಯಕ್ಷಜ್ಞಾನ. ನಾಲ್ಕನೇಕ್ಷಣದಲ್ಲಿ ಅಪೇಕ್ಷಾಬುದ್ಧಿನಾಶ. ಐದನೇಕ್ಷಣದಲ್ಲಿ ದ್ವಿತ್ವನಾಶವಾಗುತ್ತದೆಂದು ತಾತ್ಪರ್ಯ.

ಯದ್ಯಪಿ ಜ್ಞಾನಾನಾಂ ದ್ವಿಕ್ಷಣಮಾತ್ರಸ್ಥಾಯಿತ್ವಂ ಯೋಗ್ಯವಿಭುವಿಶೇಷಗುಣಾನಾಂ ಸ್ವೋತ್ತರವರ್ತಿಗುಣನಾಶ್ಯತ್ವಾತ್ । ತಥಾಪ್ಯಪೇಕ್ಷಾಬುದ್ಧೇಸ್ತ್ರಿಕ್ಷಣಾವಸ್ಥಾಯಿತ್ವಂ ಕಲ್ಪ್ಯತೇ । ಅನ್ಯಥಾ ನಿರ್ವಿಕಲ್ಪಕಕಾಲೇಽಪೇಕ್ಷಾಬುದ್ಧಿನಾಶಾನಂತರಂದ್ವಿತ್ವಸ್ಯೈವ ನಾಶಃ ಸ್ಯಾತ್, ನತು ದ್ವಿತ್ವಪ್ರತ್ಯಕ್ಷಂ, ತದಾನೀಂ ವಿಷಯಾಭಾವಾತ್ । ವಿದ್ಯಮಾನಸ್ಯೈವ ಚಕ್ಷುರಾದಿನಾ ಜ್ಞಾನಜನನೋಪಗಮಾತ್ । ತಸ್ಮಾತ್ ದ್ವಿತ್ವಪ್ರತ್ಯಾಕ್ಷಾದಿಕಮಪೇಕ್ಷಾಬುದ್ಧೇರ್ನಾಶಕಂ ಕಲ್ಪ್ಯತೇ । ನಚಾಪೇಕ್ಷಾಬುದ್ಧಿನಾಶಾತ್ಕಥಂ ದ್ವಿತ್ವನಾಶ ಇತಿ ವಾಚ್ಯಮ್ । ಕಾಲಾಂತರೇ ದ್ವಿತ್ವಪ್ರತ್ಯಕ್ಷಾಭಾವಾತ್ । ಅಪೇಕ್ಷಾಬುದ್ಧಿಸ್ತದುತ್ಪಾದಿಕಾ, ತನ್ನಾಶಾತ್ತನ್ನಾಶ ಇತಿ ಕಲ್ಪನಾತ್ ॥

ಅಪೇಕ್ಷಾಬುದ್ಧಿಯೂ ಜ್ಞಾನವಾದುದರಿಂದ ಜ್ಞಾನಸಾಮಾನ್ಯವೂ ಎರಡುಕ್ಷಣಮಾತ್ರವಿರುವುದರಿಂದ ಇದೂ ಎರಡುಕ್ಷಣವಿರಲಿ. ಇದೊಂದು ಮೂರುಕ್ಷಣಗಳವರೆಗೆ ಇರಲುಕಾರಣವೇನು ? ಎಂಬುದಕ್ಕೆ ಆಶಂಕಾಪೂರ್ವಕವಾಗಿ ಸಮಾಧಾನ ತೋರಿಸುತ್ತಾನೆ. 'ಯದ್ಯಪಿ—' ಇತಿ. ಜ್ಞಾನವು ಯೋಗ್ಯವಿಭುವಿಶೇಷಗುಣವಾದುದರಿಂದ ತನ್ನಿಂದ ಉತ್ತರದಲ್ಲಿ ಹುಟ್ಟಿದ ಜ್ಞಾನದಿಂದ ನಾಶವಾಗುತ್ತದೆ. ಹಾಗೆ ಅಪೇಕ್ಷಾಬುದ್ಧಿಯೂ ಜ್ಞಾನವಾದುದರಿಂದ ಎರಡುಕ್ಷಣವಿದ್ದು ನಾಶವಾಗಬೇಕಾದುದು ನ್ಯಾಯವೇ ಆದರೂ ಇದು ಮೂರುಕ್ಷಣವಿರುತ್ತದೆಂದು ಕಲ್ಪಿಸಲೇಬೇಕು. ಅನ್ಯಥಾ—ಇದು ಮೂರುಕ್ಷಣಗಳಿರುತ್ತವೆಂದು ಅಂಗೀಕರಿಸದಿದ್ದರೆ, ದ್ವಿತ್ವತ್ವನಿರ್ವಿಕಲ್ಪಕಕಾಲದಲ್ಲಿ ಅಪೇಕ್ಷಾಬುದ್ಧಿನಾಶವಾಗುತ್ತದೆಂದರೆ ಅದರಿಂದ ದ್ವಿತ್ವನಾಶವಾಗಿ, ದ್ವಿತ್ವಪ್ರತ್ಯಕ್ಷಬಾರದೇ ಹೋಗಬೇಕಾಗುತ್ತದೆ. ದ್ವಿತ್ವರೂಪವಿಷಯವಿದ್ದರೆ ಪ್ರತ್ಯಕ್ಷವಾಗುವುದು. ವಿಷಯವೇ ಇಲ್ಲವಾದರೆ ಪ್ರತ್ಯಕ್ಷಆಗುವುದು ಹೇಗೆ ? ಸಂಬದ್ಧವಾಗಿ ವರ್ತಮಾನವಾದ ವಿಷಯವನ್ನೇ ಚಕ್ಷುರಿಂದ್ರಿಯವು ಗ್ರಹಿಸುವುದು ಲೋಕಪ್ರಸಿದ್ಧವಾಗಿದೆ. ಆದುದರಿಂದ ದ್ವಿತ್ವ,ದ್ವಿತ್ವತ್ವಗಳ ನಿರ್ವಿಕಲ್ಪಕಪ್ರತ್ಯಕ್ಷವೇ ಅಪೇಕ್ಷಾಬುದ್ಧಿನಾಶವೆಂದು ಅಂಗೀಕರಿಸಬೇಕು. ಅನುಗತವಾದ ಯೋಗ್ಯವಿಭುವಿಶೇಷಗುಣತ್ವವಿಲ್ಲದಿರುವುದರಿಂದ, ಅನುಗತವಾದ ಸ್ವೋತ್ತರೋತ್ಪನ್ನಗುಣತ್ವವಿಲ್ಲವಾದುದರಿಂದ ದ್ವಿತ್ವ ದ್ವಿತ್ವತ್ವನಿರ್ವಿಕಲ್ಪಕಪ್ರತ್ಯಕ್ಷವೇ ತದ್ವ್ಯಕ್ತಿತ್ವರೂಪದಿಂದ ಅಪೇಕ್ಷಾಬುದ್ಧಿನಾಶಕವೆಂದು ಕಲ್ಪಿಸಬೇಕು. ಕಾಲಾಂತರದಲ್ಲಿ ದ್ವಿತ್ವಪ್ರತ್ಯಕ್ಷಬರುವುದಿಲ್ಲವಾದುದರಿಂದ ಅಪೇಕ್ಷಾಬುದ್ಧಿನಾಶದಿಂದ ದ್ವಿತ್ವನಾಶವನ್ನು ಅಂಗೀಕರಿಸಬೇಕು. ಅಪೇಕ್ಷಾಬುದ್ಧಿಯೇ ದ್ವಿತ್ವಕ್ಕೆ ಉತ್ಪಾದಕವಾಗಿ, ಅದುನಾಶವಾದೊಡನೆ ದ್ವಿತ್ವನಾಶವಾಗುವುದೆಂದು ಅಂಗೀಕರಿಸುವುದರಿಂದ ಯಾವದೋಷಕ್ಕೂ ಅವಕಾಶವಿಲ್ಲ.

ಅತ ಏವ ತತ್ಪುರುಷೀಯಾಪೇಕ್ಷಾಬುದ್ಧಿಜನ್ಯದ್ವಿತ್ವಾದಿಕಂ ತೇನೈವಗೃಹ್ಯತ ಇತಿ ಕಲ್ಪ್ಯತೇ । ನ ಚಾಪೇಕ್ಷಾಬುದ್ಧೇರ್ದ್ವಿತ್ವಪ್ರತ್ಯಕ್ಷೇ ಕಾರಣತ್ವಮಸ್ತ್ವಿತಿ ವಾಚ್ಯಮ್ । ಲಾಘವೇನ ದ್ವಿತ್ವಂ ಪ್ರತ್ಯೇವ ಕಾರಣತ್ವಸ್ಯೈವೋಚಿತತ್ವಾತ್ । ಅತೀಂದ್ರಿಯೇ ದ್ವ್ಯಣುಕಾದಾವಪೇಕ್ಷಾಬುದ್ಧಿರ್ಯೋಗಿನಾಮ್ । ಸರ್ಗಾದಿ ಕಾಲೀನಪರಮಾಣ್ವಾದೌ ಈಶ್ವರೀಯಾಪೇಕ್ಷಾಬುದ್ಧಿಃ, ಬ್ರಹ್ಮಾಂಡಾಂತರವರ್ತಿ ಯೋಗಿನಾಮಪೇಕ್ಷಾಬುದ್ಧಿರ್ವಾದ್ವಿತ್ವಾದಿಕಾರಣಮಿತಿ ॥ ೧೦೮ ॥

'ಅತಏವ—' ಇತಿ ಅಪೇಕ್ಷಾಬುದ್ಧಿಯೇ ದ್ವಿತ್ವಕ್ಕೆ ಉತ್ಪಾದಕವೆಂದು ಸ್ವೀಕರಿಸಿರುವುದರಿಂದ, 'ತತ್ಪುರುಷೀ—' ಇತಿ. ಚೈತ್ರನ ಅಪೇಕ್ಷಾಬುದ್ಧಿಯಿಂದ ಹುಟ್ಟಿದ ದ್ವಿತ್ವಾದಿಗಳು ಚೈತ್ರನಿಂದಲೇ ಗ್ರಹಿಸಲ್ಪಡುತ್ತದೆ. ಕಾಲಾಂತರದಲ್ಲಿ ದ್ವಿತ್ವ ಪ್ರತ್ಯಕ್ಷವಾರಣೆಗೋಸ್ಕರ ಅಪೇಕ್ಷಾಬುದ್ಧಿಯು ದ್ವಿತ್ವಪ್ರತ್ಯಕ್ಷವನ್ನು ಕುರಿತುಕಾರಣವಾಗಲಿ, ದ್ವಿತ್ವಕ್ಕೆ ಕಾರಣವೆಂದು ಕಲ್ಪಿಸುವುದು ಬೇಡ ಎಂದು ಆಶಂಕಿಸುತ್ತಾನೆ. 'ನಚ—' ಇತಿ. ಅದಕ್ಕೆ ಸಮಾಧಾನ. 'ಲಾಘವೇನ—' ಇತಿ. ದ್ವಿತ್ವಪ್ರತ್ಯಕ್ಷವು ಅಪೇಕ್ಷಾ ಬುದ್ಧಿಯ ಕಾರ್ಯವಾದರೆ ಆಗ ಕಾರ್ಯತಾವಚ್ಛೇದಕ ದ್ವಿತ್ವಪ್ರತ್ಯಕ್ಷತ್ವವಾಗುತ್ತದೆ. ಅದಕ್ಕಿಂತ ದ್ವಿತ್ವತ್ವವೇ ಕಾರ್ಯತಾವಚ್ಛೇದಕವೆಂದರೆ ಲಾಘವ ಬರುತ್ತದೆ. ಆದುದರಿಂದ ದ್ವಿತ್ವಪ್ರತ್ಯಕ್ಷಕ್ಕೆ ಕಾರಣವೆಂದು ಹೇಳಬಾರದು. ದ್ವ್ಯಣುಕವು ನಮ್ಮ ಪ್ರತ್ಯಕ್ಷಕ್ಕೆ ವಿಷಯವಾಗದಿರುವುದರಿಂದ ಅಲ್ಲಿ 'ಅಪೇಕ್ಷಾಬುದ್ಧಿಯುಂಟಾಗುವುದು ಹೇಗೆ ? ಎಂಬ ಶಂಕೆಗೆ ಸಮಾಧಾನ ತೋರಿಸುತ್ತಾನೆ. 'ಅತೀಂದ್ರಿಯೇ—' ಇತಿ. ಆದಿಪದದಿಂದ ಪರಮಾಣುವನ್ನು ತೆಗೆದುಕೊಳ್ಳಬೇಕು. ಯೋಗಿಗಳ ಅಪೇಕ್ಷಾಬುದ್ಧಿ ಅಲ್ಲಿ ಸಂಗತ ವಾಗುತ್ತದೆ. ಸರ್ಗಾದಿಯಲ್ಲಿ ಯೋಗಿಗಳೂ ಇಲ್ಲದಿರುವುದರಿಂದ ಅಲ್ಲಿ ಈಶ್ವರನ ಅಪೇಕ್ಷಾಬುದ್ಧಿ ಹೇಳಬೇಕು. ಅದರಿಂದ ದ್ವಿತ್ವೋತ್ಪತ್ತಿಯಾಗುತ್ತದೆ. ದ್ವಿತ್ವಾದಿಗಳು ಆಗ ಹುಟ್ಟುತ್ತವೆಯೆಂಬುದರಲ್ಲಿ ಪ್ರಮಾಣವಿಲ್ಲದಿರುವುದರಿಂದ ಅಸ್ವರಸದಿಂದ ಪ್ರಕಾರಾಂ ವನ್ನು ತೋರಿಸುತ್ತಾನೆ, 'ಬ್ರಹ್ಮಾಂಡ—' ಇತಿ. ॥ ೧೦೮ ॥

**ಅನೇಕೈಕತ್ವಬುದ್ಧಿರ್ಯಾ ಸಾಽಪೇಕ್ಷಾಬುದ್ಧಿರಿಷ್ಯತೇ ॥**

ಅಪೇಕ್ಷಾಬುದ್ಧಿಃ ಕೇತ್ಯತ ಆಹ—ಅನೇಕೇತಿ । ಅಯಮೇಕೋಽಯಮೇಕಇತ್ಯಾ ಕಾರಿಕಾ ಇತ್ಯರ್ಥಃ । ಇದಂ ತು ಬೋಧ್ಯಮ್ । ಯತ್ರಾನಿಯತೈಕತ್ವಜ್ಞಾನಂ ತತ್ರ ತ್ರಿತ್ವಾದಿಭಿನ್ನಾ ಬಹುತ್ವಸಂಖ್ಯೋತ್ಪದ್ಯತೇ,—ಯಥಾ ಸೇನಾವನಾ ದಾವಿತಿ ಕಂದಲೀಕಾರಃ । ಆಚಾರ್ಯಾಸ್ತು ತ್ರಿತ್ವಾದಿಕಮೇವ ಬಹುತ್ವಂ ಮನ್ಯಂತೇ । ತಥಾ ಚ ತ್ರಿತ್ವತ್ವಾದಿವ್ಯಾಪಿಕಾ ಬಹುತ್ವತ್ವಜಾತಿರ್ನಾತಿರಿಚ್ಯತೇ । ಸೇನಾವನಾದಾವುತ್ಪನ್ನೇಽಪಿ ತ್ರಿತ್ವಾದೌತ್ರಿತ್ವತ್ವಾದ್ಯಗ್ರಹೋ ದೋಷಾತ್ । ಇತ್ಥಂ ಚೇತೋ ಬಹುತರೇಯಂ ಸೇನೇತಿ ಪ್ರತೀತಿರುಪಪದ್ಯತೇ ಬಹುತ್ವಸ್ಯ ಸಂಖ್ಯಾಂತರತ್ವೇ ತು ತತ್ತಾರತಮ್ಯಾಭಾವಾನ್ನೋಪಪದ್ಯೇತೇತ್ಯವಧೇಯಮ್ ॥

ಪ್ರಸಂಗಸಂಗತಿಯಿಂದ ಅಪೇಕ್ಷಾಬುದ್ಧಿಸ್ವರೂಪವನ್ನು ತೋರಿಸುತ್ತಾನೆ. 'ಅನೇಕೈ—' ಇತಿ. 'ತತ್ತದ್ವ್ಯಕ್ತಿಮಾತ್ರನಿಷ್ಠೇದಂತತ್ವಾವಚ್ಛಿನ್ನವಿಶೇಷ್ಯತಾನಿರೂಪಿತೈಕತ್ವಪ್ರಕಾರತಾಶಾಲಿನೀ ಬುದ್ಧಿಃ' ಅಪೇಕ್ಷಾಬುದ್ಧಿಯಸ್ವರೂಪ. 'ಅಯಮೇಕಃ, ಅಯಮೇಕಃ' ಎಂದು ಇದರ ಆಕಾರ. 'ಇದಂತುಬೋಧ್ಯಂ' ಎಂಬುದರಿಂದ ಬಹುತ್ವ ಸಂಖ್ಯಾ ತ್ರಿತ್ವಾದಿಸಂಖ್ಯೆಗಿಂತ ಬೇರೆಯಾಗಿದೆಯೇ ಅಥವಾ ಅಭಿನ್ನವೇ ಎಂಬುದರಲ್ಲಿ ಮತಭೇದವನ್ನು ತೋರಿಸುತ್ತಾನೆ. ಏಕತ್ವವು ಅನಿಯತವಾದಲ್ಲಿ ತ್ರಿತ್ವಾದಿಗಿಂತ ಭಿನ್ನವಾಗಿ ಬಹುತ್ವಸಂಖ್ಯಾ ಹುಟ್ಟುತ್ತದೆಂದು, ಸೇನಾವನಂ, ಇತ್ಯಾದಿಗಳಲ್ಲಿ ಇದು ಪ್ರಸಿದ್ಧವೆಂದು ಕಂದಲೀಕಾರನಮತ. ಆಚಾರ್ಯರಮತದಲ್ಲಿ ಇವೆರಡೂ ಒಂದೇ ಆಗುತ್ತದೆ. ತ್ರಿತ್ವಾದಿಗಳಿಗೆ ವ್ಯಾಪಕವಾಗಿ ಬಹುತ್ವವೆಂಬುದು ಬೇರೊಂದಿಲ್ಲ. ಸೇನಾದಿಗಳಲ್ಲಿ ದೋಷದಿಂದ ತ್ರಿತ್ವಾದಿಗ್ರಹವಿಲ್ಲನೆಂದು ಅವರ ಸಿದ್ಧಾಂತ. ಬಹುತ್ವವೆಂಬುದು ತ್ರಿತ್ವಾದಿಗಳಿಗಿಂತ ಭಿನ್ನವೆಂದು ಅಂಗೀಕರಿಸುವುದಾದರೆ ಬಹುತ್ವದಲ್ಲಿ ಸ್ವಸಜಾತೀಯೋತ್ಕರ್ಷವಿಲ್ಲದಿರುವುದರಿಂದ, ಏಕರೂಪನಾದುದರಿಂದ 'ಇತಃ ಇಯಂ ಸೇನಾ ಬಹುತರಾ' ಇತ್ಯಾದಿ ವ್ಯವಹಾರ ಬಾರದೇಹೋಗಬೇಕಾಗುತ್ತದೆ. ಬಹುತ್ವ, ತ್ರಿತ್ವಾದಿಗಳು ಒಂದಾದರೆ ಬಹುತ್ವನಿಶ್ಚಯವಿರುವಾಗ ತ್ರಿತ್ವಸಂಶಯ ಬರುವುದು ಹೇಗೆ? ಅಂದರೆ ಯಾವಾಗಲೂ ಸಮಾನಪ್ರಕಾರಕನಿಶ್ಚಯವೇ ಸಂಶಯವಿರೋಧಿಯಾಗುವುದರಿಂದ ಇಲ್ಲಿ ವಿರುದ್ಧಪ್ರಕಾರಕ್ಕೆ ನಿಶ್ಚಯವಿರುವುದರಿಂದ ಅಂದರೆ ಬಹುತ್ವತ್ವಪ್ರಕಾರಕನಿಶ್ಚಯವಿರುವುದರಿಂದ ತ್ರಿತ್ವತ್ವಪ್ರಕಾರಕಸಂಶಯ ಬರಲು ಯಾವ ತೊಂದರೆಯೂ ಇಲ್ಲ.

**ಪರಿಮಾಣಂ ಭವೇನ್ಮಾನವ್ಯವಹಾರಸ್ಯ ಕಾರಣಮ್ ॥ ೧೦೯ ॥**
**ಅಣು ದೀರ್ಘಂ ಮಹದ್ಧ್ರಸ್ವಮಿತಿ ತದ್ಭೇದ ಈರಿತಃ ॥**
**ಅನಿತ್ಯೇ ತದನಿತ್ಯಂ ಸ್ಯಾನ್ನಿತ್ಯೇ ನಿತ್ಯಮುದಾಹೃತಮ್ ॥ ೧೧೦ ॥**
**ಸಂಖ್ಯಾತಃ ಪರಿಮಾಣಾಚ್ಚ ಪ್ರಚಯಾದಪಿ ಜಾಯತೇ ।**
**ಅನಿತ್ಯಂ, ದ್ವ್ಯಣುಕಾದೌ ತು ಸಂಖ್ಯಾಜನ್ಯಮುದಾಹೃತಮ್ ॥ ೧೧೧ ॥**

ಪರಿಮಾಣಮಿತಿ । ಪರಿಮಿತಿವ್ಯವಹಾರಾಸಾಧಾರಣಂ ಕಾರಣಂ ಪರಿಮಾಣಮಿತ್ಯರ್ಥಃ । ॥ ೧೦೯ ॥ ತಚ್ಚತುರ್ವಿಧಂ ಅಣು ಮಹದ್ ದೀರ್ಘಂ ಹ್ರಸ್ವಂಚೇತಿ । ತತ್ ಪರಿಮಾಣಮ್ । ನಿತ್ಯಮಿತ್ಯತ್ರ ಪರಿಮಾಣಮಿತ್ಯನುಷಜ್ಯತೇ । ಜಾಯತ ಇತ್ಯತ್ರಾಪಿ ಪರಿಮಾಣಮಿತ್ಯನುವರ್ತತೇ । ಅನಿತ್ಯಮಿತಿ ಪೂರ್ವೇಣಾನ್ವಿತಮ್ । ತಥಾ ಚಾನಿತ್ಯಪರಿಮಾಣಂ ಸಂಖ್ಯಾಜನ್ಯಂ ಪರಿಮಾಣಜನ್ಯಂ ಪ್ರಚಯಜನ್ಯಂ ಚೇತ್ಯರ್ಥಃ ॥ ತತ್ರ ಸಂಖ್ಯಾಜನ್ಯಮುದಾಹರತಿ—ಅನಿತ್ಯಮಿತಿ । ದ್ವ್ಯಣುಕಸ್ಯ ತ್ರಸರೇಣೋಶ್ಚ ಪರಿಮಾಣಂ ಪ್ರತಿ ಪರಮಾಣುಪರಿಮಾಣಂ ದ್ವ್ಯಣುಕಪರಿಮಾಣಂ ವಾ ನ ಕಾರಣಂ, ಪರಿಮಾಣಸ್ಯ ಸ್ವಸಮಾನಜಾತೀಯೋತ್ಕೃಷ್ಟಪರಿಮಾಣಜನಕತ್ವಾತ್ । ದ್ವ್ಯಣುಕಸ್ಯಾಣುಪರಿಮಾಣಂ ತು ಪರಮಾಣ್ವಣು

ತ್ವಾಪೇಕ್ಷಯಾ ನೋತ್ಕೃಷ್ಟಮ್ । ತ್ರಸರೇಣುಪರಿಮಾಣಂ ತು ನ ಸಜಾತೀಯಮ್ । ಅತಃ ಪರಮಾಣೌ ದ್ವಿತ್ವಸಂಖ್ಯಾ ದ್ವ್ಯಣುಕಪರಿಮಾಣಸ್ಯ, ದ್ವ್ಯಣುಕೇ ತ್ರಿತ್ವಸಂಖ್ಯಾ ಚ ತ್ರಸರೇಣುಪರಿಮಾಣಸ್ಯಾಸಮವಾಯಿಕಾರಣಮಿತ್ಯರ್ಥಃ ॥ ೧೧೧ ॥

ಪರಿಮಾಣಗುಣದ ಲಕ್ಷಣವನ್ನು ತೋರಿಸುತ್ತಾನೆ. 'ಪರಿಮಾಣಂ—' ಇತಿ. ಪರಿಮಾಣತ್ವಜಾತಿಯಿಂದ ಕೂಡಿರುವುದು ಪರಿಮಾಣ. ಪರಿಮಿತಿವ್ಯವಹಾರಕ್ಕೆ ಇದು ಅಸಾಧಾರಣಕಾರಣವಾಗಿರುತ್ತದೆ. ಅಣು, ಮಹತ್, ದೀರ್ಘ, ಹ್ರಸ್ವವೆಂದು ಇದು ನಾಲ್ಕುವಿಧವಾಗಿರುತ್ತದೆ. ಈ ನಾಲ್ಕೂ ಸಾಮಾನ್ಯವಾಗಿ ನಿತ್ಯ, ಅನಿತ್ಯವೆಂದು ಎರಡುವಿಧವಾಗಿರುತ್ತದೆ. ಪರಮಾಣು ಮುಂತಾದವುಗಳಲ್ಲಿರುವ ಪರಿಮಾಣ ನಿತ್ಯವಾಗಿರುತ್ತದೆ. ಘಟಾದಿಗಳ ಪರಿಮಾಣ ಅನಿತ್ಯವಾಗಿರುತ್ತದೆ. ಈ ಅನಿತ್ಯ ಪರಿಮಾಣವೂ ಸಂಖ್ಯಾಜನ್ಯ, ಪರಿಮಾಣಜನ್ಯ, ಪ್ರಚಯಜನ್ಯವೆಂದು ಮೂರುರೀತಿಯಾಗಿರುತ್ತದೆ. ಭಾಟ್ಟರು ಪರಮಾಣುದ್ವ್ಯಣುಕವನ್ನೇ ಒಪ್ಪದಿರುವುದರಿಂದ ಅವರಲ್ಲಿ ಅಣುಪರಿಮಾಣವಿಲ್ಲ. ಗಗನಾದಿಗಳಲ್ಲಿಯೂ ಪ್ರಮಾಣವಿಲ್ಲದಿರುವುದರಿಂದ ಮಹತ್ಪರಿಮಾಣವೂ ಇಲ್ಲ. ಇನ್ನು ಕೆಲವರು (ಲೀಲಾವತೀಕಾರಾಃ) ಅಣುತ್ವ ಮಹತ್ವದಲ್ಲಿ ಅಂತರ್ಭಾವಹೊಂದುವುದರಿಂದ ಹ್ರಸ್ವ, ದೀರ್ಘಪರಿಮಾಣಗಳು ಬೇರೆ ಇಲ್ಲವೆನ್ನುತ್ತಾರೆ. ದ್ವ್ಯಣುಕಾದಿಗಳಲ್ಲಿರುವ ಅನಿತ್ಯಪರಿಮಾಣವು ಸಂಖ್ಯಾಜನ್ಯವಾಗುತ್ತದೆಂದು ತೋರಿಸುತ್ತಾನೆ. 'ಅನಿತ್ಯಂ—ಇತಿ. ಪರಿಮಾಣವು ಯಾವಾಗಲೂ ಸ್ವಸಮಾನಜಾತೀಯವಾದ ಉತ್ಕೃಷ್ಟಪರಿಮಾಣವನ್ನು ಹುಟ್ಟಿಸುತ್ತದೆಂದು ನಿಯಮ. ಇದರಿಂದ ದ್ವ್ಯಣುಕ ಪರಿಮಾಣಕ್ಕೆ ಪರಮಾಣುಪರಿಮಾಣವಾಗಲೀ, ತ್ರಸರೇಣು ಪರಿಮಾಣಕ್ಕೆ ದ್ವ್ಯಣುಕ ಪರಿಮಾಣವಾಗಲೀ, ಕಾರಣವಾಗುವುದಿಲ್ಲ. ಅಣುಗಿಂತ ಅಣುತರವು ಉತ್ಕೃಷ್ಟವಾಗುವುದರಿಂದ ದ್ವ್ಯಣುಕದಅಣುಪರಿಮಾಣವು ಪರಮಾಣುವಿನಅಣುಪರಿಮಾಣಕ್ಕಿಂತ ಉತ್ಕೃಷ್ಟವಾಗುವುದಿಲ್ಲ. ತ್ರಸರೇಣಿಪರಿಮಾಣವು ಮಹತ್ಪರಿಮಾಣವಾಗುವುದರಿಂದ ದ್ವ್ಯಣುಕಪರಿಮಾಣದ ಸಜಾತೀಯವಾಗುವುದಿಲ್ಲ. ಆದುದರಿಂದ ಪರಮಾಣುಗತ ದ್ವಿತ್ವಸಂಖ್ಯೆಯಿಂದ ದ್ವ್ಯಣುಕಪರಿಮಾಣವೂ, ದ್ವ್ಯಣುಕಗತತ್ರಿತ್ವಸಂಖ್ಯೆಯಿಂದ ತ್ರಸರೇಣುವಿನಮಹತ್ಪರಿಮಾಣವೂ ಹುಟ್ಟುತ್ತದೆಂದು ಹೇಳಬೇಕು. ॥ ೧೧೧ ॥

**ಪರಿಮಾಣಂ ಘಟಾದೌ ತು ಪರಿಮಾಣಜಮುಚ್ಯತೇ ॥**
**ಪ್ರಚಯಃ ಶಿಥಿಲಾಖ್ಯೋ ಯಃ ಸಂಯೋಗಸ್ತೇನ ಜನ್ಯತೇ ॥ ೧೧೨ ॥**
**ಪರಿಮಾಣಂ ತೂಲಕಾದೌ ನಾಶಸ್ತ್ವಾಶ್ರಯನಾಶತಃ ॥**

ಪರಿಮಾಣಜನ್ಯಂ ಪರಿಮಾಣಮುದಾಹರತಿ—ಪರಿಮಾಣಂ ಘಟಾದಾವಿತಿ । ಘಟಾದಿಪರಿಮಾಣಂ ಕಪಾಲಾದಿಪರಿಮಾಣಜನ್ಯಮ್ ॥ ಪ್ರಚಯಜನ್ಯಮುದಾಹರ್ತುಂ

ಪ್ರಚಯಂ ನಿರ್ವಕ್ತಿ—ಪ್ರಚಯ ಇತಿ || ೧೧೨ ||

ಪರಿಮಾಣಂ ಚಾಶ್ರಯನಾಶಾದೇವ ನಶ್ಯತೀತ್ಯಾಹ | ನಾಶ ಇತಿ | ಅರ್ಥಾತ್ ಪರಿಮಾಣಸ್ಯೈವ | ನ ಚಾವಯವನಾಶಃ ಕಥಂ ಪರಿಮಾಣನಾಶಕಃ, ಸತ್ಯಪ್ಯವಯವಿನಿ ತ್ರಿಚತುರಾದಿಪರಮಾಣುವಿಶ್ಲೇಷೇ ತದುಪಚಯೇ ಚಾವಯವಿನಃ ಪ್ರತ್ಯಭಿಜ್ಞಾನೇಽಪಿ ಪರಿಮಾಣಾಂತರಸ್ಯ ಪ್ರತ್ಯಕ್ಷಸಿದ್ಧತ್ವಾದಿತಿ ವಾಚ್ಯಮ್ | ಪರಮಾಣುವಿಶ್ಲೇಷೇ ಹಿ ದ್ವ್ಯಣುಕಸ್ಯ ನಾಶೋಽವಶ್ಯಮಭ್ಯುಪೇಯಸ್ತನ್ನಾಶೇಚ ತ್ರಸರೇಣುಕನಾಶಃ ಏವಂ ಕ್ರಮೇಣ ಮಹಾವಯವಿನೋ ನಾಶಸ್ಯಾವಶ್ಯಕತ್ವಾತ್ | ಸತಿ ಚ ನಾಶಕೇಽನಭ್ಯುಪಗಮಮಾತ್ರೇಣ ನಾಶಸ್ಯಾಪಲಪಿತಮಶಕ್ಯತ್ವಾತ್ | ಶರೀರಾದಾವಯವೋಪಚಯೇಽಸಮವಾಯಿಕಾರಣನಾಶಸ್ಯಾವಶ್ಯಕತ್ವಾದವಯವವಿನಾಶ ಆವಶ್ಯಕಃ ||

ಕೇವಲ ಪರಿಮಾಣದಿಂದ ಹುಟ್ಟಿದ ಪರಿಮಾಣವನ್ನು ತೋರಿಸುತ್ತಾನೆ. ಘಟಾದಿಗಳ ಪರಿಮಾಣವು ಕಪಾಲಾದಿಗಳಪರಿಮಾಣದಿಂದ ಹುಟ್ಟುವುದರಿಂದ ಪರಿಮಾಣಜಪರಿಮಾಣವಾಗುತ್ತದೆ. ಪ್ರಚಯಜನ್ಯಪರಿಮಾಣವನ್ನು ಉದಾಹರಿಸಲು ಪ್ರಚಯಪದಾರ್ಥವನ್ನು ತೋರಿಸುತ್ತಾನೆ. 'ಪ್ರಚಯಃ—' ಇತಿ. ಶಿಥಿಲ ಸಂಯೋಗಕ್ಕೆ ಪ್ರಚಯವೆಂದು ಹೆಸರು. ಸಂಯೋಗತ್ವದಿಂದ ವ್ಯಾಪ್ಯವಾದ ಜಾತಿ ವಿಶೇಷವೇ ಶಿಥಿಲತ್ವ. ಪರಸ್ಪರ ದಾರ್ಢ್ಯವಿಲ್ಲದ ಅವಯವಗಳ ಯೋಗಕ್ಕೆ ಶಿಥಿಲ ಸಂಯೋಗವೆಂದು ಹೆಸರು. ಬಿಡಿಸಿದಹತ್ತಿ ಮುಂತಾದವುಗಳ ರಾಶಿರೂಪಪರಿಮಾಣವು ಶಿಥಿಲಸಂಯೋಗರೂಪಪ್ರಚಯದಿಂದ ಹುಟ್ಟಿದೆ. ಪರಿಮಾಣದ ನಾಶಕವನ್ನು ತೋರಿಸುತ್ತಾನೆ. 'ನಾಶಃ—' ಇತಿ. ಆಶ್ರಯವೆಂದರೆ ಪರಿಮಾಣಕ್ಕೆ ಆಧಾರವಾದ ದ್ರವ್ಯದ ನಾಶದಿಂದ ಪರಿಮಾಣನಾಶವಾಗುತ್ತದೆಂದು ಕಾರಿಕಾರ್ಥ. 'ನಚ—' ಎಂಬುದರಿಂದ ಆಶಂಕಿಸುತ್ತಾನೆ. ಅವಯವಿನಾಶದಿಂದ ಪರಿಮಾಣನಾಶವಾಗುವುದು ಹೇಗೆ? ಅವಯವಿ ಇದ್ದರೂ ಮೂರುನಾಲ್ಕುಪರಮಾಣುಗಳವಿಶ್ಲೇಷ (ಸಡಿಲಾಗುವುದು) ವಾದಾಗ ಅಥವಾ ಪರಿಚಯ (ಅಭಿವೃದ್ಧಿ) ವಾದಾಗ ಅದೇ ಅವಯವಿಯೆಂಬ ಪ್ರತ್ಯಭಿಜ್ಞಾನ ಬರುತ್ತಿದ್ದರೂ (ಅವಯವಿನಾಶವಾಗದಿದ್ದರೂ) ಅಲ್ಲಿ ಪೂರ್ವಪರಿಣಾಮನಾಶವಾಗಿ ಪರಿಣಾಮಾಂತರವು ಪ್ರತ್ಯಕ್ಷಗೋಚರವಾಗುತ್ತಿರುತ್ತದೆ. ಆದುದರಿಂದ ಪರಿಣಾಮ ನಾಶಕ್ಕೆ ಆಶ್ರಯವಾದ ಅವಯವಿನಾಶವು ಕಾರಣವಾಗಲಾರದೆಂದು ಶಂಕಾತಾತ್ಪರ್ಯ. ಅದಕ್ಕೆ ಸಮಾಧಾನ. 'ಪರಮಾಣುವಿ—' ಇತಿ. ಪರಮಾಣುವಿಶ್ಲೇಷವಾದರೆ ದ್ವ್ಯಣುಕನಾಶವಾಗಿಯೇ ಆಗುತ್ತದೆ. ದ್ವ್ಯಣುಕನಾಶವಾದರೆ ತ್ರಸರೇಣುನಾಶ. ಹೀಗೆ ಮಹಾವಯವಿಯವರೆಗೆ ನಾಶವಾಗಿಯೇ ಆಗುವುದು. ಹೀಗೆ ಅವಯವಿ ನಾಶವಾದಮೇಲೆ ಪರಿಮಾಣನಾಶವಾಗುವುದಿಲ್ಲವೆಂದು ಅಪಲಾಪಮಾಡಲು ಸಾಧ್ಯವಿಲ್ಲ. ಶರೀರದಲ್ಲಿ ಇದು ಪ್ರಸಿದ್ಧವಾಗಿದೆ. ಬಾಲ್ಯಶರೀರವು ಯೌವನದಲ್ಲಿಯೂ, ಯೌವನ

ಶರೀರವು ವಾರ್ಧಕ್ಯದಲ್ಲಿಯೂ ಅವಯವೋಪಚಯಾಪಚಯಗಳಿಂದ ನಾಶಹೊಂದುವುದು ಪ್ರತ್ಯಕ್ಷಸಿದ್ಧವಾಗಿದೆ.

ನ ಚ ಪಟಾದಿವಿನಾಶೇಽಪಿ ತಂತ್ವಂತರಸಂಯೋಗಾತ್ ಪರಿಮಾಣಾಧಿಕ್ಯಂ ನ ಸ್ಯಾದಿತಿ ವಾಚ್ಯಮ್ । ತತ್ರಾಪಿ ವೇಮಾದ್ಯಭಿಘಾತೇನಾ ಸಮವಾಯಿಕಾರಣತಂತು ಸಂಯೋಗನಾಶಾತ್ ಪಟನಾಶಸ್ಯಾವಶ್ಯಕತ್ವಾತ್ । ಕಿಂಚ ತಂತ್ವಂತರಸ್ಯ ತತ್ಪಟಾವಯವತ್ವೇ ಪೂರ್ವಂ ತತ್ಪಟ ಏವ ನ ಸ್ಯಾತ್ತಂತ್ವರರೂಪಕಾರಣಾ ಭಾವಾತ್ । ತಂತ್ವರಸ್ಯಾವಯವತ್ವಾಭಾವೇ ಚ ನ ತೇನ ಪರಿಮಾಣಾಧಿಕ್ಯಂ ಸಂಯುಕ್ತದ್ರವ್ಯಾಂತರವತ್ । ತಸ್ಮಾತ್ತತ್ರ ತಂತ್ವರಸಂಯೋಗೇಸತಿ ಪೂರ್ವಪಟ ನಾಶಸ್ತತಃ ಪಟಾಂತರೋತ್ಪತ್ತಿರಿತ್ಯವಶ್ಯಂ ಸ್ವೀಕಾರ್ಯಮ್ । ಅವಯವಿನಃ ಪ್ರತ್ಯ ಭಿಜ್ಞಾನಂ ತು ಸಾಜಾತ್ಯೇನ ದೀಪಕಲಿಕಾದಿವತ್ । ನ ಚ ಪೂರ್ವತಂತವ ಏವ ತಂತ್ವಂತರಸಹಕಾರಾತ್ಪೂರ್ವಪಟೇ ಸತ್ಯೇವ ಪಟಾಂತರಮಾರಭಂತಾಮಿತಿ ವಾಚ್ಯಮ್ । ಮೂರ್ತಯೋಃ ಸಮಾನದೇಶತಾವಿರೋಧಾತ್ತತ್ರಪಟದ್ವಯಾ ಸಂಭವಾದೇಕದಾ ನಾನಾದ್ರವ್ಯಸ್ಯ ತತ್ರೋಪಲಂಭಸ್ಯ ಬಾಧಿತತ್ವಾಚ್ಚ । ತಸ್ಮಾತ್ ಪೂರ್ವದ್ರವ್ಯಸ್ಯ ಪ್ರತಿಬಂಧಕಸ್ಯ ವಿನಾಶೇ ದ್ರವ್ಯಾಂತರೋತ್ಪತ್ತಿರಿತ್ಯವಶ್ಯಮಭ್ಯು ಪೇಯತ್ವಾತ್ ॥

ಅವಯವಿನಾಶದಿಂದ ಪರಿಮಾಣನಾಶವೆಂಬುದರಲ್ಲಿ ನಾನಾರೀತಿಯಾಗಿ ಆಶಂಕಿಸಿ ಸಮಾಧಾನ ತೋರಿಸುತ್ತಾನೆ. 'ನಚ—' ಇತಿ. ಪಟಾದಿಗಳುನಾಶವಾದರೂ ಇತರ ತಂತುಸಂಯೋಗದಿಂದ ಅಧಿಕಪರಿಮಾಣಉುಂಟಾಗಲಾರದು. ದ್ರವ್ಯನಾಶದಿಂದ ಪರಿಮಾಣನಾಶವಾಗುತ್ತದಷ್ಟೆ ಅಂದರೆ ಅದಕ್ಕೆ ಸಮಾಧಾನ. 'ತತ್ರಾಪಿ—' ಇತಿ. ಅಲ್ಲಿಯೂ ವೇಮಾದ್ಯಭಿಘಾತದಿಂದ ಅಸಮವಾಯಿಕಾರಣವಾದ ತಂತುನಾಶದಿಂದ ಅವಶ್ಯ ವಾಗಿ ಪಟನಾಶವಾಗಿಯೇ ಆಗುತ್ತದೆ. ಮಗ್ಗದಲ್ಲಿ ಓಡಾಡುವದಂಡವಿಶೇಷಕ್ಕೆ ವೇಮಾ ಎಂದು ಹೆಸರು. ಅಭಿಘಾತ—ಸಂಯೋಗವಿಶೇಷ. ಇದು ಶಬ್ದಕ್ಕೆ ನಿಮಿತ್ತಕಾರಣ ವಾಗಿರುತ್ತದೆ. ಸಂಯೋಗಿಪದಾರ್ಥಗಳಿಗೆ ಪರಸ್ಪರವಿಭಾಗಕ್ಕೆ ಕಾರಣವಾದ ಕ್ರಿಯೆಗೆ ಜನಕವಾದ ಸಂಯೋಗವೇ ಅಭಿಘಾತ. ಪಟನಾಶವಾಗುತ್ತದೆ. ಎಂಬುದರಲ್ಲಿ ಯುಕ್ತಿ ತೋರಿಸುತ್ತಾನೆ. 'ತಂತ್ವಂ—' ಇತಿ. ಇತರತಂತುಗಳು ತತ್ಪಟದ ಅವಯವಗಳಾ ಗುವುದಾದರೆ ಮೊದಲು ಆಪಟವೇ ಆಗಲಾರದು. ಏಕೆಂದರೆ ಅದರ ಕಾರಣಗಳಾದ ಅವ ಯವಗಳಾದ ತಂತ್ವಂತರಗಳು ಮೊದಲು ಇರುವುದಿಲ್ಲವಷ್ಟೆ. ಯಾವಾಗ ತಂತ್ವಂತರ ಸಂಯೋಗವಾಗುವುದೋ ಆಗ ಪೂರ್ವಪಟವಿರುವುದಿಲ್ಲ. ಅದಕ್ಕಿಂತ ಬೇರೆಯಾದ ಪಟವೇ ಇರುತ್ತದೆ. ಆದುದರಿಂದ ತಂತ್ವಂತರಗಳು ಅದರ ಅವಯವಗಳಾಗದಿರುವುದ ರಿಂದ ಅದರಿಂದ ಆಪಟದಲ್ಲಿ ಪರಿಮಾಣಾಧಿಕ್ಯಹೊಂದಲಾರದು. 'ತಸ್ಮಾತ್' ಎಂಬುದ ರಿಂದ ಸಿದ್ಧಾಂತದಉಪಸಂಹಾರ ತೋರಿಸುತ್ತಾನೆ. ಆದುದರಿಂದ ಅಲ್ಲಿ ತಂತ್ವಂತರ

ಸಂಯೋಗವುಂಟಾದರೆ ಪೂರ್ವಪಟವೂನಾಶವಾಗುವುದೆಂದೂ ಆಮೇಲೆ ಇನ್ನೊಂದು ಹೊಸಪಟವೇ ಹುಟ್ಟುತ್ತದೆಂದೂ ಅವಶ್ಯವಾಗಿ ಒಪ್ಪಲೇಬೇಕು. ಹಾಗಾದರೆ (ಪೂರ್ವಪಟನಾಶವಾಗುವುದಾದರೆ) 'ಅದೇ ಇದು ವಸ್ತ್ರ' ಎಂಬ ಪ್ರತ್ಯಭಿಜ್ಞಾನ ಬರುವುದು ಹೇಗೆ? ಅಂದರೆ 'ಸೈವೇಯಂ ದೀಪಕಲಿಕಾ' ಆ ಹಿಂದಿನ ದೀಪಶಿಖೆಯೇ ಇದು' ಎಂಬ ಪ್ರತ್ಯಭಿಜ್ಞೆಯು ಸಾಜಾತ್ಯದಿಂದ ಬರುವಂತೆ ಇಲ್ಲಿಯೂ ಸಾಜಾತ್ಯವಿರುವುದ ರಿಂದ ಪ್ರತ್ಯಭಿಜ್ಞಾ ಬರಲು ವಿರೋಧವೇನೂ ಇಲ್ಲವೆಂದು ತಾತ್ಪರ್ಯ. ಮೂರ್ತದ್ರವ್ಯ ಗಳಿಗೆ ಸಮಾನದೇಶದಲ್ಲಿ ಸಹಾನವಸ್ಥಾನಲಕ್ಷಣವಿರೋಧವನ್ನು ತಿಳಿಯದ ಭ್ರಾಂತನು ಆಕ್ಷೇಪಿಸುತ್ತಾನೆ. 'ನಚ—' ಇತಿ. ಹಿಂದಿನ ತಂತುಗಳೇ ಇತರತಂತುಸಹಕಾರದಿಂದ ಪೂರ್ವಪಟವಿರುವಾಗಲೇ ಅಲ್ಲಿ ಹೊಸಪಟವೊಂದನ್ನು ಹುಟ್ಟಿಸಲಿ ಎಂದು ಅವನ ಆಶಂಕೆ. ಅದಕ್ಕೆ ಸಮಾಧಾನ. 'ಮೂರ್ತಯೋಃ—' ಇತಿ. ಮೂರ್ತದ್ರವ್ಯಗಳು ಯಾವಾಗಲೂ ಪರಸ್ಪರವಿರೋಧದಿಂದ ಸಮಾನದೇಶದಲ್ಲಿರುವುದಿಲ್ಲ. ಆದುದರಿಂದ ಎರಡುಪಟಗಳು ಬಂದು ಅಧಿಕರಣದಲ್ಲಿ ಸಂಭವಿಸಲಾರವು. ಏಕಕ್ಷಣದಲ್ಲಿ ನಾನಾದ್ರವ್ಯೋಪಲಬ್ಧಿಯೂ ಬಾಧಿತವಾಗುತ್ತದೆ. ಆದುದರಿಂದ ಪ್ರತಿಬಂಧಕವಾದ ಪೂರ್ವದ್ರವ್ಯವುನಾಶವಾದ ಮೇಲೆಯೇ ದ್ರವ್ಯಾಂತರವು ಹುಟ್ಟುವುದೆಂದು ಅಗತಿಕವಾಗಿ ಒಪ್ಪಲೇಬೇಕು ಎಂದು ಸಿದ್ಧಾಂತ. ಇದರಿಂದ ಆಶ್ರಯನಾಶದಿಂದಲೇ ಪರಿಣಾಮನಾಶ ವೆಂದು ಸ್ಪಷ್ಟವಾಗುತ್ತದೆ.

**ಸಂಖ್ಯಾವತ್ತು ಪೃಥಕ್ತ್ವಂ ಸ್ಯಾತ್ ಪೃಥಕ್ ಪ್ರತ್ಯಯಕಾರಣಮ್ ॥ ೧೧೩ ॥**
**ಅನ್ಯೋನ್ಯಾಭಾವತೋ ನಾಸ್ಯ ಚರಿತಾರ್ಥತ್ವಮಿಷ್ಯತೇ ॥**
**ಅಸ್ಮಾತ್ ಪೃಥಗಿದಂ ನೇತಿ ಪ್ರತೀತಿರ್ಹಿ ವಿಲಕ್ಷಣಾ ॥ ೧೧೪ ॥**

ಪೃಥಕ್ತ್ವಂ ನಿರೂಪಯತಿ—ಸಂಖ್ಯಾವದಿತಿ । ಪೃಥಕ್‌ಪ್ರತ್ಯಯಾಸಾಧಾರಣಂಕಾರಣಂ ಪೃಥಕ್ತ್ವಮ್ । ತನ್ನಿತ್ಯತಾದಿಕಂ ಸಂಖ್ಯಾವತ್ । ತಥಾಹಿ—ನಿತ್ಯೇಷ್ವೇಕತ್ವಂ ನಿತ್ಯಮ್ । ಅನಿತ್ಯೇಷ್ವನಿತ್ಯಮ್ । ಅನಿತ್ಯಮೇಕತ್ವಂ ತು ಆಶ್ರಯದ್ವಿತೀಯಕ್ಷಣೇ ಚೋತ್ಪದ್ಯತೇ ಆಶ್ರಯನಾಶಾನ್ನಶ್ಯತಿ । ತಥೈಕಪೃಥಕ್ತ್ವಮಪಿ ದ್ವಿತ್ವಾದಿವಚ್ಚದ್ವಿ ಪೃಥಕ್ತ್ವಾದಿಕಮಪೀತ್ಯರ್ಥಃ ॥ ೧೧೩ ॥ ನನ್ವಯಮಸ್ಮಾತ್ ಪೃಥಕ್ ಇತ್ಯಾದೌ ಅನ್ಯೋನ್ಯಾಭಾವೋ ಭಾಸತೇ, ತತ್ಕಥಂ ಪೃಥಕ್ತ್ವಂ ಗುಣಾಂತರಂ ಸ್ವೀಕ್ರಿಯತೇ । ನ ಚಾಸ್ತು ಪೃಥಕ್ತ್ವಂ, ನತ್ವನ್ಯೋನ್ಯಾಭಾವ ಇತಿ ವಾಚ್ಯಮ್ । ರೂಪಂ ನ ಘಟಃ ಇತಿ ಪ್ರತೀತ್ಯನಾಪತ್ತೇಃ । ನ ಹಿ ರೂಪೇ ಘಟಾವಧಿಕಂ ಪೃಥಕ್ತ್ವಂ ಗುಣಾಂತರಮಸ್ತಿ, ನ ವಾ ಘಟೇ ಘಟಾವಧಿಕಂ ಪೃಥಕ್ತ್ವಮಸ್ತಿ ಯೇನ ಪರಂಪರಾಸಂಬಂಧಃ ಕಲ್ಪ್ಯತೇ, ಇತ್ಯತ ಆಹ—ಅಸ್ಮಾದಿತಿ । ನನು ಶಬ್ದ ವೈಲಕ್ಷಣ್ಯಮೇವ ನತ್ವರ್ಥವೈಲಕ್ಷಣ್ಯಮಿತಿ ಚೇನ್ನ, ವಿನಾರ್ಥಭೇದಂ ಘಟಾತ್ ಪೃಥಗಿತಿವತ್ ಘಟೋ ನ ಪಟ ಇತ್ಯತ್ರಾಪಿ ಪಂಚಮೀಪ್ರಸಂಗಾತ್ । ತಸ್ಮಾ

ದ್ಯದರ್ಥಯೋಗೇ ಪಂಚಮೀ ಸೋಽರ್ಥೋ ನಞರ್ಥಾನ್ಯೋನ್ಯಾಭಾವತೋ ಭಿನ್ನೋ ಗುಣಾಂತರಂ ಕಲ್ಪ್ಯತ ಇತಿ || ೧೧೪ ||

'ಅಯಮಸ್ಮಾತ್ ಪೃಥಕ್' ಎಂಬ ವ್ಯವಹಾರಕ್ಕೆ ಅಸಾಧಾರಣವಾದ ಗುಣಕ್ಕೆ ಪೃಥಕ್ತ್ವವೆಂದು ಹೆಸರು. ಸಂಖ್ಯಾಗುಣದಂತೆಯೇ ನಿತ್ಯಾನಿತ್ಯವಿಭಾಗವನ್ನು ತಿಳಿಯಬೇಕು. ಇದು ಅನ್ಯೋನ್ಯಾಭಾವದಲ್ಲಿ ಅಂತರ್ಭಾವಹೊಂದಲಿ ಎಂದು ಶಂಕಿಸುವವರ ಮತವನ್ನು ತೋರಿಸುತ್ತಾನೆ. 'ನನು—' ಇತಿ. 'ಘಟಃ ಪಟಾತ್ ಪೃಥಕ್' ಎಂಬ ಪೃಥಕ್ತ್ವಪ್ರತೀತಿಗೂ, 'ಘಟಃ ಪಟೋನ' ಎಂಬ ಅನ್ಯೋನ್ಯಾಭಾವಪ್ರತೀತಿಗೂ ಅರ್ಥಭೇದವೇನೂ ತೋರದಿರುವುದರಿಂದ ಅನ್ಯೋನ್ಯಾಭಾವದಲ್ಲಿಯೇ ಇದು ಅಂತರ್ಭಾವಹೊಂದುತ್ತದೆ. ಅದಕ್ಕಿಂತ ಬೇರೆಯಾಗಿ ಒಂದು ಗುಣವೆಂದು ಏಕೆ ಅಂಗೀಕರಿಸಬೇಕು ? ಎಂದು ಶಂಕೆ ಮಾಡುವವರ ತಾತ್ಪರ್ಯ. 'ನಚ—' ಇತಿ. ಪೃಥಕ್ತ್ವಗುಣವೇ ಇರಲಿ. ಅನ್ಯೋನ್ಯಾಭಾವವೇ ಬೇಡವೆಂದು ಶಂಕಿಸಬಾರದು ಎಂದರ್ಥ. ಅನ್ಯೋನ್ಯಾಭಾವವೇ ಬೇಡವೆಂದರೆ 'ರೂಪಂ ನ ಘಟಃ' ಎಂಬ ಪ್ರತೀತಿ ಇಲ್ಲದೇ ಹೋಗಬೇಕಾಗುತ್ತದೆ. ಆದರೆ ಅಂತಹಪ್ರತೀತಿ ಲೋಕಪ್ರಸಿದ್ಧವಾಗಿದೆ. ರೂಪದಲ್ಲಿ ಘಟಕ್ಕಿಂತ ಬೇರೆಯಾದ ಪೃಥಕ್ತ್ವವಿಲ್ಲ. ಅಥವಾ ಘಟದಲ್ಲಿ ಘಟಾವಧಿಕ ಪೃಥಕ್ತ್ವವಿಲ್ಲ. ಹಾಗೆ ಪ್ರತೀತಿ ಇದ್ದಿದರೆ ಒಂದು ಪರಂಪರಾಸಂಬಂಧಕಲ್ಪಿಸಬಹುದಿತ್ತು. ಆದುದರಿಂದ ಪೃಥಕ್ತ್ವವಿಲ್ಲವೆಂದರೆ ಯಾವದೋಷವೂ ಬರುವುದಿಲ್ಲ. ಅನ್ಯೋನ್ಯಾಭಾವವಿಲ್ಲವೆಂದರೆ ಪ್ರಸಿದ್ಧಪ್ರತೀತಿಯನ್ನು ಅಪಲಾಪಮಾಡಿದಂತಾಗುತ್ತದೆ. ಹೀಗೆ ಶಂಕೆ ಬಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಅಸ್ಮಾತ್ ಪೃಥಕ್—' ಇತಿ. 'ಇದು ಅದಕ್ಕಿಂತ ಬೇರೆ' ಇದು ಅದು ಅಲ್ಲ.' ಈ ಎರಡುಪ್ರತೀತಿಗಳಿಗೆ ವೈಲಕ್ಷಣ್ಯ ಲೋಕಸಿದ್ಧವಾಗಿದೆ. ವಿಷಯಭೇದವಿಲ್ಲದೆ ವೈಲಕ್ಷಣ್ಯ ಸಿದ್ಧಿಸುವುದಿಲ್ಲ. ಆದುದರಿಂದ ಅನ್ಯೋನ್ಯಾಭಾವಕ್ಕಿಂತ ಪೃಥಕ್ತ್ವ ಬೇರೆಯೆಂದು ಅಂಗೀಕರಿಸಲೇಬೇಕು. 'ನನು—' ಎಂಬುದರಿಂದ ಪುನಃ ಶಂಕಿಸುತ್ತಾನೆ. ಹಿಂದೆಹೇಳಿದ ಪ್ರತೀತಿಯಲ್ಲಿ ಶಬ್ದವೈಲಕ್ಷಣ್ಯವಲ್ಲದೆ ಅರ್ಥಭೇದ ಯಾವುದೂ ತೋರುವುದಿಲ್ಲವೆಂದು ಪೂರ್ವಪಕ್ಷಿಯ ಆಶಯ. ಅರ್ಥಭೇದವಿಲ್ಲವಾದರೆ 'ಇದಂ ನ' ಎಂಬ ಅನ್ಯೋನ್ಯಾಭಾವವಿಷಯಕಪ್ರತೀತಿಯಲ್ಲಿಯೂ ಪಂಚಮೀವಿಭಕ್ತಿ ಏಕೆ ಬರಲಿಲ್ಲ. ಅಲ್ಲಿಯೂ ಪಂಚಮೀಬರಲಿ ಎಂದು ಸಿದ್ಧಾಂತಿಯ ಸಮಾಧಾನ. ಆದುದರಿಂದ ಯಾವುದರ ಅರ್ಥಸಂಬಂಧದಿಂದ ಪಂಚಮೀ ಬಂದಿದೆಯೋ ಆ ಅರ್ಥವು ನಞರ್ಥವಾದ ಅನ್ಯೋನ್ಯಾಭಾವಕ್ಕಿಂತ ಬೇರೆಯಾಗಿ ಗುಣಾಂತರವನು ತಿಳಿಸಿಕೊಡುತ್ತದೆ. ಅದೇ ಪೃಥಕ್ತ್ವಗುಣವಾಗಿದೆಯೆಂದು ತಾತ್ಪರ್ಯ.

**ಅಪ್ರಾಪ್ತಯೋಸ್ತು ಯಾ ಪ್ರಾಪ್ತಿಃ ಸೈವ ಸಂಯೋಗ ಈರಿತಃ |**
**ಕೀರ್ತಿತಸ್ತ್ರಿವಿಧಸ್ತ್ವೇಷ ಆದ್ಯೋಽನ್ಯತರಕರ್ಮಜಃ || ೧೧೫ ||**
**ತಥೋಭಯಸ್ಪಂದ (ಕ್ರಿಯಾ) ಜನ್ಯೋ ಭವೇತ್ಸಂಯೋಗಜೋಽಪರಃ |**

ಆದಿಮಃ ಶ್ಯೇನಶೈಲಾದಿಸಂಯೋಗಃ ಪರಿಕೀರ್ತಿತಃ ॥ ೧೧೬ ॥
ಮೇಷಯೋಃ ಸನ್ನಿಪಾತೋ ಯಃ ಸ ದ್ವಿತೀಯ ಉದಾಹೃತಃ ।
ಕಪಾಲತರುಸಂಯೋಗಾತ್ಸಂಯೋಗಸ್ತರುಕುಂಭಯೋಃ ॥ ೧೧೭ ॥
ತೃತೀಯಃ ಸ್ಯಾತ್ ಕರ್ಮಜೋಽಪಿ ದ್ವಿಧೈವ ಪರಿಕೀರ್ತಿತಃ ॥
ಅಭಿಘಾತೋ ನೋದನಂ ಚ ಶಬ್ದಹೇತುರಿಹಾದಿಮಃ ॥ ೧೧೮ ॥
ಶಬ್ದಾಹೇತುರ್ದ್ವಿತೀಯಃ ಸ್ಯಾತ್ —

ಸಂಯೋಗಂ ನಿರೂಪಯತಿ—ಅಪ್ರಾಪ್ತಯೋರಿತಿ । ತಂ ವಿಭಜತೇ ಕೀರ್ತಿತ ಇತಿ । ಏಷಃ ಸಂಯೋಗಃ ॥ ಸನ್ನಿಪಾತಃ ಸಂಯೋಗಃ । ದ್ವಿತೀಯ ಉಭಯಕರ್ಮಜಃ । ತೃತೀಯ ಇತಿ । ಸಂಯೋಗಜ ಸಂಯೋಗ ಇತ್ಯರ್ಥಃ । ತೃತೀಯಃ ಸ್ಯಾದಿತಿ ಪೂರ್ವೇಣಾನ್ವಿತಮ್ । ಆದಿಮಃ ಅಭಿಘಾತಃ । ದ್ವಿತೀಯೋ ನೋದನಾಖ್ಯಃ ಸಂಯೋಗ ಇತಿ ॥

ಸಂಯೋಗದ ಲಕ್ಷಣ ಹೇಳುತ್ತಾನೆ. 'ಅಪ್ರಾಪ್ತ—' ಇತಿ. ಅಸಂಬಂದ್ಧವಾದವುಗಳ ಸಂಬಂಧಕ್ಕೆ ಸಂಯೋಗನೆಂದು ಹೆಸರು. ಸಂಯೋಗತ್ವಜಾತಿಯಿಂದ ಕೂಡಿರುವುದು ಸಂಯೋಗ. ಇದು 'ಇಮೌ ಸಂಯುಕ್ತೌ' ಎಂಬ ಪ್ರತೀತಿಗೆ ಅಸಾಧಾರಣಕಾರಣವಾಗಿರುತ್ತದೆ. ಇದು ಮೂರುವಿಧವಾಗಿರುತ್ತದೆ. ಎರಡರಲ್ಲಿ ಅನ್ಯತರಕರ್ಮದಿಂದ ಉಂಟಾಗುವ ಸಂಯೋಗವು ಅನ್ಯತರಕರ್ಮಜವಾಗುತ್ತದೆ. ಇದಕ್ಕೆ ಉದಾ:-ಶ್ಯೇನಶೈಲಸಂಯೋಗ. ಇಲ್ಲಿ ಶ್ಯೇನದಲ್ಲಿ (ಗಿಡುಗ) ಮಾತ್ರ ಕ್ರಿಯಾ ಉಂಟಾಗಿ ಶೈಲಸಂಯೋಗವಾಗುತ್ತದೆ. ಎರಡನೆಯಭೇದ—ಉಭಯಕರ್ಮಜ. ಎರಡರಕ್ರಿಯೆಯಿಂದಾಗುವ ಸಂಯೋಗ. ಎರಡು ಟಗರುಗಳಸಂಯೋಗ ಉಭಯಕರ್ಮಜವಾಗಿರುತ್ತದೆ. ಸಂಯೋಗಜಸಂಯೋಗ ಮೂರನೆಯಭೇದ. ಕಪಾಲತರುಸಂಯೋಗದಿಂದ ಘಟತರುಸಂಯೋಗವಾಗುವುದರಿಂದ ಇದು ಅದಕ್ಕೆ ಉದಾಹರಣೆ. ಅಭಿಘಾತ, ನೋದನವೆಂದು ಕರ್ಮಜಸಂಯೋಗವೂ ಎರಡುರೀತಿಯಾಗಿರುತ್ತದೆ. ಶಬ್ದಕ್ಕೆ ಕಾರಣವಾದ ಭೇರ್ಯಾದಿವಾದನವೇ ಅಭಿಘಾತಸಂಯೋಗವಾಗುತ್ತದೆ. ಶಬ್ದವನ್ನು ಹುಟ್ಟಿಸದಿರುವ, ಅದಕ್ಕೆ ಅಹೇತುವಾದ ಸಂಯೋಗವು (ಕತ್ತರಿಯಿಂದ ಕತ್ತರಿಸುವುದು.) ನೋದನವಾಗುತ್ತದೆ.

....ವಿಭಾಗೋಽಪಿ ತ್ರಿಧಾ ಭವೇತ್ ॥
ಏಕಕರ್ಮೋದ್ಭವಸ್ತ್ವಾದ್ಯೋ ದ್ವಯಕರ್ಮೋದ್ಭವೋಽಪರಃ ॥ ೧೧೯ ॥
ವಿಭಾಗಜಸ್ತೃತೀಯಃ ಸ್ಯಾತ್ ತೃತೀಯೋಽಪಿ ದ್ವಿಧಾ ಭವೇತ್ ॥
ಹೇತುಮಾತ್ರವಿಭಾಗೋತ್ಥೋ ಹೇತ್ವಹೇತುವಿಭಾಗಜಃ ॥ ೧೨೦ ॥

ವಿಭಕ್ತಪ್ರತ್ಯಯಕಾರಣಂ ವಿಭಾಗಂ ನಿರೂಪಯತಿ—ವಿಭಾಗ ಇತಿ । ಏಕಕರ್ಮೇತಿ ।

ತದುದಾಹರಣಂ ತು ಶ್ಯೇನಶ್ಶೈಲವಿಭಾಗಾದಿಕಂ ಪೂರ್ವವದ್ಬೋಧ್ಯಮ್ । ತೃತೀಯೋಽಪಿ ವಿಭಾಗಜವಿಭಾಗಃ, ಕಾರಣಮಾತ್ರವಿಭಾಗಜನ್ಯಃ, ಕಾರಣಾಕಾರಣವಿಭಾಗಜನ್ಯಶ್ಚೇತಿ । ಆದ್ಯಸ್ತಾವತ್—ಯತ್ರೈಕಕಪಾಲೇ ಕರ್ಮ ತತಃ ಕಪಾಲದ್ವಯವಿಭಾಗಃ । ತತೋ ಘಟಾರಂಭಕಸಂಯೋಗನಾಶಃ । ತತೋ ಘಟನಾಶಃ । ತತಸ್ತೇನೈವ ಕಪಾಲವಿಭಾಗೇನ ಸಕರ್ಮಣಃ ಕಪಾಲಸ್ಯಾಕಾಶ ವಿಭಾಗೋ ಜನ್ಯತೇ । ತತ ಆಕಾಶಸಂಯೋಗನಾಶಃ । ತತ ಉತ್ತರದೇಶ ಸಂಯೋಗಃ । ತತಃ ಕರ್ಮನಾಶ ಇತಿ । ನಚ ತೇನ ಕರ್ಮಣೈವ ಕಥಂ ದೇಶಾಂತರವಿಭಾಗೋ ನ ಜನ್ಯತೇ ಇತಿ ವಾಚ್ಯಮ್ । ಏಕಸ್ಯಕರ್ಮಣ ಆರಂಭಕಸಂಯೋಗಪ್ರತಿದ್ವಂದ್ವಿವಿಭಾಗಜನಕತ್ವಸ್ಯಾನಾರಂಭಕಸಂಯೋಗಪ್ರತಿ ದ್ವಂದ್ವಿವಿಭಾಗಜನಕತ್ವಸ್ಯ ಚ ವಿರೋಧಾತ್ । ಅನ್ಯಥಾ ವಿಕಸತ್ಕಮಲಕುಡ್ಮಲ ಭಂಗಪ್ರಸಂಗಾತ್ । ತಸ್ಮಾತ್ ಯದೀದಮನಾರಂಭಕಸಂಯೋಗಪ್ರತಿದ್ವಂದ್ವಿ ವಿಭಾಗಂ ಜನಯೇತ್ತದಾರಂಭಕಸಂಯೋಗಪ್ರತಿದ್ವಂದ್ವಿವಿಭಾಗಂ ನಜನಯೇತ್ । ನ ಚ ಕಾರಣವಿಭಾಗೇನೈವ ದ್ರವ್ಯನಾಶಾತ್ಪೂರ್ವಂ ಕುತೋ ದೇಶಾಂತರ ವಿಭಾಗೋನ ಜನ್ಯತ ಇತಿ ವಾಚ್ಯಮ್ । ಆರಂಭಕಸಂಯೋಗಪ್ರತಿದ್ವಂದ್ವಿ ವಿಭಾಗವತೋಽವಯವಸ್ಯ ಸತಿ ದ್ರವ್ಯೇ ದೇಶಾಂತರವಿಭಾಗಾಸಂಭವಾತ್ । ದ್ವಿತೀಯಸ್ತಾವತ್—ಯತ್ರ ಹಸ್ತಕ್ರಿಯಯಾ ಹಸ್ತತರುವಿಭಾಗಸ್ತತಃಶರೀರೇಽಪಿ ವಿಭಕ್ತಪ್ರತ್ಯಯೋ ಭವತಿ ತತ್ರ ಶರೀರತರುವಿಭಾಗೇ ಹಸ್ತಕ್ರಿಯಾ ನ ಕಾರಣಂ, ವ್ಯಧಿಕರಣತ್ವಾತ್ । ಶರೀರೇ ತು ಕ್ರಿಯಾ ನಾಸ್ತ್ಯೇವ ಅವಯವಿಕರ್ಮಣೋ ಯಾವದವಯವಕರ್ಮನಿಯತತ್ವಾತ್ । ಅತಸ್ತತ್ರ ಕಾರಣಾಕಾರಣವಿಭಾಗೇನ ಕಾರ್ಯಾಕಾರ್ಯವಿಭಾಗೋ ಜನ್ಯತ ಇತಿ । ಅತಏವವಿಭಾಗೋ ಗುಣಾಂತರಮ್ । ಅನ್ಯಥಾ ಶರೀರೇ ವಿಭಕ್ತಪ್ರತ್ಯಯೋ ನ ಸ್ಯಾತ್ । ಅತಃ ಸಂಯೋಗನಾಶೇನ ವಿಭಾಗೋ ನಾನ್ಯಥಾಸಿದ್ಧೋ ಭವತಿ ॥ ೧೨೦ ॥

ವಿಭಾಗಗುಣಸ್ವರೂಪವನ್ನು ವಿವರಿಸುತ್ತಾನೆ. 'ವಿಭಕ್ತ—' ಇತಿ. 'ಇಮೌ ವಿಭಕ್ತೌ' ಎಂಬ ವ್ಯವಹಾರಕ್ಕೆ ಅಸಾಧಾರಣಕಾರಣವಾಗಿರುವುದು ವಿಭಾಗ. ಇದೂ ಹಿಂದಿನಂತೆ 'ಅನ್ಯತರಕರ್ಮಜ, ಉಭಯಕರ್ಮಜ, ವಿಭಾಗಜವಿಭಾಗವೆಂದು ಮೂರು ವಿಧವಾಗಿರುತ್ತದೆ. ಶ್ಯೇನಕ್ರಿಯೆಯಿಂದ ಶೈಲವಿಭಾಗವು ಅನ್ಯತರಕರ್ಮಜವೂ, ಎರಡು ಮೇಷಗಳಕ್ರಿಯೆಯಿಂದ ಆಗುವ ವಿಭಾಗವು ಉಭಯಕರ್ಮಜವೂ, ಆಗುತ್ತದೆ. ಮೂರನೆಯ ವಿಭಾಗಜವಿಭಾಗವು ಕಾರಣಮಾತ್ರವಿಭಾಗಜನ್ಯ, ಕಾರಣಾಕಾರಣವಿಭಾಗ ಜನ್ಯವೆಂದು ಎರಡುವಿಧವಾಗಿರುತ್ತದೆ. ಇದರಲ್ಲಿ ಮೊದಲನೆಯ ವಿಭಾಗಕ್ಕೆ ಉದಾಹರಣೆ ತೋರಿಸುತ್ತಾನೆ. 'ಆದ್ಯಃ—' ಇತಿ. ಕಪಾಲದ್ವಯವಿಭಾಗದಿಂದ ಘಟನಾಶವಾದ ಮೇಲೆ ಕಪಾಲಕ್ಕೆ ದೇಶಾಂತರದಿಂದಆಗುವ ವಿಭಾಗವು ಇದಕ್ಕೆ ಉದಾಹರಣೆ. ಕಪಾಲ

ದಲ್ಲಿ ಕರ್ಮಉಂಟಾದಾಗ ಕಪಾಲದ್ವಯವಿಭಾಗವಾಗುತ್ತದೆ. ಆಮೇಲೆ ಘಟಾರಂಭಕ ಸಂಯೋಗನಾಶ. ಆಮೇಲೆ ಘಟನಾಶ. ಆಮೇಲೆ ಅದೇ ಕಪಾಲವಿಭಾಗದಿಂದ ಕರ್ಮಸಹಿತವಾದ ಕಪಾಲಕ್ಕೆ ಆಕಾಶವಿಭಾಗಉಂಟಾಗುತ್ತದೆ. ಆಮೇಲೆ ಆಕಾಶ ಸಂಯೋಗದನಾಶ. ಆಮೇಲೆ ಉತ್ತರದೇಶದಸಂಯೋಗ ಆಮೇಲೆ ಕ್ರಿಯಾನಾಶ. ಇಲ್ಲಿ ಕಪಾಲಕ್ಕೆ ಆಕಾಶದಿಂದ ವಿಭಾಗವಾಗದಿದ್ದರೆ ಅಗ ಅದಕ್ಕೆ ನಾಶಕವಿಲ್ಲದಿರುವುದರಿಂದ ನಿತ್ಯವಾಗಬೇಕಾಗುತ್ತದೆ. ಕಪಾಲಾಕಾಶಸಂಯೋಗರೂಪಪ್ರತಿಬಂಧಕವಿರುವುದರಿಂದ ಉತ್ತರದೇಶಸಂಯೋಗವಾಗದಿರುವುದರಿಂದ ಕರ್ಮವೂ ನಿತ್ಯವಾಗಬೇಕಾಗುತ್ತದೆ. ಉತ್ತರದೇಶಸಂಯೋಗವೇ ಸ್ವಜನಕಕರ್ಮನಾಶಕವಾಗದಿರುವುದರಿಂದ ಮೊದಲು ಕಪಾಲಾಕಾಶವಿಭಾಗನನ್ನು ಅಂಗೀಕರಿಸಲೇಬೇಕು. 'ನಚ—' ಇತಿ. ಕಪಾಲದ್ವಯ ವಿಭಾಗಜನಕಕರ್ಮದಿಂದಲೇ ಕಪಾಲಾಕಾಶಾದಿವಿಭಾಗ ಏಕೆ ಆಗಬಾರದೆಂದು ಆಶಂಕಾ. ಅದಕ್ಕೆ ಸಮಾಧಾನ. 'ಏಕಸ್ಯ—' ಇತಿ. ಒಂದೇ ಕರ್ಮಕ್ಕೆ ಆರಂಭಕಸಂಯೋಗ ಪ್ರತಿದ್ವಂದ್ವಿವಿಭಾಗಜನಕತ್ವವೂ (ಕಪಾಲದ್ವಯಸಂಯೋಗಕ್ಕೆ ವಿರೋಧವಾದ ಅಂದರೆ ನಾಶಕವಾದ ವಿಭಾಗಕ್ಕೆ ಜನಕವಾಗುವುದು.) ಅನಾರಂಭಕಸಂಯೋಗಪ್ರತಿದ್ವಂದ್ವಿ ವಿಭಾಗಜನಕತ್ವವೂ ಬರುವುದಿಲ್ಲ. (ಆಕಾಶಸಂಯೋಗಕ್ಕೆ ವಿರೋಧಿಯಾದ ವಿಭಾಗಕ್ಕೆ ಜನಕತ್ವ.) ಅನ್ಯಥಾ—ಇವೆರಡಕ್ಕೂ ಐಕ್ಯಹೇಳುವುದಾದರೆ. 'ವಿಕಸತ್—' ಇತಿ. ಅರಳುವತಾವರೆ ಅರಳದೇ ನಾಶಹೊಂದಬೇಕಾಗುತ್ತದೆ. ಅಲ್ಲಿ ಅಗ್ರಾವಚ್ಛೇದದಿಂದ ಅನಾರಂಭಕಸಂಯೋಗಪ್ರತಿದ್ವಂದ್ವಿವಿಭಾಗಜನಕಕರ್ಮ ಇರುವುದರಿಂದ ಅದೇ ಕರ್ಮ ದಿಂದ ಮೂಲಾವಚ್ಛಿನ್ನಾರಂಭಕಸಂಯೋಗವಿರೋಧಿಯಾದ ವಿಭಾಗವುಂಟಾಗುವುದಾದರೆ, ಆಗ ಆರಂಭಕಸಂಯೋಗನಾಶವಾಗದಿರುವುದರಿಂದ ಕಮಲನಾಶವಾಗಬೇಕಾಗುತ್ತದೆ. 'ತಸ್ಮಾತ್—' ಇತಿ. ಆದುದರಿಂದ ಅನಾರಂಭಕಸಂಯೋಗಪ್ರತಿದ್ವಂದ್ವಿವಿಭಾಗಜನಕ' ವಾಗುವುದಾದರೆ ಆ ಕರ್ಮವು ಆರಂಭಕಸಂಯೋಗಪ್ರತಿದ್ವಂದ್ವಿವಿಭಾಗವನ್ನು ಹುಟ್ಟಿಸು ವುದಿಲ್ಲವೆಂದು ಒಪ್ಪಬೇಕು. ಪುನಃ ಶಂಕಿಸುತ್ತಾನೆ- 'ನಚ—' ಇತಿ. ಕಾರಣ ವಿಭಾಗೇನ್ನೈವ—ಘಟಕ್ಕೆ ಕಾರಣವಾದ ಕಪಾಲದ್ವಯಮಾತ್ರವಿಭಾಗದಿಂದ ಘಟಾದಿ ದ್ರವ್ಯನಾಶಕ್ಕಿಂತ ಮೊದಲು ಏಕೆ ಕಪಾಲಕ್ಕೆ ಆಕಾಶವಿಭಾಗ ಉಂಟಾಗುವುದಿಲ್ಲ? ಘಟನಾಶ ಹೇಳಿ ಆಮೇಲೆ ಆಕಾಶವಿಭಾಗ ಹೇಳಿರುವುದು ಸರಿಯಲ್ಲವೆಂದು ಶಂಕೆಯ ತಾತ್ಪರ್ಯ. ಇದಕ್ಕೆ ಸಮಾಧಾನ. 'ಆರಂಭಕ—' ಇತಿ. ಆರಂಭಕ ಸಂಯೋಗಕ್ಕೆ ವಿನಾಶಕವಾದ ವಿಭಾಗದಿಂದಕೂಡಿದ ಅವಯವಕ್ಕೆ ದ್ರವ್ಯವಿದ್ದರೆ (ದ್ರವ್ಯ ನಾಶವಾಗದೇ) ದೇಶಾಂತರವಿಭಾಗ (ಆಕಾಶದಿಂದ ವಿಭಾಗ) ಆಗಲಾರದು. ಹಾಗೆ ಒಪ್ಪದಿದ್ದರೆ ಕಾರಣಮಾತ್ರವಿಭಾಗದಲ್ಲಿ ಕರ್ಮಲಕ್ಷಣವು ಬಂದು ಅದು ಅತಿವ್ಯಾಪ್ತ ವಾದೀತು. 'ದ್ವಿತೀಯಃ—' ಇತಿ. ಕಾರಣಾಕಾರಣವಿಭಾಗಜನ್ಯ ವಿಭಾಗವನ್ನು ತೋರಿಸುತ್ತಾನೆ. ಹಸ್ತಕ್ರಿಯೆಯಿಂದ ಹಸ್ತತರುವಿಭಾಗಉಂಟಾದಾಗ ಶರೀರತರು ವಿಭಾಗಜ್ಞಾನವೂ ಬರುತ್ತದೆ. ಶರೀರತರುವಿಭಾಗಕ್ಕೆ ಹಸ್ತಕ್ರಿಯೆಯುಕಾರಣವಾಗುವು

ದಿಲ್ಲ. ಶರೀರತರುಸಂಯೋಗನಾಶವೇ ಅಲ್ಲಿ ವಿಷಯವೆಂದು ಹೇಳಲು ಸಾಧ್ಯವಿಲ್ಲ. ವಿಭಾಗವಾಗದೇ ಸಂಯೋಗನಾಶ ಸಂಭವಿಸುವುದಿಲ್ಲ. ವ್ಯಧಿಕರಣವಾದುದರಿಂದ ಹಸ್ತ ಕ್ರಿಯೆಯು ಶರೀರತರುಸಂಯೋಗನಾಶಕವಾಗುವುದಿಲ್ಲ. ಹಸ್ತತರುವಿಭಾಗದಿಂದಲೇ ಶರೀರತರುವಿಭಾಗವುಂಟಾಗಿ ಅದರಿಂದ ಶರೀರತರುಸಂಯೋಗನಾಶವಾಗುತ್ತದೆಂದು ತಿಳಿಯ ಬೇಕು. ಶರೀರದಲ್ಲಿ ಕ್ರಿಯಾ ಇರುವುದೇ ಇಲ್ಲ. ಅದಕ್ಕೆ ಕಾರಣ ತೋರಿಸುತ್ತಾನೆ. 'ಅವಯವಕರ್ಮಣಃ—' ಇತಿ. ಕ್ರಿಯಾವ್ಯಾಪ್ಯವೃತ್ತಿಯಾದುದರಿಂದ ಅವಯವ ಕ್ರಿಯೆಯಿಂದಲೇ ನಿರ್ವಾಹವಾಗುತ್ತದೆಂದರ್ಥ. ಸಂಯೋಗಾಭಾವದಿಂದಲೇ ವಿಭಾಗವು ಅನ್ಯಥಾಸಿದ್ಧವಾಗುತ್ತದೆಂದೂ ಹೇಳಬಾರದು. ಸಂಯೋಗಾಭಾವವೇ ವಿಭಾಗವೇ ? ವಿಭಾಗಾಭಾವವೇ ಸಂಯೋಗವೇ ? ಎಂಬುವರಲ್ಲಿ ವಿನಿಗಮನಾವಿರಹವಿರುವುದರಿಂದ (ಒಂದುಪಕ್ಷವನ್ನಾಶ್ರಯಿಸುವುದರಲ್ಲಿ ಯುಕ್ತಿ ಇಲ್ಲದಿರುವುದರಿಂದ) ವಿಭಾಗ ಬೇರೆ ಒಂದು ಗುಣವೆಂದು ಒಪ್ಪಲೇಬೇಕೆಂದು ತಾತ್ಪರ್ಯ.

**ಪರತ್ವಂ ಚಾಪರತ್ವಂ ಚ ದ್ವಿವಿಧಂ ಪರಿಕೀರ್ತಿತಮ್ ||**
**ದೈಶಿಕಂ ಕಾಲಿಕಂ ಚಾಪಿ ಮೂರ್ತ ಏವ ತು ದೈಶಿಕಮ್ || ೧೨೧ ||**
**ಪರತ್ವಂ ಮೂರ್ತಸಂಯೋಗಭೂಯಸ್ತ್ವಜ್ಞಾನತೋ ಭವೇತ್ |**
**ಅಪರತ್ವಂ ತದಲ್ಪತ್ವಬುದ್ಧಿತಃ ಸ್ಯಾದಿತೀರಿತಮ್ || ೧೨೨ ||**
**ತಯೋರಸಮವಾಯೀ ತು ದಿಕ್ಸಂಯೋಗಸ್ತದಾಶ್ರಯೇ |**
**ದಿವಾಕರಪರಿಸ್ಪಂದಭೂಯಸ್ತ್ವಜ್ಞಾನತೋ ಭವೇತ್ || ೧೨೩ ||**
**ಪರತ್ವಮಪರತ್ವಂ ತು ತದೀಯಾಲ್ಪತ್ವಬುದ್ಧಿತಃ ||**
**ಅತ್ರ ತ್ವಸಮವಾಯೀ ಸ್ಯಾತ್ಸಂಯೋಗಃ ಕಾಲಪಿಂಡಯೋಃ || ೧೨೪ ||**
**ಅಪೇಕ್ಷಾಬುದ್ಧಿನಾಶೇನ ನಾಶಸ್ತೇಷಾಂ ನಿರೂಪಿತಃ ||**

ಪರಾಪರವ್ಯವಹಾರನಿಮಿತ್ತೇ ಪರತ್ವಾಪರತ್ವೇ ನಿರೂಪಯತಿ—ಪರತ್ವಂಚೇತಿ | ದೈಶಿಕ ಪರತ್ವಂ ಬಹುತರಮೂರ್ತಸಂಯೋಗಾಂತರಿತತ್ವಜ್ಞಾನಾದುತ್ಪದ್ಯತೇ | ಏವಂತದ ಲ್ಪೀಯಸ್ತ್ವಜ್ಞಾನಾದಪರತ್ವಮುತ್ಪದ್ಯತೇ | ಅತ್ರ ಅವಧಿತ್ವಾರ್ಥಂ ಪಂಚಮ್ಯ ಪೇಕ್ಷಾ | ಯಥಾ ಪಾಟಲಿಪುತ್ರಾತ್ಕಾಶೀಮಪೇಕ್ಷ್ಯ ಪ್ರಯಾಗಃ ಪರಃ | ಪಾಟಲಿ ಪುತ್ರಾತ್ ಕುರುಕ್ಷೇತ್ರಮಪೇಕ್ಷ್ಯ ಪ್ರಯಾಗೋಽಪರ ಇತಿ || ೧೨೨ ||

ತಯೋಃ ದೈಶಿಕಪರತ್ವಾಪರತ್ವಯೋಃ | ಅಸಮವಾಯೀ ಅಸಮವಾಯಿಕಾರಣಮ್ | ತದಾಶ್ರಯೇ ದೈಶಿಕಪರತ್ವಾಪರತ್ವಾಶ್ರಯೇ || ದಿವಾಕರೇತಿ || ಅತ್ರ ಪರತ್ವಾ ಪರತ್ವಂ ಕಾಲಿಕಂ ಗ್ರಾಹ್ಯಮ್ | ಯಸ್ಯ ಸೂರ್ಯಪರಿಸ್ಪಂದಾಪೇಕ್ಷಯಾ ಯಸ್ಯ ಸೂರ್ಯಸ್ಪಂದೋಽಧಿಕಃ ಸ ಜ್ಯೇಷ್ಠಃ ಯಸ್ಯ ನ್ಯೂನಃ ಸ ಕನಿಷ್ಠಃ | ಕಾಲಿಕಪರತ್ವಾ ಪರತ್ವೇ ಜನ್ಯದ್ರವ್ಯ ಏವ | ಅತ್ರ ಕಾಲಿಕಪರತ್ವಾಪರತ್ವಯೋಃ || ತೇಷಾಂ ಕಾಲಿಕದೈಶಿಕಪರತ್ವಾಪರತ್ವಾನಾಮ್ |

ಪರತ್ವ, ಅಪರತ್ವಗುಣಗಳ ಲಕ್ಷಣವನ್ನು ತೋರಿಸುತ್ತಾನೆ. 'ಪರತ್ವಂ—' ಇತಿ. ಇವೆರಡೂ ದೈಶಿಕ, ಕಾಲಿಕವೆಂದು ಎರಡೆರಡುವಿಧಗಳಾಗುತ್ತವೆ. ದಿಕ್ಕೃತವಾದ ಪರತ್ವ, ಅಪರತ್ವ, ಕಾಲಕೃತವಾದ ಪರತ್ವ, ಅಪರತ್ವ, ದೈಶಿಕಪರತ್ವಾಪರತ್ವಗಳಿಗೆ ವಿಷಯ ತೋರಿಸುತ್ತಾನೆ. 'ಮೂರ್ತ—' ಇತಿ. ಕ್ಷಿತಿ, ಅಪ್, ತೇಜಃ, ವಾಯು, ಮನಸ್ಸು ಈ ಐದು ಮೂರ್ತದ್ರವ್ಯಗಳಲ್ಲಿಮಾತ್ರ ದೈಶಿಕಪರತ್ವ, ಅಪರತ್ವಗಳು ಇರುತ್ತವೆ. ಇನ್ನು ಬೇರೆ ಕಡೆ ಇರುವುದಿಲ್ಲವೆಂದರ್ಥ. ಅದಕ್ಕೆ ಕಾರಣತೋರಿಸುತ್ತಾನೆ. 'ಪರತ್ವಂ —' ಇತಿ. ದೈಶಿಕಪರತ್ವದಲ್ಲಿ ಮೂರ್ತಸಂಯೋಗಭೂಯಸ್ತ್ವಜ್ಞಾನವು ಕಾರಣವಾಗಿರುತ್ತದೆ.

ಕಾರಿಕಾವ್ಯಾಖ್ಯಾನವನ್ನು ತೋರಿಸುತ್ತಾನೆ. 'ಪರಾಪರ—' ಇತಿ. 'ಅಯಮಸ್ಮಾತ್ ಪರಃ' 'ಅಯಮಸ್ಮಾತ್ ಅಪರಃ' ಎಂಬ ವ್ಯವಹಾರಕ್ಕೆ ಅಸಾಧಾರಣ ಕಾರಣವಾದವುಗಳು ಪರತ್ವಅಪರತ್ವಗುಣಗಳಾಗುತ್ತವೆ. ದೈಶಿಕಪರತ್ವಕ್ಕೆ ನಿಮಿತ್ತ ಕಾರಣವನ್ನು ತೋರಿಸುತ್ತಾನೆ. 'ಬಹುತರ—' ಇತಿ. ಅನೇಕಮೂರ್ತದ್ರವ್ಯಗಳ ಸಂಯೋಗದಿಂದ ಅಂತರಿತವಾದ ಜ್ಞಾನದಿಂದ ಇದು ಹುಟ್ಟುತ್ತದೆ ವಿಪ್ರಕೃಷ್ಟತ್ವ ವಿಷಯಕವಾದ ಅಪೇಕ್ಷಾಬುದ್ಧಿಯೇ ದೈಶಿಕಪರತ್ವಕ್ಕೆ ಕಾರಣವೆಂದರ್ಥ. ಪರವೆಂದರೆ ಬಹುದೂರದಲ್ಲಿರುವುದು. ಅನೇಕವಸ್ತುಗಳ ವ್ಯವಧಾನದಿಂದ ಕೂಡಿರುವುದು ಎಂದರ್ಥ ವಾಗುತ್ತದೆ. ಹೀಗೆಯೇ ಅಲ್ಪಸಂಯೋಗಾಂತರಿತತ್ವರೂಪವಾದ ಸನ್ನಿಕೃಷ್ಟತ್ವ ವಿಷಯಕವಾದ ಅಪೇಕ್ಷಾಬುದ್ಧಿಯು ದೈಶಿಕಾಪರತ್ವಕ್ಕೆ ಕಾರಣವಾಗುತ್ತದೆಂದು ತಿಳಿಯ ಬೇಕು. ತಯೋಃ—ದೈಶಿಕಪರತ್ವಾಪರತ್ವಗಳಿಗೆ ದಿಕ್ಸಂಯೋಗವೇ ಅಸಮವಾಯಿ ಕಾರಣವಾಗುತ್ತದೆ. ಆಶ್ರಯೇ—ಸಮವಾಯಿಯಾದ ದ್ರವ್ಯದಲ್ಲಿ ಎಂದರ್ಥ. ಕಾಲಿಕ ಪರತ್ವಾಪರತ್ವಗಳಿಗೆ ಕಾರಣವನ್ನು ಹೇಳುತ್ತಾನೆ. 'ದಿವಾಕರ—' ಇತಿ. ಕಾಲಪಿಂಡ ಸಂಯೋಗವೇ ಕಾಲಿಕಪರತ್ವಾಪರತ್ವಗಳಿಗೆ ಅಸಮವಾಯಿಕಾರಣವಾಗುತ್ತದೆ. ದಿವಾಕರಪರಿಸ್ಪಂದಭೂಯಸ್ತ್ವಜ್ಞಾನವು ಕಾರಣ. ಜನ್ಯದ್ರವ್ಯದಲ್ಲಿಮಾತ್ರ ಕಾಲಿಕ ಪರತ್ವಾಪರತ್ವಗಳು ಇರುತ್ತವೆ. ಅಧಿಕಸೂರ್ಯಪರಿಸ್ಪಂದವುಳ್ಳದ್ದು ಜ್ಯೇಷ್ಠವೆಂದೂ ನ್ಯೂನ ಸೂರ್ಯಪರಿಸ್ಪಂದವುಳ್ಳದ್ದು ಕನಿಷ್ಠವೆಂದೂ ಪ್ರಸಿದ್ಧವಾಗಿವೆ. ಇವುಗಳ ನಾಶಹೇತುವನ್ನು ತೋರಿಸುತ್ತಾನೆ. 'ಅಪೇಕ್ಷಾ—' ಇತಿ. ಅಪೇಕ್ಷಾಬುದ್ಧಿನಾಶದಿಂದ ದೈಶಿಕಕಾಲಿಕ ಪರತ್ವಾಪರತ್ವಗಳು ನಾಶವಾಗುತ್ತವೆ ಎಂದರ್ಥ. || ನಿಮಿತ್ತಕಾರಣವಾದ ವಿಪ್ರಕೃಷ್ಟ ತ್ವಾದಿಬುದ್ಧಿಯೇ ಅಪೇಕ್ಷಾಬುದ್ಧಿ.

**ಬುದ್ಧೇಃ ಪ್ರಪಂಚಃ ಪ್ರಾಗೇವ ಪ್ರಾಯಶೋ ವಿನಿರೂಪಿತಃ || ೧೨೫ ||**
**ಅಥಾವಶಿಷ್ಟೋಽಪ್ಯಪರಃ ಪ್ರಕಾರಃ ಪರಿದರ್ಶ್ಯತೇ ||**
**ಅಪ್ರಮಾ ಚ ಪ್ರಮಾ ಚೇತಿ ಜ್ಞಾನಂ ದ್ವಿವಿಧಮಿಷ್ಯತೇ || ೧೨೬ ||**
**ತಚ್ಛೂನ್ಯೇ ತನ್ಮತಿರ್ಯಾ ಸ್ಯಾದಪ್ರಮಾ ಸಾ ನಿರೂಪಿತಾ ||**

ತತ್ಪ್ರಪಂಚೋ ವಿಪರ್ಯಾಸಃ ಸಂಶಯೋಽಪಿ ಪ್ರಕೀರ್ತಿತಃ ॥ ೧೨೭ ॥
ಆದ್ಯೋ ದೇಹೇಷ್ವಾತ್ಮಬುದ್ಧಿಃ ಶಂಖಾದೌ ಪೀತತಾಮತಿಃ ।
ಭವೇನ್ನಿಶ್ಚಯರೂಪಾ ಯಾ ಸಂಶಯೋಽಥ ಪ್ರದರ್ಶ್ಯತೇ ॥ ೧೨೮ ॥
ಕಿಂಸ್ವಿನ್ನರೋ ವಾ ಸ್ಥಾಣುರ್ವೇತ್ಯಾದಿಬುದ್ಧಿಸ್ತು ಸಂಶಯಃ ॥
ತದಭಾವಾಪ್ರಕಾರಾ ಧೀ ಸ್ತತ್ ಪ್ರಕಾರಾ ತು ನಿಶ್ಚಯಃ ॥ ೧೨೯ ॥

ಕ್ರಮಪ್ರಾಪ್ತಾಂ ಬುದ್ಧಿಂ ನಿರೂಪಯಿತುಮಾಹ—ಬುದ್ಧೇರಿತಿ । ತತ್ರಾಪ್ರಮಾಂ ನಿರೂಪಯತಿ । ತಚ್ಛೂನ್ಯೇ ಇತಿ । ತದಭಾವವತಿ ತತ್ಪ್ರಕಾರಕಂ ಜ್ಞಾನಂ ಭ್ರಮ ಇತ್ಯರ್ಥಃ । ತತ್ಪ್ರಪಂಚಃ ಅಪ್ರಮಾಪ್ರಪಂಚಃ ॥ ೧೨೭ ॥ ಆದ್ಯ ಇತಿ । ವಿಪರ್ಯಾಸ ಇತ್ಯರ್ಥಃ । ಶರೀರಾದೌ ನಿಶ್ಚಯರೂಪಂ ಯದಾತ್ಮತ್ವ ಪ್ರಕಾರಕಂ ಜ್ಞಾನಂ ಗೌರೋಽಹಮಿತ್ಯಾಕಾರಕಮ್ । ಏವಂ ಶಂಖಾದೌ ಪೀತಃ ಶಂಖಃ ಇತ್ಯಾಕಾರಕಂ ಯತ್ಜ್ಞಾನಂ ನಿಶ್ಚಯರೂಪಂ ತದ್ ಭ್ರಮ ಇತಿ ॥ ೧೨೮ ॥ ಕಿಂಸ್ವಿದಿತಿ । ಕಿಂಸ್ವಿದಿತಿ ವಿತರ್ಕೇ । ನಿಶ್ಚಯಸ್ಯ ಲಕ್ಷಣಮಾಹ । ತದಭಾವೇತಿ । ತದಭಾವಾಪ್ರಕಾರಂ ತತ್ಪ್ರಕಾರಂ ಜ್ಞಾನಂ ನಿಶ್ಚಯಃ ॥ ೧೨೯ ॥

ಆತ್ಮನಿರೂಪಣಮಾಡಿದ ಮೇಲೆ ಬುದ್ಧಿ ಅಂದರೆ ಜ್ಞಾನದ ಭೇದಪ್ರಭೇದಗಳನ್ನು (ಸ್ಮೃತಿಅನುಭವವೆಂದು ಎರಡುವಿಧ. ಪ್ರತ್ಯಕ್ಷಾದಿಭೇದದಿಂದ ಅನುಭವ ನಾಲ್ಕುವಿಧ ಇತ್ಯಾದಿ) ವಿವರಿಸಿದ್ದಾಯಿತು. ಆದರೂ ಪ್ರಮಾ, ಅಪ್ರಮಾರೂಪದಿಂದ ಭೇದಹೇಳದೆ ಉಳಿದಿರುವುದರಿಂದ ಅದನ್ನು ಈಗ ಹೇಳಲು ಪ್ರಾರಂಭಿಸುತ್ತಾನೆ. 'ಅಪ್ರಮಾ ಪ್ರಮಾಚೇತಿ—' ಪ್ರಮಾ ಅಪ್ರಮಾಭೇದದಿಂದ ಜ್ಞಾನವು ಎರಡುವಿಧವಾಗಿದೆ. ಯಥಾರ್ಥಾನುಭವಕ್ಕೆ ಪ್ರಮಾ ಎಂದೂ, ಅಯಥಾರ್ಥಾನುಭವಕ್ಕೆ ಅಪ್ರಮಾ ಎಂದೂ ಹೆಸರು. ಬುದ್ಧಿ, ಜ್ಞಾನ, ಉಪಲಬ್ಧಿ ಎಲ್ಲಾ ಪರ್ಯಾಯಪದಗಳು. ಅಪ್ರಮಾಲಕ್ಷಣ ತೋರಿಸುತ್ತಾನೆ. 'ತಚ್ಛೂನ್ಯೇ—' ಇತಿ. ಶೂನ್ಯಪದಕ್ಕೆ ಅತ್ಯಂತಾಭಾವವುಳ್ಳದ್ದೆಂದರ್ಥ, 'ತದಭಾವವತಿ ತತ್ಪ್ರಕಾರಕಂ ಜ್ಞಾನಂ' ಎಂದು ಫಲಿತವಾಗುತ್ತದೆ. ಶುಕ್ತಿಯನ್ನು ನೋಡಿ ರಜತವೆಂದು ಜ್ಞಾನಬಂದರೆ ಅದು ಭ್ರಮವಾಗುತ್ತದೆ. ರಜತತ್ವವಿಲ್ಲದಿರುವಲ್ಲಿ ರಜತತ್ವಪ್ರಕಾರಕಜ್ಞಾನಬರುತ್ತದೆ. ತತ್ಪ್ರಪಂಚ ಅಂದರೆ ಅಪ್ರಮಾ ಪ್ರಪಂಚ (ಭೇದ) ಎಂದರ್ಥ. ವಿಪರ್ಯಾಸ (ವಿಪರ್ಯಯ) ಸಂಶಯವೆಂದು ಇದು ಎರಡುವಿಧ- ಕೆಲವರು ತರ್ಕವನ್ನೂ ಸೇರಿಸಿ ಮೂರುವಿಧವೆನ್ನುತ್ತಾರೆ. ಜೈನರು ಅನಧ್ಯವಸಾಯವೆಂದು ಹೆಚ್ಚಾಗಿ ಹೇಳುತ್ತಾರೆ. ಆದ್ಯಃ—ವಿಪರ್ಯಾಸವೆಂದರ್ಥ. (ವಿಪರೀತೈಕಕೋಟಿಕನಿಶ್ಚಯ.) ಅನಾತ್ಮವಾದ ಶರೀರದಲ್ಲಿ ಸ್ವಾಭಾವಿಕವಾಗಿ ಆತ್ಮತ್ವ ಪ್ರಕಾರಕಬುದ್ಧಿ, (ಅಹಂಗೌರಃ ಇತ್ಯಾದಿರೂಪ) ಶುಕ್ಲಶಂಖದಲ್ಲಿ 'ಪೀತಃ ಶಂಖಃ' ಎಂಬ ನಿಶ್ಚಯಜ್ಞಾನ, ಹಗ್ಗದಲ್ಲಿ 'ಅಯಂಸರ್ಪಃ' ಎಂಬ ಜ್ಞಾನ, ಶುಕ್ತಿಯಲ್ಲಿ 'ಇದಂ ರಜತಂ' ಎಂಬ ಜ್ಞಾನ. ಇವೆಲ್ಲಾ ವಿಪರ್ಯಯವಾಗುತ್ತವೆ- ಸಂಶಯವನ್ನು ತೋರಿಸುತ್ತಾನೆ.

'ಕಿಂಸ್ವಿನ್ನರಃ—' ಇತಿ. ದೂರದಲ್ಲಿ ಸ್ಥಾಣು (ಮೋಟುಮರ) ಪುರುಷಸಾಧಾರಣವಾದ ಎತ್ತರವಾಗಿ ನಿಂತಿರುವುದನ್ನು ನೋಡಿ 'ಕಿಮಯಂ ಸ್ಥಾಣುರ್ವಾ ಪುರುಷೋವಾ' ಎಂಬ ಉಭಯಕೋಟ್ಯವಗಾಹಿಜ್ಞಾನವುಂಟಾಗುತ್ತದೆ. ಇದೇ ಸಂಶಯ. ಪ್ರಸಂಗದಿಂದ ನಿಶ್ಚಯಸ್ವರೂಪವನ್ನು ತೋರಿಸುತ್ತಾನೆ. 'ತದಭಾವಾ—' ಇತಿ. 'ತದಭಾವಾಪ್ರಕಾರಕತ್ವೇ ಸತಿ ತತ್ಪ್ರಕಾರಕಂ ಜ್ಞಾನಂ' ನಿಶ್ಚಯಃ. ಸಂಶಯದಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ ತದಭಾವಾಪ್ರಕಾರಕವೆಂದೂ ನಿರ್ವಿಕಲ್ಪಕದಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ ತತ್ಪ್ರಕಾರಕವೆಂದೂ ಹೇಳಿದೆ. ಘಟವನ್ನು ನೋಡಿ 'ಅಯಂ ಘಟಃ' ಎಂದು ಜ್ಞಾನಬಂದರೆ ಅದು ನಿಶ್ಚಯವಾಗುತ್ತದೆ. ಅಲ್ಲಿ ಘಟತ್ವವು ಪ್ರಕಾರಕವಾಗಿಯೂ, ಘಟತ್ವಾಭಾವವು ಅಪ್ರಕಾರಕವಾಗಿಯೂ ಇದೆ.

**ಸ ಸಂಶಯೋ ಮತಿರ್ಯಾ ಸ್ಯಾದೇಕತ್ರಾಭಾವಭಾವಯೋಃ ||**
**ಸಾಧಾರಣಾದಿಧರ್ಮಸ್ಯ ಜ್ಞಾನಂ ಸಂಶಯಕಾರಣಮ್ || ೧೯೦ ||**

ಸಂಶಯಂ ಲಕ್ಷಯತಿ—ಸ ಸಂಶಯ ಇತಿ | ಏಕಧರ್ಮಿಕವಿರುದ್ಧಭಾವಾಭಾವಪ್ರಕಾರಕಂ ಜ್ಞಾನಂ ಸಂಶಯ ಇತ್ಯರ್ಥಃ | ಸಾಧಾರಣೇತಿ | ಉಭಯಸಾಧಾರಣೋಯೋ ಧರ್ಮಸ್ತಜ್ಜ್ಞಾನಂ ಸಂಶಯಕಾರಣಮ್ | ಯಥೋಚ್ಚೈಸ್ತರತ್ವಂ ಸ್ಥಾಣುಪುರುಷಸಾಧಾರಣಂ ಜ್ಞಾತ್ವಾಽಯಂ ಸ್ಥಾಣುರ್ವಾ ನ ವಾ ಇತಿ ಸಂದಿಗ್ಧೇ | ಏವಮಸಾಧಾರಣಧರ್ಮಜ್ಞಾನಮಪಿ ಕಾರಣಮ್ | ಯಥಾ ಶಬ್ದತ್ವಸ್ಯ ನಿತ್ಯಾನಿತ್ಯವ್ಯಾವೃತ್ತತ್ವೇನ ಶಬ್ದೇ ಗೃಹೀತತ್ವಾಚ್ಛಬ್ದೋ ನಿತ್ಯೋ ನ ವೇತಿ ಸಂದಿಗ್ಧೇ | ವಿಪ್ರತಿಪತ್ತಿಸ್ತು ಶಬ್ದೋ ನಿತ್ಯೋ ನವೇತ್ಯಾದಿ ಶಬ್ದಾತ್ಮಿಕಾ ನ ಸಂಶಯಕಾರಣಮ್ | ಶಬ್ದವ್ಯಾಪ್ತಿಜ್ಞಾನಾದೀನಾಂ ನಿಶ್ಚಯಮಾತ್ರಜನಕತ್ವಸ್ವಭಾವಾತ್ | ಕಿಂತು ತತ್ರ ಶಬ್ದೇನ ಕೋಟಿದ್ವಯಜ್ಞಾನಂ ಜನ್ಯತೇ, ಸಂಶಯಸ್ತು ಮಾನಸ ಏವೇತಿ | ಏವಂ ಜ್ಞಾನೇ ಪ್ರಾಮಾಣ್ಯಸಂಶಯಾದ್ವಿಷಯಸಂಶಯ ಇತಿ | ಏವಂ ವ್ಯಾಪ್ಯಸಂಶಯಾದಪಿ ವ್ಯಾಪಕಸಂಶಯ ಇತ್ಯಾದಿಕಂ ಬೋಧ್ಯಮ್ | ಕಿಂತು ಸಂಶಯೇ ಧರ್ಮಿಜ್ಞಾನಂ ಧರ್ಮೀಂದ್ರಿಯಸನ್ನಿಕರ್ಷೋ ವಾ ಕಾರಣಮಿತಿ || ೧೩೦ ||

ಸಂಶಯಲಕ್ಷಣವನ್ನು ತೋರಿಸುತ್ತಾನೆ. 'ಸ ಸಂಶಯ—' ಇತಿ. 'ಏಕತ್ರ ಭಾವಾಭಾವಯೋಃ ಯಾ ಮತಿಃ ಸಃ ಸಂಶಯಃ' ಈ ಕಾರಿಕಾಲಕ್ಷಣವನ್ನು ವಿಶದಪಡಿಸಿ ತೋರಿಸುತ್ತಾನೆ. 'ಏಕ—' ಇತಿ. 'ಏಕಧರ್ಮಿವಿಶೇಷ್ಯಕವಿರುದ್ಧಕೋಟಿದ್ವಯಪ್ರಕಾರಕಜ್ಞಾನತ್ವಂ' ಎಂದು ಸಂಶಯದ ನಿಷ್ಕೃಷ್ಟವಾದ ಲಕ್ಷಣವಾಗುತ್ತದೆ. 'ಹ್ರದಪರ್ವತೌವಹ್ನಿತದಭಾವವಂತೌ' ಎಂಬಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ ಏಕಧರ್ಮಿಕವೆಂದು ಹೇಳಿದೆ. ಇಲ್ಲಿ ಹ್ರದ, ಮತ್ತು ಪರ್ವತಗಳೆರಡೂ ಧರ್ಮಿಯಾದುದರಿಂದ ಏಕಧರ್ಮಿತಾವಚ್ಛೇದಕವಿಶಿಷ್ಟ ವಿಶೇಷ್ಯಕತ್ವಾವಚ್ಛಿನ್ನ ಜ್ಞಾನವೆಂದರ್ಥ.

'ವೃಕ್ಷಃ—ಕಪಿಸಂಯೋಗೀ, ತದಭಾವವಾಂಶ್ಚ' ಎಂಬಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ ವಿರುದ್ಧಕೋಟಿ ಎಂದು ಹೇಳಿದೆ. 'ಘಟಃ ಕ್ಷಿತಿಃ ಜಲಂಚ' ಇತ್ಯಾದಿಸಮುಚ್ಚಯವಾರಣೆ ಗೋಸ್ಕರ ಭಾವಾಭಾವವೆಂದು ಹೇಳಿದೆ. ಸಂಶಯಕ್ಕೆ ಕಾರಣತೋರಿಸುತ್ತಾನೆ. 'ಸಾಧಾರಣಾದಿಧರ್ಮಸ್ಯ—' ಇತಿ. ಇದಕ್ಕೆ ವ್ಯಾಖ್ಯಾನ. 'ಉಭಯಸಾಧಾರಣ—' ಇತಿ. ಆದಿಪದದಿಂದ ಉಭಯಸಾಧಾರಣಜ್ಞಾನವಲ್ಲದೆ ಅಸಾಧಾರಣಜ್ಞಾನವೂ ಕಾರಣವೆಂದು ತಿಳಿಯಬೇಕು. ಸಾಧಾರಣಧರ್ಮದಿಂದ ಉಂಟಾದ ಸಂಶಯಕ್ಕೆ ಉದಾಃ— 'ಸ್ಥಾಣುರ್ವಾ ಪುರುಷೋ ವಾ.' ಇಲ್ಲಿ 'ಉಚ್ಚೈಸ್ತರತ್ವಂ' ಅಂದರೆ ಎತ್ತರ ವಾಗಿರುವುದು ಇದೇ ಉಭಯಸಾಧಾರಣಧರ್ಮ. ಅಸಾಧಾರಣಧರ್ಮದಿಂದ ಉಂಟಾದ ಸಂಶಯಕ್ಕೆ ಉದಾಃ— 'ಶಬ್ದಃ ನಿತ್ಯಃ, ಅನಿತ್ಯೋವಾ., ಇಲ್ಲಿ ಶಬ್ದತ್ವವು ಅಸಾಧಾರಣಧರ್ಮವಾಗುತ್ತದೆ. ಇದು ನಿತ್ಯಾನಿತ್ಯವ್ಯಾವೃತ್ತವಾಗಿರುತ್ತದೆ. ನಿತ್ಯ ವಾದ ಪರಮಾಣುವಿನಲ್ಲಿಯೂ, ಅನಿತ್ಯವಾದ ಘಟಾದಿಗಳಲ್ಲಿಯೂ ಇರದೆ ಕೇವಲ ಶಬ್ದ ದಲ್ಲಿ ಮಾತ್ರ ಇರುವುದರಿಂದ ಅಸಾಧಾರಣಧರ್ಮವಾಗುತ್ತದೆ. ವಿಪ್ರತಿಪತ್ತಿಯನ್ನೂ ಕೆಲವು ನೈಯಾಯಿಕರು ಸಂಶಯಕಾರಣವನ್ನಾಗಿ ಅಂಗೀಕರಿಸುತ್ತಾರೆ. ಇದನ್ನು ಖಂಡಿಸಲು ಆರಂಭಿಸುತ್ತಾನೆ. 'ವಿಪ್ರತಿಪತ್ತಿಃ—' ಇತಿ. ವಿರುದ್ಧಕೋಟಿದ್ವಯೋಪ ಸ್ಥಾಪಕವಾದ (ವಾಕ್ಯಕ್ಕೆ) ಶಬ್ದವಿಶೇಷಕ್ಕೆ ವಿಪ್ರತಿಪತ್ತಿಯೆಂದು ಹೆಸರು. ಆದಿಪದ ದಿಂದ 'ಅಸ್ತಿ ಆತ್ಮಾ ಇತ್ಯೇಕೇ, ನಾಸ್ತಿ ಆತ್ಮಾ ಇತ್ಯಪರೇ' ಎಂಬುದನ್ನು ಕೇಳಿ ಮಧ್ಯ ಸ್ಥನಿಗೆ ಆತ್ಮನು ಇದ್ದಾನೋ ಇಲ್ಲವೋ ಎಂಬ ಸಂಶಯ ಬರುತ್ತದೆ. ಇದು ಸಂಶಯಕ್ಕೆ ಕಾರಣವಾಗುವುದಿಲ್ಲವೆಂದು ಗ್ರಂಥಕಾರನಮತ. ಅದಕ್ಕೆ ಕಾರಣತೋರಿಸುತ್ತಾನೆ. 'ಶಬ್ದವ್ಯಾಪ್ತಿ—' ಇತಿ. ಶಬ್ದವ್ಯಾಪ್ತಿಜ್ಞಾನ, ಅತಿದೇಶವಾಕ್ಯಾರ್ಥಜ್ಞಾನ ಇವೆಲ್ಲಾ ಯಾವಾಗಲೂ ಸ್ವಭಾವದಿಂದ ನಿಶ್ಚಯಾತ್ಮಕಜ್ಞಾನವನ್ನೇ ಹುಟ್ಟಿಸುತ್ತವೆ. ಆದುದ ರಿಂದ ಇದರಿಂದ ಸಂಶಯ ಹುಟ್ಟುವುದಿಲ್ಲ. 'ಕಿಂತು—' ಇತಿ. ಈ ಶಬ್ದದಿಂದ ಕೋಟಿದ್ವಯಜ್ಞಾನ ಬರಬಹುದು. ಅದರಿಂದ ಮಾನಸಿಕವಾಗಿ ಸಂಶಯಬರಬಹುದು. ಸಂಶಯಪ್ರಸಂಗದಿಂದ ವಿಶೇಷಗ್ರಾಹ್ಯವನ್ನು ತಿಳಿಸುತ್ತಾನೆ. 'ಏವಂ—' ಇತಿ. ಜ್ಞಾನೇ— 'ಇದಂ ಜಲಂ' ಇತ್ಯಾದಿಜ್ಞಾನದಲ್ಲಿ, ಪ್ರಾಮಾಣ್ಯಸಂಶಯಾತ್—ಇದಂ ಜಲತ್ವಪ್ರಕಾರಕಂ ಜ್ಞಾನಂ ಪ್ರಮಾ ವಾ ನವಾ' ಎಂಬ ಪ್ರಾಮಾಣ್ಯಸಂಶಯದಿಂದ ವಿಷಯಸಂಶಯ ಬರುತ್ತದೆ. 'ಇದಂ ಜಲಂ ನವಾ' ಎಂಬ ಸಂಶಯ ಹುಟ್ಟುತ್ತದೆಂದರ್ಥ. ಜಲದಲ್ಲಿ ಜಲಜ್ಞಾನವೇ ಉತ್ಪನ್ನವಾದರೆ ಅದು ಸಮ್ಯಗ್ ಜ್ಞಾನವಾಗುತ್ತದೆ. ಒಂದು ಸಮಯ ಒಬ್ಬನಿಗೆ ಬಿಸಿಲುಕುದುರೆ (ಮರುಮರೀಚಿಕಾ) ಯಲ್ಲಿ ಸುಳ್ಳಾಗಿಜಲಜ್ಞಾನ ಬರುತ್ತದೆ. ಅವನು ಮತ್ತೊಂದುಸಮಯ ಕಾಡಿಗೆ ಹೋದಾಗ ದೂರದಲ್ಲಿ ವೃಕ್ಷ ಸಮುದಾಯವಿರುವಾಗ ಚಿಹ್ನೆಯಿಂದ ಜಲಜ್ಞಾನವುಂಟಾಗುತ್ತದೆ. ಆಗ ಅವನಿಗೆ ತನ ಗುಂಟಾದ ಜ್ಞಾನವು ಸಮ್ಯಗ್ ಜ್ಞಾನವೇ, ಮಿಥ್ಯಾಜ್ಞಾನವೇ ? ಎಂಬ ಸಂಶಯಬರುತ್ತದೆ. ಅದು ಮಾನಸಿಕವಾದ ಸಂಶಯವಾಗಿರುತ್ತದೆ. ಆಮೇಲೆ 'ಇದಂ ಜಲಂ ನವಾ' ಎಂಬ

ಸಂಶಯ ಬರುತ್ತದೆ. ಇದು ಪ್ರಾಮಾಣ್ಯಸಂಶಯದಿಂದ ಉಂಟಾದ ಸಂಶಯವಾಗುತ್ತದೆ. 'ಏವಂ—' ಇತಿ. ವ್ಯಾಪ್ಯವೆಂದರೆ ಧೂಮಾದಿ. 'ಪರ್ವತಃ ಧೂಮವಾನ್ ನವಾ' ಎಂಬ ವ್ಯಾಪ್ಯಸಂಶಯದಿಂದ 'ಪರ್ವತೋ ವಹ್ನಿಮಾನ್ ನವಾ' ಎಂಬ ವ್ಯಾಪಕ (ವಹ್ನ್ಯಾದಿ) ಸಂಶಯ ಬರುತ್ತದೆ. ಸಾಧಾರಣಧರ್ಮಜ್ಞಾನಾದಿಗಳಂತೆ ಧರ್ಮಿಜ್ಞಾನವೂ ಸಂಶಯಕಾರಣವೆಂದು ತಿಳಿಸುತ್ತಾನೆ. 'ಕಿಂತು ಸಂಶಯೇ—' ಇತಿ. ಧರ್ಮಿಜ್ಞಾನವಾಗಲೀ, ಧರ್ಮಿಗೂ ಇಂದ್ರಿಯಕ್ಕೂ ಆಗುವ ಸನ್ನಿಕರ್ಷವಾಗಲೀ ಎಲ್ಲಾ ಸಂಶಯಗಳಿಗೂ ಕಾರಣವಾಗುತ್ತದೆ. 'ಸಾಮಾನ್ಯಪ್ರತ್ಯಕ್ಷಾತ್ ವಿಶೇಷಪ್ರತ್ಯಕ್ಷಾತ್ ವಿಶೇಷಸ್ಮೃತೇಶ್ಚ ಸಂಶಯಃ' ಎಂದು ವೈಶೇಷಿಕಸೂತ್ರ. ಸಾಮಾನ್ಯಧರ್ಮವುಳ್ಳ ಧರ್ಮಿಯ ಪ್ರತ್ಯಕ್ಷದಿಂದಲೂ, ವಿಶೇಷಧರ್ಮದ (ವಕ್ರಕೋಟರ, ಶಿರಃ ಪಾಣ್ಯಾದಿ) ಅಪ್ರತ್ಯಕ್ಷದಿಂದಲೂ ಕೋಟಿದ್ವಯದ (ಸ್ಥಾಣುತ್ವ, ಪುರುಷತ್ವ) ಸ್ಮರಣೆಯಿಂದ ಸಂಶಯ ಉಂಟಾಗುತ್ತದೆಂದರ್ಥ.

**ದೋಷೋಽಪ್ರಮಾಯಾ ಜನಕಃ ಪ್ರಮಾಯಾಸ್ತು ಗುಣೋ ಭವೇತ್ ।**
**ಪಿತ್ತದೂರತ್ವಾದಿರೂಪೋ ದೋಷೋ ನಾನಾವಿಧಃ ಸ್ಮೃತಃ ॥ ೧೩೧ ॥**

ದೋಷ ಇತಿ—ಅಪ್ರಮಾಂ ಪ್ರತಿ ದೋಷಃ ಕಾರಣಮ್ । ಪ್ರಮಾಂ ಪ್ರತಿ ಗುಣಃ ಕಾರಣಮ್ । ತತ್ರಾಪಿ ಪಿತ್ತಾದಿರೂಪಾ ದೋಷಾಃ ಅನನುಗತಾಃ । ತೇಷಾಂ ಕಾರಣತ್ವಮನ್ವಯವ್ಯತಿರೇಕಾಭ್ಯಾಂ ಸಿದ್ಧಮ್ । ಗುಣಸ್ಯ ಪ್ರಮಾಜನಕತ್ವಂ ತು ಅನುಮಾನಾತ್ಸಿದ್ಧಮ್ । ಯಥಾ ಪ್ರಮಾ ಜ್ಞಾನಸಾಧಾರಣಕಾರಣಭಿನ್ನಕಾರಣಜನ್ಯಾ ಜನ್ಯಜ್ಞಾನತ್ವಾತ್ । ಅಪ್ರಮಾವತ್ ॥ ನಚ ದೋಷಾಭಾವ ಏವ ಕಾರಣಮಸ್ತ್ವಿತಿ ವಾಚ್ಯಮ್, ಪೀತಃಶಂಖ ಇತಿ ಜ್ಞಾನಸ್ಥಲೇ ಪಿತ್ತದೋಷಸತ್ವಾಚ್ಛಂಖತ್ವಪ್ರಮಾನುತ್ಪತ್ತಿಪ್ರಸಂಗಾತ್ । ವಿನಿಗಮನಾವಿರಹಾದನಂತದೋಷಾಭಾವಕಾರಣತ್ವಮಪೇಕ್ಷ್ಯ ಗುಣಸ್ಯ ಕಾರಣತಾಯಾ ನ್ಯಾಯತ್ವಾತ್ । ನ ಚ ಗುಣಸತ್ವೇಽಪಿ ಪಿತ್ತೇನ ಪ್ರತಿಬಂಧಾಚ್ಛಂಖೇ ನ ಶ್ವೈತ್ಯಜ್ಞಾನಮತಃ ಪಿತ್ತಾದಿದೋಷಾಭಾವಾನಾಂ ಕಾರಣತ್ವಮವಶ್ಯಂ ವಾಚ್ಯಂ, ತಥಾ ಚ ಕಿಂ ಗುಣಸ್ಯ ಹೇತುತ್ವಕಲ್ಪನಯಾ ಇತಿ ವಾಚ್ಯಮ್ ! ತಥಾಪ್ಯನ್ವಯವ್ಯತಿರೇಕಾಭ್ಯಾಂ ಗುಣಸ್ಯಾಪಿ ಹೇತುತ್ವಸಿದ್ಧೇಃ । ಏವಂ ಭ್ರಮಂ ಪ್ರತಿ ಗುಣಾಭಾವಃ ಕಾರಣಮಿತ್ಯಸ್ಯಾಪಿ ಸುವಚತ್ವಮ್ । ತತ್ರ ದೋಷಾಃ ಕೇ ಇತ್ಯಾಕಾಂಕ್ಷಾಯಾಮಾಹ । ಪಿತ್ತೇತಿ । ಕ್ವಚಿಚ್ಚಂದ್ರಾದೇಃ ಸ್ವಲ್ಪಪರಿಮಾಣಭ್ರಮೇ ದೂರತ್ವಂ ದೋಷಃ । ಕ್ವಚಿಚ್ಚ ವಂಶೋರಗಭ್ರಮೇ ಮಂಡೂಕವಸಾಂಜನಮಿತ್ಯೇವಂರೂಪಾ ದೋಷಾ ಅನನುಗತಾ ಭ್ರಾಂತಿಜನಕಾ ಇತ್ಯರ್ಥಃ ॥ ೧೩೧ ॥

ಅಪ್ರಮಾಜ್ಞಾನಕ್ಕೆ ಕಾರಣತೋರಿಸುತ್ತಾನೆ. 'ದೋಷಃ—' ಇತಿ. 'ಪೀತಃ

ಶಂಖಃ' ರಜ್ಜುವಿನಲ್ಲಿ 'ಅಯಂ ಸರ್ಪಃ' ಎಂದು ತೋರುವ ಅಯಥಾರ್ಥಜ್ಞಾನಕ್ಕೆ ದೋಷವು ಕಾರಣವಾಗುತ್ತದೆ. ಯಥಾರ್ಥಜ್ಞಾನಕ್ಕೆ (ತದ್ವತಿ ತತ್ಪ್ರಕಾರಕಜ್ಞಾನ) ಗುಣವು ಅಂದರೆ ವಿಶೇಷಣವು ಕಾರಣವಾಗುತ್ತದೆ. ತನ್ನ ವಿಶೇಷಣದಿಂದ ಕೂಡಿದ ವಿಶೇಷ್ಯದರ್ಶನದಿಂದ ಪ್ರಮಾ ಹುಟ್ಟುತ್ತದೆ. ದೋಷಗಳನ್ನು ತೋರಿಸುತ್ತಾನೆ. 'ತತ್ರಾಪಿ—' ಇತಿ. ವಾತಪಿತ್ತಕಫವೆಂಬ ತ್ರಿದೋಷಗಳಲ್ಲಿ ಸೇರಿದ ಪಿತ್ತದೋಷ. (ಆಯುರ್ವೇದದಲ್ಲಿ ಪ್ರಸಿದ್ಧವಾಗಿದೆ.) ದೂರತ್ವ. ಆದಿಪದದಿಂದ ಮಂಡೂಕವಸಾಂಜನ ಚಾಕಚಿಕ್ಯಾದಿಗಳನ್ನು ತೆಗೆದುಕೊಳ್ಳಬೇಕು. ಹೀಗೆ ದೋಷಗಳು ನಾನಾಪ್ರಕಾರ ವಾಗಿವೆ. 'ಅನನುಗತಾಃ' ಇತಿ. ಒಂದೊಂದು ಸ್ಥಳದಲ್ಲಿ ಒಂದೊಂದು ದೋಷಗಳು ಕಾರಣವಾದುದರಿಂದ ಅವು ಅನುಗತವಾಗಿರುವುದಿಲ್ಲವೆಂದರ್ಥ. ಅನ್ವಯವ್ಯತಿರೇಕದಿಂದ ಇವುಗಳಿಗೆ ಕಾರಣತ್ವ ಸಿದ್ಧವಾಗುತ್ತದೆ. 'ಪಿತ್ತಾದಿದೋಷಸತ್ವೇ ಅಪ್ರಮಾಸತ್ತ್ವಂ, ಪಿತ್ತಾದಿದೋಷಾಭಾವೇ ಅಪ್ರಮಾಭಾವಃ' ಎಂಬ ಅನ್ವಯವ್ಯತಿರೇಕಗಳನ್ನು ತಿಳಿಯ ಬೇಕು. ಹೀಗೆ ಪ್ರಮಾಕ್ಕೂ ಅನ್ವಯವ್ಯತಿರೇಕದಿಂದ ಗುಣವು ಕಾರಣವಾಗಲಿ ಎಂದು ಶಂಕೆ ಬಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಗುಣಸ್ಯ—' ಇತಿ. ಗುಣಕ್ಕೆ ಕಾರಣತ್ವವು ಅನುಮಾನದಿಂದಲೇ ಸಿದ್ಧವಾಗುತ್ತದೆ. 'ಯಥಾ—' ಎಂಬುದ ರಿಂದ ಅನುಮಾನಾಕಾರ ತೋರಿಸುತ್ತಾನೆ. ಜ್ಞಾನಸಾಧಾರಣಕಾರಣ ಅಂದರೆ ಇಂದ್ರಿಯಸನ್ನಿಕರ್ಷಮುಂತಾದವುಗಳು, ತದ್ಭಿನ್ನಕಾರಣವೆಂದರೆ ವಿಶೇಷಣವಿಶಿಷ್ಟವಾದ ವಿಶೇಷ್ಯದ ಸನ್ನಿಕರ್ಷವಾಗುತ್ತದೆ. ಅರ್ಥಾಂತರವನ್ನಾಶಂಕಿಸಿ ನಿರಾಕರಿಸುತ್ತಾನೆ. 'ನಚ—' ಇತಿ. ಪ್ರಮೆಗೆ ದೋಷಾಭಾವವೇ ಕಾರಣವಾಗಲಿ. ಗುಣಕ್ಕೆ ಬೇರೆಯಾಗಿ ಕಾರಣತ್ವವನ್ನು ಏಕೆ ಕಲ್ಪಿಸಬೇಕು ? ಎಂದು ಆಕ್ಷೇಪ. ಆದರೆ ಹೀಗೆ ಹೇಳಿದರೆ 'ಪೀತಃಶಂಖಃ' ಇತ್ಯಾದಿಜ್ಞಾನಸ್ಥಲದಲ್ಲಿ ಪಿತ್ತಾದಿದೋಷವಿರುವುದರಿಂದ ಅಲ್ಲಿ ಎಂದೂ 'ಶಂಖತ್ವವದ್ವಿಶೇಷ್ಯಕಶಂಖತ್ವಪ್ರಕಾರಕಜ್ಞಾನವು (ಪ್ರಮಾ) ಬರಲಾರದು. ಏಕೆಂದರೆ ದೋಷಾಭಾವಕಾರಣವೆಂದುದರಿಂದ ಇಲ್ಲಿ ಪಿತ್ತರೂಪದೋಷವೇ ಇರುತ್ತದಷ್ಟೆ. ಆದುದರಿಂದ ಗುಣಕ್ಕೇ ಕಾರಣತ್ವ ಹೇಳಬೇಕು. ಪಿತ್ತಾತ್ಮಕದೋಷಾಭಾವವು ಕೇವಲ ಪ್ರೈತ್ಯಪ್ರಮಾದಲ್ಲಿಮಾತ್ರಕಾರಣ. ಶಂಖಸ್ಯಪ್ರಮೆಯಲ್ಲಿ ಅದು ಕಾರಣವಾಗುವುದಿಲ್ಲ ವೆಂದು ಪೂರ್ವಪಕ್ಷಿಯು ಹೇಳುವುದಾದರೆ ಅದಕ್ಕೂ ದೋಷತೋರಿಸುತ್ತಾನೆ. 'ವಿನಿಗಮನಾ—' ಇತಿ. ಪ್ರಮೆಯಲ್ಲಿ ದೋಷಾಭಾವವು ಕಾರಣವೇ ? ಅಥವಾ ಗುಣವು ಕಾರಣವೇ ? ಎಂಬುದರಲ್ಲಿ ಏಕಪಕ್ಷಪಾತಿಯಾದ ಯಾವಯುಕ್ತಿಯೂ ಇಲ್ಲ ದಿರುವುದರಿಂದ ದೋಷಗಳೂ ಅನನುಗತವೆಂದು ಹೇಳಿರುವುದರಿಂದ ದೋಷಾಭಾವಕ್ಕೂ ಅದು ಸಂಭವಿಸುವುದರಿಂದ ಗುಣವೇ ಕಾರಣವೆಂಬುದರಲ್ಲಿ ಲಾಘವವಿರುತ್ತದೆ. ಗುಣ ಹೇತುತ್ವಕಲ್ಪನೆಯಲ್ಲಿ ಲಾಘವ ತೋರಿಸುತ್ತಾನೆ. 'ಅನಂತದೋಷಾಭಾವ—' ಇತಿ. ದೋಷಾಭಾವಗಳು ಕಾರಣವೆಂದರೆ ಅವು ಅನನುಗತವಾದುದರಿಂದ ಅನಂತದೋಷಾ ಭಾವಗಳಿಗೆ ಕಾರಣತ್ವಕಲ್ಪಿಸುವುದರಿಂದ ಗೌರವ ಬರುತ್ತದೆಂದು ತಾತ್ಪರ್ಯ.

'ನ್ಯಾಯ—' ಇತಿ. ಅನುಗತವಾದ ಗುಣತ್ವವನ್ನು ಮುಂದೆ ನಿರೂಪಿಸುವುದರಿಂದ ಅದಕ್ಕೆ ಕಾರಣತ್ವ ಹೇಳುವುದರಿಂದ ಲಾಘವವೆಂದು ತಾತ್ಪರ್ಯ. ಪ್ರಮಾಕ್ಕೆ ದೋಷಾಭಾವವೇ ಕಾರಣವಾಗುತ್ತದೆಂಬ ಪೂರ್ವಪಕ್ಷಿಯು ಪುನಃ ಆಕ್ಷೇಪಿಸುತ್ತಾನೆ. 'ನಚ—' ಇತಿ. ವಿಶೇಷಣಜ್ಞಾನವಿದ್ದರೂ ಪಿತ್ತದೋಷವಿದ್ದರೆ ಶಂಖದಲ್ಲಿ ಶ್ವೈತ್ಯಜ್ಞಾನವುಂಟಾಗದಿರುವುದರಿಂದ ದೋಷಾಭಾವಕ್ಕೆ ಕಾರಣತ್ವ ಹೇಳಲೇಬೇಕಾದುದರಿಂದ ತಿರುಗಿಗುಣಕ್ಕೆ ಏಕೆ ಕಾರಣತ್ವ ಹೇಳಬೇಕು ? ಎಂದು ಅವನ ಆಕ್ಷೇಪದ ತಾತ್ಪರ್ಯ. ಗುಣ ಕಾರಣತ್ವವಾದಿಯಾದ ಸಿದ್ಧಾಂತಿಯುಸಮಾಧಾನ. 'ತಥಾಪಿ—' ಇತಿ. ಅನ್ವಯ ವ್ಯತಿರೇಕದಿಂದ ಗುಣಕ್ಕೆ ಕಾರಣತ್ವ ಸಿದ್ಧವಾಗಿದೆ. ಪಿತ್ತಾದಿದೋಷಾಭಾವವಿದ್ದರೂ, ವಿಶೇಷಣವದ್ವಿಶೇಷ್ಯಸನ್ನಿಕರ್ಷ ರೂಪಗುಣಾಭಾವವಿರುವುದರಿಂದ ಶಂಖದಲ್ಲಿ ಪೀತತ್ವ ಪ್ರಮಾಬರುವುದಿಲ್ಲ. ಆದುದರಿಂದ ದೋಷಾಭಾವದಿಂದ ಗುಣಕ್ಕೆ ಅನ್ಯಥಾಸಿದ್ಧವನ್ನು ಹೇಳಬಾರದೆಂದು ತಾತ್ಪರ್ಯ. ದೋಷಾಭಾವಕ್ಕೆ ಕಾರಣತ್ವ ಹೇಳುವುದಾದರೆ ಅಪ್ರಮೆಗೆ (ಭ್ರಮ) ದೋಷಕಾರಣವೆಂದು ಹೇಳದೆ ಗುಣಾಭಾವವೇ ಕಾರಣವೆಂದು ಏಕೆ ಹೇಳಬಾರದು ಎಂದು ಪ್ರತಿಬಂದಿಯಾಗಿ ಹೇಳಬಹುದು. ಆದುದರಿಂದ ಪ್ರಮಾಕ್ಕೆ ಗುಣವೇ ಕಾರಣವೆಂದು ನಿರ್ವಿವಾದಸಿದ್ಧವಾಗುತ್ತದೆ. ಭ್ರಮಾಜನಕಗಳಾದ ಅನನುಗತದೋಷಗಳನ್ನು ತೋರಿಸುತ್ತಾನೆ. 'ಕ್ವಚಿತ್—' ಇತಿ. ಶಂಖದಲ್ಲಿ ಪೀತಾದಿಭ್ರಮೆ ಬರಲು ಪಿತ್ತದೋಷವೂ, ಚಂದ್ರನು ಚಿಕ್ಕದಾಗಿ ತೋರಲು ದೂರತ್ವ ದೋಷವೂ, ಬೊಂಬುಸರ್ಪವಾಗಿ ತೋರಲು ಮಂಡೂಕವಸಾಂಜನವೂ, ಕಾರಣವಾಗುತ್ತದೆ. ಹೀಗೆ ಅಲ್ಲಲ್ಲಿ ನಾನಾ ದೋಷಗಳಿಂದ ನಾನಾಭ್ರಮೆಯುಂಟಾಗುತ್ತವೆ. ||

ಅಥ ಕೇ ಗುಣಾ ಇತ್ಯಾಕಾಂಕ್ಷಾಯಾಂ ಪ್ರತ್ಯಕ್ಷಾದೌ ಕ್ರಮಶೋ ಗುಣಾನ್ ದರ್ಶಯತಿ. ||

**ಪ್ರತ್ಯಕ್ಷೇ ತು ವಿಶೇಷ್ಯೇಣ ವಿಶೇಷಣವತಾ ಸಮಮ್ ||**
**ಸನ್ನಿಕರ್ಷೋ ಗುಣಸ್ತು ಸ್ಯಾದಥ ತ್ವನುಮಿತೌ ಗುಣಃ || ೧೩೨ ||**
**ಪಕ್ಷೇ ಸಾಧ್ಯವಿಶಿಷ್ಟೇ ತು ಪರಾಮರ್ಶೋ ಗುಣೋ ಭವೇತ್ |**
**ಶಕ್ಯೇ ಸಾದೃಶ್ಯಬುದ್ಧಿಸ್ತು ಭವೇದುಪಮಿತೌ ಗುಣಃ || ೧೩೩ ||**
**ಶಾಬ್ದಬೋಧೇ ಯೋಗ್ಯತಾಯಾಸ್ತಾತ್ಪರ್ಯಸ್ಯಾಥ ವಾ ಪ್ರಮಾ ||**
**ಗುಣಸ್ಯಾತ್ ಭ್ರಮಭಿನ್ನಂ ತು ಜ್ಞಾನಮತ್ರೋಚ್ಯತೇ ಪ್ರಮಾ || ೧೩೪ ||**

ಪ್ರತ್ಯಕ್ಷೇ ತ್ವಿತಿ || ಪ್ರತ್ಯಕ್ಷೇ ವಿಶೇಷಣವದ್ವಿಶೇಷ್ಯಸನ್ನಿಕರ್ಷೋ ಗುಣಃ | ಅನುಮಿತೌ ಸಾಧ್ಯವತಿ ಸಾಧ್ಯವ್ಯಾಪ್ಯವೈಶಿಷ್ಟ್ಯಜ್ಞಾನಂ ಗುಣಃ| ಏವಮಗ್ರೇಪಿ ಜ್ಞೇಯಮ್| ಪ್ರಮಾಂ ನಿರೂಪಯತಿ | ಭ್ರಮಭಿನ್ನಮಿತಿ || || ೧೩೪ ||

ಪ್ರಮಾ ನಾನಾರೂಪವಾದುದರಿಂದ ಅದಕ್ಕೆ ಕಾರಣವಾದ ಗುಣಭೇದವನ್ನು ತೋರಿಸುತ್ತಾನೆ. 'ಪ್ರತ್ಯಕ್ಷೇ—' ಇತಿ. ಪ್ರತ್ಯಕ್ಷಪ್ರಮೆಯಲ್ಲಿ ಎಂದರ್ಥ. 'ವಿಶೇಷಣವತಾ ವಿಶೇಷ್ಯೇಣ ಸಮಂ ಸನ್ನಿಕರ್ಷಃ' ಘಟತ್ವಾದಿವಿಶೇಷಣದಿಂದ ಕೂಡಿದ ಘಟಾದಿವಿಶೇಷ್ಯದೊಡನೆ ಚಕ್ಷುರಾದಿ ಇಂದ್ರಿಯಗಳ ಯಾವ ಸಂಯೋಗಾದಿ ಸನ್ನಿಕರ್ಷ ವಿದೆಯೋ ಅದೇ (ಗುಣ) ಪ್ರತ್ಯಕ್ಷಪ್ರಮೆಯಲ್ಲಿ ಕಾರಣ. 'ಅಥ—' ಇತಿ. ಅನುಮಿತಿ ರೂಪಪ್ರಮೆಯಲ್ಲಿ ಕಾರಣವಾದ ಗುಣ. 'ಸಾಧ್ಯವಿಶಿಷ್ಟೇ ಪಕ್ಷೇ ಪರಾಮರ್ಶಃ ಗುಣಃ ಭವೇತ್' ಇದನ್ನೇ ಮುಕ್ತಾವಳಿಯಲ್ಲಿ 'ಸಾಧ್ಯವತಿ ಸಾಧ್ಯವ್ಯಾಪ್ಯವೈಶಿಷ್ಟ್ಯಜ್ಞಾನಂ' ಎಂದು ಹೇಳಿದೆ. ವಹ್ನ್ಯಾದಿಸಾಧ್ಯದಿಂದ ಕೂಡಿದ ಪರ್ವತಾದಿಗಳಲ್ಲಿ ವಹ್ನಿವ್ಯಾಪ್ಯವಾದ ಧೂಮಾದಿವೈಶಿಷ್ಟ್ಯಜ್ಞಾನವು (ಗುಣ) ಕಾರಣವಾಗುತ್ತದೆಂದರ್ಥ. ಉಪಮಿತಿರೂಪ ಪ್ರಮೆಯಲ್ಲಿ ಶಕ್ಯವಾದ ಗವಯಾದಿಗಳಲ್ಲಿ ಗವಾದಿಸಾದೃಶ್ಯಜ್ಞಾನವು ಗುಣವಾಗಿ ಕಾರಣ ವಾಗುತ್ತದೆ. ಶಾಬ್ದಪ್ರಮೆಯಲ್ಲಿ ಯೋಗ್ಯತಾ (ಇದರ ಸ್ವರೂಪ ಶಬ್ದಖಂಡದಲ್ಲಿ ಹೇಳಿದೆ.) ಜ್ಞಾನ ಅಥವಾ ತಾತ್ಪರ್ಯ ಅಂದರೆ ವಕ್ತ್ರಭಿಪ್ರಾಯಯಥಾರ್ಥಜ್ಞಾನವು ಗುಣವಾಗಿ ಕಾರಣವಾಗುತ್ತದೆ. ಪ್ರಮಾಲಕ್ಷಣ ತೋರಿಸುತ್ತಾನೆ. 'ಭ್ರಮಭಿನ್ನಂ ಜ್ಞಾನಂ' ಇತಿ. ಒಂದನ್ನು ಇನ್ನೊಂದನ್ನಾಗಿ ತಿಳಿಯುವುದು ಭ್ರಮ. (ಅತಸ್ಮಿನ್ ತದ್ಬುದ್ಧಿಃ) ಇದಕ್ಕಿಂತ ಭಿನ್ನವಾದ ಜ್ಞಾನಕ್ಕೆ ಪ್ರಮಾ ಎಂದು ಹೆಸರು. 'ಭ್ರಮಭಿನ್ನತ್ವೇ ಸತಿ ಜ್ಞಾನತ್ವಂ' ಎಂದು ಪ್ರಮಾಲಕ್ಷಣ. ಶುಕ್ತಿಯಲ್ಲಿ 'ಇದಂರಜತಂ' ಎಂದು ಬಂದ ಜ್ಞಾನದಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ ಭ್ರಮಭಿನ್ನತ್ವವೆಂದೂ ಘಟಾದಿಗಳಲ್ಲಿ ಅತಿವ್ಯಾಪ್ತಿ ವಾರಣೆಗೆ ಜ್ಞಾನತ್ವವೆಂದೂ ಹೇಳಿದೆ.

**ಅಥವಾ ತತ್ಪ್ರಕಾರಂ ಯತ್ ಜ್ಞಾನಂ ತದ್ವದ್ವಿಶೇಷ್ಯಕಮ್ ॥**
**ತತ್ಪ್ರಮಾ ನಪ್ರಮಾ ನಾಪಿ ಭ್ರಮಃ ಸ್ಯಾನ್ನಿರ್ವಿಕಲ್ಪಕಮ್ ॥ ೧೩೫ ॥**
**ಪ್ರಕಾರತಾದಿಶೂನ್ಯಂ ಹಿ ಸಂಬಂಧಾನವಗಾಹಿ ತತ್ ॥**

ನನು ಯತ್ರ ಶುಕ್ತಿರಜತಯೋಃ ರಿಮೇ ರಜತೇ ಇತಿ ಜ್ಞಾನಂ ಜಾತಂ ತತ್ರ ರಜತಾಂ ಶೇऽಪಿ ಪ್ರಮಾ ನಸ್ಯಾತ್, ತಜ್ಞಾನಸ್ಯ ಭ್ರಮಭಿನ್ನತ್ವಾಭಾವಾದತ ಆಹ— ತದ್ವದ್ವಿಶೇಷ್ಯಕತ್ವೇ ಸತಿ ತತ್ಪ್ರಕಾರಕಂ ಜ್ಞಾನಂ ಪ್ರಮೇತ್ಯರ್ಥಃ ॥ ಅಥೈವಂ ಸ್ಮೃತೇರಪಿ ಪ್ರಮಾತ್ವಂ ಸ್ಯಾತ್ । ತತಃ ಕಿಮಿತಿ ಚೇತ್ತಥಾ ಸತಿ ತತ್ಕರಣ ಸ್ಯಾಪಿ ಪ್ರಮಾಣಾಂತರತ್ವಂ ಸ್ಯಾದಿತಿಚೇನ್ನ, ಯಥಾರ್ಥಾನುಭವಕರಣಸ್ಯೈವ ಪ್ರಮಾಣತ್ವೇನ ವಿವಕ್ಷಿತತ್ವಾತ್ । ಇದಂ ತು ಬೋಧ್ಯಮ್ । ಯೇನ ಸಂಬಂಧೇನ ಯಸ್ವತ್ತಾ ತೇನ ಸಂಬಂಧೇನ ತದ್ವದ್ವಿಶೇಷ್ಯಕತ್ವಂ ತೇನ ಸಂಬಂಧೇನ ತತ್ಪ್ರಕಾರಕತ್ವಂ ವಾಚ್ಯಮ್ । ತೇನ ಕಪಾಲಾದೌ ಸಂಯೋಗಾದಿನಾ ಘಟಾದಿಜ್ಞಾನೇ ನಾತಿವ್ಯಾಪ್ತಿಃ । ಏವಂ ಸತಿ ನಿರ್ವಿಕಲ್ಪಕಂ ಪ್ರಮಾ ನ ಸ್ಯಾತ್ತಸ್ಯ ಸಪ್ರಕಾರಕತ್ವಾಭಾವಾದತ ಆಹ—ನ ಪ್ರಮೇತಿ । ನನು ವೃಕ್ಷೇಕಪಿ ಸಂಯೋಗ

ಜ್ಞಾನಂ ಭ್ರಮಃ ಪ್ರಮಾ ಚ ಸ್ಯಾದಿಚೇನ್ನ, ಪ್ರತಿಯೋಗಿವ್ಯಧಿಕರಣಕಪಿಸಂಯೋಗಾಭಾವವತಿ ಸಂಯೋಗಜ್ಞಾನಸ್ಯಭ್ರಮತ್ವಾತ್ । ನ ಚ ವೃಕ್ಷೇ ಸಂಯೋಗಾಭಾವಾವಚ್ಛೇದೇನ ಭ್ರಮೋ ನ ಸ್ಯಾತ್ತತ್ರ ಸಂಯೋಗಾಭಾವಸ್ಯ ಪ್ರತಿಯೋಗಿಸಮಾನಾಧಿಕರಣತ್ವಾದಿತಿ ವಾಚ್ಯಮ್ । ತತ್ರ ಸಂಯೋಗಾಭಾವಾವಚ್ಛೇದೇನ ಸಂಯೋಗಜ್ಞಾನಸ್ಯ ಭ್ರಮತ್ವಾಲ್ಲಕ್ಷಸ್ಯಾನನುಗಮಾಲ್ಲಕ್ಷಣಾನನುಗಮೇऽಪಿ ನ ಕ್ಷತಿಃ ॥

ಪೂರ್ವಲಕ್ಷಣದಲ್ಲಿ ಅವ್ಯಾಪ್ತಿ ಬರುವುದರಿಂದ ಬೇರೆಲಕ್ಷಣ ಹೇಳುತ್ತಾನೆ. 'ಅಥವಾ—' ಇತಿ. ಶುಕ್ತಿರಜತಗಳಲ್ಲಿ 'ಇಮೇ ರಜತೇ' ಎಂಬ ಜ್ಞಾನವುಂಟಾದಾಗ ಅಲ್ಲಿ ರಜತಾಂಶದಲ್ಲಿ ರಜತಜ್ಞಾನವು ಪ್ರಮಾತ್ಮಕವಾದರೂ, ಶುಕ್ತ್ಯಂಶದಲ್ಲಿ ಬಂದ ರಜತ ಜ್ಞಾನವು ಭ್ರಮವಾದುದರಿಂದ ಪೂರ್ವಜ್ಞಾನವು ಭ್ರಮಸಂಮಿಶ್ರಿತವಾದುದರಿಂದ, ಭ್ರಮಭಿನ್ನವಾಗದಿರುವುದರಿಂದ ಪ್ರಮಾತ್ವಬಾರದೇ ಅವ್ಯಾಪ್ತಿ ಬರುತ್ತದೆ. ಆದುದರಿಂದ ಲಕ್ಷಣಾಂತರ ಹೇಳಿದೆಯೆಂದು ತಾತ್ಪರ್ಯ. 'ತದ್ವದ್ವಿಶೇಷ್ಯಕತ್ವೇ ಸತಿ ತತ್ಪ್ರಕಾರಕಂ ಜ್ಞಾನಂ' ಇತಿ. 'ತದ್ವದ್ವಿಶೇಷ್ಯಕತ್ವಾವಚ್ಛಿನ್ನತತ್ಪ್ರಕಾರಕತ್ವವತ್ ಜ್ಞಾನಂ' ಪ್ರಮಾ. ಸತಿ ಸಪ್ತಮಿಗೆ ಯಾವಾಗಲೂ ಅವಚ್ಛಿನ್ನಾರ್ಥಕತ್ವವಿರುತ್ತದೆ. 'ಅಯಂ ಘಟಃ' ಎಂದು ಘಟವಲ್ಲಿ ಜ್ಞಾನ ಬಂದರೆ ಅಲ್ಲಿ ಘಟತ್ವದಿಂದಕೂಡಿದ ಘಟವೇ ವಿಶೇಷ್ಯವಾಗಿ ಘಟತ್ವ ಪ್ರಕಾರವಾಗಿದ್ದು ಅದನ್ನು ಜ್ಞಾನವು ನಿರೂಪಿಸುವುದರಿಂದ (ನಿರೂಪಕ) ಪ್ರಮಾ ಆಗುತ್ತದೆ.

ತತ್ಪ್ರಕಾರಕಭ್ರಮದಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ 'ತದ್ವದ್ವಿಶೇಷ್ಯಕತ್ವೇಸತಿ' ಎಂದು ಹೇಳಿದೆ. 'ರಜತಏವಪ್ರತ್ಯಯಮ್' ಎಂಬಲ್ಲಿ ರಜತತ್ವಪ್ರಮಾತ್ವವಾರಣೆಗೋಸ್ಕರ 'ತತ್ಪ್ರಕಾರಕಂ' ಎಂದು ಹೇಳಿದೆ. ಅದೇ (ಘಟಘಟತ್ವ) ವಿಷಯವಾಗಿರುವ ಇಚ್ಛಾದಿಗಳಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ 'ಜ್ಞಾನಂ' ಎಂದು ಹೇಳಿದೆ. ಈ ಲಕ್ಷಣವು ಸ್ಮೃತಿಯಲ್ಲಿ ಬರುವುದರಿಂದ ಅಲ್ಲಿ ಅತಿವ್ಯಾಪ್ತಿಯನ್ನಾಶಂಕಿಸುತ್ತಾನೆ. 'ಅಥ—' ಇತಿ. ಅಭಿಪ್ರಾಯವನ್ನು ತಿಳಿಯದೆ ಸಿದ್ಧಾಂತಿಯು ಕೇಳುತ್ತಾನೆ. 'ತತಃ ಕಿಂ—' ಇತಿ. ಸ್ಮೃತಿಯಲ್ಲಿಯೂ ಲಕ್ಷಣಬರುವುದರಿಂದ ಅದೂ ಪ್ರಮಾ ಆಗಲಿ ತೊಂದರೆಯೇನು ? ಎಂದರೆ ಆಕ್ಷೇಪಿಸುವವನು ತನ್ನ ಅಭಿಪ್ರಾಯವನ್ನು ವಿಶದಪಡಿಸುತ್ತಾನೆ. 'ತಥಾಸತಿ—' ಇತಿ. 'ತತ್ಕರಣ—' ಇತಿ. ಹೇಗೆ ಪ್ರತ್ಯಕ್ಷಾದಿಪ್ರಮೆಗೆ ಚಕ್ಷುರಾದಿಕರಣವಿದೆಯೋ ಹಾಗೆಯೇ ಸ್ಮೃತಿರೂಪಪ್ರಮೆಗೂ ಪೂರ್ವಾನುಭವ, ಅಥವಾ ಅದರ ಸಂಸ್ಕಾರವು ಕರಣವೆಂದು ಅದಕ್ಕೆ ಪ್ರಮಾಣಾಂತರವನ್ನು ಕಲ್ಪಿಸಬೇಕಾಗುತ್ತದೆ. ಆಗ ಸಿದ್ಧಾಂತಿಯು ಉತ್ತರಿಸುತ್ತಾನೆ. 'ನ—' ಇತಿ. ಯಥಾರ್ಥಾನುಭವಕ್ಕೇ ಪ್ರಮಾ ಎಂದು ಹೆಸರು. ಪ್ರಮಾಕರಣಕ್ಕೆಮಾತ್ರ ಪ್ರಮಾಣವೆಂದು ಹೆಸರು. ಸ್ಮೃತಿಯು ಯಥಾರ್ಥಾನುಭವಸ್ವರೂಪವಾಗದಿರುವುದರಿಂದ ಅದಕ್ಕೊಂದು ಬೇರೆ ಕರಣಾಂತರವನ್ನು

ಸ್ವೀಕರಿಸಬೇಕಾಗಿಲ್ಲ. ಯಥಾರ್ಥಾನುಭವರೂಪ ಪ್ರಮಾಸಂಸ್ಕಾರದಿಂದ ಅದು ಹುಟ್ಟಿದರೆ ಅದಕ್ಕೆ ಯಥಾರ್ಥಾಸ್ಮೃತಿಯೆಂದೂ, ಅಪ್ರಮಾಸಂಸ್ಕಾರದಿಂದ ಹುಟ್ಟಿದರೆ ಅದಕ್ಕೆ ಅಯಥಾರ್ಥಸ್ಮೃತಿಯೆಂದೂ ಕರೆಯುತ್ತಾರೆ. ಇದರ ವಿವರ ಸ್ಮೃತಿಗ್ರಂಥದಲ್ಲಿ ಹೇಳಿದೆ.

ಮುಂದೆ ಹೇಳತಕ್ಕ ಪ್ರಮಾಣಲಕ್ಷಣವು ಅತಿವ್ಯಾಪ್ತವಾಗಬಾರದೆಂದು ರಹಸ್ಯವನ್ನು ತಿಳಿಸುತ್ತಾನೆ. 'ಇದಂ ತು ಬೋಧ್ಯಂ—' ಇತಿ. ಯೇನ ಸಂಬಂಧೇನ—ಯತ್ಸಂಬಂಧಾವಚ್ಛೇದೇನ, ಯದ್ಧರ್ಮವತ್ತಾ—ಯದ್ಧರ್ಮನಿಷ್ಠಾಧೇಯತಾನಿರೂಪಿತಾಧಿಕರಣತ್ವವತ್ತಾ ತೇನೈವಸಂಬಂಧೇನ—ತತ್ಸಂಬಂಧಾವಚ್ಛೇದೇನೈವ. ಯಾವಸಂಬಂಧದಿಂದ ಆಧರ್ಮವು ಆಧರ್ಮಿಯಲ್ಲಿರುತ್ತದೆಯೋ, ಅದೇಸಂಬಂಧದಿಂದ ಆಧರ್ಮವುಳ್ಳ ಧರ್ಮಿವಿಶೇಷ್ಯಕಜ್ಞಾನವಾಗಿರಬೇಕೆಂದರ್ಥ. ಹೀಗೆ ಹೇಳುವುದರಿಂದ 'ಸಂಯೋಗೇನ ಕಪಾಲನಂತೌ ಘಟೌ' ಎಂಬ ಭ್ರಮಜ್ಞಾನದಲ್ಲಿ ಪ್ರಮಾಲಕ್ಷಣ ಅತಿವ್ಯಾಪ್ತವಾಗುವುದಿಲ್ಲ. ಅಲ್ಲಿ ಧರ್ಮತಾವಚ್ಛೇದಕಸಂಬಂಧ ಸಮವಾಯವೆಂದು ಪ್ರಸಿದ್ಧವಾಗಿದೆ. (ಅವಯವಾವಯವಿಗಳಿಗೆ ಯಾವಾಗಲೂ ಸಮವಾಯಸಂಬಂಧ) ಹಾಗಾದರೆ ನಿಷ್ಪ್ರಕಾರಕವಾದ ನಿರ್ವಿಕಲ್ಪಕಜ್ಞಾನವು ಪ್ರಮಾ ಆಗಲಾರದು. ತದ್ವದ್ವಿಶೇಷ್ಯಕ, ತತ್ಪ್ರಕಾರಕಜ್ಞಾನವೇ ಪ್ರಮಾ ಎಂದುದರಿಂದ ಅಲ್ಲಿ ಪ್ರಕಾರವಿರಲೇಬೇಕೆಂದು ಸಿದ್ಧವಾಗಿದೆಯಷ್ಟೆ ಎಂದು ಶಂಕಿಸುತ್ತಾನೆ. 'ಏವಂ ಸತಿ—' ಇತಿ. ನಿರ್ವಿಕಲ್ಪವು ಪ್ರಮಾಜ್ಞಾನವೂ ಅಲ್ಲ ಭ್ರಮೆಯೂ ಅಲ್ಲ. ಏಕೆಂದರೆ—ಪ್ರಕಾರತಾದಿಶೂನ್ಯಂ, ಸಂಬಂಧಾನವಗಾಹಿ ತತ್' ಅದು ಪ್ರಕರತಾದಿಸೂನ್ಯವಾಗಿಯೂ, ವಿಶೇಷಣ ವಿಶೇಷ್ಯಭಾವರಹಿತವಾಗಿಯೂ, ಸಂಯೋಗಾದಿಸಂಬಂಧಪರಾಮರ್ಶರಹಿತವಾಗಿಯೂ ಇರುವುದರಿಂದ ಅಲಕ್ಷ್ಯವಾದುದರಿಂದ ಪ್ರಮಾಲಕ್ಷಣ ಅಲ್ಲಿ ಬರಬೇಕಾಗಿಲ್ಲ. ಆದುದರಿಂದ ಅವ್ಯಾಪ್ತಿಗೆ ಅವಕಾಶವಿಲ್ಲ.

ಪ್ರಸಂಗದಿಂದ ಆಶಂಕಿಸುತ್ತಾನೆ. 'ನನು—' ಇತಿ. 'ವೃಕ್ಷಃ ಕಪಿಸಂಯೋಗೀ' ಎಂಬ ಜ್ಞಾನವು ಪ್ರಮಾ ಮತ್ತು ಭ್ರಮವೂ ಆಗಬಹುದು. ಶಾಖಾವಚ್ಛೇದದಿಂದ ಕಪಿಸಂಯೋಗವಿರುವುದರಿಂದ ಪ್ರಮೆಯೂ, ಮೂಲಾವಚ್ಛೇದದಿಂದ ಕಪಿಸಂಯೋಗಾಭಾವವಿರುವುದರಿಂದ ಭ್ರಮೆಯೂ ಆಗುತ್ತದೆಂದು ಆಕ್ಷೇಪದ ತಾತ್ಪರ್ಯ. ಅದಕ್ಕೆ ಸಮಾಧಾನ. 'ನ—' ಇತಿ. ಪ್ರತಿಯೋಗಿನಃ ವ್ಯಧಿಕರಣಂ ಯಸ್ಯ ಸಃ, ಪ್ರತಿಯೋಗಿವ್ಯಧಿಕರಣಃ ಸಚಾಸೌ ಕಪಿಸಂಯೋಗಃ, ವಿರುದ್ಧಂ ಅಧಿಕರಣಂ ವ್ಯಧಿಕರಣಮ್. ಕಪಿಸಂಯೋಗಕ್ಕೆ ವಿರುದ್ಧವಾದ ಅಧಿಕರಣವಲ್ಲಿ (ಅದು ಸರ್ವಾವಯವಗಳಿಂದ ಎಲ್ಲಿ ಇಲ್ಲವೋ ಅಲ್ಲಿ ಅಂದರೆ ಜಲಾದಿಗಳಲ್ಲಿ) ಕಪಿಸಂಯೋಗವುಳ್ಳದ್ದು ಎಂಬ ಜ್ಞಾನ ಬಂದರೆ ಆಗ ಅದು ಭ್ರಮವಾಗುತ್ತದೆ. ಇನ್ನಾವರೀತಿಯಿಂದಲೂ ಭ್ರಮವಾಗುವುದಿಲ್ಲ. ಪ್ರಕೃತ ವೃಕ್ಷವು ಪ್ರತಿಯೋಗಿ (ಕಪಿಸಂಯೋಗವೇ) ವ್ಯಧಿಕರಣವಲ್ಲ. ತುದಿಯಲ್ಲಿ ಅದು ಇರು

ವುದರಿಂದ ಪ್ರತಿಯೋಗಿಸಮಾನಾಧಿಕರಣವೇ ಆಗುತ್ತದೆ. ಆದುದರಿಂದ ಪೂರ್ವೋಕ್ತ ಜ್ಞಾನವು ಭ್ರಮವಾಗುವುದಿಲ್ಲ. ಪ್ರಮಾತ್ಮಕವೇ ಆಗುತ್ತದೆ.

ಪುನಃ ಆಶಂಕಿಸುತ್ತಾನೆ. 'ನಚ—' ಇತಿ. ಮೂಲದಲ್ಲಿ ಕಪಿಸಂಯೋಗವಿಲ್ಲದಿರುವುದರಿಂದ ಅಲ್ಲಿ ಕಪಿಸಂಯೋಗಜ್ಞಾನವುಂಟಾದಾಗ ಅದು ಭ್ರಮಾತ್ಮಕಜ್ಞಾನವಾಗದಿರಲಿ. ಏಕೆಂದರೆ ಸಂಯೋಗಾಭಾವದ. ಪ್ರತಿಯೋಗಿಯಾದ ಸಂಯೋಗಕ್ಕೆ ಅದು ಅಧಿಕರಣವೇ ಆದುದರಿಂದ ಪ್ರತಿಯೋಗಿವ್ಯಧಿಕರಣವಾಗಲಿಲ್ಲವೆಂದು ಆಕ್ಷೇಪಿಸುವವನ ತಾತ್ಪರ್ಯ. ಇಷ್ಟಾಪತ್ತಿಯಿಂದ ಸಮಾಧಾನ ತೋರಿಸುತ್ತಾನೆ. 'ತತ್ರ—' ಇತಿ. ಸಂಯೋಗಾಭಾವವಿರುವ ಮೂಲದಲ್ಲಿ ಸಂಯೋಗಜ್ಞಾನ ಬಂದರೆ ಅದು ಭ್ರಮವೇ ಆಗುತ್ತದೆಂದು ತಾತ್ಪರ್ಯ. ಹಾಗಾದರೆ ಪ್ರಮಾಲಕ್ಷಣವು ಅನುಗತವಾಗಲಿಲ್ಲ. ಅನನುಗಮದೋಷಬರುವುದಿಲ್ಲವೇ ? ಅಂದರೆ ಲಕ್ಷ್ಯವು ಅನನುಗತವಾಗಿದ್ದಾಗ ಲಕ್ಷಣಕ್ಕೆ ಅನನುಗಮದೋಷವಿಲ್ಲವೆಂದು ಸಮಾಧಾನ ಹೇಳುತ್ತಾನೆ. 'ಲಕ್ಷ್ಯಸ್ಯ—' ಇತಿ. ಲಕ್ಷ್ಯವೇ ಆಗದಿರುವಲ್ಲಿ ಲಕ್ಷಣಬರಲಿಲ್ಲವೆಂದರೆ ಅದರಿಂದ ಯಾವ ದೋಷವೂ ಇಲ್ಲವೆಂದರ್ಥ.

**ಪ್ರಮಾತ್ವಂ ನ ಸ್ವತೋ ಗ್ರಾಹ್ಯಂ ಸಂಶಯಾನುಪಪತ್ತಿತಃ ॥ ೧೩೬ ॥**

ಪ್ರಮಾತ್ವಮಿತಿ ॥ ಮೀಮಾಂಸಕಾ ಹಿ ಪ್ರಮಾತ್ವಂ ಸ್ವತೋ ಗ್ರಾಹ್ಯಮಿತಿ ವದಂತಿ । ತತ್ರ ಗುರೂಣಾಂ ಮತೇ ಜ್ಞಾನಸ್ಯ ಸ್ವಪ್ರಕಾಶತ್ವಾತ್ತತ್ ಜ್ಞಾನಪ್ರಮಾಣ್ಯಂ ತೇನೈವ ಗೃಹ್ಯತ ಇತಿ । ಭಟ್ಟಾನಾಂ ಮತೇ ಜ್ಞಾನಮತೀಂದ್ರಿಯಮ್ । ಜ್ಞಾನಜನ್ಯಾ ಜ್ಞಾತತಾ ಪ್ರತ್ಯಕ್ಷಾ, ತಯಾ ಚ ಜ್ಞಾನಮನುಮೀಯತೇ । ಮುರಾರಿ ಮಿಶ್ರಾಣಾಂ ಮತೇಽನುವ್ಯವಸಾಯೇನ ಜ್ಞಾನಂ ಗೃಹ್ಯತೇ । ಸರ್ವೇಷಾಮಪಿ ಮತೇ ತತ್ ಜ್ಞಾನವಿಷಯಕಜ್ಞಾನೇನ ತತ್ ಜ್ಞಾನಪ್ರಾಮಾಣ್ಯಂ ಗೃಹ್ಯತೇ । ವಿಷಯನಿರೂಪ್ಯಂ ಹಿ ಜ್ಞಾನಮ್ । ಅತೋ ಜ್ಞಾನವಿತ್ತಿವೇದ್ಯೋ ವಿಷಯಃ ॥

ಪ್ರಮಾತ್ವವು ಸ್ವತೋಗ್ರಾಹ್ಯವಲ್ಲವೆಂದು ತಿಳಿಸಲು ಮೊದಲು ಸ್ವತೋಗ್ರಾಹ್ಯವೆಂದು ಹೇಳುವವರ ಮತವನ್ನು ತೋರಿಸುತ್ತಾನೆ. 'ಮೀಮಾಂಸಕಾ—' ಇತಿ. ಮೀಮಾಂಸಕರಲ್ಲಿಯೂ ಪ್ರಧಾನರಾಗಿ ಮೂರು ಜನರು ಇದ್ದಾರೆ. ಪ್ರಾಭಾಕರ (ಗುರು), ಭಾಟ್ಟರು. ಮುರಾರಿಮಿಶ್ರಮತಾನುಯಾಯಿಗಳು. ಇವರೆಲ್ಲರೂ ಜ್ಞಾನದಲ್ಲಿರುವ ಪ್ರಾಮಾಣ್ಯ ಅಂದರೆ ಸತ್ಯತ್ವವು ಸ್ವತಃ ಗ್ರಹಣವಾಗುತ್ತದೆಂದು ಹೇಳುವುದರಿಂದ ಇವರಿಗೆ ಸ್ವತಃ ಪ್ರಾಮಾಣ್ಯವಾದಿಗಳೆಂದು ಹೆಸರು. ಮೂವರಮತದಲ್ಲಿಯೂ ಸ್ವಲ್ಪ ಸ್ವಲ್ಪ ವೈಲಕ್ಷಣ್ಯವಿರುವುದರಿಂದ ಕ್ರಮವಾಗಿ ಆ ವೈಲಕ್ಷಣ್ಯವನ್ನು ತೋರಿಸುತ್ತಾನೆ. 'ತತ್ರ ಗುರೂಣಾಂ—' ಇತಿ. ಬಹುವಚನದಿಂದ ಆದರಾತಿಶಯ ತೋರಿಸಿದಂತಾಗುತ್ತದೆ. ಜ್ಞಾನವು ಸ್ವಪ್ರಕಾಶವಾದುದರಿಂದ ಅಂದರೆ ಸ್ವವಿಷಯಕವಾದುದರಿಂದ ಜ್ಞಾನ

ಪ್ರಾಮಾಣ್ಯವು ಅಂದರೆ ಜ್ಞಾನದಲ್ಲಿರುವ ಜ್ಞಾನತ್ವಧರ್ಮದಂತೆ ಜ್ಞಾನದಲ್ಲಿರುವ ಪ್ರಮಾತ್ವಧರ್ಮವೂ ಜ್ಞಾನದಿಂದಲೇ ಗೃಹೀತವಾಗುತ್ತದೆ. ಜ್ಞಾನವು ಹೇಗೆ ಘಟ ಪಟಾದಿಗಳನ್ನು ವಿಷಯೀಕರಿಸುವುದೋ ಅದರಂತೆ ತನ್ನನ್ನು ತಾನೇ ವಿಷಯೀಕರಿಸುತ್ತದೆ ಅಂದರೆ ಪ್ರಕಾಶಪಡಿಸಿಕೊಳ್ಳುತ್ತದೆಂದರ್ಥ. ಇವರ ಮತದಲ್ಲಿ ಎಲ್ಲಾ ಜ್ಞಾನದಲ್ಲಿಯೂ ಮಿತಿ, ಮಾತೃ, ಮೇಯವೆಂದು ಮೂರೂ ತೋರುತ್ತವೆ. ಘಟತ್ವೇನ ಘಟಮಹಂ ಜಾನಾಮಿ' ಎಂಬ ವ್ಯವಸಾಯಾತ್ಮಕಜ್ಞಾನವು ಸ್ವಪ್ರಕಾಶವಾದುದರಿಂದ ತನ್ನಿಂದಲೇ ತನ್ನಲ್ಲಿರುವಪ್ರಾಮಾಣ್ಯವನ್ನೂ ಗ್ರಹಿಸುತ್ತದೆ ಎಂದು ತಾತ್ಪರ್ಯ.

ಭಾಟ್ಟಮತವನ್ನು ತೋರಿಸುತ್ತಾನೆ. 'ಭಾಟ್ಟಾನಾಂ—' ಇತಿ. ಇವರಮತ ದಲ್ಲಿ ಎಲ್ಲಾ ಜ್ಞಾನವೂ ಅತೀಂದ್ರಿಯ ಅಂದರೆ ಇಂದ್ರಿಯಗಳಿಗೆ ಅಗೋಚರವಾಗುತ್ತದೆ. ಆದರೆ ಜ್ಞಾನದಿಂದ ಉಂಟಾದ ಜ್ಞಾತತಾಧರ್ಮವು ಪ್ರತ್ಯಕ್ಷವಾಗುತ್ತದೆ. ಇಂದ್ರಿಯ ಗೋಚರವಾಗುತ್ತದೆ. 'ಜ್ಞಾತೋ ಘಟಃ' ಎಂಬ ಪ್ರತೀತಿಯಿಂದ ಪ್ರಸಿದ್ಧವಾದ ಘಟಾದಿವಿಷಯಗಳಲ್ಲಿರುವ ಧರ್ಮವಿಶೇಷವೇ ಜ್ಞಾತತಾ. ಇದರಿಂದ ಜ್ಞಾನವು ಅನುಮಿತವಾಗುತ್ತದೆ. 'ಇಯಂ ಘಟನಿಷ್ಠಾ ಜ್ಞಾತತಾ—ಘಟತ್ವವದ್ವಿಶೇಷ್ಯಕಘಟತ್ವ ಪ್ರಕಾರಕಜ್ಞಾನಜನ್ಯಾ—ಘಟವೃತ್ತಿಘಟತ್ವ ಪ್ರಕಾರಕಜ್ಞಾತತಾವತ್ತ್ವಾತ್' । 'ಯಾ ಯದ್ವೃತ್ತಿರ್ಯತ್ಪ್ರಕಾರಿಕಾಜ್ಞಾತತಾ, ಸಾ ತದ್ವದ್ವಿಶೇಷ್ಯಕ ತತ್ಪ್ರಕಾರಕಜ್ಞಾನ ಸಾಧ್ಯಾ—ಯಥಾ ಪಟೇ ಪಟತ್ವಪ್ರಕಾರಿಕಾಜ್ಞಾತತಾ ॥' ಜ್ಞಾತತಾಹೇತುವಿನಿಂದ ಜ್ಞಾನ ಗೃಹೀತವಾದಂತೆ ಅದರಲ್ಲಿರುವ ಪ್ರಾಮಾಣ್ಯವೂ ಅದರಿಂದಲೇ ಗೃಹೀತವಾಗುತ್ತ ದೆಂದು ಅವರ ಮತ. ಇದರಿಂದಲೂ ಸ್ವತಃ ಪ್ರಾಮಾಣ್ಯಸಿದ್ಧವಾಗುತ್ತದೆ. ಮುರಾರಿ ಮಿಶ್ರರಮತವನ್ನು ತೋರಿಸುತ್ತಾನೆ. 'ಮುರಾರಿಮಿಶ್ರಾ—' ಇತಿ. ಇವರಮತದಲ್ಲಿ 'ಅಯಂ ಘಟಃ' ಎಂಬ ಜ್ಞಾನಬಂದಮೇಲೆ 'ಘಟತ್ವೇನ ಘಟಮಹಂ ಜಾನಾಮಿ' ಎಂಬ ಜ್ಞಾನವಿಷಯಕವಾದ ಅನುವ್ಯವಸಾಯವೆಂಬ ಜ್ಞಾನ ಬರುತ್ತದೆ. ಈ ಅನುವ್ಯವ ಸಾಯಾತ್ಮಕಜ್ಞಾನದಿಂದಲೇ ಜ್ಞಾನಗತವಾದ ಪ್ರಾಮಾಣ್ಯವೂ ಗೃಹೀತವಾಗುತ್ತದೆ. ಹೀಗೆ ಎಲ್ಲರಮತದಲ್ಲಿ ಸ್ವತಃ ಪ್ರಾಮಾಣ್ಯವನ್ನು ತೋರಿಸುತ್ತಾನೆ. 'ಸರ್ವೇಷಾಂ—' ಇತಿ. 'ತತ್ಜ್ಞಾನವಿಷಯಕಜ್ಞಾನೇನ—' ಇತಿ. ಜ್ಞಾನವಿಷಯಕಜ್ಞಾನದಿಂದ ಎಂದರ್ಥ. ಅನುವ್ಯವಸಾಯಾತ್ಮಕಜ್ಞಾನದಿಂದ ಎಂದು ತಾತ್ಪರ್ಯ. ಇದರಿಂದ ವ್ಯವಸಾಯಾತ್ಮಕವಾದ ಪೂರ್ವಜ್ಞಾನದಲ್ಲಿರುವ ಪ್ರಾಮಾಣ್ಯವು ಗೃಹೀತವಾಗುತ್ತ ದೆಂದರ್ಥ. ಜ್ಞಾನವಿಷಯಕಜ್ಞಾನವು ವಿಷಯವಿಷಯಕವಾಗುತ್ತದೆಂದು ತೋರಿಸು ತ್ತಾನೆ. 'ವಿಷಯ—' ಇತಿ. ವಿಷಯಘಟಿತಪ್ರಾಮಾಣ್ಯ ಇದರಲ್ಲಿ ಇದೆಯೆಂದು ತಿಳಿಸಲು ಹೀಗೆ ಹೇಳಿದೆ. ವಿಷಯದಿಂದ ನಿರೂಪ್ಯವಾದದ್ದು ಜ್ಞಾನ. ಜ್ಞಾನನಿರೂಪಿತ ವಾದದ್ದು ವಿಷಯ. 'ಅತ—' ಇತಿ. ಜ್ಞಾನವಿತ್ತಿಯೆಂದರೆ ಜ್ಞಾನದಜ್ಞಾನ. ಅದರಿಂದ ವೇದ್ಯವಾದದ್ದು ಘಟಾದಿವಿಷಯವಾಗುತ್ತದೆ. ನಿರ್ವಿಷಯವಾದ ಜ್ಞಾನವು ಇರುವುದಿಲ್ಲ. ಇದರಿಂದ ಅನುಮಾನ ಹೀಗೆ ಸಿದ್ಧವಾಗುತ್ತದೆ. 'ಜ್ಞಾನಂ—ಸವಿಷಯಂ

ಭವಿತುಮರ್ಹತಿ—ಪ್ರಕಾಶಕತ್ವಾತ್—ದೀಪವತ್ ||' ಹೀಗೆ ಸ್ವತಃ ಪ್ರಾಮಾಣ್ಯವಾದಿಗಳ ಮತವನ್ನು ತೋರಿಸಿ ಅದನ್ನು ಖಂಡಿಸುತ್ತಾನೆ.

ತನ್ಮತಂ ದೂಷಯತಿ || ನ ಸ್ವತೋ ಗ್ರಾಹ್ಯಮಿತಿ | ಸಂಶಯೇತಿ | ಯದಿ ಜ್ಞಾನಸ್ಯ ಪ್ರಾಮಾಣ್ಯಂ ಸ್ವತೋ ಗ್ರಾಹ್ಯಂ ಸ್ಯಾತ್ತದಾಽನಭ್ಯಾಸದಶೋತ್ಪನ್ನಜ್ಞಾನೇ ಪ್ರಾಮಾಣ್ಯಸಂಶಯೋ ನ ಸ್ಯಾತ್ | ತತ್ರ ಹಿ ಯದಿ ಜ್ಞಾನಂ ಜ್ಞಾತಂ ತದಾತ್ವನ್ಮತೇ ಪ್ರಾಮಾಣ್ಯಂ ಜ್ಞಾತಮೇವೇತಿ ಕಥಂ ಸಂಶಯಃ | ಯದಿ ತು ಜ್ಞಾನಂ ನ ಜ್ಞಾತಂ ತದಾ ಧರ್ಮಿಜ್ಞಾನಾಭಾವಾತ್ ಕಥಂ ಸಂಶಯಃ | ತಸ್ಮಾತ್ ಜ್ಞಾನೇ ಪ್ರಾಮಾಣ್ಯಮನುಮೇಯಮ್ | ತಥಾ ಹಿ ! ಇದಂ ಜ್ಞಾನಂ ಪ್ರಮಾ ಸಂವಾದಿಪ್ರವೃತ್ತಿಜನಕತ್ವಾತ್, ಯನ್ನೈವಂ ತನ್ನೈವಂ ಯಥಾಽಪ್ರಮಾ | ಇದಂ ಪೃಥಿವೀತ್ವಪ್ರಕಾರಕಂ ಜ್ಞಾನಂ ಪ್ರಮಾ—ಗಂಧವತಿ ಪೃಥಿವೀತ್ವಪ್ರಕಾರಕಜ್ಞಾನತ್ವಾತ್ | ಏವಮಿದಂ ಜಲತ್ವಪ್ರಕಾರಕಂ ಜ್ಞಾನಂ ಪ್ರಮಾ—ಸ್ನೇಹವತಿ ಜಲತ್ವಪ್ರಕಾರಕಜ್ಞಾನತ್ವಾತ್ | ನ ಚ ಹೇತುಜ್ಞಾನಂ ಕಥಂ ಜಾತಮಿತಿ ವಾಚ್ಯಮ್ | ಪೃಥಿವೀತ್ವಪ್ರಕಾರಕತ್ವಸ್ಯ ಸ್ವತೋಗ್ರಾಹ್ಯತ್ವಾತ್ | ತತ್ರ ಗಂಧಗ್ರಹೇಣ ಗಂಧವದ್ವಿಶೇಷ್ಯಕತ್ವಸ್ಯಾಪಿ ಸಂಗ್ರಹತ್ವಾತ್ | ತತ್ಪ್ರಕಾರಕತ್ವಾವಚ್ಛಿನ್ನತದ್ವಿಶೇಷ್ಯಕತ್ವಂ ಪರಂ ನ ಗೃಹ್ಯತೇ ಸಂಶಯಾನುರೋಧಾತ್ ||

ಸ್ವತಃ ಪ್ರಾಮಾಣ್ಯವಾದಿಗಳ ಮತವನ್ನು ಖಂಡಿಸುತ್ತಾನೆ. 'ತನ್ಮತಂ—' ಇತಿ. ಸ್ವತಃ ಎಂಬುದಕ್ಕೆ ಸ್ವಾಶ್ರಯಗ್ರಾಹಕಾತಿರಿಕ್ತಾಗ್ರಾಹ್ಯವೆಂದರ್ಥ. ಸ್ವಂ—ತದ್ವತಿ ತತ್ಪ್ರಕಾರಕತ್ವರೂಪಪ್ರಮಾತ್ವಧರ್ಮ. ತದಾಶ್ರಯ—ಜ್ಞಾನ. ತದ್ಗ್ರಾಹಕವಾದದ್ದು ಅನುವ್ಯವಸಾಯಾದಿಜ್ಞಾನ. ಅದಕ್ಕಿಂತ ಅತಿರಿಕ್ತವಾದದ್ದು ಅನುಮಾನಾದಿ ಅದರಿಂದ ಅಗ್ರಾಹ್ಯವಾದದ್ದೆಂದರ್ಥ. ಇದು ಸರಿಯಲ್ಲವೆಂದರ್ಥ. ಯುಕ್ತಿಯನ್ನು ತೋರಿಸುತ್ತಾನೆ. 'ಸಂಶಯಾನು—' ಇತಿ. ಅನಭ್ಯಾಸದಶೋತ್ಪನ್ನಜ್ಞಾನಂ—ಅನವಧೃತಪ್ರಾಮಾಣ್ಯಸಜಾತೀಯಜ್ಞಾನವೆಂದರ್ಥ. ಪ್ರಾಮಾಣ್ಯನಿಶ್ಚಯವುಂಟಾಗದಿರುವ ಪ್ರಾಥಮಿಕಜ್ಞಾನವೆಂದು ತಾತ್ಪರ್ಯ. ಜ್ಞಾನಪ್ರಾಮಾಣ್ಯವು ಸ್ವತೋಗ್ರಾಹ್ಯವಾದರೆ ಬಾಲಕನಿಗೆ ಬಾಲ್ಯದಲ್ಲಿ ಜಲಜ್ಞಾನವುಂಟಾದಾಗ ಅವನಿಗೆ 'ಮಮೇದಂಜಾತಂ ಜಲಂ ಜ್ಞಾನಂ ಪ್ರಮಾ ನವಾ' ಎಂಬ ಸಂಶಯಬಾರದೇ ಹೋಗಬೇಕಾಗುತ್ತದೆ. ಜ್ಞಾನ ಉಂಟಾಗುವಾಗ ಅದರ ಪ್ರಾಮಾಣ್ಯವೂ ಅಂದರೆ ಸತ್ಯತ್ವವೂ ಸ್ವತಃ ಗೃಹೀತವಾಗಿಯೇ ಬರುತ್ತದಷ್ಟೆ. ಆಗ ಸಂಶಯಕ್ಕೆ ಅವಕಾಶವಿಲ್ಲವೆಂದು ತಿಳಿಸುತ್ತಾನೆ. 'ತತ್ರ—' ಇತಿ. ಜ್ಞಾನವುಂಟಾಗಲಿಲ್ಲವೆನ್ನುವುದಾದರೆ ಧರ್ಮಿಜ್ಞಾನವಿಲ್ಲದಿರುವುದರಿಂದಲೇ ಸಂಶಯ ಬರುವುದಿಲ್ಲ. ಸಂಶಯವನ್ನು ಕುರಿತು ಧರ್ಮಿಜ್ಞಾನವು ಕಾರಣವೆಂದು ಹಿಂದೆಯೇ ಹೇಳಿದೆ. 'ತಸ್ಮಾತ್—' ಇತಿ. ಆದುದರಿಂದ ಪ್ರಾಮಾಣ್ಯವು ಅನುಮಾನದಿಂದಲೇ ಸಿದ್ಧಿಸುತ್ತದೆಂದು ತಿಳಿಯಬೇಕು. ಸಫಲಪ್ರವೃತ್ತಿಜನಕತಾಲಿಂಗಕಅನುಮಾನದಿಂದ ಇದು ಗೃಹೀತ

ವಾಗುತ್ತದೆ. ಇದಕ್ಕೇ ಪ್ರಾಮಾಣ್ಯವು ಪರತೋಗ್ರಾಹ್ಯವೆಂದು ಹೇಳುವುದು. ಧರ್ಮಿ ಸಾಮಾನ್ಯಜ್ಞಾನ ಬಂದಮೇಲೆಯೇ ಧರ್ಮಸಂಶಯ ಬರುತ್ತದೆ. ಇದರಿಂದಲೇ ಪ್ರಾಮಾಣ್ಯವು ಅನುಮಾನಗಮ್ಯವೆಂದು ಸ್ಪಷ್ಟವಾಗುತ್ತದೆ. ಅನುಮಾನಾಕಾರ ತೋರಿಸುತ್ತಾನೆ. 'ಇದಂ ಜ್ಞಾನಂ—' ಇತಿ. ನಿಶ್ಚಯಪ್ರವೃತ್ತಿಜನಕವಾದುದರಿಂದ ಇದು ಪ್ರಮೆಯಾಗುತ್ತದೆಂದರ್ಥ ಅನ್ವಯದೃಷ್ಟಾಂತವಿಲ್ಲವಾದುದರಿಂದ ವ್ಯತಿರೇಕ ದೃಷ್ಟಾಂತ ತೋರಿಸುತ್ತಾನೆ. ಜ್ಞಾನದಲ್ಲಿರುವ (ಜ್ಞಾನನಿಷ್ಠಧರ್ಮ) ಪೃಥಿವೀತ್ವ ಪ್ರಕಾರಕಾವಗಾಹಿತ್ವ, ಗಂಧವದ್ವಿಶೇಷ್ಯಕಾವಗಾಹಿತ್ವವೂ ಸ್ವತೋಗ್ರಾಹ್ಯವಾಗಿದ್ದರೂ ಅದರಿಂದ ದೋಷವಿಲ್ಲ. ವಿಶಕಲಿತವಾಗಿ ವಿಶೇಷ್ಯ, ವಿಶೇಷಣಗಳು ಸ್ವತೋಗ್ರಾಹ್ಯವಾಗಿ ತೋರಬಹುದು. ವಿಶಿಷ್ಟಧರ್ಮಕ್ಕೆ ಅಂದರೆ ಪೃಥಿವೀತ್ವಪ್ರಕಾರಕತ್ವಾವಚ್ಛಿನ್ನಪೃಥಿವೀತ್ವವದ್ವಿಶೇಷ್ಯಕತ್ವಧರ್ಮಕ್ಕೆ ಸ್ವತೋಗ್ರಾಹ್ಯತ್ವವಿಲ್ಲವೆಂದು ತಾತ್ಪರ್ಯ.

ಪ್ರಾಮಾಣ್ಯವಾದದ ಸಂಗ್ರಹವನ್ನು ಹೀಗೆ ತಿಳಿಯಬಹುದು. ಪ್ರಮಾತ್ವ, ಪ್ರಾಮಾಣ್ಯ, ತದ್ವತಿ ತತ್ಪ್ರಕಾರಕಜ್ಞಾನತ್ವ, (ಸತ್ಯತ್ವ) ಇವೆಲ್ಲಾ ಪರ್ಯಾಯಪದಗಳು. ಮೀಮಾಂಸಕರೂ, ವೇದಾಂತಿಗಳೂ ಈ ಪ್ರಾಮಾಣ್ಯವನ್ನು ಸ್ವತೋಗ್ರಾಹ್ಯವೆಂದು ತಿಳಿಯುತ್ತಾರೆ. ನೈಯಾಯಿಕರು ಪರತೋಗ್ರಾಹ್ಯವೆಂದು ತಿಳಿಯುತ್ತಾರೆ. ಉತ್ಪತ್ತಿಸ್ವತಸ್ತ್ವ, ಜ್ಞಪ್ತಿಸ್ವತಸ್ತ್ವವೆಂದು ಸ್ವತಸ್ತ್ವವೂ ಎರಡುವಿಧವಾಗಿರುತ್ತದೆ. ದೋಷಾಭಾವಸಹಕೃತವಾಗಿ ಜ್ಞಾನಸಾಮಾನ್ಯಸಾಮಗ್ರೀಪ್ರಯೋಜ್ಯವಾದರೆ ಆಗ ಉತ್ಪತ್ತಿಸ್ವತಸ್ತ್ವ ಬರುತ್ತದೆ. ಜ್ಞಾನಸಾಮಾನ್ಯಸಾಮಾಗ್ರಿಗಳೆಂದರೆ ಆತ್ಮಾ, ಆತ್ಮಮನಸಃ ಸಂಯೋಗ, ಇಂದ್ರಿಯಗಳು, ಅನುಮಾನಾದಿಗಳಾಗುತ್ತವೆ. ಅಪ್ರಮಾದಲ್ಲಿ ಅತಿವ್ಯಾಪ್ತಿ ವಾರಣೆಗೋಸ್ಕರ ದೋಷಾಭಾವಸಹಕೃತವಾಗಿರಬೇಕೆಂದು ಹೇಳಿದೆ.

'ದೋಷಾಭಾವಸಹಕೃತಯಾವತ್ ಸ್ವಾಶ್ರಯಗ್ರಾಹಕಸಾಮಗ್ರೀಗ್ರಾಹ್ಯತ್ವಂ' ಜ್ಞಪ್ತಿಸ್ವತಸ್ತ್ವಮ್. ಸ್ವಶಬ್ದದಿಂದ ಪ್ರಮಾತ್ವವನ್ನು ತೆಗೆದುಕೊಳ್ಳಬೇಕು. ಅದಕ್ಕೆ ಆಶ್ರಯವಾದದ್ದು ಪ್ರಮಾಜ್ಞಾನ. ಇದನ್ನು ಯಾವಯಾವಸಾಮಗ್ರಿಗಳು ದೋಷಾಭಾವದಿಂದ ಕೂಡಿ ಗ್ರಹಿಸುತ್ತವೆಯೋ (ತಿಳಿಸಿಕೊಡುತ್ತವೆಯೋ) ಆ ಎಲ್ಲಾಸಾಮಗ್ರಿಗಳಿಂದ ಗ್ರಹಿಸಲ್ಪಡುವುದು. ತಾದೃಶಸಾಮಗ್ರೀಜನ್ಯಜ್ಞಾನವಿಷಯತ್ವಂ ತದ್ಗ್ರಾಹ್ಯತ್ವಮ್. ಇದೇ ಪ್ರಮಾತ್ವದಲ್ಲಿರುವ ಜ್ಞಪ್ತಿಸ್ವತಸ್ತ್ವ. ದೋಷಾಭಾವಸಹಕೃತಗಳಾದ ಜ್ಞಾನಸಾಮಗ್ರಿಗಳಿಂದ ಯಾವಯಾವ ಜ್ಞಾನಗಳು ಹುಟ್ಟುತ್ತವೆಯೋ, ಅವೆಲ್ಲವೂ ಯಾವಾಗಲೂ ಪ್ರಮಾತ್ವಾಶ್ರಯ ಪ್ರಮಾವಿಷಯಕಗಳಾಗಿಯೇ ತೋರುವಂತೆ ಪ್ರಮಾತ್ವವಿಷಯಕಗಳಾಗಿಯೂ ಇರುತ್ತವೆಯೆಂದು ತಾತ್ಪರ್ಯ.

ಮೀಮಾಂಸಕರಲ್ಲಿ ಪ್ರಾಭಾಕರರು—ಘಟಾದಿವಿಷಯದಲ್ಲಿ ಯಾವಪ್ರಮಾರೂಪವಾದ ವ್ಯವಸಾಯಜ್ಞಾನವಿದೆಯೋ ಅದರ ಸ್ವರೂಪವನ್ನು 'ಘಟತ್ವೇನ ಘಟಮಹಂ ಜಾನಾಮಿ' ಎಂದು ತಿಳಿಯಬೇಕು. ಈ ವ್ಯವಸಾಯಜ್ಞಾನವು ತನ್ನ ಸ್ವರೂಪವನ್ನು ತೋರಿಸಿಕೊಟ್ಟಂತೆ ತನ್ನಲ್ಲಿರುವ ಪ್ರಮಾಣ್ಯವನ್ನೂ ವಿಷಯೀಕರಿಸುತ್ತದೆ. ಆದುದರಿಂದ

ಯಾವತ್ಸ್ವಾಶ್ರಯಗ್ರಾಹಕಸಾಮಗ್ರೀಗ್ರಾಹ್ಯತ್ವವು ಪ್ರಮಾತ್ವದಲ್ಲಿಯೂ ಬರುತ್ತದೆ. ಈ ವ್ಯವಸಾಯಜ್ಞಾನದಲ್ಲಿ ಮಿತಿಮಾತೃಮೇಯವೆಂಬ ತ್ರಿಪುಟಿಯು ಪ್ರಕಾಶಿಸುತ್ತದೆ. ವ್ಯವಸಾಯಜ್ಞಾನವೇ ಮಿತಿ. ಜ್ಞಾನಾಶ್ರಯನಾದ ಆತ್ಮನೇ ಮಾತೃ. ಘಟಾದಿ ವಿಷಯಗಳೇ ಮೇಯವಾಗುತ್ತವೆ.

ಮುರಾರಿಮಿಶ್ರರೆಂಬ ಮೀಮಾಂಸಕರು 'ಅಯಂ ಘಟಃ' ಎಂಬ ವ್ಯವಸಾಯಜ್ಞಾನ ಬಂದಮೇಲೆ 'ಘಟತ್ವೇನ ಘಟಮಹಂ ಜಾನಾಮಿ' ಎಂಬ ಮಾನಸಪ್ರತ್ಯಕ್ಷವಾದ ಅನುವ್ಯವಸಾಯರೂಪಜ್ಞಾನವುಂಟಾಗುತ್ತದೆ. ಇದು ವ್ಯವಸಾಯಾತ್ಮಕಜ್ಞಾನವನ್ನೂ ಅದರಲ್ಲಿರುವಪ್ರಮಾತ್ವವನ್ನೂ ವಿಷಯೀಕರಿಸುವುದರಿಂದ ಸ್ವತೋಗ್ರಾಹ್ಯತ್ವ ಹೇಳುತ್ತಾರೆ.

ಭಾಟ್ಟರು ಸಕಲಜ್ಞಾನವನ್ನೂ ಅತೀಂದ್ರಿಯವೆಂದು ಅಂಗೀಕರಿಸುವುದರಿಂದ ಅವರಲ್ಲಿ ಪ್ರತ್ಯಕ್ಷಜ್ಞಾನವಿಲ್ಲ. 'ಅಯಂ ಘಟಃ' ಎಂಬ ಜ್ಞಾನಬಂದಮೇಲೆ ಘಟಾದಿ ವಿಷಯಗಳಲ್ಲಿ 'ಜ್ಞಾತತಾ' ಎಂಬ ಧರ್ಮ ಹುಟ್ಟುತ್ತದೆ. ಆಮೇಲೆ 'ಜ್ಞಾತೋ ಘಟಃ' ಎಂಬ ಜ್ಞಾತತಾವಿಷಯಕವಾದ ಪ್ರತ್ಯಕ್ಷವಾಗುತ್ತದೆ. ಈ ಜ್ಞಾತತಾರೂಪಹೇತುವಿನಿಂದ ಜ್ಞಾನವು ಅನುಮಿತವಾಗುತ್ತದೆ. 'ಘಟಃ—ಘಟತ್ವವದ್ವಿಶೇಷ ಕಘಟತ್ವಪ್ರಕಾರಕ ಜ್ಞಾನವಿಷಯಃ—ಘಟತ್ವಪ್ರಕಾರಕಜ್ಞಾತತಾವತ್ತ್ವಾತ್ । ಯನ್ನೈವಂ ತನ್ನೈವಂ ಯಥಾ ಆತ್ಮಾ' ಎಂದು ವ್ಯತಿರೇಕದೃಷ್ಟಾಂತ ಹೇಳುತ್ತಾರೆ. ಈ ಅನುಮಾನಾತ್ಮಕ ಜ್ಞಾನವು 'ಅಯಂಘಟಃ' ಎಂಬ ಜ್ಞಾನವೂ ಅದರಲ್ಲಿರುವ ಪ್ರಮಾತ್ವವನ್ನೂ ಗ್ರಹಿಸುವುದರಿಂದ ಸ್ವತೋಗ್ರಾಹ್ಯತ್ವ ಸಿದ್ಧವಾಗುತ್ತದೆ. (ಯಾವತ್ಸ್ವಾಶ್ರಯಗ್ರಾಹಕಸಾಮಗ್ರೀಗ್ರಾಹ್ಯತ್ವರೂಪ ಸ್ವತೋಗ್ರಾಹ್ಯತ್ವ.)

ವೇದಾಂತಿಗಳು 'ಅಯಂಘಟಃ' ಎಂಬ ವೃತ್ತಿಜ್ಞಾನವನ್ನೇ ಪ್ರಮಾತ್ವಾಶ್ರಯ ಜ್ಞಾನವೆಂದು ಹೇಳುತ್ತಾರೆ. ಸಾಕ್ಷಿಚೈತನ್ಯವೇ ಈ ವೃತ್ತಿಜ್ಞಾನವನ್ನೂ ಅದರಲ್ಲಿರುವ ಪ್ರಮಾತ್ವವನ್ನೂ ವಿಷಯೀಕರಿಸುತ್ತಾ ಪ್ರಕಾಶಿಸುವುದರಿಂದ ಸ್ವತೋಗ್ರಾಹ್ಯತ್ವ ಇವರಲ್ಲಿಯೂ ಸಂಗತವಾಗುತ್ತದೆ.

ನೈಯಾಯಿಕರುಮಾತ್ರ ಸ್ವತೋಗ್ರಾಹ್ಯತ್ವವನ್ನು ಒಪ್ಪುವುದಿಲ್ಲ. ಅನುವ್ಯವಸಾಯದಿಂದ ವ್ಯವಸಾಯಜ್ಞಾನವೂ, ತದ್ಗತಪ್ರಾಮಾಣ್ಯವೂ ಗೃಹೀತವಾಗುವುದಾದರೆ ಸಂಶಯಕ್ಕೆ ಅವಕಾಶ ಎಲ್ಲಿ ? ನಿಶ್ಚಯಪ್ರತಿಬಂಧಕವಾದ ಈ ಸಂಶಯಜ್ಞಾನವು ಅನಿಶ್ಚಿತ ಪ್ರಾಮಾಣ್ಯದಶಾಪನ್ನಜ್ಞಾನದಲ್ಲಿ ಸರ್ವಾನುಭವಸಿದ್ಧವಾದುದರಿಂದ ಇಲ್ಲವೆನ್ನಲು ಸಾಧ್ಯವಿಲ್ಲ. 'ಇದಂ ಜಲಂ' ಎಂಬ ವ್ಯವಸಾಯಜ್ಞಾನಬಂದಮೇಲೆ 'ಜಲಮಹಂಜಾನಾಮಿ' ಎಂಬ ಅನುವ್ಯವಸಾಯಾತ್ಮಕಜ್ಞಾನವು ಉಂಟಾಗಿ ಇದು ಪೂರ್ವಜ್ಞಾನವನ್ನು ವಿಷಯೀಕರಿಸಬಹುದು. ಆದರೆ ಅದರಲ್ಲಿರುವ ಪ್ರಮಾತ್ವವನ್ನೂ ವಿಷಯೀಕರಿಸುವುದಿಲ್ಲ. ಆದುದರಿಂದ ಮೊದಲು ಜಲಜ್ಞಾನ. ಆಮೇಲೆ ತದ್ವಿಷಯಕವಾದ ಇಚ್ಛೆ. ಆಮೇಲೆ ಜಲದಲ್ಲಿ ಪ್ರವೃತ್ತಿ. ಅದರಿಂದ ಜಲಪ್ರಾಪ್ತಿ. ಹೀಗೆ ಕ್ರಮ ಲೋಕದಲ್ಲಿರುವುದನ್ನು ವ್ಯತ್ಯಾಸಮಾಡಲು ಯಾರಿಂದಲೂ ಸಾಧ್ಯವಿಲ್ಲ. ಸಂವಾದಿಪ್ರವೃತ್ತಿಯಿಂದ ಜಲಜ್ಞಾನ

ನಿಷ್ಠಪ್ರಮಾತ್ವವು ಅನುಮಾನದಿಂದಲೇ ಸಿದ್ಧವಾಗುತ್ತದೆ. ಅನುಮಾನಾಕಾರ. 'ಪೂರ್ವೋತ್ಪನ್ನಂ ಜಲಜ್ಞಾನಂ—ಪ್ರಮಾ— ಸಫಲಪ್ರವೃತ್ತಿಜನಕತ್ವಾತ್ । ಯನ್ನೈವಂ, ತನ್ನೈವಂ, ಯಥಾ ಶುಕ್ತೌ 'ಇದಂ ರಜತಂ' ಇತಿ ಅಪ್ರಮಾ" ॥ ಹೀಗೆ ಪ್ರಮಾತ್ವವು ಪ್ರಮಾಜ್ಞಾನಗ್ರಾಹಕ ಸಾಮಗ್ರಿಗಳಿಗಿಂತ ಬೇರೆಯಾದ ಅನುಮಾನದಿಂದ ವಿಷಯೀಕರಿಸಲ್ಪಡುವುದರಿಂದ ಪರತೋಗ್ರಾಹ್ಯತ್ವವು ಸಿದ್ಧವಾಗುತ್ತದೆ. 'ಜ್ಞಾನಮಾತ್ರಗ್ರಾಹಕಸಾಮಗ್ರೀಭಿನ್ನಸಾಮಗ್ರೀಗ್ರಾಹ್ಯತ್ವಂ, ಜ್ಞಪ್ತಿಪರಸ್ತ್ವಮ್' 'ಜಲಮಹಂ ಜಾನಾಮಿ' ಎಂಬ ಮಾನಸಪ್ರತ್ಯಕ್ಷರೂಪವಾದ ಅನುವ್ಯವಸಾಯಾತ್ಮಕ ಜ್ಞಾನಂ 'ಇದಂ ಜಲಂ' ಎಂಬ ವ್ಯವಸಾಯಜ್ಞಾನವನ್ನೂ, ಆತ್ಮನನ್ನೂ ವಿಷಯೀಕರಿಸುತ್ತದೆ. ವ್ಯವಸಾಯಜ್ಞಾನಕ್ಕೆ ವಿಷಯವಾದ ಜಲವನ್ನೂ ವಿಷಯೀಕರಿಸುತ್ತದೆ. ಇಂದ್ರಿಯಾರ್ಥಸನ್ನಿಕರ್ಷದಿಂದ ಉಂಟಾದ ಜ್ಞಾನವೇ ಪ್ರತ್ಯಕ್ಷವೆಂದುದರಿಂದ ಮನೋರೂಪ ಇಂದ್ರಿಯದೊಡನೆ ಇವುಗಳಿಗೆ ಸಂಬಂಧಹೇಳಬೇಕು. ಆತ್ಮ, ಮನಸ್ಸು ಎರಡೂ ದ್ರವ್ಯವಾದುದರಿಂದ 'ದ್ರವ್ಯಯೋರೇವ ಸಂಯೋಗಃ' ಎಂಬ ನಿಯಮದಿಂದ ಅವೆರಡಕ್ಕೆ ಸಂಯೋಗಸಂಬಂಧ. (ಮನಃಸಂಯುಕ್ತ ಆತ್ಮನಲ್ಲಿ ಜ್ಞಾನವು ಸಮವಾಯದಿಂದ ಇದೆ.) ಬಾಹ್ಯಪದಾರ್ಥಗಳಾದ ಜಲಾದಿಗಳೊಡನೆ ಮನಸ್ಸಿಗೆ ಜ್ಞಾನಲಕ್ಷಣಾರೂಪವಾದ ಅಲೌಕಿಕಸಂಬಂಧ. 'ಇದಂ ಜಲಂ' ಎಂಬ ವ್ಯವಸಾಯಾತ್ಮಕಜ್ಞಾನವೇ ಜಲಾದಿಗಳೊಡನೆ ಮನಸ್ಸಿಗಿರುವ ಸಂಬಂಧ. ಈ ಜ್ಞಾನವು ಸ್ವಸಂಯುಕ್ತಸಮವೇತಸಂಬಂಧದಿಂದ ಮನಸ್ಸಿನಲ್ಲಿದೆಯೆಂದು ತಿಳಿಯಬೇಕು ವಿಷಯತಾಸಂಬಂಧದಿಂದ ಜಲದಲ್ಲಿರುತ್ತದೆ. ಸಮವಾಯಸಂಬಂಧದಿಂದ ಆತ್ಮನಲ್ಲಿದೆ. ಜ್ಞಾನಮಾತ್ರಗ್ರಾಹಕಸಾಮಗ್ರಿಗಳೆಂದರೆ ಹೀಗೆ ಹಿಂದೆ ಹೇಳಿದ ಮನಃಸಂಯೋಗಾದಿರೂಪಗಳಾಗುತ್ತವೆ. ಇದರಿಂದ ಪ್ರಮಾತ್ವ ತಿಳಿಯುವುದಿಲ್ಲ. ಈ ಸಾಮಗ್ರಿಗಳಿಗಿಂತ ಬೇರೆಯಾದ ಅನುಮಾನಾದಿಸಾಮಗ್ರಿಗಳಿಂದ ಅದು ಅನುಮಿತವಾಗುತ್ತದೆ. ಇದಕ್ಕೇ ಪರತೋಗ್ರಾಹ್ಯವೆಂದು ಹೇಳುತ್ತಾರೆ. (ಇದು ಜ್ಞಪ್ತಿಪರಸ್ತ್ವ.)

ಹೀಗೆಯೇ ಜ್ಞಾನಮಾತ್ರೋತ್ಪತ್ತಿಹೇತುಗಳಾದ ಸಾಮಗ್ರಿಗಳಿಂದ ಪ್ರಮಾತ್ವವೂ ಹುಟ್ಟುತ್ತದೆಂದರೆ ಆಗ ಎಲ್ಲಾ ಜ್ಞಾನಗಳೂ ಪ್ರಮಾತ್ಮಕಗಳಾಗಬೇಕಾಗುತ್ತವೆ. ಇಂದ್ರಿಯದಿಂದಲೇ ಬರುವ ಶುಕ್ತಿಯಲ್ಲಿ ರಜತಜ್ಞಾನವೂ ಪ್ರಮಾ ಆಗಬೇಕಾಗುತ್ತದೆ. ಆದರೆ ಅದು ಅಪ್ರಮಾ ಎಂದು ಲೋಕಸಿದ್ಧವಾಗಿದೆ. ಆದುದರಿಂದ ಜ್ಞಾನಮಾತ್ರೋತ್ಪಾದಕಸಾಮಗ್ರಿಗಳಿಂದ ಬೇರೆಯಾದ ಸಾಮಗ್ರಿಯಿಂದಲೇ ಪ್ರಮಾತ್ವ ಹುಟ್ಟುತ್ತದೆ. ಅದು ಗುಣವೆಂದು ಹಿಂದೆ ಹೇಳಿದೆ. ('ಪ್ರತ್ಯಕ್ಷೇ ತು ವಿಶೇಷ್ಯೇಣ—ಇತ್ಯಾದಿಪದ್ಯಗಳಲ್ಲಿ) ಈ ಗುಣಜನ್ಯತ್ವಕ್ಕೇ (ಪ್ರಮಾತ್ವದಲ್ಲಿರುವ) ಉತ್ಪತ್ತಿಪರತಸ್ತ್ವವೆಂದು ಹೇಳುತ್ತಾರೆ.

ನನು ಸರ್ವೇಷಾಂ ಜ್ಞಾನಾನಾಂ ಯಥಾರ್ಥತ್ವಾತ್ ಪ್ರಮಾಲಕ್ಷಣೇ ತದ್ವಿಶೇಷ್ಯಕತ್ವಂ ವಿಶೇಷಣಂ ವ್ಯರ್ಥಮ್ । ನ ಚ ರಂಗೇ ರಜತಾರ್ಥಿನಃ ಪ್ರವೃತ್ತಿರ್ಭ್ರಮಜನ್ಯಾ

ನ ಸ್ಯಾತ್, ತನ ಮತೇ ಭ್ರಮಸ್ಯಾಭಾವಾದಿತಿ ವಾಚ್ಯಮ್ । ತತ್ರ ಹಿ ದೋಷಾಧೀನಸ್ಯ ಪೂರೋವರ್ತಿನಿ ಸ್ವತಂತ್ರೋಪಸ್ಥಿತರಜತಭೇದಾಗ್ರಹಸ್ಯ ಹೇತುತ್ವಾತ್, ಸತ್ಯರಜತಸ್ಥಲೇ ತು ವಿಶಿಷ್ಟಜ್ಞಾನಸ್ಯ ಸತ್ವಾತ್ತದೇವ ಕಾರಣಮ್, ಅಸ್ತು ವಾ ತತ್ರಾಪಿ ಭೇದಾಗ್ರಹಃ ಸ ಏವ ಕಾರಣಮಿತಿ । ನಚಾನ್ಯಥಾಖ್ಯಾತಿಃ ಸಂಭವತಿ, ರಜತಪ್ರತ್ಯಕ್ಷಕಾರಣರಜತಸನ್ನಿಕರ್ಷಸ್ಯಾಭಾವಾತ್, ರಂಗೇ ರಜತ ಬುದ್ಧೇರನುಪಪತ್ತೇರಿತಿ ಚೇನ್ನ ॥

ಅಖ್ಯಾತಿವಾದಿಯಾದ ಪ್ರಾಭಾಕರನು ಶಂಕಿಸುತ್ತಾನೆ. 'ನನು—' ಇತಿ. ಎಲ್ಲಾ ಜ್ಞಾನವೂ ಯಥಾರ್ಥವಾದುದರಿಂದ, ಸಂವಾದಿಪ್ರವೃತ್ತಿಜನಕವಾದುದರಿಂದ, ಅನ್ಯಥಾಖ್ಯಾತಿಯೇ ಇಲ್ಲದಿರುವಾಗ, ಅದನ್ನು ವ್ಯಾವೃತ್ತಿಪಡಿಸಲು, ಪ್ರಮಾಲಕ್ಷಣದಲ್ಲಿ ತದ್ವದ್ವಿಶೇಷ್ಯಕತ್ವವಿಶೇಷಣವನ್ನು ಏಕೆ ಹೇಳಬೇಕು. ಭ್ರಮೆಯೇ ಇಲ್ಲದಿರುವಾಗ ವ್ಯಾವರ್ತ್ಯವಿಲ್ಲದೆ ಅದು ವ್ಯರ್ಥವಾಗುತ್ತದೆ.

ಭ್ರಮಸ್ಥಳದಲ್ಲಿ ನೈಯಾಯಿಕರು ಅನ್ಯಥಾಖ್ಯಾತಿಯನ್ನು ಅಂಗೀಕರಿಸಿರುತ್ತಾರೆ. ಕೇವಲ 'ತತ್ಪ್ರಕಾರಕಂ ಜ್ಞಾನಂ ಪ್ರಮಾ' ಎನ್ನುವುದಾದರೆ ಅನ್ಯಥಾಖ್ಯಾತಿರೂಪ ಭ್ರಮಸ್ಥಳದಲ್ಲಿ (ಶುಕ್ತಿರಜತಾದಿಗಳಲ್ಲಿ) ಈ ಲಕ್ಷಣಬರುವುದರಿಂದ ಅತಿವ್ಯಾಪ್ತಿ ಬರುತ್ತದೆ. ಆದುದರಿಂದ ತದ್ವದ್ವಿಶೇಷ್ಯಕವೆಂದು ಹೇಳಿದೆ. 'ಖ್ಯಾನಂ ಖ್ಯಾತಿಃ' ಕಥನ ಅಥವಾ ಭಾನವೇ ಖ್ಯಾತಿಯಾಗುತ್ತದೆ. ಅನ್ಯಥಾಖ್ಯಾತಿಯೆಂದರೆ ಪ್ರಕಾರಾಂತರದಿಂದ ಪ್ರತೀತಿ ಯೆಂದರ್ಥ. ಶುಕ್ತಿತ್ವಪ್ರಕಾರದಿಂದ ಕೂಡಿರುವ ಶುಕ್ತಿಯು ರಜತತ್ವಪ್ರಕಾರದಿಂದ ತಿಳಿಯುವುದು ಅನ್ಯಥಾಖ್ಯಾತಿಯಾಗುತ್ತದೆ. ಮೀಮಾಂಸಕರು ಇದನ್ನು ಒಪ್ಪುವುದಿಲ್ಲ. ಯಾವವಸ್ತುವು ಯಾವರೀತಿಯಾಗಿರುತ್ತದೆಯೋ ಅದು ಅದೇ ರೂಪದಿಂದ ತೋರುವುದೇ ವಿನಾ ಬೇರೆರೀತಿಯಿಂದ ಅದು ತೋರುವುದೇ ಇಲ್ಲವೆಂದು ಅವರ ಮತ. ಜ್ಞಾನ ಸಾಮಾನ್ಯವೂ ಯಥಾರ್ಥವೇ ಆದುದರಿಂದ ಪ್ರಮಾಲಕ್ಷಣದಲ್ಲಿ ಭ್ರಮವ್ಯಾವೃತ್ತಿ ಗೋಸ್ಕರ 'ತದ್ವದ್ವಿಶೇಷ್ಯಕತ್ವೇ ಸತಿ' ಎಂಬ ವಿಶೇಷಣದಳ ಬೇಕಾಗಿಲ್ಲವೆಂದು ತಾತ್ಪರ್ಯ. ಆಗ ನೈಯಾಯಿಕನು ಆಶಂಕಿಸುತ್ತಾನೆ. 'ನಚರಂಗೇ—' ಇತಿ. ರಂಗೇ—ಶುಕ್ತಿ ಯಲ್ಲಿ, ರಜತಾರ್ಥಿನಃ— ರಜತಸಂಸ್ಕಾರವುಳ್ಳವನ, ಪ್ರವೃತ್ತಿಯು ಭ್ರಮಜನ್ಯವಾಗದೇ ಹೋಗಬೇಕಾಗುತ್ತದೆ. ಶುಕ್ತಿಯನ್ನು ನೋಡಿ ರಜತಸಂಸ್ಕಾರವುಳ್ಳವನಿಗೆ ರಜತಜ್ಞಾನ ವುಂಟಾಗಿ ಅಲ್ಲಿ ಅದನ್ನು ತೆಗೆದುಕೊಳ್ಳಲು ಪ್ರವರ್ತಿಸುತ್ತಾನೆ. ಇಷ್ಟಸಾಧನತಾಜ್ಞಾನ ದಿಂದ ಅವನ ಪ್ರವೃತ್ತಿಪ್ರಸಿದ್ಧವಾಗಿದೆ. ಇಷ್ಟಸಾಧನತಾಜ್ಞಾನದಿಂದ ಅದು ಬಂದರೂ ಅದು ಭ್ರಮೆಯಿಂದ ಆದುದಷ್ಟೆ. ಆದುದರಿಂದ ಪ್ರಮಾ ಆಗುವುದಿಲ್ಲ. ರಜತತ್ವ ಪ್ರಕಾರಕಜ್ಞಾನವಾದರೂ, ರಜತತ್ವದಿಂದಕೂಡಿದಶುಕ್ತಿ ಅಲ್ಲಿ ವಿಶೇಷ್ಯವಲ್ಲ. (ಶುಕ್ತಿತ್ವ ಪ್ರಕಾರದಿಂದ ಕೂಡಿದ ಶುಕ್ತಿ ವಿಶೇಷ್ಯವಾಗಿದೆ.) ಆದುದರಿಂದ ವಿಶೇಷಣ ಹೇಳಲೇ ಬೇಕೆಂದು ಅವನ ಸಿದ್ಧಾಂತ. ಅದಕ್ಕೆ ಪ್ರಾಭಾಕರನ ಸಮಾಧಾನ. 'ತತ್ರಹಿ—'

ಇತಿ. ಪುರೋವರ್ತಿಯಾದ ಶುಕ್ತಿಯಲ್ಲಿ ರಜತಜ್ಞಾನಬರಲು ಭ್ರಮಕಾರಣವಲ್ಲ. ದೋಷಾಧೀನವಾದ ರಜತವಿವೇಕಜ್ಞಾನಾಭಾವವೇ ಕಾರಣವಾಗುತ್ತದೆ. ಅಂದರೆ ಶುಕ್ತಿಯಲ್ಲಿ ಅವನಿಗೆ 'ಇದಂ ರಜತಂ' ಎಂಬ ಜ್ಞಾನ ಬರುತ್ತದಷ್ಟೆ. ಅಲ್ಲಿ ರಾಜತಾರ್ಥಿಯಾದ ಆ ಪುರುಷನ ಪ್ರವೃತ್ತಿ ನಿಷ್ಫಲವೇ. ನಿಷ್ಫಲಪ್ರವೃತ್ತಿಯಲ್ಲಿ ಕಾರಣ ನೈಯಾಯಿಕನು ಹೇಳುವ ಅನ್ಯಥಾಖ್ಯಾತಿಯಲ್ಲ. ತಮೋಲೋಭಾದಿದೋಷಕಾರಣದಿಂದ ಸ್ವತಂತ್ರ ಸಂಸ್ಕಾರದಿಂದ ಉಪಸ್ಥಿತವಾದ ರಜತಾದಿಪದಾರ್ಥದ ಭೇದಾಗ್ರಹವು ಅಲ್ಲಿ ಕಾರಣ. ಶುಕ್ತಿಯಲ್ಲಿ ರಜತಭೇದಜ್ಞಾನ ಬಾರದಿರುವುದು. ಇದೇ ವಿಸಂವಾದಿಪ್ರವೃತ್ತಿಯಲ್ಲಿ ಕಾರಣವೆಂದು ತಿಳಿಯಬೇಕು.

ಲೋಭಾದಿದೋಷ ಪ್ರಮಾತೃವಿನಲ್ಲಿಯೂ, ಪಿತ್ತಾದಿದೋಷ ಪ್ರಮಾಣದಲ್ಲಿಯೂ, ಸಾದೃಶ್ಯಾದಿದೋಷ ಪ್ರಮೇಯದಲ್ಲಿಯೂ ಇರುತ್ತವೆ. ಈ ಮೂರು ದೋಷಗಳು ಎಲ್ಲಿ ಬರುತ್ತವೆಯೋ ಅಲ್ಲಿ ಶುಕ್ತಿಕಾದಿಪದಾರ್ಥಗಳಲ್ಲಿ ರಜತಾದಿರೂಪವಾದ ಭ್ರಮಾತ್ಮಕ ಬುದ್ಧಿಯುಂಟಾಗುತ್ತದೆಯೆಂದು ನೈಯಾಯಿಕನ ಮತ. ಆದರೆ ಜ್ಞೇಯಾಧೀನಂ ಜ್ಞಾನಂ' (ವಿಷಯಾಧೀನವಾದದ್ದು ಜ್ಞಾನ) ಎಂಬ ನಿಯಮವಿದೆ. ಹೀಗಿರುವಾಗ ಭ್ರಮಸ್ಥಳದಲ್ಲಿ (ವಿಸಂವಾದಿಸ್ಥಳ) ಯೂ ಜ್ಞೇಯಾಧೀನವಾಗಿಯೇ ಜ್ಞಾನಬೇಕಷ್ಟೆ. ಇಂತಹ ಸ್ಥಳದಲ್ಲಿ ಹಿಂದೆ ವಿವರಿಸಿದ ದೋಷಗಳು ಶುಕ್ತಿರಜತಗಳ ಭೇದಾಗ್ರಹದಲ್ಲಿಯೇ ಕಾರಣಗಳಾಗುತ್ತವೆ. ವಸ್ತುವಿನ ಅನ್ಯಥಾಭಾವದಲ್ಲಿ ಎಂದೂ ಕಾರಣವಾಗುವುದಿಲ್ಲ. ಈ ಭೇದಾಗ್ರಹಜ್ಞಾನದಿಂದ ಪುರುಷನಲ್ಲಿ ನಿಷ್ಫಲಪ್ರವೃತ್ತಿಯುಂಟಾಗುತ್ತದೆ. ಆದುದರಿಂದ ಶುಕ್ತಿಯಲ್ಲಿ ರಜತಾರ್ಥಿಯ ಪ್ರವೃತ್ತಿಗೋಸ್ಕರ ಅನ್ಯಥಾಖ್ಯಾತಿಯನ್ನಂಗೀಕರಿಸಬೇಕಾಗಿಲ್ಲವೆಂದು ಅಖ್ಯಾತವಾದಿಯಾದ ಪ್ರಾಭಾಕರನ ಸಿದ್ಧಾಂತ.

ಮೀಮಾಂಸಕರು ಅಖ್ಯಾತವಾದಿಗಳು. ಒಬ್ಬನಿಗೆ ಶುಕ್ತಿಯಲ್ಲಿ ರಜತಜ್ಞಾನ ಬರುತ್ತದೆಂದು ತಿಳಿಯೋಣ. ಅಲ್ಲಿ ಕಾರಣವನ್ನು ವಿಚಾರಿಸಿ ತಿಳಿಯಬೇಕು. ತಿಮಿರಾದಿಪ್ರಮಾಣದೋಷದೂಷಿತನಯನನಾದ ಅವನಿಗೆ ಮುಂದಿರುವ ವಸ್ತುವಿನಲ್ಲಿ ವಿಶೇಷ್ಯಾಂಶವು ಗೃಹೀತವಾಗದಿರುವುದರಿಂದ ಸಾಮಾನ್ಯಾಂಶವಿಷಯಕವಾಗಿ 'ಇದಂ' ಎಂಬ ಪ್ರತ್ಯಕ್ಷಾತ್ಮಕ ಜ್ಞಾನ ಬರುತ್ತದೆ (ಇದು ಸನ್ನಿಕರ್ಷದಿಂದಲೇ ಹುಟ್ಟುವುದು) ಆಗ ಲೋಭಾದಿಪ್ರಮಾತೃದೋಷದಿಂದ ಕೂಡಿದ ಸಾದೃಶ್ಯಾದಿದೋಷದಿಂದ ರಜತಸಂಸ್ಕಾರವು ಉದ್ಬುದ್ಧವಾಗಿ ಅದರಿಂದ ಸತ್ಯರಜತವಿಷಯಕವಾದ ಸ್ಮೃತಿರೂಪವಾದ ಎರಡನೆಯ ಜ್ಞಾನವು ಬರುತ್ತದೆ. ಆಗ ಅವನಿಗೆ ಈ ಎರಡು ಜ್ಞಾನಗಳವಿವೇಕ ತಿಳಿಯುವುದಿಲ್ಲ. ಅಂದರೆ ತನಗೆ ಎರಡು ಜ್ಞಾನವುಂಟಾಗಿದೆಯೆಂದು ತಿಳಿಯುವುದಿಲ್ಲ. ವಿಭಿನ್ನಜ್ಞಾನವಿವೇಕಕ್ಕೆ ಪ್ರತಿಸ್ಪರ್ಧಿಯಾದ ಈ ಒಂದು ಜ್ಞಾನವೇ ಅವಿವೇಕವೆನಿಸುತ್ತದೆ. ಅತದ್ರೂಪದಲ್ಲಿ ಪರ್ಯಾವಸಾನಗೊಂಡ ಭೇದಾಗ್ರಹವೆಂದರೂ ಇದೇ. ಈ ಭೇದಾಗ್ರಹದಿಂದಲೇ ಒಂದುವಸ್ತುವಿನಲ್ಲಿ ಇನ್ನೊಂದು ವಸ್ತುವಿನಜ್ಞಾನ ಬರುವುದು. ಆದುದರಿಂದ ಭ್ರಾಂತಿಯೆಂಬುದಿಲ್ಲ. 'ನೇದಂ ರಜತಮ್' ಎಂಬ ಬಾಧಜ್ಞಾನ ಬರುವುದರಿಂದ

ಭ್ರಾಂತಿ ಇಲ್ಲವೆಂದು ಹೇಳುವುದು ಹೇಗೆ ? ಎಂದು ಆಶಂಕಿಸಬಾರದು. ಅಲ್ಲಿ ಸತ್ಯ ರಜತಕ್ಕೆ ಸ್ವರೂಪದಿಂದ ಬಾಧ ತೋರುವುದಿಲ್ಲ. ಮುಂದಿರುವ (ಶುಕ್ತ್ಯಾದಿ) ವಸ್ತುವಿನಲ್ಲಿ ಸಂಸರ್ಗಬಾಧ ತೋರುವುದು. ಭೇದಾಗ್ರಹ ಅಂದರೆ ಅಭೇದ ಬಂದದ್ದು ಹೋಗುತ್ತದೆಂದರ್ಥ. ಹೀಗೆ ಪ್ರತ್ಯಕ್ಷಾತ್ಮಕವಾದ ಜ್ಞಾನ, ಸ್ಮರಣಾತ್ಮಕಜ್ಞಾನ ಈ ಎರಡು ಜ್ಞಾನಗಳಿಗೆ ವಿವೇಕತಿಳಿಯದಿರುವುದೇ ಭ್ರಮೆಗೆ ಕಾರಣವಾಗುತ್ತದೆ. ಆದುದರಿಂದಲೇ ಪುರೋವರ್ತಿವಿಶೇಷಾನವಚ್ಛೇದದಿಂದ ಶುಕ್ತಿರಜತಾದಿಪದಾರ್ಥಗಳಲ್ಲಿ ಕೆಲವರಿಗೆ ನಿಷ್ಫಲಪ್ರವೃತ್ತಿಯುಂಟಾಗುತ್ತದೆಂದು ಅಖ್ಯಾತಿವಾದಿಗಳ ಸಿದ್ಧಾಂತ. ಸಾಂಖ್ಯರೂ ಇದನ್ನಂಗೀಕರಿಸಿರುತ್ತಾರೆ.

'ಸತ್ಯರಜತ—' ಇತಿ. ಸತ್ಯರಜತವಿಷಯಕಪ್ರವೃತ್ತಿಯಲ್ಲಿ 'ಇದಂ ರಜತಂ' ಎಂಬ ರಜತತ್ವಪ್ರಕಾರಕರಜತವಿಶೇಷ್ಯಕಜ್ಞಾನವೇ ಕಾರಣವಾಗುತ್ತದೆ. ಕಾರ್ಯಕಾರಣಗಳನ್ನು ಹೀಗೆ ಬೇರೆಬೇರೆಯಾಗಿ ಹೇಳುವುದಕ್ಕಿಂತಲೂ ಲಾಘವದಿಂದ ಭ್ರಮುಪ್ರಮಾಸಾಧಾರಣವಾಗಿ ಒಂದೇ ಕಾರ್ಯಕಾರಣ ಹೇಳಬಹುದೆಂದು ತೋರಿಸುತ್ತಾನೆ. 'ಅಸ್ತು ವಾ—' ಇತಿ. ಸತ್ಯರಜತವಿಷಯಕಪ್ರವೃತ್ತಿಯಲ್ಲಿಯೂ, ರಂಗರಜತವಿಷಯಕ ಪ್ರವೃತ್ತಿಯಲ್ಲಿಯೂ ಭೇದಜ್ಞಾನಾಭಾವವೇ ಕಾರಣ ವೆಂದರ್ಥ. ತನ್ನಲ್ಲಿ ತನ್ನಭೇದವಿಲ್ಲವಷ್ಟೆ. ಸತ್ಯರಜತವಿಷಯಕಪ್ರವೃತ್ತಿಯಲ್ಲಿ ರಜತದಲ್ಲಿ ಬಂದ ರಜತಭೇದಾಭಾವಜ್ಞಾನ ಕಾರಣ. ರಂಗರಜತವಿಷಯಕಪ್ರವೃತ್ತಿಯಲ್ಲಿ ಪ್ರತ್ಯಕ್ಷಸ್ಮರಣಾತ್ಮಕಜ್ಞಾನದ್ವಯಭೇದಾಭಾವಜ್ಞಾನವು ಕಾರಣ. ಭೇದಾಗ್ರಹತ್ವೇನ ಎರಡೂ ಒಂದಾಗುತ್ತದೆ. ಇದಕ್ಕೋಸ್ಕರ ಅನ್ಯಥಾಖ್ಯಾತಿಯನ್ನು ಅಂಗೀಕರಿಸಬೇಕಾಗಿಲ್ಲ. ಅದಕ್ಕೆ ಕಾರಣತೋರಿಸುತ್ತಾನೆ. 'ರಜತ—' ಇತಿ. ರಜತದೊಡನೆ ಚಕ್ಷುಃ ಸನ್ನಿಕರ್ಷಉಂಟಾಗಿದ್ದರೆ ಆಗ ರಜತಪ್ರತ್ಯಕ್ಷ ಬರುತ್ತಿತ್ತು. ಭ್ರಮಸ್ಥಳದಲ್ಲಿ ರಜತವೇ ಇಲ್ಲದಿರುವಾಗ ಸನ್ನಿಕರ್ಷ ಎಲ್ಲಿಂದ ಬರಬೇಕು ? ಸನ್ನಿಕರ್ಷವಿಲ್ಲವಾದರೆ ರಜತಪ್ರತ್ಯಕ್ಷವೂ ಇಲ್ಲ. ಪ್ರತ್ಯಕ್ಷಬಾರದಿದ್ದರೆ ರಜತಜ್ಞಾನವೂ ಬರಲಾರದು. ಆದುವರಿಂದ ನೈಯಾಯಿಕನ ವಾದರೀತಿ ಸಮಂಜಸವಲ್ಲವೆಂದು ಮೀಮಾಂಸಕನ ಮತ. ಜ್ಞಾನಲಕ್ಷಣಪ್ರತ್ಯಾಸತ್ತಿಕಲ್ಪನೆ ಮಾಡಿದರೆ ಅದು ಗೌರವಗ್ರಸ್ತವಾಗುವುದೆಂದೂ ಅವನ ಸಿದ್ಧಾಂತ.

ಸತ್ಯರಜತಸ್ಥಲೇ ಪ್ರವೃತ್ತಿಂ ಪ್ರತಿ ವಿಶಿಷ್ಟಜ್ಞಾನಸ್ಯ ಹೇತುತಾಯಾಃ ಕ್ಲೃಪ್ತತ್ವಾದನ್ಯತ್ರಾಪಿ ತತ್ಕಲ್ಪನಾತ್ । ನ ಚ ಸಂವಾದಿಪ್ರವೃತ್ತೌ ತತ್ಕಾರಣಂ, ವಿಸಂವಾದಿಪ್ರವೃತ್ತೌ ಚ ಭೇದಾಗ್ರಹಃ ಕಾರಣಮಿತಿ ವಾಚ್ಯಮ್ । ಲಾಘವೇನ ಪ್ರವೃತ್ತಿಮಾತ್ರೇ ತಸ್ಯ ಹೇತುತ್ವಕಲ್ಪನಾತ್ ॥ ಇತ್ಥಂ ಚ ರಂಗೇ ರಜತತ್ವವಿಶಿಷ್ಟ ಬುದ್ಧ್ಯನುರೋಧೇನ ಜ್ಞಾನಲಕ್ಷಣಪ್ರತ್ಯಾಸತ್ತಿಕಲ್ಪನೇಽಪಿ ನ ಕ್ಷತಿಃ । ಫಲಮುಖಗೌರವಸ್ಯಾ ದೋಷತ್ವಾತ್ । ಕಿಂಚ ಯತ್ರ ರಂಗರಜತಯೋರಿಮೇ ರಜತೇ ರಂಗೇ ವೇತಿ ಜ್ಞಾನಂ ಜಾತಂ ತತ್ರ ನ ಕಾರಣಬಾಧೋಽಪಿ । ಅಪಿ ಚ ಯತ್ರ ರಂಗರಜತಯೋರಿಮೇ

ರಜತರಂಗೇ ಇತಿ ಜ್ಞಾನಂ ತತ್ರೋಭಯತ್ರ ಯುಗಪತ್ಪ್ರವೃತ್ತಿನಿವೃತ್ತೌ ಸ್ಯಾತಾಂ, ರಂಗೇ ರಂಗಭೇದಗ್ರಹೇ ರಜತೇ ರಜತಭೇದಗ್ರಹೇ ಚಾನ್ಯಥಾಖ್ಯಾತಿ ಭಯಾತ್, ತ್ವನ್ಮತೇ ದೋಷಾದೇವ ರಂಗೇ ರಜತಭೇದಾಗ್ರಹಸ್ಯ ರಜತೇ ರಂಗ ಭೇದಾಗ್ರಹಸ್ಯ ಚ ಸತ್ತ್ವಾತ್ । ಕಿಂಚಾನುಮಿತಿಂ ಪ್ರತಿ ಭೇದಾಗ್ರಹಸ್ಯ ಹೇತು ತ್ವೇ ಜಲಹ್ರದೇ ವಹ್ನಿವ್ಯಾಪ್ಯಧೂಮವದ್ಭೇದಾಗ್ರಹಾದನುಮಿತಿರ್ನಿರಾಬಾಧಾ । ಯದಿ ಚ ವಿಶಿಷ್ಟಜ್ಞಾನಂ ಕಾರಣಂ ತದಾಽಯೋಗೋಲಕೇ ವಹ್ನಿವ್ಯಾಪ್ಯಧೂಮ ಜ್ಞಾನಮನುಮಿತ್ಯನುರೋಧಾದಾಪತಿತಮ್ । ಸೇಯಮುಭಯತಃ ಪಾಶಾ ರಜ್ಜುಃ । ಇತ್ಥಂ ಚಾನ್ಯಥಾಖ್ಯಾತೌ ಪ್ರತ್ಯಕ್ಷಮೇವ ಪ್ರಮಾಣಂ ರಂಗಂ ರಜತ ತಯಾಽವೇದಿಷಮಿತ್ಯನುಭವಾದಿತಿ ಸಂಕ್ಷೇಪಃ ॥

ನೈಯಾಯಿಕ ಸಿದ್ಧಾಂತವನ್ನು ತೋರಿಸುತ್ತಾನೆ. 'ಸತ್ಯರಜತಸ್ಥಲೇ—' ಇತಿ. ಪ್ರವೃತ್ತಿಸಾಮಾನ್ಯವನ್ನು ಕುರಿತು ವಿಶಿಷ್ಟಜಾನವು ಹೇತುವಾಗುತ್ತದೆಂದು ಲೋಕಸಿದ್ಧ ವಾಗಿದೆ. ಸತ್ಯರಜತಸ್ಥಲದಲ್ಲಿ ಪ್ರವೃತ್ತಿಬರಬೇಕಾದರೆ ರಜತತ್ವವದ್ವಿಶೇಷಕ, ರಜತತ್ವ ಪ್ರಕಾರಕರೂಪವಿಶಿಷ್ಟಜ್ಞಾನವು ಕಾರಣವಾಗುತ್ತದೆ. 'ಅನ್ಯತ್ರಾಪಿ—' ಇತಿ. ರಂಗ ಗೋಚರರಜತಾರ್ಥಿಪ್ರವೃತ್ತಿಯಲ್ಲಿಯಲ್ಲಿಯೂ, ತತ್ಕಲ್ಪನಾತ್—ವಿಶಿಷ್ಟಜ್ಞಾನವೇ ಕಾರಣವೆಂದು ಕಲ್ಪಿಸಬೇಕೆಂದರ್ಥ. ಇದರಿಂದ ಅನುಮಾನ ಸಿದ್ಧವಾಗುತ್ತದೆ. 'ರಂಗೇ ರಜತಾರ್ಥಿಪ್ರವೃತ್ತಿಃ— ಇಷ್ಟಪ್ರವೃತ್ತಿವಿಷಯವಿಶಿಷ್ಟಜ್ಞಾನಾಸಾಧ್ಯಾ— ಪ್ರವೃತ್ತಿ ತ್ವಾತ್ । ರಜತೇ ರಜತತ್ವಪ್ರಕಾರಕಪ್ರವೃತ್ತಿವತ್ ॥ ಶುಕ್ತಿಯಲ್ಲಿ ವಿಶಿಷ್ಟಜ್ಞಾನ ಬಂದುದರಿಂದಲೇ ಅವನಿಗೆ ರಜತಪ್ರವೃತ್ತಿಯುಂಟಾಗಿದೆ. ಹೇತುವಿರಲಿ ಸಾಧ್ಯಬೇಡ ವೆಂಬ ಅಪ್ರಯೋಜಕತ್ವಶಂಕೆ ತೋರಿಸಿ ನಿವಾರಿಸುತ್ತಾನೆ. 'ನಚ—' ಇತಿ. ಸಂವಾದಿಪ್ರವೃತ್ತಿಯಲ್ಲಿ ವಿಶಿಷ್ಟಜ್ಞಾನವು ಕಾರಣವಾಗಲಿ. ವಿಸಂವಾದಿಪ್ರವೃತ್ತಿಯಲ್ಲಿ (ಭ್ರಮಸ್ಥಳದಲ್ಲಿ) ಭೇದಾಽಗ್ರಹವು (ವಿವೇಕಜ್ಞಾನಾಭಾವವು) ಕಾರಣವಾಗಲಿ ಎಂದು ಆಶಂಕಿಸಬಾರದು. 'ಲಾಘವತ್—' ಇತಿ. ಸಂವಾದಿವಿಸಂವಾದಿಭೇದದಿಂದ ಎರಡು ಕಾರ್ಯಕಾರಣಭಾವಗಳನ್ನು ಕಲ್ಪಿಸುವುದಕ್ಕಿಂತ, ಪ್ರವೃತ್ತಿಸಾಮಾನ್ಯದಲ್ಲಿ ವಿಶಿಷ್ಟಜ್ಞಾನವು ಕಾರಣವೆಂದು ಒಂದೇರೀತಿ ಹೇಳುವುದರಿಂದ ಲಾಘವ ಬರುತ್ತದೆಂದರ್ಥ. ಶುಕ್ತಿರಜತ ದಲ್ಲಿ ರಜತಸನ್ನಿಕರ್ಷವಿಲ್ಲದೆ ರಜತತ್ವತೋರುವುದು ಹೇಗೆ (ಅನ್ಯಥಾಖ್ಯಾತಿಕೂಡು ವುದಿಲ್ಲ.) ಎಂದು ಪ್ರಾಭಾಕರನು ಆಶಂಕಿಸಿರುವುದಕ್ಕೆ ಸಮಾಧಾನ ತೋರಿಸುತ್ತಾನೆ. 'ಇತ್ಥಂ ಚ—' ಇತಿ. ಪ್ರವೃತ್ತಿಸಾಮಾನ್ಯವನ್ನು ಕುರಿತು ವಿಶಿಷ್ಟಜ್ಞಾನವು ಕಾರಣ ವೆಂದು ನಿರ್ಣೀತವಾದಮೇಲೆ ಶುಕ್ತಿಯಲ್ಲಿ ರಜತತ್ವಪ್ರಕಾರಕಬುದ್ಧಿಯೂ ಉಂಟಾಗು ವುದರಿಂದ ರಜತದೊಡನೆ ಜ್ಞಾನಲಕ್ಷಣಾಪ್ರತ್ಯಾಸತ್ತಿರೂಪವಾದ ಅಲೌಕಿಕಸನ್ನಿಕರ್ಷ ವನ್ನು ಒಪ್ಪಬೇಕು. ಇದು ಚಕ್ಷುಃ ಸಂಯುಕ್ತಮನಃಸಂಯುಕ್ತಾತ್ಮಸಮವೇತ ಸ್ಮೃತಿ ವಿಷಯತ್ವ' ರೂಪವಾದ ಸನ್ನಿಕರ್ಷವಾಗುತ್ತದೆ.

ಇಂದ್ರಿಯಗ್ರಹಣ ಯೋಗ್ಯಪದಾರ್ಥದೊಡನೆ ಇಂದ್ರಿಯಸನ್ನಿಕರ್ಷವಾದಾಗ ಇಂದ್ರಿಯಾಯೋಗ್ಯಪದಾರ್ಥದ ಸ್ಮರಣೆಯೂ ಬರುತ್ತದೆ. ಅಲ್ಲಿ ಇಂದ್ರಿಯಸಂಬದ್ಧ ಪದಾರ್ಥ, ಸ್ಮೃತಿವಿಷಯವಾದಪದಾರ್ಥ ಇವೆರಡರ ಒಂದೇ ಜ್ಞಾನವುಂಟಾಗುವು ದೆಂಬುದು ಸ್ವತಃ ಸಿದ್ಧವಾಗಿದೆ. ಆದರೆ ಸ್ಮರಣಾಂಶದಲ್ಲಿ ಆ ಜ್ಞಾನವು ಅಲೌಕಿಕ ಸನ್ನಿಕರ್ಷದಿಂದಲೂ, ಇಂದ್ರಿಯಸಂಬದ್ಧಪದಾರ್ಥದಲ್ಲಿ ಲೌಕಿಕಸನ್ನಿಕರ್ಷದಿಂದಲೂ ಬರುತ್ತದೆಂದು ವ್ಯವಸ್ಥೆಯಿಂದ ತಿಳಿಯಬೇಕು. ಪ್ರಕೃತ ಶುಕ್ತಿಯಲ್ಲಿ 'ಇದಂ ರಜತಂ' ಎಂಬ ಚಾಕ್ಷುಷಜ್ಞಾನ ಬರುತ್ತದಷ್ಟೆ. ಅಲ್ಲಿ ರಜತಾನುಭವದಿಂದ ಉಂಟಾದ ಸಂಸ್ಕಾರ ದಿಂದ ಬಂದ ಸ್ಮೃತಿಯೇ ಕಾರಣವಾಗುತ್ತದೆ. ಇದೇ ಜ್ಞಾನಲಕ್ಷಣಪ್ರತ್ಯಾಸತ್ತಿ, (ಸನ್ನಿಕರ್ಷ) ಹಿಂದೆ ಹೇಳಿದಂತೆ 'ಚಕ್ಷುಸಂಯುಕ್ತವಾದದ್ದು ಮನಸ್ಸು. ತತ್ಸಂಯುಕ್ತ ನಾದವನು ಆತ್ಮಾ. ಅಲ್ಲಿ ಸಮವಾಯದಿಂದ ಇರುವ ಸ್ಮೃತಿರೂಪವಾದ ಜ್ಞಾನ. ತದ್ವಿಷಯತ್ವರೂಪವಾದ ಸನ್ನಿಕರ್ಷವೇ ಜ್ಞಾನಲಕ್ಷಣವಾದ ಪ್ರತ್ಯಾಸತ್ತಿ 'ಸುರಭಿ ಚಂದನಂ' ಎಂಬ ಜ್ಞಾನ ಬರುವ ರೀತಿ ಪ್ರತ್ಯಕ್ಷಖಂಡದಲ್ಲಿ ಹೇಳಿದೆ. ಅದರಂತೆ ಇಲ್ಲಿ ತಿಳಿಯಬೇಕು. ಈ ಸಂಬಂಧ ಇಲ್ಲಿ ಹೇಳದಿದ್ದರೆ ವಿಶಿಷ್ಟಬುದ್ಧಿಯೇ ಬರಲಾರದು. 'ಫಲಮುಖೇತಿ—' ಕಾರ್ಯಕಾರಣಭಾವಜ್ಞಾನರೂಪಫಲಸಿದ್ಧಿಯಾಗಬೇಕಾದರೆ ಮೊದಲು ಈ ಗೌರವಜ್ಞಾನ ಬಂದಿರುವುದಿಲ್ಲ. ಗೌರವಸಂದೇಹ ಬಂದಿದ್ದರೆ ಅದು ಪ್ರತಿಬಂಧಕ ವಾಗುವುದಿಲ್ಲ. ಫಲಸಿದ್ಧಿಯಾದಮೇಲೆ ಗೌರವಜ್ಞಾನಬಂದರೆ ಅದು ದೋಷಾಪಾದಕ ವಾಗುವುದಿಲ್ಲವೆಂದು ತಾತ್ಪರ್ಯ.

ಭ್ರಮಜ್ಞಾನವನ್ನು ಅವಶ್ಯವಾಗಿ ಒಪ್ಪಬೇಕೆಂದು ಪ್ರಕಾರಾಂತರದಿಂದ ವಿವರಿಸು ತ್ತಾನೆ. 'ಕಿಂಚ—' ಇತಿ. ಒಂದುಕಡೆ ಶುಕ್ತಿರಜತಎರಡೂ ಇರುವಾಗ ಏಕಕಾಲದಲ್ಲಿ ಅವುಗಳಲ್ಲಿ ಸನ್ನಿಕರ್ಷಉಂಟಾಗುತ್ತದೆ. ಆಗ 'ಇಮೇ ರಜತೇ' ಅಥವಾ 'ಇಮೇರಂಗೇ' ಎಂಬ ಜ್ಞಾನ ಬರುತ್ತದೆ. ಅಲ್ಲಿ ರಜತದಲ್ಲಿ ರಜತಭೇದಗ್ರಹವಾಗಲೀ, ರಂಗದಲ್ಲಿ ರಂಗ ಭೇದಗ್ರಹವಾಗಲೀ ಬಂದಿಲ್ಲ. ರಜತತ್ವರೂಪದಿಂದಾಗಲೀ, ರಂಗತ್ವರೂಪದಿಂದಾಗಲೀ ಒಟ್ಟಿಗೆ ಸಂಯುಕ್ತಸಮವಾಯರೂಪಸನ್ನಿಕರ್ಷವೂ ಪ್ರಸಿದ್ಧವಾಗಿದೆ. ಆದರೆ ಇಲ್ಲಿ ಬಂದ ಈರೀತಿಯಾದಜ್ಞಾನವು ಉಭಯಾಂಶದಲ್ಲಿಯೂ ಪ್ರಮಾತ್ಮಕವಾಗುವುದಿಲ್ಲ. (ವಿಶೇಷಣವದ್ವಿಶೇಷ್ಯಸನ್ನಿಕರ್ಷ ರೂಪಪ್ರಮಾಸಾಮಗ್ರಿ ಇಲ್ಲದಿರುವುದರಿಂದ ಪ್ರಮಾ ಆಗವುದಿಲ್ಲ.) ಆಂಶಿಕಪ್ರಮಾತ್ವಮಾತ್ರ ತೋರುತ್ತದೆ. ಇಂತಹಸ್ಥಳದಲ್ಲಿ ಅವಶ್ಯವಾಗಿ ಅನ್ಯಥಾಖ್ಯಾತಿಯನ್ನು ಒಪ್ಪಲೇಬೇಕಾಗುತ್ತದೆ.

ಪ್ರಾಭಾಕರನಮತ ಸರಿಯಲ್ಲವೆಂದೂ ಇನ್ನೂ ಸ್ಥಲಾಂತರದಲ್ಲಿ ಅವನರೀತಿಯನ್ನನು ಸರಿಸಿದರೆ ದೋಷಸಂಭವಿಸುವುದೆಂದು ತೋರಿಸುತ್ತಾನೆ- 'ಅಪಿಚ—' ಇತಿ. ಶುಕ್ತಿ ರಜತಗಳಲ್ಲಿ ರಜತಶುಕ್ತಿರೂಪವಾಗಿ ವಿಪರೀತಜ್ಞಾನವುಂಟಾದಾಗ ಏಕಕಾಲಾವಚ್ಛೇದ ದಿಂದ ರಜತದಲ್ಲಿಯೂ, ಶುಕ್ತಿಯಲ್ಲಿಯೂ ಪ್ರವೃತ್ತಿನಿವೃತ್ತಿಯುಂಟಾಗಬೇಕಾಗುತ್ತದೆ. ಅದಕ್ಕೆ ಕಾರಣತೋರಿಸುತ್ತಾನೆ. 'ರಂಗೇ ರಂಗ—' ಇತಿ. ಇಷ್ಟಭೇದಾಗ್ರಹವು

ಪ್ರವೃತ್ತಿಗೆಕಾರಣ, ಅನಿಷ್ಟಭೇದಾಗ್ರಹವು ನಿವೃತ್ತಿಗೆ ಕಾರಣ. ಅನ್ಯಥಾಖ್ಯಾತಿಭಯಾತ್' ಎಂದಾದಮೇಲೆ 'ರಂಗೇ ರಂಗಭೇದಾಗ್ರಹಸ್ಯ, ರಜತೇ ರಜತಭೇದಾಗ್ರಹಸ್ಯ' ಎಂದು ಸೇರಿಸಿ ಅನ್ವಯ ಹೇಳಬೇಕು. ಆಗ ರಂಗದಲ್ಲಿ ಅನಿಷ್ಟಭೇದಾಗ್ರಹರೂಪ ನಿವೃತ್ತಿಸಾಮಗ್ರಿಯೂ, ರಜತದಲ್ಲಿ ಇಷ್ಟಭೇದಾಗ್ರಹರೂಪವಾದಪ್ರವೃತ್ತಿಸಾಮಗ್ರಿಯೂ ತೋರಿಸಿದಂತಾಗುತ್ತದೆ. 'ದೋಷಾದೇವ—' ಇತಿ. ಅನ್ಯಥಾಖ್ಯಾತಿಯನ್ನು ಅಂಗೀಕರಿಸದಿರುವುದರಿಂದ ಭೇದಾಗ್ರಹವನ್ನು ಕುರಿತು ದೋಷವೇ ಕಾರಣವೆಂದು ಅವನಮತವಷ್ಟೆ. 'ರಂಗೇ—' ಇತಿ ಇದರಿಂದ ರಂಗದಲ್ಲಿ ಇಷ್ಟಭೇದಾಗ್ರಹರೂಪ ಪ್ರವೃತ್ತಿಸಾಮಗ್ರಿಯೂ, ರಜತದಲ್ಲಿ ಅನಿಷ್ಟಭೇದಾಗ್ರಹರೂಪ ನಿವೃತ್ತಿಸಾಮಗ್ರಿಯೂ ತೋರಿಸಿದಂತಾಗುತ್ತದೆ. (ವಾಸ್ತವವಾಗಿ ಭೇದಗ್ರಹವಿರುವುದು.) ಹೀಗೆ ಪ್ರವೃತ್ತಿನಿವೃತ್ತಿ ಏಕಕಾಲದಲ್ಲಿ ಬರಬೇಕಾಗುತ್ತದೆ.

ಶುಕ್ತಿಯಲ್ಲಿ ರಜತಭೇದಾಗ್ರಹಕ್ಕೆ ಪ್ರಯೋಜಕವಾದ ದೋಷವು ಪ್ರತಿಬಂಧಕವಾಗಿರುವುದರಿಂದ ಶುಕ್ತಿಯಲ್ಲಿ ನಿವೃತ್ತಿಯಾಗಲೀ, ರಜತದಲ್ಲಿ, ರಂಗಭೇದಾಗ್ರಹಪ್ರಯೋಜಕವಾದ ದೋಷವು ಪ್ರತಿಬಂಧಕವಾಗಿರುವುದರಿಂದ ರಜತದಲ್ಲಿ ಪ್ರವೃತ್ತಿಯಾಗಲೀ ಬರುವುದಿಲ್ಲವೆಂದು ಈ ದೋಷವನ್ನು ನಿವಾರಿಸುವುದಾದರೆ ಬೇರೆ ಕಡೆ ದೋಷವನ್ನು ತೋರಿಸುತ್ತಾನೆ. 'ಕಿಂಚ—' ಇತಿ. ವ್ಯಾಪ್ಯ (ಧೂಮಾದಿ) ವದ್ಭೇದಾಗ್ರಹವು ಅನುಮಿತಿಯನ್ನು ಕುರಿತು ಕಾರಣವೆಂದು ಮೀಮಾಂಸಕನು ಹೇಳುವುದರಿಂದ ಜಲಹ್ರದಗಳಲ್ಲಿ ವಹ್ನಿವ್ಯಾಪ್ಯಧೂಮವದ್ಭೇದಾಽಗ್ರಹದಿಂದ ವಹ್ನ್ಯನುಮಿತಿ ಬರಬೇಕಾಗುತ್ತದೆ.

ಅನುಮಿತಿಯನ್ನು ಕುರಿತು ವ್ಯಾಪ್ಯವದ್ಭೇದಾಗ್ರಹವು ನಿಮಿತ್ತವೆಂದರೆ ವಹ್ನಿವ್ಯಾಪ್ಯಧೂಮವತ್ಪರ್ವತಭೇದಾಗ್ರಹದಿಂದ 'ಹ್ರದೋ ವಹ್ನಿಮಾನ್' ಎಂಬ (ಅನ್ಯಥಾಖ್ಯಾತಿ) ಅನುಮಿತಿ ಬರಬೇಕಾಗುತ್ತದೆ ಈ ದೋಷವಾರಣೆಮಾಡಲು ನಾನು ಹೇಳಿದಂತೆ ವಿಶಿಷ್ಟಜ್ಞಾನ ಕಾರಣವೆಂದರೆ ಆಗ 'ಅಯೋಗೋಲಕಂವಹ್ನಿಮತ್' ಎಂಬ ಅನುಮಿತ್ಯನುಸಾರವಾಗಿ 'ವಹ್ನಿವ್ಯಾಪ್ಯಧೂಮವದಯೋಗೋಲಕಂ' ಎಂಬ ಅನ್ಯಥಾಖ್ಯಾತಿರೂಪವಾದ ಪರಾಮರ್ಶಾತ್ಮಕವಿಶಿಷ್ಟಜ್ಞಾನವನ್ನು ಅವಶ್ಯವಾಗಿ ಅಂಗೀಕರಿಸಬೇಕಾಗುತ್ತದೆ. ಎರಡು ಪ್ರಕಾರದಿಂದಲೂ ಇಷ್ಟಸಿದ್ಧಿಯಾಗದಿರುವುದರಿಂದ 'ಉಭಯತಃ ಪಾಶಾ ರಜ್ಜು' ಎಂಬ ನ್ಯಾಯಕ್ಕೆ ಒಳಗಾಗಬೇಕಾಗುತ್ತದೆ. ಆದುದರಿಂದ ಪ್ರಾಭಾಕರನ ಅಖ್ಯಾತಿವಾದ ಸಮಂಜಸವಲ್ಲ. 'ಇತ್ಥಂಚ—' ಎಂಬುದರಿಂದ ಅನ್ಯಥಾಖ್ಯಾತಿಯ ಉಪಸಂಹಾರ ತೋರಿಸುತ್ತಾನೆ. ಅನ್ಯಥಾಖ್ಯಾತಿಯಲ್ಲಿ ಪ್ರತ್ಯಕ್ಷವೇ ಪ್ರಮಾಣ. 'ರಂಗಂರಜತತಯಾಽವೇದಿಷಮ್' ಎಂಬ ಪ್ರತ್ಯಕ್ಷವಾದ ಅನುವ್ಯವಸಾಯಾತ್ಮಕಜ್ಞಾನವೇ ಪ್ರಮಾಣವೆಂದರ್ಥ. ಹೀಗೆ ವಿಸಂವಾದಿಪ್ರವೃತ್ತಿಯಿಂದ ಅನ್ಯಥಾಖ್ಯಾತಿಯನ್ನು ಒಪ್ಪಲೇಬೇಕಾಗುತ್ತದೆ. ಪ್ರವೃತ್ತಿಸಾಮಾನ್ಯವನ್ನೂ ಕುರಿತು ವಿಶಿಷ್ಟಜ್ಞಾನವೇ ಕಾರಣವಾಗುತ್ತದೆ. ಭೇದಾಗ್ರಹತ್ವರೂಪದಿಂದ ಕಾರಣತ್ವವನ್ನು ಕಲ್ಪಿಸುವುದರಿಂದ ಗೌರವದೋಷವಲ್ಲದೆ ಯಾವ ಇಷ್ಟಾರ್ಥವೂ ಇಲ್ಲವೆಂದು ತಾತ್ಪರ್ಯ.— ॥ ೧೩೬ ॥

ವ್ಯಭಿಚಾರಸ್ಯಾಗ್ರಹೋಽಪಿ ಸಹಚಾರಗ್ರಹಸ್ತಥಾ ।
ಹೇತುರ್ವ್ಯಾಪ್ತಿಗ್ರಹೇ ತರ್ಕಃ ಕ್ವಚಿಚ್ಛಂಕಾನಿವರ್ತಕಃ ॥ ೧೩೭ ॥

ಪೂರ್ವಂ ವ್ಯಾಪ್ತಿರುಕ್ತಾ ತದ್ಗ್ರಹೋಪಾಯಸ್ತು ನ ದರ್ಶಿತ ಇತ್ಯತಸ್ತಂ ದರ್ಶಯತಿ— ವ್ಯಭಿಚಾರಸ್ಯೇತಿ । ವ್ಯಭಿಚಾರಾಗ್ರಹಃ ಸಹಚಾರಗ್ರಹಶ್ಚ ವ್ಯಾಪ್ತಿಗ್ರಹೇ ಕಾರಣಮ್ । ವ್ಯಭಿಚಾರಗ್ರಹಸ್ಯ ವ್ಯಾಪ್ತಿಗ್ರಹೇ ಪ್ರತಿಬಂಧಕತ್ವಾತ್ತದಭಾವಃ ಕಾರಣಮಿತ್ಯರ್ಥಃ। ಏವಮನ್ವಯವ್ಯತಿರೇಕಾಭ್ಯಾಂ ಸಹಚಾರಗ್ರಹಸ್ಯಾಪಿ ಹೇತುತಾ । ಭೂಯೋದರ್ಶನಂ ತು ನ ಕಾರಣ ವ್ಯಭಿಚಾರಾಸ್ಫೂರ್ತೌ ಸಕೃದ್ದರ್ಶನೇಽಪಿ ಕ್ವಚಿದ್ವ್ಯಾಪ್ತಿಗ್ರಹಾತ್ ಕ್ವಚಿದ್ವ್ಯಭಿಚಾರಶಂಕಾವಿಧೂನನದ್ವಾರಾ ಭೂಯೋದರ್ಶನಮುಪಯುಜ್ಯತೇ । ಯತ್ರ ತು ಭೂಯೋದರ್ಶನಾದಪಿ ಶಂಕಾ ನಾಪೈತಿ ತತ್ರ ವಿಪಕ್ಷಬಾಧಕತರ್ಕೋಽಪೇಕ್ಷಿತಃ । ತಥಾಹಿ । ವಹ್ನಿವಿರಹೇಽಪಿ ಧೂಮಃ ಸ್ಯಾದಿತಿಯದ್ಯಾಶಂಕಾ ಭವತಿ ತದಾ ಸ ವಹ್ನಿಧೂಮಯೋಃ ಕಾರ್ಯಕಾರಣಭಾವಸ್ಯ ಪ್ರತಿಸಂಧಾನಾನ್ನಿವರ್ತತೇ । ಯದ್ಯಯಂ ವಹ್ನಿಮಾನ್ನ ಸ್ಯಾತ್ತದಾ ಧೂಮವಾನ್ನಸ್ಯಾತ್ಕಾರಣಂ ವಿನಾ ಕಾರ್ಯಾನುತ್ಪತ್ತೇಃ । ಯದಿ ಚ ಕ್ವಚಿತ್ಕಾರಣಂ ವಿನಾ ಕಾರ್ಯಂ ಭವಿಷ್ಯತಿ ತದಾಽಹೇತುಕ ಏವ ಭವಿಷ್ಯತೀತಿ ತತ್ರಾಪ್ಯಾಶಂಕಾಭವೇತ್ತದಾ ಸಾ ವ್ಯಾಘಾತಾದಪಸಾರಣೀಯಾ । ಯದಿ ಕಾರಣಂ ವಿನಾ ಕಾರ್ಯಂ ಸ್ಯಾತ್ತದಾ ಧೂಮಾರ್ಥಂ ವಹ್ನೇಸ್ತೃಪ್ತ್ಯರ್ಥಂ ಭೋಜನಸ್ಯ ವಾ ನಿಯಮತ ಉಪಾದಾನಂ ತವೈವ ನ ಸ್ಯಾದಿತಿ । ಯತ್ರ ಸ್ವತ ಏವ ಶಂಕಾ ನಾವತರತಿ ತತ್ರ ನ ತರ್ಕಾಪೇಕ್ಷಾಪೀತಿ ತದಿದಮುಕ್ತಂ ತರ್ಕಃ ಕ್ವಚಿಚ್ಛಂಕಾನಿವರ್ತಕ ಇತಿ ॥ ೧೩೭ ॥

ಅನುಮಿತಿಪ್ರಕರಣದಲ್ಲಿ ವ್ಯಾಪ್ತಿ ಹೇಳಿದೆ, ಆದರೆ ಅದು ಹೇಗೆ ಬರುತ್ತದೆಂದು ಹೇಳಿರಲಿಲ್ಲ. ಅದನ್ನು ಈಗ ತೋರಿಸುತ್ತಾನೆ 'ವ್ಯಭಿಚಾರಸ್ಯಾಗ್ರಹಃ' ಇತಿ. ಹೇತುವಿದ್ದು ಸಾಧ್ಯಾಭಾವ ಬಂದರೆ, ಸಾಧ್ಯವಿಲ್ಲವಾದರೆ ಆಗ ವ್ಯಭಿಚಾರ. ಇದರ ಜ್ಞಾನವಿರಬಾರದು. ಸಹಚಾರಜ್ಞಾನವಿರಬೇಕು. ಹೇತುವಿನೊಡನೆ ಸಾಧ್ಯದ ಸಾಮಾನಾಧಿಕರಣ್ಯಕ್ಕೆ ಸಹಚಾರವೆಂದು ಹೆಸರು. ಇದರ ಜ್ಞಾನವೂ ವ್ಯಾಪ್ತಿಗೆ ಕಾರಣ. ವ್ಯಭಿಚಾರವು ವ್ಯಾಪ್ತಿವಿಘಟಕವಾಗುವುದರಿಂದ ಅದರಜ್ಞಾನ ಇರಬಾರದು. ವ್ಯಭಿಚಾರ ಶಂಕೆಯೂ ಕೆಲವುಸಮಯ ವ್ಯಾಪ್ತಿಜ್ಞಾನಕ್ಕೆ ಪ್ರತಿಬಂಧಕವಾಗುವುದರಿಂದ ತರ್ಕವೆಂಬುದು ಈ ವ್ಯಭಿಚಾರ ಶಂಕೆಯನ್ನು ಹೋಗಲಾಡಿಸುತ್ತದೆಯೆಂದು ಕಾರಿಕಾರ್ಥ. ಇದನ್ನೇ ಮುಕ್ತಾವಳಿಯಲ್ಲಿ ವಿವರಿಸುತ್ತಾನೆ. 'ವ್ಯಭಿಚಾರಾಗ್ರಹ—' ಇತಿ. ವ್ಯಭಿಚಾರಜ್ಞಾನವು ವ್ಯಾಪ್ತಿಪ್ರತಿಬಂಧಕವಾದುದರಿಂದ ತದಭಾವವು ಕಾರಣವಾಗುತ್ತದೆ. ಅನ್ವಯವ್ಯತಿರೇಕದಿಂದ ಹೇತುಸಾಧ್ಯಗಳ (ಸಹಚಾರ) ಸಾಮಾನಾಧಿಕರಣ್ಯಜ್ಞಾನವೂ ಕಾರಣವೆಂದು ಸಿದ್ಧವಾಗುತ್ತದೆ. 'ತತ್ರತದ್ವಹ್ನ್ಯಾದಿಸತ್ವೇ ತತ್ರತದ್ಧೂಮಾದಿಸತ್ವಂ,

ತತ್ತದ್ವಹ್ನ್ಯಾದ್ಯಭಾವೇ ತತ್ತದ್ಧೂಮಾದ್ಯಭಾವಃ' ಎಂಬ ಅನ್ವಯವ್ಯತಿರೇಕಗಳಿಂದ ಇದು ಪ್ರಸಿದ್ಧವಾಗಿದೆ.

ಕೆಲವರು ಭೂಯೋದರ್ಶನವೂ ವ್ಯಾಪ್ತಿಗೆ ಕಾರಣವೆನ್ನುತ್ತಾರೆ. ಅದನ್ನು ಖಂಡಿಸುತ್ತಾನೆ. 'ಭೂಯೋ—' ಇತಿ. ಅದು ಕಾರಣವೆಂದರೆ ವ್ಯತಿರೇಕವ್ಯಭಿಚಾರ ತೋರಿಸುತ್ತಾನೆ. 'ಸಕೃತ್—' ವ್ಯಭಿಚಾರಜ್ಞಾನಬಾರದಿರುವಾಗ ಕೆಲವುಕಡೆ ಒಂದು ಸಾರಿ ನೋಡಿದಾಗಲೂ ವ್ಯಾಪ್ತಿಜ್ಞಾನ ಬರುವುದಿದೆ. ಆದುದರಿಂದ ಅದು ಕಾರಣವಾಗುವುದಿಲ್ಲ. ಹಾಗಾದರೆ ಪ್ರಾಚೀನರು ಅದಕ್ಕೆ ಕಾರಣತ್ವ ಹೇಳಿದುದು ಹೇಗೆ? ಅಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಕ್ವಚಿತ್—' ಕೆಲವುಕಡೆ ವ್ಯಭಿಚಾರಶಂಕೆಯನ್ನು ಹೋಗಲಾಡಿಸುವುದರಿಂದ ವ್ಯಾಪ್ತಿಗೆ ಪ್ರಯೋಜಕವಾಗಬಹುದು. ಕಾರಣವಲ್ಲ. ಕಾರ್ಯಸಾಮಾನ್ಯಕ್ಕೆ ಪ್ರತಿಬಂಧಕಾಭಾವಕಾರಣವೆಂದು ಸಿದ್ಧವಾಗಿದೆ. ಹೀಗಿರುವಾಗ ಒಂದುಸಾರಿ ಸಹಚಾರಜ್ಞಾನಬಂದಾಗ ಕೆಲವುಕಡೆ ವ್ಯಭಿಚಾರಶಂಕೆ ಬರಬಹುದು. ಪಾರ್ಥಿವತ್ವವಿದ್ದಲ್ಲಿ ಕಬ್ಬಿಣದಿಂದ ಭೇದ್ಯತ್ವವಿದೆಯೆಂದರೆ ಆಗ ವಜ್ರಾದಿಗಳಲ್ಲಿ ವ್ಯಭಿಚಾರಶಂಕೆ ಬರಬಹುದು. ಅಲ್ಲಿ ಭೂಯೋದರ್ಶನಕ್ಕೆ ಉಪಯೋಗವಿರುವುದರಿಂದ ಪ್ರಯೋಜಕವಾಗುತ್ತದೆ.

ಎಲ್ಲಿ ಭೂಯೋದರ್ಶನದಿಂದಲೂ ದೋಷಮಾಹಾತ್ಮ್ಯದಿಂದ ವ್ಯಭಿಚಾರಶಂಕೆಯು ದೂರವಾಗುವುದಿಲ್ಲವೋ ಅಲ್ಲಿ ತರ್ಕದ ಅಪೇಕ್ಷೆಯೂ ಇರುತ್ತದೆಂದು ತಿಳಿಸುತ್ತಾನೆ. 'ಯತ್ರ—' ಇತಿ. 'ತಥಾಹಿ—' ಎಂದು ಅದನ್ನು ವಿವರಿಸುತ್ತಾನೆ. ವಹ್ನಿ ಇಲ್ಲದಿರುವಲ್ಲಿಯೂ ಧೂಮವಿರಬಹುದಲ್ಲವೇ ಎಂಬ ಶಂಕೆ ಬಂದಾಗ ಆ ಆಶಂಕೆಯು ವಹ್ನಿಧೂಮಗಳಿಗೆ ಕಾರ್ಯಕಾರಣಭಾವಪ್ರತಿಸಂಧಾನ (ಜ್ಞಾನ) ದಿಂದ ನಿವೃತ್ತವಾಗುತ್ತದೆ. 'ಯದ್ಯಯಂ—' ಇತಿ. ಕಾರಣವಿಲ್ಲದೆ ಕಾರ್ಯವು ಎಂದೂ ಹುಟ್ಟುವುದಿಲ್ಲ. ಆದುದರಿಂದ 'ಈ ಪರ್ವತ ವಹ್ನಿಮತ್ತಾಗದಿದ್ದರೆ ಧೂಮದಿಂದ ಕೂಡಿರುವುದೂ ಆಗಲಾರದು' ಎಂಬ ತರ್ಕಸ್ವರೂಪದಿಂದ ಶಂಕೆಯೂ ಹೋಗುತ್ತದೆ. ಇದನ್ನೇ ವಿಶದಪಡಿಸುತ್ತಾನೆ. 'ಯದಿಚ—' ಇತಿ. ಪ್ರಥಮಶಂಕಾನಿವೃತ್ತಿಗೋಸ್ಕರ ಕಾರ್ಯಕಾರಣಭಾವ ಹೇಳಿದೆ. ಇದರಮೇಲೂ ಯಾವನಾದರೂ ಆಶಂಕಾಮಾಡಿದರೆ ಅಂದರೆ ಕಾರಣವಿಲ್ಲದೆ ಕಾರ್ಯವು ಏಕಾಗಬಾರದು? ಎಂದು ಆಶಂಕಿಸಿದರೆ ಆಗ ಆ ಆಶಂಕೆಯು ವ್ಯಾಘಾತರೂಪತರ್ಕದಿಂದ ಹೋಗಲಾಡಿಸಲ್ಪಡಬೇಕು. ಮೊದಲನೆಯ ಶಂಕೆಯು ಕಾರ್ಯಕಾರಣಭಾವಭಂಗವಾದೀತೆಂಬ ಭಯದಿಂದ ಹೋಗುತ್ತದೆ. ಎರಡನೆಯ ಆಶಂಕೆಯು ವ್ಯಾಘತರೂಪತರ್ಕದಿಂದ ನಿವಾರಿತವಾಗುತ್ತದೆ. ವ್ಯಾಘಾತದವರೆಗೇ ಆಶಂಕೆಯೆಂದು ಶಾಸ್ತ್ರಸಿದ್ಧವಾಗಿದೆ. ವ್ಯಾಘಾತರೂಪತರ್ಕಸ್ವರೂಪವನ್ನು ತೋರಿಸುತ್ತಾನೆ. 'ಯದಿಚ—' ಇತಿ. ಕಾರಣವಿಲ್ಲದೇ ಕಾರ್ಯವಾಗುತ್ತದೆಂದರೆ ಕಾರ್ಯವು ಕಾರಣಾಪೇಕ್ಷಿಯಲ್ಲವೆಂದಾಗುತ್ತದೆ. ಧೂಮಕೋಸ್ಕರ ವಹ್ನಿಯನ್ನಾಗಲೀ; ತೃಪ್ತಿಗೋಸ್ಕರ ಭೋಜನವನ್ನಾಗಲೀ ನಿಯಮದಿಂದ ಯಾರೂ ಅಪೇಕ್ಷಿಸಲಾರರು. ಆದರೆ ಅಹೇತುಕಕಾರ್ಯಲೋಕಸಿದ್ಧವಲ್ಲ.

ತರ್ಕಕ್ಕೆ ವ್ಯಾಪ್ಯವತ್ತಾಜ್ಞಾನವು ಕಾರಣ. ವ್ಯಾಪ್ತಿಜ್ಞಾನಕ್ಕೆ ಪ್ರತಿಬಂಧಕವಾದ ವ್ಯಭಿಚಾರಶಂಕೆಯನ್ನು ತರ್ಕವು ಹೋಗಲಾಡಿಸುತ್ತದೆಂದರೆ ಆಗ ಅನವಸ್ಥಾಬರುವುದಿಲ್ಲವೇ ಅಂದರೆ ಪ್ರಕಾರಾಂತರವನ್ನು ತೋರಿಸುತ್ತಾನೆ. 'ಯತ್ರ—' ಇತಿ. ಶಂಕಾ ಸಾಮಗ್ರಿಯಾವುದೂ ಇಲ್ಲದಿದ್ದರೆ ಶಂಕೆಯೇ ಬರುವುದಿಲ್ಲ. ಅಲ್ಲಿ ತರ್ಕವು ಅಪೇಕ್ಷಿತ ವಾಗುವುದಿಲ್ಲ. ಇದರಿಂದ ತರ್ಕಕ್ಕೆ ನಿಯತಕಾರಣತ್ವವಿಲ್ಲವೆಂದು ಎಷ್ಟೋ ಕೆಲವುಕಡೆ ಮಾತ್ರವಿರುವುದರಿಂದ ಅನವಸ್ಥೆಗೆ ಅವಕಾಶವಿಲ್ಲವೆಂದು ಸೂಚಿತವಾಗುತ್ತದೆ.

ವ್ಯಾಪ್ಯಾರೋಪದಿಂದ ವ್ಯಾಪಕಾರೋಪಕ್ಕೆ ತರ್ಕವೆನ್ನುತ್ತಾರೆ. 'ತರ್ಕಯಾಮಿ' ಎಂಬ ಅನುಭವದಿಂದ ಜಿಜ್ಞಾಸಾವಿಶೇಷವನ್ನು ಹೋಗಲಾಡಿಸುವ ಮಾನಸತ್ವವ್ಯಾಪ್ಯವಾದ ಜಾತಿವಿಶೇಷವೆಂದೂ (ಆಹಾರ್ಯಾರೋಪವಿಶೇಷವಾಗಿದೆ) ಹೇಳುತ್ತಾರೆ. ವಿಷಯಪರಿಶೋಧಕ, ವ್ಯಾಪ್ತಿಗ್ರಾಹಕವೆಂದು ಇದು ಸಾಮಾನ್ಯವಾಗಿ ಎರಡುವಿಧ. ಮೊದಲನೆಯದಕ್ಕೆ ಉದಾ—'ನಿರ್ವಹ್ನಿಃ ಸ್ಯಾನ್ನಿರ್ಧೂಮೋಽಪಿ ಸ್ಯಾತ್' ಪರ್ವತದಲ್ಲಿ ವಹ್ನಿ ಇಲ್ಲದೇ ಹೋದರೆ ಧೂಮವೂ ಇರಲಾರದು ಎಂದು ತರ್ಕಾಕಾರ. ಇದರಿಂದ ಪರ್ವತದಲ್ಲಿ ವಹ್ನಿರೂಪವಿಷಯದ ಪರಿಶುದ್ಧಿ (ದಾರ್ಢ್ಯಜ್ಞಾನ) ಯಾಗುತ್ತದೆ. ಇಲ್ಲಿ ವಹ್ನ್ಯಭಾವ ವ್ಯಾಪ್ಯ. ಧೂಮಾಭಾವ ವ್ಯಾಪಕ. ಹ್ರದದಲ್ಲಿ ವಹ್ನ್ಯಭಾವ ಇರುವುದರಿಂದ ಧೂಮಾಭಾವವೂ ನಿಶ್ಚಿತವಾಗಿದೆ. ಪರ್ವತದಲ್ಲಿ ಈರೀತಿ ಇಲ್ಲ. ಹ್ರದದಲ್ಲಿ ಹೇಗೋ ಹಾಗೆ ಇಲ್ಲಿ ವಹ್ನ್ಯಭಾವವಿರುವುದಾದರೆ ಧೂಮವೂ ಇರುತ್ತಿರಲಿಲ್ಲ. ಆದರೆ ಧೂಮವಿದೆ. ಧೂಮದರ್ಶನದಿಂದ ಅಗ್ನಿ ಇದ್ದೇ ಇದೆಯೆಂದು ತರ್ಕದಿಂದ ವಾದಿಯು ಜಯಿಸುತ್ತಾನೆ. ವ್ಯಾಪ್ತಿಗ್ರಾಹಕತರ್ಕಕ್ಕೆ ಉದಾಃ—'ಧೂಮೋ ಯದಿ ವಹ್ನಿವ್ಯಭಿಚಾರೀ ಸ್ಯಾತ್ ತರ್ಹಿ ವಹ್ನಿಜನ್ಯೋ ನ ಸ್ಯಾತ್' ಧೂಮವು ವಹ್ನಿ ಇಲ್ಲದಿರುವಲ್ಲಿ ಇರುವುದಾದರೆ ಅದು ವಹ್ನಿಜನ್ಯವೇ ಆಗಲಾರದು' ಎಂಬ ಈ ತರ್ಕದಿಂದ ವ್ಯಭಿಚಾರ ಶಂಕೆಯು ಹೋಗಿ ಅನುಮಾನಪ್ರಮಾಣನಿಶ್ಚಿತವಾಗುತ್ತದೆ. ಈ ತರ್ಕವು,—ಆತ್ಮಾಶ್ರಯ, ಅನ್ಯೋನ್ಯಾಶ್ರಯ, ಚಕ್ರಕ, ಅನವಸ್ಥಾ, ತದನ್ಯಬಾಧಿತಾರ್ಥಪ್ರಸಂಗವೆಂದು ಐದುವಿಧವಾಗಿದೆ. ಇವು ಅಲ್ಲಲ್ಲಿ ಉದ್ಗ್ರಂಥಗಳಲ್ಲಿ ನಿರೂಪಿತವಾಗಿವೆ. ಪ್ರಕೃತಾನುಪಯೋಗದಿಂದ ವಿವರಿಸಿಲ್ಲ. ॥ ೧೩೭ ॥

**ಸಾಧ್ಯಸ್ಯ ವ್ಯಾಪಕೋ ಯಸ್ತು ಹೇತೋರವ್ಯಾಪಕಸ್ತಥಾ ॥**
**ಸ ಉಪಾಧಿರ್ಭವೇತ್ತಸ್ಯ ನಿಷ್ಕರ್ಷೋಽಯಂ ಪ್ರದರ್ಶ್ಯತೇ ॥ ೧೩೮ ॥**

ಪ್ರಸಂಗಸಂಗತಿಯಿಂದ ಉಪಾಧಿಲಕ್ಷಣವನ್ನು ತೋರಿಸುತ್ತಾನೆ. 'ಸಾಧ್ಯಸ್ಯ—' ಇತಿ. ಯಾವುದು ಸಾಧ್ಯವಾದ ಧೂಮಾದಿಗಳಿಗೆ ವ್ಯಾಪಕವಾಗಿಯೂ, ಹೇತುವಾದ ವಹ್ನಿಗೆ ಅವ್ಯಾಪಕವಾಗಿದೆಯೋ ಅದು ಉಪಾಧಿಯಾಗುತ್ತದೆ. 'ಧೂಮವಾನ್—ವಹ್ನೇಃ' ಎಂಬಲ್ಲಿ ಆರ್ದ್ರೇಂಧನಸಂಯೋಗ ಉಪಾಧಿ. ವಹ್ನಿರೂಪ ಹೇತುವಿನಿಂದ ಧೂಮರೂಪಸಾಧ್ಯವನ್ನು ಸಾಧಿಸುವಾಗ ಹಸಿಕಟ್ಟಿಗೆಯಸಂಯೋಗ (ಸಂಬಂಧ)

ಉಪಾಧಿಯಾಗುತ್ತದೆ. 'ಯತ್ರ ೨ ಧೂಮಃ ತತ್ರ ೨ ಆರ್ದ್ರೇಂಧನಸಂಯೋಗಃ' ಎಂದು ಇದು ಸಾಧ್ಯವ್ಯಾಪಕವಾಗುತ್ತದೆ. ಧೂಮವಿದ್ದಲ್ಲಿ ಹಸಿಕಟ್ಟಿಗೆ ಇದ್ದೇ ಇರುತ್ತದೆ. 'ಯತ್ರ ೨ ವಹ್ನಿಃ ತತ್ರ ೨ ಆರ್ದ್ರೇಂಧನಸಂಯೋಗಃ' ಎಂಬ ನಿಯಮವಿಲ್ಲ. ಅಯೋಗೋಲಕಾದಿಗಳಲ್ಲಿ ಬೆಂಕಿ ಇದ್ದರೂ ಹಸಿಕಟ್ಟಿಗೆ ಇಲ್ಲ. ಹೀಗೆ ಈ ಉಪಾಧಿಯು ವ್ಯಾಪ್ತಿಗೆ ಪ್ರತಿಬಂಧಕವಾಗುತ್ತದೆ. ಹೇತು ಉಪಾಧಿವಿಶಿಷ್ಟವಾದುದರಿಂದ 'ಯತ್ರ ೨ವಹ್ನಿಃ ತತ್ರ೨ ಧೂಮಃ' ಎಂಬ ವ್ಯಾಪ್ತಿ ಬರುವುದಿಲ್ಲ. 'ಸಾಧ್ಯವ್ಯಾಪಕತ್ವೇ ಸತಿ ಸಾಧನಾಽವ್ಯಾಪಕತ್ವಮ್' ಎಂದು ಉಪಾಧಿಯಲಕ್ಷಣ.

ಇದಾನೀಂ ಪರಕೀಯವ್ಯಾಪ್ತಿಗ್ರಹಪ್ರತಿಬಂಧಾರ್ಥಮುಪಾಧಿಂ ನಿರೂಪಯತಿ—ಸಾಧ್ಯತ್ವಾಭಿಮತವ್ಯಾಪಕತ್ವೇ ಸತಿ ಸಾಧನತ್ವಾಭಿಮತಾವ್ಯಾಪಕತ್ವಮುಪಾಧಿರಿತ್ಯರ್ಥಃ। ನನು ಸ ಶ್ಯಾಮೋ ಮಿತ್ರಾತನಯತ್ವಾದಿತ್ಯತ್ರ ಶಾಕಪಾಕಜನ್ಯತ್ವಂ ನೋಪಾಧಿಃ ಸ್ಯಾತ್ತಸ್ಯ ಸಾಧ್ಯವ್ಯಾಪಕತ್ವಾಭಾವಾತ್, ಶ್ಯಾಮತ್ವಸ್ಯ ಘಟಾದಾವಪಿ ಸತ್ವಾತ್, ಏವಂ ವಾಯುಃ ಪ್ರತ್ಯಕ್ಷಃ ಪ್ರತ್ಯಕ್ಷಸ್ಪರ್ಶಾಶ್ರಯತ್ವಾದಿತ್ಯತ್ರೋದ್ಭೂತರೂಪವತ್ವಂ ನೋಪಾಧಿಃ ಸ್ಯಾತ್, ಪ್ರತ್ಯಕ್ಷತ್ವಸ್ಯಾತ್ಮಾದಿಷು ಸತ್ವಾತ್ತತ್ರ ಚ ರೂಪಾಭಾವಾತ್। ಏವಂ ಧ್ವಂಸೋ ವಿನಾಶೀ ಜನ್ಯತ್ವಾದಿತ್ಯತ್ರ ಭಾವತ್ವಂ ನೋಪಾಧಿಃ ಸ್ಯಾದ್ವಿನಾಶಿತ್ವಸ್ಯ ಪ್ರಾಗಭಾವೇಽಪಿ ಸತ್ವಾತ್ತತ್ರ ಚ ಭಾವತ್ವಾಭಾವಾದಿತಿ ಚೇನ್ನ, ಯದ್ಧರ್ಮಾವಚ್ಛಿನ್ನಸಾಧ್ಯವ್ಯಾಪಕತ್ವಂ ತದ್ಧರ್ಮಾವಚ್ಛಿನ್ನಸಾಧನಾವ್ಯಾಪಕತ್ವಮಿತ್ಯರ್ಥೇ ತಾತ್ಪರ್ಯಾತ್। ಮಿತ್ರಾತನಯತ್ವಾವಚ್ಛಿನ್ನಶ್ಯಾಮತ್ವಸ್ಯ ವ್ಯಾಪಕಂ ಶಾಕಪಾಕಜತ್ವಂ ತದವಚ್ಛಿನ್ನಸಾಧನಾವ್ಯಾಪಕಂ ಚ। ಏವಂ ಪಕ್ಷಧರ್ಮಬಹಿರ್ದ್ರವ್ಯತ್ವಾವಚ್ಛಿನ್ನ ಪ್ರತ್ಯಕ್ಷತ್ವಸ್ಯ ವ್ಯಾಪಕಮುದ್ಭೂತರೂಪತ್ವಂ, ಬಹಿರ್ದ್ರವ್ಯತ್ವಾವಚ್ಛಿನ್ನಸಾಧನಸ್ಯಾವ್ಯಾಪಕಂ ಚ, ಏವಂ ಧ್ವಂಸೋ ವಿನಾಶೀ ಜನ್ಯತ್ವಾದಿತ್ಯತ್ರ ಜನ್ಯತ್ವಾವಚ್ಛಿನ್ನಸಾಧ್ಯವ್ಯಾಪಕಂ ಭಾವತ್ವಂ। ಸದ್ಧೇತೌ ತು ಏತಾದೃಶೋ ಧರ್ಮೋ ನಾಸ್ತಿ ಯದವಚ್ಛಿನ್ನಸ್ಯ ಸಾಧ್ಯಸ್ಯ ವ್ಯಾಪಕಂ ತದವಚ್ಛಿನ್ನಸ್ಯ ಸಾಧನಸ್ಯ ಚಾವ್ಯಾಪಕಂ ಕಿಂಚಿತ್ ಸ್ಯಾತ್। ವ್ಯಭಿಚಾರಿಣಿ ತೂಪಾಧ್ಯಧಿಕರಣಂ ಯತ್ಸಾಧ್ಯಾಧಿಕರಣಂ ಯಚ್ಚೋಪಾಧಿಶೂನ್ಯಂ ಸಾಧ್ಯವ್ಯಭಿಚಾರಾಧಿಕರಣಂ ತದನ್ಯತರತ್ವಾವಚ್ಛಿನ್ನಸ್ಯಸಾಧ್ಯಸ್ಯ ವ್ಯಾಪಕತ್ವಂ ಸಾಧನಸ್ಯ ಚಾವ್ಯಾಪಕತ್ವಮುಪಾಧೇರಂತತಃ ಸಂಭವತೀತಿ ॥ ೧೩೮ ॥

ಹೇತುವು ಉಪಾಧಿವಿಶಿಷ್ಟವಾದರೆ ವ್ಯಾಪ್ತಿಗ್ರಹ ಬರುವುದಿಲ್ಲ. ಪರಕೀಯವ್ಯಾಪ್ತಿಜ್ಞಾನಪ್ರತಿಬಂಧವೇ ಇದಕ್ಕೆ ಪ್ರಯೋಜನ. ಸಾಧ್ಯವೆಂದು ಅಭಿಮತವಾದುದು ಯಾವುದೋ ಅದಕ್ಕೆ ವ್ಯಾಪಕವಾಗಿದ್ದು, ಸಾಧನವೆಂದು ಅಭಿಮತವಾದುದಕ್ಕೆ ಅವ್ಯಾಪಕವಾದದ್ದು ಉಪಾಧಿಯಾಗುತ್ತದೆ. ಈ ಲಕ್ಷಣಕ್ಕೆ ಕೆಲವುಸ್ಥಳದಲ್ಲಿ ಅವ್ಯಾಪ್ತಿಯನ್ನು ಆಶಂಕಿಸುತ್ತಾನೆ. 'ನನು—' ಇತಿ. ಸಃ—ಶ್ಯಾಮಃ—ಮಿತ್ರಾತನಯತ್ವಾತ್ ।

ಎಂಬಲ್ಲಿ ಶಾಕಪಾಕಜನ್ಯತ್ವವು ಉಪಾಧಿಯಾಗುತ್ತದೆ. ಮಿತ್ರಾ ಎಂಬುವಳು ಒಬ್ಬ ಸ್ತ್ರೀ. ಅವಳು ಎರಡು ಮಕ್ಕಳ ತಾಯಿ. ಕ್ಷೀರಾದಿ ಆಹಾರವನ್ನು ಸೇವಿಸುತ್ತಿರುವಾಗ ಬೆಳ್ಳಗಿರುವ ಮಗನನ್ನೂ, ಶಾಕಾಹಾರಿಯಾದಾಗ ಕಪ್ಪು ಮಗನನ್ನೂ ಹಡೆದಿರುತ್ತಾಳೆ. ಇಲ್ಲಿ ಸಃ ಅಂದರೆ ಬೆಳ್ಳಗಾದಮಗ. ಅವನೇ ಪಕ್ಷ. ಶ್ಯಾಮತ್ವಸಾಧ್ಯ. ಮಿತ್ರಾ ತನಯತ್ವಹೇತು. 'ಯತ್ರ ಯತ್ರ ಶ್ಯಾಮತ್ವಂ ತತ್ರ ತತ್ರ ಶಾಕಪಾಕಜನ್ಯತ್ವಂ' ಎಂದು ಶ್ಯಾಮತ್ವರೂಪಸಾಧ್ಯವ್ಯಾಪಕತ್ವವಿದೆ. ಯತ್ರ ಯತ್ರ ಮಿತ್ರಾತನಯತ್ವಂ ತತ್ರ ತತ್ರ ಶಾಕ ಪಾಕಜನ್ಯತ್ವಂ' ಎಂದು ವ್ಯಾಪ್ತಿ ಇಲ್ಲ. ಮಿತ್ರಾತನಯತ್ವವಿದ್ದಲ್ಲಿ (ಬಿಳಿಹುಡುಗನಲ್ಲಿ) ಶಾಕಪಾಕಜನ್ಯತ್ವವಿಲ್ಲ. ಹೀಗೆ ಉಪಾಧಿಲಕ್ಷಣಬಂದರೂ ಇಲ್ಲಿ ಅವ್ಯಾಪ್ತಿ ಬರುತ್ತದೆ. ಎಲ್ಲೆಲ್ಲಿ ಶ್ಯಾಮತ್ವವಿರುವುದೋ ಅಲ್ಲಲ್ಲಿ ಶಾಕಪಾಕಜನ್ಯತ್ವ ಕೂಡುವುದಿಲ್ಲ. ಏಕೆಂದರೆ ಘಟ, ಕೋಗಿಲೆ ಮುಂತಾದವುಗಳಲ್ಲಿ ಶ್ಯಾಮತ್ವ ಇದ್ದರೂ ಅಲ್ಲಿ ಶಾಕಪಾಕಜನ್ಯತ್ವವಿಲ್ಲ. ಹೀಗೆ ಸಾಧನಾವಚ್ಛಿನ್ನಸಾಧ್ಯವ್ಯಾಪಕವಾದ ಉಪಾಧಿಯಲ್ಲಿ ಅವ್ಯಾಪ್ತಿ ತೋರಿಸಿ ಪಕ್ಷ ಧರ್ಮಾವಚ್ಛಿನ್ನಸಾಧ್ಯವ್ಯಾಪಕವಾದ ಉಪಾಧಿಯಲ್ಲಿ ಅವ್ಯಾಪ್ತಿ ತೋರಿಸುತ್ತಾನೆ. 'ಏವಂಯಃ—' ಇತಿ. 'ವಾಯುಃ—ಪ್ರತ್ಯಕ್ಷಃ — ಪ್ರತ್ಯಕ್ಷಸ್ಪರ್ಶಾಶ್ರಯತ್ವಾತ್' ಇಲ್ಲಿ ಉದ್ಭೂತರೂಪವತ್ತ್ವಧರ್ಮವು ಉಪಾಧಿಯಾಗಬೇಕು. ಇದು ಪ್ರತ್ಯಕ್ಷತ್ವಕ್ಕೆ ವ್ಯಾಪಕವಾಗಿ, ಪ್ರತ್ಯಕ್ಷಸ್ಪರ್ಶಾಶ್ರಯತ್ವಕ್ಕೆ ಅವ್ಯಾಪಕವಾಗಬೇಕು. ಆದರೆ 'ಎಲ್ಲೆಲ್ಲಿ ಪ್ರತ್ಯಕ್ಷತ್ವವಿದೆಯೋ ಅಲ್ಲಲ್ಲಿ ಉದ್ಭೂತರೂಪವತ್ವಧರ್ಮವಿದೆ'ಯೆಂದು ಹೇಳಲು ಸಾಧ್ಯ ವಿಲ್ಲ. ಏಕೆಂದರೆ ಆತ್ಮಾದಿಗಳಲ್ಲಿ ಪ್ರತ್ಯಕ್ಷತ್ವವಿದೆ, ಆದರೆ ಅಲ್ಲಿ ಉದ್ಭೂತರೂಪವತ್ತ್ವ ವಿಲ್ಲ. ಹೀಗೆ ಸ್ಥಲಾಂತರದಲ್ಲಿಯೂ ಅವ್ಯಾಪ್ತಿ ತೋರಿಸುತ್ತಾನೆ. 'ಏವಂ ಧ್ವಂಸಃ—' ಇತಿ. 'ಧ್ವಂಸಃ—ವಿನಾಶೀ—ಜನ್ಯತ್ವಾತ್ । ಇಲ್ಲಿ ಭಾವತ್ವರೂಪೋಪಾಧಿಯು ವಿನಾಶಿತ್ವಕ್ಕೆ ವ್ಯಾಪಕವಾಗಬೇಕು.

ಆದರೆ 'ಯತ್ರ ಯತ್ರ ವಿನಾಶಿತ್ವಂ ತತ್ರ ತತ್ರ ಭಾವತ್ವಂ' ಎಂದು ಹೇಳಲು ಸಾಧ್ಯವಿಲ್ಲ ಪ್ರಾಗಭಾವದಲ್ಲಿ ವಿನಾಶಿತ್ವ ಬಂದರೂ ಅಲ್ಲಿ ಭಾವತ್ವವಿಲ್ಲ (ಅದು ಅಭಾವ) ಹೀಗೆ ಅವ್ಯಾಪ್ತಿ ಬಂದರೆ ಅಲ್ಲಿ ವಿವಕ್ಷಿತಾರ್ಥವನ್ನು ವಿವರಿಸಿ ಅವ್ಯಾಪ್ತಿಯನ್ನು ಪರಿಹರಿಸುತ್ತಾನೆ. 'ಇತಿಚೇತ್‌ನ—' ಇತಿ. 'ಯದ್ಧರ್ಮಾವಚ್ಛಿನ್ನ ಸಾಧ್ಯವ್ಯಾಪಕತ್ವಂ—ಯಾದೃಶ ಧರ್ಮವಿಶಿಷ್ಟಸಾಧ್ಯೇನ ಸಹ ಉಪಾಧೇಃ ಸಹಚಾರಃ (ವ್ಯಾಪ್ತಿಃ) ತಾದೃಶಧರ್ಮ-ವಿಶಿಷ್ಟ ಹೇತುನಾ ಸಹ ವ್ಯಭಿಚಾರಃ' ಯಾವ ಒಂದುಧರ್ಮದಿಂದ ಕೂಡಿದ ಸಾಧ್ಯಕ್ಕೆ ವ್ಯಾಪಕ ವಾಗುತ್ತದೆಯೋ, ಅದೇಧರ್ಮದಿಂದಕೂಡಿದ ಸಾಧನಕ್ಕೆ ಅವ್ಯಾಪಕವಾಗಿರುವುದು ಉಪಾಧಿಯೆಂದರೆ ಆಗ ಅವ್ಯಾಪ್ತಿ ಬರುವುದಿಲ್ಲ. ಇದನ್ನೇ ವಿವರಿಸುತ್ತಾನೆ. 'ಮಿತ್ರಾತನ—' ಇತಿ. ಮಿತ್ರಾತನಯತ್ವಧರ್ಮವು ಎರಡರಲ್ಲಿಯು ಅವಚ್ಛೇದಕವಾಗಿರು ತ್ತದೆ. ಸಾಮಾನಾಧಿಕರಣ್ಯಸಂಬಂಧದಿಂದ ಮಿತ್ರಾತನಯತ್ವಾವಚ್ಛಿನ್ನಶ್ಯಾಮತ್ವರೂಪ ಸಾಧ್ಯಕ್ಕೆ ಶಾಕಪಾಕಜನ್ಯತ್ವರೂಪ ಉಪಾಧಿಯು ವ್ಯಾಪಕವಾಗುತ್ತದೆ. ಕೇವಲ ಶ್ಯಾಮತ್ವವನ್ನು ತೆಗೆದುಕೊಳ್ಳಬಾರದು. ತಾದಾತ್ಮ್ಯದಿಂದ ಮಿತ್ರಾತನಯತ್ವಾವಚ್ಛಿನ್ನ

ಮಿತ್ರಾತನಯತ್ವರೂಪಸಾಧನಕ್ಕೆ ಅದು ಅವ್ಯಾಪಕವಾಗುತ್ತದೆ. 'ಏವಮೇವ—' ಇತಿ. ಹೀಗೆಯೇ ಎರಡನೆಯ ಅವ್ಯಾಪ್ತಿಸ್ಥಳದಲ್ಲಿ ಬಹಿರ್ದ್ರವ್ಯತ್ವರೂಪಧರ್ಮದಿಂದಕೂಡಿದ ಸಾಧ್ಯಸಾಧನಗಳನ್ನು ತೆಗೆದುಕೊಂಡರೆ ಆಗ ಅಲ್ಲಿ ಉದ್ಭೂತರೂಪತ್ವಉಪಾಧಿಲಕ್ಷಣಕ್ಕೆ ಅವ್ಯಾಪ್ತಿದೋಷ ಬರುವುದಿಲ್ಲ. ಬಹಿರ್ದ್ರವ್ಯತ್ವಾವಚ್ಛಿನ್ನಪ್ರತ್ಯಕ್ಷತ್ವವು ಆತ್ಮಾದಿಗಳಲ್ಲಿ ಬರುವುದಿಲ್ಲ, ಹೀಗೆ 'ಧ್ವಂಸಃ—' ಎಂಬಲ್ಲಿ ಜನ್ಯತ್ವಧರ್ಮದಿಂದಕೂಡಿದ ಸಾಧ್ಯ ಸಾಧನಗಳನ್ನು ತೆಗೆದುಕೊಳ್ಳಬೇಕು. ಆಗ ಜನ್ಯತ್ವಾವಚ್ಛಿನ್ನವಿನಾಶಿತ್ವವ್ಯಾಪಕತ್ವ ಭಾವತ್ವೋಪಾಧಿಗೆ ಬರುತ್ತದೆ. ಜನ್ಯತ್ವಾವಚ್ಛಿನ್ನವಿನಾಶಿತ್ವವು ಪ್ರಾಗಭಾವದಲ್ಲಿ ಬರುವುದಿಲ್ಲ. 'ಧೂಮವಾನ್—ವಹ್ನೇಃ' ಎಂಬಲ್ಲಿ ಆರ್ದ್ರೇಂಧನಸಂಯೋಗವು ಉಪಾಧಿಯಾಗುತ್ತದೆ. ಇಲ್ಲಿ ಯಾವ ಧರ್ಮದ ಅವಶ್ಯಕತೆಯೂ ಇಲ್ಲ. ಶುದ್ಧಸಾಧ್ಯ ವ್ಯಾಪಕತ್ವ ಬರುತ್ತದೆ. ಎಲ್ಲೆಲ್ಲಿ ಧೂಮವಿದೆಯೋ ಅಲ್ಲಲ್ಲಿ ಆರ್ದ್ರೇಂಧನಸಂಯೋಗವಿದೆ. ಸಾಧನಾವ್ಯಾಪಕತ್ವವೂ ಬರುತ್ತದೆ. ವಹ್ನಿಸಾಧನ. ವಹ್ನಿ ಇರುವಲ್ಲಿ ಎಲ್ಲಾಕಡೆಯಲ್ಲಿ (ಅಯೋಗೋಲಕಾದಿಗಳಲ್ಲಿ) ಆರ್ದ್ರೇಂಧನಸಂಯೋಗವಿರುವುದಿಲ್ಲ 'ಸದ್ಧೇತೌ—' 'ವಹ್ನಿಮಾನ್—ಧೂಮಾತ್' ಇತ್ಯಾದಿ ಸದ್ಧೇತುಸ್ಥಳದಲ್ಲಿ ಇಂತಹ ಉಪಾಧಿ ಸಂಭವಿಸುವುದಿಲ್ಲವೆಂದು ವಿಶದಪಡಿಸುತ್ತಾನೆ. ವ್ಯಭಿಚಾರಿಹೇತುವಿನಲ್ಲಿ ಇದು ಸಂಭವಿಸುವುದೆಂದು ಬಿಡಿಸಿ ತೋರಿಸುತ್ತಾನೆ. 'ವ್ಯಭಿಚಾ—' ಇತಿ. 'ಧೂಮವಾನ್—ವಹ್ನೇಃ' ಎಂಬಲ್ಲಿ ವಹ್ನಿ ವ್ಯಭಿಚಾರಿಹೇತು. ಇಲ್ಲಿ ಉಪಾಧ್ಯಧಿಕರಣ ವಾದ ಪರ್ವತಮಹಾನಸಾದಿಗಳು ಸಾಧ್ಯವಾದ ಧೂಮಾಧಿಕರಣಗಳೂ ಆಗಿವೆ. ಉಪಾಧಿಶೂನ್ಯವಾದ (ಅರ್ದ್ರೇಂಧನಸಂಯೋಗ ಇಲ್ಲದಿರುವ) ಅಯೋಗೋಲಕಾದಿಗಳು ಸಾಧ್ಯವ್ಯಭಿಚಾರಾಧಿಕರಣಂ—ಸಾಧ್ಯವಾದ ಧೂಮಾಧಿಗಳಿಗೆ ಹೇತುವಾದ ವಹ್ನಿ ಯೊಡನೆ ವ್ಯಭಿಚಾರವಿರುವ ಅಧಿಕರಣ. ಸಾಧ್ಯವಾದಧೂಮವನ್ನು ಬಿಟ್ಟು ವಹ್ನಿಯು ಅಯೋಗೋಲಕದಲ್ಲಿರುತ್ತದೆ. ತದನ್ಯತರಾವಚ್ಛಿನ್ನಸ್ಯಸಾಧ್ಯಸ್ಯ—ಪರ್ವತಾಯೋ ಗೋಲಕಾನ್ಯತರತ್ವವಿಶಿಷ್ಟವಾದ ಧೂಮರೂಪಸಾಧ್ಯಕ್ಕೆ ವ್ಯಾಪಕವೂ, ವಹ್ನ್ಯಾದಿ ಹೇತುವಿಗೆ ಅವ್ಯಾಪಕವೂ ಉಪಾಧಿಯಾದ ಆರ್ದ್ರೇಂಧನಸಂಯೋಗವು ಆಗುತ್ತದೆ. ಅಂತತಃ—ಇಲ್ಲಿ ಯಾವಧರ್ಮಾವಚ್ಛಿನ್ನತ್ವವೂ ಇಲ್ಲದಿದ್ದರೂ ಕೊನೆಗೆ ತಿಳಿಯುತ್ತದೆ. ಇಂತಹಉಪಾಧಿಗೆ ಶುದ್ಧಸಾಧ್ಯವ್ಯಾಪಕವೆನ್ನುತ್ತಾರೆ.

ಎಲ್ಲಿಯಾದರೂ ಉಪಾಧಿಸಂಭವಿಸಿದರೆ ಆಗ ಅದರ ಪರಿಶುದ್ಧಿಗೋಸ್ಕರ ಉಪಾಧಿ ವ್ಯತಿರೇಕ (ಅಭಾವ) ದಿಂದ ಸಾಧ್ಯವ್ಯತಿರೇಕವನ್ನು ಅನುಮಾನಮಾಡಬೇಕು. ಆ ಅನುಮಾನದಲ್ಲಿ ತಿರುಗಿ ಒಂದು ಉಪಾಧಿಬರುವುದಾದರೆ ಆಗ ಹಿಂದೆ ಆಶಂಕಿಸಿದ ಉಪಾಧಿ ಉಪಾಧಿಯಲ್ಲವೆಂದು ತಿಳಿದು ಹೇತು ನಿರುಪಾಧಿಕವಾಗಿದೆಯೆಂದು ಅದು ಸಾಧ್ಯಸಾಧನಸಮರ್ಥವಾಗಿದೆಯೆಂದು ತಿಳಿಯಬೇಕು. ಇದಕ್ಕೆ ಉದಾಹರಣೆ— ಜಗತ್—ಕರ್ತೃಜನ್ಯಂ—ಕಾರ್ಯತ್ವಾತ್ । ಘಟವತ್ ॥ ಎಂದು ಈಶ್ವರಸಾಧ ಕಾನುಮಾನ ಹಿಂದೆ ಹೇಳಿದೆ. ಇಲ್ಲಿ 'ಶರೀರಜನ್ಯತ್ವಂ' ಉಪಾಧಿಯೆಂದು ನಾಸ್ತಿಕರು

ಹೇಳುತ್ತಾರೆ. ಇಲ್ಲಿ ಘಟಾದಿಸಪಕ್ಷದಲ್ಲಿ ಸಾಧ್ಯವ್ಯಾಪಕತ್ವ ಬರುತ್ತದೆ. "ಯತ್ರ್ರ ಕರ್ತೃಜನ್ಯತ್ವಂ ತತ್ರ್ರ ಶರೀರಜನ್ಯತ್ವಂ" ಎಂದು ವ್ಯಾಪ್ತಿ ಹೇಳಬಹುದು. ಆದರೆ "ಯತ್ರ್ರ ಕಾರ್ಯತ್ವಂ ತತ್ರ್ರ ಶರೀರಜನ್ಯತ್ವಂ" ಎಂದು ವ್ಯಾಪ್ತಿಹೇಳಲುಸಾಧ್ಯವಿಲ್ಲ. ಪಕ್ಷವಾದ ಜಗತ್ತಿನಲ್ಲಿ ಕಾರ್ಯತ್ವವಿದ್ದರೂ ಶರೀರಜನ್ಯತ್ವವಿಲ್ಲ. ಆದುದರಿಂದ ಸಾಧನಾ ವ್ಯಾಪಕತ್ವವಿದೆ. ಇಲ್ಲಿ ಶೋಧನೆಗೋಸ್ಕರ ವ್ಯತಿರೇಕದಿಂದ ಅನುಮಾನ ಹೇಳಬೇಕು. ವಿಮತಂ (—ಜಗತ್)—ಕರ್ತೃಜನ್ಯಂ ನ ಭವತಿ (ಕರ್ತ್ರ್ರಜನ್ಯಂ)—ಶರೀರಜನ್ಯತ್ವಾ ಭಾವಾತ್ । ವ್ಯೋಮವತ್ ॥ ಇದು ಉಪಾಧ್ಯಭಾವದಿಂದ ಸಾಧ್ಯಾಭಾವವನ್ನು ಸಾಧಿಸುವ ಅನುಮಾನ. (ನಾಸ್ತಿಕಮತದಂತೆ) ಇಲ್ಲಿ 'ಪ್ರಾಗಭಾವಾऽಪ್ರತಿಯೋಗಿತ್ವಂ' ಉಪಾಧಿ ಸಂಗತವಾಗುತ್ತದೆ. ಇದು ಸಾಧ್ಯವ್ಯಾಪಕವಾಗಿ ಸಾಧನಾವ್ಯಾಪಕವಾಗು ತ್ತದೆ. ಕರ್ತೃಜನ್ಯತ್ವಾಭಾವ ಇದ್ದಲ್ಲಿ ಪ್ರಾಗಭಾವಾಪ್ರತಿಯೋಗಿತ್ವವಿರುತ್ತದೆ. (ಆಕಾಶಾದಿಗಳಲ್ಲಿ ಪ್ರಸಿದ್ಧವಾಗಿದೆ) ಶರೀರಜನ್ಯತ್ವಾಭಾವ ಇದ್ದಲ್ಲೆಲ್ಲಾ ಅದು ಇಲ್ಲ. ಜಗತ್ತಿನಲ್ಲಿ ಶರೀರಜನ್ಯತ್ವಾಭಾವವಿದ್ದರೂ ಕರ್ತೃಜನ್ಯತ್ವಾಭಾವವಿಲ್ಲ. (ಅದರ ಅಭಾವ ಇದೆ.) ಪ್ರಾಗಭಾವಾऽಪ್ರತಿಯೋಗಿತ್ವಾಭಾವವಿದೆ. ಆದುದರಿಂದ ಸಾಧನಾವ್ಯಾಪಕ ವಾಗುತ್ತದೆ. ಹೀಗೆ ಎರಡನೆಯ ಉಪಾಧಿ ಬಂದುದರಿಂದ ಈಶ್ವರಸಾಧಕಾನುಮಾನ ದಲ್ಲಿ ಹೇಳಿದೆ. ಶರೀರಜನ್ಯತ್ವರೂಪ ಉಪಾಧಿ ಉಪಾಧಿಯಾಗುವುದಿಲ್ಲವೆಂದು ತಿಳಿಯ ಬೇಕು.

**ಸರ್ವೇ ಸಾಧ್ಯಸಮಾನಾಧಿಕರಣಾಃ ಸ್ಯುರುಪಾಧಯಃ ॥**
**ಹೇತೋರೇಕಾಶ್ರಯೇ ಯೇಷಾಂ ಸ್ವಸಾಧ್ಯವ್ಯಭಿಚಾರಿತಾ ॥ ೧೩೯ ॥**

ಅತ ಏವ ಲಕ್ಷಣಮುಪ್ಯುಪಾಧಿಸ್ವರೂಪಮೇತದನುಸಾರೇಣ ದರ್ಶಯತಿ ಸರ್ವ—ಇತಿ । ಸ್ವಮುಪಾಧಿಃ ಸ್ವಂಚ ಸಾಧ್ಯಂಚ ಸ್ವಸಾಧ್ಯೇ ತಯೋರ್ವ್ಯಭಿಚಾರಿ ತೇತ್ಯರ್ಥಃ ॥ ೧೩೯ ॥

ಧರ್ಮವನ್ನೊಳಗೊಂಡಿರುವಲಕ್ಷಣವೇ (ಯುದ್ಧರ್ಮಾವಚ್ಛಿನ್ನತ್ವಘಟಿತಲಕ್ಷಣ) ತಾತ್ಪರ್ಯವಿಷಯವಾದುದರಿಂದ ಅದಕ್ಕೆ ಅನುಸಾರವಾಗಿ ಉಪಾಧಿಸ್ವರೂಪವನ್ನು ತೋರಿಸುತ್ತಾನೆ. 'ಸರ್ವ—' ಇತಿ. ಯೇಷಾಂ—ಯಾವ ಉಪಾಧಿಗಳಿಗೆ, ಹೇತೋಃ—ಸಾಧನದ, ಏಕಾಶ್ರಯೇ—ಯಾವುದಾದರೂ ಒಂದು ಅಧಿಕರಣದಲ್ಲಿ, ಸ್ವ ಸಾಧ್ಯವ್ಯಭಿಚಾರಿತಾ—ಉಪಾಧಿಮತ್ತು ಸಾಧ್ಯಕ್ಕೆ ವ್ಯಭಿಚಾರಿತ್ವ ಬರುತ್ತದೆಯೋ, ('ಸಾಧ್ಯವನ್ನಿಷ್ಠಾತ್ಯಂತಾಭಾವಪ್ರತಿಯೋಗಿತ್ವಂ'—ಸಾಧನಾಧಿಕರಣದಲ್ಲಿ ಇಲ್ಲದಿರು ವುದು) ತೇ ಸರ್ವೇಉಪಾಧಯಃ—ಆ ಎಲ್ಲಾ ಉಪಾಧಿಗಳೂ, ಸಾಧ್ಯಸಮಾನಾಧಿ ಕರಣಾಃ ಸ್ಯುಃ—ಸಾಧ್ಯಾಧಿಕರಣದಲ್ಲಿ ಇರುವವುಗಳು ಆಗುತ್ತವೆ. ('ಸಾಧ್ಯಾಧಿಕರಣ ವೃತ್ತ್ಯಂತಾಭಾವಾऽಪ್ರತಿಯೋಗಿತ್ವಂ' ವ್ಯಾಪಕತ್ವಂ) 'ಸ್ವಸಾಧ್ಯವ್ಯಭಿಚರಿತಾ' ಎಂಬಲ್ಲಿ

'ಸ್ವಸ್ಯ ಸಾಧ್ಯಂ' ಎಂದು ಷಷ್ಠೀತತ್ಪುರುಷವನ್ನು ಮಾಡಬಾರದೆಂದು ತಿಳಿಸಲು ಮುಕ್ತಾವಳಿಯಲ್ಲಿ 'ಸ್ವಂಚ—' ಎಂದು ದ್ವಂದ್ವಸಮಾಸವನ್ನುಮಾಡಿ ತೋರಿಸಿರುತ್ತಾನೆ.

## ವ್ಯಭಿಚಾರಸ್ಯಾನುಮಾನಮುಪಾಧೇಸ್ತು ಪ್ರಯೋಜನಮ್ ॥

ಉಪಾಧೇರ್ದೂಷಕತಾಬೀಜಮಾಹ—ವ್ಯಭಿಚಾರಸ್ಯೇತಿ । ಉಪಾಧಿವ್ಯಭಿಚಾರೇಣ ಹೇತೌ ಸಾಧ್ಯವ್ಯಭಿಚಾರಾನುಮಾನಮುಪಾಧೇಃ ಪ್ರಯೋಜನಮಿತ್ಯರ್ಥಃ । ತಥಾಹಿ—ಯತ್ರ ಶುದ್ಧಸಾಧ್ಯವ್ಯಾಪಕ ಉಪಾಧಿಸ್ತತ್ರ ಶುದ್ಧೇನೈವೋಪಾಧಿವ್ಯಭಿಚಾರೇಣ ಸಾಧ್ಯವ್ಯಭಿಚಾರಾನುಮಾನಮ್ । ಯಥಾ ಧೂಮವಾನ್ವಹ್ನೇರಿತ್ಯಾದೌ, ವಹ್ನಿರ್ಧೂಮವ್ಯಭಿಚಾರೀ—ತದ್ವ್ಯಾಪಕಾರ್ದ್ರೇಂಧನಸಂಯೋಗವ್ಯಭಿಚಾರಿತ್ವಾದಿತಿ । ವ್ಯಾಪಕವ್ಯಭಿಚಾರಿಣೋ ವ್ಯಾಪ್ಯವ್ಯಭಿಚಾರಾವಶ್ಯಕತ್ವಾತ್ । ಯತ್ರತು ಕಿಂಚಿದ್ಧರ್ಮಾವಚ್ಛಿನ್ನಸಾಧ್ಯವ್ಯಾಪಕ ಉಪಾಧಿಸ್ತತ್ರ ತದ್ಧರ್ಮವತಿ ಉಪಾಧಿವ್ಯಭಿಚಾರೇಣ ಸಾಧ್ಯವ್ಯಭಿಚಾರಾನುಮಾನಮ್ । ಯಥಾ ಸ ಶ್ಯಾಮೋ ಮಿತ್ರಾತನಯತ್ವಾದಿತ್ಯಾದೌ ಮಿತ್ರಾತನಯತ್ವಂ ಶ್ಯಾಮತ್ವವ್ಯಭಿಚಾರಿ ಮಿತ್ರಾತನಯೇ ಶಾಕಪಾಕಜತ್ವವ್ಯಭಿಚಾರಿತ್ವಾತ್-ಇತಿ । ಬಾಧಾನುನ್ನೀತಪಕ್ಷೇತರಸ್ತು ಸಾಧ್ಯವ್ಯಾಪಕತಾಗ್ರಾಹಕಪ್ರಮಾಣಾಭಾವಾತ್ ಸ್ವವ್ಯಾಘಾತಕತ್ವಾಚ್ಚ ನೋಪಾಧಿಃ । ಬಾಧೋನ್ನೀತಸ್ತೂಪಾಧಿರ್ಭವತ್ಯೇವ । ಯಥಾ ವಹ್ನಿರನುಷ್ಣಃ ಕೃತಕತ್ವಾದಿತ್ಯಾದೌ ಪ್ರತ್ಯಕ್ಷೇಣ ವಹ್ನಾವುಷ್ಣತ್ವಗ್ರಹೇ ವಹ್ನೀತರತ್ವಮುಪಾಧಿಃ। ಯತ್ರ ತೂಪಾಧೇಃ ಸಾಧ್ಯವ್ಯಾಪಕತಾ ಸಂದಿಹ್ಯತೇ ಸ ಸಂದಿಗ್ಧೋಪಾಧಿಃ। ಪಕ್ಷೇತರಸ್ತು ಸಂದಿಗ್ಧೋಪಾಧಿರಪಿ ನೋದ್ಭಾವನೀಯಃ ಕಥಕಸಂಪ್ರದಾಯಾನುರೋಧಾದಿತಿ । ಕೇಚಿತ್ತು ಸತ್ಪ್ರತಿಪಕ್ಷೋತ್ಥಾಪನ ಮುಪಾಧಿಫಲಮ್ । ತಥಾಹಿ—ಅಯೋಗೋಲಕಂ ಧೂಮವದ್ವಹ್ನೇರಿತ್ಯಾದಾವಯೋಗೋಲಕಂ ಧೂಮಾಭಾವವದಾರ್ದ್ರೇಂಧನಾಭಾವಾದಿತಿ ಸತ್ಪ್ರತಿಪಕ್ಷಸಂಭವಾತ್ । ಇತ್ಥಂ ಚ ಸಾಧನವ್ಯಾಪಕೋಽಪಿ ಕ್ವಚಿದುಪಾಧಿಃ । ಯಥಾ ಕರಕಾ ಪೃಥಿವೀ ಕಠಿಣಸಂಯೋಗವತ್ತ್ವಾತ್-ಇತ್ಯಾದಾವನುಷ್ಣಾಶೀತಸ್ಪರ್ಶವತ್ತ್ವಮ್ । ಸಚಾತ್ರಸ್ವರೂಪಾಸಿದ್ಧಿರೇವ ದೂಷಣಮಿತಿ ವಾಚ್ಯಂ, ಸರ್ವತ್ರೋಪಾಧೇರ್ದೂಷಣಾಂತರಸಾಂಕರ್ಯಾತ್ । ಅತ್ರ ಚ ಸಾಧ್ಯವ್ಯಾಪಕಃ ಪಕ್ಷಾವೃತ್ತಿರುಪಾಧಿರಿತ್ಯಾಹುಃ ॥

ಉಪಾಧಿಗೆ ಫಲವನ್ನು ತೋರಿಸುತ್ತಾನೆ. 'ವ್ಯಭಿಚಾರಸ್ಯ—' ಇತಿ. ಉಪಾಧಿವ್ಯಭಿಚಾರದಿಂದ ಹೇತುವಿನಲ್ಲಿ ಸಾಧ್ಯವ್ಯಭಿಚಾರಾನುಮಾನವೇ ಉಪಾಧಿಯ ಪ್ರಯೋಜನ. ಉದಾಹರಣೆಯಿಂದ ವಿವರಿಸುತ್ತಾನೆ. 'ತಥಾಹಿ—' ಇತಿ. ಎಲ್ಲಿ ಉಪಾಧಿಯು ಶುದ್ಧವಾದ ಸಾಧ್ಯಕ್ಕೆ ವ್ಯಾಪಕವಾಗುತ್ತದೆಯೋ ಅಲ್ಲಿ ಶುದ್ಧವಾದ ಉಪಾಧಿಯವ್ಯಭಿಚಾರದಿಂದ ಸಾಧ್ಯವ್ಯಭಿಚಾರಾನುಮಾನ ಬರುತ್ತದೆ. 'ಯಥಾ—'

ಇತಿ. 'ಧೂಮವಾನ್—ವಹ್ನೇಃ' ಎಂಬಲ್ಲಿ ಆರ್ದ್ರೇಂಧನಸಂಯೋಗವು ಉಪಾಧಿಯೆಂದು ಹೇಳಿವೆ. ಇದು ಶುದ್ಧ ಸಾಧ್ಯಕ್ಕೆ (ಕಿಂಚಿದ್ಧರ್ಮಾವಚ್ಛಿನ್ನವಾದ ಸಾಧ್ಯವಲ್ಲ) ವ್ಯಾಪಕ. ಆಗ 'ವಹ್ನಿಃ–ಧೂಮವ್ಯಭಿಚಾರೀ–ತದ್ ವ್ಯಾಪಕಾರ್ದ್ರೇಂಧನಸಂಯೋಗವ್ಯಭಿಚಾರಿತ್ವಾತ್ ಎಂದು ಉಪಾಧಿವ್ಯಭಿಚಾರಿಜ್ಞಾನದಿಂದ ಸಾಧ್ಯವ್ಯಭಿಚಾರ ಹೇತುವಿಗೆ ಸಿದ್ಧವಾಗುತ್ತದೆ. ವಹ್ನಿರೂಪಹೇತುವು ಧೂಮರೂಪಸಾಧ್ಯಕ್ಕೆವ್ಯಾಪಕವಾದ (ಉಪಾಧಿ) ಆರ್ದ್ರೇಂಧನಸಂಯೋಗಕ್ಕೆ ವ್ಯಭಿಚಾರಿಯಾದಮೇಲೆ, (ಆರ್ದ್ರೇಂಧನಸಂಯೋಗಇಲ್ಲದಿರುವ ಅಯೋಗೋಲಕದಲ್ಲಿ ವಹ್ನಿಇರುವುದರಿಂದ) ಉಪಾಧಿವ್ಯಾಪ್ಯವಾದ ಧೂಮಕ್ಕೆವ್ಯಭಿಚಾರಿಯಾಗುವುದರಲ್ಲಿ ಸಂದೇಹವಿಲ್ಲ. (ಧೂಮವಿಲ್ಲದಿರುವ ಅಯೋಗೋಲಕದಲ್ಲಿ ವಹ್ನಿ ಇರುವುದರಿಂದ ವಹ್ನಿಯು ಧೂಮವ್ಯಭಿಚಾರಿಯಾಗುತ್ತದೆ.) ಇದನ್ನೇ ವಿವರಿಸುತ್ತಾನೆ. 'ವ್ಯಾಪಕಸ್ಯ—' ಇತಿ. ವ್ಯಾಪಕಕ್ಕೇ ವ್ಯಭಿಚಾರಿಯಾದಮೇಲೆ ವ್ಯಾಪ್ಯಕ್ಕೆ ವ್ಯಭಿಚಾರಿಯಾಗೀಯೇ ಆಗಿರುತ್ತದೆ ಎಂದರ್ಥ. ಶುದ್ಧಸಾಧ್ಯವ್ಯಾಪಕವಾದ ಉಪಾಧಿಯಫಲವನ್ನು ತೋರಿಸಿ, ಧರ್ಮಾಂತರಾವಚ್ಛಿನ್ನಸಾಧ್ಯವ್ಯಾಪಕೋಪಾಧಿವ್ಯಭಿಚಾರದ ಮೂಲಕ ಸಾಧ್ಯವ್ಯಭಿಚಾರದರೀತಿಯನ್ನು ಹೇಳುತ್ತಾನೆ. 'ಯತ್ರತು—' ಇತಿ. 'ಸಃ—ಶ್ಯಾಮಃ—ಮಿತ್ರಾತನಯತ್ವಾತ್ । ಎಂಬಲ್ಲಿ 'ಶಾಕಪಾಕಜತ್ವಂ' ಉಪಾಧಿಯೆಂದು ಹೇಳಿದೆ. ಮಿತ್ರಾಎಂಬವಳಿಗೆ ಶಾಕಾಹಾರಸೇವನೆ ಸಮಯದಲ್ಲಿ ಕೆಲವುಕಪ್ಪುಮಕ್ಕಳೂ, ಉತ್ತಮಾಹಾರಸೇವನೆಸಮಯದಲ್ಲಿ ಕೆಲವು ಬಿಳೀ ಮಕ್ಕಳೂ ಹುಟ್ಟಿರುತ್ತವೆ. ಇಲ್ಲಿ ಅವಚ್ಛೇದಕಧರ್ಮ—ಮಿತ್ರಾತನಯತ್ವ. ಅದು ಉಳ್ಳ ಮಿತ್ರಾತನಯನಲ್ಲಿ (ಬಿಳೀಹುಡುಗ) ಶಾಕಪಾಕಜತ್ವರೂಪಉಪಾಧಿಇಲ್ಲ ಉಪಾಧ್ಯಭಾವಾಧಿಕರಣವಾದ ಇಲ್ಲಿ ಶ್ಯಾಮತ್ವರೂಪಸಾಧ್ಯಾಭಾವವೂ ಇದೆ. ಉಪಾಧಿಯು ಮಿತ್ರಾತನಯತ್ವರೂಪಸಾಧನಾವ್ಯಾಪಕವೂ ಆಗಿರುತ್ತದೆ. ಆದುದರಿಂದ ಉಪಾಧಿವ್ಯಭಿಚಾರಹೇತುವಿನಿಂದ ಸಾಧ್ಯವ್ಯಭಿಚಾರವು ಸಾಧಿತವಾಗುತ್ತದೆ. 'ಮಿತ್ರಾತನಯತ್ವಂ—ಶ್ಯಾಮತ್ವವ್ಯಭಿಚಾರಿ—ಮಿತ್ರಾತನಯೇ [ಶುಕ್ಲೇ] ಶಾಕಪಾಕಜತ್ವವ್ಯಭಿಚಾರಾತ್' ಎಂದು ಅನುಮಾನ.

ಎಲ್ಲಾ ಅನುಮಾನಸ್ಥಳಗಳಲ್ಲಿಯೂ 'ಪಕ್ಷೇತರತ್ವ'ರೂಪ ಉಪಾಧಿಸಂಭವಿಸುವುದರಿಂದ ಅನುಮಾನವೇ ಅಪ್ರಮಾಣವೆಂದಾಗಬೇಕಾಗುತ್ತದೆ. ಪಕ್ಷದಲ್ಲಿ ಸಾಧ್ಯಸಂದೇಹವಿರುವುದರಿಂದ ಪಕ್ಷಕ್ಕಿಂತ ಬೇರೆಯಾದ ಸ್ಥಳದಲ್ಲಿಯೇ ಸಾಧ್ಯವ್ಯಾಪಕತ್ವ ಹೇಳಬೇಕು. ಹೀಗೆ ದೋಷಪ್ರಾಪ್ತವಾದರೆ ಸಿದ್ಧಾಂತ ತೋರಿಸುತ್ತಾನೆ. 'ಬಾಧಾನು—' ಇತಿ. ಬಾಧದೋಷದಿಂದಕೂಡಿರದ ಪಕ್ಷೇತರತ್ವಧರ್ಮವು ಎಲ್ಲಿಯೂ ಉಪಾಧಿಯಾಗುವುದಿಲ್ಲವೆಂದರ್ಥ. ಇದಕ್ಕೆ ಕಾರಣ ತೋರಿಸುತ್ತಾನೆ. 'ಸಾಧ್ಯವ್ಯಾ—' ಇತಿ. ಯದ್ಧರ್ಮಾವಚ್ಛಿನ್ನಪದದಿಂದ ಪಕ್ಷಮಾತ್ರದಲ್ಲಿರುವ ಪರ್ವತತ್ವಾದಿಧರ್ಮಗಳನ್ನು ತೆಗೆದುಕೊಂಡರೆ ಆಗ ಅವುಗಳಿಗೆ ಪಕ್ಷೇತರತ್ವಾದಿಸಾಮಾನಾಧಿಕರಣ್ಯಬರುವುದಿಲ್ಲ. ಆದುದರಿಂದ ಪಕ್ಷೇತರತ್ವಧರ್ಮವು ಉಪಾಧಿಯಾಗುವುದಿಲ್ಲ. ಇನ್ನೊಂದು ಕಾರಣ. 'ಸ್ವ

ವ್ಯಾಘಾತಾ—' ಇತಿ. ಉಪಾಧಿಸಾಮಾನ್ಯಕ್ಕೂ ದೂಷಕತಾವ್ಯಾಘಾತ ಬರಬೇಕಾಗುತ್ತದೆ. ಏಕೆಂದರೆ ಯಾವ ಅನುಮಾನಹೇಳಿದರೂ ಅಲ್ಲಿ ಪಕ್ಷೇತರತ್ವರೂಪ ಉಪಾಧಿ ಇದ್ದೇ ಇರುವುದರಿಂದ ಅನುಮಾನಸಾಮಾನ್ಯವೂ ದುಷ್ಟವಾಗಿ ಅದು ಅಪ್ರಮಾಣವಾಗಿ ಇಲ್ಲದಂತಾದೀತು. ವ್ಯಭಿಚಾರಾನುಮಾನಾಧೀನವಾಗಿ ಉಪಾಧಿಗೆ ದೂಷಕತ್ವ ಹೇಳಬೇಕು. ಆಗ ಪಕ್ಷೇತರತ್ವಧರ್ಮಕ್ಕೆ ಉಪಾಧಿತ್ವ ಬಂದರೆ ಅನುಮಾನಸಾಮಾನ್ಯೋಚ್ಛೇದವಾಗ ಬೇಕಾಗುತ್ತದೆ.

ಸಾಧ್ಯವ್ಯಾಪಕವನ್ನು ತಿಳಿಸುವ (ಗ್ರಾಹಕ) ಪ್ರಮಾಣವು ಎಲ್ಲಿ ಇರುತ್ತದೆಯೋ ಅಲ್ಲಿ ಪಕ್ಷೇತರತ್ವಧರ್ಮವು ಉಪಾಧಿಯಾಗುತ್ತದೆಂದು ತೋರಿಸುತ್ತಾನೆ. 'ಬಾಧೋನ್ನೀತ—' ಇತಿ. ಬಾಧದಿಂದ ಪಕ್ಷದಲ್ಲಿ ಸಾಧ್ಯಾಭಾವವಿದೆಯೆಂದು ತಿಳಿದಿರುವಾಗ, ಸಾಧ್ಯವ್ಯಾಪಕವಾಗಿ ನಿಶ್ಚಿತವಾಗಿರುವುದು ಎಂದರ್ಥ. ಉದಾಹರಣೆ. ವಹ್ನಿಃ—ಅನುಷ್ಣಃ—ಕೃತಕತ್ವಾತ್ । ಇಲ್ಲಿ ಅನುಷ್ಣತ್ವಾಭಾವವು ವಹ್ನಿಯಲ್ಲಿರುವುದರಿಂದ ಬಾಧವಾಗುತ್ತದೆ. ಆದುದರಿಂದ ಪಕ್ಷೇತರತ್ವ ಅಂದರೆ ವಹ್ನೀತರತ್ವವು ಉಪಾಧಿಯಾಗಬಹುದು. ಸಂದಿಗ್ಧೋಪಾಧಿಯನ್ನು ತೋರಿಸುತ್ತಾನೆ. 'ಯತ್ರ—' ಇತಿ. ಉಪಾಧಿಗೆ ಸಾಧ್ಯವ್ಯಾಪಕತ್ವಸಂದೇಹ ಬಂದರೆ ಅಲ್ಲಿ ಸಂದಿಗ್ಧೋಪಾಧಿಯೆಂದು ಹೆಸರು. ಪಕ್ಷದಲ್ಲಿ ಸಾಧ್ಯಸಂದೇಹವಿದ್ದರೆ ಪಕ್ಷೇತರತ್ವದಲ್ಲಿ ಸಾಧ್ಯವ್ಯಾಪಕತಾಸಂದೇಹ ಸಂಭವಿಸಬಹುದೆಂದರ್ಥ. ಪಕ್ಷೇತರದಲ್ಲಿ ಸಂದಿಗ್ಧೋಪಾಧಿಯನ್ನು ಹೇಳುವ ವಾದಿಪ್ರತಿವಾದಿಗಳಿಬ್ಬರೂ ನಿಗೃಹೀತರಾಗುವುದರಿಂದ ಅದರಲ್ಲಿ ಉಪಾಧಿತ್ವಶಂಕಾ ಮಾಡಬಾರದು. ಇದಕ್ಕೆ ಕಥಕಬೀಜದ ಉದಾಹರಣೆ ನಿಮಿತ್ತವಾಗಿ ಹೇಳಿದೆ. ಅದರಪುಡಿಯನ್ನು ನೀರಿನಲ್ಲಿ ಹಾಕಿದರೆ ನೀರಿನ ಕೊಳೆಯೊಡನೆ ಅದೂ ನಾಶವಾಗುತ್ತದೆ.

ಸತ್ಪ್ರತಿಪಕ್ಷವನ್ನು ತಂದುಕೊಡುವುದರಿಂದ ಉಪಾಧಿಗೆ ದೂಷಕತ್ವವೆಂಬವರಮತವನ್ನು ತೋರಿಸುತ್ತಾನೆ—'ಕೇಚಿತ್—' ಇತಿ. 'ಅಯೋಗೋಲಕಂ—ಧೂಮವತ್—ವಹ್ನೇಃ' ಎಂದು ಅನುಮಾನಹೇಳಿದಾಗ. ವಹ್ನಿರೂಪಹೇತುವು ಸತ್ಪ್ರತಿಪಕ್ಷಹೇತ್ವಾಭಾಸಕ್ಕೆ ವಿಷಯವಾಗುತ್ತದೆ. 'ಅಯೋಗೋಲಕಂ—ಧೂಮಾಭಾವವತ್—ಆರ್ದ್ರೇಂಧನ ಸಂಯೋಗಾಭಾವಾತ್' ಎಂದು ಉಪಾಧ್ಯಭಾವರೂಪ ಹೇತುವಿನಿಂದ ಸತ್ಪ್ರತಿಪಕ್ಷಿತವಾಗುತ್ತದೆ. 'ಇತ್ಥಂಚ—' ಇತಿ. ಸತ್ಪ್ರತಿಪಕ್ಷೋತ್ಥಾಪಕವಾಗಿ ದೂಷಕತ್ವಸಿದ್ಧವಾದಮೇಲೆ ಎಂದರ್ಥ. ಕೆಲವುಕಡೆ ಸಾಧನವ್ಯಾಪಕವಾದದ್ದೂ ಉಪಾಧಿಯಾಗುತ್ತದೆ. ಉದಾಹರಣೆ. "ಕರಕಾ (ಮಂಜುಗಡ್ಡೆ) ಪೃಥಿವೀ—ಕಠಿಣಸಂಯೋಗಾತ್" ಇಲ್ಲಿ ಅನುಷ್ಣಾಶೀತಸ್ಪರ್ಶವತ್ವಂ" ಉಪಾಧಿಯಾಗುತ್ತದೆ. ಇದು ಸಾಧನವ್ಯಾಪಕವಾಗಿದೆ. 'ಯತ್ರ—ಕಠಿಣಸಂಯೋಗತ್ವಂ ತತ್ರ—ಅನುಷ್ಣಾಶೀತಸ್ಪರ್ಶವತ್ವಂ" ಎಂದು ವ್ಯಾಪ್ತಿ ಪಾಷಾಣಾದಿಗಳಲ್ಲಿ ಪ್ರಸಿದ್ಧವಾಗಿದೆ. ವಿರೋಧಿಹೇತುವಿಗೆ ಉತ್ಥಾಪಕವಾದರೆ ಮಾತ್ರ ಉಪಾಧಿಗೆ ದೂಷಕತ್ವಬರುತ್ತದೆಂದರೆ ಆಗ ಇಲ್ಲಿ 'ಕರಕಾ—ಪೃಥಿವೀತ್ವಾಭಾವವತೀ—ಕಠಿಣಸಂಯೋಗವ್ಯಾಪಕಾನುಷ್ಣಾಶೀತಸ್ಪರ್ಶ

ವತ್ತ್ವಾಭಾವಾತ್' ಎಂದು ಸತ್ಪ್ರತಿಪಕ್ಷವನ್ನು ಹುಟ್ಟಿಸಿಕೊಟ್ಟಮೇಲೆ ಅನುಷ್ಣಾಶೀತ ಸ್ಪರ್ಶವತ್ವಕ್ಕೆ ಉಪಾಧಿತ್ವ ಹೇಳಬೇಕು. 'ನಚ—' ಎಂಬುದರಿಂದ ಪುನಃ ಶಂಕಿಸುತ್ತಾನೆ. ಸ್ವರೂಪಾಸಿದ್ಧಿಯಿಂದಲೇ ಉಪಾಧಿಗೆ ದೂಷಕತ್ವಹೇಳಬೇಕೆಂಬ ನಿಯಮವಿಲ್ಲ. ಸತ್ಪ್ರತಿಪಕ್ಷಾದಿಗಳಿಂದ ಸಾಂಕರ್ಯಬಂದರೂ ಯಾವ ದೋಷವೂ ಇಲ್ಲ. 'ಅತ್ರಚ—' ಇತಿ. ಸತ್ಪ್ರತಿಪಕ್ಷೋತ್ಥಾಪಕತ್ವಪಕ್ಷದಲ್ಲಿ ಸಾಧ್ಯವ್ಯಾಪಕವಾಗಿ ಪಕ್ಷದಲ್ಲಿಲ್ಲದಿರುವುದೇ ಉಪಾಧಿಯಾಗುತ್ತದೆ. ಅದು ಪಕ್ಷದಲ್ಲಿಯೂ ಇರುವುದಾದರೆ ಪಕ್ಷದಲ್ಲಿ ಉಪಾಧ್ಯಭಾವದಿಂದ ಸಾಧ್ಯಾಭಾವವನ್ನು ಸಾಧಿಸುವುದಕ್ಕಾಗುವುದಿಲ್ಲ.

**ಶಬ್ದೋಪಮಾನಯೋರ್ನೈವ ಪೃಥಕ್ ಪ್ರಾಮಾಣ್ಯಮಿಷ್ಯತೇ ॥ ೧೪೧ ॥**
**ಅನುಮಾನಗತಾರ್ಥತ್ವಾದಿತಿ ವೈಶೇಷಿಕಂ ಮತಮ್ ॥**
**ತನ್ನ ಸಮ್ಯಗ್ವಿನಾ ವ್ಯಾಪ್ತಿಬೋಧಂ ಶಬ್ದಾದಿಬೋಧತಃ ॥ ೧೪೧ ॥**

ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ,ವೆಂದು ನಾಲ್ಕುಪ್ರಮಾಣಗಳು ಹಿಂದೆ ಹೇಳಿವೆ. ಈಗ ವೈಶೇಷಿಕ ಮತವನ್ನು ನಿರಾಕರಣೆಮಾಡಲು ಅವರಮತವನ್ನು ತಿಳಿಸುತ್ತಾನೆ. ಪ್ರತ್ಯಕ್ಷ, ಅನುಮಾನವೆಂದು ಎರಡೇ ಪ್ರಮಾಣಗಳು. ಶಬ್ದ ಮತ್ತು ಉಪಮಾನಗಳಿಗೆ, ಪೃಥಕ್ ಪ್ರಾಮಾಣ್ಯಂ—ಇತರ ಪ್ರಮಾಣತ್ವವು, ನೈವಇಷ್ಯತೇ—ನಿಶ್ಚಯವಾಗಿಯೂ ಅಂಗೀಕರಿಸಲ್ಪಡುವುದಿಲ್ಲ. ಕಾರಣ ಅವು ಅನುಮಾನದಲ್ಲಿಯೇ ಅಂತರ್ಭಾವಹೊಂದುವುದರಿಂದ ಬೇರೆ ಹೇಳಬೇಕಾಗಿಲ್ಲವೆಂದು ವೈಶೇಷಿಕಮತ. 'ತನ್ನ ಸಮ್ಯಕ್—' ಎಂದು ಖಂಡಿಸುತ್ತಾನೆ. ಇದು ಯುಕ್ತಿಯುಕ್ತವಾಗುವುದಿಲ್ಲ. ವ್ಯಾಪ್ತಿ ಬೋಧಂ ವಿನಾ—ವ್ಯಾಪ್ತಿಜ್ಞಾನವಿಲ್ಲದೇ, ಶಬ್ದಾದಿಬೋಧತಃ—ಕೇವಲ ಶಬ್ದಜ್ಞಾನದಿಂದಲೂ, ಕೇವಲ ಸಾದೃಶ್ಯಜ್ಞಾನದಿಂದಲೂ ಅರ್ಥಜ್ಞಾನ ನಿಶ್ಚಿತವಾಗುವುದರಿಂದ ಅವೂ ಬೇರೆ ಬೇರೆ ಪ್ರಮಾಣಗಳಾಗುತ್ತವೆ ಎಂದರ್ಥ. ॥

ಶಬ್ದೋಪಮಾನಯೋರಿತಿ ॥ ವೈಶೇಷಿಕಾಣಾಂ ಮತೇ ಪ್ರತ್ಯಕ್ಷಮನುಮಾನಂ ಚ ಪ್ರಮಾಣಮ್ ॥ ಶಬ್ದೋಪಮಾನಯೋಸ್ತ್ವನುಮಾನವಿಧಯೈವ ಪ್ರಾಮಾಣ್ಯಮ್ । ತಥಾಹಿ—ದಂಡೇನ ಗಾಮನಯೇತ್ಯಾದಿಲೌಕಿಕಪದಾನಿ ಯಜೇತೇತ್ಯಾದಿವೈದಿಕಪದಾನಿ ವಾ ತಾತ್ಪರ್ಯವಿಷಯಸ್ಮಾರಿತಪದಾರ್ಥಸಂಸರ್ಗಪ್ರಮಾಪೂರ್ವಕಾಣಿ—ಆಕಾಂಕ್ಷಾದಿಮತ್ಪದಕದಂಬತ್ವಾತ್, ಘಟಮಾನಯೇತಿ ಪದಕದಂಬವತ್ । ಯದ್ವಾ ಏತೇಪದಾರ್ಥಾ ಮಿಥಃ ಸಂಸರ್ಗವಂತಃ—ಯೋಗ್ಯತಾದಿಮತ್ಪದೋಪಸ್ಥಾಪಿತತ್ವಾತ್, ತಾದೃಶಶಬ್ದಾರ್ಥವತ್ । ದೃಷ್ಟಾಂತೇಽಪಿ ದೃಷ್ಟಾಂತಾಂತರೇಣ ಸಾಧ್ಯಸಿದ್ಧಿರಿತಿ । ಏವಂ ಗವಯವ್ಯಕ್ತಿಪ್ರತ್ಯಕ್ಷಾನಂತರಂ ಗವಯಪದಂ ಗವಯತ್ವಪ್ರವೃತ್ತಿನಿಮಿತ್ತಕಮ್—ಅಸತಿ ವೃತ್ತ್ಯಂತರೇ ವೃದ್ಧೈಸ್ತತ್ರ ಪ್ರಯುಜ್ಯಮಾನತ್ವಾತ್ । ಅಸತಿ ಚ ವೃತ್ತ್ಯಂತರೇ ವೃದ್ಧೈರ್ಯತ್ರ

ಯತ್ರ ಪ್ರಯುಜ್ಯತೇ ತತ್ರ ತತ್ತತ್ಪ್ರವೃತ್ತಿನಿಮಿತ್ತಕತ್ವಮ್ । ಯಥಾ ಗೋಪದಂ ಗೋತ್ವಪ್ರವೃತ್ತಿನಿಮಿತ್ತಕಮ್ । ಯದ್ವಾ ಗವಯಪದಂ ಸಪ್ರವೃತ್ತಿನಿಮಿತ್ತಕಂ ಸಾಧುಪದತ್ವಾದಿತ್ಯನುಮಾನೇನ ಪಕ್ಷಧರ್ಮತಾಬಲಾದ್ಗವಯತ್ವ ಪ್ರವೃತ್ತಿ ನಿಮಿತ್ತಕತ್ವಂ ಸಿದ್ಧ್ಯತಿ । ತನ್ಮತಂ ದೂಷಯತಿ । ವ್ಯಾಪ್ತಿಜ್ಞಾನಂ ವಿನಾಪಿ ಶಾಬ್ದಬೋಧಸ್ಯಾನುಭವ ಸಿದ್ಧತ್ವಾತ್ । ನಹಿ ಸರ್ವತ್ರ ಶಬ್ದಶ್ರವಣಾನಂತರಂ ವ್ಯಾಪ್ತಿಜ್ಞಾನೇ ಪ್ರಮಾಣಮಸ್ತೀತಿ । ಕಿಂಚ ಸರ್ವತ್ರ ಶಾಬ್ದಸ್ಥಲೇ ಯದಿ ವ್ಯಾಪ್ತಿಜ್ಞಾನಂ ಕಲ್ಪ್ಯತೇ ತದಾ ಸರ್ವತ್ರಾನುಮಿತಿಸ್ಥಲೇ ಪದಜ್ಞಾನಂ ಕಲ್ಪಯಿತ್ವಾ ಶಾಬ್ದಬೋಧ ಏವ ಕಿಂ ನ ಸ್ವೀಕ್ರಿಯತಾಮಿತಿಧ್ಯೇಯಮ್ ॥೧೪೧॥

ಕಾರಿಕಾರ್ಥವನ್ನು ವಿವರಿಸುತ್ತಾನೆ—'ವೈಶೇಷಿಕಾಣಾಂ—' ಇತಿ. ವೈಶೇಷಿಕರ ಮತದಲ್ಲಿ ಪ್ರತ್ಯಕ್ಷ, ಅನುಮಾನವೆಂದು ಎರಡೇ ಪ್ರಮಾಣಗಳು. ಶಬ್ದ ಮತ್ತು ಉಪ ಮಾನಗಳು ಅನುಮಾನದಲ್ಲಿಯೇ ಅಂತರ್ಭಾವಹೊಂದುವುದರಿಂದ ಅವು ಬೇರೆ ಪ್ರಮಾಣ ಗಳಾಗುವುದಿಲ್ಲ. 'ತಥಾಹಿ—' ಎಂಬುದರಿಂದ ಅಂತರ್ಭಾವವನ್ನು ತೋರಿಸುತ್ತಾನೆ. 'ದಂಡೇನ—' ಇತಿ. ಲೌಕಿಕಪದ ಅಥವಾ ವೈದಿಕಪದಗಳೇ ಪಕ್ಷ. ತಾತ್ಪರ್ಯ ವಿಷಯ, ಸ್ಮಾರಿತಪದಾರ್ಥಸಂಸರ್ಗಪ್ರಮಾಪೂರ್ವಕತ್ವ ಸಾಧ್ಯ. ತಾತ್ಪರ್ಯಕ್ಕೆ ವಿಷಯವಾಗಿಯೂ, ಶಕ್ತಿ ಅಥವಾ ಲಕ್ಷಣಾರೂಪವೃತ್ತಿಯಿಂದ ಉಪಸ್ಥಾಪಿತವಾದ ಯಾವ ಪದಾರ್ಥಗಳ ಪರಸ್ಪರಸಂಸರ್ಗವಿದೆಯೋ ಅದರ ಪ್ರಮಾ ಅಂದರೆ ಯಥಾರ್ಥ ಜ್ಞಾನ, ತತ್ಪೂರ್ವಕವಾಗಿದೆಯೆಂದರ್ಥ. 'ಆಕಾಂಕ್ಷಾದಿಮತ್ಪದಕದಂಬಕತ್ವಾತ್' ಎಂಬುದು ಹೇತು. ದೃಷ್ಟಾಂತ—'ಘಟಮಾ' ಇತಿ. ಬೇರೆ ರೀತಿಯಿಂದ ಅನುಮಾನ ತೋರಿಸುತ್ತಾನೆ. 'ಯದ್ವಾ—' ಇತಿ. 'ಪದಾರ್ಥಾಃ—ಮಿಥಃ ಸಂಸರ್ಗವಂತಃ—ಯೋಗ್ಯತಾದಿಮತ್ಪದೋಪಸ್ಥಾಪಿತತ್ವಾತ್' । ದೃಷ್ಟಾಂತವೂ ಇದೇರೀತಿಯಾದರೆ ಸಾಧ್ಯಸಿದ್ಧಿನಿಶ್ಚಯವಾಗದೇ ವ್ಯಾಪ್ತಿಜ್ಞಾನ ಬರಲಾರದು ಅದಕ್ಕೋಸ್ಕರ ದೃಷ್ಟಾಂತರೀತಿ ತೋರಿಸುತ್ತಾನೆ. 'ದೃಷ್ಟಾಂತೇ—' ಇತಿ. ಇನ್ನೊಂದುದೃಷ್ಟಾಂತದಿಂದ ದೃಷ್ಟಾಂತ ದಲ್ಲಿ ಸಾಧ್ಯವನ್ನು ನಿಶ್ಚಯಿಸಬೇಕೆಂದರ್ಥ. ಹೀಗೆ ಶಬ್ದದಲ್ಲಿ ಅನುಮಾನತೋರಿಸಿ ಉಪಮಾನವಿಷಯದಲ್ಲಿಯೂ ಅನುಮಾನ ತೋರಿಸುತ್ತಾನೆ. 'ಏವಂ—' ಇತಿ. ಗವಯವ್ಯಕ್ತಿಪ್ರತ್ಯಕ್ಷವಾದೊಡನೆಯೇ ವೃದ್ಧರು ಅಲ್ಲಿಯೇ ಆಶಬ್ದವನ್ನು ಪ್ರಯೋಗಿಸುವುದ ರಿಂದಲೂ ಇತರಪದಾರ್ಥದಲ್ಲಿ ಶಕ್ತಿ ಇಲ್ಲದಿರುವುದರಿಂದಲೂ ಗವಯತ್ವಪ್ರವೃತ್ತಿನಿಮಿತ್ತ ವುಳ್ಳದ್ದಾಗಿರುತ್ತದೆಯೆಂದರ್ಥ. ವೃತ್ತ್ಯಂತರದಲ್ಲಿ ಪ್ರಸಿದ್ಧಿ ಇಲ್ಲದೆ ವೃದ್ಧರು ಎಲ್ಲಿ ಯಾವ ಪದವನ್ನು ಪ್ರಯೋಗಿಸುವರೋ ಅದು ಯಾವಾಗಲೂ ತತ್ತತ್ಪ್ರವೃತ್ತಿನಿಮಿತ್ತವಾಚಕ ವಾಗಿಯೇ ಇರುತ್ತದೆ. ಗೋಪದಾದಿಗಳಲ್ಲಿ ಇದು ಪ್ರಸಿದ್ಧವಾಗಿದೆ. ಇಲ್ಲಿಯೂ ಕಲ್ಪಾಂತರವನ್ನು ತೋರಿಸುತ್ತಾನೆ. 'ಯದ್ವಾ—' ಇತಿ. ಸಪ್ರವೃತ್ತಿನಿಮಿತ್ತಕತ್ವ

ವ್ಯಾಪ್ಯಸಾಧುಪದತ್ವವತ್ತ್ವವಿರುವುದರಿಂದ ಗವಯಪದವು ಗವಯತ್ವಪ್ರವೃತ್ತಿನಿಮಿತ್ತ ವಿಶಿಷ್ಟವಾಗುತ್ತದೆಂದು ತಾತ್ಪರ್ಯ.

ಈ ಮತವನ್ನು ದೂಷಿಸುತ್ತಾನೆ. 'ತನ್ನ—' ಇತಿ. ವ್ಯಾಪ್ತಿಜ್ಞಾನವಿಲ್ಲದೆ ಇಂತಹಸ್ಥಳದಲ್ಲಿ ಶಾಬ್ದಬೋಧಬರುವುದು ಪ್ರಸಿದ್ಧವಾಗಿದೆ. ಗವಯವ್ಯಕ್ತಿಯಲ್ಲಿ ಗೋಸಾದೃಶ್ಯನೋಡಿದೊಡನೆಯೇ ಅತಿದೇಶವಾಕ್ಯಾರ್ಥಸ್ಮರಣೆ ಬಂದು ವ್ಯತಿರೇಕವ್ಯಾಪ್ತಿ ಪ್ರತಿಸಂಧಾನವಿರದಿದ್ದರೂ 'ಅಯಂ ಪುರೋವರ್ತಿಪಿಂಡಃ, ಗೋಶಬ್ದವಾಚ್ಯಃ' ಎಂಬ ಉಪಮಿತಿಜ್ಞಾನ ಬರುತ್ತದೆ. ಆದುದರಿಂದ ಉಪಮಾನವು ಅನುಮಾನದಲ್ಲಿ ಅಂತರ್ಭಾವ ಹೊಂದುವುದಿಲ್ಲ. ಹೀಗೆಯೇ ವ್ಯಾಪ್ತಿ ಇಲ್ಲದೇ ಶಬ್ದಾರ್ಥಜ್ಞಾನಬರುವುದರಿಂದ ಶಬ್ದವೂ ಅನುಮಾನದಲ್ಲಿ ಸೇರುವುದಿಲ್ಲ

ವ್ಯಾಪ್ತಿ ಇಲ್ಲವೆಂಬುದರಲ್ಲಿ ಹೀಗೆ ಉಪಪತ್ತಿ ಹೇಳಬಹುದು. ಗವಯಾದಿಶಬ್ದಗಳು ಗುಣವಾದುದರಿಂದ ಆಕಾಶದಲ್ಲಿರುತ್ತವೆ. ವ್ಯಕ್ತಿವಿಶೇಷವಾದ ಪಿಂಡಾಕೃತಿಯು ವನದಲ್ಲಿದೆ. ಆಗ 'ಯತ್ರಶಬ್ದಸ್ತತ್ರಾಕೃತಿಃ' ಎಂಬ ವ್ಯಾಪ್ತಿ ಬರುವುದು ಹೇಗೆ? ವ್ಯಾಪ್ತಿಜ್ಞಾನವಿಲ್ಲದೇ ಅನುಮಾನವಿಲ್ಲ. ಹೀಗೆ ವ್ಯಾಪ್ತಿನಿರಪೇಕ್ಷಿತವಾದ ಶಬ್ದೋಪಮಾನಗಳಿಗೆ ವ್ಯಾಪ್ತಿಸಾಪೇಕ್ಷಿತವಾದ ಅನುಮಾನದಲ್ಲಿ ಹೇಗೂ ಅಂತರ್ಭಾವ ಹೇಳಲು ಸಾಧ್ಯವಿಲ್ಲ. ಪ್ರತಿಬಂದಿತರ್ಕದಿಂದ ಖಂಡಿಸುತ್ತಾನೆ. 'ಕಿಂಚ—' ಇತಿ. ಎಲ್ಲಾ ಕಡೆಯಲ್ಲಿಯೂ ಶ್ರಬ್ದಶ್ರವಣವಾದೊಡನೆಯೇ ಅನುಮಿತಿರೂಪಕಾರ್ಯಉಂಟಾಗುವುದರಿಂದ ಅದರಿಂದ ವ್ಯಾಪ್ತಿಕಲ್ಪಿಸಬೇಕೆಂದು ಹೇಳುವುದಾದರೆ ಅನುಮಿತಿಸ್ಥಳದಲ್ಲಿಯೂ ಪದಜ್ಞಾನವನ್ನು ಕಲ್ಪಿಸಿ ಶಾಬ್ದಬೋಧನನ್ನೇ ಏಕೆ ಹೇಳಬಾರದು? ಅನುಮಾನಪ್ರಮಾಣವೇ ಬೇಡವೆಂದು ಹೇಳಬಹುದು. ಆದುದರಿಂದ ಬೇರೆಯಾಗಿ ಒಪ್ಪಲೇಬೇಕೆಂದರ್ಥ.

'ಗೌರಸ್ತಿ' 'ಗಾಮಾನಯ' ಇತ್ಯಾದಿ ಆಕಾಂಕ್ಷಾದಿಂದಕೂಡಿದ ಶಬ್ದಗಳಿಂದ ಅವುಗಳ ಆಯಾಯವೃತ್ತಿಜ್ಞಾನದಿಂದ ಮೊದಲು ಪದಾರ್ಥೋಪಸ್ಥಿತಿಯುಂಟಾಗುತ್ತದೆ. ಆಮೇಲೆ ಗವಾದಿಪದಾರ್ಥಗಳಿಗೆ ಅಸ್ತಿತ್ವಾದಿಕ್ರಿಯೆಯಲ್ಲಿ ಅನ್ವಯವನ್ನು ತಿಳಿಸುವ (ಸಂಸರ್ಗಾವಗಾಹೀ) ವಿಲಕ್ಷಣ ಬೋಧವುಂಟಾಗುತ್ತದೆ ಈಬೋಧದಲ್ಲಿ ಆಕಾಂಕ್ಷಾದಿ ವಿಶಿಷ್ಟಶಬ್ದಜ್ಞಾನವೇ ಕಾರಣವೆಂಬುದು ಅನ್ವಯವ್ಯತಿರೇಕಗಳಿಂದ ನಿಶ್ಚಿತವಾಗುತ್ತದೆ. ಇದಕ್ಕೋಸ್ಕರ ಅನುಮಾನ ಬೇಕಾಗಿಲ್ಲವೆಂದರ್ಥ.

**ತ್ರೈವಿಧ್ಯಮನುಮಾನಸ್ಯ ಕೇವಲಾನ್ವಯಿಭೇದತಃ ||**
**ದ್ವೈವಿಧ್ಯಂ ತು ಭವೇದ್ವ್ಯಾಪ್ತೇರನ್ವಯವ್ಯತಿರೇಕತಃ || ೧೪೨ ||**
**ಅನ್ವಯವ್ಯಾಪ್ತಿರುಕ್ತೈವ ವ್ಯತಿರೇಕಾದಿರಿಹೋಚ್ಯತೇ ||**
**ಸಾಧ್ಯಾಭಾವವ್ಯಾಪಕತ್ವಂ ಹೇತ್ವಭಾವಸ್ಯಯದ್ಭವೇತ್ || ೧೪೩ ||**

ತ್ರೈವಿಧ್ಯಮಿತಿ। ಅನುಮಾನಂ ಹಿ ತ್ರಿವಿಧಂ ಕೇವಲಾನ್ವಯಿ ಕೇವಲವ್ಯತಿರೇಕ್ಯನ್ವಯವ್ಯತಿರೇಕಿ ಭೇದಾತ್। ತತ್ರಾಸದ್ವಿಪಕ್ಷಃ ಕೇವಲಾನ್ವಯೀ। ಯಥಾ—ಘಟೋऽ

ಭಿಧೇಯಃ ಪ್ರಮೇಯತ್ವಾದಿತ್ಯಾದೌ ತತ್ರ ಹಿ ಸರ್ವಸ್ಯೈವಾಭಿಧೇಯತ್ವಾದ್ವಿಪಕ್ಷಾಸತ್ವಮ್ । ಅಸತ್ಸಪಕ್ಷಃ ಕೇವಲವ್ಯತಿರೇಕೀ । ಯಥಾ—ಪೃಥಿವೀ ಇತರೇಭ್ಯೋ ಭಿದ್ಯತೇ ಗಂಧವತ್ತ್ವಾದಿತ್ಯಾದೌ । ತತ್ರ ಹಿ ಜಲಾದಿ ತ್ರಯೋದಶಭೇದಸ್ಯ ಪೂರ್ವಮನಿಶ್ಚಿತತಯಾ ನಿಶ್ಚಿತಸಾಧ್ಯವತಃ ಸಪಕ್ಷಸ್ಯಾಭಾವಾತ್। ಸತ್ಸಪಕ್ಷವಿಪಕ್ಷೋಽನ್ವಯವ್ಯತಿರೇಕೀ । ಯಥಾ ವಹ್ನಿಮಾನ್ ಧೂಮಾದಿತ್ಯಾದೌ । ತತ್ರ ಸಪಕ್ಷಸ್ಯ ಮಹಾನಸಾದೇರ್ವಿಪಕ್ಷಸ್ಯ ಜಲಹ್ರದಾದೇಶ್ಚ ಸತ್ವಾದಿತಿ ॥

ತತ್ರ ಹಿ ವ್ಯತಿರೇಕಿಣಿ ವ್ಯತಿರೇಕವ್ಯಾಪ್ತಿಜ್ಞಾನಂ ಕಾರಣಂ ತದರ್ಥಂ ವ್ಯತಿರೇಕವ್ಯಾಪ್ತಿಂ ನಿರ್ವಕ್ತಿ—ಸಾಧ್ಯಾಭಾವೇತಿ । ಸಾಧ್ಯಾಭಾವವ್ಯಾಪಕೀಭೂತಾಭಾವಪ್ರತಿಯೋಗಿತ್ವಮಿತ್ಯರ್ಥಃ ॥

ಪ್ರಸಂಗಸಂಗತಿಯಿಂದ ವ್ಯಾಪ್ತಿವಿಭಾಗವನ್ನು ತೋರಿಸುತ್ತಾನೆ. 'ದ್ವೈವಿಧ್ಯಂ—' ಇತಿ. ಅನ್ವಯ, ವ್ಯತಿರೇಕಭೇದದಿಂದ ವ್ಯಾಪ್ತಿಯು ಎರಡುವಿಧವಾಗಿದೆ. ಅನ್ವಯ ವ್ಯಾಪ್ತಿ ಅನುಮಾನಪ್ರಕರಣದಲ್ಲಿ ಹೇಳಿರುವುದರಿಂದ ವ್ಯತಿರೇಕವ್ಯಾಪ್ತಿಮಾತ್ರ ಈಗ ವಿವರಿಸುತ್ತಾನೆ. ಮುಕ್ತಾವಳಿಯಲ್ಲಿ ಅನುಮಾನಭೇದವನ್ನು ವಿವರಿಸುತ್ತಾನೆ. ಕೇವಲಾನ್ವಯಿ, ಕೇವಲವ್ಯತಿರೇಕಿ, ಅನ್ವಯವ್ಯತಿರೇಕಿಯೆಂದು ಅನುಮಾನವು ಮೂರುವಿಧವಾಗಿದೆ. ಸಾಧ್ಯಾಭಾವವಿರುವುದು ವಿಪಕ್ಷ. ವಿಪಕ್ಷವಿಲ್ಲದಿರುವುದು ಕೇವಲಾನ್ವಯಿಯಾಗುತ್ತದೆ. 'ಘಟಃ—ಅಭಿಧೇಯಃ—ಪ್ರಮೇಯತ್ವಾತ್' । ಇಲ್ಲಿ ಎಲ್ಲವೂ ಅಭಿಧೇಯವಾದುದರಿಂದ ಅಭಿಧೇಯತ್ವಸಾಧ್ಯವಿಲ್ಲದ ಸ್ಥಳವಿಲ್ಲ. ಆದುದರಿಂದ ಕೇವಲಾ-ನ್ವಯಿಯಾಗುತ್ತದೆ. ನಿಶ್ಚಿತಸಾಧ್ಯವಿರುವುದು ಸಪಕ್ಷ. ಇದಿಲ್ಲದಿರುವದು ಕೇವಲ ವ್ಯತಿರೇಕಿಯಾಗುತ್ತದೆ. ಪೃಥಿವಿಯು ಗಂಧವುಳ್ಳದ್ದರಿಂದ ಜಲಾದಿಗಳಿಂದ ವ್ಯಾವೃತ್ತವಾಗುತ್ತದೆ. ಇಲ್ಲಿ ಜಲಾದಿ ಎಂಟರ, ಗುಣ, ಕರ್ಮ, ಸಾಮಾನ್ಯ ಸಮವಾಯ, ರೂಪ ಐದರ ಭೇದವು ಎಲ್ಲಿಯೂ ಮೊದಲು ನಿಶ್ಚಿತವಾಗಿಲ್ಲ. ಈ ಹದಿಮೂರರ ಭೇದ ಎಲ್ಲಿಯಾದರೂ ನಿಶ್ಚಿತವಾಗಿದ್ದರೆ ಅದು ಸಪಕ್ಷವಾಗುತ್ತಿತ್ತು. ಅಭಾವಸೇರಿ ಹದಿ-ನಾಲ್ಕಾದರೂ ಪರಮತದಲ್ಲಿ ಅಭಾವವು ಅಧಿಕರಣಸ್ವರೂಪವಾದುದರಿಂದ ಬೇರೆ ಪದಾರ್ಥವಲ್ಲವೆಂದು ಹಾಗೆ ಹೇಳಲಿಲ್ಲ.

ಅನ್ವಯವ್ಯಾಪ್ತಿಯನ್ನು ಅನುಮಾನಖಂಡದಲ್ಲಿ ಹೇಳಿರುವುದರಿಂದ ಈಗ ವ್ಯತಿರೇಕ ವ್ಯಾಪ್ತಿಯನ್ನು ತೋರಿಸುತ್ತಾನೆ. ವ್ಯತಿರೇಕ್ಯನುಮಾನಕ್ಕೆ ವ್ಯತಿರೇಕವ್ಯಾಪ್ತಿಜ್ಞಾನವು ಕಾರಣವಾಗುತ್ತದೆ. ಹೇತ್ವಭಾವಕ್ಕೆ ಸಾಧ್ಯಾಭಾವವ್ಯಾಪಕತ್ವವಿದ್ದರೆ ಆಗ ವ್ಯತಿರೇಕ ವ್ಯಾಪ್ತಿಯಾಗುತ್ತದೆ. ಇದನ್ನೇ ಪರಿಷ್ಕರಿಸಿ ತೋರಿಸುತ್ತಾನೆ. 'ಸಾಧ್ಯಾಭಾವ—' ಇತಿ. ಸಾಧ್ಯಾಭಾವಸ್ಯ ವ್ಯಾಪಕೀ ಭೂತೋ ಯೋ ಅಭಾವಃ, ತಾದೃಶಾಭಾವಪ್ರತಿಯೋಗಿತ್ವಮ್. ವಹ್ನ್ಯಭಾವಕ್ಕೆ ವ್ಯಾಪಕೀಭೂತವಾದ ಅಭಾವವೆಂದರೆ ಧೂಮಾ

ಭಾವ. ತತ್ಪ್ರತಿಯೋಗಿತ್ವ ಧೂಮರೂಪಹೇತುವಿಗೆ ಬರುತ್ತದೆ. 'ಪೃಥಿವೀ—ಇತರೇಭ್ಯೋಭಿದ್ಯತೇ—ಗಂಧವತ್ವಾತ್' ಎಂಬಲ್ಲಿ 'ಯತ್ ಇತರೇಭ್ಯೋ ನ ಭಿದ್ಯತೇ ನ ತತ್ ಗಂಧವತ್' ಎಂದು ವ್ಯತಿರೇಕವ್ಯಾಪ್ತಿ. ಪೃಥಿವೀತ್ವಾವಚ್ಛಿನ್ನವಾದದ್ದು ಪಕ್ಷ. ಪೃಥಿವೀತರವಾದ ಜಲಾದ್ಯಷ್ಟಭೇದ ಸಾಧ್ಯ. ಗಂಧವತ್ತ್ವಂ ಹೇತು. ಪೃಥಿವೀತರ ಜಲಾದ್ಯಷ್ಟಭೇದಾಭಾವರೂಪ ಸಾಧ್ಯಾಭಾವಕ್ಕೆ ವ್ಯಾಪಕವಾದ ಅಭಾವವೆಂದರೆ ಗಂಧಾಭಾವ ತತ್ಪ್ರತಿಯೋಗಿತ್ವ ಗಂಧದಲ್ಲಿ ಬರುವುದರಿಂದ ಲಕ್ಷಣಸಮನ್ವಿತವಾಗುತ್ತದೆ. ವ್ಯಾಪಕತ್ವಹೇಳದಿದ್ದರೆ 'ಧೂಮವಾನ್—ವಹ್ನೇಃ' ಎಂಬಲ್ಲಿ ವಹ್ನ್ಯಭಾವಕ್ಕೆ ಧೂಮಾಭಾವ ಸಾಮಾನಾಧಿಕರಣ್ಯವಿರುವುದರಿಂದ ಪ್ರತಿಯೋಗಿತ್ವ ವಹ್ನಿಯಲ್ಲಿ ಬರುವುದರಿಂದ ಅತಿವ್ಯಾಪ್ತಿ ಬರುತ್ತದೆ. ವ್ಯಾಪಕವೆಂದರೆ ಎಲ್ಲೆಲ್ಲಿ ಧೂಮಾಭಾವವಿದೆಯೋ ಅಲ್ಲಲ್ಲಿ ವಹ್ನ್ಯಭಾವವೆಂದು ಹೇಳಬೇಕು. ಅಯೋಗೋಲಕದಲ್ಲಿ ಧೂಮಾಭಾವವಿದ್ದರೂ ವಹ್ನ್ಯಭಾವವಿಲ್ಲವಾದುದರಿಂದ ವ್ಯಾಪಕತ್ವವಿಲ್ಲ. ಸಾಧ್ಯಾಭಾವವನ್ನು 'ಸಾಧ್ಯತಾವಚ್ಛೇದಕಸಂಬಂಧಾವಚ್ಛಿನ್ನಸಾಧ್ಯತಾವಚ್ಛೇದಕಾವಚ್ಛಿನ್ನಪ್ರತಿಯೋಗಿತಾಕಾಭಾವಃ' ಎಂದು ಪರಿಷ್ಕರಿಸಬೇಕು. ಹೀಗೆ ಹೇಳದಿದ್ದರೆ 'ವಹ್ನಿಮಾನ್—ಧೂಮಾತ್' ಎಂಬಲ್ಲಿ ಅವ್ಯಾಪ್ತಿ ಬರುತ್ತದೆ. ಸಮವಾಯ ಸಂಬಂಧದಿಂದ ವಹ್ನಿಯು ಪರ್ವತದಲ್ಲಿಲ್ಲದಿರುವುದರಿಂದ ವಹ್ನ್ಯಭಾವಾಧಿಕರಣವಾದ ಪರ್ವತದಲ್ಲಿ ಧೂಮಾಭಾವವಿಲ್ಲದಿರುವುದರಿಂದ ಧೂಮಾಭಾವಕ್ಕೆ ವ್ಯಾಪಕತ್ವ ಬರಲಾರದು. ಆದುದರಿಂದ ಸಾಧ್ಯತಾವಚ್ಛೇದಕ ಸಂಬಂಧದಿಂದ ಸಾಧ್ಯಾಧಿಕರಣವನ್ನು ಹೇಳಬೇಕು. ವಹ್ನಿಘಟೋಭಯಾಭಾವವನ್ನು ತೆಗೆದುಕೊಂಡು ಅವ್ಯಾಪ್ತಿಸಂಬಂಧಿಸುವುದರಿಂದ ಸಾಧ್ಯತಾವಚ್ಛೇದಕಾವಚ್ಛಿನ್ನ ಸಾಧ್ಯಕ್ಕೆ ಅಧಿಕರಣವೆಂದು ಹೇಳಬೇಕು. ಹಾಗೆ ವ್ಯಾಪಕೀಭೂತಾಭಾವವನ್ನೂ ಹೇತುತಾವಚ್ಛೇದಕಸಂಬಂಧಾವಚ್ಛಿನ್ನ ಪ್ರತಿಯೋಗಿತಾಕಾಭಾವವೆಂದು ಪರಿಷ್ಕರಿಸಿ ಹೇಳಬೇಕು. ಇಲ್ಲವಾದರೆ ಸಮವಾಯಸಂಬಂಧದಿಂದ ಧೂಮಾಭಾವಕ್ಕೆ ವಹ್ನ್ಯಭಾವವ್ಯಾಪಕತ್ವಬಾರದಿರುವುದರಿಂದ ಅವ್ಯಾಪ್ತಿ ಬರುತ್ತದೆ.

ಅತ್ರೇದಂ ಬೋಧ್ಯಮ್ । ಯತ್ಸಂಬಂಧೇನ ಯದವಚ್ಛಿನ್ನಂ ಪ್ರತಿಯೇನ ಸಂಬಂಧೇನ ಯೇನ ರೂಪೇಣ ವ್ಯಾಪಕತಾ ಗೃಹ್ಯತೇ ತತ್ಸಂಬಂಧಾವಚ್ಛಿನ್ನಪ್ರತಿಯೋಗಿತಾಕ ತದ್ಧರ್ಮಾವಚ್ಛಿನ್ನಾಭಾವವತ್ತಾಜ್ಞಾನಾತ್ತತ್ಸಂಬಂಧಾವಚ್ಛಿನ್ನ ಪ್ರತಿಯೋಗಿತಾಕತದ್ಧರ್ಮಾವಚ್ಛಿನ್ನಾ ಭಾವಸ್ಯ ಸಿದ್ಧಿರಿತಿ । ಇತ್ಥಂ ಚ ಯತ್ರ ವಿಶೇಷಣತಾದಿ ಸಂಬಂಧೇನೇತರತ್ವವ್ಯಾಪಕತ್ವಂ ಗಂಧಾಭಾವೇ ಗೃಹ್ಯತೇ ತತ್ರ ಗಂಧಾಭಾವಾಭಾವೇ ನೇತರತ್ವಾತ್ಯಂತಾಭಾವಃ ಸಿಧ್ಯತಿ । ಯತ್ರ ತು ತಾದಾತ್ಮ್ಯಸಂಬಂಧೇನೇತರತ್ವವ್ಯಾಪಕತ್ವಂ ಗಂಧಾಭಾವಸ್ಯ ಗೃಹ್ಯತೇ ತತ್ರ ತಾದಾತ್ಮ್ಯಸಂಬಂಧೇನೇತರಸ್ಯಾಭಾವಃ ಸಿಧ್ಯತಿ । ಸ ಏವಾನ್ಯೋನ್ಯಾಭಾವಃ । ಏವಂ ಯತ್ರ ಸಂಯೋಗಸಂಬಂಧೇನ ಧೂಮಂ ಪ್ರತಿ ಸಂಯೋಗಸಂಬಧೇನ ವಹ್ನೇರ್ವ್ಯಾಪಕತಾ

ಗೃಹ್ಯತೇ ತತ್ರ ಸಂಯೋಗಸಂಬಂಧಾವಚ್ಛಿನ್ನಪ್ರತಿಯೋಗಿತಾಕವಹ್ನ್ಯಭಾವೇನ ಜಲಹ್ರದೇ ಸಂಯೋಗಸಂಬಂಧಾವಚ್ಛಿನ್ನಪ್ರತಿಯೋಗಿತಾಕಧೂಮಾಭಾವಃ ಸಿದ್ಧ್ಯತಿ। ಅತ್ರ ಚ ವ್ಯತಿರೇಕವ್ಯಾಪ್ತಿಗ್ರಹೇ ವ್ಯತಿರೇಕಸಹಚಾರಜ್ಞಾನಂ ಕಾರಣಮ್ ॥

ಸಾಧ್ಯಾಂಶದಲ್ಲಿ ಅತ್ಯಂತಾಭಾವ ಮತ್ತು ಅನ್ಯೋನ್ಯಾಭಾವಪ್ರಕಾರವನ್ನು ತೋರಿಸಲು ಆರಂಭಿಸುತ್ತಾನೆ. 'ಅತ್ರೇದಂ—' ಇತಿ. 'ಯತ್ಸಂಬಂಧೇನ—' ಎಂಬ ವಾಕ್ಯಕ್ಕೆ 'ಯತ್ಸಂಬಂಧಾವಚ್ಛಿನ್ನಯದ್ರೂಪಾವಚ್ಛಿನ್ನವ್ಯಾಪ್ಯತಾನಿರೂಪಿತವ್ಯಾಪಕತಾ' ಎಂದು ನಿಷ್ಕೃಷ್ಟಾರ್ಥವಾಗುತ್ತದೆ. ಧರ್ಮಿಭೇದವೂ (ಅನ್ಯೋನ್ಯಾಭಾವ) ಧರ್ಮಾತ್ಯಂತಾಭಾವವೂ ಒಂದೇ ಆಗುತ್ತದೆ. ಘಟಭೇದ ಘಟವನ್ನು ಬಿಟ್ಟು ಎಲ್ಲಾ ಕಡೆ ಇದೆ. ಹಾಗೆ ಘಟತ್ವಾತ್ಯಂತಾಭಾವವೂ ಘಟವನ್ನು ಬಿಟ್ಟು ಎಲ್ಲಾಕಡೆ ಇದೆ. ಸಮನಿಯತಾಭಾವಗಳಿಗೆ ಐಕ್ಯವಿರುತ್ತದೆಂದು ಈ ಗ್ರಂಥ ಆರಬ್ಧವಾಗಿದೆ. ಗಂಧಾತ್ಯಂತಾಭಾವವು ಪೃಥಿವೀತರಭೇದಾಭಾವಕ್ಕೆ ವ್ಯಾಪಕವೆಂದು ಹೇಳಿದೆ ಅಲ್ಲಿ ವ್ಯಾಪಕತಾ ಎಂಬುದು ವಿಶೇಷಣತಾ (ಸ್ವರೂಪ) ಸಂಬಂಧದಿಂದ ಗೃಹೀತವಾದರೆ ಆಗ ಗಂಧಾಭಾವಾಭಾವದಿಂದ ಅಂದರೆ ಗಂಧದಿಂದ ಇತರತ್ವಧರ್ಮಾತ್ಯಂತಾಭಾವವು ಸಿದ್ಧಿಸುತ್ತದೆ. ಎಲ್ಲಿ ಗಂಧವಿದೆಯೋ ಅಲ್ಲಿ ಜಲಾದೀತರಭೇದವೂ, ಜಲಾದಿಗಳಲ್ಲಿರುವ ಇತರತ್ವ ಧರ್ಮಾತ್ಯಂತಾಭಾವವೂ ಇರುತ್ತವೆ. ಸಮನಿಯತಾಭಾವಗಳಾದುದರಿಂದ ಒಂದೇ ಅಧಿಕರಣದಲ್ಲಿ ಧರ್ಮಿಭೇದವೂ, ಧರ್ಮಾತ್ಯಂತಾಭಾವೂ ಬರುತ್ತದೆ. 'ಯತ್ರತು ತಾದಾತ್ಮ್ಯೇನ—' ಇತಿ. ತಾದಾತ್ಮ್ಯಸಂಬಂಧಾವಚ್ಛಿನ್ನೇತರನಿಷ್ಠವ್ಯಾಪ್ಯತಾನಿರೂಪಿತ ವ್ಯಾಪಕತ್ವವು ಗಂಧಾಭಾವದಲ್ಲಿ ಗೃಹೀತವಾದರೆ ಆಗ ತಾದಾತ್ಮ್ಯಸಂಬಂಧದಿಂದಲೇ ಜಲಾದೀತರಾಭಾವವು ಸಿದ್ಧವಾಗುತ್ತದೆಂದರ್ಥ. ಎಲ್ಲಿ ಇತರ ಭೇದಾಭಾವವಿರುತ್ತದೆಯೋ ಅಲ್ಲಿ ಗಂಧಾಭಾವವಿರುತ್ತದೆ. ಗಂಧಾಭಾವಾಭಾವವಿದ್ದಲ್ಲಿ ಇತರ ಭೇಧಾಭಾವಾಭಾವವು ಇರುತ್ತದೆ. ಇತರಭೇಧಾಭಾವವು ಇತರತ್ವಸ್ವರೂಪವಾಗುವುದರಿಂದ ಅದು ಇತರತ್ವಾತ್ಯಂತಾಭಾವವೇ ಆಗುತ್ತದೆ. ಭೇದಾಭಾವವು ಯಾವಾಗಲೂ ಪ್ರತಿಯೋಗಿತಾವಚ್ಛೇದಕರೂಪವೆಂದು ತಿಳಿಯಬೇಕು. ಸಾಧ್ಯಸಾಧನಗಳಿಗೆ ಸಹಚಾರ ಜ್ಞಾನವಿಲ್ಲದಿರುವಾಗ ವ್ಯತಿರೇಕವ್ಯಾಪ್ತಿಜ್ಞಾನಬರುವುದು ಹೇಗೆ ಎಂಬ ಆಶಂಕೆಗೆ ಸಮಾಧಾನ ತೋರಿಸುತ್ತಾನೆ. 'ಅತ್ರ ಚ—' ಇತಿ. 'ಯತ್ರ ಸಾಧ್ಯಾಭಾವಃ ತತ್ರ ಹೇತ್ವಭಾವಃ, ಎಂಬ ವ್ಯತಿರೇಕಸಹಚಾರಜ್ಞಾನದಿಂದ ವ್ಯತಿರೇಕವ್ಯಾಪ್ತಿ ಬರುತ್ತದೆಂದರ್ಥ. ಇದಕ್ಕೋಸ್ಕರ ಅನ್ವಯಸಹಚಾರಜ್ಞಾನದ ಆವಶ್ಯಕತೆ ಇಲ್ಲ.

ಕೇಚಿತ್ತು ವ್ಯತಿರೇಕ ಸಹಚಾರೇಣಾನ್ವಯವ್ಯಾಪ್ತಿರೇವ ಗೃಹ್ಯತೇ ನತು ವ್ಯತಿರೇಕವ್ಯಾಪ್ತಿಜ್ಞಾನಂ ನ ತು ವ್ಯತಿರೇಕವ್ಯಾಪ್ತಿಜ್ಞಾನಮಪಿ ಕಾರಣಮ್। ಯತ್ರ ವ್ಯತಿರೇಕಸಹಚಾರಾತ್ ವ್ಯಾಪ್ತಿಗ್ರಹಸ್ತತ್ರ ವ್ಯತಿರೇಕೀತ್ಯುಚ್ಯತೇ। ಸಾಧ್ಯಪ್ರಸಿದ್ಧಿಸ್ತು ಘಟಾ

ದಾವೇವ ಜ್ಞಾಯತಾಂ ಪಶ್ಚಾತ್ ಪೃಥಿವೀತ್ವಾವಚ್ಛೇದೇನ ಸಾಧ್ಯತ ಇತಿ ವದಂತಿ ॥ ೧೪೩ ॥

ಉದಯನಾಚಾರ್ಯರಮತವನ್ನು ತೋರಿಸುತ್ತಾನೆ. 'ಕೇಚಿತ್—' ಇತಿ. ವ್ಯತಿರೇಕಸಹಚಾರೇಣ—ಅನ್ವಯಸಹಚಾರಾಪೇಕ್ಷೆ ಇಲ್ಲದ ವ್ಯತಿರೇಕಸಹಚಾರದಿಂದ ಎಂದರ್ಥ. ಇದರಿಂದ ಅನ್ವಯವ್ಯಾಪ್ತಿಯೇ ಬರುವುದಾದರೆ ವ್ಯತಿರೇಕ್ಯನುಮಿತಿ ಬರುವುದು ಹೇಗೆ? ಅಂದರೆ ವ್ಯತಿರೇಕವ್ಯಾಪ್ತಿಯೇ ಇಲ್ಲ. ವ್ಯತಿರೇಕವ್ಯಾಪ್ತಿಜ್ಞಾನಕ್ಕೆ ಕಾರಣತ್ವವೇ ಇಲ್ಲ. ಅನ್ವಯವ್ಯಾಪ್ತಿಜ್ಞಾನಕ್ಕೆ ಕಾರಣತ್ವವಿದ್ದರೆ ವ್ಯತಿರೇಕೀ ಎಂಬ ವ್ಯವಹಾರಹೇಗೆ ಎಂಬುದಕ್ಕೆ ಸಮಾಧಾನ ತೋರಿಸುತ್ತಾನೆ. 'ಯತ್ರ—' ಇತಿ. ಎಲ್ಲಿ ವ್ಯತಿರೇಕಸಹಚಾರದಿಂದ ಅನ್ವಯವ್ಯಾಪ್ತಿಜ್ಞಾನಬರುತ್ತದೆಯೋ ಅಲ್ಲಿ ವ್ಯತಿರೇಕಿಯೆಂದು ವ್ಯವಹಾರ. 'ಪೃಥಿವೀತರೇಭ್ಯೋಭಿದ್ಯತೇ—' ಇತ್ಯಾದಿಸ್ಥಳದಲ್ಲಿ ಇತರಭೇದರೂಪಸಾಧ್ಯವು ಅಪ್ರಸಿದ್ಧವಾದರೂ, ಘಟಾದಿಗಳಲ್ಲಿ ಮೊದಲು ತಿಳಿಯಬೇಕು. ಅಲ್ಲಿ ಗಂಧದಿಂದ ಜಲಾದಿ ಇತರಭೇದಸಿದ್ಧವಾದಮೇಲೆ ಪೃಥಿವೀತ್ವಾವಚ್ಛೇದದಿಂದ ಆಮೇಲೆ ಸಾಧ್ಯಸಿದ್ಧಿಹೇಳಬೇಕು. ಸಾಮಾನಾಧಿಕರಣ್ಯದಿಂದ ಸಾಧ್ಯಸಿದ್ಧಿಯು ಅವಚ್ಛೇದಕಾವಚ್ಛೇದದಿಂದ ಅನುಮಿತಿಗೆ ಸಾಧಕವಾಗುತ್ತದೆ. ॥ ೧೪೪ ॥

**ಅರ್ಥಾಪತ್ತಿಸ್ತು ನೈವೇಹ ಪ್ರಮಾಣಾಂತರಮಿಷ್ಯತೇ ।**
**ವ್ಯತಿರೇಕವ್ಯಾಪ್ತಿಬುದ್ಧ್ಯಾ ಚರಿತಾರ್ಥಾ ಹಿ ಸಾ ಯತಃ ॥ ೧೪೪ ॥**

ಅರ್ಥಾಪತ್ತಿಪ್ರಮಾಣವನ್ನು ಭಾಟ್ಟರೂ, ವೇದಾಂತಿಗಳೂ ಬೇರೆಯಾಗಿ ಅಂಗೀಕರಿಸಿರುತ್ತಾರೆ. ಅದನ್ನು ನಿರಾಕರಣೆಮಾಡುತ್ತಾನೆ. 'ಅರ್ಥಾಪತ್ತಿಃ—' ಇತಿ. ವ್ಯತಿರೇಕ್ಯನುಮಾನದಿಂದಲೇ ಇದು ಚರಿತಾರ್ಥವಾಗುವುದರಿಂದ ಇದನ್ನು ಐದನೆಯ ಪ್ರಮಾಣವನ್ನಾಗಿ ಅಂಗೀಕರಿಸಬೇಕಾಗಿಲ್ಲವೆಂದು ತಾತ್ಪರ್ಯ. ॥

ಅರ್ಥಾಪತ್ತಿರಿತಿ । ಅರ್ಥಾಪತ್ತಿಃ ಪ್ರಮಾಣಾಂತರಮಿತಿ ಕೇಚನ ಮನ್ಯಂತೇ । ತಥಾಹಿ—ಯತ್ರ ದೇವದತ್ತಸ್ಯ ಶತವರ್ಷಜೀವಿತ್ವಂ ಜ್ಯೋತಿಶ್ಶಾಸ್ತ್ರಾದವಗತಂ ಜೀವಿನೋ ಗೃಹಾಸತ್ವಂ ಚ ಪ್ರತ್ಯಕ್ಷಾದವಗತಂ ತತ್ರ ಶತವರ್ಷಜೀವಿನೋ ಗೃಹಾಸತ್ವಂ ಬಹಿಃಸತ್ವಂ ವಿನಾಽನುಪಪನ್ನಮಿತಿ ಬಹಿಃಸತ್ವಂ ಕಲ್ಪ್ಯತ ಇತಿ । ತದನುಮಾನೇನ ಗತಾರ್ಥತ್ವಾನ್ನೇಷ್ಯತೇ । ತಥಾಹಿಯತ್ರ ಜೀವಿತ್ವಸ್ಯ ಬಹಿಃಸತ್ವಗೃಹಸತ್ವಾನ್ಯತರವ್ಯಾಪ್ಯತ್ವಂ ಗೃಹೀತಂ ತತ್ರಾನ್ಯತರಸಿದ್ಧೌ ಜಾಯಮಾನಾಯಾಂ ಗೃಹಸತ್ವಬಾಧಾತ್ ಬಹಿಃಸತ್ವಮನುಮಿತೌ ಭಾಸತೇ । ಏವಂ ಪೀನೋ ದೇವದತ್ತೋ ದಿವಾ ನ ಭುಂಕ್ತೇ ಇತ್ಯಾದೌ ಪೀನತ್ವಸ್ಯ ಭೋಜನವ್ಯಾಪ್ಯತ್ವಾವಗಮಾದ್ಭೋಜನಸಿದ್ಧೌ ದಿವಾ ಭೋಜನಬಾಧೇ ರಾತ್ರಿ

ಭೋಜನಂ ಸಿಧ್ಯತೀತಿ । ಅಭಾವಪ್ರತ್ಯಕ್ಷಸ್ಯಾನುಭವಿಕತ್ವಾದನುಪಲಂಭೋಽಪಿ ನ ಪ್ರಮಾಣಾಂತರಮ್ । ಕಿಂಚಾನುಪಲಂಭಸ್ಯಾಜ್ಞಾತಸ್ಯ ಹೇತುತ್ವೇ ಜ್ಞಾನಾಕರಣಕತ್ವಾತ್ ಪ್ರತ್ಯಕ್ಷತ್ವಮ್, ಜ್ಞಾತಸ್ಯ ಹೇತುತ್ವೇ ತು ತತ್ರಾಪ್ಯನುಪಲಂಭಾಂತರಾಪೇಕ್ಷೇತ್ಯನವಸ್ಥಾ । ಏವಂ ಚೇಷ್ಟಾಪಿ ನ ಪ್ರಮಾಣಾಂತರಂ ತಸ್ಯಾಃ ಸಂಕೇತಗ್ರಾಹಕಶಬ್ದಸ್ಮಾರಕತ್ವೇನ ಲಿಪ್ಯಾದಿಸಮಶೀಲತ್ವಾಚ್ಛಬ್ದ ಏವಾಂತಭಾರ್ವಾತ್ । ಯತ್ರ ಚ ವ್ಯಾಪ್ತ್ಯಾದಿಗ್ರಹಸ್ತತ್ರಾನುಮಿತಿರೇವೇತಿ ॥ ೧೪೪ ॥

ಪೂರ್ವೋತ್ತರಮೀಮಾಂಸಕರು ಅಂಗೀಕರಿಸಿದ ಅರ್ಥಾಪತ್ತಿಪ್ರಮಾಣವನ್ನು ಖಂಡಿಸಲು ಅದರ ಸ್ವರೂಪವನ್ನು ತೋರಿಸುತ್ತಾನೆ. 'ಅರ್ಥಾಪತ್ತಿಃ—' ಇತಿ. ಉಪಪಾದಕಜ್ಞಾನಕ್ಕೆ ಕಾರಣವಾದ ಉಪಪಾದ್ಯಜ್ಞಾನಕ್ಕೆ ಅರ್ಥಾಪತ್ತಿಪ್ರಮಾಣವೆಂದು ಹೇಳುತ್ತಾರೆ. ಉಪಪಾದಕಜ್ಞಾನರೂಪ ಅರ್ಥಾಪತ್ತಿಗೆ ಆ ಪ್ರಮಾಣದಿಂದ ಉಂಟಾದ ಪ್ರಮೆಯೆಂದೂ ಹೆಸರು. 'ಸ್ಥೂಲನಾದ (ಪೀನಃ) ದೇವದತ್ತನು ಹಗಲಿನಲ್ಲಿ ಊಟ ಮಾಡುವುದಿಲ್ಲ'ವೆಂದರೆ ಇಲ್ಲಿ ಸ್ಥೂಲತ್ವವು ರಾತ್ರಿಭೋಜನಮಾಡದಿದ್ದರೆ ಕೂಡದಿರುವುದರಿಂದ ರಾತ್ರಿಭೋಜನವನ್ನು ಕಲ್ಪಿಸುತ್ತದೆ. ಉಪಪಾದಕಜ್ಞಾನಕ್ಕೆ ಕಾರಣವಾದ ಪೀನತ್ವಜ್ಞಾನವು ಉಪಪಾದ್ಯವಾಗಿದ್ದು ಅರ್ಥಾಪತ್ತಿಪ್ರಮಾಣವಾಗುತ್ತದೆ. ರಾತ್ರಿಭೋಜನಜ್ಞಾನವು ಉಪಪಾದಕವಾಗಿ ಅರ್ಥಾಪತ್ತಿ ಪ್ರಮಾ ಆಗುತ್ತದೆ. ಯಾವ ಅರ್ಥವು ಯಾವುದಾದರೊಂದು ಕಲ್ಪನೀಯಾರ್ಥವಿಲ್ಲದಿದ್ದರೆ ಕೂಡುವುದಿಲ್ಲವೋ ಅದೇ ಉಪಪಾದ್ಯಾರ್ಥವಾಗುತ್ತದೆ. ಯಾವಕಲ್ಪನೀಯಾರ್ಥವಿಲ್ಲದಿದ್ದರೆ ಉಪಪಾದ್ಯಾರ್ಥವು ಕೂಡುವುದಿಲ್ಲವೋ ಅದು ಉಪಪಾದಕಾರ್ಥವಾಗುತ್ತದೆ.

ಪ್ರಕೃತ ಜೀವಂತನಾದ ದೇವದತ್ತನ ಬಾಹ್ಯಸ್ಥಿತಿಜ್ಞಾನವು (ಮನೆಯಿಂದ ಹೊರಗಿರುವುದು) ಅರ್ಥಾಪತ್ತಿಪ್ರಮಾ ಆಗುತ್ತದೆ. ಶತವರ್ಷಜೀವಿತ್ವವಿಶಿಷ್ಟಗೃಹಾಸತ್ವಜ್ಞಾನವು ಉಪಪಾದ್ಯವಾದುದರಿಂದ ಅರ್ಥಾಪತ್ತಿಪ್ರಮಾಣವಾಗುತ್ತದೆ. ಗೃಹಾಸತ್ವ (ಮನೆಯಲ್ಲಿಲ್ಲದಿರುವುದು) ರೂಪಾರ್ಥವು. ಬಹಿಃಸತ್ವರೂಪಕಲ್ಪನೀಯಾರ್ಥವಿಲ್ಲದಿದ್ದರೆ ಕೂಡದಿರುವುದರಿಂದ ಉಪಪಾದ್ಯವಾಗಿದೆ. ಯಾವ ಬಹಿಃಸತ್ವರೂಪಕಲ್ಪನೀಯಾರ್ಥವಿಲ್ಲದಿದ್ದುದರಿಂದ, ಉಪಪಾದ್ಯವಾದ ಗೃಹಾಸತ್ವರೂಪಾರ್ಥಕೂಡದಿರುವುದರಿಂದ ಬಹಿಃಸತ್ವರೂಪಾರ್ಥವು ಉಪಪಾದಕವಾಗುತ್ತದೆ ಅರ್ಥಾಪತ್ತಿಶಬ್ದ ಒಂದಾದರೂ ಅದು ಪ್ರಮಾಣ, ಪ್ರಮಾ ಎರಡನ್ನೂ ಬೋಧಿಸುತ್ತದೆ. 'ಅರ್ಥಸ್ಯ ಬಹಿಃಸತ್ವಸ್ಯ ಆಪತ್ತಿಃ ಕಲ್ಪನಾ ಯಸ್ಮಾತ್' ಎಂದುವಿಗ್ರಹಮಾಡಿದರೆ ಉಪಪಾದ್ಯಜ್ಞಾನರೂಪಕರಣಪರವಾಗಿ ಪ್ರಮಾಣವಾಗುತ್ತದೆ. 'ಅರ್ಥಸ್ಯ ಆಪತ್ತಿಃ' ಅರ್ಥಾಪತ್ತಿಃ ಎಂದರೆ ಉಪಪಾದಕಜ್ಞಾನರೂಪ ಪ್ರಮಿತಿಯಾಗುತ್ತದೆ. ಉಪಪಾದ್ಯಜ್ಞಾನದಿಂದ ಉಂಟಾದದ್ದು ಉಪಪಾದಕಜ್ಞಾನರೂಪಪ್ರಮಾ ಎಂದರ್ಥ.

ಹೀಗೆ ಇದೊಂದು ಬೇರೆ ಪ್ರಮಾಣವೆಂಬುದನ್ನು ಖಂಡಿಸುತ್ತಾನೆ. 'ಅನು

ಮಾನೇನ—' ಇತಿ. ಬಹಿಃಸತ್ವ, ಗೃಹಸತ್ವಾನ್ಯತರವು (ಮನೆಯೊಳಗಿರುವುದು ಅಥವಾ ಹೊರಗಿರುವುದು) ಜೀವಿತ್ವಕ್ಕೆ ವ್ಯಾಪ್ಯವಾಗುತ್ತದೆ. ಬಹಿಃಸತ್ವ,ಗೃಹಸತ್ವಾನ್ಯತರವಿದ್ದಲ್ಲಿ ಜೀವಿತ್ವ ಇದ್ದೇ ಇರುತ್ತದೆ. ಬದುಕಿರುವವನು ಒಂದೂ ಮನೆಒಳಗಿರಬೇಕು. ಅಥವಾ ಮನೆಯಹೊರಗಿರಬೇಕು. ಈ ಅನ್ಯತರದಲ್ಲಿ ಗೃಹಸತ್ವಕ್ಕೆ ಪ್ರತ್ಯಕ್ಷದಿಂದ ಬಾಧಬರುವುದರಿಂದ (ಮನೆಯಲಿಲ್ಲನೆಂಬುದು ನೋಡಿದವನಿಗೆ ತಿಳಿಯುತ್ತದೆ. ಬದುಕಿರುವ ದೇವದತ್ತನು ಹೊರಗಿರುವನೆಂಬುದು ಅನುಮಾನದಿಂದ ಸಿದ್ಧವಾಗುತ್ತದೆ. ಅನುಮಾನಾಕಾರ. 'ದೇವದತ್ತಃ—ಬಹಿಃಸತ್ವವಾನ್—ಜೀವಿತ್ವೇಸತಿ ಗೃಹಾಭಾವದರ್ಶನಾತ್' ಹೀಗೆ ಇತರಸ್ಥಳದಲ್ಲಿಯೂ ಅನುಮಾನದಿಂದಲೇ ಸಿದ್ಧವಾಗುವುದರಿಂದ ಅರ್ಥಾಪತ್ತಿಪ್ರಮಾಣವನ್ನು ಅಂಗೀಕರಿಸಬೇಕಾಗಿಲ್ಲನೆಂದು ತಿಳಿಸುತ್ತಾನೆ. 'ಏವಮಿತಿ—' ಪೀನತ್ವವೆಂಬುದು ಭೋಜನವ್ಯಾಪ್ಯವಾದಧರ್ಮ. 'ಯತ್ರಕ್ವ ಪೀನತ್ವಂ ತತ್ರಕ್ವಭೋಜನಂ' ಎಂದು ವ್ಯಾಪ್ತಿಪ್ರಸಿದ್ಧವಾಗಿದೆ. ಹಗಲಿನಲ್ಲಿ ಭೋಜನಮಾಡುವುದಿಲ್ಲವೆಂದು ಪ್ರತ್ಯಕ್ಷದಿಂದ ಸಿದ್ಧವಾದಮೇಲೆ ರಾತ್ರಿ ಭೋಜನವು ಅನುಮಾನದಿಂದಲೇ ಸಿದ್ಧವಾಗುತ್ತದೆ. 'ದೇವದತಃ—ರಾತ್ರಿಭೋಜೀ—ದಿವಾ ಭುಂಜಾನತ್ವೇ ಸತಿ ಪೀನತ್ವಾತ್' ಎಂಬ ಅನುಮಾನದಿಂದ ರಾತ್ರಿಭೋಜನಾನುಮಿತಿಯು ಬರುವುದರಿಂದ ಅರ್ಥಾಪತ್ತಿಯು ಬೇರೆ ಪ್ರಮಾಣವಾಗುವುದಿಲ್ಲವೆಂದರ್ಥ. ಅನುಪಲಬ್ಧಿಯೆಂಬುದೂ ಬೇರೊಂದು ಪ್ರಮಾಣವೆಂದು ಮೀಮಾಂಸಕರು ಅಂಗೀಕರಿಸುತ್ತಾರೆ. ಅದನ್ನೂ ದೂಷಿಸುತ್ತಾನೆ. 'ಅಭಾವ—' ಇತಿ. ವಿಶೇಷಣತಾಸಂಬಂಧದಿಂದ ಅಭಾವಪ್ರತ್ಯಕ್ಷವಾಗುತ್ತದೆಂದು ಹಿಂದೆ ಪ್ರತ್ಯಕ್ಷಖಂಡದಲ್ಲಿ ನಿರೂಪಿತವಾದುದರಿಂದ ಅದೊಂದುಬೇರೆಪ್ರಮಾಣವಾಗುದಿಲ್ಲವೆಂದು ತಾತ್ಪರ್ಯ. ಇಲ್ಲಿ ಇನ್ನೂ ಒಂದು ವಿಶೇಷಣವನ್ನು ಹೇಳುತ್ತಾನೆ. ಕಿಂಚ—' ಇತಿ. 'ಉಪಲಂಭಾಭಾವಃ, ಅನುಪಲಂಭಃ' ಇದೇ ಅನುಪಲಬ್ಧಿ. ಉಪಲಂಭಾಭಾವವೆಂದರೆ ಪ್ರತಿಯೋಗಿಯ ಉಪಲಂಭಾಭಾವ. ಇಲ್ಲಿ ಪ್ರತಿಯೋಗ್ಯುಪಲಂಭಾಭಾವವು ತಾನು ಅಜ್ಞಾತವಾಗಿ ಅಭಾವಪ್ರತಿಭೆಗೆಕಾರಣವೇ? ಅಥವಾ ಜ್ಞಾತವಾಗಿ ಕಾರಣವೇ? ಎಂದು ಎರಡು ವಿಕಲ್ಪಗಳುಂಟಾಗುತ್ತವೆ. ಮೊದಲಿನ ಪಕ್ಷದಲ್ಲಿ ದೋಷ ಹೇಳುತ್ತಾನೆ. 'ಅಜ್ಞಾತಸ್ಯ—' ಇತಿ ಜ್ಞಾನಾಕರಣಕಜ್ಞಾನವೇ ಪ್ರತ್ಯಕ್ಷವೆಂದು ಹಿಂದೆ ಹೇಳಿದೆ. ಎರಡನೆಯ ಪಕ್ಷದಲ್ಲಿ ದೋಷಹೇಳುತ್ತಾನೆ. 'ಜ್ಞಾತಸ್ಯ—' ಇತಿ. ಪ್ರಥಮಾನುಪಲಂಭಜ್ಞಾನವು ದ್ವಿತೀಯಾಧೀನವೂ, ದ್ವಿತೀಯವು ತೃತೀಯಾಧೀನವೆಂದು ಹೀಗೆ ಉತ್ತರೋತ್ತರಾಪೇಕ್ಷೆಯಿಂದ ಅನವಸ್ಥೆ ಬರುತ್ತದೆಂದರ್ಥ.

ಮಂತ್ರಶಾಸ್ತ್ರಜ್ಞರು ಚೇಷ್ಟೆಯನ್ನೂ ಒಂದು ಪ್ರಮಾಣವೆಂದು ಅಂಗೀಕರಿಸುತ್ತಾರೆ. ಆ ಮತವನ್ನೂ ಖಂಡಿಸುತ್ತಾನೆ. 'ಏವಂ ಚೇಷ್ಟಾ—' ಇತಿ. ಇದು ಶಬ್ದಪ್ರಮಾಣದಲ್ಲಿಯೇ ಸೇರುತ್ತದೆ. ಚೇಷ್ಟೆಯಿಂದ ಶಕ್ತವಾದ ಪದದಸ್ಮೃತಿ ಬಂದು ಅದರಿಂದ ಶಾಬ್ದಜ್ಞಾನ ಬರುತ್ತದೆ. ಇದು ಲಿಪ್ಯಾದಿಗಳಲ್ಲಿ ಪ್ರಸಿದ್ಧವಾಗಿದೆ. 'ಯತ್ರ—' ಇತಿ. ಮೂಕಕಿವುಡಮುಂತಾದವರಲ್ಲಿ ಎಂದರ್ಥ. ಅಲ್ಲಿ ಚೇಷ್ಟೆಯಿಂದ ವ್ಯಾಪ್ತ್ಯಾದಿಜ್ಞಾನ

ವುಂಟಾಗುವುದರಿಂದ ಅನುಮಿತಿ ಬರುತ್ತದೆ. 'ಅಯಂ ಮೂಕಬಧಿರಃ—ಭೋಜನಾಭಿಲಾಷೀ—ಮುಖಪ್ರಸಾರಣಾದಿ ವಿಲಕ್ಷಣಚೇಷ್ಟಾವತ್ತ್ವಾತ್' । ಯನ್ನೈವಂ ತನ್ನೈವಮ್" ಎಂದು ಅನುಮಾನಾಕಾರ. ಚೇಷ್ಟೆಯು ಕೃತಸಂಕೇತವೆಂದೂ ಅಕೃತ ಸಂಕೇತವೆಂದೂ ಎರಡುವಿಧವಾಗಿರುತ್ತದೆ. ಕೃತಸಂಕೇತಚೇಷ್ಟೆಯು ಲಿಪ್ಯಾದಿಗಳಂತೆ ಸಂಕೇತಗ್ರಾಹಕಶಬ್ದ ಸ್ಮಾರಕವಾಗುವುದರಿಂದ ಶಬ್ದಪ್ರಮಾಣದಲ್ಲಿಯೂ, ಅಕೃತಸಂಕೇತ ಚೇಷ್ಟೆಯು ವ್ಯಾಪ್ತಿಜ್ಞಾನದಮೂಲಕ ಅನುಮಾನದಲ್ಲಿಯೂ ಅಂತರ್ಭಾವಹೊಂದುವುದರಿಂದ ಬೇರೆಪ್ರಮಾಣವಾಗುವುದಿಲ್ಲವೆಂದರ್ಥ. ॥

**ಸುಖಂ ತು ಜಗತಾಮೇವ ಕಾಮ್ಯಂ ಧರ್ಮೇಣಜಾಯತೇ ॥**

ಸುಖಂ ನಿರೂಪಯತಿ—ಸುಖಂ ತ್ವಿತಿ । ಕಾಮ್ಯಮಭಿಲಾಷವಿಷಯಃ । ಧರ್ಮೇಣೇತಿ । ಧರ್ಮತ್ವೇನ ಸುಖತ್ವೇನ ಕಾರ್ಯಕಾರಣಭಾವ ಇತ್ಯರ್ಥಃ ॥

ಸುಖವನ್ನು ನಿರೂಪಿಸುತ್ತಾನೆ. 'ಸುಖಂ—' ಇತಿ. ಸಕಲರಇಚ್ಛಾವಿಷಯವಾದದ್ದೇ ಸುಖ. ಇದನ್ನು ಬಯಸದವರು ಯಾರೂ ಇಲ್ಲ. ಇದು ಧರ್ಮದಿಂದ ಉಂಟಾಗುತ್ತದೆ. ಪ್ರಾಚೀನಮತಾನುಸಾರವಾಗಿ ಧರ್ಮಸುಖಗಳಿಗೆ ಕಾರ್ಯಕಾರಣಭಾವ ಹೇಳಿದೆ. ನವ್ಯಮತದಲ್ಲಿ 'ನಿತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಶ್ರುತಿಯಿಂದ ಪರಮೇಶ್ವರನಲ್ಲಿ ನಿತ್ಯಸುಖಸಿದ್ಧವಾಗುವುದರಿಂದ ಧರ್ಮದ ಕಾರ್ಯತಾವಚ್ಛೇದಕವೇ ಜನ್ಯಸುಖವೆಂದು ತಿಳಿಯಬೇಕು. ಧರ್ಮತ್ವ, ಜನ್ಯಸುಖತ್ವರೂಪದಿಂದ ಕಾರ್ಯಕಾರಣಭಾವ ತಿಳಿಯಬೇಕು.

**ಅಧರ್ಮಜನ್ಯಂ ದುಃಖಂ ಸ್ಯಾತ್ಪ್ರತಿಕೂಲಂ ಸಚೇತಸಾಮ್ ॥ ೧೪೫ ॥**

ದುಃಖಂ ನಿರೂಪಯತಿ—ಅಧರ್ಮೇತಿ । ಅಧರ್ಮತ್ವೇನ ದುಃಖತ್ವೇನ ಕಾರ್ಯಕಾರಣಭಾವ ಇತ್ಯರ್ಥಃ । ಪ್ರತಿಕೂಲಮಿತಿ । ದುಃಖತ್ವಜ್ಞಾನಾದೇವಸರ್ವೇಷಾಂ ಸ್ವಾಭಾವಿಕದ್ವೇಷವಿಷಯ ಇತ್ಯರ್ಥಃ ॥ ೧೪೫ ॥

ಅಧರ್ಮಮಾತ್ರಾಸಾಧಾರಣಕಾರಣವಾಗಿರುವ ಗುಣವೇ ದುಃಖವಾಗುತ್ತದೆ. 'ದುಃಖತ್ವಾವಚ್ಛಿನ್ನಂ ಪ್ರತಿ ಅಧರ್ಮತ್ವಾವಚ್ಛಿನ್ನಂ ಕಾರಣಮ್' ಎಂದರ್ಥ. ದುಃಖವನ್ನು ಯಾರೂ ಬಯಸದಿರುವುದರಿಂದ ಇದು ದ್ವೇಷವಿಷಯವಾಗುತ್ತದೆ.

**ನಿರ್ದುಃಖತ್ವೇ ಸುಖೇ ಚೇಚ್ಛಾ ತಜ್ಜ್ಞಾನಾದೇವ ಜಾಯತೇ ॥**
**ಇಚ್ಛಾ ತು ತದುಪಾಯೇ ಸ್ಯಾದಿಷ್ಟೋಪಾಯತ್ವಧೀರ್ಯದಿ ॥ ೧೪೬ ॥**

ಇಚ್ಛಾಂ ನಿರೂಪಯತಿ—ನಿರ್ದುಃಖತ್ವೇ ಇತಿ । ಇಚ್ಛಾ ದ್ವಿವಿಧಾ ಫಲವಿಷಯಿಣೀ

ಉಪಾಯವಿಷಯಣೀ ಚ । ಫಲಂ ತು ಸುಖಂ ದುಃಖಾಭಾವಶ್ಚ । ತತ್ರ ಫಲೇಚ್ಛಾಂ ಪ್ರತಿ ಫಲಜ್ಞಾನಂ ಕಾರಣಮ್ । ಅತ ಏವ ಪುರುಷಾರ್ಥಃ ಸಂಭವತಿ, 'ಯಜ್ಞಾತಂ ಸತ್ ಸ್ವವೃತ್ತಿತಯೇಷ್ಯತೇ ಸ ಪುರುಷಾರ್ಥಃ' ಇತಿ ತಲ್ಲಕ್ಷಣಾತ್ । ಇತರೇಚ್ಛಾನಧೀನೇಚ್ಛಾವಿಷಯತ್ವಂ ಫಲಿತೋಽರ್ಥಃ, ಉಪಾಯೇಚ್ಛಾಂ ಪ್ರತೀಷ್ಟಸಾಧನತಾಜ್ಞಾನಂ ಕಾರಣಮ್ ॥ ೧೪೬ ॥

ಇಚ್ಛಾರೂಪಗುಣದಲಕ್ಷಣ ತೋರಿಸುತ್ತಾನೆ- 'ನಿರ್ದುಃಖತ್ವೇ—' ಇತಿ. ದುಃಖಾಭಾವ ಮತ್ತು ಸುಖ ಇವು ಇಚ್ಛಾವಿಷಯವಾಗುತ್ತವೆ. ಇದನ್ನೇ ಇಚ್ಛಾಫಲ ವೆಂದು ಮುಂದೆ ಹೇಳುತ್ತಾನೆ. "ಇಚ್ಛಾತ್ವಜಾತಿಮತ್ತ್ವಂ" ಎಂದು ಇಚ್ಛಾಲಕ್ಷಣ. ತಜ್ಞಾನಾತ್— ಫಲತ್ವಪ್ರಕಾರಕಜ್ಞಾನದಿಂದ, ಇಚ್ಛೆಯುಂಟಾಗುತ್ತದೆ. ಫಲ ವಿಷಯಿಕ, ಉಪಾಯವಿಷಯುಕವೆಂದು ಇಚ್ಛೆ ಎರಡುವಿಧವಾಗಿರುತ್ತದೆ. ಫಲೇಚ್ಛೆ ಯನ್ನು ಕುರಿತು ಫಲಜ್ಞಾನವು ಕಾರಣ. ಇಚ್ಛೆಯನ್ನು ಕುರಿತು ವಿಷಯಜ್ಞಾನಕಾರಣ ವೆಂದು ಪ್ರಸಿದ್ಧವಾಗಿದೆ. ಉಪಾಯೇಚ್ಛೆಯನ್ನು ಕುರಿತು (ಇಷ್ಟೋಪಾಯತ್ವಧೀಃ) ಇಷ್ಟಸಾಧನತಾಜ್ಞಾನವು ಕಾರಣ. ಅತಏವ—ಫಲಜ್ಞಾನವು ಫಲೇಚ್ಛೆಯನ್ನು ಕುರಿತು ಕಾರಣವಾದುದರಿಂದಲೇ. ಸುಖವೂ ದುಃಖಾಭಾವವೂ ಪುರುಷಾರ್ಥವಾಗು ತ್ತದೆ ಎಂದರ್ಥ.

**ಚಿಕೀರ್ಷಾ ಕೃತಿಸಾಧ್ಯತ್ವಪ್ರಕಾರೇಚ್ಛಾ ಚ ಯಾ ಭವೇತ್ ।**
**ತದ್ಧೇತುಃ ಕೃತಿಸಾಧ್ಯೇಷ್ಟಸಾಧನತ್ವಮತಿರ್ಭವೇತ್ ॥ ೧೪೭ ॥**

ಚಿಕೀರ್ಷೇತಿ । ಕೃತಿಸಾಧ್ಯತ್ವಪ್ರಕಾರಿಕಾ ಕೃತಿಸಾಧ್ಯಕ್ರಿಯಾವಿಷಯಿಣೀಚ್ಛಾ ಚಿಕೀರ್ಷಾ, ಪಾಕಂ ಕೃತ್ಯಾ ಸಾಧಯಾಮೀತಿ ತದನುಭಾವಾತ್ । ಚಿಕೀರ್ಷಾಂ ಪ್ರತಿ ಕೃತಿಸಾಧ್ಯತಾಜ್ಞಾನಮಿಷ್ಟಸಾಧನತಾಜ್ಞಾನಂ ಚ ಕಾರಣಮ್ । ತದ್ಧೇತು ರಿತಿ । ಅತ ಏವ ವೃಷ್ಟ್ಯಾದೌ ಕೃತಿಸಾಧ್ಯತಾಜ್ಞಾನಾಭಾವಾನ್ನ ಚಿಕೀರ್ಷಾ ॥ ೧೪೭ ॥

ಇಚ್ಛಾವಿಶೇಷಕ್ಕೆ ಚಿಕೀರ್ಷಾ ಎಂದು ಹೆಸರು. ಅದರ ಸ್ವರೂಪವನ್ನು ಹೇಳು ತ್ತಾನೆ. 'ಕೃತಿಸಾಧ್ಯ—' ಇತಿ. 'ಕೃತಿಸಾಧ್ಯೇ ಯಾ ಕ್ರಿಯಾವಿಷಯಿಣೀಚ್ಛಾ ಸಾ ಚಿಕೀರ್ಷಾ'. ಕೃತಿಸಾಧ್ಯತ್ವಪ್ರಕಾರಕವೂ ಆಗಿ ಕೃತಿಸಾಧ್ಯಕ್ರಿಯಾವಿಷಯಕವೂ ಆದ ಇಚ್ಛೆಗೆ ಚಿಕೀರ್ಷಾ ಎಂದು ಹೆಸರು. 'ಪಾಕಂ ಕೃತ್ಯಾ ಸಾಧಯಾಮಿ' ಎಂಬುದು ಚಿಕೀರ್ಷಾಪರಿಚಾಯಕವಾದ ಅನುಭವವಾಗುತ್ತದೆ. ಈ ಚಿಕೀರ್ಷೆಗೆ ಕಾರಣ ತೋರಿಸುತ್ತಾನೆ. 'ತದ್ಧೇತುಃ—' ಇತಿ. ಕೃತಿಸಾಧ್ಯತಾಜ್ಞಾನವೂ, ಇಷ್ಟ ಸಾಧನತಾಜ್ಞಾನವೂ (ಇದಂ ಮತ್ಕೃತಿಸಾಧ್ಯಂ, ಇದಂ ಮದಿಷ್ಟಸಾಧನಮ್) ಈ

ಚಿಕೀರ್ಷೆಯಲ್ಲಿ ನಿಮಿತ್ತಕಾರಣವೆಂದರ್ಥ. ಮೂಲದಲ್ಲಿ ಮತಿಶಬ್ದವು ದ್ವಂದ್ವಾಂತದಲ್ಲಿರುವುದರಿಂದ ಪ್ರತ್ಯೇಕಾನ್ವಯ ಹೇಳಬೇಕು. ಹೀಗೆ ಚಿಕೀರ್ಷಾಕ್ಕೆ ಕೃತಿಸಾಧ್ಯತ್ವಪ್ರಕಾರಕಜ್ಞಾನವೂ ಕಾರಣವೆಂದು ಅಂಗೀಕರಿಸಿರುವುದರಿಂದ ಫಲ ತೋರಿಸುತ್ತಾನೆ. 'ಅತಏವ—' ಇತಿ. ಮಳೆಮುಂತಾದವುಗಳಲ್ಲಿ ಕೃತಿಸಾಧ್ಯತ್ವಪ್ರಕಾರಕಜ್ಞಾನವಿಲ್ಲದಿರುವುದರಿಂದ ಚಿಕೀರ್ಷಾ ಉಂಟಾಗುವುದಿಲ್ಲ. ನಮ್ಮ ಕೃತಿಯಿಂದ ಅದು ಎಂದೂ ಸಾಧ್ಯವಿಲ್ಲ. ನಮ್ಮಿಂದ ಸಾಧ್ಯವೆಂದು ತಿಳಿದುದರಲ್ಲಿಯೇ ಮಾಡುವ ಇಚ್ಛೆ ಬರುತ್ತದೆ.

**ಬಲವದ್ ದ್ವಿಷ್ಟಹೇತುತ್ವಮತಿಃ ಸ್ಯಾತ್ಪ್ರತಿಬಂಧಿಕಾ ।**
**ತದಹೇತುತ್ವಬುದ್ಧೇಸ್ತು ಹೇತುತ್ವಂ ಕಸ್ಯಚಿನ್ಮತೇ ॥ ೧೪೮ ॥**

ಬಲವದಿತಿ । ಬಲವದ್ದ್ವಿಷ್ಟಸಾಧನತಾಜ್ಞಾನಂ ಪ್ರತಿಬಂಧಕಮ್ । ಅತೋಮಧುವಿಷಸಂಪೃಕ್ತಾನ್ನಭೋಜನೇ ಚ ಚಿಕೀರ್ಷಾ । ಬಲವದ್ದ್ವೇಷಃ ಪ್ರತಿಬಂಧಕ ಇತ್ಯನ್ಯೇ । ತದಹೇತುತ್ವೇತಿ । ಬಲವದನಿಷ್ಟಾಜನಕತ್ವಜ್ಞಾನಂ ಕಾರಣಮಿತ್ಯರ್ಥಃ ॥ ೧೪೮ ॥

ಈ ಚಿಕೀರ್ಷೆಗೆ ಪ್ರತಿಬಂಧಕವನ್ನು ತೋರಿಸುತ್ತಾನೆ. 'ಬಲವದ್—' ಇತಿ. 'ಬಲವದ್ದ್ವೇಷ ವಿಷಯತಾವಚ್ಛೇದಕಧರ್ಮಾವಚ್ಛಿನ್ನ ನಿರೂಪಿತಸಾಧನತ್ವಪ್ರಕಾರಕಜ್ಞಾನಂ' ಎಂದು ಪರಿಷ್ಕಾರ ತಿಳಿಯಬೇಕು. ಇಲ್ಲಿ ಬಲವತ್ತ್ವ ವೈಜಾತ್ಯವಾಗಿರುತ್ತದೆ. (ನಾಂತರೀಯಕದುಃಖವಿಷಯಕದ್ವೇಷ ವ್ಯಾವೃತ್ತವಾಗಿರುವುದು). ಬಲವದ್ದ್ವೇಷ ವಿಷಯವಾದಸಾಧನತ್ವಪ್ರಕಾರಕಜ್ಞಾನವಿದ್ದರೆ ಚಿಕೀರ್ಷಾ ಬರುವುದಿಲ್ಲ. ಅಗಮ್ಯಾಗಮನದಿಂದ ನರಕವುಂಟಾಗುವುದರಿಂದ ಅಗಮ್ಯಾಗಮ್ಯಜನ್ಯನರಕದಲ್ಲಿ ಬಲವದ್ದ್ವೇಷ ಬರುತ್ತದೆ. ಇದರಿಂದ ಅಗಮ್ಯಾಗಮನದಲ್ಲಿ ಚಿಕೀರ್ಷಾ ಉಂಟಾಗುವುದಿಲ್ಲ. ಮತಾಂತರರೀತಿಯಿಂದ ಪ್ರತಿಬಂಧಕತ್ವವನ್ನು ತೋರಿಸುತ್ತಾನೆ. 'ತದಹೇತುತ್ವ—' ಇತಿ. ಬಲವದನಿಷ್ಟಾಜನಕತ್ವಪ್ರಕಾರಕಜ್ಞಾನವು ಚಿಕೀರ್ಷಾಕ್ಕೆ ಕಾರಣವೆಂದರ್ಥ. 'ಕಸ್ಯಚಿತ್—' ಎಂದುದರಿಂದ ಅಸ್ವಾರಸ್ಯ ಸೂಚಿತವಾಗುತ್ತದೆ. ಕೃತಿಸಾಧ್ಯತ್ವಪ್ರಕಾರಕಜ್ಞಾನವುಳ್ಳವನಿಗೆ ಒಂದುಕಾರ್ಯಬಲವದನಿಷ್ಟಸಾಧನವೆಂಬಪ್ರತಿಬಂಧಕಜ್ಞಾನ ಬಂದಿರುವುದಿಲ್ಲ. (ಇದುಕೃತಿಸಾಧ್ಯ ಎಂಬಜ್ಞಾನ ಬಂದಿರುತ್ತದೆ.) ಆಗ ಬಲವದನಿಷ್ಟಾಜನಕತ್ವಪ್ರಕಾರಕಜ್ಞಾನವಿಲ್ಲದಿದ್ದರೂ ಚಿಕೀರ್ಷಾಬಂದೇಬರುತ್ತದೆ. ಆದುದರಿಂದ ಬಲವದನಿಷ್ಟಸಾಧನತ್ವಪ್ರಕಾರಕಜ್ಞಾನವು ಚಿಕೀರ್ಷಾಕ್ಕೆ ಪ್ರತಿಬಂಧಕವೆಂದೇ ಅಂಗೀಕರಿಸಬೇಕು. ॥

**ದ್ವಿಷ್ಟಸಾಧನತಾಬುದ್ಧಿರ್ಭವೇದ್ ದ್ವೇಷಸ್ಯ ಕಾರಣಮ್ ॥**

ದ್ವೇಷಂ ನಿರೂಪಯತಿ—ದ್ವಿಷ್ಟಸಾಧನತೇತಿ । ದುಃಖೋಪಾಯವಿಷಯಕಂ ದ್ವೇಷಂ

ಪ್ರತಿ ಬಲವದ್ದ್ವಿಷ್ಟಸಾಧನತಾಜ್ಞಾನಂ ಕಾರಣಮಿತ್ಯರ್ಥಃ । ಬಲವದಿಷ್ಟ ಸಾಧನತಾಜ್ಞಾನಂ ಪ್ರತಿಬಂಧಕಮ್ । ತೇನ ನಾಂತರೀಯಕದುಃಖಜನಕೇ ಪಾಕಾದೌ ನ ದ್ವೇಷಃ ॥

ದ್ವೇಷರೂಪಗುಣದಲಕ್ಷಣವನ್ನು ತೋರಿಸುತ್ತಾನೆ. 'ದ್ವಿಷ್ಟ—' ಇತಿ. 'ದ್ವೇಷತ್ವಜಾತಿಮತ್ತ್ವಂ' ಎಂದು ದ್ವೇಷದ ಸಾಮಾನ್ಯಲಕ್ಷಣ. 'ದ್ವೇಷ್ಟಿ' (ದ್ವೇಷಿಸುತ್ತಾನೆ) ಎಂಬ ಅನುಭವದಿಂದ ಇದು ಪ್ರಸಿದ್ಧವಾಗಿದೆ. 'ದ್ವಿಷ್ಟಸಾಧನತಾಜ್ಞಾನಜನ್ಯ ಗುಣತ್ವಂ' ಎಂದೂ ಲಕ್ಷಣಹೇಳಬಹುದು. ದ್ವೇಷಕ್ಕೆ ಯಾವುದು ವಿಷಯವೋ, ಅದಕ್ಕೆ ಸಾಧನವು ಯಾವುದೋ, ಅದರಜ್ಞಾನದಿಂದ ಈ ದ್ವೇಷ ಹುಟ್ಟುತ್ತದೆ. ದುಃಖ ವಿಷಯ, ದುಃಖೋಪಾಯವಿಷಯವೆಂದು ದ್ವೇಷವು ಎರಡುರೀತಿಯಾಗಿರುತ್ತದೆ. ದುಃಖವಿಷಯಕದ್ವೇಷಕ್ಕೆ ದುಃಖಜ್ಞಾನವೇ ಹೇತು. ದುಃಖೋಪಾಯವಿಷಯದ್ವೇಷಕ್ಕೆ ದ್ವೇಷವಿಷಯಸಾಧನತಾಜ್ಞಾನ ಕಾರಣ. ಬಲವದಿಷ್ಟಸಾಧನತಾಜ್ಞಾನವು ದ್ವೇಷಕ್ಕೆ ಪ್ರತಿಬಂಧಕವಾಗುತ್ತದೆ. ಇವನ್ನು ಬಿಡಬೇಕೆಂಬ ಇಚ್ಛೆಯೇ ದ್ವೇಷವೆಂದು ಸಾರಾಂಶ. ಯಾವವಿಷಯಸಂಬಂಧದಿಂದ ಆತ್ಮನು ದುಃಖವನ್ನನುಭವಿಸುವನೋ ಅದನ್ನು ನೋಡಿದೊಡನೆಯೇ ದೂರದಲ್ಲಿಯೇ ಬಿಡಲುಬಯಸುತ್ತಾನೆ. ॥

**ಪ್ರವೃತ್ತಿಶ್ಚ ನಿವೃತ್ತಿಶ್ಚ ತಥಾ ಜೀವನಕಾರಣಮ್ ॥ ೧೪೯ ॥**
**ಏವಂ ಪ್ರಯತ್ನತ್ರೈವಿಧ್ಯಂ ತಾಂತ್ರಿಕೈಃ ಪರಿಕೀರ್ತಿತಮ್ ॥**

ಪ್ರಯತ್ನಂ ನಿರೂಪಯತಿ—ಪ್ರವೃತ್ತಿಶ್ಚೇತಿ । ಪ್ರವೃತ್ತಿನಿವೃತ್ತಿಜೀವನಯೋನಿಯತ್ನ ಭೇದಾತ್ ಪ್ರಯತ್ನಸ್ತ್ರಿವಿಧ ಇತ್ಯರ್ಥಃ ॥

'ಪ್ರಯತ್ನತ್ವಜಾತಿಮತ್ತ್ವಂ' ಪ್ರಯತ್ನದಲಕ್ಷಣ. [ಉತ್ಸಾಹರೂಪಯತ್ನ] ಇದು ಪ್ರವೃತ್ತಿ, ನಿವೃತ್ತಿ, ಜೀವನಕಾರಣಯತ್ನವೆಂದು ಮೂರುವಿಧವಾಗಿರುತ್ತದೆ.

**ಚಿಕೀರ್ಷಾ ಕೃತಿಸಾಧ್ಯೇಷ್ಟಸಾಧನತ್ವಮತಿಸ್ತಥಾ ॥ ೧೫೦ ॥**
**ಉಪಾದಾನಸ್ಯ ಚಾಧ್ಯಕ್ಷಂ ಪ್ರವೃತ್ತೌ ಜನಕಂ ಭವೇತ್ ।**

ಚಿಕೀರ್ಷೇತ್ಯಾದಿ । ಮಧುವಿಷಸಂಪೃಕ್ತಾನ್ನಭೋಜನಾದೌ ಬಲವದನಿಷ್ಟಾನುಬಂಧಿತ್ವೇನ ಚಿಕೀರ್ಷಾಭಾವಾನ್ನ ಪ್ರವೃತ್ತಿರಿತಿ ಭಾವಃ । ಕೃತಿಸಾಧ್ಯತಾಜ್ಞಾನಾದಿವದ್ಬಲವದನಿಷ್ಟಾನನುಬಂಧಿತ್ವಜ್ಞಾನಮಪಿ ಸ್ವತಂತ್ರಾನ್ವಯವ್ಯತಿರೇಕಾಭ್ಯಾಂ ಪ್ರವೃತ್ತೌ ಕಾರಣಮಿತ್ಯಪಿ ವದಂತಿ ॥

ಪ್ರಸಂಗಸಂಗತಿಯಿಂದ ಪ್ರವೃತ್ತಿರೂಪಪ್ರಯತ್ನದ ಕಾರಣವನ್ನು ಹೇಳುತ್ತಾನೆ. ಚಿಕೀರ್ಷಾ—' ಇತಿ. ಚಿಕೀರ್ಷಾ, [ಕೃತಿಸಾಧ್ಯದಲ್ಲಿ ಕ್ರಿಯಾವಿಷಯಿಕೇಚ್ಛಾ] ಕೃತಿ

ಸಾಧ್ಯತ್ವಪ್ರಕಾರಕಜ್ಞಾನ, ಇಷ್ಟಸಾಧನತ್ವಪ್ರಕಾರಕಜ್ಞಾನ, ಉಪಾದಾನಸ್ಯ ಅಧ್ಯಕ್ಷಂ—ಸಮವಾಯಿಕಾರಣದಪ್ರತ್ಯಕ್ಷ ಹೀಗೆ ಈ ನಾಲ್ಕೂ ಸೇರಿ ಪ್ರವೃತ್ತಿಯಲ್ಲಿ ಕಾರಣವಾಗುತ್ತವೆ. ಕೆಲಸಮಾಡುವ ಇಚ್ಛೆ, ಆ ಕೆಲಸತನ್ನಿಂದಸಾಧ್ಯವೆಂಬಜ್ಞಾನ, ಅದು ತನ್ನ ಇಷ್ಟಸಾಧಕವೆಂಬಜ್ಞಾನ, ಅದರ ಕಾರಣತಿಳಿದಿರುವಿಕೆ ಇವು ನಾಲ್ಕು ಇದ್ದರೆ ಕಾರ್ಯದಲ್ಲಿ ಪ್ರವರ್ತಿಸುತ್ತಾರೆ. ಕೃತಿಸಾಧ್ಯತಾಜ್ಞಾನವಿಲ್ಲದಿರುವುದರಿಂದ ಮೇರುಶೃಂಗ ಭಂಗದಲ್ಲಿಯೂ, ಇಷ್ಟಸಾಧನತಾಜ್ಞಾನವಿಲ್ಲದಿರುವುದರಿಂದ ಸಮುದ್ರಮಧ್ಯಮುಳುಗುವುದ ರಲ್ಲಿಯೂ, ಉಪಾದಾನಕಾರಣಗಳಾದಪರಮಾಣುಗಳಪ್ರತ್ಯಕ್ಷವಿಲ್ಲದಿರುವುದರಿಂದ ದ್ವ್ಯಣು ಕೋತ್ಪಾದನೆಯಲ್ಲಿಯೂ ಪ್ರವೃತ್ತಿ ಬರುವುದಿಲ್ಲ. ಕುಂಭಕಾರನಿಗೆ ಘಟದಲ್ಲಿ ಈನಾಲ್ಕೂ ಕಾರಣಗಳಿರುವುದರಿಂದ ಪ್ರವೃತ್ತಿಯುಂಟಾಗುತ್ತದೆ. ಹೀಗೆ ಪ್ರತಿಯೊಂದು ಕಾರ್ಯ ದಲ್ಲಿಯೂ ತಿಳಿಯಬೇಕು. ಇಲ್ಲಿಯೇ ಮತಾಂತರವನ್ನು ತೋರಿಸುತ್ತಾನೆ. 'ಕೃತಿಸಾಧ್ಯತಾ—' ಇತಿ. ಹೇಗೆ ಹಿಂದೆ ಹೇಳಿದ ನಾಲ್ಕೂ ಕಾರಣಗಳಾಗುತ್ತವೆಯೋ ಹಾಗೆ ಬಲವದನಿಷ್ಟಾಜನಕತ್ವಜ್ಞಾನವೂ ಪ್ರವೃತ್ತಿಯನ್ನು ಕುರಿತು ಸ್ವತಂತ್ರಕಾರಣ ವಾಗುತ್ತದೆ. ಅದು ಅನ್ವಯವ್ಯತಿರೇಕದಿಂದ ಸಿದ್ಧವಾಗುತ್ತದೆಂದು ಅವರ ಅಭಿಪ್ರಾಯ. ಇನ್ನೊಂದರ ಅಪೇಕ್ಷೆಇಲ್ಲದೆ ಅನ್ವಯವ್ಯತಿರೇಕವಿರುವುದರಿಂದ ಅದು ಸ್ವತಂತ್ರಕಾರಣ ವೆಂದು ತಾತ್ಪರ್ಯ.'

ಕಾರ್ಯತಾಜ್ಞಾನಂ ಪ್ರವರ್ತಕಮಿತಿ ಗುರವಃ । ತಥಾಹಿ ಜ್ಞಾನಸ್ಯ ಪ್ರವೃತ್ತೌ ಜನನೀ ಯಾಯಾಂ ಚಿಕೀರ್ಷಾತಿರಿಕ್ತಂ ನಾಪೇಕ್ಷಿತಮಸ್ತಿ । ಅರ್ಥಾತ್ ಯದ್ವಸ್ತುವಿಷ ಯಿಣೀಚ್ಛಾ ಸಾ ನಿಯಮೇನ ತದ್ವಿಷಯಕಜ್ಞಾನಜನ್ಯಾ । ಸಾ ಚ ಕೃತಿ ಸಾಧ್ಯತಾಜ್ಞಾನಸಾಧ್ಯಾ, ಇಚ್ಛಾಯಾಃ ಸ್ವಪ್ರಕಾರಪ್ರಕಾರಕಧೀಸಾಧ್ಯತ್ವ ನಿಯಮಾತ್ । ಚಿಕೀರ್ಷಾ ಹಿ ಕೃತಿಸಾಧ್ಯತ್ವಪ್ರಕಾರಿಕೇಚ್ಛಾ । ತತ್ರ ಕೃತಿ ಸಾಧ್ಯತ್ವಂಪ್ರಕಾರಸ್ತತ್ಪ್ರಕಾರಕಂಜ್ಞಾನಂ ಚಿಕೀರ್ಷಾಯಾಂ ತದ್ದ್ವಾರಾ ಚ ಪ್ರವೃತ್ತೌ ಹೇತುಃ, ನತ್ವಿಷ್ಟಸಾಧನತಾಜ್ಞಾನಂ ತತ್ರ ಹೇತುಃ, । ಕೃತ್ಯ ಸಾಧ್ಯೇಽಪಿ ಚಂದ್ರಮಂಡಲಾನಯನಾದೌ ಪ್ರವೃತ್ತ್ಯಾಪತ್ತೇಃ । ನನು ಕೃತ್ಯ ಸಾಧ್ಯತಾಜ್ಞಾನಂ ಪ್ರತಿಬಂಧಕಮಿತಿ ಚೇನ್ನ, ತದಭಾವಾಪೇಕ್ಷಯಾ ಕೃತಿ ಸಾಧ್ಯತಾಜ್ಞಾನಸ್ಯ ಲಘುತ್ವಾತ್। ನಚ ದ್ವಯೋರಪಿ ಹೇತುತ್ವಂ, ಗೌರವಾತ್। ನನು ತೃಪ್ತಸ್ಯಾಪಿ ಮಧುವಿಷಸಂಪೃಕ್ತಾನ್ನಭೋಜನೇ ಚೈತ್ಯವಂದನೇ ಚ ಪ್ರವೃತ್ತ್ಯಾಪತ್ತಿಃ, ಕಾರ್ಯತಾಜ್ಞಾನಸ್ಯ ಹೇತುತ್ವಾತ್ ಇತಿಚೇನ್ನ ಸ್ವವಿಶೇಷಣ ವತ್ತಾಪ್ರತಿಸಂಧಾನಜನ್ಯಕಾರ್ಯತಾಜ್ಞಾನಸ್ಯ ಪ್ರವರ್ತಕತ್ವಾತ್ । ಕಾಮ್ಯೇಹಿ ಯಾಗಪಾಕಾದೌ ಕಾಮನಾ ಸ್ವವಿಶೇಷಣಮ್ ! ತತಶ್ಚ ಬಲವದನಿಷ್ಟಾನನು ಬಂಧಿಕಾಮ್ಯಸಾಧನತಾಜ್ಞಾನೇನ ಕಾರ್ಯತಾಜ್ಞಾನಮ್ । ತತಶ್ಚ ಪ್ರವೃತ್ತಿಃ । ತೃಪ್ತಸ್ತು ಭೋಜನೇ ನ ಪ್ರವರ್ತತೇ ತದಾನೀಂ ಕಾಮನಾಯಾಃ ಪುರುಷವಿಶೇಷಣ

ತ್ವಾಭಾವಾತ್ । ನಿತ್ಯೇ ಚ ಶೌಚಾದಿಕಂ ಪುರುಷವಿಶೇಷಣಮ್ । ತೇನ ಶೌಚಾದಿಜ್ಞಾನಾಧೀನಕೃತಿಸಾಧ್ಯತಾಜ್ಞಾನಾತ್ತತ್ರ ಪ್ರವೃತ್ತಿಃ । ನನು ತದಪೇಕ್ಷಯಾ ಲಾಘವೇನ ಬಲವದನಿಷ್ಟಾನನುಬಂಧೀಷ್ಟಸಾಧನತಾವಿಷಯಕಕಾರ್ಯತಾಜ್ಞಾನತ್ವೇನೈವ ಹೇತುತ್ವಮಸ್ತು ಬಲವದನಿಷ್ಟಾನನುಬಂಧಿತ್ವಂ ಚೇಷ್ಟೋತ್ಪತ್ತಿನಾಂತರೀಯಕದುಃಖಾಧಿಕದುಃಖಾಜನಕತ್ವಂ ಬಲವದ್ದ್ವೇಷವಿಷಯದುಃಖಾಜನಕತ್ವಂ ವೇತಿ ಚೇನ್ನ ॥

ಪ್ರವೃತ್ತಿವಿಷಯದಲ್ಲಿ ಪ್ರಭಾಕರನ ಮತವನ್ನು ತೋರಿಸುತ್ತಾನೆ. 'ಕಾರ್ಯತಾಜ್ಞಾನಂ—' ಇತಿ. ಚಿಕೀರ್ಷಾಮೂಲಕ ಕೃತಿಸಾಧ್ಯತಾಜ್ಞಾನವೊಂದೇ ಪ್ರವೃತ್ತಿಯನ್ನು ಕುರಿತು ಕಾರಣವೆಂದು ಮೀಮಾಂಸಕರಾದ ಗುರುಗಳಮತ. ಇಷ್ಟಸಾಧನತಾಜ್ಞಾನ ಬೇರೆಕಾರಣಬೇಕಾಗಿಲ್ಲ. 'ತಥಾಹಿ—' ಎಂದು ಅವರ ಮತವನ್ನು ವಿವರಿಸುತ್ತಾನೆ. ಜ್ಞಾನಸ್ಯ— 'ಇದಂ ಮತ್ಕೃತಿಸಾಧ್ಯಂ' ಎಂಬ ಕಾರ್ಯತಾಜ್ಞಾನಕ್ಕೆ (ಇದೇ ಕೃತಿಸಾಧ್ಯತ್ವಪ್ರಕಾರಕಜ್ಞಾನ.) ಪ್ರವೃತ್ತೌಜನನೀಯಾಯಾಂ—ಪ್ರವೃತ್ತಿಯನ್ನು ಹುಟ್ಟಿಸುವುದರಲ್ಲಿ, ಚಿಕೀರ್ಷಾತಿರಿಕ್ತವಾಗಿ ಇನ್ನೇನೂ ಅಪೇಕ್ಷಿತವಾಗಿಲ್ಲ. 'ಅರ್ಥಾತ್—' ಇತಿ. ಒಂದುವಸ್ತುವಿಷಯಕವಾದ ಇಚ್ಛೆ ಬರಬೇಕಾದರೆ ಆವಸ್ತುವಿಷಯಕಜ್ಞಾನವಿರಬೇಕು. ಆಜ್ಞಾನದಿಂದ ಆವಸ್ತುವಿನ ಇಚ್ಛೆಯುಂಟಾಗುತ್ತದೆ. ಸಾ—ಚಿಕೀರ್ಷಾ. ಇದು ಕೃತಿಸಾಧ್ಯತ್ವಪ್ರಕಾರಕಜ್ಞಾನದಿಂದಉಂಟಾಗುತ್ತದೆ. ಈ ವಿಷಯದಲ್ಲಿ ನಿಯಮವನ್ನು ತೋರಿಸುತ್ತಾನೆ. 'ಇಚ್ಛಾಯಾಃ—' ಇತಿ. ಇಚ್ಛೆಯೆಂದರೆ ಚಿಕೀರ್ಷೆಯೇ. ಸ್ವಂ—ಇಚ್ಛಾ (ಚಿಕೀರ್ಷಾ) ಪ್ರಕಾರಃ (ವಿಶೇಷಣಂ) ಏವ ಪ್ರಕಾರೋ ಯಸ್ಯಾಃ ಸಾ, ಸ್ವಪ್ರಕಾರಪ್ರಕಾರಕಧೀಃ, ತತ್ಸಾಧ್ಯತ್ವಮ್ । ಯಾವ ಇಚ್ಛೆಯು ಯದ್ವಿಶೇಷ್ಯಕ, ಯತ್ಪ್ರಕಾರಕವಾಗಿರುತ್ತದೆಯೋ, ಅದು ನಿಯಮದಿಂದ ತದ್ವಿಶೇಷ್ಯಕತತ್ಪ್ರಕಾರಕಜ್ಞಾನದಿಂದ ಹುಟ್ಟುತ್ತದೆಂದರ್ಥ. ಹಿ—ಯಾವ ಕಾರಣದಿಂದ. ಚಿಕೀರ್ಷಾ ಎಂಬುದು ಕೃತಿಸಾಧ್ಯತ್ವಪ್ರಕಾರಿಕೇಚ್ಛಾರೂಪವಾಗುತ್ತದೆ. ತತ್ರ—ಆ ಚಿಕೀರ್ಷಾರೂಪವಾದ ಇಚ್ಛೆಯಲ್ಲಿ, ಕೃತಿಸಾಧ್ಯತ್ವರೂಪಧರ್ಮವೇ ಪ್ರಕಾರರೂಪದಿಂದ ತೋರುತ್ತದೆ. ಆದುದರಿಂದ ತತ್ಪ್ರಕಾರತಾಜ್ಞಾನಂ—ಆ ಕೃತಿಸಾಧ್ಯತ್ವಪ್ರಕಾರಕಜ್ಞಾನವು ಚಿಕೀರ್ಷಾದಲ್ಲಿ ಸಾಕ್ಷಾತ್ಕಾರಣವಾಗುತ್ತದೆ. ತದ್ದ್ವಾರಾ—ಆ ಚಿಕೀರ್ಷಾ ಮೂಲಕ ಕೃತಿಸಾಧ್ಯತಾಜ್ಞಾನವು (ಪರಂಪರೆಯಿಂದ) ಪ್ರವೃತ್ತಿಯಲ್ಲಿ ಕಾರಣವಾಗುತ್ತದೆ. ಹೀಗೆ ತನ್ನಮತವನ್ನು ಉಪಪಾದನೆಮಾಡಿ ನ್ಯಾಯಮತವನ್ನು ದೂಷಿಸುತ್ತಾನೆ. 'ನನು—' ಇತಿ. ಕೃತಿಸಾಧ್ಯತಾಜ್ಞಾನವೊಂದೇ ಚಿಕೀರ್ಷಾಮೂಲಕಕಾರಣವಲ್ಲದೆ ಇಷ್ಟಸಾಧನತಾಜ್ಞಾನವು ಪ್ರವೃತಿಯಲ್ಲಿ ಕಾರಣವಲ್ಲ. ಅದಕ್ಕೆ ಯುಕ್ತಿತೋರಿಸುತ್ತಾನೆ. 'ಕೃತ್ಯಸಾಧ್ಯೇ—' ಇತಿ. ಇಷ್ಟಸಾಧನತಾಜ್ಞಾನವು ಪ್ರವೃತ್ತಿಗೆ ಕಾರಣವೆನ್ನುವುದಾದರೆ ಪುರುಷಪ್ರಯತ್ನದಿಂದ ಅಸಾಧ್ಯವಾದ ಚಂದ್ರ

ಮಂಡಲಾನಯನದಲ್ಲಿಯೂ ಪ್ರವೃತ್ತಿಬರಬೇಕಾಗುತ್ತದೆ. ಅದು ಯಾರಿಗೂ ಬರುವು ದಿಲ್ಲ. ಇದಕ್ಕೆ ನೈಯಾಯಿಕ ಸಮಾಧಾನವನ್ನು ತೋರಿಸುತ್ತಾನೆ. 'ನನು—' ಇತಿ. ಕೃತ್ಯಸಾಧ್ಯತಾಜ್ಞಾನವು ('ಇದಂಚಂದ್ರಮಂಡಲಾನಯನಂ ಮತ್ ಕೃತ್ಯಸಾಧ್ಯಂ' ಎಂಬ ಜ್ಞಾನ.) ಪ್ರತಿಬಂಧಕವಾಗಿರುವುದರಿಂದ ಚಂದ್ರಮಂಡಲಾನಯನದಲ್ಲಿ ಪ್ರವೃತ್ತಿ ಬರುವು ದಿಲ್ಲವೆಂದರೆ ಪ್ರಾಭಾಕರನು ಅದನ್ನು ದೂಷಿಸುತ್ತಾನೆ. 'ನ—' ಇತಿ. ಹಾಗೆ ಹೇಳುವುದಾದರೆ ಪ್ರತಿಬಂಧಕಾಭಾವಜ್ಞಾನವು ಕಾರಣವೆನ್ನಬೇಕು. ಅದಕ್ಕಿಂತ ಕೇವಲ ಕೃತಿಸಾಧ್ಯತ್ವಪ್ರಕಾರಕಜ್ಞಾನಕ್ಕೆ ಕಾರಣತ್ವ ಹೇಳುವುದು ಲಾಘವವೆಂದರ್ಥ. (ಪ್ರತಿ ಬಂಧಕಾಭಾವವಿಶಿಷ್ಟ ಕೃತಿಸಾಧ್ಯತ್ವಪ್ರಕಾರಕಜ್ಞಾನಕಾರಣವೆಂದರೆ ಗೌರವವೆಂದು ತಾತ್ಪರ್ಯ) ಇಲ್ಲಿ ನೈಯಾಯಿಕನಮತಸಮಂಜಸವಲ್ಲವೆಂದು ಖಂಡಿಸುತ್ತಾನೆ. 'ನಚ—' ಇತಿ. ಕೃತಿಸಾಧ್ಯತ್ವಪ್ರಕಾರಕಜ್ಞಾನ, ಇಷ್ಟಸಾಧನತಾಜ್ಞಾನ ಹೀಗೆ ಎರಡಕ್ಕೂ ಕಾರಣತ್ವಕಲ್ಪಿಸಿದರೆ ಮಹಾಗೌರವವೆಂದು ಪ್ರಾಭಾಕರನ ತಾತ್ಪರ್ಯ. ಪುನಃ ನೈಯಾಯಿಕನು ಶಂಕಿಸುತ್ತಾನೆ. 'ನನು—' ಇತಿ. ಪ್ರಾಭಾಕರನ ಸಿದ್ಧಾಂತ ದಲ್ಲಿ ಕೃತಿಸಾಧ್ಯತ್ವಪ್ರಕಾರಕಜ್ಞಾನವೊಂದೇ ಕಾರಣವಾದುದರಿಂದ ಮಧುವಿಷಮಿಶ್ರಿತ ವಾದ ಅನ್ನತಿನ್ನುವುದರಲ್ಲಿಯೂ, ಚೈತ್ಯವಂದನದಲ್ಲಿ (ಬುದ್ಧಪ್ರತಿಮಾದಿನಂದನೆ) ಯೂ ಪ್ರವೃತ್ತಿಬರಲಿ. ಕಾರಣತೋರಿಸುತ್ತಾನೆ. 'ಕಾರ್ಯತಾ— ಇತಿ. 'ವಿಷಸಂಭಿನ್ನ ಮಧುರಾನ್ನಭೋಜನಂ ಮತ್ಕೃತಿಸಾಧ್ಯಂ' ಎಂದು ಕೃತಿಸಾಧ್ಯತಾಜ್ಞಾನವಿರುವುದರಿಂದ ಪ್ರವೃತ್ತಿಬರಲು ಯಾವತೊಂದರೆಯೂ ಇಲ್ಲ. ಎಂದು ಆಕ್ಷೇಪಿಸಿದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ನ—' ಇತಿ. ಕಾರ್ಯತಾವಿಶೇಷಜ್ಞಾನವೇ ಪ್ರವರ್ತಕ ವಾಗುವುದಲ್ಲದೆ ಸಾಮಾನ್ಯಕಾರ್ಯತಾಜ್ಞಾನವಲ್ಲ. ಅದನ್ನೇ ಸ್ವವಿಶೇಷಣ—' ಇತ್ಯಾದಿ ಯಿಂದ ವಿವರಿಸುತ್ತಾನೆ. ಸ್ವಂ—ಕಾರ್ಯದಲ್ಲಿ ಪ್ರವರ್ತಿಸುವ ಪುರುಷ. (ಪ್ರವರ್ತ ಮಾನಃ) ತದ್ವಿಶೇಷಣಂ—ಕಾಮ್ಯವಾದ ಪುತ್ರೇಷ್ಟಿಯಾಗದಲ್ಲಿ ಕಾಮನಾ, ನಿತ್ಯವಾದ ಸಂಧ್ಯಾವಂದನಾದಿಗಳಲ್ಲಿ ತಾತ್ಕಾಲಿಕ ಶೌಚಾದಿ. ತದ್ವತ್ತಾಯಾಃ (ಸ್ವವಿಶೇಷಣ ವತ್ತಾಯಾಃ ಪ್ರತಿಸಂಧಾನಂ ಎಂದು ವಿಗ್ರಹ) ಪ್ರತಿಸಂಧಾನಂ—ಈ ವಿಶೇಷಣವತ್ತಾ ಜ್ಞಾನವು ಯಾವಾಗ ಪುರುಷನಲ್ಲಿ ಬರುತ್ತದೆಯೋ ಅದರಿಂದ ಉಂಟಾದ ಕಾರ್ಯತಾ ಜ್ಞಾನವು ಪ್ರವೃತ್ತಿಯನ್ನು ಕುರಿತು ಕಾರಣವೆಂದರೆ ಯಾವದೋಷವೂ ಬರುವುದಿಲ್ಲ. ಈ ವಿಶೇಷಣವತ್ತಾಜ್ಞಾನವೂ ಲಿಂಗರೂಪದಿಂದ ಕಾರ್ಯತಾಜ್ಞಾನಕ್ಕೆ ಕಾರಣವಾಗುತ್ತದೆ. 'ಪಾಕಃ—ಮತ್ ಕೃತಿಸಾಧ್ಯಃ—ಮತ್ ಕೃತಿಂವಿನಾ ಅಸತ್ವೇ ಸತಿ ಮದಿಷ್ಟಸಾಧನ ತ್ವಾತ್' ಈ ಅನುಮಾನದಿಂದ ಉಂಟಾದ ಕಾರ್ಯತಾಜ್ಞಾನವು ಕಾಮ್ಯಸ್ಥಲದಲ್ಲಿ ಪ್ರವೃತ್ತಿ ಯನ್ನು ಕುರಿತು ಕಾರಣವಾಗುತ್ತದೆ. ಹೀಗೆಯೇ 'ಅಹಮಿದಾನೀಂತನಕೃತಿಸಾಧ್ಯ ಸಂಧ್ಯಾವಂದನಕಃ—ಬ್ರಾಹ್ಮಣತ್ವೇ ಸತಿ ವಿಹಿತಸಂಧ್ಯಾಕಾಲಿಕಶೌಚಾದಿಮತ್ತ್ವಾತ್' ಎಂಬ ಅನುಮಾನದಿಂದ ಉಂಟಾದ ಕಾರ್ಯತಾಜ್ಞಾನವು ನಿತ್ಯಕರ್ಮದಲ್ಲಿ ಪ್ರವೃತ್ತಿಯನ್ನು ಕುರಿತು ಕಾರಣವಾಗುತ್ತದೆ.

ಈ ಕಾರ್ಯತಾವಿಶೇಷಜ್ಞಾನವನ್ನು ವಿವರಿಸುತ್ತಾನೆ. 'ಕಾಮ್ಯೇ—' ಇತಿ. ಪಾಕಯಾಗಾದಿ ಕಾಮ್ಯಕರ್ಮಗಳಲ್ಲಿ ಕಾಮನಾ ಎಂಬುದು (ಸ್ವ) ಪ್ರವರ್ತಿಸುವ ಪುರುಷನಿಗೆ ವಿಶೇಷಣವಾಗುತ್ತದೆ. ಸ್ವವಿಶೇಷಣವತ್ತಾಪ್ರತಿಸಂಧಾನದಲ್ಲಿ 'ಬಲವದ ನಿಷ್ಟಾನನುಬಂಧಿತ್ವವಿಷಯಕತ್ವರೂಪವಿಶೇಷಣವನ್ನು ಕೊಡಬೇಕೆಂದು ತಿಳಿಸುತ್ತಾನೆ. 'ತತಶ್ಚ—' ಇತಿ. ಹೀಗೆ ವಿಶೇಷಣಹೇಳದಿದ್ದರೆ ಕೇವಲ ಕಾಮ್ಯಸಾಧನತಾಜ್ಞಾನವು ಕಾರಣವೆಂದರೆ ಆಗ ಮಧುವಿಷಸಂಪೃಕ್ತಾನ್ನಭೋಜನದಲ್ಲಿಯೂ ಪ್ರವೃತ್ತಿಬರಬೇಕಾಗು ತ್ತದೆ. ಬಲವದನಿಷ್ಟಾನನುಬಂಧಿಕಾಮ್ಯಸಾಧನತಾಜ್ಞಾನ ಕಾರ್ಯತಾಜ್ಞಾನಕ್ಕೆ ಕಾರಣ. ಕಾರ್ಯತಾಜ್ಞಾನ (ಕೃತಿಸಾಧ್ಯತ್ವಪ್ರಕಾರಕಜ್ಞಾನ.) ವು ಪ್ರವೃತ್ತಿಗೆ ಕಾರಣ. ವ್ಯತಿರೇಕ ದಿಂದ ಇದನ್ನು ದೃಢೀಕರಿಸುತ್ತಾನೆ. 'ತೃಪ್ತಶ್ಚ— ಇತಿ. ತೃಪ್ತಿಹೊಂದಿದವನು ಪುನಃ ಭೋಜನದಲ್ಲಿ ಪ್ರವೃತ್ತಿಹೊಂದುವುದಿಲ್ಲ. ಏಕೆಂದರೆ ಅತೀತಭೋಜನಕಾಮನಾದಿಂದ ಕೂಡಿದ ಲಿಂಗಜ್ಞಾನದಿಂದುಂಟಾದ ಕಾರ್ಯತಾಜ್ಞಾನವಿದ್ದರೂ ಆಗ ಕಾಮನಾ ಪುರುಷ ವಿಶೇಷಣವಾಗಿರುವುದಿಲ್ಲ. 'ಸ್ವವಿಶೇಷಣ—' ಎಂಬಲ್ಲಿ 'ತದಾನೀಂತನ' ಎಂದು ವಿಶೇಷಣಕೊಡಬೇಕೆಂದು ತಾತ್ಪರ್ಯ. ನಿತ್ಯಸ್ಥಳದಲ್ಲಿಯೂ ವಿಶೇಷಣತೋರಿಸುತ್ತಾನೆ. 'ನಿತ್ಯೇಚ -' ಇತಿ. ಶೌಚಾದಿಜ್ಞಾನಾಧೀನಕಾರ್ಯತಾಜ್ಞಾನವು ನಿತ್ಯಕರ್ಮಪ್ರವೃತ್ತಿ ಯಲ್ಲಿ ಕಾರಣವೆಂದರ್ಥ. ಪುನಃ ನೈಯಾಯಿಕನು ಶಂಕಿಸುತ್ತಾನೆ. 'ನನು—' ಇತಿ. ತದಪೇಕ್ಷಯಾ— ಬಲವದನಿಷ್ಟಾನನುಬಂಧಿತ್ವವಿಶಿಷ್ಟೇಷ್ಟಸಾಧನತಾಜ್ಞಾನಜನ್ಯಕೃತಿ ಸಾಧ್ಯತಾಜ್ಞಾನವು ಕಾರಣವೆಂದು ಕಲ್ಪಿಸುವುದಕ್ಕಿಂತ ಬಲವದನಿಷ್ಟಾನನುಬಂಧೀಷ್ಟ ಸಾಧನತಾವಿಷಯಕಕಾರ್ಯತಾಜ್ಞಾನವೇ ಕಾರಣವೆಂದು ಕಲ್ಪಿಸಿದರೆ ಲಾಘವವಾಗುತ್ತದೆ. ಬಲವದನಿಷ್ಟಂ—ದ್ವೇಷವಿಷಯವಾದದ್ದು. ತದನನುಬಂಧಿ—ತತ್ಸಂಬಂಧವಿಲ್ಲದಿರುವ ಯಾವ, ಇಷ್ಟಸಾಧನಮ್—ಪಾಕಾದಿ ಇಷ್ಟಕ್ಕೆ ಸಾಧನವಾದ ಇಂಧನಾದಿಗಳಿವೆಯೋ (ಕಟ್ಟಿಗೆ ಮುಂತಾದವುಗಳು), ಸ್ವರ್ಗಾದೀಷ್ಟಕ್ಕೆ ಸಾಧನವಾದ ಯಾಗಾದಿಗಳಿವೆಯೋ, ತದ್ವಿಷಯಕಂ ಯತ್ಕಾರ್ಯತಾಜ್ಞಾನಂ ಕೃತಿಸಾಧ್ಯತಾಜ್ಞಾನವೆಂದರ್ಥ. ಇದೇ ಪ್ರವೃತ್ತಿಗೆ ಕಾರಣವಾಗಲಿ ಎಂದು ತಾರ್ಕಿಕನ ಅಭಿಪ್ರಾಯ. ಬಲವದನಿಷ್ಟಾನನು ಬಂಧಿತ್ವವೆಂಬುದಕ್ಕೆ ತಾನೇ ಅರ್ಥವಿವರಿಸುತ್ತಾನೆ. 'ಇಷ್ಟೋತ್ಪ—' ಇತಿ. ಇಷ್ಟಂ—ಪಾಕಾದಿಗಳು. ತದುತ್ಪತ್ತಿಃ—ಪಾಕಾದಿಸಿದ್ಧಿ. ತಸ್ಯಾ ನಾಂತರೀ ಯಕಂ—ಅವ್ಯಭಿಚಾರಿಯಾದ, ಅವಶ್ಯವುಂಟಾಗುವ ಯದ್ದುಃಖಂ—ಯಾವ ಆಯಾಸ ಧನವ್ಯಯಾದಿಗಳಿವೆಯೋ, ತದಧಿಕಂ ಯದ್‌ದುಃಖಂ—ಅದಕ್ಕಿಂತ ಅಧಿಕವಾದ ಯಾವ ಪ್ರಾಣಪೀಡಾದಿ ದುಃಖವಿದೆಯೋ ಅದು. ಅದಕ್ಕೆ ಜನಕವಾಗಿರಬಾರದು. ಪಾಕಾದಿ ಗಳನ್ನು ಮಾಡುವಾಗ ಸಹ್ಯದುಃಖಗಳಿರುತ್ತವೆ. ಅವು ಬಲವದನಿಷ್ಟಗಳಾಗುವುದಿಲ್ಲ. ಪರದಾರಾದಿಗಳಲ್ಲಿ ಉತ್ಕಟರಾಗದಿಂದ ಪ್ರವೃತ್ತಿ ಲೋಕದಲ್ಲಿ ದೃಷ್ಟವಾದುದರಿಂದ ಈ ಲಕ್ಷಣ ಸಮಂಜಸವಾಗುವುದಿಲ್ಲ ಆದುದರಿಂದ 'ಅಥವಾ' ಎಂದು ಪಕ್ಷಾಂತರ ಹೇಳಿದೆ. ಬಲವದ್‌ದ್ವೇಷಕ್ಕೆ ವಿಷಯವಾದ ದುಃಖವನ್ನು ಹುಟ್ಟಿಸದಿರುವುದು ಎಂದರ್ಥ.

ಇದರಿಂದ ರಾಗಾಂಧನಪ್ರವೃತ್ತಿಕೊಡುತ್ತದೆ. ಇದನ್ನು ಪ್ರಾಭಾಕರನು ಖಂಡಿಸುತ್ತಾನೆ. 'ನ—' ಇತಿ. ||

ಇಷ್ಟಸಾಧನತ್ವಕೃತಿಸಾಧ್ಯತ್ವಯೋರ್ಯುಗಪಜ್ಜ್ಞಾತುಮಶಕ್ಯತ್ವಾತ್ಸಾಧ್ಯತ್ವಸಾಧನತ್ವಯೋರ್ವಿರೋಧಾತ್ । ಅಸಿದ್ಧಸ್ಯ ಹಿ ಸಾಧ್ಯತ್ವಂ ಸಿದ್ಧಸ್ಯ ಚ ಸಾಧನತ್ವಮ್ । ನ ಚೈಕಮೇಕೇನೈಕದಾ ಸಿದ್ಧಮಸಿದ್ಧಂ ಚೇತಿ ಜ್ಞಾಯತೇ, ತಸ್ಮಾತ್ಕಾಲಭೇದಾದುಭಯಂ ಜ್ಞಾಯತ ಇತಿ । ನೈವಮ್ । ಲಾಘವೇನ ಬಲವದನಿಷ್ಟಾನನುಬಂಧೀಷ್ಟಸಾಧನತ್ವೇ ಸತಿ ಕೃತಿಸಾಧ್ಯತಾಜ್ಞಾನಸ್ಯ ಹೇತುತ್ವಾತ್ । ನ ಚ ಸಾಧ್ಯತ್ವಸಾಧನತ್ವಯೋರ್ವಿರೋಧಃ, ಯದಾ ಕದಾಚಿತ್ಸಾಧ್ಯತ್ವಸಾಧನತ್ವಯೋರವಿರೋಧಾದೇಕದಾ ಸಾಧ್ಯತ್ವಸಾಧನತ್ವಯೋಶ್ಚ ಜ್ಞಾನಾತ್ ||

ಏಕಕಾಲಾವಚ್ಛೇದದಿಂದ ಇಷ್ಟಸಾಧನತ್ವ, ಕೃತಿಸಾಧ್ಯತ್ವಧರ್ಮಗಳನ್ನು ತಿಳಿಯುವುದು ಅಸಾಧ್ಯವಾದುದರಿಂದ ತಾರ್ಕಿಕರು ಹೇಳಿದ ಕಾರಣವು ಸಮಂಜಸವಾಗುವುದಿಲ್ಲ. ಅದಕ್ಕೆ ಯುಕ್ತಿತೋರಿಸುತ್ತಾನೆ. 'ಸಾಧ್ಯತ್ವ—' ಇತಿ. ಕ್ಷಣವಿಶೇಷಘಟಿತವಾದ ಸಾಧನತ್ವ, ಸಾಧ್ಯತ್ವಧರ್ಮಗಳು ಪರಸ್ಪರವಿರುದ್ಧವಾಗಿರುತ್ತವೆ. ಅಸಿದ್ಧವಾದದ್ದು ಅಂದರೆ ಪ್ರಥಮಕ್ಷಣವಲ್ಲಿರುವ ಪಾಕಾದಿ ಸಾಧ್ಯಕ್ಕೆ ಸಾಧ್ಯತ್ವವಿರುವುದು. ಸಿದ್ಧವಾದ ಅಂದರೆ ಪ್ರಥಮಕ್ಷಣಾನ್ಯಕ್ಷಣವೃತ್ತಿತ್ವವಿಶಿಷ್ಟವಾದುದಕ್ಕೆ ಸಾಧನತ್ವ ಸಂಭವಿಸುತ್ತದೆ. ಸ್ವರೂಪಸಂಪನ್ನವಾದುದು ಸಾಧನ. (ತಂಡುಲಾದಿ) ಸ್ವರೂಪಸಂಪನ್ನವಾಗದಿರುವುದು ಸಾಧ್ಯ. [ಅನ್ನಾದಿ] ಇವುಗಳಿಗೆ ಏಕಕಾಲತ್ವ ಕೂಡುವುದಿಲ್ಲ. ಕಾಲಭೇದದಿಂದ ಎರಡನ್ನು ತಿಳಿಯಬೇಕಾದುದರಿಂದ ಇವೆರಡಕ್ಕೆ ಕಾರಣತ್ವ ಹೇಳಿರುವುದು ಸರಿಯಲ್ಲವೆಂದು ಮೀಮಾಂಸಕನ ಅಭಿಪ್ರಾಯ. ಸಹಾನವಸ್ಥಾನವಿರುವುದರಿಂದ ಕಾಲಭೇದದಿಂದ ತಿಳಿಯಬೇಕಾದುದರಿಂದ ಉಪಸ್ಥಿತಿಕೃತಗೌರವ ಬರುತ್ತದೆ.

ನೈಯಾಯಿಕನು ಪ್ರಾಭಾಕರನಮತವನ್ನು ಖಂಡಿಸುತ್ತಾನೆ. 'ನೈವಂ—' ಇತಿ. ಲಾಘವದಿಂದ ಬಲವದನಿಷ್ಟಾನನುಬಂಧೀಷ್ಟಸಾಧನತಾಜ್ಞಾನಸಹಕೃತವಾದ ಕೃತಿಸಾಧ್ಯತಾಜ್ಞಾನವೇ ಕಾರಣವೆಂದು ಹೇಳಬೇಕು. ಏಕಕಾಲದಲ್ಲಿ ವಿರುದ್ಧವಾದುದರಿಂದ ಎರಡು ಜ್ಞಾನಗಳು ಬರುವುದಿಲ್ಲವೆಂಬ ಆಕ್ಷೇಪಕ್ಕೆ ಸಮಾಧಾನತೋರಿಸುತ್ತಾನೆ. 'ಯದಾ—' ಇತಿ. ಯತ್ಕಿಂಚಿತ್ಕಾಲೀನಸಾಧ್ಯಕ್ಕೂ, ಯತ್ಕಿಂಚಿತ್ಕಾಲೀನಸಾಧನಕ್ಕೂ ಯಾವವಿರೋಧವೂ ಇಲ್ಲವೆಂದು ತಾತ್ಪರ್ಯ. ಮೀಮಾಂಸಕಮತದಲ್ಲಿ ವಿಶೇಷಣ ಸಹಿತವಾಗಿ ಹೇಳಬೇಕು. ತಾರ್ಕಿಕಮತದಲ್ಲಿ ನಿರ್ವಿಶೇಷಿತವಾದ ಕೃತಿಸಾಧ್ಯತ್ವ, ಇಷ್ಟ ಸಾಧನತ್ವಜ್ಞಾನಕ್ಕೆ ಕಾರಣತ್ವ ಹೇಳಿರುವುದರಿಂದ ಲಾಘವವೆಂದು ಅಭಿಪ್ರಾಯ.

ನವ್ಯಾಸ್ತು ಮಮೇದಂ ಕೃತಿಸಾಧ್ಯಮಿತಿ ಜ್ಞಾನಂ ನ ಪ್ರವರ್ತಕಮನಾಗತೇ ತಸ್ಯಜ್ಞಾತುಮಶಕ್ಯತ್ವಾತ್, ಕಿಂತು ಯಾದೃಶಸ್ಯ ಪುಂಸಃ ಕೃತಿಸಾಧ್ಯಂ ಯದ್ದೃಷ್ಟಂ ತಾದೃ

ಶತ್ವಂ ಸ್ವಸ್ಯ ಪ್ರತಿಸಂಧಾಯ ತತ್ರ ಪ್ರವರ್ತತೇ । ತೇನೌದನಕಾಮಸ್ಯ ತತ್ಸಾಧನತಾಜ್ಞಾನವತಸ್ತದುಪಕರಣವತಃ ಪಾಕಃ ಕೃತಿಸಾಧ್ಯಸ್ತಾದೃಶಶ್ಚಾಹಮಿತಿ ಪ್ರತಿಸಂಧಾಯ ಪಾಕೇ ಪ್ರವರ್ತತ ಇತ್ಯಾಹುಃ, ತನ್ನ ಸ್ವಕಲ್ಪಿತಲಿಪ್ಯಾದಿಪ್ರವೃತ್ತೌ ಯೌವನೇ ಕಾಮೋದ್ಭೇದಾದಿನಾ ಸಂಭೋಗಾದೌ ಚ ತದಭಾವಾತ್ ॥

ಪ್ರಾಭಾಕರನನುತವನ್ನೇ ಅನುಸರಿಸಿದ ನವೀನರಮತವನ್ನು ತೋರಿಸುತ್ತಾನೆ. 'ನವ್ಯಾಸ್ತು—' ಇತಿ. 'ಇದಂ ಮತ್ಕೃತಿಸಾಧ್ಯಂ' ಎಂಬ ಕೃತಿಸಾಧ್ಯತಾಜ್ಞಾನವು ಪ್ರವೃತ್ತಿಗೆ ಕಾರಣವಾಗುವುದಿಲ್ಲ. ಅದಕ್ಕೆ ಕಾರಣತೋರಿಸುತ್ತಾನೆ. 'ಅನಾಗತೇ—' ಇತಿ. ಮುಂದೆ ಆಗುವ ಪಾಕಜ್ಞಾನವು ಈಗ ಉಂಟಾಗದಿರುವುದರಿಂದ 'ಭವಿಷ್ಯತ್ ಪಾಕಃ ಮತ್ಕೃತಿಸಾಧ್ಯಃ' ಎಂದ ಕಾರ್ಯತಾಜ್ಞಾನವು ಬರುವುದು ಹೇಗೆ? ಆದುದರಿಂದ ಪ್ರವೃತ್ತಿಕಾರಣವನ್ನು ತೋರಿಸುತ್ತಾನೆ. 'ಕಿಂತು—' ಇತಿ. ಇನ್ನೊಬ್ಬರುಮಾಡಿದುದನ್ನು ನೋಡಿ ಅದು ತನಗೆ ಸಾಧ್ಯವೆಂದು ಊಹಿಸಿ ಪ್ರವರ್ತಿಸುತ್ತಾನೆಂದರ್ಥ. ಓದನಕಾಮನಾವಾನ್—ಓದನಸಾಧನತಾಜ್ಞಾನವಾನ್, ತಥಾ ಓದನೋಪಕರಣವಾನಹಮ್' ಎಂದು ಉಂಟಾಗುವಜ್ಞಾನವೇ ಪ್ರವೃತ್ತಿಜನಕವಾಗುತ್ತದೆ. ಅದನ್ನು ಖಂಡಿಸುತ್ತಾನೆ. 'ತನ್ನ—' ಇತಿ. ತಾನೇಕಲ್ಪಿಸಿಕೊಂಡಲಿಪಿಯಲ್ಲಿ ಆರೀತಿಪ್ರತಿಸಂಧಾನವಿಲ್ಲದಿದ್ದರೂ ಪ್ರವೃತ್ತಿಬರುತ್ತದೆ. ಯೌವನದಲ್ಲಿ ಉತ್ಕಟರಾಗದಿಂದ ಪ್ರತಿಸಂಧಾನವಿಲ್ಲವಾದರೂ ಸಂಭೋಗದಲ್ಲಿ ಪ್ರವೃತ್ತಿಯುಂಟಾಗುವುದರಿಂದ ಪೂರ್ವಪಕ್ಷಿಯಕಾರಣಕ್ಕೆ ವ್ಯಭಿಚಾರಬರುತ್ತದೆಂದು ತಾತ್ಪರ್ಯ.

ಇದಂ ತು ಬೋಧ್ಯಮ್ । ಇದಾನೀಂತನೇಷ್ಟಸಾಧನತ್ವಾದಿಜ್ಞಾನಂ ಪ್ರವರ್ತಕಂ ತೇನ ಭಾವಿಯೌವರಾಜ್ಯೇ ಬಾಲಸ್ಯ ನ ಪ್ರವೃತ್ತಿಸ್ತದಾನೀಂ ಕೃತಿಸಾಧ್ಯತ್ವಾಽಜ್ಞಾನಾತ್ । ಏವಂ ತೃಪ್ತಸ್ಯ ಭೋಜನೇ ನ ಪ್ರವರ್ತತೇ, ತದಾನೀ ಮಿಷ್ಟಸಾಧನತ್ವಾಜ್ಞಾನಾತ್ । ಪ್ರವರ್ತತೇ ಚ ರೋಷದೂಷಿತಚಿತ್ತೋ ವಿಷಾದಿಭಕ್ಷಣೇ ತದಾನೀಂ ಬಲವದನಿಷ್ಟಾನುಬಂಧಿತ್ವಾಜ್ಞಾನಾತ್ । ನಚಾಸ್ತಿಕಸ್ಯಾಗಮ್ಯಾಗಮನಶತ್ರುವಧಾದಿಪ್ರವೃತ್ತೌ ಕಥಂ ಬಲವದನಿಷ್ಟಾನನುಬಂಧಿತ್ವಬುದ್ಧಿರ್ನರಕಸಾಧನತ್ವಜ್ಞಾನಾದಿತಿ ವಾಚ್ಯಮ್ । ಉತ್ಕಟರಾಗಾದಿನಾ ನರಕಸಾಧನತಾಧೀತಿರೋಧಾನಾತ್ । ವೃಷ್ಟ್ಯಾದೌ ತು ಕೃತಿಸಾಧ್ಯತಾಜ್ಞಾನಾಭಾವಾನ್ನ ಚಿಕೀರ್ಷಾಪ್ರವೃತ್ತೀ, ಕಿಂತ್ವಿಷ್ಟಸಾಧನತಾಜ್ಞಾನಾದಿಚ್ಛಾಮಾತ್ರಮ್ । ಕೃತಿಶ್ಚ ಪ್ರವೃತ್ತಿರೂಪಾ ಬೋಧ್ಯಾ । ತೇನ ಜೀವನಯೋನಿಯತ್ನಸಾಧ್ಯೇ ಪ್ರಾಣಪಂಚಕಸಂಚಾರೇ ನ ಪ್ರವೃತ್ತಿಃ । ಇತ್ಥಂ ಚ ಪ್ರವರ್ತಕತ್ವಾನುರೋಧಾದ್ವಿಧೇರಪೀಷ್ಟಸಾಧನತ್ವಾದಿಕಮೇವಾರ್ಥಃ ॥

ಇಷ್ಟಸಾಧನತಾಜ್ಞಾನವು ಪ್ರವೃತ್ತಿಯಲ್ಲಿ ಕಾರಣವೆಂದು ಅಂಗೀಕರಿಸಿದರೆ ಮುಂದೆ

ಆಗತಕ್ಕ ಯೌವರಾಜ್ಯದಲ್ಲಿ ಬಾಲಕನಿಗೆ ಪ್ರವೃತ್ತಿಯುಂಟಾಗಲಿ ಎಂದು ಶಂಕೆ ಬಂದರೆ ಅದಕ್ಕೆ ಸಮಾಧಾನ ಹೇಳುತ್ತಾನೆ. 'ಇದಂತು—' ಇತಿ. ಇಷ್ಟಸಾಧನತಾದಿಜ್ಞಾನ ದಲ್ಲಿ 'ಇದಾನೀಂತನ' ಎಂಬ ವಿಶೇಷಣಸೇರಿಸುವುದರಿಂದ ದೋಷವಿಲ್ಲ. ವರ್ತಮಾನ ಕಾಲವಿಶಿಷ್ಟೇಷ್ಟಸಾಧನತಾಜ್ಞಾನವೇ ಪ್ರವೃತ್ತಿಗೆ ಕಾರಣವೆಂದುದರಿಂದ ಬಾಲಕನಿಗೆ ಈಗ ಆಜ್ಞಾನವಿಲ್ಲದಿರುವುದರಿಂದ ಯೌವರಾಜ್ಯಾಭಿಷೇಕದಲ್ಲಿ ಪ್ರವೃತ್ತಿ ಬರುವುದಿಲ್ಲ. ಪ್ರವೃತ್ತಿಗೆ ಕಾರಣಗಳಾದ ಮೂರುಜ್ಞಾನಗಳಲ್ಲಿಯೂ ವರ್ತಮಾನಕಾಲವಿಶಿಷ್ಟತ್ವ (ಇದಾನೀಂತನ) ವಿಶೇಷಣ ಕೊಡಬೇಕು. ಅದರ ನಿಷ್ಕರ್ಷೆ ಹೀಗೆ ತಿಳಿಯಬೇಕು. 'ಇದಾನೀಂತನ (ವರ್ತಮಾನಕಾಲವಿಶಿಷ್ಟವೆಂದರೂ ಅದೇ ಅರ್ಥವಾಗುತ್ತದೆ.) (ಇಚ್ಛಾವಿಷಯ) ಇಷ್ಟಸಾಧನತ್ವ, ಇದಾನೀಂತನಕೃತಿಸಾಧ್ಯತ್ವ, ಇದಾನೀಂತನಬಲವ ದ್ದ್ವೇಷವಿಷಯಾನನುಬಂಧಿತ್ವ, ಏತತ್ರಿತಯವಿಷಯಕಜ್ಞಾನಂ ಪ್ರವೃತ್ತಿಕಾರಣಂ' ಇಷ್ಟ ಸಾಧನತಾಜ್ಞಾನದಲ್ಲಿ ಆ ವಿಶೇಷಣಕ್ಕೆ ಪ್ರಯೋಜನವನ್ನು ತೋರಿಸುತ್ತಾನೆ. 'ತೃಪ್ತಸ್ಯ—' ಇತಿ. ತಾತ್ಕಾಲಿಕೇಷ್ಟಸಾಧನತಾಜ್ಞಾನವು ತೃಪ್ತನಾದವನಿಗೆ ಇಲ್ಲದಿರು ವುದರಿಂದ ಪುನಃ ಭೋಜನದಲ್ಲಿ ಪ್ರವೃತ್ತಿ ಬರುವುದಿಲ್ಲ. ಕೃತಿಸಾಧ್ಯತಾಜ್ಞಾನದಲ್ಲಿ ಇದಾನೀಂತನವಿಶೇಷಣದಿಂದ ಭಾವಿಯೌವರಾಜ್ಯದಲ್ಲಿ ಪ್ರವೃತ್ತಿಬರುವುದಿಲ್ಲ. ಬಲವದ ನಿಷ್ಟಾನನುಬಂಧಿತ್ವಜ್ಞಾನದಲ್ಲಿ ಆ ವಿಶೇಷಣಕೊಟ್ಟುದುದಕ್ಕೆ ಪ್ರಯೋಜನ ತೋರಿಸು ತ್ತಾನೆ. 'ಪ್ರವರ್ತತೇಚ—' ಇತಿ. ರೋಷದೂಷಿತಚಿತ್ತಃ—ಸಿಟ್ಟಿನಿಂದಾಗಲೀ, ಮದ್ಯಪಾನದಿಂದಾಗಲೀ ಕೆಟ್ಟುಹೋದ ಬುದ್ಧಿಯುಳ್ಳವನು. ಅವನಿಗೆ ತತ್ಕಾಲದಲ್ಲಿ (ವಿಷತಿನ್ನುವಪೂರ್ವಕ್ಷಣದಲ್ಲಿ) ವಿಷಭಕ್ಷಣವು (ಆದಿಪದದಿಂದ ಮರಣಸಾಧನಗಳಾದ ಬೇರೆ ಮಾರ್ಗಗಳು) ಬಲವದನಿಷ್ಟಾನುಬಂಧಿ ಎಂಬ ಜ್ಞಾನವಿಲ್ಲದಿರುವುದರಿಂದ ವಿಷಭಕ್ಷ ಣಾದಿಗಳಲ್ಲಿ ಪ್ರವರ್ತಿಸುತ್ತಾನೆ. ಆದುದರಿಂದ ಎಲ್ಲಿಯೂ ಕಾರ್ಯಕಾರಣಭಾವಕ್ಕೆ ಚ್ಯುತಿ ಬರುವುದಿಲ್ಲ. ಪುನಃ ಶಂಕಿಸುತ್ತಾನೆ. 'ನಚ—' ಇತಿ. ಪರಲೋಕವಿದೆಯೆಂದು ತಿಳಿಯುವವನೇ ಆಸ್ತಿಕ. ಇವನು ಕೆಲವು ವೇಳೆ ಶತ್ರುವಧೆ, ಅಥವಾ ಅಗಮ್ಯಗಳಾದ (ಸಂಬಂಧಮಾಡಲು ಅಯೋಗ್ಯಳು.)ವಳ ಸಂಭೋಗಾದಿಗಳಲ್ಲಿ ಪ್ರವೃತ್ತಿಹೊಂದುತ್ತಾನೆ. ಈಗ ಈ ವಿಶೇಷಣಕೊಟ್ಟದ್ದರಿಂದ ಪ್ರವೃತ್ತಿಬಾರದೇ ಹೋಗಬೇಕು; ಏಕೆಂದರೆ ಶತ್ರುವಧೆ ಅಥವಾ ವ್ಯಭಿಚಾರಿಣಿಯ ಸಂಭೋಗದಲ್ಲಿ ನರಕರೂಪಬಲವದನಿಷ್ಟಸಾಧನತ್ವ ಜ್ಞಾನವಿರುವುದರಿಂದ ಅವನಿಗೆ ಎಂದೂ ಪ್ರವೃತ್ತಿಗೆ ಅವಕಾಶವೇ ಇರುವುದಿಲ್ಲ. ಆದರೆ ಪ್ರವೃತ್ತಿ ಲೋಕದಲ್ಲಿ ಕಂಡಿದೆ. ಆದುದರಿಂದ ಕಾರ್ಯಕಾರಣಗಳಿಗೆ ವ್ಯಭಿಚಾರಬರುತ್ತದೆ ಎಂದು ಶಂಕಿಸಿದರೆ ಅದಕ್ಕೆ ಸಮಾಧಾನತೋರಿಸುತ್ತಾನೆ. 'ಉತ್ಕಟ—' ಇತಿ. ಪುನಃ ಪುನಃ ಉಂಟಾಗುವ ವಿಷಯಾನುರಂಜನೇಚ್ಛೆಗೆ ರಾಗವೆಂದು ಹೆಸರು. ಅಗಮ್ಯಳ ಸಂಭೋಗದಲ್ಲಿ ಉತ್ಕಟವಾದರಾಗವಿರುವುದರಿಂದ ಬಲವದನಿಷ್ಟಾನುಬಂಧಿತ್ವಜ್ಞಾನ ವಿದ್ದರೂ ಪ್ರವೃತ್ತಿಬರುತ್ತದೆ. ಅದಕ್ಕೆ ಉತ್ಕಟರಾಗವೇ ಪ್ರತಿದ್ವಂದ್ವಿಯಾಗುತ್ತದೆಂದು ತಾತ್ಪರ್ಯ. ಆಗ ನರಕಸಾಧನತಾಬುದ್ಧಿಯುತಿರೋಹಿತವಾಗುತ್ತದೆ. ಆ ಸುಖದಲ್ಲಿ

ಉತ್ಕಟರಾಗವಿರುವುದರಿಂದ ಅಗಮ್ಯಾಗಮನಜನ್ಯನರಕದಲ್ಲಿ ಬಲವದ್ದ್ವೇಷ ಹುಟ್ಟುವು ದಿಲ್ಲ. ಕೃತಿಸಾಧ್ಯತಾಜ್ಞಾನಕ್ಕೆ ಕಾರಣತ್ವಹೇಳಿರುವುದಕ್ಕೆ ಪ್ರಯೋಜನತೋರಿಸು ತ್ತಾನೆ. 'ವೃಷ್ಟ್ಯಾದೌ, ಇತಿ. ಮಳೆಯು ಕೃತಿಸಾಧ್ಯವೆಂದು ಯಾರಿಗೂ ಜ್ಞಾನ ಉಂಟಾಗುವುದಿಲ್ಲ ಇದರಿಂದ ವೃಷ್ಟ್ಯಾದಿಗಳಲ್ಲಿ ಚಿಕೀರ್ಷಾ ಮತ್ತು ಪ್ರವೃತ್ತಿಯೂ ಬರುವುದಿಲ್ಲ. ಇಷ್ಟಸಾಧನತ್ವಪ್ರಕಾರಕಜ್ಞಾನವಿರುವುದರಿಂದ 'ವೃಷ್ಟಿರ್ಭವೇತ್' (ಮಳೆ ಆಗಲಿ) ಎಂಬ ಇಚ್ಛಾಮಾತ್ರಉಂಟಾಗುತ್ತದೆ. 'ಕೃತಿಶ್ಚ—' ಇತಿ. ಕೃತಿಸಾಧ್ಯತಾ ಜ್ಞಾನವೆಂಬಲ್ಲಿ ಕೃತಿಪದದಿಂದ ಪ್ರವೃತ್ತಿರೂಪಕೃತಿಯನ್ನು ತೆಗೆದುಕೊಳ್ಳಬೇಕು. ಇದಕ್ಕೆ ಫಲತೋರಿಸುತ್ತಾನೆ. 'ತೇನ—' ಇತಿ. ಪ್ರವೃತ್ತಿಪ್ರವೇಶದಿಂದ ಜೀವನಕಾರಣ ಪ್ರಯತ್ನಸಾಧ್ಯವಾದ ಪ್ರಾಣಪಂಚಕಸಂಚಾರದಲ್ಲಿ ಪ್ರವೃತ್ತಿಯುಂಟಾಗುವುದಿಲ್ಲ ವೆಂದರ್ಥ. 'ಇತ್ಥಂಚ—' ಇತಿ. ಪ್ರವೃತ್ತಿಯನ್ನು ಕುರಿತು ಇಷ್ಟಸಾಧನತಾ ಜ್ಞಾನಕ್ಕೆ ಕಾರಣತ್ವಸಿದ್ಧವಾದಮೇಲೆ ಎಂದರ್ಥ. 'ವಿಧೇರಪಿ—' ಇತಿ. 'ಅಗ್ನಿಷ್ಟೋ ಮೇನ ಯಜೇತ ಸ್ವರ್ಗಕಾಮಃ' ಇತ್ಯಾದಿವಾಕ್ಯಗಳಲ್ಲಿ 'ಯಜೇತ' ಎಂಬ ಪದದಿಂದ ತೋರುವ (ಯಾಗ) ವಿಧಿಗೂ ಬಲವದನಿಷ್ಟಾನನುಬಂಧೀಷ್ಟಸಾಧನತ್ವವಿಶಿಷ್ಟಕೃತಿ ಸಾಧ್ಯತ್ವ ಸಿದ್ಧವಾಗುತ್ತದೆ. ಇದಕ್ಕೆ ಕಾರಣತೋರಿಸುತ್ತಾನೆ. 'ಪ್ರವರ್ತಕತ್ವಾ—' ಇತಿ.

ವಿಧಿಯು ಸಾಕ್ಷಾತ್ತಾಗಿ ಪ್ರವರ್ತಕಜ್ಞಾನವನ್ನು ಹುಟ್ಟಿಸುವುದಿಲ್ಲ. ವಿಧಿವಾಕ್ಯ ದಿಂದ ಮೊದಲು ಇಷ್ಟಸಾಧನತ್ವ, ಕೃತಿಸಾಧ್ಯತ್ವ ತಿಳಿದಮೇಲೆ 'ಇಷ್ಟಯಾವುದು ?' ಎಂಬ ಆಕಾಂಕ್ಷೆ ಬರುತ್ತದೆ. ಆಗ ಸ್ವರ್ಗಕಾಮಾದಿಪದಸಮಭಿವ್ಯಾಹಾರದಿಂದ ಸ್ವರ್ಗ ಸಾಧನವೆಂಬ ಜ್ಞಾನವು ಅನುಮಾನಗಮ್ಯವಾಗಿ ಮಾನಸಿಕವಾಗಿ ಹುಟ್ಟುತ್ತದೆ. ಹೀಗೆ ಹೇಳದೇ ಹೋದರೆ ವಿಶೇಷರೂಪದಿಂದ ಫಲಜ್ಞಾನವಿಲ್ಲದಿರುವುದರಿಂದ ಪ್ರವೃತ್ತಿಯೇ ಬರ ಲಾರದು. ಹೀಗೆ ವರ್ತಮಾನಕಾಲವಿಶಿಷ್ಟಕೃತಿಸಾಧ್ಯತ್ವಾದಿಜ್ಞಾನವು ಅನುಮಾನಗಮ್ಯ ವಾಗಿಯೇ ಬರುತ್ತದೆ. ಮಣಿಕಾರರೂಕೂಡಾ 'ವಿಧಿಜನ್ಯಜ್ಞಾನಜನ್ಯಂ ಜ್ಞಾನಂ ಪ್ರವರ್ತಕಂ' ಎಂದು ಹೇಳುತ್ತಾರೆ.

ಈ ವಿಷಯದಲ್ಲಿ ಭಾಟ್ಟಮತ ಹೀಗಿದೆ. ಲೋಕದಲ್ಲಿ—'ಸ್ವೇಚ್ಛಾಧೀನಾ' 'ಪರ ಪ್ರೇರಣಾಜನ್ಯಾ' ಎಂದು ಪ್ರವೃತ್ತಿ ಎರಡುವಿಧವಾಗಿದೆ. ಪರಪ್ರೇರಣಾಜನ್ಯಪ್ರವೃತ್ತಿಯಲ್ಲಿ ಪ್ರವರ್ತನಾ ಎಂಬುದು ಪ್ರಯೋಜಕವಾಗುತ್ತದೆ. 'ಆಚಾರ್ಯಪ್ರೇರಣೆಯಿಂದ ಈ ಕಾರ್ಯ ವನ್ನು ಮಾಡುತ್ತೇನೆ'ಂದು ಲೋಕವ್ಯವಹಾರದಿಂದ ಇದು ತಿಳಿಯುತ್ತದೆ. 'ಪ್ರವರ್ತನಾ ಚ ಪ್ರವರ್ತಯಿತುಃ ಪ್ರವೃತ್ತ್ಯನುಕೂಲೋ ವ್ಯಾಪಾರವಿಶೇಷಃ" ಎಂದು ಪ್ರವರ್ತನಾ ಲಕ್ಷಣ ಹೇಳುತ್ತಾರೆ. ಪ್ರವೃತ್ತಿಹೊಂದುವವನ ಪ್ರವೃತ್ತಿಯನ್ನು ಹುಟ್ಟಿಸುವ ಒಂದು ವ್ಯಾಪಾರವಿಶೇಷಕ್ಕೆ ಪ್ರವರ್ತನಾ ಎಂದು ಹೆಸರು ಇದು ಚೇತನದಲ್ಲಿ ಅಭಿಪ್ರಾಯ ವಿಶೇಷವೂ, ಅಚೇತನವಾದ ವೇದದಲ್ಲಿ ಅಭಿಧಾ ಎಂಬ ಶಬ್ದಸಮವೇತವ್ಯಾಪಾರವೂ ಆಗುತ್ತದೆ. ಆಚಾರ್ಯನ ಅಭಿಪ್ರಾಯವನ್ನು ತಿಳಿದು ಶಿಷ್ಯನು ಪ್ರವರ್ತಿಸುವಂತೆ ವೇದದಲ್ಲಿ

ಅಭಿಧಾಜ್ಞಾನದಿಂದ ಪ್ರವೃತ್ತಿ ಬರುತ್ತದೆ. ಈ ಅಭಿಧೆಯೇ ಲಿಙ್‌ನ ಅರ್ಥ. ಲಿಙ್ತ್ವಾಂಶದಿಂದ ಅವೇ ಶಬ್ದಭಾವನಾರೂಪದಿಂದ ಹೇಳಲ್ಪಡುತ್ತದೆ. ಆಖ್ಯಾತತ್ವಾಂಶದಿಂದ ಅರ್ಥಭಾವನಾ ಹೇಳಲ್ಪಡುತ್ತದೆ. ಇದನ್ನೇ ಕಾರಿಕಾದಲ್ಲಿ ಹೇಳಿರುತ್ತಾರೆ.

'ಅಭಿಧಾಂ ಭಾವನಾಮಾಹುರನ್ಯಾಮೇವ ಲಿಙಾದಯಃ ||
ಅರ್ಥಾತ್ಮಭಾವನಾತ್ವನ್ಯಾಸರ್ವಾಖ್ಯಾತಸ್ಯ ಗೋಚರಃ ||'

ಅಭಿಧೆಯೇ ಭಾವನಾ. ಇದನ್ನೇ ಲಿಙ್, ಲೋಟ್‌ತವ್ಯದಾದಿಪ್ರತ್ಯಯಗಳು ಹೇಳುತ್ತವೆ. ಆಖ್ಯಾತದಿಂದ ಅರ್ಥಭಾವನಾ ಹೇಳಲ್ಪಡುತ್ತದೆಂದರ್ಥ. ಅರ್ಥ ಅಂದರೆ ಯಾಗಾದಿ. ಅರ್ಥಗೋಚರವಾದುದರಿಂದ ಅಥವಾ ಅರ್ಥಾಶ್ರಿತವಾದುದರಿಂದ ಅರ್ಥಾತ್ಮತ್ವಭಾವನೆಗೆ ಬರುತ್ತದೆ. ಶಬ್ದಭಾವನೆಗೆ ಅರ್ಥಭಾವನೆಯೇ ಭಾವ್ಯವಾಗುತ್ತದೆ. ಅರ್ಥಭಾವನಾಫಲ ಸ್ವರ್ಗಾದಿಗಳು. ಹೀಗೆ ಪ್ರವೃತ್ತಿಯಲ್ಲಿ ಪ್ರವರ್ತನಾಜ್ಞಾನ ಕಾರಣವೆಂದು ಅವರ ಅಭಿಪ್ರಾಯ. ಇಷ್ಟಸಾಧನತಾಜ್ಞಾನಕ್ಕೆ ಕಾರಣತ್ವ ಹೇಳಿದ ಮೇಲೆ ಅದಕ್ಕೆ ಅಧಿಕವಾಗಿ ಕಾರಣತ್ವಹೇಳಬೇಕಾಗಿಲ್ಲನೆಂದು ತಾರ್ಕಿಕನಮತ. ಪ್ರವೃತ್ತಿಗೆ ಅನುಕೂಲವಾದ ಇಷ್ಟಸಾಧನತ್ವವೇ ಪ್ರವರ್ತನಾ ಎಂದು ಮಂಡನಮಿಶ್ರರೂ ಹೇಳಿರುತ್ತಾರೆ. ಅದುದರಿಂದ ಬೇರೆ ಕಾರಣತ್ವ ಹೇಳಬೇಕಾಗಿಲ್ಲ.

ಇತ್ಥಂ ಚ ವಿಶ್ವಜಿತಾ ಯಜೇತೇತ್ಯಾದೌ ಯತ್ರ ಫಲಂ ನ ಶ್ರೂಯತೇ ತತ್ರಾಪಿ ಸ್ವರ್ಗಃ ಫಲಂ ಕಲ್ಪ್ಯತೇ | ನನ್ವಹರಹಃ ಸಂಧ್ಯಾಮುಪಾಸೀತೇತ್ಯಾದಾವಿಷ್ಟಾನುತ್ಪತ್ತೇಃ ಪ್ರವೃತ್ತಿಃ ಕಥಮ್ ? | ನ ಚಾರ್ಥವಾದಿಕಂ ಬ್ರಹ್ಮಲೋಕಾದಿ ಪ್ರತ್ಯವಾಯಾಭಾವೋ ವಾ ಫಲಮಿತಿ ವಾಚ್ಯಮ್ | ತಥಾಸತಿ ಕಾಮ್ಯತ್ವೇನಿತ್ಯತ್ವಹಾನ್ಯಾಪತ್ತೇಃ, ಕಾಮನಾಭಾವೇ ಚಾಕರಣಾಪತ್ತೇಃ | ಇತ್ಥಂ ಚ ಯತ್ರ ಫಲಶ್ರುತಿಸ್ತತ್ರಾರ್ಥವಾದಮಾತ್ರಮಿತಿ ಚೇನ್ನ | ಗ್ರಹಣಶ್ರಾದ್ಧಾದೌ ನಿತ್ಯತ್ವನೈಮಿತ್ತಕತ್ವಯೋರಿವ (ಭರಣೀಶ್ರಾದ್ಧೇ ಕಾಮ್ಯತ್ವನೈಮಿತ್ತಕತ್ವಯೋರಿವ) ನಿತ್ಯತ್ವಕಾಮ್ಯತ್ವಯೋರಪ್ಯವಿರೋಧಾತ್ | ನ ಚ ಕಾಮನಾಭಾವೇಽಕರಣತಾಪತ್ತಿಃ, ತ್ರಿಕಾಲಸ್ತವಪಾಠಾದಾವಿವ ಕಾಮನಾಸದ್ಭಾವಸ್ಯೈವ ಕಲ್ಪನಾತ್, ನ ತು ವೇದಬೋಧಿತಕಾರ್ಯತಾಜ್ಞಾನಾತ್ ಪ್ರವೃತ್ತಿರಿತಿ ಸಂಭವತಿ ಸ್ವೇಷ್ಟಸಾಧನತ್ವಮವಿಜ್ಞಾಯ ತಾದೃಶಕಾರ್ಯತಾಜ್ಞಾನಸಹಸ್ರೇಣಾಪಿ ಪ್ರವೃತ್ತೇರಸಂಭವಾತ್ | ಯದಪಿ ಪಂಡಾಪೂರ್ವಂ ಫಲಮಿತಿ ತದಪಿ ನ ಕಾಮನಾಭಾವೇಽಕರಣಾಪತ್ತೇಸ್ತೌಲ್ಯಾತ್ | ಕಾಮನಾಕಲ್ಪನೇ ತ್ವಾರ್ಥವಾದಿಕಫಲಮೇವ ರಾತ್ರಿಸತ್ರನ್ಯಾಯಾತ್ ಕಲ್ಪ್ಯತಾಮ್ | ಅನ್ಯಥಾ ಪ್ರವೃತ್ತ್ಯನುಪಪತ್ತೇಃ ||

ಇಷ್ಟಸಾಧನತಾಜ್ಞಾನವು ಪ್ರವೃತ್ತಿಗೆ ಕಾರಣವಾಗುವುದಾದರೆ 'ವಿಶ್ವಜಿತಾಯಜೇತ' ಇತ್ಯಾದಿಸ್ಥಳದಲ್ಲಿ ವಿಶೇಷವಾಗಿ ಫಲಶ್ರುತವಾಗದಿರುವುದರಿಂದ ಪ್ರವೃತ್ತಿಬಾರದೇ

ಹೋಗಬೇಕಾಗುತ್ತದೆ. ಎಂದು ಶಂಕೆ ಬಂದರೆ ಅದಕ್ಕೆ ಸಮಾಧಾನತೋರಿಸುತ್ತಾನೆ. 'ಇತ್ಥಂಚ—' ಇತಿ. ಯಜೇತ' ಎಂಬಲ್ಲಿ ವಿಧಿಬೋಧಕಪ್ರತ್ಯಯಕ್ಕೆ ಇಷ್ಟಸಾಧನತ್ವಾದಿರೂಪಾರ್ಥ ತೋರುವಾಗ ಎಂದರ್ಥ.

ಎಲ್ಲಿ ಫಲಶ್ರವಣವಿಲ್ಲವೋ ಅಲ್ಲಿ ಸ್ವರ್ಗರೂಪಫಲವು ಕಲ್ಪಿತವಾಗುತ್ತದೆ. ಸ್ವರ್ಗವು ಇಷ್ಟವಾಗಿ ಯಾಗವು ಅದಕ್ಕೆ ಸಾಧನವಾಗುತ್ತದೆ. ಹೀಗೆ ಕಲ್ಪಿಸುವ ಸ್ಥಳಗಳಲ್ಲಿ 'ವಿಶ್ವಜಿನ್ನ್ಯಾಯ' ವೆನ್ನುತ್ತಾರೆ. ಸಂಧ್ಯಾವಂದನಾದಿನಿತ್ಯಕರ್ಮಗಳಿಗೆ ಯಾವ ಫಲವೂ ಇಲ್ಲದಿರುವುದರಿಂದ ಅಲ್ಲಿ ಇಷ್ಟಸಾಧನತ್ವಜ್ಞಾನವು ಪ್ರವರ್ತಕವಾಗಲಾರದು. ಪ್ರವರ್ತಕತ್ವ ಅದಕ್ಕಿಲ್ಲದಿದ್ದರೆ ಅದು ವಿಧಿಯೂ ಆಗಲಾರದು ಎಂದು ಮೀಮಾಂಸಕನು ಶಂಕಿಸುತ್ತಾನೆ. 'ನನು—' ಇತಿ. ಕಾಮುತೋರದಿರುವುದರಿಂದ ಅಲ್ಲಿ ಪ್ರವೃತ್ತಿ ಬರಲಾರದು ಎಂದು ಶಂಕೆಯ ತಾತ್ಪರ್ಯ. 'ನಚ—' ಇತಿ. "ಸಂಧ್ಯಾಮುಪಾಸತೇ ಯೇತು ಸತತಂ ಸಂಶಿತವ್ರತಾಃ। ವಿಧೂತಪಾಪಾಸ್ತೇಯಾಂತಿ ಬ್ರಹ್ಮಲೋಕಸನಾಮಯಮ್" ಇತ್ಯಾದಿ ಅರ್ಥವಾದವಾಕ್ಯಗಳಿಂದ ತೋರುವ ಬ್ರಹ್ಮಲೋಕಪ್ರಾಪ್ತಿರೂಪ ಫಲವಿರುವುದರಿಂದ ನಿತ್ಯಕರ್ಮಗಳಿಗೆ ಇಷ್ಟಸಾಧನತ್ವಮೂಲಕ ಪ್ರವೃತ್ತಿಯುಂಟಾಗಲು ಯಾವ ಭಾಧಕವೂ ಇಲ್ಲ. ಅಥವಾ ನಿತ್ಯಕರ್ಮಮಾಡದಿರುವುದರಿಂದ ಬರುವ ಯಾವ ಪ್ರತ್ಯವಾಯವಿದೆಯೋ ತದಭಾವರೂಪಫಲವಿರುವುದರಿಂದ ಪ್ರವೃತ್ತಿ ಬರುತ್ತದೆ ಎಂದರೆ ಅಲ್ಲಿ ದೋಷತೋರಿಸುತ್ತಾನೆ. 'ತಥಾಸತಿ—' ಬ್ರಹ್ಮಲೋಕಾದಿಫಲಹೇಳುವುದಾದರೆ ಅವುಗಳೂ ಕಾಮ್ಯಕರ್ಮಗಳಾಗಬೇಕಾಗುತ್ತವೆ. ನಿತ್ಯತ್ವಕಾಮ್ಯತ್ವಧರ್ಮಗಳು ಯಾವಾಗಲೂ ಪರಸ್ಪರವಿರುದ್ಧವಾಗಿರುತ್ತವೆ. ಕಾಮ್ಯತ್ವಬಂದರೆ ಅವುಗಳಿಗೆ ನಿತ್ಯತ್ವವಿಲ್ಲದೇ ಹೋಗಬೇಕಾಗುತ್ತದೆ. 'ಸಫಲತ್ವೇ ಸತಿ ವಿಧಿಪ್ರತಿಪಾದ್ಯತ್ವಂ' ಎಂದು ಕಾಮ್ಯತ್ವಲಕ್ಷಣ. 'ನಿಷ್ಫಲತ್ವೇ ಸತಿ ವಿಧಿಪ್ರತಿಪಾದ್ಯತ್ವಂ' ಎಂದು ನಿತ್ಯತ್ವಲಕ್ಷಣ. ನಿತ್ಯತ್ವಭಂಗ ಬರುವುದರಿಂದ ಫಲವಿಲ್ಲವೆನ್ನುವುದಾದರೆ ಇಷ್ಟಸಾಧನತ್ವವಿಲ್ಲದೇ ಇರುವುದರಿಂದ ಪ್ರವೃತ್ತಿಬರಲಾರದು. 'ಅಕರಣಾಪತ್ತೇಃ—' ಇತಿ. ಕಾಮನಾಧಿಕಾರವಿಲ್ಲದಿರುವುದರಿಂದ ಮಾಡುವುದಿಲ್ಲ. ಅನಧಿಕೃತನಾಗಿ ಮಾಡದಿದ್ದರೆ ಪ್ರತ್ಯವಾಯ ಬರುತ್ತದೆ. ಹಾಗಾದರೆ ಫಲಶ್ರುತಿಗೆ ಗತಿಯೇನು ? ಎಂದು ಆಶಂಕೆ ಬಂದರೆ ಅದಕ್ಕೆ ಉತ್ತರ ಹೇಳುತ್ತಾನೆ. 'ಇತ್ಥಂಚ—' ಇತಿ. ಅದು ಅರ್ಥವಾದವಾಕ್ಯ. ನಿತ್ಯಕರ್ಮಪ್ರಾಶಸ್ತ್ಯಕ್ಕೋಸ್ಕರ ಹೇಳಿದೆ. ಸ್ವತಃ ಏನೂ ಅರ್ಥವಿಲ್ಲ. ಎಂದು ತಾತ್ಪರ್ಯ. ಹೀಗೆ ಪೂರ್ವಪಕ್ಷ ಬಂದರೆ ಸಿದ್ಧಾಂತಿಯು ಅದನ್ನು ಖಂಡಿಸುತ್ತಾನೆ. 'ನ—' ಇತಿ. ಗ್ರಹಣಕಾಲದಲ್ಲಿಮಾಡುವ ಶ್ರಾದ್ಧದಲ್ಲಿ ಹೇಗೆ ನಿತ್ಯತ್ವನೈಮಿತ್ತಿಕತ್ವ ಧರ್ಮಗಳಿಗೆ ವಿರೋಧವಿಲ್ಲವೋ (ಹೀಗೆಯೇ ಪಿತೃಪಕ್ಷದಲ್ಲಿ ಭರಣೀಶ್ರಾದ್ಧದಲ್ಲಿಯೂ ನೈಮಿತ್ತಿಕತ್ವ ಕಾಮ್ಯತ್ವಗಳಿಗೆ ವಿರೋಧವಿರುವುದಿಲ್ಲ.) ಹಾಗೆ ಸಂಧ್ಯಾದಿನಿತ್ಯಕರ್ಮಗಳಲ್ಲಿಯೂ ಕಾಮ್ಯತ್ವನಿತ್ಯತ್ವಧರ್ಮಗಳು ಬಂದರೂ ಅವುಗಳಿಗೆ ವಿರೋಧಬರುವುದಿಲ್ಲ. ಕಾಮನಾ ಇಲ್ಲದಿರುವಾಗ ಅಕರಣತ್ವಾಪತ್ತಿಯೂ ಇಲ್ಲವೆಂದು ತಿಳಿಸುತ್ತಾನೆ.

'ನಚ—' ಇತಿ. ತ್ರಿಕಾಲಪಾಠವಂತೆ ಕಾಮನಾ ಬಂದೇ ಬರುತ್ತದೆ. ವಿಷ್ಣುಸಹಸ್ರ ನಾಮಸ್ತೋತ್ರವನ್ನು ಎಲ್ಲರೂಮಾಡುತ್ತಾರೆ. ವಿಧಿಪ್ರಾಪ್ತವಾದುದರಿಂದ ಅದು ಕಾಮ್ಯ ಕರ್ಮವಾಗುವುದಿಲ್ಲ. ಆದರೂ ಫಲಕಾಮನೆಯಿಂದ ಪುರುಷರು ಅಲ್ಲಿ ಪ್ರವೃತ್ತಿಹೊಂದು ತ್ತಾರೆ. ಅದರಂತೆ ಸಂಧ್ಯಾವಂದನಾದಿನಿತ್ಯಕರ್ಮ ಮಾಡುವವರಿಗೂ ಫಲಕಾಮನೆ ಯನ್ನು ಕಲ್ಪಿಸಬೇಕು.

ನಿತ್ಯಕರ್ಮಪ್ರವೃತ್ತಿಯಲ್ಲಿ ಇಷ್ಟಸಾಧನತ್ವಜ್ಞಾನಕ್ಕೆ ಕಾರಣತ್ವ ಹೇಳಿರುವುದರಿಂದ ಹೀಗೆಲ್ಲಾ ಕಲ್ಪಿಸಬೇಕಾಗುತ್ತದೆ. ಅದಕ್ಕೋಸ್ಕರ ಕೇವಲ ಕಾರ್ಯತಾಜ್ಞಾನವೊಂದೇ ಪ್ರವರ್ತಕವೆಂದರೆ ಯಾನಸೋಷಕ್ಕೂ ಅವಕಾಶವಿಲ್ಲವೆಂದು ಮೀಮಾಂಸಕನು ಆಕ್ಷೇಪಿಸಿ ದರೆ ಅದಕ್ಕೆ ಸಮಾಧಾನ ಹೇಳುತ್ತಾನೆ. 'ನತು—' ಇತಿ. ವೇದಬೋಧಿತಕಾರ್ಯತಾ ಜ್ಞಾನದಿಂದಲೇ ಪ್ರವೃತ್ತಿಯೆಂದು ಹೇಳಬಾರದು. ಅನ್ವಯವ್ಯತಿರೇಕಗಳಿಂದ ಪ್ರವೃತ್ತಿ ಸಾಮಾನ್ಯವನ್ನು ಕುರಿತು ಇಷ್ಟಸಾಧನತಾಜ್ಞಾನ ಕಾರಣವೆಂದು ಸಿದ್ಧವಾದಮೇಲೆ ಕಾಮನಾ ಇಲ್ಲದೆ ಸಹಸ್ರಕಾರ್ಯತಾಜ್ಞಾನವಿದ್ದರೂ ಪ್ರವೃತ್ತಿಬರಲಾರದು

ನಿತ್ಯಕರ್ಮಗಳಿಗೆ ಪಂಡಾಪೂರ್ವವೇ ಫಲವೆಂದು ಹೇಳುವ ಪ್ರಾಭಾಕರಮತವನ್ನು ಖಂಡಿಸುತ್ತಾನೆ. 'ಯದ್ಯಪಿ—' ಇತಿ. ಕ್ರಿಯಾಜನ್ಯಸಂಸ್ಕಾರವಿಶೇಷಕ್ಕೆ ಅಪೂರ್ವ ವೆಂದು ಹೆಸರು. ಫಲವಿಶೇಷವನ್ನುಂಟುಮಾಡದ (ಫಲವಿಶೇಷಾನಾಧಾಯಕ) ಅಪೂರ್ವಕ್ಕೆ ಪಂಡಾಪೂರ್ವವೆಂದು ಹೆಸರು ಇದೇ ನಿತ್ಯಕರ್ಮಕ್ಕೆ ಫಲವಾಗಲಿ ಎಂದರೆ ಅದನ್ನೂ ಖಂಡಿಸುತ್ತಾನೆ. 'ತದಪಿನ—' ಇತಿ. ಪಂಡಾಪೂರ್ವರೂಪಫಲಕಾಮನೆ ಬಾರದಿದ್ದಾಗ ನಿತ್ಯಕರ್ಮದಲ್ಲಿ ಪ್ರವೃತ್ತಿ ಇಲ್ಲವೇ ಹೋಗಬೇಕಾಗುತ್ತದೆ. ಅದೂ ಅಲ್ಲದೆ ನಿತ್ಯತ್ವಭಂಗವೂ ಬರುತ್ತದೆ. 'ಕಾಮನಾಕಲ್ಪನೇ—' ಇತಿ. ಅಪ್ರಸಿದ್ಧವಾದ ಪಂಡಾ ಪೂರ್ವಕಲ್ಪನೆಗಿಂತಲೂ ರಾತ್ರಿಸತ್ರನ್ಯಾಯದಿಂದ ಅರ್ಥವಾದವಾಕ್ಯದಿಂದ ಸಿದ್ಧವಾದ ಫಲವನ್ನು ಕಲ್ಪಿಸುವುದೇ ಉತ್ತಮವಾಗಿರುತ್ತದೆ. ರಾತ್ರಿಪದದಿಂದ 'ಜ್ಯೋತಿ ರ್ಗೌರಾಯುಃ—' ಇತ್ಯಾದಿವಾಕ್ಯದಿಂದ ಉಂಟಾದ ಸೌತ್ಯಾದಿಕರ್ಮಗಳು ವಿವಕ್ಷಿತ ವಾಗಿವೆ. ಈ ಕರ್ಮಗಳಿಗೆ ಫಲಜಿಜ್ಞಾಸೆಯುಂಟಾದಾಗ ಅಶ್ರುತವಾದ ಸ್ವರ್ಗಾದಿ ಗಳನ್ನು ಫಲವಾಗಿಕಲ್ಪಿಸುವುದಕ್ಕಿಂತಲೂ (ಅದು ಗೌರವವೆಂದು) ವಿಶ್ವಜಿನ್ನ್ಯಾಯಕ್ಕೆ ಅಪವಾದವಾಗಿ 'ಪ್ರತಿತಿಷ್ಠಂತೀಹ ವಾ ಯ ಏತಾ ರಾತ್ರೀರುಪಯಂತಿ' ಎಂಬ ಅರ್ಥ ವಾದ ಶ್ರುತಿಯಿಂದ ಲಬ್ಧವಾದ ಪ್ರತಿಷ್ಠೆಯೇ (ಶ್ರುತವಾದುದರಿಂದ ಆನುಮಾನಿಕ ಸ್ವರ್ಗಾದಿಗಳಿಗಿಂತ ಲಘು) ಫಲವೆಂದು ಸಿದ್ಧಾಂತಮಾಡಿದೆ ಅದರಂತೆ ಶ್ರುತವಾದ ಅರ್ಥವಾದವಾಕ್ಯದಿಂದ ಲಬ್ಧವಾದ ಬ್ರಹ್ಮಲೋಕಾದಿಗಳೇ ನಿತ್ಯಕರ್ಮಗಳಿಗೆ ಫಲವಾಗಿ ಕಲ್ಪಿಸಬೇಕು. ಹೀಗೆ ಅಲ್ಲಿಯೂ ಇಷ್ಟಸಾಧನತಾಜ್ಞಾನ ಪ್ರವರ್ತಕವಾಗುತ್ತದೆ. ಇಲ್ಲವಾದರೆ ಸಂಧ್ಯಾವಂದನಾದಿ ನಿತ್ಯಕರ್ಮಗಳಲ್ಲಿ ಪ್ರವೃತ್ತಿಯೇ ಬರಲಾರದೆಂದು ತಾರ್ಕಿಕಸಿದ್ಧಾಂತ ||

ತೇನಾನುತ್ಪತ್ತಿಂ ಪ್ರತ್ಯವಾಯಸ್ಯಾನ್ಯೇ ಮನ್ಯಂತೇ । ಏವಮ್
ಸಂಧ್ಯಾಮುಪಾಸತೇ ಯೇ ತು ಸತತಂ ಶಂಸಿತವ್ರತಾಃ ॥
ವಿಧೂತಪಾಪಾಸ್ತೇ ಯಾಂತಿ ಬ್ರಹ್ಮಲೋಕಮನಾಮಯಮ್ ॥ ಏವಮ್
ದದ್ಯಾದಹರಹಃ ಶ್ರಾದ್ಧಂ ಪಿತೃಭ್ಯಃ ಪ್ರೀತಿಮಾವಹನ್ ॥

ಇತಿ ಪ್ರೀತ್ಯಾತ್ಮಕಮೇವ ಫಲಮಸ್ತು । ನ ಚ ಪಿತೃಪ್ರೀತಿಃ ಕಥಂ ಫಲಂ ವ್ಯಧಿಕರಣತ್ವಾದಿತಿ ವಾಚ್ಯಮ್ । ಗಯಾಶ್ರಾದ್ಧಾದಾವಿವೋದ್ದೇಶ್ಯತ್ವಸಂಬಂಧೇನೈವ ಫಲಜನಕತ್ವಸ್ಯ ಕ್ವಚಿತ್ಕಲ್ಪನಾತ್ । ಅತ ಏವೋಕ್ತಂ ಶಾಸ್ತ್ರದರ್ಶಿತಂ ಫಲಮನುಷ್ಠಾನ ಕರ್ತರೀತ್ಯುತ್ಸರ್ಗ ಇತಿ । ಪಿತೄಣಾಂ ಮುಕ್ತತ್ವೇತು ಸ್ವಸ್ಯ ಸ್ವರ್ಗಾದಿ ಫಲಂ ಯಾವನ್ನಿತ್ಯನೈಮಿತ್ತಿಕಾನುಷ್ಠಾನಸ್ಯ ಸಾಮಾನ್ಯತಃ ಸ್ವರ್ಗಜನಕತ್ವಾತ್ । ಸಂಡಾಪೂರ್ವಾರ್ಥಂ ಪ್ರವೃತ್ತಿಶ್ಚ ನ ಸಂಭವತಿ । ನಹಿ ತತ್ಸುಖದುಃಖಾಭಾವವತ್ಸ್ವತಃ ಪುರುಷಾರ್ಥೋ ನ ವಾ ತತ್ಸಾಧನಮ್ । ಪ್ರತ್ಯವಾಯಾನುತ್ಪತ್ತೌ ಕಥಂ ಪ್ರವೃತ್ತಿರಿತಿ ಚೇದಿತ್ಥಮ್—ಯಥಾ ಹಿ ನಿತ್ಯೇ ಕೃತೇ ಪ್ರತ್ಯವಾಯಾಭಾವಸ್ತಿಷ್ಠತಿ ತದಭಾವೇ ತದಭಾವಃ । ಏವಂ ಪ್ರತ್ಯವಾಯಾಭಾವಸತ್ವೇ ದುಃಖಪ್ರಾಗಭಾವಸತ್ವಂ ತದಭಾವೇ ತದಭಾವ ಇತಿ ಯೋಗಕ್ಷೇಮಸಾಧಾರಣಕಾರಣತಾಯಾ ದುಃಖಪ್ರಾಗಭಾವಂ ಪ್ರತ್ಯಪಿ ಸುವಚತ್ವಾತ್ । ಏವಮೇವ ಪ್ರಾಯಶ್ಚಿತ್ತಸ್ಯಾಪಿ ದುಃಖಪ್ರಾಗಭಾವಹೇತುತ್ವಮಿತಿ ॥

ತೇನ—ಅರ್ಥವಾದವಾಕ್ಯದಿಂದ ಲಬ್ಧವಾದ ಫಲವನ್ನೇ ಕಲ್ಪಿಸುವುದು ಲಾಘವವಾದುದರಿಂದ, ಅಥವಾ ಕಾಮನಾ ಇಲ್ಲವಾದರೆ ಕಾರ್ಯಪ್ರವೃತ್ತಿ ಉಂಟಾಗದಿರುವುದರಿಂದ ಎಂದರ್ಥ. ನಿತ್ಯಕರ್ಮಗಳಿಗೆ ಪ್ರತ್ಯವಾಯಾನುತ್ಪತ್ತಿ ಅಂದರೆ ಪಾಪಉಂಟಾಗದಿರುವುದೇ ಫಲವೆಂದು ಕೆಲವು ಆಚಾರ್ಯರು ಅಂಗೀಕರಿಸಿರುತ್ತಾರೆ. ಸಂಧ್ಯಾದಿನಿತ್ಯಕರ್ಮಗಳಿಗೆ ಫಲಬೋಧಕ ಅರ್ಥವಾದವಾಕ್ಯವನ್ನು ತೋರಿಸುತ್ತಾನೆ. 'ಏವಂ—' ಇತಿ. ಹಿಂದೆ ವ್ಯಾಖ್ಯಾತವಾಗಿದೆ. 'ದದ್ಯಾತ್—' ಇತಿ. ಪಿತೃಗಳಿಗೆ ಪ್ರೀತಿಯುಂಟುಮಾಡುವವನು ನಿತ್ಯವೂ ಶ್ರಾದ್ಧವನ್ನು ಮಾಡಬೇಕೆಂದರ್ಥ. ಇದು ನಿತ್ಯಶ್ರಾದ್ಧವಿಧಿಗೆ ಫಲಬೋಧಕವಾದ ಅರ್ಥವಾದ ವಾಕ್ಯ. ನಿತ್ಯಶ್ರಾದ್ಧಕ್ಕೆ ಪಿತೃತೃಪ್ತಿಯೇ ಫಲವೆಂದರ್ಥ. ಇದನ್ನು ಅಂಗೀಕರಿಸದವರು ಆಶಂಕಿಸುತ್ತಾರೆ. 'ನಚ—' ಇತಿ. ಶ್ರಾದ್ಧಮಾಡುವವನು ಮಗ. ಫಲ ಪಿತೃತೃಪ್ತಿಯು ಪಿತೃಗಳಲ್ಲಿರುತ್ತದೆ. ಫಲತನಗಾದರೆ ಪ್ರವೃತ್ತಿ ಲೋಕಪ್ರಸಿದ್ಧವಾಗಿದೆ. ತೃಪ್ತಿ ತನಗಾಗಬೇಕೆಂಬುವವನು ಭೋಜನದಲ್ಲಿ ಪ್ರವರ್ತಿಸುತ್ತಾನೆ. ಅನ್ಯಕೃತಿಗೆ ಅನ್ಯಫಲವಾಗುವುದು ಹೇಗೆ? ಇಲ್ಲಿ ವ್ಯಧಿಕರಣವಾಗುವುದರಿಂದ ಪಿತೃತೃಪ್ತಿ ಫಲವಾಗಲಾರದು ಎಂದು ಆಶಂಕೆ. ಅದಕ್ಕೆ ಸಮಾಧಾನ. 'ಗಯಾಶ್ರಾದ್ಧಾದೌ— ಇತಿ. ಕೆಲವುಕಡೆ ಉದ್ದೇಶ್ಯತ್ವಸಂಬಂಧದಿಂದ ಫಲಜನಕವಾಗುತ್ತದೆಂದರ್ಥ. ಉದ್ದೇಶ್ಯತಾವಚ್ಛೇದಕಸಂಬಂಧದಮೂಲಕ ಕೆಲವುಕಡೆ ಫಲವು

ಕಲ್ಪಿತವಾಗುವುದರಿಂದ ಇಲ್ಲಿ ಪಿತೃದ್ದೇಶ್ಯವಾಗಿ ಶ್ರಾದ್ಧಮಾಡುವುದರಿಂದ ಉದ್ದೇಶ್ಯತಾವಚ್ಛೇದಕಸಂಬಂಧಮೂಲಕ ಪಿತೃತೃಪ್ತಿ ಶಾದ್ಧಪ್ರವೃತ್ತಿಗೆ ಫಲವಾಗುತ್ತದೆ. ಯಾವ ಉದ್ದೇಶ್ಯತಾವಚ್ಛೇದಕಸಂಬಂಧದಿಂದ ಶಾಸ್ತ್ರವು ಯಾವಕರ್ಮದಫಲ ಹೇಳುತ್ತದೆಯೋ ಆ ಫಲವು ಆ ಕರ್ಮಕ್ಕೆಂದು ತಿಳಿಯಬೇಕು. ತಂದೆಯು ನಾಮಕರಣವಿಧಿ ಮಾಡುತ್ತಾನೆ. ತೇಜಸ್ವಿತಾದಿ ಫಲವು ಮಗನಲ್ಲಿ ಉಂಟಾಗುತ್ತದೆ. ಆದುದರಿಂದ ಯಾರು ಮಾಡುತ್ತಾರೋ ಅವರೇ ಫಲಹೊಂದುತ್ತಾರೆ, ಎಂಬುದು ಉತ್ಸರ್ಗ. ಸಾಮಾನ್ಯನಿಯಮವೆಂದು ತಿಳಿಯಬೇಕು.

ಅತಏವ—ಪಿತೃಪ್ರೀತಿಯೇ ಶ್ರಾದ್ಧಫಲವಾದುದರಿಂದ. 'ಶಾಸ್ತ್ರದಲ್ಲಿ ಹೇಳಿದ ಫಲವು ಅನುಷ್ಠಾನಕರ್ತೃವಿಗೆಂಬುವು ಸಾಮಾನ್ಯನಿಯಮವೆಂದರ್ಥ. ಪಿತೃಮುಕ್ತಿ ಹೊಂದಿದಮೇಲೆ ಮಾಡಿದಶ್ರಾದ್ಧಕರ್ಮಕ್ಕೆ ಫಲವೇನು ? ಎಂದು ಶಂಕೆ ಬಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಪಿತೄಣಾಂ—' ಇತಿ. ಪಿತೃಮುಕ್ತಿಹೊಂದಿರುವುದರಿಂದ ಪಿತೃತೃಪ್ತಿ ಫಲವಾಗುವುದಿಲ್ಲ. ಆದರೂ ಹಿಂದೆ ಹೇಳಿದಂತೆ 'ವಿಶ್ವಜಿನ್ನ್ಯಾಯದಿಂದ ಸ್ವರ್ಗಾದಿಫಲಕಲ್ಪಿತವಾಗುವುದರಿಂದ ಪ್ರವರ್ತಕವಾದ ಇಷ್ಟಸಾಧನತಾಜ್ಞಾನಕ್ಕೆ ಭಂಗ ಬರುವುದಿಲ್ಲ. ಅದನ್ನೇ 'ಯಾವತ್—' ಎಂಬುದರಿಂದ ವಿವರಿಸಿರುತ್ತಾನೆ.

ಸಿಂಹಾವಲೋಕನನ್ಯಾಯದಿಂದ ಪ್ರಾಭಾಕರನಮತವನ್ನು ಖಂಡಿಸುತ್ತಾನೆ. 'ಪಿಂಡಾಪೂರ್ವಾ—' ಇತಿ. ಪಿಂಡಾಪೂರ್ವಫಲೋದ್ದೇಶದಿಂದ ನಿತ್ಯಕರ್ಮಾದಿಗಳಲ್ಲಿ ಪ್ರವೃತ್ತಿಯನ್ನು ಎಂದೂ ಹೇಳಬಾರದು. ಕಾರಣತೋರಿಸುತ್ತಾನೆ. 'ನಹಿ—ಇತಿ. ಲೋಕದಲ್ಲಿ ಸುಖಕ್ಕೆ, ಅಥವಾ ದುಃಖಾಭಾವಕ್ಕೆ, ಸುಖಸಾಧನ ಅಥವಾ ದುಃಖಾಭಾವ ಸಾಧನೆಯಲ್ಲಿ ಜನಪ್ರವೃತ್ತಿ ಪ್ರಸಿದ್ಧವಾಗಿದೆ. ಪಿಂಡಾಪೂರ್ವವು ಈ ನಾಲ್ಕರಲ್ಲಿ ಒಂದೂ ಅಲ್ಲ ಹೀಗೆ ಪುರುಷಾರ್ಥತ್ವವೇ ಇಲ್ಲದಮೇಲೆ ತದುದ್ದೇಶದಿಂದ ಪ್ರವೃತ್ತಿ ಬರುವುದು ಹೇಗೆ ? ಆದುದರಿಂದ ನಿತ್ಯಕರ್ಮಗಳಿಗೆ ಅದು ಫಲವಾಗಲಾರದು. ಪ್ರಾಭಾಕರನು ಶಂಕಿಸುತ್ತಾನೆ. 'ಪ್ರತ್ಯವಾಯಾನು—' ಇತಿ. ತಾರ್ಕಿಕಮತದಲ್ಲಿ ನಿತ್ಯಕರ್ಮಗಳಿಗೆ ಪ್ರತ್ಯವಾಯಾಭಾವವು ಫಲವಾಗುವುದು ಹೇಗೆ ? ಅದು ನಾನು ಹೇಳುವ ಪಿಂಡಾಪೂರ್ವದಂತೆ ಹಿಂದೆ ಹೇಳಿದ ಸುಖಾದಿನಾಲ್ಕರಲ್ಲಿಯೂ ಸೇರುವುದಿಲ್ಲ. ಆ ಪುರುಷಾರ್ಥವಲ್ಲದ ಕಾಮನೆಯಿಂದ ನಿತ್ಯಕರ್ಮದಲ್ಲಿ ಪ್ರವೃತ್ತಿ ಬರುವುದು ಹೇಗೆ ? ಎಂದು ಆಕ್ಷೇಪಿಸಿದರೆ ಅದಕ್ಕೆ ಸಮಾಧಾನ ಹೇಳುತ್ತಾನೆ. 'ಇತ್ಥಂ—' ಇತಿ. ನಿತ್ಯೇ ಕೃತೇ— ಸಂಧ್ಯಾದಿನಿತ್ಯಕರ್ಮಾನುಷ್ಠಾನಮಾಡಿದರೆ, ಅವನಲ್ಲಿ ಪ್ರತ್ಯವಾಯ (ಪಾಪ) ಉಂಟಾಗುವುದಿಲ್ಲ. ಪ್ರತ್ಯವಾಯಪ್ರಾಗಭಾವವು ಸುರಕ್ಷಿತವಾಗಿರುತ್ತದೆ. ತದಭಾವೇ ತದಭಾವಃ—ಸಂಧ್ಯಾವಂದನಾದಿನಿತ್ಯಕರ್ಮಾನುಷ್ಠಾನಮಾಡದಿದ್ದರೆ ಅವನಲ್ಲಿ ಪ್ರತ್ಯವಾಯಾಭಾವದ ಅಭಾವ ಬರುತ್ತದೆ ಅಂದರೆ ಪ್ರತ್ಯವಾಯವೇ ಬರುತ್ತದೆ. ಪ್ರತ್ಯವಾಯಾಭಾವಕ್ಕೂ ದುಃಖಪ್ರಾಗಾಭಾವಕ್ಕೂ (ದುಃಖಾಭಾವ.) ವ್ಯಾಪ್ತಿ ಇದೆ. ನಿತ್ಯಕರ್ಮಾನುಷ್ಠಾನಮಾಡುವವನಲ್ಲಿ ಪ್ರತ್ಯವಾಯಾಭಾವವಿರುತ್ತದೆಂದರೆ ದುಃಖಪ್ರಾಗ

ಭಾವವೂ ಇರುತ್ತದೆಂದರ್ಥ. ನಿತ್ಯಕರ್ಮವಾಡದವನಲ್ಲಿ ಪ್ರತ್ಯವಾಯ ಉಂಟಾಗುವುದರಿಂದ ದುಃಖವೂ ಇರುತ್ತದೆ. ಆದುದರಿಂದ ಯೋಗಕ್ಷೇಮಸಾಧಾರಣಕಾರಣತ್ವವನ್ನು ಈ ದುಃಖಪ್ರಾಗಭಾವದಲ್ಲಿಯೂ ಹೇಳಬಹುದು.

'ಅಪ್ರಾಪ್ತಪ್ರಾಪ್ತಿಃ ಯೋಗಃ' ಹೊಂದದಿರುವುದನ್ನು ಹೊಂದುವುದಕ್ಕೆ ಯೋಗವೆಂದು ಹೆಸರು. 'ಪ್ರಾಪ್ತಸ್ಯ ಸಂರಕ್ಷಣಂ ಕ್ಷೇಮಃ' ಹೊಂದಿದ್ದನ್ನು ಸುರಕ್ಷಿತವಾಗಿ ಇಟ್ಟುಕೊಳ್ಳುವುದಕ್ಕೆ ಕ್ಷೇಮವೆಂದು ಹೆಸರು ಈಗ ಪ್ರತ್ಯವಾಯಾಭಾವವು ಯದ್ಯಪಿ ಸ್ವತಃ ಪುರುಷಾರ್ಥವಾಗುವುದಿಲ್ಲ. ಅದಕ್ಕೆ ಸಾಧನವೂ ಅಲ್ಲ. ಆದುದರಿಂದ ಪ್ರವೃತ್ತಿಯನ್ನು ಕುರಿತು ಅದಕ್ಕೆ ಕಾರಣತ್ವ ಪ್ರಾಪ್ತವಾಗಿಲ್ಲ. ಅಪ್ರಾಪ್ತವಾಗಿದೆ. ಆದರೂ ದುಃಖಪ್ರಾಗಭಾವದೊಡನೆ ಅದಕ್ಕೆ ವ್ಯಾಪ್ತಿ ಇರುವುದರಿಂದ ಪ್ರವೃತ್ತಿಯನ್ನು ಕುರಿತು ಕಾರಣತ್ವ ಪ್ರಾಪ್ತವಾಗುವುದರಿಂದ ಯೋಗವಾಗುತ್ತದೆ. ಇಷ್ಟಸಾಧನತಾಜ್ಞಾನಕ್ಕೆ ಪ್ರವೃತ್ತಿಯನ್ನು ಕುರಿತು ಕಾರಣತ್ವ ಹಿಂದೆ ಸಿದ್ಧವಾಗಿದೆ. ಅದು ಪ್ರಾಭಾಕರರಿಂದ ಪೂರ್ವಪಕ್ಷೀಕೃತವಾದುದರಿಂದ (ನಿರಸ್ತವಾದುದರಿಂದ) ಅದನ್ನು ಸ್ಥಾಪಿಸಿ ರಕ್ಷಿಸುವುದೇ ಕ್ಷೇಮವಾಗುತ್ತದೆ. ಹೀಗೆ ಯೋಗಕ್ಷೇಮಸಾಧಾರಣವಾದಕಾರಣತ್ವವು ದುಃಖಪ್ರಾಗಭಾವದಲ್ಲಿಯೂ ಸಿದ್ಧವಾಗುತ್ತದೆ. 'ಏವಂ—' ಇತಿ. ಚಾಂದ್ರಾಯಣಾದಿ ಪ್ರಾಯಶ್ಚಿತ್ತಕರ್ಮಗಳಲ್ಲಿಯೂ ದುಃಖಪ್ರಾಗಭಾವಕಾರಣತ್ವವನ್ನು ಇದೇ ರೀತಿ ತಿಳಿಯಬೇಕು.

ನನು ನ ಕಲಂಜಂ ಭಕ್ಷಯೇದಿತ್ಯತ್ರ ವಿಧ್ಯರ್ಥೇ ಕಥಂ ನಞರ್ಥಾನ್ವಯಃ, ಇಷ್ಟಸಾಧನತ್ವಾಭಾವಸ್ಯ ಕೃತಿಸಾಧ್ಯತ್ವಾಭಾವಸ್ಯ ಚ ಬೋಧಯಿತುಮಶಕ್ಯತ್ವಾದಿತಿ ಚೇನ್ನ। ತತ್ರ ಬಾಧಾದಿಷ್ಟಸಾಧನತ್ವಂ ಕೃತಿಸಾಧ್ಯತ್ವಂ ಚ ನ ವಿಧ್ಯರ್ಥಃ। ಕಿಂತು ಬಲವದನಿಷ್ಟಾನನುಬಂಧಿತ್ವಮಾತ್ರಂ ತದಭಾವಶ್ಚ ನಞಾ ಬೋಧ್ಯತೇ। ಅಥವಾ ಬಲವದನಿಷ್ಟಾನನುಬಂಧಿತ್ವವಿಶಿಷ್ಟೇಷ್ಟಸಾಧನತ್ವೇ ಸತಿ ಕೃತಿಸಾಧ್ಯತ್ವಂ ವಿಧ್ಯರ್ಥಃ, ತದಭಾವಶ್ಚ ನಞಾ ಬೋಧ್ಯಮಾನೋವಿಶಿಷ್ಟಾಭಾವೋ ವಿಶೇಷ್ಯವತಿ ವಿಶೇಷಣಾಭಾವೇ ವಿಶ್ರಾಮ್ಯತಿ ॥

ಇಷ್ಟಸಾಧನತ್ವ ವಿಧ್ಯರ್ಥವಾದರೆ ಅಲ್ಲಿ ನಞರ್ಥಾನ್ವಯವು ಕೂಡಲಾರದು ಎಂದು ಶಂಕಿಸುತ್ತಾನೆ. 'ನನು—' ಇತಿ. ಕಲಂಜನೆಂದರೆ ವಿಷಸಂಪೃಕ್ತವಾದ ಮಾಂಸ. ವಿಧ್ಯರ್ಥದೊಡನೆ ನಞರ್ಥಾಭಾವಕ್ಕೆ ಅನ್ವಯಬರುವುದಾದರೆ ಆಗ 'ನ ಕಲಂಜಂ—' ಎಂಬ ನಿಷೇಧವಾಕ್ಯಕ್ಕೆ 'ಕಲಂಜಭಕ್ಷಣಂ ಪುರುಷೇಷ್ಟಸಾಧನತ್ವಾಭಾವವತ್, ಕೃತಿಸಾಧ್ಯತ್ವಾಭಾವವತ್' ಎಂದು ಬೋಧ ಹೇಳಬೇಕು. ಆದರೆ ಇದು ಬರುವುದು ಸುಲಭಸಾಧ್ಯವಲ್ಲ. ಏಕೆಂದರೆ ಕಲಂಜಭಕ್ಷಣದಲ್ಲಿ ಇಷ್ಟಸಾಧನತ್ವ, ಕೃತಿಸಾಧ್ಯತ್ವ ಎರಡೂ ತೋರದಿದ್ದರೆ ಅದರ ಅಭಾವ ನಞನಿಂದ ಹೇಳಬಹುದು. ಆದರೆ ಅದು ಬಾಧಿತವಾಗುತ್ತದೆ. ಆದುದರಿಂದ ನಿಷೇಧವಾಕ್ಯದಲ್ಲಿ ವಿಧ್ಯರ್ಥದೊಡನೆ ನಞರ್ಥಾ

ಭಾವಾನ್ವಯವು ಬಾರದೇ ಹೋಗಬೇಕಾಗುತ್ತದೆ ಎಂದು ಶಂಕೆ ಬಂದರೆ ಅದಕೆ ಸಮಾಧಾನ ತೋರಿಸುತ್ತಾನೆ. 'ಇತಿಚೇನ್ನ—' ಇತಿ. ಅಲ್ಲಿ ಇಷ್ಟಸಾಧನತ್ವದೊಡನ್ಕೆ ಅನ್ವಿತವಾದ ಅಭಾವಕ್ಕೆ ಬಾಧ ಬರುವುದರಿಂದ ಇಷ್ಟಸಾಧನತ್ವ, ಕೃತಿಸಾಧ್ಯತ್ವ ಇವೆರಡೂ ಪ್ರಕೃತವಿಧಿತಾತ್ಪರ್ಯವಿಷಯವಾಗುವುದಿಲ್ಲ. ನಾನೂ ಕೂಡಾ ಅರ್ಥಬಾಧ ಬರುವುದರಿಂದ ಅಲ್ಲಿ ಅವನ್ನು ವಿಧ್ಯರ್ಥವಾಗಿ ಅಂಗೀಕರಿಸುವುದಿಲ್ಲವೆಂದರ್ಥ. ಹಾಗಾದರೆ ಅಲ್ಲಿ ವಿಧ್ಯರ್ಥ ಯಾವುದು ? ಅಂದರೆ ಅದನ್ನು ತೋರಿಸುತ್ತಾನೆ. 'ಬಲವತ್—ಇತಿ. ಕೇವಲ ಬಲವದನಿಷ್ಟಾನನುಬಂಧಿತ್ವರೂಪಾರ್ಥಮಾತ್ರ ವಿಧ್ಯರ್ಥ ವೆಂದು ಅಂಗೀಕರಿಸುವುದರಿಂದ ಕಲಂಜಭಕ್ಷಣದಲ್ಲಿ ನಞ್ಞಿನಿಂದ ತದಭಾವವು ಬೋಧಿತ ವಾಗುತ್ತದೆ. ಇಷ್ಟಸಾಧನತ್ವ, ಕೃತಿಸಾಧ್ಯತ್ವ, ಬಲವದನಿಷ್ಟಾನನುಬಂಧಿತ್ವವೆಂದು ವಿಧ್ಯರ್ಥದಲ್ಲಿ ಮೂರು ಅಂಶಗಳಿವೆ. ಅದರಲ್ಲಿ ಯಾವ ಅಂಶದಬೋಧವಾಗುವುದೋ ಅದರ ಅಭಾವವು ನಞ್ಞಿನಿಂದ ಬೋಧಿತವಾಗುತ್ತದೆ. ಪ್ರಕೃತವಾಕ್ಯದಲ್ಲಿ ಬಲವದನಿಷ್ಟಾ ನನುಬಂಧಿತ್ವಮಾತ್ರ ವಿಧ್ಯರ್ಥವಾಗಿ ತೋರುವುದರಿಂದ ಅದರ ಅಭಾವವು ನಞ್‌ನಿಂದ ಬೋಧಿತವಾಗಿ 'ಕಲಂಜಭಕ್ಷಣಂ ಬಲವದನಿಷ್ಟಾನನುಬಂಧಿತ್ವಾಭಾವವತ್' ಎಂಬ ಶಾಬ್ದಬೋಧ ಬರುತ್ತದೆ. ಅದರಿಂದ ಮರಣ ಉಂಟಾಗುವುದರಿಂದ ಬಲವದನಿಷ್ಟಾನು ಬಂಧಿಯೇ ಆಗುತ್ತದೆಂದರ್ಥ. ಆದುದರಿಂದ ವಿಧ್ಯರ್ಥಕ್ಕೆ, ನಞರ್ಥದೊಡನೆ ಅನನ್ವಯ ರೂಪಬಾಧ ಎಂದೂ ಇಲ್ಲ.

ಲಾಘವವನ್ನಾಶ್ರಯಿಸಿ ಪ್ರಕಾರಾಂತರವನ್ನು ತೋರಿಸುತ್ತಾನೆ. ಬಲವದನಿಷ್ಟಾ ನನುಬಂಧಿತ್ವವಿಶಿಷ್ಟೇಷ್ಟಸಾಧನತ್ವವಿಶಿಷ್ಟಕೃತಿಸಾಧ್ಯತ್ವವೆಂಬುದು ವಿಧ್ಯರ್ಥ. ಪ್ರತ್ಯೇಕ ವಿಷಯಕಜ್ಞಾನರೂಪದಿಂದ ವಿಧ್ಯರ್ಥ ಹೇಳಿದರೆ ಗೌರವಬರುವುದರಿಂದ ವಿಶಿಷ್ಟರೂಪದಿಂದ ಒಂದೇ ಕಾರಣವೆಂದರೆ ಲಾಘವ ಬರುತ್ತದೆಂದು ತಾತ್ಪರ್ಯ. ವಿಧಿಯಿಂದ ವಿಶಿಷ್ಟಾರ್ಥ ಬೋಧಿತವಾಗುವುದರಿಂದ ನಿಷೇಧಸ್ಥಳದಲ್ಲಿ ನಞ್ಞಿನಿಂದ ವಿಶಿಷ್ಟಾಭಾವ ಬೋಧಿತವಾಗು ತ್ತದೆ. ಆಗ ವಿಶಿಷ್ಟದಲ್ಲಿ ಬಾಧಿತವಾಗಿ ವಿಶೇಷಣವಾದ ಬಲವದನಿಷ್ಟಾನನುಬಂಧಿತ್ವಾ ಭಾವದಲ್ಲಿ ಪರ್ಯವಸಾನ ಹೊಂದುತ್ತದೆ. ಇಂತಹಸ್ಥಳದಲ್ಲಿ ವಿಶೇಷಣಾಭಾವಪ್ರಯುಕ್ತ ವಿಶಿಷ್ಟಾಭಾವಬಂದಿದೆಯೆಂದು ತಿಳಿಯಬೇಕು.

ನನು ಶ್ಯೇನೇನಾಭಿಚರನ್ ಯಜೇತೇತ್ಯಾದೌ ಕಥಂ ಬಲವದನಿಷ್ಟಾನನುಬಂಧಿತ್ವ ಮರ್ಥಃ । ಶ್ಯೇನಸ್ಯ ಮರಣಾನುಕೂಲವ್ಯಾಪಾರಸ್ಯ ಹಿಂಸಾತ್ವೇನ ನರಕಸಾಧನ ತ್ವಾತ್ । ನ ಚ ವೈಧತ್ವಾನ್ನ ನಿಷೇಧ ಇತಿ ವಾಚ್ಯಮ್। ಅಭಿಚಾರೇ ಪ್ರಾಯಶ್ಚಿ ತ್ತೋಪದೇಶಾತ್ । ನ ಚ ಮರಣಾನುಕೂಲವ್ಯಾಪಾರಮಾತ್ರಂ ಯದಿ ಹಿಂಸಾ ತದಾ ಖಡ್ಗಕಾರಸ್ಯ ಕೂಪಕರ್ತುಶ್ಚ ಹಿಂಸಕತ್ವಾಪತ್ತಿರ್ಗಲಲಗ್ನಾನ್ನಭಕ್ಷಣಜನ್ಯ ಮರಣೇ ಸ್ವಾತ್ಮವಧತ್ವಾಪತ್ತಿಶ್ಚೇತಿ ವಾಚ್ಯಮ್ । ಮರಣೋದ್ದೇಶ್ಯಕತ್ವಸ್ಯಾಪಿ ವಿಶೇಷಣತ್ವಾತ್ । ಅನ್ಯೋದ್ದೇಶ್ಯಕಕ್ಷಿಪ್ತನಾರಾಚಹತಬ್ರಾಹ್ಮಣಸ್ಯ ತು ವಾಚನಿ

ಕಂ ಪ್ರಾಯಶ್ಚಿತ್ತಮಿತಿ ಚೇನ್ನ । ಶ್ಯೇನವಾರಣಾಯಾವೃಷ್ಟಾದ್ವಾರಕತ್ವೇನ ವಿಶೇಷ ಣಾತ್ । ಅತ ಏವ ಕಾಶೀಮರಣಾರ್ಥಂ ಕೃತಶಿವಪೂಜಾದೇರಪಿ ನ ಹಿಂಸಾತ್ವಮ್ । ನ ಚ ಸಾಕ್ಷಾನ್ಮರಣಜನಕಸ್ಯೈವ ಹಿಂಸಾತ್ವಂ ಶ್ಯೇನಸ್ತು ನ ತಥಾ, ಕಿಂತು ತಜ್ಜನ್ಯಾಪೂರ್ವಮಿತಿ ವಾಚ್ಯಮ್ । ಖಡ್ಗಾಘಾತೇನ ಬ್ರಾಹ್ಮಣೇ ವ್ರಣ ಪಾಕಪರಂಪರಯಾ ಮೃತೇ ಹಿಂಸಾತ್ವಾನಾಪತ್ತೇಃ ॥

ವಿಶಿಷ್ಟವು ವಿಧ್ಯರ್ಥವಾದರೆ ಶ್ಯೇನಯಾಗದಲ್ಲಿ ಬಲವದನಿಷ್ಟಾನನುಬಂಧಿತ್ವರೂಪ ವಿಶೇಷಣಕ್ಕೆಬಾಧಬರುವುದರಿಂದ ಅಲ್ಲಿ ವಿಶಿಷ್ಟಬೋಧ ಬರುವುದು ಹೇಗೆ ? ಎಂದು ಶಂಕಿಸುತ್ತಾನೆ. 'ನನು—' ಇತಿ. ಶ್ಯೇನ ಎಂಬುದು ಒಂದು ಯಾಗದ ಹೆಸರು. ಶ್ಯೇನ (ಗಿಡುಗ) ಪಕ್ಷಿಯು ಉಪಮಾನ ಈ ಕರ್ಮದಲ್ಲಿ ತೋರುತ್ತದೆ. 'ಯಥಾ ವೈ ಶ್ಯೇನೋ ನಿಪತ್ಯಾದತ್ತೇ, ಏವಮಯಂ ದ್ವಿಷಂತಂ ಭ್ರಾತೃವ್ಯಂ ನಿಪತ್ಯಾದತ್ತೇ ಯಮಭಿ ಚರತಿ ಶ್ಯೇನೇನ' ಎಂಬ ವಾಕ್ಯದಿಂದ ಉಪಮಾನೋಪಮೇಯಭಾವ ತೋರುತ್ತದೆ. ಗಿಡುಗವು ದೂರದಿಂದ ಹಾರಿಬಂದು ತನ್ನ ಆಹಾರವನ್ನು ಒಯ್ಯುವಂತೆ ಈ ಶತ್ರು ಮರಣಹೋಮದಿಂದ ಶತ್ರುವಧೆ ಕ್ಷಿಪ್ರವಾಗಿ ಆಗುತ್ತದೆಂದರ್ಥ. ವೈರಿಮರಣವನ್ನ ಪೇಕ್ಷಿಸುವವನು ಈ ಯಾಗ ಮಾಡುತ್ತಾನೆ. ಇದು ಹಿಂಸೆಯಾದುದರಿಂದ ಬಲವದ ನಿಷ್ಟವಾದ ನರಕಕ್ಕೆ ಸಾಧನವಾಗುವುದರಿಂದ ಬಲವದನಿಷ್ಟಾನನುಬಂಧಿತ್ವಬರುವುದಿಲ್ಲ. ಬಲವದನಿಷ್ಟಾನುಸಂಬಂಧಿಯೇ ಆಗುವುದರಿಂದ ವಿಶಿಷ್ಟವಿಧ್ಯರ್ಥವು ಸಂಭವಿಸಲಾರದು. ವಿಶಿಷ್ಟವಿಧ್ಯರ್ಥವಾದಿಯು ಶಂಕಿಸುತ್ತಾನೆ. 'ನಚ—' ಇತಿ. ಇದು ವಿಧಿಚೋದಿತ ವಾದುದರಿಂದ ಹಿಂಸೆಯಲ್ಲ. 'ಮಾ ಹಿಂಸ್ಯಾತ್—' ನ್ಯಾಯಕ್ಕೆ ಯಾಗದಪಶುಹಿಂಸೆ ಯಲ್ಲಿ ಸಂಚಾರವಿಲ್ಲದಿರುವುದರಿಂದ 'ವೈಧಹಿಂಸೇತರಹಿಂಸೆಯೇ ಹಿಂಸೆಯೆಂದು ಸಿದ್ಧಾಂತ. ಇದು ವೈಧಹಿಂಸೆಯಾದುದರಿಂದ ಇಲ್ಲಿ ಹಿಂಸಾತ್ವಸಂಭವಿಸುವುದಿಲ್ಲವೆಂದರೆ ಅದಕ್ಕೆ ಆಕ್ಷೇಪಿಸುವವನ ಉತ್ತರ ತೋರಿಸುತ್ತಾನೆ. 'ಅಭಿಚಾರೇ—' ಇತಿ. "ಅಭಿಚಾರ ಮಹೀನಂ ಚ ತ್ರಿಭಿಃ ಕೃಚ್ಛ್ರೈರ್ವ್ಯಪೋಹತಿ" ಎಂದು ಅಭಿಚಾರವಿಧಿಗೆ ಪ್ರಾಯಶ್ಚಿತ್ತ ವಿಧಾನಮಾಡಿರುವುದರಿಂದ ಶ್ಯೇನಯಾಗವೂ ಅಭಿಚಾರಕರ್ಮವಾದುದರಿಂದ ಹಿಂಸೆಯೇ ಆಗುತ್ತದೆ. ಇದರಿಂದ ನರಕಫಲವಿದ್ದೇ ಇದೆ. ಹೀಗೆ ಒಪ್ಪದಿದ್ದರೆ ಪ್ರಾಯಶ್ಚಿತ್ತ ಹೇಳಿರುವುದು ವ್ಯರ್ಥವಾಗುತ್ತದೆ. ಇತರಯಾಗದ ಹಿಂಸೆಗೆ ಪ್ರಾಯಶ್ಚಿತ್ತವಿಧಾನ ಮಾಡದಿರುವುದರಿಂದ ಯಾಗೀಯಸಾಮಾನ್ಯ ಹಿಂಸೆಯಲ್ಲಿ 'ಮಾ ಹಿಂಸ್ಯಾತ್—' ಎಂಬ ನಿಷೇಧವು ಪ್ರವರ್ತಿಸುವುದಿಲ್ಲ. ತದ್ವ್ಯತಿರಿಕ್ತಹಿಂಸಾಸ್ಥಳದಲ್ಲಿ ಅದಕ್ಕೆ ಹೇಳಬೇಕು. ಅನುಪದಿಷ್ಟಪ್ರಾಯಶ್ಚಿತ್ತ ಸ್ಥಳದಲ್ಲಿ ನಿಷೇಧಕ್ಕೆ ಪ್ರವೃತ್ತಿಇಲ್ಲ. ಉಪದಿಷ್ಟಪ್ರಾಯಶ್ಚಿತ್ತ ಸ್ಥಳದಲ್ಲಿ ಪ್ರವೃತ್ತಿಇರುವುದರಿಂದ ಶ್ಯೇನಯಾಗವು ಹಿಂಸೆಯೇ ಆಗುತ್ತದೆಂದು ತಾತ್ಪರ್ಯ.

ಆಗ ವಿಶಿಷ್ಟವಿಧ್ಯರ್ಥವಾದಿಯು ಆಕ್ಷೇಪಿಸುವವನಿಗೆ ಭ್ರಮಬರುವಂತೆ ತಾನೇ ಶಂಕಿಸುತ್ತಾನೆ. 'ನಚ—' ಇತಿ. ಸಾಕ್ಷಾತ್ತಾಗಿ ಅಥವಾ ಪರಂಪರೆಯಿಂದ ಮರಣಕ್ಕೆ

ಸಾಧಕವಾಗುವ ವ್ಯಾಪಾರವೆಲ್ಲವೂ ಹಿಂಸೆಯೆಂದು ಅಂಗೀಕರಿಸುವುದಾದರೆ ಖಡ್ಗವನ್ನು ಮಾಡುವವನಿಗೂ, ಭಾವಿನಿರ್ಮಿಸುವವನಿಗೂ, ಹಿಂಸಕತ್ವ ಬರಬೇಕಾಗುತ್ತದೆ. ಖಡ್ಗವೂ ಪರಂಪರೆಯಿಂದ ಪ್ರಾಣಿವಧಮಾಡುತ್ತದೆ. ಬಾವಿಯಲ್ಲಿ ಕೂಡ ಬಿದ್ದು ಎಷ್ಟೋ ಜೀವಿಗಳು ನಾಶವಾಗುತ್ತವೆ. ಇನ್ನೂ ಬೇರೆ ದೋಷಾಂತರವನ್ನು ತೋರಿಸುತ್ತಾನೆ. 'ಗಲಲಗ್ನ—' ಇತಿ. ಊಟಮಾಡುವಾಗ ಅಕಸ್ಮಾತ್ತಾಗಿ ಅನ್ನ ಗಂಟಲಲ್ಲಿ ಸಿಕ್ಕಿ ಕೆಲವರು ಮರಣಹೊಂದುತ್ತಾರೆ. ಇದೂ ಕೂಡಾ ಆತ್ಮಹತ್ಯಾದೋಷಕಾರಣವಾಗಲಿ ಎಂದರೆ ಆಗ ಆಕ್ಷೇಪಿಸುವವನು ಅದಕ್ಕೆ ಸಮಾಧಾನ ತೋರಿಸುತ್ತಾನೆ. ಕೇವಲ 'ಮರಣಾನುಕೂಲವ್ಯಾಪಾರ ಹಿಂಸೆಯಾಗುವುದಿಲ್ಲ. 'ಮರಣೋದ್ದೇಶ್ಯಕತ್ವೇ ಸತಿ ಮರಣಾನುಕೂಲವ್ಯಾಪಾರತ್ವಂ' ಹಿಂಸಾ ಎಂದು ಹೇಳುತ್ತೇವೆ. ಹಿಂದೆ ಹೇಳಿದ ಖಡ್ಗಕಾರ ಮೊದಲಾದವರಲ್ಲಿ ಮರಣೋದ್ದೇಶ್ಯಕತ್ವವಿಲ್ಲದಿರುವುದರಿಂದ ಆ ದೋಷಕ್ಕೆ ಅವಕಾಶವಿಲ್ಲ. ಶ್ಯೇನಯಾಗದಲ್ಲಿ ಶತ್ರುಮರಣೋದ್ದೇಶ್ಯತ್ವವಿರುವುದರಿಂದ ಹಿಂಸೆಯಾಗುತ್ತದೆ. ಹಿಂಸಾಲಕ್ಷಣದಲ್ಲಿ ಮರಣೋದ್ದೇಶ್ಯಕತ್ವವಿಶೇಷಣವನ್ನು ಸೇರಿಸುವುದಾದರೆ ಅನ್ಯೋದ್ದೇಶದಿಂದ ಎಸೆದ ಬಾಣದಿಂದ ಅಕಸ್ಮಾತ್ತಾಗಿ ಮಧ್ಯದಲ್ಲಿ ಒಬ್ಬ ಬ್ರಾಹ್ಮಣನ ವಧೆಯಾಗುತ್ತದೆ, ಆಗ ಬ್ರಾಹ್ಮಣವಧಕ್ಕೆ ಪ್ರಾಯಶ್ಚಿತ್ತಮಾಡಿಕೊಳ್ಳಬೇಕಾಗಿಲ್ಲ. ಬ್ರಾಹ್ಮಣಮರಣೋದ್ದೇಶ್ಯದಿಂದ ಅಲ್ಲಿ ವ್ಯಾಪಾರನಡೆಯದಿದ್ದುದರಿಂದ ಬ್ರಾಹ್ಮಣವಧೆ ಹಿಂಸೆಯಾಗುವುದಿಲ್ಲವೆಂಬ ಶಂಕೆ ಬಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಅನ್ಯೋದ್ದೇಶ್ಯ—' ಇತಿ. 'ಸೇತೌ ಚ ಸ್ನಾನಮಾತ್ರೇಣ ಬ್ರಹ್ಮಹತ್ಯಾಂ ವ್ಯಪೋಹತಿ' ಎಂಬ ವಚನದಿಂದ ಬ್ರಾಹ್ಮಣಸಾಮಾನ್ಯವಧಕ್ಕೆ ಸೇತುಸ್ನಾನಾದಿ ಪ್ರಾಯಶ್ಚಿತ್ತವಿಧಾನ ಮಾಡಿರುವುದರಿಂದ ಅದು ಹಿಂಸೆ ಆಗಿಯೇ ಆಗುತ್ತದೆ. 'ಮಾ ಹಿಂಸ್ಯಾತ್—' ನಿಷೇಧ ವಿಷಯದಿಂದ ಮಾತ್ರ ಅಲ್ಲಿ ಮಾತ್ರ ಹೇಳಬಾರದು. ಹೀಗೆ ಪೂರ್ವಪಕ್ಷಪ್ರಾಪ್ತವಾದರೆ ಸಿದ್ಧಾಂತಿಯು ಖಂಡಿಸುತ್ತಾನೆ. 'ಇತಿಚೇನ್ನ—' ಇತಿ. ಶ್ಯೇನಯಾಗದಲ್ಲಿ ಹಿಂಸಾತ್ವವನ್ನು ಹೋಗಲಾಡಿಸಲು 'ಅದೃಷ್ಟಾದ್ವಾರಕಂ ಯಚ್ಛತ್ರುಮರಣಾನುಕೂಲಂ ಕರ್ಮ' ತತ್ ಹಿಂಸಾ' ಎಂದು ಹಿಂಸಾಲಕ್ಷಣ ಹೇಳಬೇಕು. ಶ್ಯೇನಯಾಗದಲ್ಲಿ ಅದೃಷ್ಟದ್ವಾರಕತ್ವ ಇರುವುದರಿಂದ ಹಿಂಸೆಯಾಗುವುದಿಲ್ಲ. ಅದರಿಂದ ಒಂದು ಅಪೂರ್ವ ವುಂಟಾಗಿ ಅದರಿಂದ ಶತ್ರುಮರಣವುಂಟಾಗುತ್ತದೆ. ಶ್ಯೇನಯಾಗವು ಸಾಕ್ಷಾತ್ತಾಗಿ ಶತ್ರುವಧೆಯನ್ನುಂಟುಮಾಡುವುದಿಲ್ಲ. ಆದುದರಿಂದ ಅಲ್ಲಿ ವಿಧಿಲಕ್ಷಣಬರಲು ಯಾವ ತೊಂದರೆಯೂ ಇಲ್ಲ. ಅತಏವ—ಹಿಂಸಾಲಕ್ಷಣದಲ್ಲಿ ಅದೃಷ್ಟಾದ್ವಾರಕತ್ವವಿಶೇಷಣ ಕೊಟ್ಟಿದ್ದರಿಂದಲೇ ಕಾಶಿಯಲ್ಲಿ ಮರಣವಾಗಬೇಕೆಂಬ ಉದ್ದೇಶದಿಂದಲೇ ಶಿವಪೂಜೆ ಮಾಡುವುದು ಹಿಂಸೆಯಾಗುವುದಿಲ್ಲ. ಇಲ್ಲವಾದರೆ ಅಲ್ಲಿಯೂ ಮರಣೋದ್ದೇಶ್ಯತ್ವವಿರು ವುದರಿಂದ ಅದೂ ಹಿಂಸೆಯಾದೀತು. ಈಗ ವಿಶೇಷಣಹೇಳಿರುವುದರಿಂದ ಶಿವಪೂಜೆ ಯಿಂದ ಅದೃಷ್ಟವುಂಟಾಗಿ ಕಾಲಾನಂತರ ಅದರಿಂದ ಕಾಶಿಯಲ್ಲಿ ಮರಣವಾಗುತ್ತದೆ.

ತಟಸ್ಥನಾದವನೊಬ್ಬನು ಶಂಕಿಸುತ್ತಾನೆ. 'ನಚ—' ಇತಿ. ಶ್ಯೇನಯಾಗದಲ್ಲಿ

ಹಿಂಸಾತ್ವ ತಪ್ಪಿಸಲು ಅದೃಷ್ಟಾದ್ವಾರಕತ್ವವಿಶೇಷಣಸೇರಿಸುವುದಕ್ಕಿಂತ ಸಾಕ್ಷಾತ್ತಾಗಿ ಯಾವುದು ಮರಣಜನಕವೋ ಅದೇ ಹಿಂಸಾ ಎಂದರೆ ಲಾಘವವಿಲ್ಲವೇ ? ಶ್ಯೇನಯಾಗ ಸಾಕ್ಷಾತ್ತಾಗಿ ಶತ್ರುಮರಣಜನಕವಾಗುವುದಿಲ್ಲ. ಆದರಿಂದ ಒಂದು ಅಪೂರ್ವ ಉಂಟಾಗಿ ತನ್ಮೂಲಕ ಶತ್ರುವಧೆಯಾಗುತ್ತದೆ. ಶ್ಯೇನಜನ್ಯವಾದ ಅಪೂರ್ವವೇ ಸಾಕ್ಷಾನ್ಮರಣಜನಕವಾದುದರಿಂದ ಶ್ಯೇನದಲ್ಲಿ ಹಿಂಸಾತ್ವಬರುವುದಿಲ್ಲವೆಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಖಡ್ಗಾಘಾತ—' ಇತಿ. ಬ್ರಾಹ್ಮಣನಿಗೆ ಖಡ್ಗಾಘಾತ ಮಾಡಿದಾಗ ಅವನು ಮರಣಹೊಂದುವುದಿಲ್ಲ. ಆಗ ಉಂಟಾದ ಗಾಯ ಬಲವಾಗಿ ಕಾಲಾನಂತರಮರಣಹೊಂದುತ್ತಾನೆ. ಅಲ್ಲಿ ಸಾಕ್ಷಾತ್ತಾಗಿ ಮರಣಜನಕವಾದದ್ದು ಗಾಯವಾದುದರಿಂದ ಬ್ರಾಹ್ಮಣವಧ ಹಿಂಸೆಯಾಗದೇ ಹೋಗಬೇಕಾಗುತ್ತದೆ. ಆದುದರಿಂದ ಹಿಂಸಾಲಕ್ಷಣದಲ್ಲಿ ಅದೃಷ್ಟದ್ವಾರಕತ್ವವಿಶೇಷಣದಿಂದಲೇ ಶ್ಯೇನಯಾಗವಲ್ಲಿ ಹಿಂಸಾತ್ವವಿಲ್ಲವೆಂದು ಸಾಧಿಸಬೇಕು.

'ಚೋದನಾಲಕ್ಷಣೋಽರ್ಥಃ ಧರ್ಮಃ' ಎಂಬ ಮೀಮಾಂಸಾಸೂತ್ರದಲ್ಲಿ 'ಅರ್ಥತ್ವೇ ಸತಿ ಚೋದನಾಗಮ್ಯತ್ವಂ' ಎಂದು ಧರ್ಮಲಕ್ಷಣ ಹೇಳಿದೆ. ಕೇವಲ ಅರ್ಥತ್ವಂ ಅಂದರೆ ಘಟಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಆದುದರಿಂದ ಚೋದನಾಗಮ್ಯತ್ವ ಹೇಳಿದೆ. ಕೇವಲ 'ಚೋದನಾಗಮ್ಯತ್ವಂ' ಎಂದರೆ ಶ್ಯೇನಾದಿಗಳಲ್ಲಿ ಅತಿವ್ಯಾಪ್ತಿ. ಅದಕ್ಕೋಸ್ಕರ ಅರ್ಥಃ ಎಂದು ಹೇಳಿದೆ. ಶ್ಯೇನಯಾಗಕ್ಕೆ ಶತ್ರುವಧೆಯು ಫಲವಾದರೂ ಆ ಶತ್ರುವಧೆ ನರಕಕ್ಕೆ ಕಾರಣವಾದುದರಿಂದ ಶತ್ರುವಧಮೂಲಕವಾಗಿ ಶ್ಯೇನಯಾಗವು ಅನರ್ಥವೆಂದು ಹೇಳಿದೆ.

ಕೇಚಿತ್ತು—ಶ್ಯೇನಸ್ಯ ಹಿಂಸಾ ಫಲಂ ನ ತು ಮರಣಮ್ । ತೇನ ಶ್ಯೇನಜನ್ಯಖಡ್ಗಘಾತಾದಿರೂಪಾ ಹಿಂಸಾಽಭಿಚಾರಪದಾರ್ಥಃ । ತಸ್ಯ ಚ ಪಾಪಜನಕತ್ವಮ್ । ಅತಃ ಶ್ಯೇನಸ್ಯ ವೈಧತ್ವಾತ್ ಪಾಪಜನಕತ್ವೇಪಿ ಅಗ್ರಿಮಪಾಪಂ ಪ್ರತಿಸಂಧಾಯ ಸಂತೋ ನ ಪ್ರವರ್ತಂತ ಇತ್ಯಾಹುಃ ॥

ಅದೃಷ್ಟಾದ್ವಾರಕತ್ವವಿಶೇಷಣವಿಲ್ಲದೇ ಶ್ಯೇನಯಾಗದಲ್ಲಿ ಬಲವದನಿಷ್ಟಾನನುಬಂಧಿತ್ವವಿಷಯವನ್ನು ಉಪಪಾದನೆಮಾಡುವವರ ಮತವನ್ನು ತೋರಿಸುತ್ತಾನೆ. 'ಕೇಚಿತ್—' ಇತಿ. ಪ್ರಾಚೀನರಲ್ಲಿ ಕೆಲವರು ಎಂದರ್ಥ. ಹಿಂಸಾಫಲವೆಂದರೆ ಸಾಕ್ಷಾನ್ಮರಣಫಲಕವಾದ ವ್ಯಾಪಾರವು ಫಲವೆಂದರ್ಥ. ಯಾವ ಶತ್ರುವನ್ನುದ್ದೇಶಿಸಿ ಶ್ಯೇನಯಾಗಮಾಡುತ್ತಾನೋ ಆಗ ಆ ಶತ್ರುವಿನಮೇಲೆ ತಾನಾಗಿ ಅವನಮರಣಸಾಧಕವಾದ ಖಡ್ಗಪಾತಾದಿವ್ಯಾಪಾರವೇ ಶ್ಯೇನಕ್ಕೆ ಫಲ. ಶತ್ರುಮರಣ ಫಲವಾಗುವುದಿಲ್ಲ. ತೇನ—ಆ ಕಾರಣದಿಂದ. ಶ್ಯೇನಯಾಗಕ್ರಿಯಾದಿಂದ ಉಂಟಾದ ಖಡ್ಗಾಘಾತಾದಿ ಕ್ರಿಯೆಯೇ ಹಿಂಸೆಯಾಗುತ್ತದೆ. ಆ ಹಿಂಸೆಯೇ ಅಭಿಚಾರಪದಕ್ಕೆ ಅರ್ಥ. 'ತಸ್ಯಚ—' ಇತಿ. ಆ ಖಡ್ಗಾಘಾತಾದಿರೂಪಅಭಿಚಾರವೇ ಪಾಪಜನಕವಾಗುತ್ತದೆ.

ಇದೇ 'ಅಭಿಚಾರನುಹೀನಂಚ—' ಎಂದು ಹಿಂದೆ ಹೇಳಿದ ಶಾಸ್ತ್ರದಿಂದ ಬೋಧಿತವಾಗಿದೆ. ಸಾಕ್ಷಾತ್ತಾಗಿ ಶ್ಯೇನಯಾಗಕ್ರಿಯಾ ಪಾಪಜನಕವಾಗುವುದಿಲ್ಲ. ಇದನ್ನೇ 'ಅತಃ—' ಎಂದು ವಿವರಿಸುತ್ತಾನೆ. ವಿಧಿದೃಷ್ಟವಾದುದರಿಂದ ದೋಷಕ್ಕೆ ಅವಕಾಶವಿಲ್ಲವೆಂದು ತಾತ್ಪರ್ಯ. ವಿಧಿಯಾದರೂ ಆರ್ಯರಿಗೆ ಅಲ್ಲಿ ಪ್ರವೃತ್ತಿ ಬಾರದಿರಲು ಕಾರಣ ತೋರಿಸುತ್ತಾನೆ. 'ಅಪ್ರಿಮು—' ಇತಿ. ಸಾಕ್ಷಾತ್ ಪಾಪಜನಕವಾಗದಿದ್ದರೂ ಖಡ್ಗಾದ್ಯಭಿಘಾತದಿಂದ ಆಗುವ ಪಾಪವನ್ನು ಯೋಚಿಸಿ ಇದು ಪಾಪಕ್ಕೆ ಪ್ರಯೋಜಕವೆಂದು ಅದರಲ್ಲಿ ಪ್ರವರ್ತಿಸುವುದಿಲ್ಲವೆಂದು ತಾತ್ಪರ್ಯ.

ಆಚಾರ್ಯಾಸ್ತು ಆಪ್ತಾಭಿಪ್ರಾಯೋ ವಿಧ್ಯರ್ಥಃ । ಪಾಕಂ ಕುರ್ಯಾ ಇತ್ಯಾದಾವಾಜ್ಞಾದಿರೂಪೇಚ್ಛಾವಾಚಿತ್ವವಲ್ಲಿಙ್ಮಾತ್ರಸ್ಯೇಚ್ಛಾವಾಚಿತ್ವಂ ಲಾಘವಾತ್ ! ಏವಂ ಚ ಸ್ವರ್ಗಕಾಮೋ ಯಜೇತೇತ್ಯಾದೌ ಯಾಗಃ ಸ್ವರ್ಗಕಾಮಕೃತಿಸಾಧ್ಯತಯಾ ಆಪ್ತೇಷ್ಟ ಇತ್ಯರ್ಥಃ । ತತಶ್ಚಾಪ್ತೇಷ್ಟತ್ವೇನೇಷ್ಟಸಾಧನತ್ವಾದಿಕಮನುಮಾಯ ಪ್ರವರ್ತತೇ । ಕಲಂಜಭಕ್ಷಣೇ ತದಭಾವಾನ್ನ ಪ್ರವರ್ತತೇ ॥

ಉದಯನಾಚಾರ್ಯರಮತವನ್ನು ತೋರಿಸುತ್ತಾನೆ. 'ಆಚಾರ್ಯಾ—' ಇತಿ. ಆಪ್ತಾಭಿಪ್ರಾಯವೇ ವಿಧ್ಯರ್ಥ. ಇದು ಇಷ್ಟಸಾಧನತ್ವಕ್ಕೆ ಅನುಮಾಪಕವಾಗುತ್ತದೆ. ಇಷ್ಟಸಾಧನಾಜ್ಞಾನವೇ ಪ್ರವರ್ತಕವಾಗುತ್ತದೆ 'ಪಾಕಂ ಕುರ್ಯಾ—' ಇತಿ. ಈ ವಾಕ್ಯದಲ್ಲಿ ಲಿಙಿನಿಂದ ಆಜ್ಞಾದಿರೂಪೇಚ್ಛೆ ತೋರುತ್ತದೆ. ಇದರಂತೆ ಬೇರೆಸ್ಥಳದಲ್ಲಿಯೂ ಲಿಙಿಗೆ ಇಚ್ಛಾವಾಚಕತ್ವ ಹೇಳಬೇಕು. ಬಲವದನಿಷ್ಟಾನನುಬಂಧಿತ್ವವಿಶಿಷ್ಟೇಷ್ಟಸಾಧನತ್ವರೂಪ ಅರ್ಥಕ್ಕಿಂತ ಇಚ್ಛಾತ್ವರೂಪದಿಂದ ವಿಧಿಗೆಶಕ್ತಿಕಲ್ಪನೆಮಾಡುವುದು ಲಾಘವವಾಗುತ್ತದೆ. ಹೀಗೆ ಅಂಗೀಕರಿಸಿ ವೈದಿಕವಾಕ್ಯದಲ್ಲಿ ಶಾಬ್ದಬೋಧ ತೋರಿಸುತ್ತಾನೆ. 'ಏವಂಚ—' ಇತಿ. ಇದರಿಂದ ಇಷ್ಟಸಾಧನತ್ವಾನುಮಾನ— 'ಯಾಗಃ ಮನುಸ್ವರ್ಗಕಾಮಸ್ಯ ಬಲವದನಿಷ್ಟಾನನುಬಂಧೀಷ್ಟಸಾಧನಂ—ಮತ್ಕೃತಿಸಾಧ್ಯತಯಾ ಪ್ರೇಪ್ಸ್ಯಮಾಣತ್ವಾತ್॥ ಮನ್ಮಾತ್ರಕೃತಿಸಾಧ್ಯತಯೇಪ್ಸ್ಯಮಾಣಮದ್ಭೋಜನವತ್ ॥ ಕಲಂಜಭಕ್ಷಣವು ಆಪ್ತೇಷ್ಟವಾಗದಿರುವುದರಿಂದ ಅದರಿಂದ ಇಷ್ಟಸಾಧನತ್ವವು ಅನುಮಿತವಾಗದಿರುವುದರಿಂದ ಅದರಲ್ಲಿ ಪ್ರವೃತ್ತಿಯುಂಟಾಗುವುದಿಲ್ಲವೆಂದು ಅವರ ಅಭಿಪ್ರಾಯ.

ಯಸ್ತು ವೇದೇ ಪೌರುಷೇಯತ್ವಂ ನಾಭ್ಯುಪೈತಿ ತಂ ಪ್ರತಿ ವಿಧಿರೇವ ತಾವದ್ಗರ್ಭ ಇವ ಶ್ರುತಿಕುಮಾರ್ಯಾಃ ಪುಂಯೋಗೇ ಮಾನಮ್ । ನ ಚ ಕರ್ತ್ರಸ್ಮರಣಂ ಬಾಧಕಂ, ಕಪಿಲಕಣಾದಾದಿಭಿರದ್ಯಪರ್ಯಂತಂ ಕರ್ತೃಸ್ಮರಣಸ್ಯೈವ ಪ್ರತೀಯಮಾನತ್ವಾತ್ । ಅನ್ಯಥಾ ಸ್ಮೃತೀನಾಮಪ್ಯಕರ್ತೃಕತ್ವಾಪತ್ತೇಃ । ತತ್ರೈವ ಕರ್ತೃಸ್ಮರಣಮಸ್ತೀತಿ ಚೇದ್ವೇದೇಪಿ 'ಛಂದಾಂಸಿ ಜಜ್ಞಿರೇ ತಸ್ಮಾತ್' ಇತ್ಯಾದಿ ಕರ್ತೃಸ್ಮರಣಮಸ್ತ್ಯೇವ । ಏವಂ 'ಪ್ರತಿಮನ್ವಂತರಂ ಚೈಷಾ ಶ್ರುತಿರನ್ಯಾ ವಿಧೀಯತೇ' ಇತ್ಯಪಿ ದ್ರಷ್ಟವ್ಯಮ್ ॥

ಲಿಙಾದಿಗಳಿಂದ ಇಚ್ಛೆ ಅಭಿಹಿತವಾಗುವುದಾದರೆ ವೇದದಲ್ಲಿ ಹೇಳುವವರು ಯಾರೂ ಇಲ್ಲದಿರುವುದರಿಂದ ಯಾರ ಇಚ್ಛೆ ಹೇಳುವುದು ? ಎಂಬ ಶಂಕೆ ಬಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಯಸ್ತು—' ಇತಿ. ಮೀಮಾಂಸಕನು ಪುರುಷ ನಿರ್ಮಿತವೆಂದು ಅಂಗೀಕರಿಸದಿದ್ದರೂ ಶ್ರುತಿಕುಮಾರಿಯ ವಿಧಿಗರ್ಭವೇ ವೇದವನ್ನು ಹೇಳಿದ ಈಶ್ವರನಿದ್ದಾನೆ ಎಂಬುದರಲ್ಲಿ ಪ್ರಮಾಣವಾಗುತ್ತದೆ. ವಿಧಿವಾಕ್ಯವೇ ಗರ್ಭ ವೆಂಬುದುರೂಪಕ. ಪುರುಷಸಂಬಂಧವಿಲ್ಲದೆ ಕುಮಾರಿಗೆ ಗರ್ಭ ಹೇಗೆ ಉಂಟಾಗುವು ದಿಲ್ಲವೋ ಹಾಗೆ ವೇದಹೇಳಿದವನಿಲ್ಲದಿದ್ದರೆ ವೇದದಲ್ಲಿ ವಿಧಿಯೇ ಸಂಭವಿಸಲಾರದು. ಶಂಕಿಸುತ್ತಾನೆ. 'ನಚ— ಇತಿ. ಇದುವರೆಗೂ ಯಾರೂ ವೇದಕರ್ತೃವನ್ನು ಸ್ಮರಿಸ ದಿರುವಾಗ ಕರ್ತೃ ಇದ್ದಾನೆ ಎಂದು ಹೇಳುವುದು ಹೇಗೆ ? 'ವೇದಃ—ಅಪೌರು ಷೇಯಃ—ಅಸ್ಮರ್ಯಮಾಣಕರ್ತೃಕತ್ವಾತ್' ಎಂಬ ಅನುಮಾನ ವೇದ ಸಕರ್ತೃಕ ವೆಂಬುದರಲ್ಲಿ ಬಾಧಕವೆಂದು ಮೀಮಾಂಸಕನ ಆಶಂಕೆ. ಅದಕ್ಕೆ ಸಮಾಧಾನ— 'ಕಪಿಲ—' ಇತಿ. ಕಪಿಲ, ಕಣಾದ ಗೌತಮಮೊದಲಾದವರಿಂದ ಆರಂಭಿಸಿ ಇವತ್ತಿನ ವರೆಗೂ ವೇದವು ಈಶ್ವರಕರ್ತೃಕವೆಂದೇ ಸ್ಮೃತವಾಗಿದೆಯೆಂದು ತಾತ್ಪರ್ಯ. ಹಾಗೆ ವೇದ ಸಕರ್ತೃಕವಲ್ಲವೆಂದರೆ ಸ್ಮೃತಿಗಳಿಗೂ ಕರ್ತೃವಿಲ್ಲವೆಂದು ಹೇಳಲಿ ಎಂದು ಪ್ರತಿಬಂದಿ ಯಾಗಿ ಹೇಳುತ್ತಾನೆ. 'ಅನ್ಯಥಾ—' ಇತಿ. ಮನ್ವಾದಿಸ್ಮೃತಿಗಳಲ್ಲಿ ಆಯಾಯ ಸ್ಮೃತಿಕರ್ತರ ಸ್ಮರಣವೇ ಇರುವುದರಿಂದ ಸ್ಮೃತಿಗಳು ಅಪೌರುಷೇಯವಲ್ಲವೆಂದರೆ ವೇದ ದಲ್ಲಿಯೇ ತದುತ್ಪತ್ತಿ ವರ್ಣಿತವಾದುದರಿಂದ ಅದೂ ಪೌರುಷೇಯವೆಂದು ತೋರಿಸು ತ್ತಾನೆ. 'ಛಂದಾಸಿ—' ಇತಿ. ಇದು ಪುರುಷಸೂಕ್ತದ ಮಂತ್ರ. ಹೀಗೆ ಶ್ರುತಿ ಪ್ರಮಾಣತೋರಿಸಿ ವೇದಸಕರ್ತೃವೆಂಬುದರಲ್ಲಿ ಸ್ಮೃತಿಪ್ರಮಾಣ ತೋರಿಸುತ್ತಾನೆ. 'ಏವಂ—' ಇತಿ. ಪ್ರತಿಮನ್ವಂತರದಲ್ಲಿಯೂ ಅಂದರೆ ಪ್ರತಿಕಲ್ಪದಲ್ಲಿಯೂ ಬೇರೆ ಬೇರೆ ಶ್ರುತಿಯಾಗುತ್ತದೆಂದು ಹೇಳಿರುವುದೂ ಪ್ರಮಾಣವಾಗುತ್ತದೆ.

ಸ್ವಯಂಭೂರೇಷ ಭಗವಾನ್ವೇದೋ ಗೀತಸ್ತ್ವಯಾ ಪುರಾ ||
ಶಿವಾದ್ಯಾ ಋಷಿಪರ್ಯಂತಾಃ ಸ್ಮರ್ತಾರೋಽಸ್ಯ ನ ಕಾರಕಾಃ ||

ಇತಿ ತು ವೇದಸ್ಯ ಸ್ತುತಿಮಾತ್ರಮ್ । ನ ಚ ಪೌರುಷೇಯತ್ವೇ ಭ್ರಮಾದಿಸಂಭವಾದ ಪ್ರಾಮಾಣ್ಯಂ ಸ್ಯಾದಿತಿ ವಾಚ್ಯಮ್ । ನಿತ್ಯಸರ್ವಜ್ಞತ್ವೇನ ನಿರ್ದೋಷತ್ವಾತ್ । ಅತ ಏವ ಪುರುಷಾಂತರಸ್ಯ ಭ್ರಮಾದಿಸಂಭವಾನ್ನ ಕಪಿಲಾದೇರಪಿ ಕರ್ತೃತ್ವಂ ವೇದಸ್ಯ । ಕಿಂಚ ವರ್ಣಾನಾಮೇವಾನಿತ್ಯತ್ವಸ್ಯ ವಕ್ಷ್ಯಮಾಣತ್ವಾತ್ತತರಾಂ ತತ್ಸಂದರ್ಭಸ್ಯ ವೇದಸ್ಯಾನಿತ್ಯತ್ವಮಿತಿ ಸಂಕ್ಷೇಪಃ || ಉಪಾದಾನಸ್ಯ ಸಮವಾಯಿ ಕಾರಣಸ್ಯಾಧ್ಯಕ್ಷಂ ಪ್ರತ್ಯಕ್ಷಂ ಪ್ರವೃತ್ತೌ ಕಾರಣಮಿತಿ ||

'ವೇದ ತಾನಾಗಿ ಆಗಿದೆ. ಇದಕ್ಕೆ ಯಾರೂ ಕಾರಕರಿಲ್ಲ. ಋಷಿಗಳು ಇದನ್ನು

ಸ್ಮರಿಸಿದವರು' ಎಂದು ಅರ್ಥಕೊಡುವ 'ಸ್ವಯಂಭೂಃ—' ಶ್ಲೋಕವು ಭಾರತದಲ್ಲಿ ಹೇಳಿದೆ. ಪೂರ್ವೋಕ್ತ ಪ್ರಮಾಣಗಳಿಂದ ಈ ವಾಕ್ಯಕ್ಕೆ ಸ್ವಾರ್ಥದಲ್ಲಿ ತಾತ್ಪರ್ಯವಿಲ್ಲವೆಂದು ವೇದಸ್ತುತಿಯಲ್ಲಿ ತಾತ್ಪರ್ಯವೆಂದೂ ತಿಳಿಯಬೇಕು. ಪುನಃ ಶಂಕಿಸುತ್ತಾನೆ. ನಚ—' ಇತಿ. ಪುರುಷನಿಗೆ ಭ್ರಮಪ್ರಮಾದಾದಿದೋಷಸಂಭವಿಸುವುವರಿಂದ ವೇದಕ್ಕೆ ಕರ್ತೃ ಒಬ್ಬನಿದ್ದಾನೆ ಎಂದರೆ ಅವನಿಗೂ ಈ ದೋಷಸಂಭವಿಸುವುದರಿಂದ ವೇದಕ್ಕೆ ಅಪ್ರಾಮಾಣ್ಯ ಬರುವುದಿಲ್ಲವೇ ಎಂದು ಶಂಕೆಯ ತಾತ್ಪರ್ಯ. ಅದಕ್ಕೆ ಸಮಾಧಾನ— ಈಶ್ವರನು ನಿತ್ಯಸರ್ವವಿಷಯಕಜ್ಞಾನವುಳ್ಳವನಾದುದರಿಂದ ಅವನಿಗೆ ಭ್ರಮಾದಿದೋಷ ಸಂಭಾವನೆಯೇ ಇಲ್ಲ. ಆದುದರಿಂದ ಅವನು ಹೇಳಿದ ವೇದಕ್ಕೂ ಅಪ್ರಾಮಾಣ್ಯ ಶಂಕೆಗೇ ಅವಕಾಶವಿಲ್ಲ. ಅತಏವ—ನಿತ್ಯಸರ್ವಜ್ಞನಾದ ಈಶ್ವರನೇ ವೇದಕರ್ತೃವಾದುದರಿಂದ ಕಪಿಲಾದಿಗಳಿಗೆ ಅದು ಸಂಭವಿಸುವುದಿಲ್ಲ. ವೇದ ಪೌರುಷೇಯ ಎಂಬುದರಲ್ಲಿ ಬೇರೆಯುಕ್ತಿ ತೋರಿಸುತ್ತಾನೆ. 'ವರ್ಣಾನಾಂ—' ಇತಿ. ವರ್ಣಗಳು ಅನಿತ್ಯವೆಂದು ಮುಂದೆ ಸ್ಥಾಪಿಸುತ್ತಾನೆ. ವರ್ಣಸಂದರ್ಭವೇ ಅಂದರೆ ವರ್ಣಾನುಪೂರ್ವೀವಿಶೇಷವೇ ವೇದವಾದುದರಿಂದ ಅದು ಅನಿತ್ಯವೆಂದು ತಿರುಗಿ ಹೇಳಬೇಕಾಗಿಲ್ಲ. ಇದರ ವಿಸ್ತರವನ್ನು ಆಕರಗ್ರಂಥಗಳಿಂದ ತಿಳಿಯಬೇಕೆಂದು 'ಸಂಕ್ಷೇಪಃ' ಎಂದಿರುತ್ತಾನೆ. ಪ್ರವೃತ್ತಿಗೆ ಬೇಕಾಗುವ ನಾಲ್ಕನೇಕಾರಣವನ್ನು ಕಾರಿಕೆಯಲ್ಲಿ ಹೇಳಿರುವುದನ್ನು ವಿವರಿಸುತ್ತಾನೆ. ಉಪಾದಾನವೆಂದರೆ ಸಮವಾಯಿಕಾರಣ. ಅದರ ಪ್ರತ್ಯಕ್ಷವೂ ಪ್ರವೃತ್ತಿಗೆ ಕಾರಣವೆಂದರ್ಥ. ||

**ನಿವೃತ್ತಿಸ್ತು ಭವೇದ್ದ್ವೇಷಾದ್ದ್ವಿಷ್ಟಸಾಧನತಾಧಿಯಃ || ೧೫೧ ||**

ನಿವೃತ್ತಿರಿತಿ | ದ್ವಿಷ್ಟಸಾಧನತಾಜ್ಞಾನಸ್ಯ ನಿವೃತ್ತಿಂ ಪ್ರತಿ ಜನಕತ್ವಮನ್ವಯವ್ಯತಿರೇಕಾಭ್ಯಾಮವಧಾರಿತಮಿತಿ ಭಾವಃ || ೧೫೧ ||

ಎರಡನೆಯ ನಿವೃತ್ತಿರೂಪಪ್ರಯತ್ನದಲ್ಲಿ ಕಾರಣವನ್ನು ತೋರಿಸುತ್ತಾನೆ. 'ನಿವೃತ್ತಿಃ—' ಇತಿ. ದ್ವಿಷ್ಟಸಾಧನತಾಜ್ಞಾನದಿಂದ ದ್ವೇಷವೂ ದ್ವೇಷದಿಂದ ನಿವೃತ್ತಿಯೂ ಉಂಟಾಗುತ್ತದೆಂದು ತಾತ್ಪರ್ಯ. ಪರದ್ರವ್ಯಾಪಹರಣಾದಿಗಳಿಂದ ಸೆರೆಮನೆ ಮುಂತಾದ ಕ್ಲೇಶ ಅನುಭವಿಸಬೇಕಾಗಿದೆಯೆಂಬ ದ್ವೇಷದಿಂದ ಅಲ್ಲಿಂದ ನಿವೃತ್ತಿ ಹೊಂದುತ್ತಾನೆ. ದ್ವೇಷಮೂಲಕವಾದ ಪ್ರಯತ್ನವಿಶೇಷವೇ ನಿವೃತ್ತಿಯೆಂದು ಫಲಿತವಾಗುತ್ತದೆ. ಪ್ರವೃತ್ತ್ಯಭಾವವೇ ನಿವೃತ್ತಿಯೆಂದು ಕೆಲವರಮತ.

**ಯತ್ನೋ ಜೀವನಯೋನಿಸ್ತು ಸರ್ವದಾತೀಂದ್ರಿಯೋ ಭವೇತ್ ||**
**ಶರೀರೇ ಪ್ರಾಣಸಂಚಾರೇ ಕಾರಣಂ ಪರಿಕೀರ್ತಿತಮ್ || ೧೫೨ ||**

ಯತ್ನ ಇತಿ | ಜೀವನಯೋನಿಯತ್ನೋ ಯಾವಜ್ಜೀವಮನುವರ್ತತೇ | ಸದಾತೀಂದ್ರಿಯಃ |

ತತ್ರ ಪ್ರಮಾಣಮಾಹ—ಶರೀರ ಇತಿ । ಪ್ರಾಣಸಂಚಾರೋ ಹಿ ಅಧಿಕ ಶ್ವಾಸಾದಿಃ ಯತ್ನಸಾಧ್ಯಃ । ಇತ್ಥಂ ಚ ಪ್ರಾಣಸಂಚಾರಸ್ಯ ಸರ್ವಸ್ಯ ಯತ್ನ ಸಾಧ್ಯತ್ವಾನುಮಾನಾತ್ ಪ್ರತ್ಯಕ್ಷಯತ್ನಬಾಧಾಚ್ಚಾತೀಂದ್ರಿಯಯತ್ನಸಿದ್ಧಿಃ । ಸ ಏವ ಜೀವನಯೋನಿರ್ಯತ್ನಃ ॥ ೧೫೩ ॥

ಮೂರನೆಯ ಪ್ರಯತ್ನವನ್ನು ತೋರಿಸುತ್ತಾನೆ. 'ಜೀವನ—' ಇತಿ. ಜೀವನಕ್ಕೆ ಕಾರಣವಾದ ಈ ಪ್ರಯತ್ನವು ಆಯುಸ್ಸಿರುವವರೆಗೂ ಇರುತ್ತದೆ. ಇದು ಇಂದ್ರಿಯಕ್ಕೆ ಗೋಚರವಾಗುವುದಿಲ್ಲ. ಈ ಯತ್ನಕ್ಕೆ ಪ್ರಮಾಣತೋರಿಸುತ್ತಾನೆ. 'ಶರೀರ—' ಇತಿ. ಶ್ವಾಸೋಚ್ಛ್ವಾಸಾದಿಗಳಾಗಲೀ, ಕಣ್ಣುಮುಚ್ಚುವುದು ತೆರೆಯುವುದಾಗಲೀ ಇವು ಪ್ರಯತ್ನಸಾಧ್ಯಗಳು. ಇದೇ ಜೀವನಯೋನಿಯತ್ನವಾಗುತ್ತದೆ. ಇದು ಅನುಮಾನ ಗಮ್ಯವಾದುದರಿಂದ ಪ್ರತ್ಯಕ್ಷವಿಷಯವಾಗುವುದಿಲ್ಲ. ಸುಷುಪ್ತ್ಯವಸ್ಥೆಯಲ್ಲಿಯೂ ಈ ಪ್ರಾಣಸಂಚಾರ ಒಂದೇರೀತಿಯಾಗಿರುವುದರಿಂದ ಪ್ರಾಣಸಂಚಾರದಿಂದ ಅನುಮೇಯ ವಾಗುತ್ತದೆ. ಆದುದರಿಂದಲೇ ಅತೀಂದ್ರಿಯವಾಗುತ್ತದೆ. ॥ ೧೫೩ ॥

**ಅತೀಂದ್ರಿಯಂ ಗುರುತ್ವಂ ಸ್ಯಾತ್ ಪೃಥಿವ್ಯಾದಿದ್ವಯೇ ತು ತತ್ ॥**
**ಅನಿತ್ಯೇ ತದನಿತ್ಯಂ ಸ್ಯಾನ್ನಿತ್ಯೇ ನಿತ್ಯಮುದಾಹೃತಮ್ ॥ ೧೫೪ ॥**
**ತದೇವಾಸಮವಾಯಿ ಸ್ಯಾತ್ಪತನಾಖ್ಯೇ ತು ಕರ್ಮಣಿ ॥**

ಗುರುತ್ವಂ ನಿರೂಪಯತಿ—ಅತೀಂದ್ರಿಯಮಿತಿ । ಅನಿತ್ಯೇ ಇತಿ ! ಅನಿತ್ಯೇದ್ವ್ಯಣು ಕಾದೌ ತದ್‌ಗುರುತ್ವಮಸಮವಾಯಿ, ಅಸಮವಾಯಿಕಾರಣಮ್ । ಪತನಾಖ್ಯ ಇತಿ । ಆದ್ಯಪತನ ಇತ್ಯರ್ಥಃ ॥

ಕ್ರಮಪ್ರಾಪ್ತವಾದ ಗುರುತ್ವಗುಣವನ್ನು ಹೇಳುತ್ತಾನೆ. 'ಅತೀಂದ್ರಿಯ—' ಇತಿ. ಆದ್ಯಪತನಕ್ಕೆ ಅಸಮವಾಯಿಕಾರಣವಾದ ಗುಣವೇ ಗುರುತ್ವವಾಗುತ್ತದೆ. ರೂಪಾದಿ ಗಳಂತೆ ಇದು ನಯನಾದಿಗಳಿಗೆ ಗೋಚರವಾಗುವುದರಿಂದ ಅತೀಂದ್ರಿಯವಾಗುತ್ತದೆ. ಪೃಥಿವೀಜಲಗಳೆರಡರಲ್ಲಿ ಇದು ಇರುತ್ತದೆ. ಅನಿತ್ಯವಾದ ಘಟಾದಿಗಳಲ್ಲಿದ್ದರೆ ಅನಿತ್ಯ, ನಿತ್ಯಪರಮಾಣುಗಳಲ್ಲಿದ್ದರೆ ನಿತ್ಯವಾಗುತ್ತದೆ. ವಸ್ತುಪತನವಾಗುವಾಗ ಆದ್ಯಪತನ ಕ್ರಿಯೆಗೆ ಮಾತ್ರ ಇದು ಅಸಮವಾಯಿಕಾರಣ. ದ್ವಿತೀಯಾದಿಪತನಕ್ರಿಯೆಗಳಿಗೆ ದ್ರವ್ಯ ಕ್ರಿಯಾದಿಗಳೂ ಕಾರಣವಾಗುವುದರಿಂದ ಆದ್ಯವೆಂದು ಹೇಳಿದೆ. ॥

**ಸಾಂಸಿದ್ಧಿಕಂ ದ್ರವತ್ವಂ ಸ್ಯಾನ್ನೈಮಿತ್ತಿಕಮಥಾಪರಮ್ ॥ ೧೫೫ ॥**
**ಸಾಂಸಿದ್ಧಿಕಂ ತು ಸಲಿಲೇ ದ್ವಿತೀಯಂ ಕ್ಷಿತಿತೇಜಸೋಃ ॥**
**ಪರಮಾಣೌಜಲೇ ನಿತ್ಯಮನ್ಯತ್ರಾನಿತ್ಯಮುಚ್ಯತೇ ॥ ೧೫೫ ॥**
**ನೈಮಿತ್ತಿಕಂ ವಹ್ನಿಯೋಗಾತ್ತಪನೀಯಘೃತಾದಿಷು ॥**

**ದ್ರವತ್ವಂ ಸ್ಯಂದನೇ ಹೇತುರ್ನಿಮಿತ್ತಂ ಸಂಗ್ರಹೇ ತು ತತ್ ||೧೫೬||**

ದ್ರವತ್ವಂ ನಿರೂಪಯತಿ—ಸಾಂಸಿದ್ಧಿಕಮಿತಿ | ದ್ರವತ್ವಂ ದ್ವಿವಿಧಂ ಸಾಂಸಿದ್ಧಿಕಂ ನೈಮಿತ್ತಿಕಂಚೇತಿ | ದ್ವಿತೀಯಂ ನೈಮಿತ್ತಿಕಮ್ | ಪರಮಾಣಾವಿತಿ | ಜಲಪರಮಾಣೌ ದ್ರವತ್ವಂ ನಿತ್ಯಮಿತ್ಯರ್ಥಃ | ಅನ್ಯತ್ರ ಪೃಥಿವೀಪರಮಾಣ್ವಾದೌ ಜಲದ್ವ್ಯಣುಕಾದೌ ಚ ದ್ರವತ್ವಮನಿತ್ಯಮ್ | ಕುತ್ರಚಿತ್ತೇಜಸಿ ಕುತ್ರಚಿತ್ಪೃಥಿವ್ಯಾಂ ಚ ನೈಮಿತ್ತಿಕಂ ದ್ರವತ್ವಮ್ || ನೈಮಿತ್ತಿಕಮಿತಿ | ವಹ್ನೀತಿ | ಅಗ್ನಿಸಂಯೋಗಜನ್ಯಂ ನೈಮಿತ್ತಿಕಂ ದ್ರವತ್ವಮ್ | ತಚ್ಚ ಸುವರ್ಣಾದಿರೂಪೇ ತೇಜಸಿ ಘೃತಜತುಪ್ರಭೃತಿ ಪೃಥಿವ್ಯಾಂ ಚ ವರ್ತತೇ ಇತ್ಯರ್ಥಃ | ದ್ರವತ್ವಮಿತಿ | ಹೇತುರಿತಿ | ಅಸಮವಾಯಿಕಾರಣಮಿತ್ಯರ್ಥಃ | ಸಂಗ್ರಹೇ ಸಕ್ತುಕಾದಿಸಂಯೋಗವಿಶೇಷೇ ತದ್ದ್ರವತ್ವಂ ಸ್ನೇಹಸಹಿತಮಿತಿ ಬೋದ್ಧವ್ಯಮ್ | ತೇನ ದ್ರುತಸುವರ್ಣಾದೀನಾಂ ನ ಸಂಗ್ರಹಃ || ೧೫೬ ||

ದ್ರವತ್ವಗುಣದವಿಭಾಗವನ್ನು ತೋರಿಸುತ್ತಾನೆ. 'ಸಾಂಸಿದ್ಧಿಕಂ—' ಇತಿ. ಸ್ಯಂದನವೆಂದರೆ ಹರಿಯುವುದು. ಆದ್ಯಸ್ಯಂದನಕ್ಕೆ ಅಸಮವಾಯಿಕಾರಣವಾದ ಗುಣಕ್ಕೆ ದ್ರವತ್ವವೆಂದು ಹೆಸರು. ಸಾಂಸಿದ್ಧಿಕ, ನೈಮಿತ್ತಿಕವೆಂದು ಇದು ಎರಡುವಿಧವಾಗಿದೆ. ಸಾಂಸಿದ್ಧಿಕದ್ರವತ್ವವು ನೀರಿನಲ್ಲಿಯೂ, ನೈಮಿತ್ತಿಕದ್ರವತ್ವವು ಪೃಥಿವೀ ತೇಜಸ್ಸುಗಳಲ್ಲಿಯೂ ಇರುತ್ತದೆ. ಜಲಪರಮಾಣುವಿನಲ್ಲಿರುವ ದ್ರವತ್ವವು ನಿತ್ಯವಾಗಿಯೂ, ಜಲದ್ವ್ಯಣುಕಾದಿ, ಪೃಥಿವೀ ಪರಮಾಣುಮುಂತಾದವುಗಳಲ್ಲಿರುವ ದ್ರವತ್ವವು ಅನಿತ್ಯವಾಗಿ ಇರುತ್ತದೆ. ನಿಮಿತ್ತದಿಂದ ಹುಟ್ಟುವುದರಿಂದ ನೈಮಿತ್ತಿಕದ್ರವತ್ವವು ಕೆಲವು ತೇಜಸ್ಸುಗಳಲ್ಲಿಯೂ, ಕೆಲವು ಪೃಥಿವೀಗಳಲ್ಲಿಯೂ ಇರುತ್ತದೆ. ಅದನ್ನೇ 'ನೈಮಿತ್ತಿಕಂ—' ಎಂಬುದರಿಂದ ವಿವರಿಸುತ್ತಾನೆ. ಅಗ್ನಿಯಸಂಯೋಗದಿಂದ ಈ ನೈಮಿತ್ತಿಕದ್ರವತ್ವವು ಚಿನ್ನದಲ್ಲಿಯೂ ತುಪ್ಪ ಅರಗು ಮುಂತಾದವುಗಳಲ್ಲಿಯೂ ಪ್ರಸಿದ್ಧವಾಗಿದೆ. ನೀರಿನಲ್ಲಿರುವ ಸಾಂಸಿದ್ಧಿಕದ್ರವತ್ವಕ್ಕೆ ಯಾವಕಾರಣವೂ ಇಲ್ಲ. ಆದ್ಯಸ್ಯಂದನದಲ್ಲಿ ಇದು ಅಸಮವಾಯಿಕಾರಣವಾಗುತ್ತದೆ. ಸಂಗ್ರಹಪದಾರ್ಥ ಸಕ್ತುಕಾದಿಸಂಯೋಗವಿಶೇಷ. ಹುರಿಹಿಟ್ಟು ಮುಂತಾದವುಗಳನ್ನು ಉಂಡೆಕಟ್ಟಬೇಕಾದರೆ ಸ್ನೇಹಸಹಿತವಾದ ದ್ರವತ್ವಕಾರಣವಾಗುತ್ತದೆ.

**ಸ್ನೇಹೋ ಜಲೇ ಸ ನಿತ್ಯೋಽಣಾವನಿತ್ಯೋಽವಯವಿನ್ಯಸೌ |**
**ತೈಲಾಂತರೇ ತತ್ಪ್ರಕರ್ಷಾದ್ದಹನಸ್ಯಾನುಕೂಲತಾ || ೧೫೭ ||**

ಸ್ನೇಹಂ ನಿರೂಪಯತಿ—ಸ್ನೇಹ ಇತಿ | ಜಲೇ ಇತಿ | ಜಲಏವೇತ್ಯರ್ಥಃ | ಅಸೌ ಸ್ನೇಹಃ | ನನು ಪೃಥಿವ್ಯಾಮಪಿ ತೈಲೇ ಸ್ನೇಹ ಉಪಲಭ್ಯತೇ, ನ ಚಾಸೌ

ಜಲೀಯಃ, ತಥಾಸತಿದಹನಪ್ರಾತಿಕೂಲ್ಯಂ ಸ್ಯಾದತ ಆಹ—ತೈಲಾಂತರ ಇತಿ । ತತ್ಪ್ರಕರ್ಷಾತ್ ಸ್ನೇಹಪ್ರಕರ್ಷಾತ್ । ತೈಲೇ ಉಪಲಭ್ಯಮಾನಸ್ನೇಹೋಽಪಿ ಜಲೀಯ ಏವ । ತಸ್ಯ ಪ್ರಕೃಷ್ಟತ್ವಾದಗ್ನೇರಾನುಕೂಲ್ಯಮ್ । ಅಪಕೃಷ್ಟಸ್ನೇಹಂ ಹಿ ಜಲಂ ವಹ್ನಿಂ ನಾಶಯತೀತಿ ಭಾವಃ ॥ ೧೫೭ ॥

ಸ್ನೇಹಗುಣಲಕ್ಷಣವನ್ನು ತೋರಿಸುತ್ತಾನೆ. 'ಸ್ನೇಹ—' ಇತಿ. ಹಿಟ್ಟು ಮುಂತಾದವುಗಳನ್ನು ಉಂಡೆ ಮಾಡಲು ಅನುಕೂಲವಾದ ಗುಣಕ್ಕೆ ಸ್ನೇಹವೆಂದು ಹೆಸರು. ಇದು ನೀರಿನಲ್ಲಿಮಾತ್ರ ಇರುತ್ತದೆ. ಜಲಪರಮಾಣುಗಳಲ್ಲಿ ನಿತ್ಯಸ್ನೇಹವೂ, ಜಲ ದ್ವ್ಯಣುಕಾದಿಗಳಲ್ಲಿ ಅನಿತ್ಯಸ್ನೇಹವೂ ಇರುತ್ತದೆ. 'ತೈಲಾಂತರೇ—' ಇತಿ. ಪೃಥಿವಿ ಯಾದ ತೈಲ ಮುಂತಾದವುಗಳಲ್ಲಿ ಸ್ನೇಹ ತೋರಿದರೂ ಅದು ಅವರೊಳಗೆ ಸ್ನೇರಿರುವ ನೀರಿನಗುಣವೇವಿನಾ ತೈಲಾದಿಗಳ ಸ್ವಾಭಾವಿಕವಾದಗುಣವಲ್ಲ. ಎಣ್ಣೆಯೊಳಗಿರುವ ನೀರಿನಗುಣವೆಂದರೆ ಅದು ಸುಡುವುದಕ್ಕೆ ಪ್ರತಿಬಂಧಕವಾಗುವುದಿಲ್ಲವೆ? ಎಣ್ಣೆ ಹೆಚ್ಚು ಕಾದರೆ ಬೆಂಕಿ ಹಿಡಿಯುತ್ತದೆ. ಅಂದರೆ—ಅಲ್ಲಿರುವ ಸ್ನೇಹಪ್ರಕೃಷ್ಟವಾದುದರಿಂದ ಅದು ದಹನಾನುಕೂಲವಾಗುತ್ತದೆ. ನೀರಿನಲ್ಲಿರುವ ಅಪಕೃಷ್ಟವಾದ ಸ್ನೇಹವು ದಹನಪ್ರತಿ ಕೂಲವಾಗುವುದರಿಂದ ಬೆಂಕಿಯನ್ನು ನಾಶಗೊಳಿಸುತ್ತದೆ ಎಂದು ತಿಳಿಯಬೇಕು. ॥

**ಸಂಸ್ಕಾರಭೇದೋ ವೇಗೋಽಥ ಸ್ಥಿತಿಸ್ಥಾಪಕಭಾವನೇ ॥**
**ಮೂರ್ತಮಾತ್ರೇ ತು ವೇಗಃ ಸ್ಯಾತ್ಕರ್ಮಜೋ ವೇಗಜಃ**
**ಕ್ವಚಿತ್ ॥ ೧೫೮ ॥**
**ಸ್ಥಿತಿಸ್ಥಾಪಕಸಂಸ್ಕಾರಃ ಕ್ಷಿತೌ ಕೇಚಿಚ್ಚತುರ್ಷ್ವಪಿ ।**
**ಅತೀಂದ್ರಿಯೋಽಸೌ ವಿಜ್ಞೇಯಃ ಕ್ವಚಿತ್ಸ್ಪಂದೇಽಪಿ**
**ಕಾರಣಮ್ ॥ ೧೫೯ ॥**

ಸಂಸ್ಕಾರಂ ನಿರೂಪಯತಿ—ಸಂಸ್ಕಾರೇತಿ । ವೇಗ ಸ್ಥಿತಿಸ್ಥಾಪಕಭಾವನಾಭೇದಾತ್ಸಂಸ್ಕಾರ ಸ್ತ್ರಿವಿಧ ಇತ್ಯರ್ಥಃ । ಮೂರ್ತಮಾತ್ರ ಇತಿ । ಕರ್ಮಜವೇಗಜಭೇದಾದ್ವೇಗೋ ದ್ವಿವಿಧ ಇತ್ಯರ್ಥಃ । ಶರೀರಾದೌ ಹಿ ನೋದನಜನಿತೇನ ಕರ್ಮಣಾ ವೇಗೋ ಜನ್ಯತೇ । ತೇನ ಚ ಪೂರ್ವಕರ್ಮನಾಶಸ್ತತ ಉತ್ತರಂ ಕರ್ಮ । ಏವಮಗ್ರೇಪಿ । ವಿನಾ ಚ ವೇಗಂ ಕರ್ಮಣಃ ಕರ್ಮಪ್ರತಿಬಂಧಕತ್ವಾತ್ಪೂರ್ವಕರ್ಮನಾಶ ಉತ್ತರಕರ್ಮೋತ್ಪತ್ತಿಶ್ಚ ನ ಸ್ಯಾತ್ । ಯತ್ರ ವೇಗವತಾ ಕಪಾಲೇನ ಜನಿತೇ ಘಟೇ ವೇಗೋ ಜನ್ಯತೇ ಸ ವೇಗಜೋ ವೇಗಃ ॥ ೧೫೮ ॥ ಸ್ಥಿತಿಸ್ಥಾಪಕೇತಿ । ಅತೀಂದ್ರಿಯ ಇತಿ । ಆಕೃಷ್ಟಶಾಖಾದೀನಾಂ ಪರಿತ್ಯಾಗೇ ಪುನರ್ಗಮನಸ್ಯ ಸ್ಥಿತಿ ಸ್ಥಾಪಕಸಾಧ್ಯತ್ವಾತ್ । ಕೇಚಿದಿತಿ । ಚತುರ್ಷು ಕ್ಷಿತ್ಯಾದಿಷು ಸ್ಥಿತಿಸ್ಥಾಪಕಂ

ಕೇಚಿನ್ಮನ್ಯಂತೇ ತದಪ್ರಮಾಣಮಿತಿ ಭಾವಃ । ಅಸೌ ಸ್ಥಿತಿಸ್ಥಾಪಕಃ । ಕ್ವಚಿದಾ ಕೃಷ್ಟಶಾಖಾದೌ ॥ ೧೫೯ ॥

ಸಂಸ್ಕಾರವನ್ನು ವಿವರಿಸುತ್ತಾನೆ—'ಸಂಸ್ಕಾರ—' ಇತಿ. ವೇಗ, ಸ್ಥಿತಿಸ್ಥಾಪಕ, ಭಾವನಾ, ಎಂದು ಇದು ಮೂರುವಿಧವಾಗಿದೆ. ಮೂರ್ತ ಅಂದರೆ ಪಥಿವೀ, ಅಪ್, ತೇಜಸ್ಸು, ಮನಸ್ಸು ಇವುಗಳಲ್ಲಿ ವೇಗರೂಪಸಂಸ್ಕಾರವಿರುತ್ತದೆ. ಕರ್ಮಜವೇಗ, ವೇಗಜವೇಗವೆಂದು ಈ ವೇಗವು ಎರಡುರೀತಿಯಾಗಿರುತ್ತದೆ. 'ಶರೀರಾದೌ—' ಇತಿ. ಶರೀರಮುಂತಾದವುಗಳಲ್ಲಿ ನೋದನದಿಂದ ಒಂದು ಕರ್ಮವುಂಟಾಗಿ ಅದರಿಂದ ವೇಗ ಉಂಟಾಗುತ್ತದೆ. ಆವೇಗದಿಂದ ಪೂರ್ವಕರ್ಮನಾಶವಾಗಿ ಅದರಿಂದ ಉತ್ತರಕರ್ಮ ಹುಟ್ಟುತ್ತದೆ. ವೇಗವಿಲ್ಲವಾದರೆ ಒಂದುಕರ್ಮ ಇನ್ನೊಂದಕ್ಕೆ ಪ್ರತಿಬಂಧಕವಾಗುವುದರಿಂದ ಪೂರ್ವಕರ್ಮನಾಶ, ಅದರಿಂದ ಮುಂದಿನಕರ್ಮ ಹುಟ್ಟಲಾರದು. ವೇಗವತಾ—' ಇತಿ. ವೇಗವುಳ್ಳಕಪಾಲದಿಂದ ಉಂಟಾದ ಘಟದಲ್ಲಿ ಯಾವ ವೇಗವಿದೆಯೋ ಅದು ಕಪಾಲದಲ್ಲಿರುವವೇಗದಿಂದ ಹುಟ್ಟಿರುವುದರಿಂದ ವೇಗಜವೇಗವಾಗುತ್ತದೆ.

'ಅನ್ಯಥಾಕೃತಸ್ಯ ಪುನಸ್ತದವಸ್ಥಾಪಕಃ ಸ್ಥಿತಿಸ್ಥಾಪಕಸಂಸ್ಕಾರಃ' ಹೂವನ್ನಾರಿಸಿಕೊಳ್ಳಲು ಒಂದು ಮರದಕೊಂಬೆಯನ್ನು ಬಗ್ಗಿಸುತ್ತಾನೆ. ಪುನಃ ಕೈಬಿಟ್ಟಕೂಡಲೇ ಅದು ಮೊದಲಿನಂತೆಯೇ ಆಗುತ್ತದೆ. ಇದಕ್ಕೆ ಕಾರಣವಾದ ಗುಣವೇ ಸ್ಥಿತಿಸ್ಥಾಪಕವಾಗುತ್ತದೆ. ಇದು ಪೃಥಿವಿಯಲ್ಲಿರುತ್ತದೆ. ಕೆಲವರು ಕ್ಷಿತ್ಯಾದಿನಾಲ್ಕರಲ್ಲಿಯೂ ಇರುತ್ತದೆಯೆನ್ನುತ್ತಾರೆ. ಇದಕ್ಕೆ ಪ್ರಮಾಣವಿಲ್ಲ. ಕ್ವಚಿತ್—ಬಗ್ಗಿಸಿದಕೊಂಬೆಮುಂತಾದವುಗಳಲ್ಲಿ ಎಂದರ್ಥ.

**ಭಾವನಾಖ್ಯಸ್ತು ಸಂಸ್ಕಾರೋ ಜೀವವೃತ್ತಿರತೀಂದ್ರಿಯಃ ॥**
**ಉಪೇಕ್ಷಾನಾತ್ಮಕಸ್ತಸ್ಯ ನಿಶ್ಚಯಃ ಕಾರಣಂ ಭವೇತ್ ॥ ೧೬೦ ॥**

ಭಾವನಾಖ್ಯಾ ಇತಿ । ತಸ್ಯ ಸಂಸ್ಕಾರಸ್ಯ । ಉಪೇಕ್ಷಾತ್ಮಕಜ್ಞಾನಾತ್ಸಂಸ್ಕಾರಾನುತ್ಪತ್ತೇರುಪೇಕ್ಷಾನಾತ್ಮಕ ಇತ್ಯುಕ್ತಮ್ । ತತ್ಸಂಶಯಾತ್ಮಸ್ಯಾನುತ್ಪತ್ತೇರ್ನಿಶ್ಚಯ ಇತ್ಯುಕ್ತಮ್ । ತೇನೋಪೇಕ್ಷಾನ್ಯನಿಶ್ಚಯತ್ವೇನ ಸಂಸ್ಕಾರಂ ಪ್ರತಿ ಹೇತುತೇತಿ ಭಾವಃ । ನನು ಸ್ಮರಣಂ ಪ್ರತ್ಯುಪೇಕ್ಷಾನ್ಯನಿಶ್ಚಯತ್ವೇನ ಹೇತುತ್ವಂ ತೇನೋಪೇಕ್ಷಾದಿಸ್ಥಲೇ ನ ಸ್ಮರಣಮ್ । ಇತ್ಥಂ ಚ ಸಂಸ್ಕಾರಂ ಪ್ರತಿ ಜ್ಞಾನತ್ವೇನೈವ ಹೇತುತಾಸ್ತ್ವಿತಿ ಚೇನ್ನ । ವಿನಿಗಮನಾವಿರಹೇಣಾಪಿ ಸಂಸ್ಕಾರಂ ಉಪೇಕ್ಷಾನ್ಯನಿಶ್ಚಯತ್ವೇನ ಹೇತುತಾಯಾಃ ಸಿದ್ಧತ್ವಾತ್ । ಕಿಂಚೋಪೇಕ್ಷಾಸ್ಥಲೇ ಸಂಸ್ಕಾರಕಲ್ಪನಾಯಾ ಗುರುತ್ವಾತ್ಸಂಸ್ಕಾರಂ ಪ್ರತಿ ಚೋಪೇಕ್ಷಾನ್ಯನಿಶ್ಚಯತ್ವೇನ ಹೇತುತಾಯಾಃ ಸಿದ್ಧತ್ವಾತ್ ॥ ೧೬೦ ॥

ಭಾವನಾರೂಪಸಂಸ್ಕಾರನ್ನು ತೋರಿಸುತ್ತಾನೆ. ಅನುಭವದಿಂದ ಹುಟ್ಟಿ ಸ್ಮೃತಿಗೆ ಕಾರಣವಾದ ಸಂಸ್ಕಾರಕ್ಕೆ ಭಾವನಾ ಎಂಬ ಹೆಸರು. ಸ್ಮೃತಿರೂಪಕಾರ್ಯದಿಂದ ಇದು ತಿಳಿಯಲ್ಪಡುವುದರಿಂದ ಅತೀಂದ್ರಿಯವಾಗುತ್ತದೆ. ಇದು ಜೀವನಲ್ಲಿರುತ್ತದೆ. ಇದಕ್ಕೆ ಕಾರಣತೋರಿಸುತ್ತಾನೆ. 'ಉಪೇಕ್ಷಾ—' ಇತಿ ಉಪೇಕ್ಷಾ ನಾಸ್ತಿ ಆತ್ಮಾ (ಸ್ವರೂಪಂ) ಯಸ್ಯಸಃ. ಉಪೇಕ್ಷಾನಾತ್ಮಕಃ. ಸಾವಧಾನವಿಲ್ಲದೆ ವಸ್ತುವನ್ನು ಗ್ರಹಿಸುವುದಕ್ಕೆ 'ಉಪೇಕ್ಷಾ' ಎಂದು ಹೆಸರು. ಈ ಉಪೇಕ್ಷಾರೂಪಜ್ಞಾನದಿಂದ ಸಂಸ್ಕಾರ ಹುಟ್ಟುವುದಿಲ್ಲ. ಆದುದರಿಂದ ಉಪೇಕ್ಷಾನಾತ್ಮಕಜ್ಞಾನವೆಂದು ಹೇಳಿದೆ. ಉಪೇಕ್ಷಾ ಭಿನ್ನವಾದ ನಿಶ್ಚಯಾತ್ಮಕಜ್ಞಾನವು ಸಂಸ್ಕಾರಕ್ಕೆ ಕಾರಣವಾಗುತ್ತದೆ. ಶಂಕಿಸುತ್ತಾನೆ. 'ನನು—' ಇತಿ. ಸ್ಮೃತಿಗೆ ಉಪೇಕ್ಷಾನ್ಯನಿಶ್ಚಯತ್ವರೂಪದಿಂದ ಕಾರಣತ್ವ ಹೇಳಿದರೆ ಉಪೇಕ್ಷಾ ಇರುವಾಗ ಸ್ಮರಣೆ ಬರುವುದಿಲ್ಲ. ಸಂಸ್ಕಾರಕ್ಕೆ ಜ್ಞಾನತ್ವರೂಪದಿಂದ ಕಾರಣತ್ವ ಹೇಳಿದರೆ ಲಾಘವವಿಲ್ಲವೇ ? ಎಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಇತಿಚೇನ್ನ—' ಇತಿ. ಉಪೇಕ್ಷಾನ್ಯನಿಶ್ಚಯತ್ವರೂಪದಿಂದ ಸಂಸ್ಕಾರಕ್ಕೇ ಕಾರಣತ್ವ ಇದೆಯೆಂಬುವಲ್ಲಿ ವಿನಿಗಮಕವಿದೆಯೆಂದು ತೋರಿಸುತ್ತಾನೆ. 'ಕಿಂಚ—' ಇತಿ.

ಸ್ಮರಣೇ ಪ್ರತ್ಯಭಿಜ್ಞಾಯಾಮಪ್ಯಸೌ ಹೇತುರುಚ್ಯತೇ ||

ಅಸೌ ಸಂಸ್ಕಾರಃ । ತತ್ರ ಪ್ರಮಾಣಂ ದರ್ಶಯತಿ—ಸ್ಮರಣೇ ಇತಿ । ಯತಃ ಸ್ಮರಣಂ ಪ್ರತ್ಯಭಿಜ್ಞಾನಂ ಚ ಜನಯತ್ಯತಃ ಸಂಸ್ಕಾರಃ ಕಲ್ಪ್ಯತೇ । ವಿನಾ ವ್ಯಾಪಾರಂ ಪೂರ್ವಾನುಭವಸ್ಯ ಸ್ಮರಣಾದಿಜನನಾಸಾಮರ್ಥ್ಯಾತ್ ಸ್ವಸ್ವವ್ಯಾಪಾರನ್ಯತರಾಭಾವೇ ಕಾರಣತ್ವಾಸಂಭವಾತ್ । ನ ಚ ಪ್ರತ್ಯಭಿಜ್ಞಾಯಾಃ ಸಂಸ್ಕಾರಜನ್ಯತ್ವೇನ ಸ್ಮೃತಿತ್ವಾಪತ್ತಿರಿತಿ ವಾಚ್ಯಮ್ । ಅಪ್ರಯೋಜಕತ್ವಾತ್ । ಪರೇ ತ್ವನುದ್ಬುದ್ಧ ಸಂಸ್ಕಾರಾತ್ ಪ್ರತ್ಯಭಿಜ್ಞಾನುದಯಾದುದ್ಬುದ್ಧ ಸಂಸ್ಕಾರಸ್ಯ ಹೇತುತ್ವಾಪೇಕ್ಷಯಾ ತತ್ತತ್ಸ್ಮರಣಸ್ಯೈವ ಪ್ರತ್ಯಭಿಜ್ಞಾಂ ಪ್ರತಿ ಹೇತುತ್ವಂ ಕಲ್ಪ್ಯತ ಇತ್ಯಾಹುಃ ||

ಅಸೌ— ಈ ಸಂಸ್ಕಾರವು, ಸ್ಮರಣೇ— ಸಂಸ್ಕಾರಮಾತ್ರದಿಂದಹುಟ್ಟಿದಜ್ಞಾನದಲ್ಲಿಯೂ, ಪ್ರತ್ಯಭಿಜ್ಞಾಯಾಂ— 'ಅವನೇ ಈ ದೇವದತ್ತನು' ಎಂಬ ತತ್ತೇದಂತಾವಗಾಹಿಜ್ಞಾನದಲ್ಲಿಯೂ ಕಾರಣವಾಗುತ್ತದೆ. ಇಂದ್ರಿಯಸಹಕೃತವಾದ ಸಂಸ್ಕಾರದಿಂದ ಹುಟ್ಟಿದಜ್ಞಾನಕ್ಕೆ ಪ್ರತ್ಯಭಿಜ್ಞಾ ಎಂದು ಹೆಸರು. ಇದು ಕಾರಣವೆಂಬುದರಲ್ಲಿ ಯುಕ್ತಿ ತೋರಿಸುತ್ತಾನೆ. 'ವಿನಾವ್ಯಾಪಾರಂ—' ಇತಿ. ಮಧ್ಯೆ ಒಂದು ವ್ಯಾಪಾರವಿಲ್ಲವಾದರೆ ಎಂದೋ ಉಂಟಾದ ಅನುಭವವು ಸ್ಮೃತಿಯನ್ನು ಹುಟ್ಟಿಸಲಾರದು ಕಾರ್ಯದ ಅವ್ಯವಹಿತಪೂರ್ವಕ್ಷಣದಲ್ಲಿ ಇರುವ ಆಯಾಯವ್ಯಾಪಾರದಿಂದ ಕೂಡಿರುವುದೇ ಕಾರಣವೆಂದು ಪ್ರಸಿದ್ಧವಾಗಿದೆ. ಶಂಕಿಸುತ್ತಾನೆ. 'ನಚ—' ಇತಿ. ಸಂಸ್ಕಾರದಿಂದ ಪ್ರತ್ಯ

ಭಿಜ್ಞೆಯೂ ಹುಟ್ಟುವುದಾದರೆ ಅದೂ ಸ್ಮೃತಿಯೇ ಆಗಲಿ. ಬೇರೆಯಾದಜ್ಞಾನವೆಂದು ಅಂಗೀಕರಿಸುವುದೇಕೆ ? ಎಂದರೆ ಅದಕ್ಕೆ ಸಮಾಧಾನತೋರಿಸುತ್ತಾನೆ. 'ಅಪ್ರಯೋಜಕತ್ವಾತ್—' ಇತಿ. ಸಂಸ್ಕಾರಜನ್ಯವಾದುದೆಲ್ಲಾ ಸ್ಮೃತಿಯಾಗಬೇಕೆಂಬನಿಯಮವಿಲ್ಲವೆಂದು ತಾತ್ಪರ್ಯ. ಚಿಂತಾಮಣಿಕಾರರಮತವನ್ನು ತೋರಿಸುತ್ತಾನೆ. 'ಪರೇತು—' ಇತಿ. ಉದ್ಬುದ್ಧಸಂಸ್ಕಾರವಿಲ್ಲವಾದರೆ ಪ್ರತ್ಯಭಿಜ್ಞಾ ಹುಟ್ಟುವುದಿಲ್ಲ. ಉದ್ಬುದ್ಧಸಂಸ್ಕಾರವೇ ಕಾರಣವೆಂದು ಕಲ್ಪಿಸುವುದಕ್ಕಿಂತ ಆಯಾಯಸ್ಮರಣೆಯೇ ಪ್ರತ್ಯಭಿಜ್ಞೆಗೆ ಕಾರಣವೆಂದು ಕಲ್ಪಿಸಿದರೆ ಆಗ ಸಂಸ್ಕಾರಜನ್ಯತ್ವವಿಲ್ಲದಿರುವುದರಿಂದ ಸ್ಮೃತಿಲಕ್ಷಣಕ್ಕೆ ವ್ಯಭಿಚಾರಬರುವುದಿಲ್ಲವೆಂದು ಅವರ ಅಭಿಪ್ರಾಯ. 'ಆಹುಃ' ಎಂಬುದರಿಂದ ಅಸ್ವರಸ ಸೂಚಿತವಾಗುತ್ತದೆ. ಸ್ಮೃತಿಯು ಕಾರಣವೆಂದು ಕಲ್ಪಿಸಿದರೂ ಅದಕ್ಕೆ ಉದ್ಬುದ್ಧ ಸಂಸ್ಕಾರ ಕಾರಣವೆಂದು ಕಲ್ಪಿಸಬೇಕು. ಹೀಗೆ ಎರಡುಕಾರಣತ್ವ ಕಲ್ಪಿಸುವುದಕ್ಕಿಂತಲೂ ಪ್ರತ್ಯಭಿಜ್ಞೆಗೇ ಉದ್ಬುದ್ಧಸಂಸ್ಕಾರಕಾರಣವೆಂದರೆ ಲಾಘವವೆಂದು ತಾತ್ಪರ್ಯ.

**ಧರ್ಮಾಧರ್ಮಾವದೃಷ್ಟಂ ಸ್ಯಾದ್ಧರ್ಮಃ ಸ್ವರ್ಗಾದಿ**
**ಸಾಧನಮ್ ॥ ೧೬೧ ॥**
**ಗಂಗಾಸ್ನಾನಾದಿಯಾಗಾದಿವ್ಯಾಪಾರಃ ಸ ತು ಕೀರ್ತಿತಃ ॥**

ಅದೃಷ್ಟಂ ನಿರೂಪಯತಿ—ಧರ್ಮಾಧರ್ಮಾವಿತಿ । ಸ್ವರ್ಗಾದೀತಿ । ಸ್ವರ್ಗಾದಿಸಕಲಸುಖಾನಾಂ ಸ್ವರ್ಗಸಾಧನೀಭೂತಶರೀರಾದೀನಾಂ ಚ ಸಾಧನಂ ಧರ್ಮ ಇತ್ಯರ್ಥಃ । ತತ್ರ ಪ್ರಮಾಣಂ ದರ್ಶಯಿತುಮಾಹ । ಯಾಗಾದೀತಿ । ಯಾಗಾದಿವ್ಯಾಪಾರತಯಾ ಧರ್ಮಃ ಕಲ್ಪ್ಯತೇ । ಅನ್ಯಥಾ ಯಾಗಾದೀನಾಂ ಚಿರವಿನಷ್ಟತಯಾ ನಿರ್ವ್ಯಾಪಾರತಯಾ ಚ ಕಾಲಾಂತರಭಾವಿ ಸ್ವರ್ಗಜನಕತ್ವಂ ನ ಸ್ಯಾತ್ । ತದುಕ್ತಮಾಚಾರ್ಯೈಃ—

'ಚಿರಧ್ವಸ್ತಂ ಫಲಾಯಾಲಂ ನ ಕರ್ಮಾತಿಶಯಂವಿನಾ' ॥ ಇತಿ ॥

ನನು ಯಾಗಧ್ವಂಸ ಏವ ವ್ಯಾಪಾರಃ ಸ್ಯಾತ್ । ನ ಚ ಪ್ರತಿಯೋಗಿತದ್ಧ್ವಂಸಯೋರೇಕತ್ರಾಜನಕತ್ವಂ, ಸರ್ವತ್ರ ತಥಾತ್ವೇ ಮಾನಾಭಾವಾತ್ । ನ ಚ ತ್ವನ್ಮತೇ ಫಲಾನಂತ್ಯಮ್ । ಮನ್ಮತೇ ಚರಮಫಲಸ್ಯಾಪೂರ್ವನಾಶಕತ್ವಾನ್ನ ತಥಾತ್ವಮಿತಿ ವಾಚ್ಯಮ್ । ಕಾಲವಿಶೇಷಸ್ಯ ಸಹಕಾರಿತ್ವಾದಿತ್ಯತ ಆಹ—ಗಂಗಾಸ್ನಾನೇತಿ । ಗಂಗಾಸ್ನಾನಸ್ಯ ಹಿ ಸ್ವರ್ಗಜನಕತ್ವೇಽನಂತಾನಾಂ ಜಲಸಂಯೋಗಧ್ವಂಸಾನಾಂ ವ್ಯಾಪಾರತ್ವಮಪೇಕ್ಷ್ಯೈಕಮಪೂರ್ವಮೇವ ಕಲ್ಪ್ಯತೇ ಲಾಘವಾದಿತಿಭಾವಃ ॥

ಧರ್ಮ ಮತ್ತು ಅಧರ್ಮ ಇವೆರಡಕ್ಕೂ ಅದೃಷ್ಟವೆಂದು ಹೆಸರು. ಅವುಗಳಲ್ಲಿ ಧರ್ಮಲಕ್ಷಣ ಇಲ್ಲಿ ಹೇಳುತ್ತಾನೆ. 'ಸ್ವರ್ಗಾದಿ—' ಇತಿ. ಸ್ವರ್ಗಾದಿಸಕಲ

ಸುಖಕ್ಕೂ, ಸ್ವರ್ಗಸಾಧನವಾದ ಶರೀರಪ್ರಾಪ್ತಿಗೂ ಕಾರಣವಾದದ್ದು ಧರ್ಮ. ಗಂಗಾಸ್ನಾನಾ—' ಇತಿ. ಗಂಗಾಸ್ನಾನಾದಿಗಳಿಂದಲೂ, ಯಾಗಾದಿಗಳಿಂದಲೂ ಸ್ವರ್ಗಾದಿಫಲವುಂಟಾಗಬೇಕಾದರೆ ಮಧ್ಯ ವ್ಯಾಪಾರರೂಪವಾಗಿರುವುದು ಧರ್ಮ. ಯಾಗದಾನಾದಿಗಳ ವ್ಯಾಪಾರರೂಪವಾಗಿ ಧರ್ಮವು ಕಲ್ಪಿಸಲ್ಪಡುತ್ತದೆ. ಅನ್ಯಥಾ— ವ್ಯಾಪಾರರೂಪವಾಗಿ ಧರ್ಮವು ಕಲ್ಪಿತವಾಗದಿದ್ದರೆ—ಶಾಸ್ತ್ರಾದಿಗಳಲ್ಲಿ ಯಾಗಾದಿಗಳಿಗೆ ಸ್ವರ್ಗಾದಿಕಾರಣತ್ವವನ್ನು ಹೇಳಿರುವುದು ಕೂಡಲಾರದು. ಯಾಗ ಇಂದುಮಾಡಿ ನಾಶವಾಗುತ್ತದೆ. ಬಹುಕಾಲದಮೇಲೆ ಮರಣಾನಂತರ ಸ್ವರ್ಗಫಲವಾಗುತ್ತದೆ. ಆಗ ಸ್ವರ್ಗರೂಪಕಾರ್ಯದ ಅವ್ಯವಹಿತಪೂರ್ವದಲ್ಲಿ (ಕಾರಣವಾದ) ಯಾಗವಿಲ್ಲದಿರುವುದರಿಂದ ಕಾರಣಲಕ್ಷಣಬಾರದೇ ಹೋಗಬೇಕಾಗುತ್ತದೆ. ಆದುದರಿಂದ ಸ್ವರ್ಗಾದಿಫಲಪ್ರಾಪ್ತಿಗೋಸ್ಕರ ಯಾಗಾದಿಗಳ ವ್ಯಾಪಾರರೂಪವಾಗಿ ಧರ್ಮವನ್ನು ಕಲ್ಪಿಸಬೇಕು. ಈ ವಿಷಯದಲ್ಲಿ ಉದಯನಾಚಾರ್ಯರ ಸಂಮತಿಯನ್ನು ತೋರಿಸುತ್ತಾನೆ. 'ಚಿರಧ್ವಸ್ತಂ—' ಇತಿ. ಸ್ವರ್ಗಾದಿಫಲವು ಕಾಲಾಂತರದಲ್ಲಿ ಉಂಟಾಗುವುದರಿಂದ ಈಗ ಮಾಡಿ ಬೇಗ ನಾಶವಾಗುವ ಯಾಗವು ಸಾಧನವಾಗಲಾರದು ಎಂದು ಸಾಧನತ್ವಾನುಪಪತ್ತಿಯಿಂದ ಯಾಗದಿಂದ ಉಂಟಾದ ಒಂದು ಅಪೂರ್ವವನ್ನು (ಧರ್ಮ) ಕಲ್ಪಿಸಬೇಕೆಂದರ್ಥ. ಆದುದರಿಂದಲೇ 'ಸುಖಾಸಾಧಾರಣಕಾರಣ ಕಾರಣತಾವಚ್ಛೇದಕಜಾತಿಮತ್ತ್ವಂ' ಎಂದು ಧರ್ಮಲಕ್ಷಣ ಹೇಳಿರುತ್ತಾನೆ. ವಿಹಿತಕ್ರಿಯೆಯೇ ಧರ್ಮವೆಂದು ಮೀಮಾಂಸಕರೂ, ಮನಸ್ಸಿನ ಪರಿಣಾಮವಿಶೇಷವೇ ಧರ್ಮವೆಂದು ಸಾಂಖ್ಯರೂ, ಶುಭವಾಸನೆ ಅದೆಂದು ಬೌದ್ಧರೂ, ಶರೀರದಿಂದುಂಟಾದ ಸೂಕ್ಷ್ಮವಾದ ಮೂರ್ತಿಮತ್ತಾದ ಸುಖಕಾರಣವಾದ ಪುದ್ಗಲವು ಧರ್ಮವೆಂದು ಜೈನರೂ ಅಂಗೀಕರಿಸಿರುತ್ತಾರೆ.

'ನನು—' ಎಂದು ಪುನಃ ಆಶಂಕಿಸುತ್ತಾರೆ. ಯಾಗದಿಂದ ಅಪೂರ್ವವೆಂದು ಹೊಸದಾಗಿ ಕಲ್ಪಿಸುವುದಕ್ಕಿಂತ ಯಾಗಧ್ವಂಸವೇ ಕಾರಣವಾಗಲಿ ಎಂದು ಶಂಕಿಸುವವನ ತಾತ್ಪರ್ಯ. ಪ್ರತಿಯೋಗಿಯಾದ ಯಾಗವೂ ಅದರಧ್ವಂಸವೂ ಒಂದು ಕಡೆ ಕಾರಣವಾಗುವುದು ವಿರುದ್ಧವೆಂದು ಶಂಕಿಸಬಾರದು. ಎಲ್ಲಾಕಡೆಯಲ್ಲಿಯೂ ಹಾಗೆ ವಿರುದ್ಧವಾಗುತ್ತದೆಯೆಂಬುದರಲ್ಲಿ ಪ್ರಮಾಣವಿಲ್ಲವೆಂದು ಯಾಗಧ್ವಂಸವಾದಿಯ ಮತ. ಕಾಲವಿಶೇಷಸಹಕಾರಿಕಾರಣವನ್ನಪೇಕ್ಷಿಸಿ ಯಾಗಧ್ವಂಸಕ್ಕೆ ಕಾರಣತ್ವ ಹೇಳಿರುವುದರಿಂದ ಫಲಾನಂತ್ಯದೋಷಕ್ಕೂ ಅವಕಾಶವಿಲ್ಲವೆಂದರೆ ಅದಕ್ಕೆ ಸಮಾಧಾನ ತೋರಿಸುತ್ತಾನೆ. 'ಗಂಗಾಸ್ನಾನಸ್ಯ—' ಇತಿ. ಗಂಗಾಸ್ನಾನವೇ ಸ್ವರ್ಗಕಾರಣವೆಂದು ಕಲ್ಪಿಸಿದರೆ ಆಗ ಅನಂತಜಲಸಂಯೋಗಧ್ವಂಸಗಳನ್ನು ಕಲ್ಪಿಸಬೇಕಾದುದರಿಂದ ಅದಕ್ಕಿಂತಲೂ ಒಂದೇ ಅಪೂರ್ವವನ್ನು ಕಲ್ಪಿಸಿ ಅದು ಸ್ವರ್ಗಕ್ಕೆ ಕಾರಣವೆಂದು ಅಂಗೀಕರಿಸುವುದರಿಂದ ಮಹಾಲಾಘವವೆಂದು ಸಿದ್ಧಾಂತಿಯ ಅಭಿಪ್ರಾಯ. ||

ನನು ಧ್ವಂಸೋಽಪಿ ನ ವ್ಯಾಪಾರೋಽಸ್ತು, ನ ಚ ನಿರ್ವ್ಯಾಪಾರಸ್ಯ ಚಿರಧ್ವಸ್ತಸ್ಯ ಕಥಂ

ಕಾರಣತ್ವಮಿತಿ ವಾಚ್ಯಮ್ । ಅನನ್ಯಥಾಸಿದ್ಧನಿಯತಪೂರ್ವವರ್ತಿತ್ವಸ್ಯ ತತ್ರಾಪಿ ಸತ್ತ್ವಾತ್ । ಅವ್ಯವಹಿತಪೂರ್ವವರ್ತಿತ್ವಂ ಹಿ ಚಕ್ಷುಃ ಸಂಯೋಗಾದೇಃ ಕಾರಣತ್ವೇ ನತು ಸರ್ವತ್ರ ಕಾರ್ಯಕಾಲವೃತ್ತಿತ್ವಮಿವ ಸಮವಾಯಿಕಾರಣಸ್ಯ ಕಾರಣತ್ವೇ ಇತ್ಯತ ಆಹ—

**ಕರ್ಮನಾಶಜಲಸ್ಪರ್ಶಾದಿನಾ ನಾಶಸ್ತ್ವಸೌ ಮತಃ ॥ ೧೬೨ ॥**

ಕರ್ಮನಾಶೇತಿ । ಯದಿ ಹ್ಯಪೂರ್ವಂ ನ ಸ್ಯಾತ್ತದಾ ಕರ್ಮನಾಶಾಜಲಸ್ಪರ್ಶಾದಿನಾ ನಾಶ್ಯತ್ವಂ ಧರ್ಮಸ್ಯ ನ ಸ್ಯಾತ್ । ನಹಿ ತೇನ ಯಾಗಾದೇರ್ನಾಶಃ ಪ್ರತಿಬಂಧೋವಾ ಕರ್ತುಂ ಶಕ್ಯತೇ ತಸ್ಯ ಪೂರ್ವಮೇವ ವೃತ್ತತ್ವಾದಿತಿ । ಏತೇನ ದೇವತಾಪ್ರೀತಿರೇವ ಫಲಮಿತ್ಯಪಾಸ್ತಮ್ । ಗಂಗಾಸ್ನಾನಾದೌ ಸರ್ವತ್ರ ದೇವತಾಪ್ರೀತೇರಸಂಭವಾಚ್ಚ । ದೇವತಾಯಾಶ್ಚೇತನತ್ವೇಽಪಿ ತತ್ಪ್ರೀತೇರನುದ್ದೇಶ್ಯತ್ವಾತ್ । ಪ್ರೀತೇಃ ಸುಖರೂಪತ್ವೇನ ವಿಷ್ಣುಪ್ರೀತ್ಯಾದೌ ತದಸಂಭವಾತ್ । ಜನ್ಯಸುಖಾದೇಸ್ತತ್ರಾಭಾವಾತ್ । ತೇನ ವಿಷ್ಣುಪ್ರೀತಿಜನ್ಯತ್ವೇನ ಪರಾಭಿಮತಸ್ವರ್ಗಾದಿರೇವ ವಿಷ್ಣುಪ್ರೀತಿಶಬ್ದೇನ ಲಕ್ಷ್ಯತೇ ॥ ೧೬೨ ॥

ಶಂಕಿಸುತ್ತಾನೆ. ಯಾಗಧ್ವಂಸವು ಕಾರಣವೆಂದು ಅಂಗೀಕರಿಸುವುದು ಬೇಡ. ಯಾಗವು ಅಪೂರ್ವದಮೂಲಕಕಾರಣವಾಗುವುದಾದರೂ ಹೇಗೆ? ಯಾಗಮಾಡಿ ಎಂದೋ ಧ್ವಸ್ತವಾಗುತ್ತದೆ. ಅನನ್ಯಥಾಸಿದ್ಧವಾಗಿ ನಿಯತಪೂರ್ವವರ್ತಿಯಾಗಿರುವುದೇ ಕಾರಣವಷ್ಟೇ—ಅಂದರೆ ಕಾರಣವು ಅವ್ಯವಹಿತಪೂರ್ವವೃತ್ತಿಯಾಗಿರಬೇಕೆಂಬ ನಿಯಮವು ಎಲ್ಲಾಕಡೆಯಲ್ಲಿ ಇಲ್ಲ. ಪ್ರತ್ಯಕ್ಷಾದಿಗಳಿಗೆ ಚಕ್ಷುಃ ಸಂಯೋಗಾದಿಗಳು ಕಾರಣವೆಂದಾಗ ಅದು ಅವ್ಯವಹಿತಪೂರ್ವವರ್ತಿಯಾಗಿಯೇ ಇರಬೇಕು. ಸಮವಾಯಿಕಾರಣಕ್ಕೂ ಈ ನಿಯಮವಿದೆ. ಅಸಮವಾಯಿಕಾರಣಸ್ಥಳದಲ್ಲಿಮಾತ್ರ ಈ ನಿಯಮ ನಿಯತವಲ್ಲವೆಂದು ತಾತ್ಪರ್ಯ. ಇದನ್ನೇ 'ಕರ್ಮನಾಶ—' ಎಂಬುದರಿಂದ ವಿವರಿಸುತ್ತಾನೆ. ಅಪೂರ್ವವನ್ನಂಗೀಕರಿಸದಿದ್ದರೆ ಧ್ವಂಸವೇ ಸ್ವರ್ಗಾದಿಕಾರಣವೆಂದರೆ ಆಗ ಕರ್ಮನಾಶಾದಿಗಳಿಂದ ಧರ್ಮನಾಶವೆಂದು ಹೇಳಿರುವುದು ಅಸಂಗತವಾಗುತ್ತದೆ. ಧ್ವಂಸನಿತ್ಯವಾದುದರಿಂದ ಅದಕ್ಕೆ ನಾಶಸಂಭವಿಸಲಾರದು. ಸ್ವರ್ಗಸುಖಾನುಭವದಿಂದ ಧರ್ಮನಾಶವಾಗುತ್ತದೆ. ಯಾಗಾದಿನಾಶವೊದಲೇ ಆದುದರಿಂದ ಕರ್ಮನಾಶಾದಿಗಳಿಂದ ಧರ್ಮನಾಶವನ್ನೇ ಹೇಳಬೇಕು. ಕೆಲವರು ಯಾಗಾದಿಗಳಿಗೆ ದೇವತಾಪ್ರೀತಿಯೇ ಫಲವೆನ್ನುತ್ತಾರೆ. ಇದೂ ಸರಿಯಲ್ಲವೆಂದು ತೋರಿಸುತ್ತಾನೆ. 'ಏತೇನ—' ಇತಿ. ಕಾರಣತೋರಿಸುತ್ತಾನೆ. 'ಗಂಗಾಸ್ನಾನಾದೇಃ—' ಇತಿ. ಯದ್ಯಪಿ ದೇವತಾ ಚೇತನರೂಪಿಯಾಗಿರಬಹುದು. ದೇವತಾಪ್ರೀತ್ಯುದ್ದೇಶದಿಂದಲೇ ಎಲ್ಲಾಕಡೆ ಗಂಗಾಸ್ನಾನಮಾಡುತ್ತಾರೆಂಬ ನಿಯಮವಿಲ್ಲ. ಯುಕ್ತ್ಯಂತರವನ್ನು

ತೋರಿಸುತ್ತಾನೆ. 'ಪ್ರೀತೇಃ—' ಇತಿ. ವಿಷ್ಣುವಿನ ಪ್ರೀತಿನಿತ್ಯವಾದುದರಿಂದ ಅದು ಹುಟ್ಟುವುದಿಲ್ಲವೆಂದು ತಾತ್ಪರ್ಯ. ಜನ್ಯಸುಖ ಅಲ್ಲಿ ಸಂಭವಿಸುವುದಿಲ್ಲ. ಎಲ್ಲಿ ವಿಷ್ಣು ಪ್ರೀತೀಯೇ ಫಲವೆಂದು ಹೇಳಿವೆಯೋ ಅಲ್ಲಿ ಸ್ವರ್ಗಾದಿಗಳೇ ಲಕ್ಷಣೆಯಿಂದ ವಿಷ್ಣುಪ್ರೀತಿ ಯೆಂದು ತಿಳಿಯಬೇಕು. ದೇವತಾಪ್ರಸಾದದಿಂದಲೇ ಸ್ವರ್ಗವು ಲಭಿಸುವುದರಿಂದ ಹೀಗೆ ಅರ್ಥಕಲ್ಪಿಸುವುದು ಸಮಂಜಸವಾಗಿದೆ. ಯಾವುದರಿಂದ ಅಭ್ಯುದಯ, ನಿಃ ಶ್ರೇಯಸ್ಸು ಲಭಿಸಿವುದೋ ಅದೇ ಧರ್ಮವೆಂದು ಕಣಾದರು ಹೇಳಿರುತ್ತಾರೆ. ಅಭ್ಯುದಯವೆಂದರೆ ತತ್ವಜ್ಞಾನ, ಆತ್ಯಂತಿಕ ದುಃಖನಿವೃತ್ತಿಯೇ ನಿಃಶ್ರೇಯಸ್ಸು ಇವೆರಡಕ್ಕೆ ಕಾರಣ ವಾದದ್ದು ಧರ್ಮ. ಇದು ಪ್ರವೃತ್ತಿನಿವೃತ್ತಿಭೇದದಿಂದ ಎರಡುವಿಧ. ಸ್ವರ್ಗಫಲಕವಾದ ಯಾಗಾದಿಗಳೇ ಪ್ರವೃತ್ತಿರೂಪವಾಗಿವೆ. ಭಗವದರ್ಪಣಾದಿಸನ್ಯಾಸಾದಿಸ್ವರೂಪಕ್ಕೆ ನಿವೃತ್ತಿಯೆಂದು ಹೆಸರು.

**ಅಧರ್ಮೋ ನರಕಾದೀನಾಂ ಹೇತುರ್ನಿಂದಿತಕರ್ಮಜಃ ||**
**ಪ್ರಾಯಶ್ಚಿತ್ತಾದಿನಾಶ್ಯೋಽಸೌ ಜೀವವೃತ್ತೀ ತ್ವಿಮೌ ಗುಣೌ || ೧೬೪||**

ಅಧರ್ಮ ಇತಿ || ನರಕಾದಿಸಕಲದುಃಖಾನಾಂ ನಾರಕೀಯಶರೀರಾದೀನಾಂಚ ಸಾಧನ ಮಧರ್ಮ ಇತ್ಯರ್ಥಃ || ತತ್ರ ಪ್ರಮಾಣಮಾಹ—ಪ್ರಾಯಶ್ಚಿತ್ತೇತಿ | ಯದಿಹ ಧರ್ಮೋ ನ ಸ್ಯಾತ್ತದಾ ಪ್ರಾಯಶ್ಚಿತ್ತಾದಿನಾಶ್ಯತ್ವಂ ನ ಸ್ಯಾತ್ | ನ ಹಿ ತೇನ ಬ್ರಹ್ಮಹನನಾದೀನಾಂ ನಾಶಃ ಪ್ರತಿಬಂಧೋವಾ ವಿಧಾತುಂ ಶಕ್ಯತೇ, ತಸ್ಯ ಪೂರ್ವಮೇವ ವಿನಷ್ಟತ್ವಾದಿತಿ ಭಾವಃ | ಜೀವೇತಿ | ಈಶ್ವರಸ್ಯ ಧರ್ಮಾಧರ್ಮಾ ಭಾವಾದಿತಿ ಭಾವಃ || ೧೬೪ ||

ಅಧರ್ಮವನ್ನು ತೋರಿಸುತ್ತಾನೆ—'ಅಧರ್ಮ—' ಇತಿ. ವೇದಶಾಸ್ತ್ರಾದಿಗಳಲ್ಲಿ ಮಾಡಬಾರದೆಂದು ಹೇಳಿದ ಅಭಕ್ಷ್ಯಭಕ್ಷಣ, ಅಗಮ್ಯಾಗಮನ, ಅಪೇಯಪಾನಮುಂತಾದ ಕಾರ್ಯಗಳಿಂದ ಈ ಅಧರ್ಮಉಂಟಾಗುತ್ತದೆ. ಇದು ಸಕಲದುಃಖಗಳಿಗೂ, ದುಃಖವನ್ನ ನುಭವಿಸುವ ಶರೀರಕ್ಕೂ ಕಾರಣವಾಗುತ್ತದೆ. ಅಧರ್ಮವಿದೆಯೆಂಬುದರಲ್ಲಿ ಪ್ರಮಾಣ ತೋರಿಸುತ್ತಾನೆ. 'ಪ್ರಾಯಶ್ಚಿತ್ತ—' ಇತಿ. ಮನ್ವಾದಿಸ್ಮೃತಿಗಳಲ್ಲಿ ಪಾಪನಿವರ್ತಕ ವಾದ ಪ್ರಾಯಶ್ಚಿತ್ತಾದಿಗಳನ್ನು ಹೇಳಿರುತ್ತಾನೆ. ಆದರಿಂದ ಇದು ನಷ್ಟವಾಗುತ್ತದೆ. ನಿಷಿದ್ಧಕ್ರಿಯೆಯಿಂದಾದಗುಣವಿಶೇಷವೇ ಅಧರ್ಮವೆಂದು ತಾತ್ಪರ್ಯ. ಈಶ್ವರನಲ್ಲಿ ಧರ್ಮಾಧರ್ಮಗಳು ಇಲ್ಲದಿರುವುದರಿಂದ ಕೇವಲ ಜೀವನಲ್ಲಿಮಾತ್ರ ಧರ್ಮಾಧರ್ಮಗಳು ಇರುತ್ತವೆ.

**ಇಮೌ ತು ವಾಸನಾಜನ್ಯೌ ಜ್ಞಾನಾದಪಿ ವಿನಶ್ಯತಃ ||**

ಇಮೌ ಧರ್ಮಾಧರ್ಮೌ | ವಾಸನೇತಿ | ಅತೋ ಜ್ಞಾನಿನಾ ಕೃತೇಽಪಿ ಸುಕೃತ

ದುಷ್ಕೃತಕರ್ಮಣೀ ನ ಫಲಾಯಾಲಮಿತಿ ಭಾವಃ । ಜ್ಞಾನಾದಪೀತಿ ॥ ಅಪಿನಾ ಭೋಗಪರಿಗ್ರಹಃ । ನನು ತತ್ವಜ್ಞಾನಸ್ಯ ಕಥಂ ಧರ್ಮಾಧರ್ಮನಾಶಕತ್ವಂ 'ನಾಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿಶತೈರಪಿ' ಇತಿ ವಚನವಿರೋಧಾತ್ । ಇತ್ಥಂ ಚ ತತ್ವಜ್ಞಾನಿನಾಂ ಝಟಿತಿ ಕಾಯವ್ಯೂಹೇನ ಸಕಲಕರ್ಮಣಾಂ ಭೋಗೇನ ಕ್ಷಯ ಇತಿ ಚೇನ್ನ । ತತ್ರ ಭೋಗಸ್ಯ ವೇದಬೋಧಿತನಾಶಕೋಪ ಲಕ್ಷಕತ್ವಾತ್ । ಕಥಮನ್ಯಥಾ ಪ್ರಾಯಶ್ಚಿತ್ತಾದಿನಾ ಕರ್ಮಣಾಂ ನಾಶಃ । ತದುಕ್ತಮ್ ಜ್ಞಾನಾಗ್ನಿಃ ಸರ್ವಕರ್ಮಾಣೀತ್ಯಾದಿನಾ । 'ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್‌ದೃಷ್ಟೇ ಪರಾವರೇ ।' ಇತಿ ॥ ನನು ತತ್ವಜ್ಞಾನಿನಸ್ತರ್ಹಿ ಶರೀರಾವಸ್ಥಾನಂ ಸುಖದುಃಖಾದಿ ಚ ನ ಸ್ಯಾತ್, ಜ್ಞಾನೇನ ಚ ಸರ್ವೇಷಾಂ ಕರ್ಮಣಾಂ ನಾಶಾದಿತಿ ಚೇನ್ನ । ಪ್ರಾರಬ್ಧೇತರಕರ್ಮಣಾಮೇವ ನಾಶಾತ್ । ತತ್ತಚ್ಛರೀರಭೋಗಜನಕಂ ಹಿ ಯತ್ಕರ್ಮ ತತ್ಪ್ರಾರಬ್ಧಂ ತದಭಿಪ್ರಾಯಮೇವ ನಾಭುಕ್ತಮಿತಿ ವಚನಮಿತಿ ॥

ಪ್ರಾಯಶ್ಚಿತ್ತಾದಿಗಳು ಅಧರ್ಮಕ್ಕೆ ನಾಶಕಗಳೆಂದು ಹಿಂದೆ ಹೇಳಿದೆ. ಇಲ್ಲಿ ಇತರಕ್ಕೂ ನಾಶಕತ್ವವಿದೆಯೆಂದು ತೋರಿಸುತ್ತಾನೆ. 'ಇವನೌ—' ಇತಿ. ಈ ಧರ್ಮಾಧರ್ಮಗಳೆರಡೂ ಮಿಥ್ಯಾಜ್ಞಾನದಿಂದ ಉಂಟಾದವಾಸನಾದಿಂದ ಉಂಟಾಗುತ್ತವೆ. ಈಶ್ವರನಿಗೆ ಮಿಥ್ಯಾಜ್ಞಾನವೇ ಇಲ್ಲವಾದುದರಿಂದ ಧರ್ಮಾಧರ್ಮಗಳೂ ಇಲ್ಲ. ವಾಸನಾ ದಿಂದ ಹುಟ್ಟುತ್ತವೆಯೆಂದುದರಿಂದ ಜ್ಞಾನಿಗೂ ಯಾವ ವಾಸನೆ ಇಲ್ಲವಾದುದರಿಂದ ಅವನು ಮಾಡುವ ಸುಕೃತದುಷ್ಕೃತಗಳಿಗೆ ಯಾವಫಲವೂ ಇಲ್ಲ. ತತ್ತ್ವಜ್ಞಾನದಿಂದ ಈ ಧರ್ಮಾಧರ್ಮಗಳು ನಾಶಹೊಂದುತ್ತವೆ. ಶಂಕಿಸುತ್ತಾನೆ. 'ನನು—' ಇತಿ. 'ಕಲ್ಪಕೋಟಿಶತಕೃತವಾದ ಈ ಕರ್ಮವು ಅನುಭವಿಸದೇ ನಾಶವಾಗುವುದಿಲ್ಲ' ಎಂಬ ವಚನವಿರುವುದರಿಂದ ಧರ್ಮಾಧರ್ಮಗಳು ತತ್ತ್ವಜ್ಞಾನದಿಂದ ನಾಶವಾಗುತ್ತದೆಂದು ಹೇಳಿರುವುದು ಸರಿಯಲ್ಲ. ಜ್ಞಾನಿಗಳೂ ನಾನಾದೇಹಗಳಿಂದ ಜಾಗ್ರತೆಯಾಗಿ ಅನು ಭವಿಸಿಯೇ ಕಳೆದುಕೊಳ್ಳುತ್ತಾರೆ ಎಂದು ಶಂಕಿಸುವವನಿಗೆ ತಾತ್ಪರ್ಯ. ಸಮಾಧಾನ ತೋರಿಸುತ್ತಾನೆ. 'ಇತಿಚೇನ್ನ—' ಇತಿ. 'ನಾಭುಕ್ತಂ—' ಇತ್ಯಾದಿವಾಕ್ಯಗಳಲ್ಲಿ ಹೇಳಿರುವ ಭೋಗಪದವು ವೇದಬೋಧಿತನಾಶಕವನ್ನು ಉಪಲಕ್ಷಣತ್ವರೂಪದಿಂದ ತಿಳಿಸು ತ್ತದೆ. ಅದು ಉಪಲಕ್ಷಕವೆಂದು ಸ್ವೀಕರಿಸದಿದ್ದರೆ ಪ್ರಾಯಶ್ಚಿತ್ತಾದಿಗಳಿಂದ ನಾಶ ವಾಗುತ್ತದೆಂದು ಹೇಳಿರುವುದು ಅಸಂಗತವಾಗಬೇಕಾಗುತ್ತದೆ. 'ಜ್ಞಾನಾಗ್ನಿಃ—' ಇತಿ. ಇದು ಸ್ಮೃತಿವಾಕ್ಯ. ಜ್ಞಾನವೆಂಬ ಬೆಂಕಿಯು ಸರ್ವಕರ್ಮಗಳಿಂದಉಂಟಾದ ಅದೃಷ್ಟ ವನ್ನು ಅಂದರೆ ಧರ್ಮಾಧರ್ಮಗಳನ್ನು, ಭಸ್ಮಸಾತ್ಕುರತೆ—ನಾಶಮಾಡುತ್ತದೆಂದರ್ಥ. ಶ್ರುತಿಪ್ರಮಾಣವನ್ನೂ ತೋರಿಸುತ್ತಾನೆ. 'ಕ್ಷೀಯಂತೇ—' ಹೀಗೆ ಹೇಳಿದರೂ ಇಲ್ಲಿ ಸರ್ವಶಬ್ದಕ್ಕೆ ಪ್ರಾರಬ್ಧಭಿನ್ನವಾದ ಸಕಲಸಂಚಿತ ಆಗಾಮಿಕರ್ಮಗಳೆಂದೇ ಅರ್ಥಮಾಡ

ಬೇಕು. ಅವುಗಳು ತತ್ತ್ವಜ್ಞಾನದಿಂದ ನಾಶ್ಯವಲ್ಲದೆ ಪ್ರಾರಬ್ಧಕರ್ಮಫಲವನ್ನು ಮಾತ್ರ ಅನುಭವಿಸಿಯೇ ತೀರಬೇಕು. ತದಭಿಪ್ರಾಯಮೇವ—ಪ್ರಾರಬ್ಧಕರ್ಮಾಭಿಪ್ರಾಯ ದಿಂದಲೇ ಆ ವಾಕ್ಯ ಹೇಳಿದೆಯೆಂದರ್ಥ.

**ಶಬ್ದೋ ಧ್ವನಿಶ್ಚ ವರ್ಣಶ್ಚ ಮೃದಂಗಾದಿಭವೋ ಧ್ವನಿಃ || ೧೬೪ ||**
**ಕಂಠಸಂಯೋಗಾದಿ ಜನ್ಯಾ ವರ್ಣಾಸ್ತೇ ಕಾದಯೋಮತಾಃ ||**
**ಸರ್ವಃ ಶಬ್ದೋ ನಭೋವೃತ್ತಿಃ ಶ್ರೋತ್ರೋತ್ಪನ್ನಸ್ತು ಗೃಹ್ಯತೇ || ೧೬೫ ||**
**ವೀಚೀತರಂಗನ್ಯಾಯೇನ ತದುತ್ಪತ್ತಿಸ್ತು ಕೀರ್ತಿತಾ ||**
**ಕದಂಬಗೋಲಕನ್ಯಾಯಾದುತ್ಪತ್ತಿಃ ಕಸ್ಯಚಿನ್ಮತೇ || ೧೬೬ ||**

ಶಬ್ದಂ ನಿರೂಪಯತಿ—ಶಬ್ದ ಇತಿ | ನಭೋವೃತ್ತಿರಾಕಾಶಸಮವೇತಃ | ದೂರಸ್ಥಶಬ್ದ ಸ್ಯಾಗ್ರಹಣಾದಾಹ—ಶ್ರೋತ್ರೇತಿ | ನನು ಮೃದಂಗಾದ್ಯವಚ್ಛೇದೇನೋತ್ಪನ್ನೇ ಶಬ್ದೇ ಶ್ರೋತ್ರೇ ಕಥಮುತ್ಪತ್ತಿರತ ಆಹ ವೀಚೀತಿ | ಆದ್ಯಶಬ್ದೇನ ಬಹಿರ್ದಿಗವ ಚ್ಛಿನ್ನೋऽನ್ಯಶಬ್ದಸ್ತೇನೈವ ಶಬ್ದೇನ ಜನ್ಯತೇ | ಕದಂಬೇತಿ | ಆದ್ಯಶಬ್ದಾದ್ ದಶದಿಕ್ಷು ದಶಶಬ್ದಾ ಉತ್ಪದ್ಯಂತೇ, ತೈಶ್ಚಾನ್ಯೇ ದಶಶಬ್ದಾ ಉತ್ಪದ್ಯಂತೇ ಇತಿ ಭಾವಃ || ಅಸ್ಮಿನ್ಮತೇ ಕಲ್ಪನಾಗೌರವಾದುಕ್ತಂ—ಕಸ್ಯಚಿನ್ಮತೇ ಇತಿ || ೧೬೬ ||

ಶಬ್ದಗುಣವನ್ನು ತೋರಿಸುತ್ತಾನೆ—'ಶಬ್ದ—' ಇತಿ. ಶ್ರವಣೇಂದ್ರಿಯದಿಂದ ಗ್ರಾಹ್ಯವಾದಗುಣಕ್ಕೆ ಶಬ್ದವೆಂದು ಹೆಸರು. ಇದು ಧ್ವನಿವರ್ಣವೆಂದು ಎರಡುವಿಧ. ಮೃದಂಗಾದಿಗಳಿಂದುಂಟಾದಶಬ್ದಕ್ಕೆ ಧ್ವನಿಯೆಂದು ಹೆಸರು. ವರ್ಣವಿಶೇಷತಿಳಿಯದೆ ಕಿವಿಗೆ ಕೇಳುವುದು. ಹತ್ತಿರಬಂದಂತೆ ಅಧಿಕವಾಗಿ ಕೇಳುತ್ತದೆ. ಕಂಠತಾಲ್ವಾದಿಗಳಲ್ಲಿ ಸಂಯೋಗದಿಂದ ಉಂಟಾಗುವ ಶಬ್ದಕ್ಕೆ ವರ್ಣವೆಂದು ಹೆಸರು. ಈ ಎಲ್ಲಾಶಬ್ದಗಳೂ ಆಕಾಶದಲ್ಲಿ ಸಮವಾಯಸಂಬಂಧದಿಂದ ಇರುತ್ತವೆ. ಮೃದಂಗಾದ್ಯವಚ್ಛೇದದಿಂ ದುಂಟಾದಶಬ್ದವು ಕಿವಿಯಲ್ಲುಂಟಾಗುವರೀತಿ ಎರಡುವಿಧವಾಗಿ ಹೇಳುತ್ತಾರೆ. ಕದಂಬ ಮುಕುಲನ್ಯಾಯದಿಂದ ಒಂದುರೀತಿ. ಜಲತರಂಗನ್ಯಾಯದಿಂದ ಒಂದುರೀತಿ. ಕದಂಬಮುಕುಲವು ಏಕಕಾಲದಲ್ಲಿ ವಿಕಾಸಹೊಂದುತ್ತದೆ. ಅದರ ಪತ್ರಗಳು ನಾಲ್ಕು ದಿಕ್ಕುಗಳಲ್ಲಿಯೂ ಒಂದೇಸಾರಿ ವಿಸ್ತೃತವಾಗುತ್ತದೆ. ಅದರಂತೆ ಒಂದುಶಬ್ದ ಹುಟ್ಟಿ ತೆಂದರೆ ಅದು ಹತ್ತುದಿಕ್ಕುಗಳಲ್ಲಿ ಏಕಕಾಲದಲ್ಲಿ ಹತ್ತುಶಬ್ದಗಳನ್ನು ಹುಟ್ಟಿಸುತ್ತದೆ. ಅವುಗಳಿಂದ ಪುನಃ ಹತ್ತುಶಬ್ದಗಳು ಏಕಕಾಲದಲ್ಲಿ ಹುಟ್ಟುತ್ತವೆ. ಹೀಗೆ ಏಕಕಾಲದಲ್ಲಿ ಹುಟ್ಟುತ್ತಾಹೋಗುತ್ತವೆ. ಎರಡನೆಯ ನ್ಯಾಯದಿಂದ ಪ್ರಥಮಕ್ಷಣದಲ್ಲಿ ಒಂದುಶಬ್ದ ಹುಟ್ಟಿದರೆ, ಅದರಿಂದ ಎರಡನೆಯಕ್ಷಣದಲ್ಲಿ ಇನ್ನೊಂದುಶಬ್ದ ಹುಟ್ಟುತ್ತದೆ. ತೃತೀಯ ಕ್ಷಣದಲ್ಲಿ ಮೊದಲನೆಯಶಬ್ದವು ನಾಶವಾಗುತ್ತದೆ. ಅಲೆಗಳೂ ಹೀಗೆಯೇಹುಟ್ಟಿ ನಾಶ ವಾಗುತ್ತವೆ. ಹೀಗೆ ಪೂರ್ವಪೂರ್ವಶಬ್ದಗಳಿಂದ ಉತ್ತರೋತ್ತರಶಬ್ದಗಳು ಹುಟ್ಟಿ,

ಉತ್ತರೋತ್ತರಶಬ್ದಗಳಿಂದ ಪೂರ್ವಪೂರ್ವಶಬ್ದಗಳು ನಾಶವಾಗುತ್ತವೆ. ಶಬ್ದವು ಯಾವಾಗಲೂ ಕಂಠತಾಲ್ವಾದಿಸಂಯೋಗದಿಂದ, ಅಥವಾ ಬಿದಿರುಮುಂತಾದವುಗಳ ದಲ ದ್ವಯವಿಭಾಗದಿಂದ, ಅಥವಾ ಭೇರಿದಂಡಸಂಯೋಗದಿಂದ ಉಂಟಾಗುವುದರಿಂದ, ಪೂರ್ವೋಕ್ತನ್ಯಾಯಗಳಿಂದ ಅನೇಕ ಶಬ್ದೋತ್ಪತ್ತಿಯನ್ನಂಗೀಕರಿಸಿರುವುದರಿಂದ ಅನಿತ್ಯ ವಾಗುತ್ತದೆ. ಆದುದರಿಂದ ಭೇರೀಶಬ್ದವಾದರೂ ಅದು ಕಿವಿಯಲ್ಲಿ ಉಂಟಾದಾಗ ಮಾತ್ರ ಪ್ರತ್ಯಕ್ಷವಾಗುತ್ತದೆ. ಭೇರೀಶಬ್ದಕ್ಕೆ ಪ್ರತ್ಯಕ್ಷತ್ವವಿಲ್ಲ.

**ಉತ್ಪನ್ನಃ ಕೋ ವಿನಷ್ಟಃ ಕ ಇತಿ ಬುದ್ಧೇರನಿತ್ಯತಾ ||**
**ಸೋಽಯಂ ಕ ಇತಿ ಬುದ್ಧಿಸ್ತು ಸಾಜಾತ್ಯಮವಲಂಬತೇ || ೧೬೭ ||**
**ತದೇವೌಷಧಮಿತ್ಯಾದೌ ಸಜಾತೀಯೇಽಪಿ ದರ್ಶನಾತ್ |**
**ತಸ್ಮಾದನಿತ್ಯಾ ಏವೇತಿ ವರ್ಣಾಃ ಸರ್ವೇ ಮತಂಹಿನಃ || ೧೬೮ ||**
**ಇತಿ ಶ್ರೀ ವಿಶ್ವನಾಥಪಂಚಾನನಕೃತಾ ಕಾರಿಕಾವಲೀ ಸಮಾಪ್ತಾ ||**

ನನು ಶಬ್ದಸ್ಯ ನಿತ್ಯತ್ವಾದುತ್ಪತ್ತಿಕಥನಮಸಂಗತಮತ ಆಹ—ಉತ್ಪನ್ನ ಇತಿ | ಶಬ್ದಾನಾಮುತ್ಪಾದವಿನಾಶಪ್ರತ್ಯಯಶಾಲಿತ್ವಾದನಿತ್ಯತ್ವಮಿತ್ಯರ್ಥಃ | ನನು ಸ ಏವಾಯಂ ಕಕಾರ ಇತ್ಯಾದಿಪ್ರತ್ಯಭಿಜ್ಞಾನಾತ್ ಶಬ್ದಾನಾಂ ನಿತ್ಯತ್ವಮ್, ಇತ್ಥಂಚೋತ್ಪಾದ ವಿನಾಶಬುದ್ಧಿರ್ಭ್ರಮರೂಪೈವೇತ್ಯತ ಆಹ—ಸೋಽಯಮಿತಿ | ಸಾಜಾತ್ಯಮಿತಿ | ತತ್ರ ಪ್ರತ್ಯಭಿಜ್ಞಾನಸ್ಯ ತತ್ಸಜಾತೀಯತ್ವಂ ವಿಷಯಃ, ನತು ತದ್ವ್ಯಕ್ತ್ಯಭೇದೋ ವಿಷಯಃ | ಉಕ್ತಪ್ರತೀತಿವಿರೋಧಾತ್ | ಇತ್ಥಂ ಚ ದ್ವಯೋರಪಿ ಪ್ರತೀತ್ಯೋರ ಭ್ರಮತ್ವಮಿತಿ || ನನು ಸಜಾತೀಯೇ ಸೋಽಯಮಿತಿ ಪ್ರತ್ಯಭಿಜ್ಞಾ ಕುತ್ರ ದೃಷ್ಟೇತ್ಯತ ಆಹ—ತದೇವೇತಿ | ಯದೌಷಧಂ ಮಯಾ ಕೃತಂ ತದೌಷಧ ಮನ್ಯೇನಾಪಿ ಕೃತಮಿತ್ಯಾದಿದರ್ಶನಾದಿತಿ ಭಾವಃ || ೧೬೮ ||

ಇತಿ ಶ್ರೀಮಹಾಮಹೋಪಾಧ್ಯಾಯವಿದ್ಯಾನಿವಾಸ ಭಟ್ಟಾಚಾರ್ಯಪುತ್ರ
ಶ್ರೀಯುತವಿಶ್ವನಾಥ ಪಂಚಾನನ ಭಟ್ಟಾಚಾರ್ಯವಿರಚಿತಾಯಾಂ
ಸಿದ್ಧಾಂತಮುಕ್ತಾವಲ್ಯಾಂ ಗುಣನಿರೂಪಣಮ್ ||
|| ಸಮಾಪ್ತಶ್ಚಾಯಂ ಗ್ರಂಥಃ ||

ಮೀಮಾಂಸಕರು ಶಬ್ದ ನಿತ್ಯವೆಂದು ಅಂಗೀಕರಿಸಿರುತ್ತಾರೆ. ಅದನ್ನು ಖಂಡಿಸು ತ್ತಾನೆ. 'ಉತ್ಪನ್ನಃ—' ಇತಿ. ಕ ಶಬ್ದ ಹುಟ್ಟಿತು, ಕಶಬ್ದವು ನಾಶವಾಯಿತು ಇತ್ಯಾದಿಪ್ರತೀತಿ ಲೋಕಪ್ರಸಿದ್ಧವಾದುದರಿಂದ ಶಬ್ದವು ಅನಿತ್ಯವೆಂದು ತಾತ್ಪರ್ಯ. 'ಆದಿಮತ್ತ್ವಾದೈಂದ್ರಿಯಕತ್ವಾತ್ ಕೃತಕವದುಪಚಾರಾಚ್ಚ' ಎಂದು ನ್ಯಾಯಸೂತ್ರ. ಇದು ಬಹಿರಿಂದ್ರಿಯದಿಂದುಂಟಾದಲೌಕಿಕಪ್ರತ್ಯಕ್ಷಕ್ಕೆ ವಿಷಯವಾಗಿ ಶಬ್ದತ್ವ

ಜಾತಿಯಿಂದ ಕೂಡಿರುವುದರಿಂದಲೂ, ಉತ್ಪಾದವಿನಾಶಶಾಲಿಯಾದುದರಿಂದಲೂ ಅನಿತ್ಯವಾಗುತ್ತದೆಂದು ಸೂತ್ರಾರ್ಥ. 'ನನು—' ಎಂಬುದರಿಂದ ಮೀಮಾಂಸಕನ ಶಂಕೆಯನ್ನು ತೋರಿಸಿ ಸಮಾಧಾನ ಹೇಳುತ್ತಾನೆ. ಅದೇ ಈ ಕಕಾರವೆಂಬ ಪ್ರತ್ಯಭಿಜ್ಞಾ ಬರವುದರಿಂದ ಶಬ್ದ ನಿತ್ಯವೆಂದೂ ಕಕಾರ ಉತ್ಪನ್ನವಾಗಿದೆ. ಕಕಾರವಿನಷ್ಟವಾಗಿದೆ ಇತ್ಯಾದಿ ಪ್ರತೀತಿಭ್ರಮರೂಪವೆಂದೂ ಪೂರ್ವಪಕ್ಷಿಯ ಅಭಿಪ್ರಾಯ. 'ಸೋಽಯಂಕಃ' ಎಂಬ ಪ್ರತ್ಯಭಿಜ್ಞಾ ಬರಬೇಕಾದರೆ ಶಬ್ದ ನಿತ್ಯವಾಗಿರಬೇಕೆಂಬ ನಿಯಮವಿಲ್ಲ. ಅಲ್ಲಿ ಪ್ರತ್ಯಭಿಜ್ಞಾಜ್ಞಾನವು ಕಕಾರಸಾಜಾತ್ಯವನ್ನು ವಿಷಯೀಕರಿಸುವುದಲ್ಲದೆ ಕಕಾರವ್ಯಕ್ತಿಯ ಅಭೇದವನ್ನು ವಿಷಯೀಕರಿಸುವುದಿಲ್ಲ. ಇದು ಹಿಂದಿನ ಕಕಾರ ಜಾತೀಯವಾದ ಕಕಾರ— (ಕತ್ವಜಾತ್ಯಾಕ್ರಾಂತವಾದ ಕಕಾರವೆಂದರ್ಥ.) ವೆಂದು 'ಸೋಽಯಂಕಃ' ಎಂಬುದಕ್ಕೆ ತಾತ್ಪರ್ಯ. ಸಜಾತೀಯವಸ್ತುವಿನಲ್ಲಿಯೂ ಪ್ರತ್ಯಭಿಜ್ಞಾ ಲೋಕಸಿದ್ಧವಾಗಿದೆಯೆಂದು ಉದಾಹರಣೆ ತೋರಿಸುತ್ತಾನೆ. 'ತದೇವೇತಿ—' ನಾನು ಯಾವ ಔಷಧಿಮಾಡಿದೆನೋ ಅದೇ ಔಷಧಿ ರಾಮನಿಂದಲೂ ಮಾಡಲ್ಪಟ್ಟಿದೆ' ಎಂದು ಪ್ರತ್ಯಭಿಜ್ಞಾ ಬರುತ್ತದೆ. ಇಲ್ಲಿ ಬೇರೆ ಬೇರೆ ಔಷಧಿಗಳಾಗಿದ್ದರೂ 'ಅದೇ ಇದು' ಎಂದು ವ್ಯವಹಾರವಿದೆ. ಆದಿಪದದಿಂದ—ದೀಪಜ್ವಾಲೆ ಬೇರೆ ಬೇರೆಯಾಗಿದ್ದರೂ 'ಸೈವೇಯಂ ದೀಪಕಲಿಕಾ' ಎಂಬ ಪ್ರತ್ಯಭಿಜ್ಞಾನವನ್ನು ತೆಗೆದುಕೊಳ್ಳಬೇಕು. ಇದರಿಂದ ಸಜಾತೀಯವೇ ಅಲ್ಲಿ ವಿಷಯವೆಂದು ವ್ಯಕ್ತವಾಗುತ್ತದೆ. ಶಬ್ದದ ಉತ್ಪತ್ತಿವಿನಾಶ ಲೋಕಪ್ರಸಿದ್ಧವಾದುದರಿಂದ ಅದು ಭ್ರಮೆಯೆಂಬುದು ಪ್ರಮಾಣಸಿದ್ಧವಲ್ಲ. ಶಬ್ದದಿಂದ ಶಬ್ದ ಹುಟ್ಟುತ್ತಾ ಉಪಾಂತ್ಯಶಬ್ದದಿಂದ ಕೊನೆಯಶಬ್ದಕ್ಕೂ, ಕೊನೆಯಶಬ್ದದಿಂದ ಉಪಾಂತ್ಯಶಬ್ದಕ್ಕೂ ಸುಂದೋಪಸುಂದನ್ಯಾಯದಿಂದ ನಾಶ್ಯನಾಶಕಭಾವವನ್ನು ತಾರ್ಕಿಕರು ಅಂಗೀಕರಿಸಿರುತ್ತಾರೆ. ದೀಪಕಲಿಕಾದಿದೃಷ್ಟಾಂತದಿಂದ ತತ್ಸಜಾತೀಯಾಭೇದವೇ ತೋರುವುದಲ್ಲದೆ ತದ್ವ್ಯಕ್ತ್ಯಭೇದವಲ್ಲವೆಂದು ಅವರ ಸಿದ್ಧಾಂತ.

ಮುಕ್ತಾವಳೀ ಗುಣಖಂಡದ ಕನ್ನಡವ್ಯಾಖ್ಯಾನ ಮುಗಿದಿದೆ.

—ಶ್ರೀಃ—

# ಪರಿಶಿಷ್ಟ

## ತರ್ಕಶಾಸ್ತ್ರದಲ್ಲಿ (ಪ್ರಥಮ ಪರಿಚಯ.) ಪಾರಿಭಾಷಿಕ ಪದಾರ್ಥ ವಿವರಣ

### ಪ್ರಮಾಣಗಳು

ಚಾರ್ವಾಕರು ಪ್ರತ್ಯಕ್ಷವೊಂದೇ ಪ್ರಮಾಣವೆಂದು ಅಂಗೀಕರಿಸಿರುತ್ತಾರೆ. ಕಾಣಾದ ಮತದಲ್ಲಿ ಪ್ರತ್ಯಕ್ಷ, ಅನುಮಾನವೆಂದು ಎರಡು ಪ್ರಮಾಣ. ಸಾಂಖ್ಯರಲ್ಲಿ ಪ್ರತ್ಯಕ್ಷ, ಅನುಮಾನ, ಶಬ್ದಗಳೆಂದು ಮೂರು ಪ್ರಮಾಣಗಳು. ಉಪಮಾನ ಸೇರಿ ನಾಲ್ಕು ಪ್ರಮಾಣಗಳು ನ್ಯಾಯಮತದಲ್ಲಿ. ಮೀಮಾಂಸಕರು ಅರ್ಥಾಪತ್ತಿ, ಅನುಪಲಬ್ಧಿಗಳನ್ನು ಸೇರಿಸಿ ಆರನ್ನು ಅಂಗೀಕರಿಸಿರುತ್ತಾರೆ. ಸಂಭವ, ಐತಿಹ್ಯಗಳನ್ನು ಅಧಿಕ ಸೇರಿಸಿ ಪೌರಾಣಿಕರು ಎಂಟು ಪ್ರಮಾಣಗಳನ್ನು ಹೇಳುತ್ತಾರೆ. ಚೇಷ್ಟೆಯನ್ನೂ ಹೆಚ್ಚಾಗಿ ಹೇಳಿ ಒಂಬತ್ತು ಪ್ರಮಾಣಗಳೆಂದು ಮಾಂತ್ರಿಕರು (ಭರತನೂ) ಸಹ ಒಪ್ಪಿರುತ್ತಾರೆ.

ಅರ್ಥಾಪತ್ತ್ಯಾದಿಗಳನ್ನು ಅನುಮಾನ, ಶಬ್ದಪ್ರಮಾಣಗಳಲ್ಲಿಯೇ ಸೇರಿಸಿ ನಾಲ್ಕು ಪ್ರಮಾಣಗಳೇ ನ್ಯಾಯವೆಂದು ನೈಯಾಯಿಕರ ಸಿದ್ಧಾಂತ.

### ಪದಾರ್ಥಗಳು

ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ ಅಭಾವಗಳೆಂದು ಏಳು ಪದಾರ್ಥಗಳು. ಇವುಗಳಲ್ಲಿ ದ್ರವ್ಯವು,—ಪೃಥಿವೀ, ಅಪ್, ತೇಜಸ್ಸು, ವಾಯು, ಆಕಾಶ, ಕಾಲ, ದಿಕ್, ಆತ್ಮಾ ಮನಸ್ಸೆಂದು ಒಂಬತ್ತು ವಿಧವಾಗಿರುತ್ತದೆ.

ರೂಪ, ರಸ, ಗಂಧ, ಸ್ಪರ್ಶ, ಸಂಖ್ಯಾ, ಪರಿಮಾಣ, ಪೃಥಕ್ತ್ವ, ಸಂಯೋಗ, ವಿಭಾಗ, ಪರತ್ವ, ಅಪರತ್ವ, ಗುರುತ್ವ, ದ್ರವತ್ವ, ಸ್ನೇಹ, ಶಬ್ದ, ಬುದ್ಧಿ, ಸುಖ, ದುಃಖ, ಇಚ್ಛಾ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ, ಸಂಸ್ಕಾರಗಳೆಂದು. ೨೪ ಗುಣಗಳು. ಕರ್ಮವು ಉತ್‌ಕ್ಷೇಪಣ, ಅಪಕ್ಷೇಪಣ, ಆಕುಂಚನ, ಪ್ರಸಾರಣ, ಗಮನಗಳೆಂದು ಐದು ವಿಧ.

ಪರ, ಅಪರ (ಪರಾಪರವೆಂದೂ ಕೆಲವರ ಮತ) ಗಳೆಂದು ಸಾಮಾನ್ಯ ಎರಡು ವಿಧ. ವಿಶೇಷವು ಅನಂತವಾಗಿದೆ. ಸಮವಾಯವು ಒಂದೇ. ಪ್ರಾಗಭಾವ, ಪ್ರಧ್ವಂಸಾಭಾವ, ಅನ್ಯೋನ್ಯಾಭಾವ, ಅತ್ಯಂತಾಭಾವಗಳೆಂದು ಅಭಾವ ನಾಲ್ಕುವಿಧವಾಗಿದೆ. ಈ ಏಳರಲ್ಲಿಯೇ ಇತರ ಶಾಸ್ತ್ರಕಾರರು ಅಂಗೀಕರಿಸಿದ ಪದಾರ್ಥಗಳು ಸೇರಿರುತ್ತವೆ. ಕತ್ತಲೆಯೆಂಬ ಮೀಮಾಂಸಕನು ಒಪ್ಪಿದ ಪದಾರ್ಥವು ತೇಜಸ್ಸಾಮಾನ್ಯಾಭಾವದಲ್ಲಿ

ಯೇ ಸೇರುತ್ತದೆ. ಸಾದೃಶ್ಯವು ಸಾಧಾರಣ ಧರ್ಮರೂಪವಾಗಿ ಗುಣಾದಿಗಳಲ್ಲಿ ಸೇರುತ್ತದೆ. ಪ್ರತಿಬಂಧಕದ ಅಭಾವದಿಂದಲೇ ಕಾರ್ಯೋತ್ಪತ್ತಿಯಾಗುವಾಗ ಅತಿರಿಕ್ತ ವಾಗಿ ಶಕ್ತಿಯೆಂಬ ಪದಾರ್ಥ ಕಲ್ಪಿಸಬೇಕಾಗಿಲ್ಲ. ಗುರುತ್ವಾಭಾವರೂಪವೇ ಲಘುತ್ವ. ಮೃದುತ್ವ, ಕಠಿನತ್ವಾದಿಗಳು ಸಂಯೋಗದಲ್ಲಿ ಸೇರುತ್ತವೆ. ಸ್ವರೂಪ ಸಂಬಂಧವು ಸ್ಥಲಭೇದದಿಂದ ಪ್ರತಿಯೋಗ್ಯನುಯೋಗಿಗಳಲ್ಲಿ ಸೇರುತ್ತದೆ. ಕಾರ್ಯತಾ, ವಿಷಯತಾ, ಕಾಲಿಕವಿಶೇಷಣತಾಸಂಬಂಧ, ದೈಶಿಕವಿಶೇಷಣತಾಸಂಬಂಧಗಳು ಅಧಿಕರಣಸ್ವರೂಪಗಳಾ ಗಿರುತ್ತವೆ. ಹೀಗೆ ಇತರ ಪದಾರ್ಥಗಳನ್ನು ಯುಕ್ತಿಯಿಂದ ಏಳರಲ್ಲಿಯೇ ಅಂತರ್ಭಾವ ಹೊಂದಿವೆಯೆಂದು ತಿಳಿಯಬೇಕು.

## ನಿತ್ಯ ಪದಾರ್ಥಗಳು

ಸಾಮಾನ್ಯ (ಜಾತಿ) ವಿಶೇಷ, ಸಮವಾಯ, ಅತ್ಯಂತಾಭಾವ, ಅನ್ಯೋನ್ಯಾ ಭಾವಗಳೂ, ಪೃಥಿವೀ, ಅಪ್, ತೇಜೋವಾಯುಗಳ ಪರಮಾಣುಗಳೂ, ಆಕಾಶ, ಕಾಲ, ದಿಕ್, ಆತ್ಮಾ, ಮನಸ್ಸೂ, ಜಲ, ತೇಜೋವಾಯುಪರಮಾಣುಗಳಲ್ಲಿರುವ ರೂಪ, ರಸ, ಸ್ಪರ್ಶಗುಣಗಳೂ, ಜಲ ಪರಮಾಣುವಿನಲ್ಲಿರುವ ದ್ರವತ್ವ, ಸ್ನೇಹಗುಣಗಳೂ, ನಿತ್ಯವಸ್ತು ಗತ ಏಕತ್ವ ಪರಿಮಾಣಗಳೂ, ಈಶ್ವರನ ಜ್ಞಾನ, ಇಚ್ಛಾ, ಕೃತಿಗುಣಗಳೂ, ನಿತ್ಯ ಪದಾರ್ಥಗಳು. ಶಬ್ದ ಮತ್ತು ಬುದ್ಧಿಗಳು ಯಾವಾಗಲೂ ಎರಡುಕ್ಷಣವಿರುವವುಗಳು. ಅಪೇಕ್ಷಾಬುದ್ಧಿಯು ಮೂರುಕ್ಷಣದವರೆಗೆ ಇರುತ್ತದೆ. ಇನ್ನುಳಿದವುಗಳು ಅನಿತ್ಯ ಪದಾರ್ಥಗಳು.

## ವ್ಯಾಪ್ಯವೃತ್ತಿ ಪದಾರ್ಥ

ತನ್ನ ಅಧಿಕರಣ (ಆಶ್ರಯ)ದಲ್ಲಿರುವ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾಗ ದಿರುವುದು ವ್ಯಾಪ್ಯವೃತ್ತಿ. ದ್ರವ್ಯತ್ವ, ಗುಣತ್ವ, ಕರ್ಮತ್ವಾ ಭಾವತ್ವ, ಘಟತ್ವಾದಿಗಳು ವ್ಯಾಪ್ಯವೃತ್ತಿ ಪದಾರ್ಥಗಳಾಗುತ್ತವೆ. ದ್ರವ್ಯತ್ವದ ಅಧಿಕರಣವಾದ ಪೃಥಿವ್ಯಾದಿಗಳಲ್ಲಿ ದ್ರವ್ಯತ್ವವಿಲ್ಲವೆಂದು ಹೇಳಲು ಸಾಧ್ಯವಿಲ್ಲ.

## ಅವ್ಯಾಪ್ಯವೃತ್ತಿಪದಾರ್ಥ

ತನ್ನ ಅಧಿಕರಣದಲ್ಲಿಯೇ ತನ್ನ ಅಭಾವ ಹೇಳಲು ಸಾಧ್ಯವಾದರೆ ಆಗ ಅದು ಅವ್ಯಾಪ್ಯವೃತ್ತಿಯಾಗುತ್ತದೆ. ಕಾಲಿಕಾವ್ಯಾಪ್ಯವೃತ್ತಿ, ದೈಶಿಕಾವ್ಯಾಪ್ಯವೃತ್ತಿಯೆಂದು ಇದು ಎರಡು ವಿಧ. ದ್ರವ್ಯ, ಗುಣ, ಕರ್ಮಗಳು ಕಾಲಿಕಾವ್ಯಾಪ್ಯವೃತ್ತಿಗಳು. ಕಪಿ ಸಂಯೋಗ, ವಿಭಾಗಾದಿಗಳು ದೈಶಿಕಾವ್ಯಾಪ್ಯವೃತ್ತಿಗಳು. (ಸಂಯೋಗ ಸಂಬಂಧದಿಂದ ದ್ರವ್ಯವೂ.) ದೈಶಿಕಾವ್ಯಾಪ್ಯವೃತ್ತಿಗಳೆಲ್ಲವೂ ಕಾಲಿಕಾವ್ಯಾಪ್ಯವೃತ್ತಿಗಳೆಂದು ನಿಯಮ.

ವ್ಯತ್ಯಾಸವಾದ ನಿಯಮವಿಲ್ಲ. ಸಂಯೋಗತ್ವದಿಂದ ಸಂಯೋಗವು ವ್ಯಾಪ್ಯವೃತ್ತಿಯೆಂದು ಪ್ರಾಚೀನರ ಮತ.

## ಕೇವಲಾನ್ವಯಿ ಪದಾರ್ಥ

ಸ್ವರೂಪ ಸಂಬಂಧದಿಂದ ಎಲ್ಲಾ ಕಡೆ ಇರುವುದು, ಅಥವಾ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾಗದಿರುವುದು ಕೇವಲಾನ್ವಯಿ. ವಸ್ತುತ್ವ, ವಾಚ್ಯತ್ವ, ಪ್ರಮೇಯತ್ವ, ಜ್ಞೇಯತ್ವ, ಗಗನಾಭಾವ, ಕಪಿಸಂಯೋಗಾಭಾವ, ವ್ಯಧಿಕರಣಸಂಬಂಧಾವಚ್ಛಿನ್ನಪ್ರತಿಯೋಗಿತಾಕಾಭಾವ, ವ್ಯಧಿಕರಣ ಧರ್ಮಾವಚ್ಛಿನ್ನ ಪ್ರತಿಯೋಗಿತಾಕಾಭಾವ ಮುಂತಾದವುಗಳು ಕೇವಲಾನ್ವಯಿಪದಾರ್ಥಗಳಾಗುತ್ತವೆ. ಇಚ್ಛಾವಿಷಯತ್ವವೇ ವಾಚ್ಯತ್ವ ಪ್ರಮಾವಿಷಯ ಪ್ರಮೇಯ. ಜ್ಞಾನವಿಷಯ ಜ್ಞೇಯ. ಸಂಯೋಗಸಂಬಂಧದಿಂದ ಗುಣಾಭಾವವೆಂದರೆ ವ್ಯಧಿಕರಣಸಂಬ....ಕಾ ಭಾವವಾಗುತ್ತದೆ. ಘಟತ್ವೇನ ಪಟಾಭಾವವೆಂದರೆ ವ್ಯಧಿಕರಣಧರ್ಮಾ....ಕಾಭಾವವಾಗುತ್ತದೆ.

## ವ್ಯತಿರೇಕಿ ಪದಾರ್ಥಗಳು

ಸ್ವರೂಪಸಂಬಂಧದಿಂದ ಎಲ್ಲೆಡೆ ಇಲ್ಲದವುಗಳು. ಕೇವಲಾನ್ವಯಿ ಪದಾರ್ಥಭಿನ್ನವಾದ ದ್ರವ್ಯತ್ವಾದಿಗಳೆಲ್ಲಾ ವ್ಯತಿರೇಕಿ ಪದಾರ್ಥಗಳಾಗುತ್ತವೆ.

## ಧರ್ಮಾವಚ್ಛಿನ್ನಪದಾರ್ಥಗಳು

ಕಾರ್ಯತಾ, ಕಾರಣತಾ, ಆಧೇಯತಾ, ಪ್ರತಿಯೋಗಿತಾ, ಅನುಯೋಗಿತಾ, ಲಕ್ಷ್ಯತಾ, ಲಕ್ಷಣತಾ, ವ್ಯಾಪ್ಯತಾ, ವ್ಯಾಪಕತಾ, ನಿರೂಪ್ಯತಾ, ನಿರೂಪಕತಾ ಮುಂತಾದವುಗಳು ಒಂದು ಪದಾರ್ಥದಲ್ಲಿದ್ದರೆ ಆಗ ಅವುಗಳು ಆ ಪದಾರ್ಥದಲ್ಲಿರುವ ಧರ್ಮದಿಂದ ಅವಚ್ಛಿನ್ನವಾಗಿರುತ್ತವೆ. ಘಟದಲ್ಲಿರೆ ಘಟತ್ವಾವಚ್ಛಿನ್ನಕಾರ್ಯತಾದಿಗಳಾಗುತ್ತವೆ. ಪ್ರಕಾರತಾ, ಪ್ರತಿಯೋಗಿತಾ, ಕಾರ್ಯತಾ, ಕಾರಣತಾ, ಆಧೇಯತಾ, ಅವಚ್ಛೇದಕತಾ, ವ್ಯಾಪ್ಯತಾ, ವ್ಯಾಪಕತಾ, ಮುಂತಾದವುಗಳು ನಿಯತವಾಗಿ ಸಂಬಂಧಾವಚ್ಛಿನ್ನಗಳಾಗಿರುತ್ತವೆ. ಅನುಯೋಗಿತಾ, ಅಧಿಕರಣತಾ, ವಿಶೇಷ್ಯತಾ, ಲಕ್ಷತಾ, ಸಂಸರ್ಗತಾಮುಂತಾದವುಗಳು ನಿಯತವಾಗಿ ಸಂಬಂಧಾನವಚ್ಛಿನ್ನಗಳಾಗಿರುತ್ತವೆ.

## ಏಕವಿಧಪದಾರ್ಥ

ಈಶ್ವರ, ಆಕಾಶ, ಕಾಲ, ದಿಕ್, ಸತ್ತಾಜಾತಿ, ಸಮವಾಯ ಇವು ಒಂದಾಗಿರುತ್ತವೆ.

## ಎರಡಾಗಿರುವ ಪದಾರ್ಥ

ನಿತ್ಯ, ಅನಿತ್ಯ ಭೇದದಿಂದ ಪೃಥಿವೀ, ಅಪ್, ತೇಜಸ್ಸು ವಾಯುಗಳು ಎರಡು ವಿಧಗಳಾಗಿರುತ್ತವೆ. ಜೀವಾತ್ಮಾ, ಪರಮಾತ್ಮಾ ಎಂದು ಆತ್ಮನೂ, ಪರ, ಅಪರಗಳೆಂದು ಸಾಮಾನ್ಯವೂ ಎರಡು ವಿಧ. ಸುರಭಿ, ಅಸುರಭಿ ಎಂದು ಗಂಧ, ಕರ್ಮಜಸಂಯೋಗ, ಸಂಯೋಗಜಸಂಯೋಗವೆಂದು ಸಂಯೋಗವು ದ್ವಿವಿಧ. ಹಸ್ತಕ್ರಿಯೆಯಿಂದ ಪುಸ್ತಕ ಸಂಯೋಗವಾದರೆ ಅದು ಕರ್ಮಜಸಂಯೋಗ. ಹಸ್ತಪುಸ್ತಕ ಸಂಯೋಗದಿಂದ ಶರೀರ ಪುಸ್ತಕಸಂಯೋಗವಾದರೆ ಅದು ಸಂಯೋಗಜಸಂಯೋಗ. ಹೀಗೆ ವಿಭಾಗವೂ ಕರ್ಮಜ, ವಿಭಾಗಜವೆಂದು ಎರಡು ವಿಧ. ಕರ್ಮಜಸಂಯೋಗವು ಅಭಿಘಾತ ಸಂಯೋಗ, ನೋದನಸಂಯೋಗವೆಂದು ೨ವಿಧ. ಶಬ್ದಕ್ಕೆ ಕಾರಣವಾದದ್ದು ಅಭಿಘಾತ ಸಂಯೋಗ. ಶಬ್ದಕ್ಕೆ ಕಾರಣವಾಗದಿರುವುದು ನೋದನಸಂಯೋಗ. ಹೀಗೆ ವಿಭಾಗಜ ವಿಭಾಗವೂ ಕಾರಣಮಾತ್ರ ವಿಭಾಗಜನ್ಯ, ಕಾರಣಾಕಾರಣವಿಭಾಗಜನ್ಯವೆಂದು ಎರಡು ವಿಧ. ದಿಕ್ಕೃತ, ಕಾಲಕೃತಗಳೆಂದು ಪರತ್ವ, ಅಪರತ್ವಗಳೂ ಎರಡುವಿಧ. ದೂರ ದಲ್ಲಿದ್ದರೆ ದಿಕ್ಕೃತ ಪರತ್ವ. ಹತ್ತಿರದಲ್ಲಿದ್ದರೆ ದಿಕ್ಕೃತ ಅಪರತ್ವ. ಜ್ಯೇಷ್ಠನಲ್ಲಿ ಕಾಲಕೃತಪರತ್ವ, ಕನಿಷ್ಠನಲ್ಲಿ ಕಾಲಕೃತ ಅಪರತ್ವ. ಸಾಂಸಿದ್ಧಿಕ, ನೈಮಿತ್ತಿಕವೆಂದು ದ್ರವತ್ವವೂ ಎರಡು ವಿಧ. ಜಲದಲ್ಲಿ ಸಾಂಸಿದ್ಧಿಕವೂ, ಪೃಥಿವೀತೇಜಸ್ಸುಗಳಲ್ಲಿ ನೈಮಿತ್ತಿಕವೂ ಇರುತ್ತವೆ. ಧ್ವನ್ಯಾತ್ಮಕ, ವರ್ಣಾತ್ಮಕವೆಂದು ಶಬ್ದ ೨ವಿಧ. ಭೇರ್ಯಾದಿಹೊಡೆತದಿಂದಾಗುವುದು ಧ್ವನ್ಯಾತ್ಮಕ. ಸಂಸ್ಕೃತಭಾಷಾದಿಗಳು ವರ್ಣಾ ತ್ಮಕಗಳು. ಸ್ಮೃತಿ, ಅನುಭವಗಳೆಂದು ಬುದ್ಧಿ ಎರಡು ವಿಧ. ಯಥಾರ್ಥ, ಅಯ ತಾರ್ಥವೆಂದು ಅನುಭವ ೨ವಿಧ. ಸವಿಕಲ್ಪಕ, ನಿರ್ವಿಕಲ್ಪಕವೆಂದು ಪ್ರತ್ಯಕ್ಷ ೨ವಿಧ. ಸ್ವಾರ್ಥಾನುಮಿತಿ, ಪರಾರ್ಥಾನುಮಿತಿಯೆಂದು ಅನುಮಿತಿ ೨ವಿಧ. ಲೌಕಿಕ, ವೈದಿಕ ವೆಂದು ಶಾಬ್ದಬೋಧ ೨ವಿಧ. ಶ್ರುತಾರ್ಥಾಪತ್ತಿ, ದೃಷ್ಟಾರ್ಥಾಪತ್ತಿಯೆಂದು ಅರ್ಥಾ ಪತ್ತಿ ೨. ಸ್ವಾರ್ಥಾನುಮಾನ, ಪರಾರ್ಥಾನುಮಾನವೆಂದು ಅನುಮಿತಿಕರಣ ೨. ನಿತ್ಯ ಅನಿತ್ಯ ಭೇದದಿಂದ ಜ್ಞಾನೇಚ್ಛಾಕೃತಿಗಳು ೨ವಿಧ. ಅನ್ವಯ, ವ್ಯತಿರೇಕವೆಂದು ವ್ಯಾಪ್ತಿ ೨. ಶಕ್ತಿ, ಲಕ್ಷಣಾ ಎಂದು ವೃತ್ತಿ ೨. ಜಹಲ್ಲಕ್ಷಣಾ, ಅಜಹಲ್ಲಕ್ಷಣಾ ಎಂದು ಲಕ್ಷಣಾ ೨. ವ್ಯಾವಹಾರಿಕ, ವ್ಯಾವರ್ತಕವೆಂದು ಲಕ್ಷಣ ೨. ಸಂಸರ್ಗಾ ಭಾವ, ಅನ್ಯೋನ್ಯಾಭಾವವೆಂದು ಅಭಾವ ೨. ಅನ್ವಯ, ವ್ಯತಿರೇಕವೆಂದು ವ್ಯಭಿಚಾರ ೨. ಕಾರಣವಿದ್ದು ಕಾರ್ಯವಾಗದಿದ್ದರೆ ಅನ್ವಯವ್ಯಭಿಚಾರ. ಕಾರಣವಿಲ್ಲದೇ ಕಾರ್ಯ ವಾದರೆ ವ್ಯತಿರೇಕವ್ಯಭಿಚಾರ. ಸತ್, ಅಸತ್ ಎಂದು ಹೇತು ೨. ಭಾಸ್ವರ, ಅಭಾ ಸ್ವರವೆಂದು ಶುಕ್ಲವರ್ಣ ೨. ವ್ಯಾಪ್ಯವೃತ್ತಿ, ಅವ್ಯಾಪ್ಯವೃತ್ತಿಯೆಂದು ಪದಾರ್ಥ ೨. ಹೀಗೆಯೇ ಭಾವ, ಅಭಾವರೂಪದಿಂದ ೨ವಿಧ. ಸಂಶಯ, ನಿಶ್ಚಯವೆಂದು ಜ್ಞಾನ ೨. ಇದು ಆಹಾರ್ಯ, ಅನಾಹಾರ್ಯವೆಂದೂ ಇನ್ನೊಂದು ರೀತಿಯಿಂದ ೨ವಿಧ. ನಿಯತ,

ಅನಿಯತವೆಂದು ಆಹಾರ್ಯಜ್ಞಾನವೂ ೨ವಿಧ. ವೃತ್ತಿ ನಿಯಾಮಕ, ವೃತ್ತ್ಯನಿಯಾಮಕಗಳೆಂದು ಸಂಬಂಧ ೨ ವಿಧ. ಪಕ್ಷತಾವಚ್ಛೇದಕಾವಚ್ಛೇದೇನ, ಪಕ್ಷತಾವಚ್ಛೇದಕ ಸಾಮಾನಾಧಿಕರಣ್ಯೇನ ಅನುಮಿತಿ ೨ವಿಧ. ಸ್ವರೂಪಸಂಬಂಧರೂಪ, ಅನತಿರಿಕ್ತವೃತ್ತಿತ್ವ ರೂಪದಿಂದ ಅವಚ್ಛೇದಕತ್ವವೂ ಎರಡುವಿಧ. ಕಾರ್ಯಕಾರಣಭಾವಭಂಗಪ್ರಸಂಗರೂಪ ವ್ಯಾಪ್ಯವ್ಯಾಪಕಭಾವಭಂಗಪ್ರಸಂಗರೂಪವೆಂದು ತರ್ಕ ೨ ವಿಧ. ಫಲೋಪಧಾನರೂಪ, ಸ್ವರೂಪಯೋಗ್ಯತಾರೂಪದಿಂದ ಕಾರಣವೂ ೨ ವಿಧ. ಪಾಕಜ, ಅಪಾಕಜವೆಂದು ರೂಪ, ರಸ, ಗಂಧ, ಸ್ಪರ್ಶಗಳು ೨ ವಿಧ. ಪ್ರತ್ಯೇಕಾಭಾವ ಪ್ರಯುಕ್ತವಾಗಿ, ಉಭಯಾಭಾವಪ್ರಯುಕ್ತವಾಗಿ ಉಭಯಾಭಾವ ೨ ವಿಧ. ಫಲವಿಷಯ, ಉಪಾಯ ವಿಷಯಕವಾಗಿ ಇಚ್ಛಾ ೨ ವಿಧ. ಹೀಗೆ ದ್ವೇಷವೂ ೨ ವಿಧ. ಕರ್ಮಜ, ಸಂಯೋಗಜವೆಂದು ವೇಗ ೨ ವಿಧ. ಯುಕ್ತಯೋಗಜನ್ಯ, ಯುಂಜಾನಯೋಗಜನ್ಯವೆಂದು ಯೋಗಜ ಸಂನಿಕರ್ಷ ೨ ವಿಧ. ಸಾಕ್ಷಾತ್ ಪರಂಪರಾರೂಪದಿಂದ ಸಂಬಂಧ ೨ ವಿಧ. ಅನ್ವಯಾನುಪಪತ್ತಿ, ತಾತ್ಪರ್ಯಾನುಪಪತ್ತಿಯೆಂದು ಲಕ್ಷಣಾ ಬೀಜ ೨. ಪ್ರಾಮಾಣ್ಯನಿಶ್ಚಯ ಹೇತುಕಪ್ರವೃತ್ತಿ ನಿಷ್ಕಂಪಪ್ರವೃತ್ತಿ. ಪ್ರಾಮಾಣ್ಯ ಸಂಶಯಹೇತುಕಪ್ರವೃತ್ತಿ ಸಕಂಪ ಪ್ರವೃತ್ತಿ. ಸಾಧಾರಣಕಾರಣ, ಅಸಾಧಾರಣ ಕಾರಣವೆಂದು ಕಾರಣ ೨ ವಿಧ.

## ಮೂರುರೀತಿಯಿಂದ ಪದಾರ್ಥವಿಭಾಗ

ಶರೀರ, ಇಂದ್ರಿಯ, ವಿಷಯಭೇದದಿಂದ ಪೃಥಿವೀ, ಅಪ್‌ತೇಜೋವಾಯುಗಳು ಮೂರು ವಿಧ. ಶೀತ, ಉಷ್ಣ, ಅನುಷ್ಣಾಶೀತವೆಂದು ಸ್ಪರ್ಶ ೩. ಏಕಕರ್ಮಜನ್ಯ, ಉಭಯಕರ್ಮಜನ್ಯ, ಸಂಯೋಗಜನ್ಯವೆಂದು ಸಂಯೋಗ ೩ ವಿಧ. ಹೀಗೆ ವಿಭಾಗವೂ ೩ ವಿಧ. ಸಂಯೋಗಜ, ವಿಭಾಗಜ, ಶಬ್ದಜವೆಂದು ಶಬ್ದವೂ ೩ ವಿಧ. ಸಮವಾಯಿ, ಅಸಮವಾಯಿ, ನಿಮಿತ್ತವೆಂದು ಕಾರಣ ೩. ಸಾಮಾನ್ಯಲಕ್ಷಣ, ಜ್ಞಾನಲಕ್ಷಣ, ಯೋಗಜಲಕ್ಷಣವೆಂದು ಅಲೌಕಿಕಸಂನಿಕರ್ಷ ೩ ವಿಧ. ಅನ್ವಯವ್ಯತಿರೇಕ, ಕೇವಲಾನ್ವಯಿ, ಕೇವಲವ್ಯತಿರೇಕಿಯೆಂದು ಹೇತು ಮೂರು ವಿಧ. ಸಾಧಾರಣ, ಅಸಾಧಾರಣ, ಅನುಪಸಂಹಾರಿಯೆಂದು ವ್ಯಭಿಚಾರ ೩ ವಿಧ. ಆಶ್ರಯಾಸಿದ್ಧ, ಸ್ವರೂಪಾಸಿದ್ಧ, ವ್ಯಾಪ್ಯತ್ವಾಸಿದ್ಧವೆಂದು ಅಸಿದ್ಧ ೩ ವಿಧ. ಸಂಶಯ, ವಿಪರ್ಯಯ, ತರ್ಕವೆಂದು ಅಯಥಾರ್ಥಾನುಭವ ೩. ವೇಗ, ಭಾವನಾ, ಸ್ಥಿತಿಸ್ಥಾಪಕವೆಂದು ಸಂಸ್ಕಾರ ೩. ವಿಶೇಷ್ಯತಾ, ಪ್ರಕಾರತಾ, ಸಂಸರ್ಗತಾ ಎಂದು ವಿಷಯತಾ ೩. ಪ್ರಾಗಭಾವ, ಪ್ರಧ್ವಂಸಾಭಾವ, ಅತ್ಯಂತಾಭಾವವೆಂದು ಸಂಸರ್ಗಾಭಾವ ೩. ಅವ್ಯಾಪ್ತಿ, ಅತಿವ್ಯಾಪ್ತಿ, ಅಸಂಭವವೆಂದು ಲಕ್ಷಣದೋಷ ೩. ಆತ್ಮಾಶ್ರಯ, ಅನ್ಯೋನ್ಯಾಶ್ರಯ, ಚಕ್ರಕಾಪತ್ತಿಯೆಂದು ದೋಷ ೩. ಉದ್ದೇಶ್ಯತಾ, ವಿಧೇಯತಾ, ಉಪಾದಾನತಾ ರೂಪದಿಂದ ಕೃತಿನಿರೂಪಿತವಿಷಯತಾ ೩. ಪ್ರವೃತ್ತಿ, ನಿವೃತ್ತಿ, ಜೀವನಯೋನಿಯೆಂದು ಪ್ರಯತ್ನ ೩. ಅಣು, ಮಧ್ಯಮ, ಪರಮ ಮಹತ್ ಎಂದು ಪರಿಮಾಣ ೩ ವಿಧ.

ವಿಶೇಷ್ಯಾಭಾವಪ್ರಯುಕ್ತ, ವಿಶೇಷಣಾಭಾವಪ್ರಯುಕ್ತ, ಉಭಯಾಭಾವಪ್ರಯುಕ್ತ ವೆಂದು ವಿಶಿಷ್ಟಾಭಾವ ಮೂರುವಿಧ. ಸಂಖ್ಯಾ ಜನ್ಯ, ಪರಿಮಾಣ ಜನ್ಯ, ಪ್ರಚಯ ಜನ್ಯವೆಂದು ಅನಿತ್ಯ ಪರಿಮಾಣ ೩ ವಿಧ. ಚಿಕೀರ್ಷಾವನ್ನು ಕುರಿತು, ಕೃತಿಸಾಧ್ಯತಾ ಜ್ಞಾನ, ಇಷ್ಟಸಾಧನತಾ ಜ್ಞಾನ, ಬಲವದನಿಷ್ಟಾನನುಬಂಧಿತ್ವಜ್ಞಾನ ಹೀಗೆ ಮೂರು ಕಾರಣಗಳಾಗುತ್ತವೆ. ಜಾಗ್ರತ್, ಸ್ವಪ್ನ, ಸುಷುಪ್ತಿಯೆಂದು ಅವಸ್ಥಾ ೩. ವಿಶೇಷ್ಯ ಸಂಗತ, ವಿಶೇಷಣಸಂಗತ, ಕ್ರಿಯಾಸಂಗತವೆಂದು ಏವಕಾರವೂ ಮೂರುವಿಧವಾಗಿರು ತ್ತದೆ.

## ನಾಲ್ಕುರೀತಿಯಿಂದ ಪದಾರ್ಥಗಳು

ಅಣು, ಮಹತ್, ದೀರ್ಘ, ಹ್ರಸ್ವವೆಂದು ಪರಿಮಾಣ ನಾಲ್ಕುವಿಧ. ಪ್ರಾಗ ಭಾವ, ಪ್ರಧ್ವಂಸಾಭಾವ, ಅತ್ಯಂತಾಭಾವ, ಅನ್ಯೋನ್ಯಾಭಾವವೆಂದು ಅಭಾವ ೪ವಿಧ. ಆಕಾಶ, ಕಾಲ, ದಿಕ್, ಆತ್ಮಾ ಇವು ನಾಲ್ಕು ವಿಭು ಪದಾರ್ಥಗಳು. ಪ್ರತ್ಯಕ್ಷ, ಅನು ಮಾನ, ಉಪಮಾನ, ಶಬ್ದಭೇದದಿಂದ ಪ್ರಮಾಣಗಳು ೪. ಪ್ರತ್ಯಕ್ಷ, ಅನುಮಿತಿ, ಉಪಮಿತಿ, ಶಾಬ್ದಗಳೆಂದು ಯಥಾರ್ಥಾನುಭವ ೪. ಸ್ವಜನ್ಯ ವಿಭಾಗ ಪ್ರಾಗಭಾವಾ ವಚ್ಛಿನ್ನಕರ್ಮ, ಪೂರ್ವಸಂಯೋಗಾವಚ್ಛಿನ್ನವಿಭಾಗ, ಪೂರ್ವಸಂಯೋಗನಾಶಾವಚ್ಛಿ ನ್ನೋತ್ತರಸಂಯೋಗ ಪ್ರಾಗಭಾವ, ಉತ್ತರಸಂಯೋಗಾವಚ್ಛಿನ್ನಕರ್ಮ ಹೀಗೆ ಕ್ಷಣೋ ಪಾಧಿಗಳು ನಾಲ್ಕು. ಭೌಮ, ದಿವ್ಯ, ಔದರ್ಯ, ಆಕರಜಗಳೆಂದು ತೇಜೋವಿಷಯ ನಾಲ್ಕು.

## ಐದುವಿಧಗಳಾದ ಪದಾರ್ಥಗಳು

ಪೃಥಿವೀ, ಅಪ್, ತೇಜಸ್ಸು, ವಾಯು, ಆಕಾಶಗಳೆಂದು ಭೂತಗಳು ಐದು. ಪೃಥಿವೀ, ಅಪ್, ತೇಜಸ್ಸು, ವಾಯು, ಮನಸ್ಸು ಇವು ಮೂರ್ತಪಂಚಕಗಳು. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನವೆಂದು ಪ್ರಾಣಾದಿಪಂಚಕಗಳು. ಉತ್ಕ್ಷೇಪಣ, ಅಪಕ್ಷೇಪಣ, ಆಕುಂಚನ, ಪ್ರಸಾರಣವೆಂದು ಕರ್ಮ ೫. ಜ್ಞಾನ, ಇಚ್ಛಾ, ಕೃತಿ, ಸಂಸ್ಕಾರ, ದ್ವೇಷ ಇವು ೫ ಸವಿಷಯಕಪದಾರ್ಥಗಳು. ಸವ್ಯಭಿಚಾರ, ವಿರುದ್ಧ, ಸತ್ಪ್ರತಿಪಕ್ಷ, ಅಸಿದ್ಧ, ಬಾಧಿತಗಳೆಂದು ಹೇತ್ವಾಭಾಸ ೫. ಅನ್ಯಥಾಸಿದ್ಧಗಳೂ ೫. ಘಟವನ್ನು ಕುರಿತು ದಂಡತ್ವ; ದಂಡರೂಪಾದಿ; ಆಕಾಶಾದಿ, ಕುಂಬಾರನತಂದೆ ಮುಂತಾ ದವರು, ರಾಸಭಮುಂತಾದವುಗಳೆಂದು ಕ್ರಮವಾಗಿ ಹೇಳುತ್ತಾರೆ.

## ಆರುರೀತಿಯಿಂದ ಪದಾರ್ಥವಿಭಾಗ

ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯವೆಂದು ಭಾವಗಳು

ಆರು. ಮಧುರ, ಆಮ್ಲ, ಲವಣ, ಕಟು, ಕಷಾಯ, ತಿಕ್ತಗಳೆಂದು ರಸವು ಆರುವಿಧ. ತ್ವಕ್, ಚಕ್ಷು, ಶ್ರೋತ್ರ, ಜಿಹ್ವಾ, ಘ್ರಾಣ, ಮನಸ್ಸು ಹೀಗೆ ಇಂದ್ರಿಯಗಳು ಆರು. ಇವುಗಳಿಂದ, ತ್ವಾಚ, ಚಾಕ್ಷುಷ, ಶ್ರೌತ್ರ, ರಾಸನ, ಘ್ರಾಣ, ಮಾನಸಿಕ ಪ್ರತ್ಯಕ್ಷಗಳೂ ಆರು- ಸಂಯೋಗ, ಸಂಯುಕ್ತಸಮವಾಯ, ಸಂಯುಕ್ತಸಮವೇತಸಮವಾಯ, ಸಮವಾಯ, ಸಮವೇತ ಸಮವಾಯ, ವಿಶೇಷಣವಿಶೇಷ್ಯಭಾವಗಳೆಂದು ಲೌಕಿಕಸಂನ್ನಿಕರ್ಷಗಳೂ ಆರು. ವ್ಯಕ್ತ್ಯೈಭೇದ, ತುಲ್ಯತ್ವ, ಸಂಕರ ಅನವಸ್ಥಿತಿ, ರೂಪಹಾನಿ' ಅಸಂಬಂಧಗಳೆಂದು ಜಾತಿಬಾಧಕಗಳು ಆರು.

## ಏಳುರೀತಿಯಿಂದ ವಿಭಾಗ

ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ, ಅಭಾವಗಳೆಂದು ಪದಾರ್ಥಗಳು ಏಳು. ಶುಕ್ಲ, ನೀಲ, ಪೀತ, ರಕ್ತ, ಹರಿತ, ಕಪಿಶ, ಚಿತ್ರಭೇದದಿಂದ ರೂಪ ಏಳು.

## ಒಂಬತ್ತುರೀತಿಯಿಂದ ವಿಭಾಗ

ಪೃಥಿವೀ, ಅಪ್, ತೇಜಸ್ಸು, ವಾಯು, ಆಕಾಶ, ಕಾಲ, ದಿಕ್, ಆತ್ಮ, ಮನಸ್ಸು ಹೀಗೆ ದ್ರವ್ಯ ಒಂಬತ್ತು.

## ಹದಿನಾರು ಪದಾರ್ಥಗಳು

ಪ್ರಮಾಣ, ಪ್ರಮೇಯ, ಸಂಶಯ, ಪ್ರಯೋಜನ, ದೃಷ್ಟಾಂತ, ಸಿದ್ಧಾಂತ, ಅವಯವ, ತರ್ಕ, ನಿರ್ಣಯ, ವಾದ, ಜಲ್ಪ, ವಿತಂಡ, ಹೇತ್ವಾಭಾಸ, ಛಲ, ಜಾತಿ, ನಿಗ್ರಹಸ್ಥಾನ ಹೀಗೆ ಹದಿನಾರು ಪದಾರ್ಥಗಳೆಂದು ಗೌತಮರ ಮತ.

ವಾದಿಯ ಅಪಜಯಕ್ಕೆ ಕಾರಣವಾದ ನಿಗ್ರಹಸ್ಥಾನ ೨೧. ಪ್ರತಿಜ್ಞಾಹಾನಿ :, ಪ್ರತಿಜ್ಞಾಂತರ, ಪ್ರತಿಜ್ಞಾವಿರೋಧ, ಪ್ರತಿಜ್ಞಾಸನ್ನ್ಯಾಸ, ಹೇತ್ವಂತರ, ಅರ್ಥಾಂತರ, ನಿರರ್ಥಕ. ಅವಿಜ್ಞಾತಾರ್ಥಕ, ಅಪಾರ್ಥಕ, ಅಪ್ರಾಪ್ತಕಾಲ, ನ್ಯೂನ, ಅಧಿಕ, ಪುನರುಕ್ತ, ಅನನುಭಾಷಣ, ಅಜ್ಞಾನ, ಅಪ್ರತಿಭಾ, ವಿಕ್ಷೇಪ:, ಮತಾನುಜ್ಞಾ, ಪರ್ಯನುಯೋಜ್ಯೋಪೇಕ್ಷಣ, ನಿರನುಯೋಜ್ಯಾನುಯೋಗ, ಅಪಸಿದ್ಧಾಂತ, ಎಂದು ಇವುಗಳ ಹೆಸರು.

ಪರಮಾಣುಗಳು, ಜೀವಾತ್ಮರು, ವಿಶೇಷಗಳು, ಮನಸ್ಸು ಇವು ಅನಂತಗಳು.

## ಪೃಥಿವ್ಯಾದಿಗಳಲ್ಲಿರುವ ಗುಣಗಳು

ವಾಯೋರ್ನವೈಕಾದಶ ತೇಜಸೋ ಗುಣಾಃ ಜಲಕ್ಷಿತಿಪ್ರಾಣಭೃತಾಂ ಚತುರ್ದಶ ||

ದಿಕ್ಕಾಲಯೋಃ ಪಂಚ ಷಡೇವ ಚಾಂಬರೇ ಮಹೇಶ್ವರೇಷ್ಟೌ ಮನಸಸ್ತಥೈವಚ||
ಪೃಥಿವಿಯಲ್ಲಿ—ರೂಪಾದಿ ದ್ರವತ್ವದವರೆಗೂ, ವೇಗವೂ ಸೇರಿ ೧೪ ಗುಣಗಳು.
ಜಲ—ಗಂಧಸ್ಥಾನದಲ್ಲಿ ಸ್ನೇಹಸೇರಿಸಿ ರೂಪಾದಿ ೧೪ ತಿಳಿಯಬೇಕು.
ತೇಜಸ್ಸಿನಲ್ಲಿ—ಸ್ಪರ್ಶಾದಿ ಅಪರತ್ವದವರೆಗಿರುವ ೮+ರೂಪ, ವೇಗ, ದ್ರವತ್ವ ೩ ಸೇರಿ ೧೧ ಗುಣಗಳು.
ವಾಯು—ಸ್ಪರ್ಶಾದಿ ೮+ವೇಗ ಹೀಗೆ ಒಂಬತ್ತು ಗುಣಗಳಿವೆ.
ಆಕಾಶ—ಸಂಖ್ಯಾದಿ ವಿಭಾಗದವರೆಗಿರುವ ೫+ಶಬ್ದಸೇರಿ ಆರುಗುಣಗಳು.
ಕಾಲ—ಸಂಖ್ಯಾದಿ ವಿಭಾಗದವರೆಗಿರುವ ೫ ಗುಣಗಳು.
ದಿಕ್—ಸಂಖ್ಯಾದಿ ವಿಭಾಗದವರೆಗಿರುವ ೫ ಗುಣಗಳು.
ಜೀವಾತ್ಮಾ—ಸಂಖ್ಯಾದಿ ೫+ ಬುದ್ಧ್ಯಾದಿ ಸಂಸ್ಕಾರದವರೆಗಿರುವ ಒಂಬತ್ತು ಸೇರಿ ೧೪ ಗುಣಗಳು.
ಪರಮಾತ್ಮಾ—ಸಂಖ್ಯಾದಿ ಪಂಚಕ, ಜ್ಞಾನೇಚ್ಛಾಕೃತಿ ಸೇರಿ ಎಂಟು ಗುಣಗಳು.
ಮನಸ್ಸಿನಲ್ಲಿ—ಸಂಖ್ಯಾದಿ ಅಪರತ್ವದವರೆಗಿನ ೭+ ವೇಗಸೇರಿ ೮ ಗುಣಗಳು.

## ವೈಶೇಷಿಕ ಗುಣಗಳು

ರೂಪ, ರಸ, ಗಂಧ, ಸ್ಪರ್ಶ, ಸ್ನೇಹ, ಸಾಂಸಿದ್ಧಿಕದ್ರವ, ಬುದ್ಧಿ ಸುಖ, ದುಃಖ, ಇಚ್ಛಾ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ, ಸಂಸ್ಕಾರ, ಶಬ್ದ, ಹೀಗೆ ೧೬ ವಿಶೇಷ ಗುಣಗಳು.
ಪೃಥಿವೀ—ರೂಪ, ರಸ, ಗಂಧ, ಸ್ಪರ್ಶ–ಹೀಗೆ ನಾಲ್ಕು ವಿಶೇಷ ಗುಣಗಳಿವೆ.
ಜಲ—ರೂಪ, ರಸ, ಸ್ಪರ್ಶ, ಸ್ನೇಹ, ಸಾಂಸಿದ್ಧಿಕದ್ರವ. ೫.
ತೇಜಃ—ರೂಪ, ಸ್ಪರ್ಶ. ೨.
ವಾಯು—ಸ್ಪರ್ಶಃ ೧.
ಆಕಾಶ—ಶಬ್ದ. ೧
ಜೀವಾತ್ಮಾ—ಬುದ್ಧ್ಯಾದಿ ಸಂಸ್ಕಾರದವರೆಗಿರುವ ೯ ವಿಶೇಷಗುಣಗಳು.
ಪರಮಾತ್ಮಾ—ಜ್ಞಾನ, ಇಚ್ಛಾ, ಕೃತಿ,. ೩. ನಿತ್ಯಸುಖವಿದೆ....ಎಂದರೆ ೪ ಗುಣಗಳು.
ಕಾಲ, ದಿಕ್, ಮನಸ್ಸುಗಳಲ್ಲಿ ಯಾವ ವಿಶೇಷಗುಣಗಳೂ ಇಲ್ಲ.

## ಸಾಮಾನ್ಯ ಗುಣಗಳು

ಸಂಖ್ಯಾದಿ ಅಪರತ್ವದ ವರೆಗಿನ ಏಳು ಗುಣಗಳೂ, ಅಸಾಂಸಿದ್ಧಿಕದ್ರವವೂ, ಗುರುತ್ವ, ವೇಗ ಹೀಗೆ ಹತ್ತು ಸಾಮಾನ್ಯಗುಣಗಳು.

ಪೃಥಿವಿಯಲ್ಲಿ ಈ ಹತ್ತೂ ಗುಣಗಳಿರುತ್ತವೆ. ಅಸಾಂಸಿದ್ಧಿಕ ದ್ರವತ್ವವನ್ನು ಬಿಟ್ಟು

ಉಳಿದ ಒಂಬತ್ತು ಜಲದಲ್ಲಿವೆ. ಗುರುತ್ವವನ್ನು ಬಿಟ್ಟು ಉಳಿದ ಒಂಬತ್ತು ತೇಜಸ್ಸಿನಲ್ಲಿವೆ. ಗುರುತ್ವ, ಅಸಾಂಸಿದ್ಧಿಕದ್ರವತ್ವಗಳನ್ನು ಬಿಟ್ಟು ಉಳಿದ ಎಂಟು ವಾಯುವಿನಲ್ಲಿವೆ. ಸಂಖ್ಯಾದಿವಿಭಾಗದವರೆಗಿರುವ ೫ ಗುಣಗಳು ಆಕಾಶ, ಕಾಲ, ದಿಕ್ ಆತ್ಮಗಳಲ್ಲಿವೆ. ವೇಗಸೇರಿ ಈ ಐದು (೬) ಮನಸ್ಸಿನಲ್ಲಿರುತ್ತವೆ.

## ಎರಡು ಇಂದ್ರಿಯಗಳಿಂದ ಗ್ರಹಿಸಲ್ಪಡುವ ಗುಣಗಳು

ಗುರುತ್ವ ಒಂದನ್ನು ಬಿಟ್ಟು ಸಂಖ್ಯಾದಿ ಸ್ನೇಹದವರೆಗಿರುವ ಒಂಬತ್ತು ಗುಣಗಳು ತ್ವಕ್, ಚಕ್ಷುರಿಂದ್ರಿಯಗಳಿಂದ ಗ್ರಹಿಸಲ್ಪಡುತ್ತವೆ.

ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು ಕೇವಲ ಚಕ್ಷುರಾದಿಬಾಹ್ಯೇಂದ್ರಿಯಗಳಿಂದ ಗ್ರಾಹ್ಯಗಳಾಗಿವೆ.

ಗುರುತ್ವ, ಅದೃಷ್ಟ, ಭಾವನಾ ಗುಣಗಳು ಅತೀಂದ್ರಿಯ ಗುಣಗಳು. ಇಂದ್ರಿಯ ಗ್ರಾಹ್ಯವಲ್ಲ.

ಸಂಯೋಗವಿಭಾಗ, ದ್ವಿತ್ವಾದಿಸಂಖ್ಯಾ, ದ್ವಿಪೃಥಕ್ತ್ವಾದಿಗಳು ಅನೇಕಾಶ್ರಿತಗುಣಗಳು.

ರೂಪಾದಿ ಚತುಷ್ಟಯ, ಏಕತ್ವ, ಏಕಪೃಥಕ್ತ್ವ, ಪರಿಮಾಣ, ಪರತ್ವಾದಿ ಭಾವನಾಂತಗುಣಗಳು ಏಕೈಕದ್ರವ್ಯವೃತ್ತಿಗಳಾಗಿರುತ್ತವೆ.

ಅಪಾಕಜರೂಪಾದಿ ಚತುಷ್ಟಯವೂ, ಅಪಾಕಜದ್ರವತ್ವವು, ಸ್ನೇಹ, ವೇಗ, ಗುರುತ್ವ, ಪೃಥಕ್ತ್ವ. ಪರಿಮಾಣ, ಸ್ಥಿತಿಸ್ಥಾಪಕಸಂಸ್ಕಾರ, ಇವು ಕಾರಣ ಗುಣೋತ್ಪನ್ನ ಗುಣಗಳು. ಅಂದರೆ ಸ್ವಾಶ್ರಯ ಸಮವಾಯಿಕಾರಣವೃತ್ತಿಗುಣಜನ್ಯ ಗುಣಗಳೆಂದರ್ಥ.

ಶಬ್ದಾದಿ ಭಾವನಾಂತ ಗುಣಗಳು ಅಕಾರಣಗುಣೋತ್ಪನ್ನ ಗುಣಗಳು.

## ಸಮವಾಯಿ ಕಾರಣ

ಜನ್ಯಭಾವವನ್ನು ಕುರಿತು ದ್ರವ್ಯವು ಸಮವಾಯಿಕಾರಣ. ಅವಯವಿಗೆ ಅವಯವು ಸಮವಾಯಿಕಾರಣ. ತನ್ನಲ್ಲಿರುವ ಗುಣಕ್ಕೂ, ತನ್ನಲ್ಲಿರುವ ಕ್ರಿಯೆಗೂ ತಾನು ಸಮವಾಯಿಕಾರಣ.

## ಅಸಮವಾಯಿ ಕಾರಣ

ರೂಪಾದಿ ಚತುಷ್ಟಯ ಏಕತ್ವ, ಸಂಖ್ಯಾ, ಪರಿಮಾಣ, ಪೃಥಕ್ತ್ವ, ಸ್ಥಿತ ಸ್ಥಾಪಕಸಂಸ್ಕಾರ ಸ್ನೇಹ ಶಬ್ದ ಇವುಗಳಲ್ಲಿ ಅಸಮವಾಯಿಕಾರಣತ್ವವಿರುತ್ತದೆ.

ಬುದ್ಧ್ಯಾದಿಭಾವನಾಂತ ಗುಣಗಳಲ್ಲಿಯೂ, ಸಾಮಾನ್ಯಾದಿ ಚತುಷ್ಟಯದಲ್ಲಿಯೂ ನಿಮಿತ್ತ ಕಾರಣತ್ವವಿರುತ್ತದೆ. ದ್ರವ್ಯವು ಸಮವಾಯಿ ಕಾರಣವೂ, ಗುಣ

ಕರ್ಮಗಳು ಅಸಮವಾಯಿ ಕಾರಣಗಳೂ ಆಗಿವೆ. ದ್ರವ್ಯಾದಿ ಸಪ್ತಪದಾರ್ಥಗಳಲ್ಲಿ ನಿಮಿತ್ತಕಾರಣತ್ವವೂ ಇರುತ್ತದೆ.

ಕಾರ್ಯಸಾಮಾನ್ಯವನ್ನು ಕುರಿತು ಕಾಲೇಶ್ವರ ಅದೃಷ್ಟಾದಿಗಳೂ ಪ್ರತಿಬಂಧಕಾಭಾವವೂ, ಕಾರ್ಯಪ್ರಾಗಭಾವವೂ ನಿಮಿತ್ತಕಾರಣಗಳಾಗಿರುತ್ತವೆ.

## ಕೆಲವು ಕಾರ್ಯಕಾರಣಗಳ ವಿವರಣ

| ಕಾರ್ಯ | ಸಮವಾಯಿಕಾರಣ | ಅಸಮವಾಯಿಕಾರಣ | ನಿಮಿತ್ತಕಾರಣ |
|---|---|---|---|
| ಘಟ | ಕಪಾಲ | ಕಪಾಲದ್ವಯ ಸಂಯೋಗ | ದಂಡಚಕ್ರಾದಿ |
| ಪಟ | ತಂತು | ತಂತುಸಂಯೋಗ | ತುರೀವೇಮಾದಿ |
| ಅವಯವಿ | ಅವಯವ | ಅವಯವಸಂಯೋಗ | ಕಾಲಾದೃಷ್ಟೇಶ್ವರಾದಿ |
| ಘಟರೂಪ | ಘಟ | ಕಪಾಲರೂಪ | ,, |
| ಪಟರೂಪ | ಪಟ | ತಂತುರೂಪ | ,, |
| ಪಾರ್ಥಿವದ್ವ್ಯಣುಕ ರೂಪ | ದ್ವ್ಯಣುಕ | ಪರಮಾಣುರೂಪ | ,, |
| ,, ಪರಮಾಣುರೂಪ | ಪರಮಾಣು | ಪಾಕ | ,, |
| ಸಂಯೋಗಜ ಶಬ್ದ | ಗಗನ | ಭೇರ್ಯಾಕಾಶ ಸಂಯೋಗ | ಭೇರೀದಂಡ ಸಂಯೋಗಾದಿ |
| ವಿಭಾಗಜ ಶಬ್ದ | ,, | ವಂಶಾಕಾಶ ವಿಭಾಗ | ಕಾಲೇಶ್ವರಾದೃಷ್ಟಾದಿ |
| ಶಬ್ದಜಶಬ್ದ | ,, | ಪೂರ್ವಪೂರ್ವಶಬ್ದ | ವಾಯ್ವಾದಿ |
| ಜ್ಞಾನ | ಆತ್ಮಾ | ಆತ್ಮಮನಃ ಸಂಯೋಗ | ಮನಸ್ಸಾದಿ |
| ಆದ್ಯಪತನ | ಫಲಾದಿ | ಗುರುತ್ವ | ವಾಯ್ವಾದಿ |
| ದ್ವಿತೀಯಪತನ | ,, | ವೇಗಃ | ಕಾಲಾದಿ |
| ಕಾಯ ಪುಸ್ತಕ ಸಂಯೋಗ | ಕಾಯಪುಸ್ತಕ | ಹಸ್ತಪುಸ್ತಕ ಸಂಯೋಗ | ,, |
| ಕ್ರಿಯಾಜನ್ಯ | ಪುಸ್ತಕಾದಿ | ಕ್ರಿಯಾ– | ,, |
| ವಿಭಾಗ | ಹಸ್ತಪುಸ್ತಕಾದಿ | ,, | ,, |
| ಅನಿತ್ಯೈಕತ್ವ | ಅನಿತ್ಯಘಟಾದಿ | ಅವಯವಗತೈಕತ್ವ | ,, |
| ,, ದ್ವಿತಾದಿ | ಆಶ್ರಯಘಟಾದಿ | ಸ್ವಸಮಾನಾಧಿಕರಣ ಯಾವದೇಕತ್ವ | ಅಪೇಕ್ಷಾಬುದ್ಧ್ಯಾದಿ |
| ಅವಯವಿಪರಿಮಾಣ | ಅವಯವೀ | ಅವಯವ ಪರಿಮಾಣ | ಕಾಲಾದಿ |
| ದ್ವ್ಯಣುಕ ,, | ದ್ವ್ಯಣುಕ | ಪರಮಾಣುಗತದ್ವಿತ್ವ | ,, |
| ತ್ರ್ಯಣುಕ ,, | ತ್ರ್ಯಣುಕ | ದ್ವ್ಯಣುಕಗತತ್ರಿತ್ವ | ,, |

## ಫಲ ವ್ಯಾಪಾರ ಕರಣ ನಿರೂಪಣ

| ಫಲ | ವ್ಯಾಪಾರ | ಕರಣ |
|---|---|---|
| ಪ್ರತ್ಯಕ್ಷಜ್ಞಾನ | ಇಂದ್ರಿಯಾರ್ಥಸಂನಿಕರ್ಷ | ಷಡಿಂದ್ರಿಯಗಳು |
| ಚಾಕ್ಷುಷಪ್ರತ್ಯಕ್ಷ | ಚಕ್ಷುರ್ವಿಷಯಸಂಯೋಗ | ಚಕ್ಷುರಿಂದ್ರಿಯ |
| ತ್ವಾಚ ,, | ತ್ವಗಿಂದ್ರಿಯ ,, | ತ್ವಗಿಂದ್ರಿಯ |
| ರಾಸನ ,, | ರಾಸನಮನಃ ಸಂಯೋಗ | ರಸನಾ ,, |
| ಘ್ರಾಣ ,, | ಘ್ರಾಣ ,, ,, | ಘ್ರಾಣ ,, |
| ಶ್ರಾವಣ ,, | ಶ್ರೋತ್ರ ,, ,, | ಶ್ರೋತ್ರ ,, |
| ಮಾನಸ ,, | ಆತ್ಮಮನಃ ,, | ಮನಃ |
| ಅನುಮಿತಿ | ಪರಾಮರ್ಶಃ | ವ್ಯಾಪ್ತಿಜ್ಞಾನ |
| ಉಪಮಿತಿ | ಅತಿದೇಶವಾಕ್ಯಾರ್ಥಸ್ಮರಣ | ಅ-ವಾಕ್ಯಾರ್ಥಜ್ಞಾನ |
| ಶಾಬ್ದಬೋಧ | ಪದಾರ್ಥೋಪಸ್ಥಿತಿ | ವೃತ್ತಿಜ್ಞಾನಸಹಕೃತಪದ ಜ್ಞಾನ |
| ಘಟ | ಭ್ರಮಣ | ದಂಡಃ |
| ಸಮಾಪ್ತಿ | ವಿಘ್ನಧ್ವಂಸ | ಮಂಗಳ |
| ಸ್ವರ್ಗಾದಿ | ಅಪೂರ್ವ | ಯಾಗಾದಿ |
| ಸ್ಮೃತಿ | ಭಾವಾನಾಖ್ಯಸಂಸ್ಕಾರ | ಅನುಭವ |

## ತರ್ಕದಲ್ಲಿ ಉಪಯೋಗಿಸುವ ಪರ್ಯಾಯ ಪದಗಳು

೧. ಪದಾರ್ಥ—ಅಭಿಧೇಯ, ಪ್ರಮೇಯ, ಜ್ಞೇಯ ಇತ್ಯಾದಿ.

೨. ದ್ರವ್ಯ—ಗುಣೀ, ಗುಣವಾನ್, ಕರ್ಮವಾನ್ ಕ್ರಿಯಾವಾನ್. ಇತ್ಯಾದಿ.

೩. ಕರ್ಮ—ಕ್ರಿಯಾ, ಚಲನ, ಸ್ಪಂದನ, ಸ್ಪಂದ—

೪. ಜಾತಿ—ಸಾಮಾನ್ಯ ॥ ಪ್ರಧ್ವಂಸಾಭಾವ, ಧ್ವಂಸಃ, ನಾಶಃ, ವಿನಾಶಃ, ನಿವೃತ್ತಿಃ ॥

೫. ಅತ್ಯಂತಾಭಾವ—ಶೂನ್ಯತ್ವ, ರಹಿತತ್ವಂ ॥ ಅನ್ಯೋನ್ಯಾಭಾವ, ಭೇದ, ಭಿನ್ನತ್ವ, ಅನ್ಯತ್ವಂ, ಇತರತ್ವಂ, ಭೇದವತ್ವಂ ॥ ಜ್ಞಾನ, ಬುದ್ಧಿ, ಬೋಧ, ಸಂವಿತ್, ಧೀಃ, ಗ್ರಹಃ, ಪ್ರತ್ಯಯಃ, ಪ್ರತೀತಿಃ ॥ ಭ್ರಮ, ಅಯಥಾರ್ಥಾನುಭವ, ಅಪ್ರಮಾ ॥ ಸ್ವರೂಪ ಸಂಬಂಧ, ದೈಶಿಕ ವಿಶೇಷಣತಾಸಂಬಂಧಃ ॥ ಕಾಲಿಕಸಂಬಂಧಃ, ಕಾಲಿಕ ವಿಶೇಷಣತಾ ಸಂಬಂಧಃ ॥ ಅನುಮಾನ, ವ್ಯಾಪ್ತಿಜ್ಞಾನ ॥ ಪ್ರತ್ಯಕ್ಷ, ಪ್ರತ್ಯಕ್ಷ ಪ್ರಮಾಣ, ಇಂದ್ರಿಯ ॥ ಪದಂ, ಶಬ್ದಃ ॥ ನಿಶ್ಚಿತಹೇತು ಸಾಧ್ಯವಾನ್, ದೃಷ್ಟಾಂತಃ, ಅನ್ವಯದೃಷ್ಟಾಂತಃ, ಉದಾಹರಣಂ ॥ ನಿಶ್ಚಿತಸಾಧ್ಯಾಭಾವ ಹೇತ್ವಭಾವವಾನ್,

ವ್ಯತಿರೇಕದೃಷ್ಟಾಂತಃ, ವ್ಯತಿರೇಕ್ಯುದಾಹರಣಂ ॥ ಸಾಧನಂ, ಸಾಧಕಂ, ಲಿಂಗಂ, ಹೇತುಃ ॥ ಆಧಾರತ್ವಂ, ಆಧಾರತಾ, ಆಶ್ರಯತ್ವಂ, ಆಶ್ರಯತಾ, ಅಧಿಕರಣತ್ವಂ, ಅಧಿಕರಣತಾ ॥ ಆಧೇಯತ್ವಂ. ಆಧೇಯತಾ, ವೃತ್ತಿಃ, ಸತ್ತ್ವಂ ॥ ತತ್ಸತ್ವಂ, ತದ್ವೃತ್ತಿತ್ವಂ, ತನ್ನಿಷ್ಠತ್ವಂ, ತದ್ವರ್ತಮಾನತ್ವಂ, ತದ್ವಿದ್ಯಮಾನತ್ವಂ, ತದಧಿಕರಣಕತ್ವಂ, ತದಧಿಕರಣತಾಕತ್ವಂ, ತನಿಷ್ಠಾಧಿಕರಣತಾನಿರೂಪಕತ್ವಂ, ತದಾಶ್ರಯಕತ್ವಂ, ತದಾಧಾರಕತ್ವಂ, ॥ ತದ್ವಿಷಯಕತ್ವಂ, ತದ್ವಿಷಯತಾಕತ್ವಂ. ತನ್ನಿಷ್ಠವಿಷಯತಾ ನಿರೂಪಕತ್ವಂ, ತದ್ವಿಷಯಿತ್ವಂ, ತನ್ನಿಷ್ಠವಿಷಯತಾ ನಿರೂಪಿತ ವಿಷಯಿತ್ವಂ, ತದ್ವಿಷಯತಾ ಶಾಲಿತ್ವಂ, ತದವಗಾಹಿತ್ವಂ. ತದ್ಗೋಚರತ್ವಂ ॥ ತದ್ವಿಶೇಷ್ಯಕತ್ವಂ, ತದ್ವಿಶೇಷ್ಯತಾಕತ್ವಂ, ತನ್ನಿಷ್ಠವಿಶೇಷ್ಯತಾ ನಿರೂಪಕತ್ವಂ, ತದ್ವಿಶೇಷ್ಯಿತ್ವಂ, ತನ್ನಿಷ್ಠ ವಿಶೇಷ್ಯತಾನಿರೂಪಿತ ವಿಶೇಷ್ಯಿತ್ವಂ, ತದ್ವಿಶೇಷ್ಯತಾಶಾಲಿತ್ವಂ ॥ ತತ್ಪ್ರಕಾರಕತ್ವಂ. ತನ್ನಿಷ್ಠಪ್ರಕಾರತಾಕತ್ವಂ, ತನ್ನಿಷ್ಠಪ್ರಕಾರತಾನಿರೂಕತ್ವಂ, ತತ್ಪ್ರಕಾರಿತ್ವಂ. ತನ್ನಿಷ್ಠ ಪ್ರಕಾರತಾನಿರೂಪಿತ ಪ್ರಕಾರಿತ್ವಂ, ತನ್ನಿಷ್ಠಪ್ರಕಾರತಾಶಾಲಿತ್ವಂ ॥ ತತ್ಸಂಸರ್ಗತ್ವಂ, ತನ್ನಿಷ್ಠಸಂಸರ್ಗತಾಕತ್ವಂ, ತನ್ನಿಷ್ಠಸಂಸರ್ಗತಾನಿರೂಪಕತ್ವಂ, ತತ್ಸಂಸರ್ಗಿತ್ವಂ, ತನ್ನಿಷ್ಠ ಸಂಸರ್ಗತಾ ನಿರೂಪಿತ ಸಂಸರ್ಗಿತ್ವಂ, ತನ್ನಿಷ್ಠಸಂಸರ್ಗತಾ ಶಾಲಿತ್ವಂ ॥ ತತ್ಪ್ರತಿಯೋಗಿತ್ವಂ, ತತ್ಪ್ರತಿಯೋಗಿತಾಕತ್ವಂ, ತನ್ನಿಷ್ಠಪ್ರತಿಯೋಗಿತಾನಿರೂಪಕತ್ವಂ, ॥ ತದನುಯೋಗಿತಾಕತ್ವಂ, ತದನುಯೋಗಿಕತ್ವಂ, ತನ್ನಿಷ್ಠಾನುಯೋಗಿತಾ ನಿರೂಪಕತ್ವಂ॥ ಕಾರ್ಯತ್ವಂ, ಜನ್ಯತ್ವಂ, ಹೇತುಮತ್ವಂ, (ಪ್ರಯೋಜ್ಯತ್ವಂ) ॥ ಕಾರಣತ್ವಂ, ಜನಕತ್ವಂ, ಹೇತುತ್ವಂ, (ಪ್ರಯೋಜಕತ್ವಂ) ॥ ತದ್ಗ್ರಾಹಕತ್ವಂ, ತತ್ಪ್ರತ್ಯಕ್ಷ ಜನಕತ್ವಂ, ತದುಪಲಂಭಕತ್ವಂ ॥ ತತ್ಪ್ರತ್ಯಕ್ಷತ್ಯಂ, ತತ್ಸಾಕ್ಷಾತ್ಕೃತತ್ವಂ, ತದ್ಗ್ರಾಹ್ಯತ್ವಂ, ತಜ್ಜನ್ಯ ಪ್ರತ್ಯಕ್ಷ ವಿಷಯತ್ವಂ, ತದುಪಲಬ್ಧತ್ವಂ ॥ ಅನುಮಿತತ್ವಂ, ಅನುಮಿತಿ ವಿಷಯತ್ವಂ ॥ ಚಾಕ್ಷುಷತ್ವಂ, ಚಕ್ಷುರಿಂದ್ರಿಯಜನ್ಯ ಪ್ರತ್ಯಕ್ಷವಿಷಯತ್ವಂ, ಚಕ್ಷುಗ್ರಾರ್ಹ್ಯತ್ವಂ ॥ ಹೀಗೆಯೇ ಶ್ರಾವಣತ್ವಾದಿಗಳನ್ನು ತಿಳಿಯಬೇಕು. ॥ ಸಮವೇತತ್ವಂ, ಸಮವಾಯ ಸಂಬಂಧಾವಚ್ಛಿನ್ನ ವೃತ್ತಿತ್ವಂ ॥ ತದ್ವತ್ವಂ, ತದ್ವಿಶಿಷ್ಟತ್ವಂ, ತದ್ಯುಕ್ತತ್ವಂ ॥ ಸಾಮಾನಾಧಿಕರಣ್ಯಂ, ಏಕಾಧಿಕರಣ್ಯಂ, ಏಕಾಧಿಕರಣವೃತ್ತಿತ್ವಂ, ಸಮಾನಾಧಿಕರಣತ್ವಂ ॥ ಅಸಾಮಾನಾಧಿಕರಣ್ಯಂ, ವೈಯಧಿಕರಣ್ಯಂ, ವಿರುದ್ಧತ್ವಂ, ಏಕಾಧಿಕರಣವೃತ್ತಿತ್ವಾಭಾವಃ, ಏಕಾಧಿಕರಣಾವೃತ್ತಿತ್ವಂ, ವ್ಯಧಿಕರಣತ್ವಂ, ಭಿನ್ನಾಧಿಕರಣಕತ್ವಂ ॥ ನಿಯತತ್ವಂ, ವ್ಯಾಪಕತ್ವಂ ॥ ಘಟಾಭಾವಃ, ಘಟತ್ವಾವಚ್ಛಿನ್ನ ಪ್ರತಿಯೋಗಿತಾನಿರೂಪಕಾಭಾವಃ, ಘಟಪ್ರತಿಯೋಗಿಕಾ ಭಾವಃ ॥ ಘಟಸಾಮಾನ್ಯಾಭಾವ, ಘಟತ್ವಾತಿರಿಕ್ತ ಧರ್ಮಾನವಚ್ಛಿನ್ನ ಪ್ರತಿಯೋಗಿತಾ ನಿರೂಪಕಾಭಾವಃ ॥ ಘಟಾಧಿಕರಣಂ, ಘಟವತ್, ಘಟತ್ವಾವಚ್ಛಿನ್ನಾಧೇಯತಾ ನಿರೂಪಿತಾಧಿಕರಣತಾವಾನ್ ॥ ವಾಚ್ಯತ್ವಂ, ಅಭಿಧೇಯತ್ವಂ ॥ ಸವ್ಯಭಿಚಾರಃ, ಅನೈಕಾಂತಿಕಃ, ವ್ಯಭಿಚಾರೀ ॥ ಬಾಧಿತ; ಕಾಲಾತ್ಯಯಾಪದಿಷ್ಟಃ ॥ ಆಶ್ರಯಾಸಿದ್ಧಿಃ, ಪಕ್ಷಾಪ್ರಸಿದ್ಧಿಃ ॥ ತಾದಾತ್ಮ್ಯಸಂಬಂಧಃ. ಅಭೇದ

ಸಂಬಂಧಃ || ತದವಚ್ಛೇದ್ಯತ್ವಂ, ತದವಚ್ಛಿನ್ನತ್ವ, ತನ್ನಿಷ್ಠಾವಚ್ಛೇದಕತಾಕತ್ವಂ, ತನ್ನಿಷ್ಠಾವಚ್ಛೇದಕತಾನಿರೂಪಕತ್ವಂ || ನಿರೂಪ್ಯತ್ವಂ ನಿರೂಪಿತತ್ವಂ || ಅತೀಂದ್ರಿಯತ್ವಂ, ಇಂದ್ರಿಯಾಗ್ರಾಹ್ಯತ್ವಂ, ಇಂದ್ರಿಯಜನ್ಯ ಪ್ರತ್ಯಕ್ಷಾವಿಷಯತ್ವಂ || ನಾಮ, ವಸ್ತುಪ್ರತಿಪಾದಕ ಶಬ್ದಃ || ಈಶ್ವರಸಂಕೇತಃ, ಈಶ್ವರೇಚ್ಛಾ, ಶಕ್ತಿಃ, ಅಭಿಧಾ || ಶಕ್ಯಸಂಬಂಧಃ, ಲಕ್ಷಣಾ || ಇಷ್ಟಂ, ಇಚ್ಛಾವಿಷಯಃ || ದ್ವಿಷ್ಟಂ, ದ್ವೇಷವಿಷಯಃ || ಕಾರ್ಯಕಾರಣಭಾವಃ, ಹೇತುಹೇತುಮದ್ಭಾವಃ, ಸಾಧ್ಯಸಾಧನ ಭಾವಃ, ಜನ್ಯಜನಕ ಭಾವಃ || ಅಸದ್ಧೇತುಃ, ದುಷ್ಟಹೇತುಃ, ಹೇತ್ವಾಭಾಸಃ || ಉಪಾದಾನಂ, ಸಮವಾಯಿ ಕಾರಣಂ || "ಘಟಾವಚ್ಛಿನ್ನ ಭೇದಃ, ಘಟನಭ್ಯೇದಃ, ಘಟವಾನ್ನೇತಿ ಪ್ರತೀತಿಸಿದ್ಧಭೇದಃ, ಘಟತ್ವಾವಚ್ಛಿನ್ನಾವಚ್ಛೇದಕತಾಕ ಪ್ರತಿಯೋಗಿತಾಕ ಭೇದಃ || ತುರೀಯ ವಿಷಯತಾ, ಚತುರ್ಥವಿಷಯತಾ || ಪ್ರತಿಯೋಗಿತ್ವಂ, ಅಭಾವಾಭಾವಾತ್ವಂ || ಪ್ರತ್ಯಕ್ಷಂ, ಅಪರೋಕ್ಷಂ, ಸಾಕ್ಷಾತ್ಕಾರಃ, ಉಪಲಬ್ಧಿಃ, ಅಧ್ಯಕ್ಷಂ, ಉಪಲಂಭಃ || ಅನುಮಾ, ಅನುಮಿತಿಃ || ಉಪಮಾ, ಉಪಮಿತಿಃ || ಶಾಬ್ದಬೋಧಃ, ಶಾಬ್ದಜ್ಞಾನಂ, ಶಾಬ್ದಬುದ್ಧಿಃ, ಅನ್ವಯಬೋಧಃ, ವಾಕ್ಯಾರ್ಥ ಬೋಧಃ, ವಾಕ್ಯಾರ್ಥಜ್ಞಾನಂ || ವ್ಯವಹಾರಃ, ಶಬ್ದಪ್ರಯೋಗಃ || ಸ್ಮೃತಿಃ, ಸ್ಮರಣಂ || ನಿರ್ಣಯಃ, ನಿಶ್ಚಯಃ || ಪ್ರತ್ಯಕ್ಷಃ, ಪ್ರತ್ಯಕ್ಷಜ್ಞಾನವಿಷಯಃ, ಅಪರೋಕ್ಷಜ್ಞಾನವಿಷಯಃ, ಸಾಕ್ಷಾತ್ಕೃತಃ, ಸಾಕ್ಷಾತ್ಕಾರ ವಿಷಯಃ ಉಪಲಬ್ಧಃ, ಉಪಲಬ್ಧಿ ವಿಷಯಃ || ಅಭಾವ ನಿರೂಪಿತತ್ವಂ, ಅಭಾವೀಯತ್ವಂ || ಜ್ಞಾನೀಯತ್ವಂ, ಜ್ಞಾನನಿರೂಪಿತತ್ವಂ || ಸಂಯೋಗ ಸಂಬಂಧೇನ ಘಟವಾನ್ನೇತಿ ಪ್ರತೀತಿಸಿದ್ಧಭೇದಃ, ಸಂಯೋಗಸಂಬಂಧಾವಚ್ಛಿನ್ನಘಟತ್ವಾವಚ್ಛಿನ್ನಾವಚ್ಛೇದಕತಾಕ ಪ್ರತಿಯೋಗಿತಾಕಭೇದಃ || ಸಂಸರ್ಗಃ, ಸಂಬಂಧಃ, ಪ್ರತಿಪಾದ್ಯಃ, ಪ್ರತೀತಿವಿಷಯಃ, ಗಮ್ಯಃ || ಘಟಾಸಾಧಾರಣಕಾರಣಂ· ಘಟತ್ವಾವಚ್ಛಿನ್ನ ಕಾರ್ಯತಾನಿರೂಪಿತ ಕಾರಣತಾವತ್ || ಘಟಾನಧಿಕರಣತ್ವಂ, ಘಟಾಧಿಕರಣತ್ವಾಭಾವಃ, ಘಟಾಧಿಕರಣಭಿನ್ನತ್ವಂ || ಭೂತಲಾವೃತ್ತಿತ್ವಂ, ಭೂತಲನಿರೂಪಿತವೃತ್ತಿತ್ವಾಭಾವಃ || ವ್ಯತಿರೇಕಃ, ಅಭಾವಃ || ಪರ ಜಾತಿಃ, ವ್ಯಾಪಕ ಜಾತಿಃ || ಸಾದಿತ್ವಂ ಕಾರ್ಯತ್ವಂ, ಉತ್ಪತ್ತಿಮತ್ವಂ, ಪ್ರಾಗಭಾವ ಪ್ರತಿಯೋಗಿತ್ವಂ, ಅನಾದಿತ್ವಂ, ಉತ್ಪತ್ತಿಶೂನ್ಯತ್ವಂ, ಪ್ರಾಗಭಾವಾಪ್ರತಿಯೋಗಿತ್ವಂ || ಸಾಂತತ್ವಂ, ನಾಶವತ್ವಂ, ಧ್ವಂಸವತ್ವಂ, ಧ್ವಂಸಪ್ರತಿಯೋಗಿತ್ವಂ, ನಾಶಪ್ರತಿಯೋಗಿತ್ವಂ || ಅನಂತತ್ವಂ, ಧ್ವಂಸಶೂನ್ಯತ್ವಂ, ನಾಶ ಶೂನ್ಯತ್ವಂ, ಧ್ವಂಸಾಪ್ರತಿಯೋಗಿತ್ವಂ || ನಿತ್ಯತ್ವಂ, ಧ್ವಂಸಾಪ್ರತಿಯೋಗಿತ್ವೇ ಸತಿಪ್ರಾಗಭಾವಾ ಪ್ರತಿಯೋಗಿತ್ವಂ || ಸಾಧ್ಯವದ್ವ್ಯಾವೃತ್ತಃ, ಸಾಧ್ಯವದವೃತ್ತಿಃ, ಸಾಧ್ಯವನ್ನಿರೂಪಿತ ವೃತ್ತಿತ್ವಾಭಾವವಾನ್ || ಕಾರ್ಯಂ, ಫಲಂ, || ದ್ವಾರಂ, ವ್ಯಾಪಾರಃ || ಫಲಿತಂ, ಪರ್ಯವಸನ್ನಂ || ಅಸಾಧಾರಣ ಧರ್ಮಃ, ಲಕ್ಷಣಂ || ಪೀಲವಃ, ಪರಮಾಣವಃ || ನಿಷ್ಕರ್ಷಃ, ಪರಿಷ್ಕಾರಃ || ಪರಮಾತ್ಮಾ, ಈಶ್ವರಃ || ರೂಪಂ, ವರ್ಣಃ || ಮಾನಂ, ಪರಿಮಾಣಂ || ಸುಖಂ, ಆನಂದಃ ||

ಇಚ್ಛಾ, ಕಾಮಃ || ಕ್ರೋಧಃ, ದ್ವೇಷಃ | ಕರ್ತೃತ್ವಂ, ಕೃತಿಃ, ಪ್ರಯತ್ನಃ || ಪಾಕಃ, ವಿಜಾತೀಯತೇಜಃಸಂಯೋಗಃ || ಉಷ್ಣತ್ವಂ, ಉಷ್ಣಸ್ಪರ್ಶಃ || ಶೀತತ್ವಂ, ಶೀತಸ್ಪರ್ಶಃ || ಸಹಚಾರಗ್ರಹಃ, ಸಾಮಾನಾಧಿಕರಣ್ಯಜ್ಞಾನಂ || ಪ್ರತ್ಯಾಸತ್ತಿಃ, ಸನ್ನಿಕರ್ಷಃ || ಸಂದೇಹಃ, ಸಂಶಯಃ, ಶಂಕಾ ||

## ಕಾರ್ಯತಾವಚ್ಛೇದಕ ಧರ್ಮ

ಕಾರ್ಯವು ಯಾವಧರ್ಮದಿಂದ ಕೂಡಿರುವುದೋ ಆ ಧರ್ಮವು ಕಾರ್ಯತಾವಚ್ಛೇಕವಾಗಿರುತ್ತದೆ. ಘಟಕಾರ್ಯವು ಘಟತ್ವ ಧರ್ಮದಿಂದ ಕೂಡಿರುತ್ತದೆ. ಆಗ ಘಟತ್ವವು ಕಾರ್‍ಯತಾವಚ್ಛೇದಕವಾಗುತ್ತದೆ. (ಘಟಕಾರ್‍ಯತಾ ಘಟತ್ವಾವಚ್ಛಿನ್ನಾ ಭವತಿ)

## ಕಾರಣತಾವಚ್ಛೇದಕಧರ್ಮ

ಕಾರಣವು ಯಾಧರ್ಮದಿಂದ ಕೂಡಿರುವುದೋ ಅದು ಕಾರಣತಾವಚ್ಛೇದಕವಾಗುತ್ತದೆ. ಘಟವನ್ನು ಕುರಿತು ದಂಡ ಕಾರಣ. ದಂಡವು ದಂಡತ್ವಧರ್ಮದಿಂದ ಕೂಡಿದೆ. ದಂಡತ್ವವು ಕಾರಣತಾವಚ್ಛೇದಕ. ದಂಡಕಾರಣತಾ ದಂಡತ್ವಾವಚ್ಛಿನ್ನಾ. ಹೀಗೆಯೇ ಲಕ್ಷ್ಯತಾವಚ್ಛೇದಕಾದಿಗಳನ್ನು ತಿಳಿಯಬೇಕು. ಯಾವ ಧರ್ಮ ಎಲ್ಲಿ ಅವಚ್ಛೇದಕವೋ ಅದು ಆ ಧರ್ಮಾವಚ್ಛಿನ್ನವಾಗುತ್ತದೆ. ಪೃಥಿವೀರೂಪಲಕ್ಷ್ಯವು ಪೃಥಿವೀತ್ವವಿಶಿಷ್ಟವಾಗಿರುತ್ತದೆ. ಪೃಥಿವೀತ್ವ ಲಕ್ಷ್ಯತಾವಚ್ಛೇದಕ. ಪೃಥಿವಿಯಲ್ಲಿರುವ ಲಕ್ಷ್ಯತಾ ಪೃಥಿವೀತ್ವಾವಚ್ಛಿನ್ನವಾಗಿರುತ್ತದೆ. ಹೀಗೆ ಸಾಧ್ಯತಾವಚ್ಛೇದಕಾದಿಗಳನ್ನೂ ತಿಳಿಯಬೇಕು. ಸಾಧ್ಯವು ಯಾವ ಧರ್ಮದಿಂದ ಕೂಡಿರುವುದೋ ಅದು ಸಾಧ್ಯತಾವಚ್ಛೇದಕಧರ್ಮ.

ಯಾವ ಸಂಬಂಧದಿಂದ ಯಾವುದು ಇರುತ್ತದೆಯೋ ಆ ವಸ್ತುವಿನಲ್ಲಿರುವ ಆಧೇಯತಾ ಎಂಬುದು ಆ ಸಂಬಂಧದಿಂದ ಅವಿಚ್ಛಿನ್ನವಾಗಿರುತ್ತದೆ. ಸಂಯೋಗ ಸಂಬಂಧದಿಂದ ಘಟವು ಭೂತಲದಲ್ಲಿದೆ. ಆಗ ಘಟನಿಷ್ಠ ಆಧೇಯತಾ ಸಂಯೋಗ ಸಂಬಂಧಾವಚ್ಛಿನ್ನಾ ಎಂದು ತಿಳಿಯಬೇಕು.

ಹೀಗೆಯೇ ಯಾವ ಸಂಬಂಧದಿಂಚ ಯಾವುದು ಇಲ್ಲವೆನ್ನುತ್ತೇವೋ ಅದರಲ್ಲಿರುವ ಪ್ರತಿಯೋಗಿತಾ ಆ ಸಂಬಂಧದಿಂದ ಅವಿಚ್ಛಿನ್ನವಾಗಿರುತ್ತದೆ. ಸಂಯೋಗ ಸಂಬಂಧದಿಂದ ಭೂತಲದಲ್ಲಿ ಘಟವಿಲ್ಲವೆಂದರೆ ಅಭಾವಕ್ಕೆ ಪ್ರತಿಯೋಗಿ ಘಟ. ಪ್ರತಿಯೋಗಿತಾ ಘಟದಲ್ಲಿದೆ. ಪ್ರತಿಯೋಗಿತಾ ಸಂಯೋಗಸಂಬಂಧಾವಚ್ಛಿನ್ನಾ. ಹೀಗೆಯೇ ಇತರ ಸಂಬಂಧಗಳನ್ನೂ ತಿಳಿಯಬೇಕು. ||

## ಕೆಲವು ನಿಯಮಗಳು

ಯಾವುದರ ವೈಶಿಷ್ಟ್ಯ ಎಲ್ಲಿ ಹೇಳುತ್ತೇವೋ ಅದೇ ಸ್ವಪದಾರ್ಥವಾಗುತ್ತದೆ. ||

ಪ್ರಕೃತ್ಯರ್ಥದಲ್ಲಿ ಪ್ರಕಾರವಾಗಿ ತೋರುವ ಧರ್ಮವೇ ಭಾವ ಪ್ರತ್ಯಯಾರ್ಥ. || ಯಾವುದರ ಮೇಲೆ ಪ್ರತ್ಯಯ ಹೇಳುತ್ತೇವೋ ಅದೇ ಪ್ರಕೃತಿ || ಯಾವುದರ ಅಭಾವ ಹೇಳುತ್ತೇವೋ ಅದೇ ಪ್ರತಿಯೋಗಿ || ಲಕ್ಷ್ಯವು ಯಾವ ಧರ್ಮದಿಂದ ಕೂಡಿರುವುದೋ ಆ ಧರ್ಮವು ಲಕ್ಷ್ಯತಾವಚ್ಛೇದಕ. || ಯಾವ ಧರ್ಮ ಎಲ್ಲಿ ಅವಚ್ಛೇದಕವೋ ಅದು ಆ ಧರ್ಮಾವಚ್ಛಿನ್ನವಾಗಿರುತ್ತದೆ || ವಿಗ್ರಹ ವಾಕ್ಯದಿಂದ ಯಾವ ರೀತಿಯಾದ ವಿಶೇಷಣ ವಿಶೇಷ್ಯ ಭಾವದಿಂದ ಕೂಡಿದ ಪದಾರ್ಥವಿಷಯಕಶಾಬ್ದಬೋಧವಾಗುತ್ತದೆಯೋ ಸಮಾಸವಾಕ್ಯದಿಂದ ಅದಕ್ಕೆ ವಿಪರೀತವಾದ ಬೋಧ ಬರುತ್ತದೆ || ನಿಪಾತಾತಿರಿಕ್ತನಾಮಾರ್ಥಗಳಿಗೆ ಅಭೇದಸಂಬಂಧದಿಂದ ಅನ್ವಯ ತಿಳಿಯಬೇಕು. || ವಿಶೇಷಣವಾಚಕಪದೋತ್ತರವಿಭಕ್ತಿಗೆ ಅರ್ಥವಿಲ್ಲವೆಂದು ಕೆಲವರ ಮತ. ಅದಕ್ಕೂ ಅಭೇದಾರ್ಥವೇ ಇದೆಯೆಂದು ಇನ್ನು ಕೆಲವರ ಮತ || ಪ್ರತ್ಯಯಗಳು ಯಾವಾಗಲೂ ತಮ್ಮ ಪ್ರಕೃತ್ಯರ್ಥಾನ್ವಿತಸ್ವಾರ್ಥವನ್ನೇ ಬೋಧಿಸುತ್ತವೆ || ಗುಣದಲ್ಲಿ ಯಾವಾಗಲೂ ಇನ್ನೊಂದು ಗುಣವಿರುವುದಿಲ್ಲ. || ಕಾಲವು ಸರ್ವಾಧಾರವಾಗಿದೆ || ಜನ್ಯಮಾತ್ರಕ್ಕೆ ಕಾಲೋಪಾಧಿಯಾಗಿಯೂ, ಮೂರ್ತಸಾಮಾನ್ಯಕ್ಕೆ ದಿಗುಪಾಧಿಯೂ ಆಗಿರುತ್ತದೆ. || ನಿತ್ಯ ಪದಾರ್ಥಗಳಿಗೆ ಕಾಲಿಕಸಂಬಂಧಯೋಗವಿಲ್ಲ || ಉತ್ಪನ್ನವಾದ ದ್ರವ್ಯವು ಕ್ಷಣ ಕಾಲ ಗುಣರಹಿತವೂ, ಕ್ರಿಯಾಶೂನ್ಯವೂ ಆಗಿರುತ್ತದೆ. || ಯಾವ ಗುಣವು ಯಾವ ಇಂದ್ರಿಯದಿಂದ ಗ್ರಾಹ್ಯವಾಗಿರುತ್ತದೆಯೋ ಅದೇ ಇಂದ್ರಿಯದಿಂದ ಅಲ್ಲಿರುವ ಜಾತಿಯೂ, ಆ ಗುಣದ ಅಭಾವವೂ ಗೃಹೀತವಾಗುತ್ತದೆ || ನಿತ್ಯಕ್ಕೆ ಸ್ವರೂಪಯೋಗ್ಯತಾ ಇದೆಯೆಂದರೆ ಆಗ ಫಲವು ಅವಶ್ಯವಾಗಿ ಆಗಲೇಬೇಕು. || ಧ್ವಂಸಪ್ರಾಗಭಾವಗಳು ಯಾವಾಗಲೂ ಸ್ವಪ್ರತಿಯೋಗಿ ಸಮವಾಯದೇಶದಲ್ಲಿರುತ್ತವೆ. || ವಿಶೇಷಣಾ ಭಾವದಿಂದಲೂ, ವಿಶೇಷ್ಯಾಭಾವದಿಂದಲೂ, ಉಭಯಾಭಾವದಿಂದಲೂ ವಿಶಿಷ್ಟಾಭಾವ ಬರುತ್ತದೆ. || ಏಕಸತ್ತ್ವೇ ದ್ವಯಂ ನಾಸ್ತಿ || ಧ್ವಂಸಭಿನ್ನಜನ್ಯವು ಅನಿತ್ಯ || ದೃಷ್ಟಫಲಕತ್ವ ಸಂಭವಿಸುವಾಗ ಅದೃಷ್ಟ ಫಲವನ್ನು ಕಲ್ಪಿಸುವುದು ಅನ್ಯಾಯ್ಯ || ಸವಿಷಯಾರ್ಥ ಬೋಧಕಧಾತುವಿನೊಡನೆ ಹೇಳಿರುವ ದ್ವಿತೀಯಾವಿಭಕ್ತ್ಯರ್ಥಕರ್ಮತ್ವವು ವಿಷಯತಾ ರೂಪವಾಗಿರುತ್ತದೆ. || ಮೊದಲು ಕ್ರಿಯಾ ಉಂಟಾಗುತ್ತದೆ. ಕ್ರಿಯೆಯಿಂದ ವಿಭಾಗ, ವಿಭಾಗದಿಂದ ಪೂರ್ವಸಂಯೋಗನಾಶ, ಇದರಿಂದ ಉತ್ತರದೇಶಸಂಯೋಗೋತ್ಪತ್ತಿಯೆಂದು ಕ್ರಮ || ಶಬ್ದ ಬುದ್ಧಿಗಳೆರಡೂ ದ್ವಿಕ್ಷಣಾವಸ್ಥಾಯಿಗಳು || ಅರ್ಥವನ್ನು ಮೊದಲು ತಿಳಿದು ಶಬ್ದರಚನಾ (ಶಬ್ದಪ್ರಯೋಗ) || ಅಸನ್ನಿಕೃಷ್ಟಪದಾರ್ಥಕ್ಕೆ ಪ್ರತ್ಯಕ್ಷ ಭಾನವಿಲ್ಲ. || ಅಪದಾರ್ಥಕ್ಕೆ ಶಾಬ್ದಬೋಧದಲ್ಲಿ ಭಾನವಿಲ್ಲ. || ಆಧಾರಗಳು ಅನುಯೋಗಿಗಳೂ, ಆಧೇಯಗಳು ಪ್ರತಿಯೋಗಿಗಳೂ ಆಗಿರುತ್ತವೆ. || ಸಂಬಂಧ ಯಾವಾಗಲೂ ಕಿಂಚಿತ್ಪ್ರತಿಯೋಗಿಕವೂ, ಕಿಂಚಿದನುಯೋಗಿಕವೂ ಆಗಿರುತ್ತದೆ || ಏಕಸಂಬಂಧಿ ಜ್ಞಾನವು ಅಪರಸಂಬಂಧಿಗೆ ಸ್ಮಾರಕವಾಗುತ್ತದೆ. || ಅಭಾವಮಾತ್ರಕ್ಕೆ ಸ್ವಪ್ರತಿಯೋಗಿತಾವಚ್ಛೇದಕ ಸಂಬಂಧಾವಚ್ಛಿನ್ನ, ಸ್ವಪ್ರತಿಯೋಗಿತಾವಚ್ಛೇದಕಾವಚ್ಛಿನ್ನಾಧೇಯತಾ

ನಿರೂಪಿತ ಅಧಿಕರಣತಾ ವಿಶಿಷ್ಟ ಅಧಿಕರಣದೊಡನೆ ವಿರೋಧ. (ಅದು ಇದ್ದಾಗ ಇರುವುದಿಲ್ಲ.) ಪದಾರ್ಥವು ಯಾವಾಗಲೂ ಪದಾರ್ಥದೊಡನೆ ಅನ್ವಯಹೊಂದುವುದಲ್ಲದೆ ಅದರ ಏಕದೇಶದೊಡನೆ ಅನ್ವಯವಿಲ್ಲ. || ಒಂದೇ ಜ್ಞಾನದಲ್ಲಿ ತೋರುವ, ಒಂದೇ ಅಧಿಕರಣದಲ್ಲಿ ತೋರುವ ಪ್ರಕಾರತಾ, ವಿಶೇಷ್ಯತಾಗಳಿಗೆ ಅಭೇದವೆಂದು ಕೆಲವರ ಮತ, ಅವುಗಳಿಗೆ ಅವಚ್ಛೇದ್ಯ ಅವಚ್ಛೇದಕಭಾವವೆಂದು ಇನ್ನು ಕೆಲವರ ಮತ || ಬಾಧಕವಿಲ್ಲದಿರುವಾಗ ಉದ್ದೇಶ್ಯತಾವಚ್ಛೇದಕಧರ್ಮವ್ಯಾಪಕತ್ವವು ವಿಧೇಯಾಂಶದಲ್ಲಿ ತೋರುತ್ತದೆ. || ಸಮುದಾಯವು ಪ್ರತ್ಯೇಕಕ್ಕಿಂತ ಬೇರೆಯಲ್ಲ. || ಸಪ್ತಮ್ಯಂತಾನುಯೋಗಿವಾಚಕಪದ ಸಮಭಿವ್ಯಾಹೃತನಞಿಗೆ ಅತ್ಯಂತಾಭಾವಾರ್ಥವಿರುತ್ತದೆ ||

## ವ್ಯಾಪ್ಯವ್ಯಾಪಕಭಾವನಿರ್ಣಯ

ಯಚ್ಛಬ್ದದಿಂದ ತೋರಿಸಿಕೊಡುವುದು ವ್ಯಾಪ್ಯ. ತಚ್ಛಬ್ದದಿಂದ ತೋರಿಸಿರುವುದು ವ್ಯಾಪಕ. 'ಯತ್ರ ಧೂಮಃ ತತ್ರಾಗ್ನಿಃ' ಇಲ್ಲಿ ಧೂಮವ್ಯಾಪ್ಯ, ವಹ್ನಿವ್ಯಾಪಕ. 'ಯತ್ರವಹ್ನ್ಯಭಾವಃ, ತತ್ರಧೂಮಾಭಾವಃ' ಇಲ್ಲಿ ವಹ್ನ್ಯಭಾವವ್ಯಾಪ್ಯ. ಧೂಮಾಭಾವ ವ್ಯಾಪಕ. ||

ಯಾವ ಒಂದು ಧರ್ಮಿಯಲ್ಲಿ ಸಾಧನದಿಂದ ಸಾಧ್ಯವನ್ನು ಸಾಧಿಸುತ್ತೇವೋ ಅದು ಪಕ್ಷ. ಸಾಧನದಿಂದ ಯಾವುದನ್ನು ಸಾಧಿಸುತ್ತೇವೋ ಅದು ಸಾಧ್ಯ. ಯಾವುದರಿಂದ ಸಾಧಿಸುತ್ತೇವೋ ಅದು ಹೇತು. ಇದು ಯಾವಾಗಲೂ ಪಂಚಮ್ಯಂತಪ್ರತಿಪಾದ್ಯವಾಗಿರುತ್ತವೆ. ಪರ್ವತೋ—ವಹ್ನಿಮಾನ್—ಧೂಮಾತ್ || ಇಲ್ಲಿ ಪರ್ವತಪಕ್ಷ ವಹ್ನಿಸಾಧ್ಯ. ಧೂಮ ಹೇತು. ||

## ಪ್ರಕಾರ ವಿಶೇಷ್ಯ ನಿರೂಪಣ

ಇದಮಾದಿ ಸರ್ವನಾಮಪದಗಳೊಡನೆ ನಾಮಪದ ಹೇಳಿದಾಗ ಅಲ್ಲಿ ಇದಮಾದಿ ಸರ್ವನಾಮ ಪದಾರ್ಥವು ವಿಶೇಷ್ಯವಾಗಿರುತ್ತದೆ. 'ಅಯಂ ಪುರುಷಃ' ಇಲ್ಲಿ ಇದಂ ಪದಾರ್ಥಕ್ಕೆ ವಿಶೇಷ್ಯತ್ವವೂ, ಪುರುಷತ್ವಕ್ಕೆ ಪ್ರಕಾರತ್ವವೂ ತೋರುತ್ತದೆ. ಬೇರೆ ನಾಮಪದ ಹೇಳದೆ ಕೇವಲ ಇದಮಾದಿಗಳನ್ನು ಹೇಳಿದಾಗ ಇದಂ ಪದಾರ್ಥ ವಿಶೇಷ್ಯವಾಗಿಯೂ, ಇದಂತ್ವ ಪ್ರಕಾರವಾಗಿಯೂ ಇರುತ್ತದೆ. 'ಘಟಃ' ಎಂಬ ಜ್ಞಾನದಲ್ಲಿ ಘಟತ್ವ ಪ್ರಕಾರ, ಘಟವಿಶೇಷ್ಯವಾಗಿರುತ್ತದೆ. || ಪ್ರಕಾರಬೋಧಕಪದದೊಡನೆ ಇನ್, ಮತುಬಾದಿ ಪ್ರತ್ಯಯಗಳನ್ನು ಸೇರಿಸಿ ಹೇಳಿದಾಗ ಅಲ್ಲಿ ಆ ಪ್ರತ್ಯಯ ಪ್ರಕೃತ್ಯರ್ಥವೇ ಪ್ರಕಾರವಾಗಿರುತ್ತದೆ. 'ಘಟವತ್ ಭೂತಲಂ' ಎಂದರೆ ಅಲ್ಲಿ ಭೂತಲವಿಶೇಷ್ಯ. ಮತುಪ್‌ಪ್ರತ್ಯಯಕ್ಕೆ ಪ್ರಕೃತಿಯಾದ ಘಟವೇ ಪ್ರಕಾರ. 'ಧನೀ ಪುರುಷಃ' ಇಲ್ಲಿ ಇನ್ ಪ್ರಕೃತಿಯಾದ ಧನವು ಪ್ರಕಾರ. ||

## ಚಕ್ಷುರಿಂದ್ರಿಯದಿಂದ ಗ್ರಹಿಸಲ್ಪಡುವ ಪದಾರ್ಥಗಳು

ಮಹತ್ತ್ವೋದ್ಭೂತರೂಪ, ಆಲೋಕಸಂಯೋಗವಿಶಿಷ್ಟದ್ರವ್ಯ, ಇವುಗಳ ಅಭಾವ; ಆದ್ರವ್ಯಗಳಲ್ಲಿರುವ ಜಾತಿ, ಅದರ ಅಭಾವ, ಆದ್ರವ್ಯದಲ್ಲಿರುವ ಉದ್ಭೂತರೂಪ, ಸಂಖ್ಯಾ, ಪರಿಮಾಣ, ಪೃಥಕ್ತ್ವ, ಸಂಯೋಗ, ವಿಭಾಗ, ಪರತ್ವ, ಅಪರತ್ವ, ದ್ರವತ್ವ, ಸ್ನೇಹ, ರೂಪ, ಗುಣಗಳು ಮತ್ತು ಅವುಗಳ ಅಭಾವ, ಗುಣಗಳಲ್ಲಿರುವ ಜಾತಿ ಮತ್ತು ಅದರ ಅಭಾವ, ಪೂರ್ವೋಕ್ತ ದ್ರವ್ಯದಲ್ಲಿರುವ ಕರ್ಮ, ಮತ್ತು ಕರ್ಮದ ಅಭಾವ, ಕರ್ಮದಲ್ಲಿರುವ ಜಾತಿ ಮತ್ತು ಅಭಾವ, ಆ ದ್ರವ್ಯದಲ್ಲಿರುವ ಸಮವಾಯ, ಅದರ ಅಭಾವ, ಸಮವಾಯದಲ್ಲಿರುವ ಧರ್ಮ, ಅದರ ಅಭಾವ, ಇವು ನಯನಗ್ರಾಹ್ಯಗಳಾಗುತ್ತವೆ. 'ಯೇನೇಂದ್ರಿಯೇಣ ಯಾ ವ್ಯಕ್ತಿರ್ಗೃಹ್ಯತೇ ತೇನೈವೇಂದ್ರಿಯೇಣ ತನ್ನಿಷ್ಠಾ ಜಾತಿಃ, ತದಭಾವಶ್ಚ ಗ್ರಹ್ಯತೇ' ಎಂಬ ನ್ಯಾಯದಿಂದ ಇದು ಸಂಗತವಾಗಿದೆ.

## ತ್ವಗಿಂದ್ರಿಯಗ್ರಾಹ್ಯ ಪದಾರ್ಥಗಳು

ಮಹತ್ತ್ವೋದ್ಭೂತರೂಪ ಸ್ಪರ್ಶ ವಿಶಿಷ್ಟ ದ್ರವ್ಯಗಳು, ಅವುಗಳ ಅಭಾವ ಮತ್ತು ಜಾತಿ ಮತ್ತು ಜಾತ್ಯಭಾವ, ರೂಪ, ರೂಪತ್ವ, ರೂಪಾಭಾವಗಳನ್ನು ಬಿಟ್ಟು ಚಕ್ಷುರಿಂದ್ರಿಯದಿಂದ ಯಾವುದು ಗ್ರಾಹ್ಯವಾಗಿದೆಯೋ ಅವೆಲ್ಲವೂ, ಅಲ್ಲದೆ ಸ್ಪರ್ಶ, ಸ್ಪರ್ಶಾಭಾವ, ಸ್ಪರ್ಶತ್ವಜಾತಿ ಇವು ತ್ವಗಿಂದ್ರಿಯದಿಂದ ಗ್ರಾಹ್ಯವಾಗುತ್ತವೆ.

## ರಸನಾ ಗ್ರಾಹ್ಯ ಪದಾರ್ಥಗಳು

ಮಹತ್ವಸಮಾನಾಧಿಕರಣ ರಸ, ರಸಾಭಾವ ರಸತ್ವ, ಅದರ ಅಭಾವಗಳು ರಸನೇಂದ್ರಿಯದಿಂದ ಗ್ರಹಿಸಲ್ಪಡುತ್ತವೆ.

## ಘ್ರಾಣೇಂದ್ರಿಯ ಗ್ರಾಹ್ಯ ಗುಣಗಳು

ಮಹತ್ವಸಮಾನಾಧಿಕರಣ ಗಂಧ, ಗಂಧಾಭಾವ, ಗಂಧತ್ವಜಾತಿ. ಅದರ ಅಭಾವಗಳು ಘ್ರಾಣೇಂದ್ರಿಯ ಗ್ರಾಹ್ಯಗಳಾಗುತ್ತವೆ.

## ಶ್ರೋತ್ರೇಂದ್ರಿಯ ಗ್ರಾಹ್ಯ ಗುಣಗಳು

ಶಬ್ದ, ಶಬ್ದಾಭಾವ, ಶಬ್ದತ್ವಜಾತಿ, ಅದರ ಅಭಾವ, ಅದರ ಸಮವಾಯ ಇವು ಶ್ರವಣೇಂದ್ರಿಯ ಗ್ರಾಹ್ಯಗಳಾಗುತ್ತವೆ.

## ಮನಸ್ಸಿನಿಂದ ಗ್ರಹಿಸಲ್ಪಡುವ ಪದಾರ್ಥಗಳು

ಬುದ್ಧಿ, ಸುಖ, ದುಃಖ, ಇಚ್ಛಾ, ದ್ವೇಷ, ಪ್ರಯತ್ನ, ಇವುಗಳ ಅಭಾವ, ಇವು

ಗಳಲ್ಲಿರುವ ಜಾತಿ, ಅವುಗಳ ಅಭಾವ, ಜೀವ, ತದಭಾವಗಳು ಮನಸ್ಸಿನಿಂದ ಗ್ರಹಿಸಲ್ಪಡುತ್ತವೆ.

ಚಾಕ್ಷುಷ ಪ್ರತ್ಯಕ್ಷವಾಗಬೇಕಾದರೆ—ಮಹತ್ವ, ಉದ್ಭೂತರೂಪ, ಆಲೋಕ ಸಂಯೋಗ ಚಕ್ಷುಃಸಂನಿಕರ್ಷ ಈ ನಾಲ್ಕು ಇರಬೇಕಾದುದರಿಂದ ನಾಲ್ಕೂ ಕಾರಣಗಳಾಗುತ್ತವೆ. ಮಹತ್ವವಿಲ್ಲವಾದ್ದರಿಂದ ಪರಮಾಣು ಪ್ರತ್ಯಕ್ಷವಿಲ್ಲ. ಉದ್ಭೂತ ರೂಪವಿಲ್ಲದಿರುವುದರಿಂದ ಇಂದ್ರಿಯಗಳ ಪ್ರತ್ಯಕ್ಷವಿಲ್ಲ. ಆಲೋಕ ಸಂಯೋಗವಿಲ್ಲದಿರುವುದರಿಂದ ಕತ್ತಲೆಯಲ್ಲಿರುವ ಪದಾರ್ಥಪ್ರತ್ಯಕ್ಷವಿಲ್ಲ. ಚಕ್ಷುಃ ಸಂಯೋಗವಿಲ್ಲದಿರುವುದರಿಂದ ನೋಡದಿರುವ ವಸ್ತು ಪ್ರತ್ಯಕ್ಷವಿಲ್ಲ.

ತ್ವಗಿಂದ್ರಿಯಪ್ರತ್ಯಕ್ಷದಲ್ಲಿ ಮಹತ್ವ, ಉದ್ಭೂತರೂಪತ್ವ, ತ್ವಕ್ಸಂಯೋಗ ಈ ಮೂರು ಕಾರಣಗಳಾಗುತ್ತವೆ.

ರಾಸನಪ್ರತ್ಯಕ್ಷದಲ್ಲಿ ಮಹತ್ವ, ರಸನೇಂದ್ರಿಯಸಂನಿಕರ್ಷ, ಈ ಎರಡು ಕಾರಣಗಳಾಗುತ್ತವೆ.

ಘ್ರಾಣಪ್ರತ್ಯಕ್ಷದಲ್ಲಿ ಮಹತ್ವ, ಘ್ರಾಣೇಂದ್ರಿಯಸಂನಿಕರ್ಷ ಈ ಎರಡು ಕಾರಣಗಳಾಗುತ್ತವೆ.

ಶ್ರಾವಣಪ್ರತ್ಯಕ್ಷದಲ್ಲಿಯೂ ಮಹತ್ವ, ಶ್ರೋತ್ರೇಂದ್ರಿಯಸಂನಿಕರ್ಷ ಎರಡು ಕಾರಣಗಳು.

ಮಾನಸಪ್ರತ್ಯಕ್ಷದಲ್ಲಿ ಮಹತ್ವ, ಆತ್ಮಮನಃಸಂನಿಕರ್ಷ ಈ ಎರಡು ಕಾರಣಗಳಾಗುತ್ತವೆ. ಮಹತ್ವವು ಈ ಆರುವಿಧ ಪ್ರತ್ಯಕ್ಷಗಳಲ್ಲಿಯೂ ಕಾರಣವಾಗುತ್ತದೆ.

## ಅಭಾವಃ

ಸಾಮಾನ್ಯಾಭಾವ, ವಿಶೇಷಾಭಾವ, ವಿಶಿಷ್ಟಾಭಾವ, ಉಭಯಾಭಾವ, ತ್ರಿತಯಾಭಾವ, ಅನ್ಯತರಾಭಾವ ಸಮುದಾಯಾಭಾವ, ಪ್ರತ್ಯೇಕಾಭಾವ ಹೀಗೆ ಅತ್ಯಂತಾಭಾವ ನಾನಾರೂಪವಾಗಿರುತ್ತದೆ. 'ಗುಣೇ ದ್ರವ್ಯಂ ನಾಸ್ತಿ' ಎಂದರೆ ಗುಣದಲ್ಲಿ ದ್ರವ್ಯಸಾಮಾನ್ಯವೂ ಇಲ್ಲದಿರುವುದರಿಂದ ಸಾಮಾನ್ಯಾಭಾವವಾಗುತ್ತದೆ. 'ಭೂತಲೇ ಘಟಾಭಾವಃ' ಇದು ವಿಶೇಷಾಭಾವವಾಗುತ್ತದೆ. 'ಭೂತಲೇ ಪೂರ್ವಕ್ಷಣವೃತ್ತಿತ್ವ ವಿಶಿಷ್ಟದ್ರವ್ಯಾಭಾವಃ' ಇದು ವಿಶಿಷ್ಟಾಭಾವ. 'ಭೂತಲೇ ದ್ರವ್ಯಗುಣತ್ವೋಭಯಾಭಾವಃ' ಇದು ಉಭಯಾಭಾವ. 'ಭೂತಲೇ ದ್ರವ್ಯಗುಣತ್ವಕರ್ಮತ್ವ ತ್ರಿತಯಾಭಾವಃ' ಇದು ತ್ರಿತಯಾಭಾವ. 'ಗುಣೇ ದ್ರವ್ಯಗುಣಾನ್ಯತರಾಭಾವಃ' ಇದು ಅನ್ಯತಾರಾಭಾವ. 'ಗುಣೇ ದ್ರವ್ಯಗುಣಗುಣತ್ವಕರ್ಮಕರ್ಮತ್ವ ಸಮುದಾಯಾಭಾವಃ'' ಸಮುದಾಯಾಭಾವ. 'ಗುಣೇ ದ್ರವ್ಯಾಭಾವ, ಗುಣಾಭಾವಃ, ಕರ್ಮಾಭಾವಃ, ಕರ್ಮತ್ವಾಭಾವಃ' ಎಂದರೆ ಅದು ಪ್ರತ್ಯೇಕಾಭಾವವಾಗುತ್ತದೆ.

ಅನ್ಯೋನ್ಯಾಭಾವವೂ ನಾನಾವಿಧವಾಗಿರುತ್ತದೆ. ಸಾಮಾನ್ಯಭೇದಃ—'ಗುಣಃ ದ್ರವ್ಯಂ ನ' ಎಂಬ ಭೇದ. ವಿಶೇಷಭೇದಃ—ಗುಣಃ ಘಟೋ ನ. || ವಿಶಿಷ್ಟಭೇದಃ—ಗುಣಃ ಭೂತಲವೃತ್ತಿತ್ವವಿಶಿಷ್ಟದ್ರವ್ಯಂ ನ || ಉಭಯಭೇದಃ—ಗುಣಃ-ದ್ರವ್ಯಗುಣೋಭಯೋನ || ಅನ್ಯತರಭೇದಃ-ಗುಣಃ ದ್ರವ್ಯಗುಣಾನ್ಯತರೋ ನ || ಸಮುದಾಯ ಭೇದಃ—ಗುಣಃ ದ್ರವ್ಯಗುಣಸಮುದಾಯಃ ನ | ಪ್ರತ್ಯೇಕಭೇದಃ-ಗುಣಃ ದ್ರವ್ಯಂ ನ, ಕರ್ಮನ | ಇತ್ಯಾದಿ ಪ್ರತೀತಿಸಿದ್ಧ ಭೇದಗಳನ್ನು ತಿಳಿಯಬೇಕು.

ಭವಿಷ್ಯತಿ. ಮುಂದೆ ಆಗುತ್ತದೆ ಎಂಬ ಜ್ಞಾನದಲ್ಲಿ ವಿಷಯವಾದುದು ಪ್ರಾಗಭಾವ

ಧ್ವಸ್ತಃ, ನಷ್ಟಃ ಇತ್ಯಾದಿ ಪ್ರತೀತಿಯಲ್ಲಿ ವಿಷಯವಾದುದು ಪ್ರಧ್ವಂಸಾಭಾವ. 'ನಾಸ್ತಿ' ಎಂಬ ಪ್ರತೀತಿಯಲ್ಲಿ ವಿಷಯವಾಗಿರುವುದು ಅತ್ಯಂತಾಭಾವ. 'ನ ಭವತಿ' ಎಂಬ ಪ್ರತೀತಿಯಲ್ಲಿ ವಿಷಯವಾಗಿರುವುದು ಅನ್ಯೋನ್ಯಾಭಾವ. ನಾಸ್ತಿ ಎಂಬಲ್ಲಿ ಅತ್ಯಂತಾಭಾವವೇ ತೋರಿದರೂ ತಾದಾತ್ಮ್ಯಸಂಬಂಧದಿಂದ (ನಾಸ್ತಿ) ಇಲ್ಲವೆಂದರೆ ಆಗ ಅಲ್ಲಿ ಅನ್ಯೋನ್ಯಾಭಾವವೇ ಬೋಧಿತವಾಗುತ್ತದೆ. 'ಭೂತಲೇ ನ ಘಟಃ' ಎಂದು ನಞ್‌ಪ್ರಯೋಗವಿದ್ದರೂ ನಾಸ್ತಿ ಎಂದು ಪ್ರಯೋಗವಿಲ್ಲದಿದ್ದರೂ ಸಪ್ತಮ್ಯಂತಪದ ದೊಡನೆ ಪ್ರಯೋಗಿಸಿದ ನಞಿಗೆ ಅತ್ಯಂತಾಭಾವವೇ ಅರ್ಥವಾಗುತ್ತದೆ. 'ಸಂಯೋಗ ಸಂಬಂಧೇನ ದ್ರವ್ಯತ್ವಂ ನಾಸ್ತಿ.' ಸಂಯೋಗಸಂಬಂಧದಿಂದ ದ್ರವ್ಯತ್ವವಿಲ್ಲವೆಂದರೆ ಅಲ್ಲಿ ವ್ಯಧಿಕರಣಸಂಬಂಧಾವಚ್ಛಿನ್ನಪ್ರತಿಯೋಗಿತಾಕಾಭಾವವೆಂದು ವ್ಯವಹಾರ. ಇದು ಕೇವಲಾನ್ವಯಿ. ದ್ರವ್ಯತ್ವವು ಜಾತಿಯಾದುದರಿಂದ ಸಮವಾಯಸಂಬಂಧದಿಂದಲೇ ಇರುತ್ತದೆ. ಕೆಲವರು—'ಘಟತ್ವೇನ ಪಟೋ ನಾಸ್ತಿ' ಎಂಬ ಪ್ರತೀತಿಯಿಂದ ಸಿದ್ಧವಾದ ಅಭಾವಕ್ಕೆ 'ವ್ಯಧಿಕರಣ ಧರ್ಮಾವಚ್ಛಿನ್ನಾಭಾವವೆಂದು ಹೇಳುತ್ತಾರೆ. 'ಘಟತ್ವೇನ ಪಟವಾನ್ನ' ಇಲ್ಲಿ ವ್ಯಧಿಕರಣಧರ್ಮಾವಚ್ಛಿನ್ನಾವಚ್ಛೇದಕತಾಕ ಪ್ರತಿಯೋಗಿತಾಕಭೇದ ತೋರುತ್ತದೆ. 'ದ್ರವ್ಯತ್ವೇನ ಘಟೋ ನಾಸ್ತಿ'. ಸಾಮಾನ್ಯರೂಪದಿಂದ ವಿಶೇಷಾಭಾವಕ್ಕೆ ಉದಾಹರಣೆ. 'ಘಟತ್ವೇನ ದ್ರವ್ಯಂ ನಾಸ್ತಿ'. ಇಲ್ಲಿ ವಿಶೇಷರೂಪದಿಂದ ಸಾಮಾನ್ಯಾಭಾವ ತೋರುತ್ತದೆ. ಹೀಗೆಯೇ 'ಘಟತ್ವೇನ ಘಟಪಟೋಭಯಂ ನಾಸ್ತಿ' ಇತ್ಯಾದಿ ನಾನಾರೂಪಾಭಾವಗಳನ್ನು ಅಂಗೀಕರಿಸುತ್ತಾರೆ.

## ವೃತ್ತಿನಿಯಾಮಕ ಸಂಬಂಧಗಳು

ವೃತ್ತಿತಾವಚ್ಛೇದಕ ಸಂಬಂಧಕ್ಕೆ ವೃತ್ತಿನಿಯಾಮಕ ಸಂಬಂಧಕವೆಂದು ಹೆಸರು. 'ತೇನ ಸಂಬಂಧೇನ ತದ್ವಾನ್' ಆಯಾಯ ಸಂಬಂಧದಿಂದ ಅದು ಉಳ್ಳದ್ದು ಎಂಬ ಪ್ರತೀತಿಗೆ ಕಾರಣವಾದ ಸಂಬಂಧ. ಸಂಯೋಗಸಂಬಂಧ, ಸಮವಾಯ, ಕಾಲಿಕ, ಸ್ವರೂಪ, ದೈಶಿಕ, ಪರ್ಯಾಪ್ತಿ, ಸ್ವಾಭಾವವದ್ವೃತ್ತಿತ್ವಸಂಬಂಧ ಮುಂತಾದವುಗಳು ವೃತ್ತಿನಿಯಾಮಕಸಂಬಂಧಗಳಾಗಿರುತ್ತವೆ. ಅವಯವಾವಯವಿಭಿನ್ನವಾದ ದ್ರವ್ಯಗಳಿಗೆ

ಸಂಯೋಗಸಂಬಂಧ. (ಘಟಪಟಗಳಿರುವ ಸಂಬಂಧ.) ಅಯುತಸಿದ್ಧಪದಾರ್ಥಗಳಿಗೆ ಸಮವಾಯಸಂಬಂಧ. ಒಂದನ್ನು ಒಂದು ಎಂದೂ ಬಿಟ್ಟಿರದಿರುವವುಗಳು ಅಯುತ ಸಿದ್ಧಗಳು. ೧. ಅವಯವ ಅವಯವಿಗಳು, ೨. ಗುಣಗುಣಿಗಳು. ೩. ಕ್ರಿಯಾ ಕ್ರಿಯಾವುಳ್ಳವುಗಳು. ೪. ಜಾತಿವ್ಯಕ್ತಿಗಳು, ೫. ವಿಶೇಷ ಮತ್ತು ನಿತ್ಯದ್ರವ್ಯಗಳು. ಇವುಗಳನ್ನು ಅಯುತಸಿದ್ಧಗಳೆಂದು ಕರೆಯುತ್ತಾರೆ. ಸಕಲಪದಾರ್ಥಗಳೂ ಕಾಲದಲ್ಲಿ ಕಾಲಿಕ ಸಂಬಂಧದಿಂದ ಇರುತ್ತವೆ. 'ಸರ್ವಾಧಾರಃ ಕಾಲಃ' ಎಂಬ ನಿಯಮವೇ ಇಲ್ಲಿ ನಿಯಾಮಕವಾಗಿದೆ. ಜನ್ಯ ಪದಾರ್ಥದಲ್ಲಿ ಪದಾರ್ಥವಿದ್ದರೂ ಅಲ್ಲಿಯೂ ಕಾಲಿಕ ಸಂಬಂಧ ಹೇಳಬೇಕು. 'ಜನ್ಯಾನಾಂ ಕಾಲೋಪಾಧಿತ್ವಂ' ಎಂಬ ನಿಯಮವೇ ಅಲ್ಲಿ ನಿಯಾಮಕ. 'ನಿತ್ಯೇಷು ಕಾಲಿಕಾಯೋಗಃ' ಎಂಬ ನಿಯಮದಿಂದ ನಿತ್ಯ ಪದಾರ್ಥ ಗಳಲ್ಲಿ ಯಾವುದೂ ಕಾಲಿಕಸಂಬಂಧದಿಂದ ಇರುವುದಿಲ್ಲ. 'ವಿಭಿನ್ನ ಕಾಲೀನಯೋಃ ವಿಷಯತ್ವಾನ್ಯಸಂಬಂಧೇನ ಆಧಾರಾಧೇಯ ಭಾವೋ ನಾಸ್ತಿ' ಎಂಬ ನಿಯಮದಿಂದ ಜನ್ಯಪದಾರ್ಥಗಳಲ್ಲಿಯೂ ವಿಭಿನ್ನಕಾಲಿಕವಾದ ಪದಾರ್ಥಗಳು ಕಾಲಿಕ ಸಂಬಂಧದಿಂದ ಇರುವುದಿಲ್ಲ. ವಿಭಿನ್ನಕಾಲಿಕ ಪದಾರ್ಥಗಳಿಗೆ ಮುಂದೆ ಆಗುವ ಪದಾರ್ಥವಿಷಯಕ ಜ್ಞಾನವಿರುವುದರಿಂದ ಆಧಾರಾಧೇಯಭಾವವು ಸಂಗತವಾಗುತ್ತದೆ.

ದ್ರವ್ಯಾದಿಪಂಚಕಭಿನ್ನವಾದ, ನಿರೂಪಕಕೋಟಿಪ್ರವಿಷ್ಟಗಳಾದ ಅಭಾವ ಮುಂತಾದವುಗಳು ತಮ್ಮ ಆಶ್ರಯಗಳಲ್ಲಿ ಸ್ವರೂಪಸಂಬಂಧದಿಂದ ಇರುತ್ತವೆ.

'ಮೂರ್ತಾನಾಂ ದಿಗುಪಾಧಿತ್ವಂ' ಎಂಬ ನಿಯಮದಿಂದ ಮೂರ್ತವಾದ ನಿತ್ಯಾನಿತ್ಯ ಪದಾರ್ಥಗಳಲ್ಲಿ ಪದಾರ್ಥಗಳು ದಿಕ್ಕೃತವಿಶೇಷಣತಾಸಂಬಂಧ (ದೈಶಿಕ)ದಿಂದ ಇರುತ್ತವೆ. ಉಭಯತ್ವ, ತ್ರಿತ್ವಾದಿ ಸಂಖ್ಯೆಗಳು, ಅವಚ್ಛೇದಕತಾ ಇವು ತಮ್ಮ ಆಶ್ರಯದಲ್ಲಿ ಪರ್ಯಾಪ್ತಿಸಂಬಂಧದಿಂದ ಇರುತ್ತವೆ. ಉಭಯತ್ವಾದಿ ವ್ಯಾಸಜ್ಯ ವೃತ್ತಿ ಧರ್ಮಗಳು ಉಭಯತ್ವಾದ್ಯವಚ್ಛೇದದಿಂದ ಪರ್ಯಾಪ್ತಿಸಂಬಂಧದಿಂದ ಉಭಯ ದಲ್ಲಿಯೂ ಇರುತ್ತವೆ. ಅವಚ್ಛೇದಕತಾಗಳು ಮಾತ್ರ ಉಭಯತ್ವಾವಚ್ಛೇದದಿಂದಲೂ, ಏಕತ್ವಾವಚ್ಛೇದದಿಂದಲೂ ತಮ್ಮ ಆಶ್ರಯದಲ್ಲಿರುವುದರಿಂದ ಅವುಗಳಲ್ಲಿ ಸ್ವಲ್ಪ ವ್ಯತ್ಯಾಸ ತಿಳಿಯಬೇಕು. ವಿಷಯತಾ ಕೂಡಾ ಪರ್ಯಾಪ್ತಿಸಂಬಂಧದಿಂದ ಇರುತ್ತದೆಂದು ಕೆಲವರ ಮತ. ಸ್ವಾಭಾವವದ್ವೃತ್ತಿತ್ವಸಂಬಂಧದಿಂದ ಕೆಲವು ಪದಾರ್ಥಗಳಿರುತ್ತವೆ. ಧೂಮವಾನ್—ವಹ್ನೇಃ। ಇಲ್ಲಿ ಆರ್ದ್ರೇಂಧನಸಂಯೋಗ ಉಪಾಧಿ. 'ಯದ್ವೈಶಿಷ್ಟ್ಯಂ ಯತ್ರ ಭಾಸತೇ ಸ ಏವ ಸ್ವಪದಾರ್ಥಃ" ಯಾವುದರ ವೈಶಿಷ್ಟ್ಯವನ್ನು ಎಲ್ಲಿ ಹೇಳುತ್ತೇವೋ ಅದು ಸ್ವಪದಾರ್ಥವಾಗುತ್ತದೆ. ಪ್ರಕೃತ ಸ್ವಪದದಿಂದ ಆರ್ದ್ರೇಂಧನ ಸಂಯೋಗವನ್ನು ತೆಗೆದುಕೊಂಡರೆ ಸ್ವಾಭಾವವುಳ್ಳದ್ದು ಅಯೋಗೋಲಕ. ತದ್ವೃತ್ತಿತ್ವಂ–ಅಲ್ಲಿ ಇರುವಿಕೆಯುಳ್ಳದ್ದು ವಹ್ನಿಯಾಗುತ್ತದೆ.

ಸಂಬಂಧವೆಂದರೆ ಅದು ಕಿಂಚಿತ್ಪ್ರತಿಯೋಗಿಕವಾಗಿಯೂ, ಕಿಂಚಿದನುಯೋಗಿಕ

ವಾಗಿಯೂ ಇರುತ್ತದೆ. ಆಧೇಯ ಪದಾರ್ಥಗಳು ಪ್ರತಿಯೋಗಿಯಾಗಿಯೂ, ಆಧಾರ ಪದಾರ್ಥಗಳು ಅನುಯೋಗಿಯಾಗಿಯೂ ಇರುತ್ತವೆ.

## ವೃತ್ತ್ಯನಿಯಾಮಕ ಸಂಬಂಧಗಳು

ವೃತ್ತ್ಯನಿಯಾಮಕವೆಂದರೆ ವೃತ್ತಿತಾದಲ್ಲಿ ಅನವಚ್ಛೇದಕವಾಗದಿರುವವುಗಳು. ಅನವಚ್ಛೇದಕವಾಗಿರುವವುಗಳು. 'ತೇನಸಂಬಂಧೇನ ತದ್ವಾನ್' ಎಂಬ ಪ್ರತೀತಿಯನ್ನು ಉಂಟುಮಾಡದಿರುವವುಗಳು. ಕಾರ್ಯತಾ ಮುಂತಾದವುಗಳೂ, ಪರಾಂಪರಾ ಸಂಬಂಧಗಳೂ ವೃತ್ತ್ಯನಿಯಾಮಕ ಸಂಬಂಧಗಳಾಗುತ್ತವೆ.

## ಲಕ್ಷಣದೋಷವಿಚಾರ

ಅತಿವ್ಯಾಪ್ತಿ, ಅವ್ಯಾಪ್ತಿ, ಅಸಂಭವ, ಆತ್ಮಾಶ್ರಯ, ಅನ್ಯೋನ್ಯಾಶ್ರಯ, ಚಕ್ರಕಾಪತ್ತಿ ಎಂದು ಲಕ್ಷಣದೋಷಗಳು.

ಲಕ್ಷ್ಯವಲ್ಲದಿರುವಲ್ಲಿ ಲಕ್ಷಣಪ್ರಸಕ್ತವಾದರೆ ಆಗ ಅತಿವ್ಯಾಪ್ತಿದೋಷ. 'ಶೃಂಗಿತ್ವಂ ಗೋರ್ಲಕ್ಷಣಂ' ಕೊಂಬುಳ್ಳದ್ದು ಹಸು ಅಂದರೆ ಆಗ ಟಗರು ಎಮ್ಮೆ ಮುಂತಾದ ಹಸುವಲ್ಲದಿರುವ ಪ್ರಾಣಿಗಳಲ್ಲಿಯೂ ಈ ಲಕ್ಷಣಬರುವುದರಿಂದ ಅತಿವ್ಯಾಪ್ತಿ ಬರುತ್ತದೆ. ಲಕ್ಷ್ಯದ ಏಕದೇಶದಲ್ಲಿ ಅಂದರೆ ಕೆಲವು ಲಕ್ಷಣದಲ್ಲಿ ಮಾತ್ರ ಒಂದು ಲಕ್ಷಣ ಬರುವುದಾದರೆ ಆಗ ಅವ್ಯಾಪ್ತಿದೋಷ. ಕಪಿಲಬಣ್ಣವುಳ್ಳದ್ದು ಹಸು ಅಂದರೆ ಕೆಲವು ಕಪಿಲ ಹಸುಗಳಲ್ಲಿ ಮಾತ್ರ ಈ ಲಕ್ಷಣ ಬಂದರೂ ನೀಲಶುಕ್ಲಾದಿ ಹಸುಗಳಲ್ಲಿ ಬಾರದಿರುವುದರಿಂದ ಅವ್ಯಾಪ್ತವಾಗುತ್ತದೆ. ಹೇಳಿರತಕ್ಕಲಕ್ಷಣವು ತನ್ನ ಯಾವ ಲಕ್ಷದಲ್ಲಿಯೂ ಬಾರದಿದ್ದರೆ ಆಗ ಅಸಂಭವದೋಷ. ಏಕಶಫವುಳ್ಳದ್ದು ಹಸು ಎಂದರೆ ಯಾವ ಹಸುವಿನಲ್ಲಿಯೂ ಬರುವುದಿಲ್ಲ. ಅವು ದ್ವಿಶಫಪ್ರಾಣಿಗಳಾದುದರಿಂದ ಲಕ್ಷಣಕ್ಕೆ ಅಸಂಭವ ದೋಷ ಬರುತ್ತದೆ. 'ಸ್ವಗ್ರಹಾಧೀನ ಸ್ವಗ್ರಹವಿಷಯತ್ವಂ' ಆತ್ಮಾಶ್ರಯದೋಷ 'ಸ್ವಗ್ರಹಾಧೀನ ಗ್ರಹಾಧೀನ ಸ್ವಗ್ರಹವಿಷಯತ್ವಂ' ಅನ್ಯೋನ್ಯಾಶ್ರಯದೋಷ. 'ಸ್ವಗ್ರಹಾಧೀನ ಗ್ರಹಾಧೀನ ಗ್ರಹಾಧೀನ ಸ್ವಗ್ರಹವಿಷಯತ್ವಂ' ಚಕ್ರಕಾಪತ್ತಿದೋಷ. ಇವು ಶಾಸ್ತ್ರೀಯ ದೋಷಗಳು.

## ಹೇತುದೋಷ ವಿಚಾರಃ

ದುಷ್ಟತಾ ಪ್ರಯೋಜಕವಾದುದು ದೋಷ. ಇದರಿಂದ ಅನುಮಿತಿ ಅಥವಾ ವ್ಯಾಪ್ತಿಜ್ಞಾನ ಹುಟ್ಟುವುದಿಲ್ಲ. ಅನುಮಿತಿ ತತ್ಕರಣಾನ್ಯತರ ಪ್ರತಿಬಂಧಕಜ್ಞಾನ ವಿಷಯಧರ್ಮಃ ಹೇತ್ವಾಭಾಸತ್ವೋಪಾಧಿ :—ತದ್ವಾನ್ ಹೇತ್ವಾಭಾಸಃ ಎಂದು ಹೇಳುತ್ತಾರೆ. ವ್ಯಭಿಚಾರ, ವಿರೋಧ, ಸತ್ಪ್ರತಿಪಕ್ಷ, ಆಶ್ರಯಾಸಿದ್ಧಿ, ಸ್ವರೂಪಾಸಿದ್ಧಿ, ವ್ಯಾಪ್ಯತ್ವಾಸಿದ್ಧಿ, ಬಾಧ, ಸಿದ್ಧಸಾಧನ, ಅರ್ಥಾಂತರ, ಭಾಗಾಸಿದ್ಧಿ, ಸಾಧ್ಯಾಪ್ರಸಿದ್ಧಿ, ಸಾಧನಾಪ್ರಸಿದ್ಧಿ ಎಂದು ಹೇತುದೋಷಗಳು ನಾನಾರೀತಿಯಾಗಿರುತ್ತವೆ.

ವ್ಯಭಿಚಾರಃ—ಇದಕ್ಕೆ ಅನೈಕಾಂತಿಕವೆಂದೂ ಕರೆಯುತ್ತಾರೆ. ಇದು ಸಾಧಾರಣ, ಅಸಾಧಾರಣ, ಅನುಪಸಂಹಾರೀ ಎಂದು ಮೂರು ವಿಧ. ಸಪಕ್ಷ

ದಲ್ಲಿಯೂ ವಿಪಕ್ಷದಲ್ಲಿಯೂ ಇರುವುದು ಸಾಧಾರಣ. 'ಪರ್ವತೋ ಧೂಮವಾನ್–ವಹ್ನೇಃ' ಎಂಬಲ್ಲಿ ವಹ್ನಿಯು ಸಪಕ್ಷವಾದ ಮಹಾನಸದಲ್ಲಿಯೂ, ವಿಪಕ್ಷವಾದ ಕಾಯಿಸಿದಕಬ್ಬಿಣದಲ್ಲಿಯೂ ಇರುವುದರಿಂದ ಸಾಧಾರಣವಾಗುತ್ತದೆ. ವ್ಯಭಿಚಾರಿ ಜ್ಞಾನದಿಂದ ವ್ಯಾಪ್ತಿಜ್ಞಾನಪ್ರತಿಬಂಧವುಂಟಾಗುತ್ತದೆ. **ಸಪಕ್ಷವಿಪಕ್ಷ**ವ್ಯಾವೃತ್ತವಾಗಿದ್ದು ಪಕ್ಷದಲ್ಲಿರುವುದು ಅಸಾಧಾರಣ. ಶಬ್ದಃ—ನಿತ್ಯಃ—ಶಬ್ದತ್ವಾತ್ ॥ ಇಲ್ಲಿ ಶಬ್ದತ್ವ ಹೇತುವು ಸಪಕ್ಷವಾದ ಗಗನಾದಿಗಳಲ್ಲಿಯೂ, ವಿಪಕ್ಷವಾದ ಘಟಾದಿಯಲ್ಲಿಯೂ ವ್ಯಾವೃತ್ತವಾಗಿದ್ದು ಪಕ್ಷವಾದ ಶಬ್ದದಲ್ಲಿ ಮಾತ್ರವಿರುತ್ತದೆ. ಈ ಜ್ಞಾನವು ಸಾಕ್ಷಾತ್ತಾಗಿ ಅನುಮಿತಿಗೆ ಪ್ರತಿಬಂಧಕವಾಗುತ್ತದೆ.

ವಸ್ತು ಮಾತ್ರ ಪಕ್ಷಕವಾದುದು ಅನುಪಸಂಹಾರೀ. ಸರ್ವಂ–ನಿತ್ಯಂ–ಪ್ರಮೇಯತ್ವಾತ್ । ಇಲ್ಲಿ ಸಕಲವೂ ಪಕ್ಷವಾದುದರಿಂದ ಪ್ರಮೇಯತ್ವಹೇತುವು ಅನುಪಸಂಹಾರಿಯಾಗುತ್ತದೆ. ಇದರ ಜ್ಞಾನವು ವ್ಯಾಪ್ತಿಜ್ಞಾನಕ್ಕೆ ಪ್ರತಿಬಂಧಕವಾಗುತ್ತದೆ. ವ್ಯಾಪ್ತಿಗ್ರಾಹಕ ಸಹಚರದರ್ಶನ ಸ್ಥಲವೇ ಇಲ್ಲದಿರುವುದರಿಂದ ಸಹಚಾರ ನಿಶ್ಚಯವಿಲ್ಲದಿದ್ದರೆ ವ್ಯಾಪ್ತಿನಿಶ್ಚಯು ಉಂಟಾಗುವುದಿಲ್ಲ.

ಸಾಧ್ಯಾಭಾವದಿಂದ ವ್ಯಾಪ್ತವಾದ ಹೇತು ವಿರುದ್ಧವಾಗುತ್ತದೆ. ಅಯಂ–ಗೌಃ–ಅಶ್ವತ್ವಾತ್ । ಅಶ್ವತ್ವವಿದ್ದಲ್ಲಿ ಗೋತ್ವರೂಪಸಾಧ್ಯದ ಅಭಾವವಿರುವುದರಿಂದ ಸಾಧ್ಯಾಭಾವವ್ಯಾಪ್ತಿ ಬರುವುದರಿಂದ ಅಶ್ವತ್ವಹೇತು ವಿರುದ್ಧವಾಗುತ್ತದೆ. ಇದು ಸಾಕ್ಷಾತ್ತಾಗಿ ಅನುಮಿತಿಗೆ ಪ್ರತಿಬಂಧಕವಾಗುತ್ತದೆ. ಗೋತ್ವಾಭಾವವ್ಯಾಪ್ತಾಶ್ವತ್ವವತ್ತಾಜ್ಞಾನವಿರುವಾಗ ಗೋತ್ವನಿಶ್ಚಯ ಬರುವುದಿಲ್ಲ.

ಸಾಧ್ಯಾಭಾವ ಸಾಧಕ ಹೇತ್ವಂತರಕ್ಕೆ ಪ್ರತಿಪಕ್ಷವೆಂದು ಹೆಸರು. ಅದು ಉಳ್ಳದ್ದು ಸತ್ಪ್ರತಿಪಕ್ಷ. ಪರ್ವತೋ–ವಹ್ನಿಮಾನ್–ಧೂಮಾತ್ । ಮಹಾನಸವತ್ ॥ ಪರ್ವತೋ ವಹ್ನ್ಯಭಾವವಾನ್–ಪಾಷಾಣಮಯತ್ವಾತ್ । ಕುಡ್ಯವತ್ ಇಲ್ಲಿ ಎರಡು ಹೇತುಗಳೂ ಪರಸ್ಪರ ಸಾಧ್ಯಾಭಾವಸಾಧಕಗಳಾದುದರಿಂದ ಅನ್ಯೋನ್ಯವಾಗಿ ಸತ್ಪ್ರತಿಪಕ್ಷತ್ವ ಬರುತ್ತದೆ. ಇದು ಸಾಕ್ಷಾತ್ತಾಗಿ ಅನುಮಿತಿಗೆ ಪ್ರತಿಬಂಧಕವಾಗುತ್ತದೆ.

ಪರಾಮರ್ಶಪ್ರತಿಬಂಧಕ ಜ್ಞಾನವಿಷಯಧರ್ಮಃ, ಅಸಿದ್ಧಃ, ಇದು ಉಳ್ಳದ್ದು ಅಸಿದ್ಧಹೇತು. ಇದು ಆಶ್ರಯಾ ಸಿದ್ಧಾದಿಭೇದಗಳಿಂದ ಮೂರು ರೀತಿಯಾಗಿದೆ. ಪಕ್ಷತಾವಚ್ಛೇದಕಾಭಾವವುಳ್ಳ ಪಕ್ಷವುಳ್ಳ ಹೇತು ಆಶ್ರಯಾಸಿದ್ಧ. ಗಗನಾರವಿಂದಂ—ಸುರಭಿ—ಅರವಿಂದತ್ವಾತ್ । ಸರೋಜಾರವಿಂದವತ್ । ಇಲ್ಲಿ ಅರವಿಂದ ಪಕ್ಷದಲ್ಲಿ ಗಗನೀಯತ್ವರೂಪ ಪಕ್ಷತಾವಚ್ಛೇದಕತ್ವ ಧರ್ಮವಿಲ್ಲ. ಆದುದರಿಂದ ಅರವಿಂದತ್ವ ಹೇತು ಆಶ್ರಯಾಸಿದ್ಧ. ಇದರಿಂದ ಅನುಮಿತಿಗೆ ಕಾರಣವಾದ ಪರಾಮರ್ಶಪ್ರತಿಬಂಧವುಂಟಾಗುತ್ತದೆ. ಪಕ್ಷನಿಷ್ಠಾಭಾವಪ್ರತಿಯೋಗಿ **ಸ್ವರೂಪಾಸಿದ್ಧಃ**–ಹ್ರದಃ–ದ್ರವ್ಯಂ–ಧೂಮಾತ್ । ಇಲ್ಲಿ ಹ್ರದದಲ್ಲಿ ಧೂಮಾಭಾವವಿರುವುದರಿಂದ ಧೂಮಹೇತು ಸ್ವರೂಪಾ

ಸಿದ್ಧವಾಗುತ್ತದೆ. ಇದರ ಜ್ಞಾನವೂ ಪರಾಮರ್ಶಪ್ರತಿಬಂಧಕವಾಗುತ್ತದೆ. ವ್ಯಾಪ್ಯತಾವಚ್ಛೇದಕಾಭಾವವಾನ್ ಹೇತು ವ್ಯಾಪ್ಯತ್ವಾಸಿದ್ಧಃ. ಪರ್ವತೋ—ವಹ್ನಿಮಾನ್—ಕಾಂಚನಮಯಧೂಮಾತ್. । ಇಲ್ಲಿ ಧೂಮರೂಪ ಹೇತುವಿನಲ್ಲಿ ಕಾಂಚನಮಯತ್ವರೂಪಾಭಿಮತವಾದ ಕಾಂಚನಮಯತ್ವ ಇಲ್ಲದಿರುವುದರಿಂದ ಧೂಮಹೇತು ವ್ಯಾಪ್ಯತ್ವಾಸಿದ್ಧವಾಗುತ್ತದೆ. ಇದೂ ಪರಾಮರ್ಶಕ್ಕೆ ಪ್ರತಿಬಂಧಕ.

ಸಾಧ್ಯಾಭಾವವುಳ್ಳ ಪಕ್ಷವುಳ್ಳ ಹೇತುವು ಬಾಧಿತ. ವಹ್ನಿಃ-ಅನುಷ್ಣಃ—ಪದಾರ್ಥತ್ವಾತ್ । ಜಲವತ್ । ಇಲ್ಲಿ ವಹ್ನಿರೂಪಪಕ್ಷದಲ್ಲಿ ಅನುಷ್ಣತ್ವಾಭಾವರೂಪ ಉಷ್ಣತ್ವವು ತ್ವಗಿಂದ್ರಿಯದಿಂದ ನಿಶ್ಚಿತವಾಗುವುದರಿಂದ ಪದಾರ್ಥತ್ವ ಹೇತು ಬಾಧಿತವಾಗುತ್ತದೆ. ಇದು ಸಾಕ್ಷಾತ್ ಅನುಮಿತಿಗೆ ಪ್ರತಿಬಂಧಕವಾಗುತ್ತದೆ. ಹೀಗೆ ಐದು ಹೇತ್ವಾಭಾಸಗಳು.

**—ಉಪಾಧಿಃ—**

ವ್ಯಭಿಚಾರ ಜ್ಞಾನಪ್ರಯೋಜಕವಾಗಿ ಉಪಾಧಿ ಇರುತ್ತದೆ. 'ಸಾಧ್ಯವ್ಯಾಪಕತ್ವೇ ಸತಿ ಸಾಧನಾವ್ಯಾಪಕತ್ವಂ' ಉಪಾಧಿಲಕ್ಷಣ. ಧೂಮವಾನ್—ವಹ್ನೇಃ । ಇಲ್ಲಿ ಆರ್ದ್ರೇಂಧನ ಉಪಾಧಿಯಾಗುತ್ತದೆ. ಇದು ಸಾಧ್ಯವಾದ ಧೂಮಕ್ಕೆ ವ್ಯಾಪಕ. ಯತ್ರ ಧೂಮಃ—ತತ್ರ ಆರ್ದ್ರೇಂಧನಂ ಎಂದು ವ್ಯಾಪ್ತಿ ಇದೆ. ಸಾಧನವಾದ ವಹ್ನಿಗೆ ಅವ್ಯಾಪಕ. ವಹ್ನಿ ಇದ್ದಲ್ಲಿ ಆರ್ದ್ರೇಂಧನವಿರುವುದಿಲ್ಲ. ತಪ್ತಾಯಃ ಪಿಂಡದಲ್ಲಿ ಇದು ಪ್ರಸಿದ್ಧವಾಗಿದೆ.

## ಸಂಗತಿ ವಿಚಾರ

ಸಂಗತಿಯಿಲ್ಲದೆ ಒಂದನ್ನು ಹೇಳಿದ ಮೇಲೆ ಇನ್ನೊಂದನ್ನು ಹೇಳುವುದಿಲ್ಲ. ಶಾಸ್ತ್ರದಲ್ಲಿ ಒಂದನ್ನು ನಿರೂಪಿಸಿದ ಮೇಲೆ ಇನ್ನೊಂದರ ನಿರೂಪಣ ಸಂಗತಿ ವಿಶಿಷ್ಟವಾಗಿಯೇ ಇರುತ್ತದೆ. "ಅನಂತರಾಭಿಧಾನ ಪ್ರಯೋಜಕ ಜಿಜ್ಞಾಸಾಜನಕಸ್ಮರಣ ಪ್ರಯೋಜಕನಿರೂಪ್ಯ ನಿಷ್ಠಸಂಬಂಧತ್ವಂ" ಸಂಗತಿಯ ಲಕ್ಷಣ. ಪ್ರತ್ಯಕ್ಷಾನುಮಾನಗಳಿಗೆ ಉಪಜೀವ್ಯೋಪಜೀವಕಭಾವ ಸಂಗತಿ. ಅನಂತರಾಭಿಧಾನವೆಂದರೆ ಪ್ರತ್ಯಕ್ಷನಿರೂಪಣವಾದ ಮೇಲೆ ಅನುಮಾನನಿರೂಪಣ. ತತ್ಪ್ರಯೋಜಕೀ ಭೂತಾ ಯಾ ಜಿಜ್ಞಾಸಾ. ಅದು ಉಂಟಾಗುವಂತೆ ಮಾಡುವ ಜಿಜ್ಞಾಸಾ 'ಪ್ರತ್ಯಕ್ಷನಿರೂಪಣಾನಂತರಂ ಅನುಮಾನಪ್ರಮಾಣನಿರೂಪಣಂ ಭೂಯಾತ್' (ಪ್ರತ್ಯಕ್ಷಪ್ರಮಾಣನಿರೂಪಣವಾದ ಮೇಲೆ ಅನುಮಾನ ಪ್ರಮಾಣ ನಿರೂಪಣವಾಗಲಿ) ಎಂಬ ಜಿಜ್ಞಾಸಾ. ತಜ್ಜನಕಂ ಯತ್ಸ್ಮರಣಂ. ಅದನ್ನು ಹುಟ್ಟಿಸುವ ಸ್ಮರಣೆ ಅಂದರೆ ಅನುಮಾನಸ್ಮರಣ, ತತ್ಪ್ರಯೋಜಕಃ, ನಿರೂಪ್ಯ ನಿಷ್ಠಃ ಯಃ ಸಂಬಂಧಃ. ಆ ಸ್ಮರಣೆಗೆ ಪ್ರಯೋಜಕವಾದ ನಿರೂಪ್ಯದಲ್ಲಿರುವ ಸಂಬಂಧ ಅಂದರೆ ಉಪಜೀವ್ಯೋಪಜೀವಕತ್ವಸಂಬಂಧ. ಸಂಬಂಧತ್ವವು ಉಪಜೀವ್ಯೋಪಜೀವಕ ಭಾವ ಸಂಗತಿಯಲ್ಲಿರುತ್ತದೆ. ಉಪಜೀವಯತಿ–ಇತಿ ಉಪಜೀವ್ಯಂ, ಪ್ರಯೋಜಕವೆಂದರ್ಥ. ಉಪಜೀವತಿ-ಇತಿ ಉಪಜೀವಕಂ–ಪ್ರಯೋಜ್ಯ

ವೆಂದರ್ಥ. ಪ್ರಕೃತ ಅನುಮಾನವು ವ್ಯಾಪ್ತ್ಯನುಭವಪ್ರಯೋಜ್ಯವಾದುದರಿಂದ, ವ್ಯಾಪ್ತ್ಯನುಭವವು ಪ್ರತ್ಯಕ್ಷಪ್ರಮಾಣಾಧೀನವಾದುದರಿಂದ ಪ್ರತ್ಯಕ್ಷ ನಿರೂಪಣವಾದ ಮೇಲೆ ಅನುಮಾನ ಹೇಳಿರುವುದು ಸಂಗತವಾಗುತ್ತದೆ. ಸಂಗತಿ ಆರುವಿಧವೆಂದು ಹೇಳಿರುತ್ತಾರೆ.

ಸ ಪ್ರಸಂಗ, ಉಪೋದ್ಘಾತಃ, ಹೇತುತಾಽವಸರಸ್ತ ಥಾ ||
ನಿರ್ವಾಹಕೈಕ್ಯಕಾರ್ಯೈಕ್ಯೇ, ಷೋಢಾ ಸಂಗತಿರಿಷ್ಯತೇ ||

**ಪ್ರಸಂಗಸಂಗತಿ**—'ಸ್ಮೃತಸ್ಯ ಉಪೇಕ್ಷಾ ಅನರ್ಹತ್ವಂ'. ಒಂದು ವಿಷಯ ಸ್ಮೃತವಾದ ಮೇಲೆ ಅದನ್ನು ಉಪೇಕ್ಷೆಮಾಡಿ ಬಿಡುವುದು ನ್ಯಾಯವಲ್ಲವೆಂದು ವಿವ ರಿಸುವುದು. ಇಲ್ಲಿ ಸಾರೂಪ್ಯ ವೈರೂಪ್ಯಾದಿಗಳು ಸ್ಮೃತಿಗೆ ಪ್ರಯೋಜಕವಾಗುತ್ತವೆ. ಸಾರೂಪ್ಯಾದಿಗಳಿಂದ ಸ್ಮೃತವಾಗುತ್ತದೆಂದರ್ಥ.

**ಉಪೋದ್ಘಾತ**—'ಸ್ವಜ್ಞಾನ ಜನಕ ಜ್ಞಾನವಿಷಯತ್ವಂ' ಒಂದು ಜ್ಞಾನವನ್ನು ಹುಟ್ಟಿಸುವ ಇನ್ನೊಂದು ಜ್ಞಾನದಲ್ಲಿ ವಿಷಯವಾಗಿ ತೋರುವುದು.

**ಹೇತುತಾ**—ಹಿಂದೆ ಹೇಳಿದಂತೆ ಇರುವ ಉಪಜೀವ್ಯೋಪಜೀವಕಭಾವ ಉತ್ತರಕ್ಕೆ ಪೂರ್ವಕಾರಣವಾಗಿರುವುದೆಂದು ತಾತ್ಪರ್ಯ.

**ಅವಸರಃ**—'ಪ್ರತಿಬಂಧಕೀ ಭೂತ ಶಿಷ್ಯ ಜಿಜ್ಞಾಸಾ ನಿವೃತ್ತ್ಯುತ್ತರ ಕಾಲೀನಾ ವಶ್ಯವಕ್ತವ್ಯತ್ವಂ' ಶಿಷ್ಯನಿಗುಂಟಾದ ಒಂದು ಜಿಜ್ಞಾಸೆಯು ಮುಂದಿನ ವಿಷಯ ವಿವರಣ ದಲ್ಲಿ ಪ್ರತಿಬಂಧಕವಾಗಿರುತ್ತದೆ. ಅದನ್ನು ಹೋಗಲಾಡಿಸಿದ ಮೇಲೆ ಮುಂದೆ ಅವಶ್ಯ ಹೇಳಬೇಕಾದ ವಿಷಯವನ್ನು ಹೇಳುವುದು.

**ನಿರ್ವಾಹಕೈಕ್ಯ**—'ಸ್ವಕಾರಣಜನ್ಯತ್ವಂ' ಒಂದೇ ಕಾರಣದಿಂದ ಉಂಟಾಗುವ ಎರಡು ಫಲಗಳು. ಎರಡು ಫಲಗಳಿರುವ ಸಂಗತಿ.

**ಕಾರ್ಯೈಕ್ಯ**—'ಸ್ವಕಾರ್ಯಜನಕತ್ವಂ' ಇವು ಎರಡು ಕಾರಣಗಳಿಗಿರುತ್ತವೆ. ಎರಡು ಕಾರಣಗಳಿಂದಲೂ ಉಂಟಾಗುವ ಫಲ ಒಂದೇ ಆಗಿರುವುದು.

ಬಹುಪ್ರಮಾಣ ಮೂಲವಾದುದರಿಂದಲೂ, ಬಹುವಾದಿ ಸಂಮತವಾದುದ ರಿಂದಲೂ ಪ್ರತ್ಯಕ್ಷ ಪ್ರಮಾಣವನ್ನು ಮೊದಲು ನಿರೂಪಿಸಿರುತ್ತಾರೆ. ಇಂದ್ರಿಯವೇ ಪ್ರತ್ಯಕ್ಷಪ್ರಮಾಣ. ಅನುಮಾನ ವ್ಯಾಪ್ತಿಜ್ಞಾನ ಜನ್ಯವಾದುದರಿಂದ, ವ್ಯಾಪ್ತಿಜ್ಞಾನ ಇಂದ್ರಿಯಾಧೀನವಾದುದರಿಂದ ಪ್ರತ್ಯಕ್ಷವಾದ ಮೇಲೆ ಅನುಮಾನವನ್ನು ಹೇಳಿರುತ್ತಾರೆ. ಹಿಂದೆ ಹೇಳಿದಂತೆ ಇವುಗಳಿಗೆ ಉಪಜೀವ್ಯೋಪಜೀವಕಭಾವ ಸಂಗತಿ. ಅನುಮಾನ ನಿರೂಪಣಾನಂತರ ಉಪಮಾನ ನಿರೂಪಣದಲ್ಲಿ ಅವಸರ ಸಂಗತಿ. 'ಗವಯೋ ಗವಯ ಪದ ವಾಚ್ಯಃ' ಎಂದು ಫಲಿತವಾದ ಉಪಮಿತಿಯು ಶಕ್ಯಾತ್ಮಕವಾದ ವೃತ್ತಿಜ್ಞಾನರೂಪ ವಾದುದರಿಂದ, ಈ ವೃತ್ತಿಜ್ಞಾನವೇ ಶಾಬ್ದಬೋಧಪ್ರಯೋಜಕವಾದುದರಿಂದ ಉಪಮಿತಿ ಶಾಬ್ದಬೋಧರೂಪಫಲಗಳಿಗೆ ಉಪಜೀವ್ಯೋಪಜೀವಕ ಭಾವ ಸಂಗತಿಯಿದೆಯೆಂದು ತಿಳಿಯಬೇಕು.

## ಈ ಗ್ರಂಥಕರ್ತರ ಇತರ ಕನ್ನಡ ವ್ಯಾಖ್ಯಾನ ಪುಸ್ತಕಗಳು

| | | |
|---|---|---|
| ೧. | ವೈಯಾಕರಣಸಿದ್ಧಾಂತಕೌಮುದೀ (ಕಾರಕಾಂತ) | ೮–೫೦ |
| ೨. | ಸಾಂಖ್ಯಕಾರಿಕಾ | ೩–೦೦ |
| ೩. | ನೀತಿಶತಕ | ೩–೫೦ |
| ೪. | ತರ್ಕಸಂಗ್ರಹದೀಪಿಕಾ | ೨–೫೦ |
| ೫. | ಪ್ರತಾಪರುದ್ರೀಯ ನಾಟಕಲಕ್ಷಣ | ೧–೦೦ |
| ೬. | ಚಂದ್ರಾಲೋಕ | ೧–೭೫ |
| ೭. | ವೃತ್ತರತ್ನಾಕರ | ೧–೫೦ |
| ೮. | ಅಮರಕೋಶ | ೫–೦೦ |
| ೯. | ಲಘುಸಿದ್ಧಾಂತಕೌಮುದೀ ಭಾಗ ೧ | ೪–೫೦ |
| ೧೦. | ಲಘುಸಿದ್ಧಾಂತಕೌಮುದೀ ಭಾಗ ೨ | ೪–೫೦ |
| ೧೧. | ಲಘುಸಿದ್ಧಾಂತಕೌಮುದೀ ಭಾಗ ೩ | ೫–೦೦ |
| ೧೨. | ರಘುವಂಶ ಸರ್ಗ ೧ | ೩–೦೦ |

### ಪುಸ್ತಕ ದೊರೆಯುವ ಸ್ಥಳ

ವೇದಾಂತ ಹೌಸ್
ಚಾಮರಾಜಪೇಟೆ, ಬೆಂಗಳೂರು–೧೮

ಶಿವಸ್ವಾಮಿ ಭವನಂ
ವಾಣೀವಿಲಾಸ ರೋಡ್
ಮೈಸೂರು–೪

ನ್ಯಾಯಸಿದ್ಧಾಂತಮುಕ್ತಾವಳೀ — ಜಿ. ವಿಷ್ಣುಮೂರ್ತಿ ಭಟ್ಟ